ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶಿವಮಹಾಪುರಾಣಂ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

ಭಾಗ—೬

ರುದ್ರಸಂಹಿತಾ—ಯುದ್ಧಖಂಡ

ಅನುವಾದಕ :
ಹಾಸನದ ಪಂಡಿತ ವೆಂಕಟರಾವ್

ಮೈಸೂರು
ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್
೧೯೪೫

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೨೧

ಶ್ರೀ ವ್ಯಾಸಮಹರ್ಷಿಪ್ರಣೀತ

# ಶಿವಮಹಾಪುರಾಣ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

ಭಾಗ—೬

ರುದ್ರಸಂಹಿತಾ—ಯುದ್ಧಖಂಡ

ಅನುವಾದಕ :
ಹಾಸನದ ಪಂಡಿತ ವೆಂಕಟರಾವ್

ಮೈಸೂರು
ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್
೧೯೪೫



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರುದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಎಸ್.ಐ. ರವರು**




## ಶ್ರೀ ಪ್ರಸನ್ನ ಶಂಕರ

ವಾಮೋರುನ್ಯಸ್ಯವಾಮೇತರಕರಕಮಲಾಯಾಸ್ತಥಾ ವಾಮಬಾಹು-
ನ್ಯಸ್ತಾರಕ್ತೋತ್ಪಲಾಯಾಃ ಸ್ತನವಿಧೃತಲಸದ್ವಾಮಬಾಹುಂ ಪ್ರಿಯಾಯಾಃ ।
ಸರ್ವಾಕಲ್ಪಾಭಿರಾಮೋ ಧೃತಪರಶುಮೃಗೇಷ್ಟೈಃ ಕರೈಃ ಕಾಂಚನಾಭೋ
ಧ್ಯೇಯಃ ಪದ್ಮಾಸನಸ್ಥಃ ಸ್ಮರಲಲಿತವಪುಃ ಸಂಪದೇ ಪಾರ್ವತೀಶಃ ॥

ಬೆಂಗಳೂರು ಪ್ರೆಸ್ ಬ್ರಾಂಚ್,
ಮೈಸೂರು.

# ಪ್ರಸ್ತಾವನೆ.

ರುದ್ರಸಂಹಿತೆಯಲ್ಲಿ ಈ ಯುದ್ಧಖಂಡವೇ ಕೊನೆಯಖಂಡವು. ಇದರಲ್ಲಿ ತ್ರಿಪುರದಹನ, ತಾರಕಾಸುರ, ಜಲಂಧರ, ಶಂಖಚೂಡ, ಅಂಧಕಾಸುರ ಮೊದಲಾದ ದೈತ್ಯರಸಂಹಾರಕ್ಕಾಗಿ ಪರಮೇಶ್ವರನು ಕೈಗೊಂಡ ಯುದ್ಧಾದಿಗಳ ವರ್ಣನೆಯೂ, ಸಂದರ್ಭಾನುಸಾರ ಇತರ ಉಪಾಖ್ಯಾನಗಳೂ, ಹೃದಯಂಗಮವಾಗಿ ವರ್ಣಿತವಾಗಿವೆ. ತ್ರಿಪುರದಹನವಿಚಾರದಲ್ಲಿ ಕೃಷ್ಣಯಜುರ್ವೇದದ ಆರನೆಯ ಕಾಂಡದ ಎರಡನೆಯ ಅಧ್ಯಾಯದಲ್ಲಿ ಈರೀತಿ ಇರುವುದು.

“ ತೇಷಾಮಸುರಾಣಾಂ ತಿಸ್ರಃ ಪುರ ಆಸನ್ನಯಸ್ಮಯ್ಯವಮಾಥ ರಜತಾಥ ಹರಿಣೀ ತಾ ದೇವಾ ಜೇತುಂ ನಾಶಕ್ನುವನ್ತಾ ಉಪಸದೈವಾಜಿಗೀಷನ್ತಸ್ಮಾದಾಹುರ್ಯಶ್ಚೈವಂ ವೇದಯಶ್ಚ-ನೋಪಸದಾ ವೈ ಮಹಾಪುರಂ ಜಯಂತೀತಿ ತ ಇಷುಗ್ಂ ಸಮಸ್ಕುರ್ವತಾಗ್ನಿಮನೀಕಗ್ಂ ಸೋಮಗ್ಂ ಶಲ್ಯಂ ವಿಷ್ಣುಂ ತೇಜನಂ ತೇಽಬ್ರುವನ್ಕ ಇಮಾಮಸಿಷ್ಯತೀತಿ ರುದ್ರ ಇತ್ಯ-ಬ್ರುವನ್ರುದ್ರೋ ವೈ ಕ್ರೂರಃ ಸೋಽಸ್ಯತ್ವಿತಿ ಸೋಽಬ್ರವೀ ದ್ವರಂ ವೃಣಾ ಅಹಮೇವ ಪಶೂನಾಮಧಿಪತಿರಸಾನೀತಿ ತಸ್ಮಾ-ದ್ರುದ್ರಃ ಪಶೂನಾಮಧಿಪತಿಸ್ತಾಗ್ಂ ರುದ್ರೋಽವಾಸೃಜತ್ಸ ತಿಸ್ರಃ ಪುರೋ ಭಿತ್ವೈಭ್ಯೋ ಲೋಕೇಭ್ಯೋಽಸುರಾನ್ಪ್ರಾಣುದಂತ

(ತೈ. ಸಂ. ಕಾಂಡ ೬ ಅಧ್ಯಾಯ ೨.)

ಇಲ್ಲಿ ಹೇಳಿರುವಂತೆ ಚಿನ್ನ, ಬೆಳ್ಳಿ, ಕಬ್ಬಿಣಗಳಿಂದ ನಿರ್ಮಿತವಾದ ಮೂರು ದೈತ್ಯಪುರಗಳಿದ್ದವೆಂತಲೂ ಅವುಗಳನ್ನು ಜಯಿಸಲು ದೇವತೆಗಳಿಗೆ ಸಾಧ್ಯವಾಗದೆ ರುದ್ರನನ್ನು ಮರೆಹೊಗಲು ಆ ರುದ್ರನು ಅಗ್ನಿ, ವಿಷ್ಣು ಮೊದಲಾದ ದೇವತೆಗಳನ್ನೇ ಆಯುಧಗಳನ್ನಾಗಿಯೂ, ರಥವನ್ನಾಗಿಯೂ ಮಾಡಿಕೊಂಡು ಆ ತ್ರಿಪುರವನ್ನು ನಾಶ ಮಾಡಿದನೆಂಬ ವಿಷಯವನ್ನೇ ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ವಿಸ್ತಾರವಾಗಿ ಈ ಪುರಾಣದಲ್ಲಿ ವಿವರಿಸಲ್ಪಟ್ಟಿದೆ.

ಇದಲ್ಲದೆ ಸರ್ವಶಕ್ತನಾದ ಪರಮೇಶ್ವರನಿಗೆ ದುಷ್ಟನಿಗ್ರಹದಲ್ಲಿ ಆಸಕ್ತಿ ಇರುವಂತೆ ಶಿಷ್ಟಪರಿಪಾಲನದಲ್ಲಿಯೂ ಇರುವುದೆಂದು ಅನೇಕ ನಿದರ್ಶನಗಳಿಂದ ವ್ಯಕ್ತಪಟ್ಟಿರುವುದು. ಅಂಧಕಾಸುರ, ಗಜಾಸುರ ಮೊದಲಾದವರು ದೈತ್ಯಸ್ವಭಾವದಿಂದ ಲೋಕಕಂಟಕರಾಗಿ ಜನರನ್ನು ಹಿಂಸಿಸುತ್ತಿದ್ದುದಲ್ಲದೆ, ಶಿವನಲ್ಲಿ ದ್ರೋಹವನ್ನೆಣಿಸಿ ಅವನೊಡನೆ ಯುದ್ಧಮಾಡಿದರೂ ಕೊನೆಯಲ್ಲಿ ವಿವೇಕದಿಂದ ಶಿವನ ನಿಜಸ್ವರೂಪವನ್ನರಿತು ಬಹುವಿಧವಾಗಿ ಸ್ತೋತ್ರಾದಿಗಳಿಂದ ತುಷ್ಟಿಗೊಳಿಸಲು ಶಿವನು ಪ್ರಸನ್ನನಾಗಿ ಅವರ ಮಹಾಪರಾಧಗಳನ್ನೆಲ್ಲಾ ಕ್ಷಮಿಸಿದ್ದಲ್ಲದೆ, ಅವರಿಗೆ ಭಕ್ತರಿಗೂ ದುರ್ಲಭವಾದ ಗಣಾಧಿಪತ್ಯವನ್ನು ಕರುಣಿಸಿ ಭಕ್ತವತ್ಸಲನೆಂಬ ಬಿರುದನ್ನು ಸಾರ್ಥಕಗೊಳಿಸಿರುವನು. ಶಿವಲೀಲೆಗಳನ್ನೊಳಗೊಂಡ ಇಂತಹ ಅನೇಕ ಆಖ್ಯಾನಗಳೂ, ಕಥೆಗಳೂ ಈ ಖಂಡದಲ್ಲಿ ವಿಶೇಷವಾಗಿರುವವು.

ಲೋಕೋಪಕಾರ ಬುದ್ಧಿಯಿಂದ ನಮ್ಮನ್ನಾಳುವ ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ. ಮಹಾಪ್ರಭುಗಳವರು ಈ ಸದ್ಗ್ರಂಥಪ್ರಕಟನಕಾರ್ಯಕ್ಕೆ ಅವಕಾಶವಿತ್ತು, ಜನಗಳಿಗೆ ಈಶ್ವರಾನುಗ್ರಹವು ಲಭಿಸುವಂತೆ ಮಹದುಪಕಾರವನ್ನು ಮಾಡಿರುವರು. ಇಂತಹ ಸದ್ಗುಣಶಾಲಿಗಳಾದ ಪ್ರಭುವರ್ಯರವರಿಗೆ ಪಾರ್ವತೀಪತಿಯಾದ ಪರಮೇಶ್ವರನು ಇತೋಪ್ಯತಿಶಯವಾದ ಆಯುರಾರೋಗ್ಯೈಶ್ವರ್ಯಾದಿ ಸಮಸ್ತ ಸಂಪತ್ತುಗಳನ್ನು ಅನುಗ್ರಹಿಸಲೆಂದು ಭಕ್ತಿಯಿಂದ ಪ್ರಾರ್ಥಿಸುವೆನು.

ಮೈಸೂರು,<br>
ಪಾರ್ಥಿವ ಸಂ॥ ಶ್ರಾ. ಶು. ಸಪ್ತಮಿ,<br>
೧೫-೮-೪೫.

ಹಾಸನದ ಪಂಡಿತ್ ವೆಂಕಟರಾವ್,<br>
ಅನುವಾದಕ.

# ವಿಷಯಾನುಕ್ರಮಣಿಕೆ

ಪುಟಸಂಖ್ಯೆ

ಪುಟಸಂಖ್ಯೆ

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಪ್ರಥಮೋಽಧ್ಯಾಯಃ

॥ ನಾರದ ಉವಾಚ ॥

ಶ್ರುತಮಸ್ಮಾಭಿರಾನಂದಪ್ರದಂ ಚರಿತಮುತ್ತಮಂ ।
ಗೃಹಸ್ಥಸ್ಯೈವ ಶಂಭೋಶ್ಚ ಗಣಸ್ಕಂತಾದಿಸತ್ಕಥಂ ॥ ೧ ॥

ಇದಾನೀಂ ಬ್ರೂಹಿ ಸುಪ್ರೀತ್ಯಾ ಚರಿತಂ ವರಮುತ್ತಮಂ ।
ಶಂಕರೋ ಹಿ ಯಥಾ ರುದ್ರೋ ಜಘಾನ ವಿಹರನ್ ಖಲಾನ್ ॥ ೨ ॥

---

### ಮೊದಲನೆಯ ಅಧ್ಯಾಯವು.

೧. ನಾರದನು ಬ್ರಹ್ಮನನ್ನು ಪ್ರಶ್ನೆಮಾಡುವನು ;—ಓ ಬ್ರಹ್ಮನೇ, ಈಗ ನೀನು ಶಂಭುವಿನ ಗೃಹಸ್ಥಾಶ್ರಮವರ್ಣನೆಯನ್ನೂ, ಗಣೇಶಸ್ಕಂದರ ಉತ್ಪತ್ತಿ ಮೊದಲಾದ ಕಥೆಗಳನ್ನೂ ಹೇಳಿರುವೆ. ಉತ್ತಮವಾದ ಈ ಚರಿತ್ರೆಯನ್ನು ಕೇಳಿ ನಮಗೆ ಬಹಳ ಆನಂದವಾಯಿತು.

೨. ಈಗ ನಮ್ಮಲ್ಲಿ ಪ್ರೀತಿಯಿಟ್ಟು, ಶಂಕರನು ರುದ್ರತ್ವವನ್ನು ವಹಿಸಿ ದುಷ್ಟರನ್ನು ನಿಗ್ರಹಿಸಿದ ಪರಮಪಾವನವಾದ ಚರಿತ್ರವನ್ನು ತಿಳಿಸು.

ಕಥಂ ದದಾಹ ಭಗವಾನ್ ನಗರಾಣಿ ಸುರದ್ವಿಷಾಂ ।
ತ್ರೀಣ್ಯೇಕೇನ ಚ ಬಾಣೇನ ಯುಗಪಚ್ಛೈನ ವೀರ್ಯವಾನ್ ॥ ೩ ॥

ಏತತ್ಸರ್ವಂ ಸಮಾಚಕ್ಷ್ವ ಚರಿತಂ ಶಶಿಮೌಲಿನಃ ।
ದೇವರ್ಷಿಸುಖದಂ ಶಶ್ವನ್ಮಾಯಾವಿಹರತಃ ಪ್ರಭೋಃ ॥ ೪ ॥

॥ ಬ್ರಹ್ಮೋವಾಚ ॥

ಏವಮೇತತ್ಪುರಾಪೃಷ್ಟೋ ವ್ಯಾಸೇನ ಋಷಿಸತ್ತಮಃ ।
ಸನತ್ಕುಮಾರಃ ಪ್ರೋವಾಚ ತದೇವ ಕಥಯಾಮ್ಯಹಂ ॥ ೫ ॥

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಮಹಾಪ್ರಾಜ್ಞ ಚರಿತಂ ಶಶಿಮೌಲಿನಃ ।
ಯಥಾ ದದಾಹ ತ್ರಿಪುರಂ ಬಾಣೇನೈಕೇನ ವಿಶ್ವಹೃತ್ ॥ ೬ ॥

---

೩. ಮಹಾವೀರ್ಯಶಾಲಿಯಾದ ಆ ಭಗವಂತನು ದೇವಶತ್ರುಗಳಾದ ಆ ದೈತ್ಯರ ಮೂರು ನಗರಗಳನ್ನು ಒಂದೇಸಲ ಒಂದೇ ಬಾಣದಿಂದ ಹೇಗೆ ದಹಿಸಿಬಿಟ್ಟನು ?

೪. ತನ್ನ ಮಾಯೆಯನ್ನವಲಂಬಿಸಿ ನಾನಾ ಲೀಲೆಗಳನ್ನು ತೋರ್ಪಡಿಸುತ್ತಿರುವ ಪ್ರಭುವಾದ ಆ ಶಶಿಶೇಖರನ ದೇವರ್ಷಿಸುಖಕರವಾದ ಚರಿತ್ರೆಯೆಲ್ಲವನ್ನೂ ತಿಳಿಯಪಡಿಸು ಎಂದನು.

೫. ನಾರದನ ಮಾತನ್ನು ಕೇಳಿ ಬ್ರಹ್ಮನು ಹೇಳತೊಡಗಿದನು. ಹಿಂದೆ ಇದೇ ರೀತಿಯಾಗಿ ವ್ಯಾಸಮಹರ್ಷಿಯು ಕೇಳಲಾಗಿ ಋಷಿಶ್ರೇಷ್ಠನಾದ ಸನತ್ಕುಮಾರನು ಅವನಿಗೆ ತಿಳಿಸಿದುದನ್ನೇ ಹೇಳುವೆನು.

೬. ಸನತ್ಕುಮಾರನು ಹೇಳತೊಡಗಿದನು :—ಮಹಾಪ್ರಾಜ್ಞನಾದ ಎಲೈ ವ್ಯಾಸಮಹರ್ಷಿಯೇ, ವಿಶ್ವಸಂಹಾರಿಯಾದ ಆ ಶಿವನು ಒಂದೇ ಬಾಣದಿಂದ ಮೂರು ನಗರಗಳನ್ನು ದಹಿಸಿದ ಬಗೆಯನ್ನು ಹೇಳುವೆನು ಕೇಳು.

ಶಿವಾತ್ಮಜೇನ ಸ್ಕಂದೇನ ನಿಹತೇ ತಾರಕಾಸುರೇ ।
ತತ್ಪುತ್ರಾಸ್ತು ತ್ರಯೋ ದೈತ್ಯಾಃ ಪರ್ಯತಪ್ಯನ್ಮುನೀಶ್ವರ ॥ ೭ ॥

ತಾರಕಾಖ್ಯಸ್ತು ತಜ್ಜ್ಯೇಷ್ಠೋ ವಿದ್ಯುನ್ಮಾಲೀ ಚ ಮಧ್ಯಮಃ ।
ಕಮಲಾಕ್ಷಃ ಕನೀಯಾಂಶ್ಚ ಸರ್ವೇ ತುಲ್ಯಬಲಾಸ್ಸದಾ ॥ ೮ ॥

ಜಿತೇಂದ್ರಿಯಾಸ್ಸುಸನ್ನದ್ಧಾಸ್ಸಂಯತಾಸ್ಸತ್ಯವಾದಿನಃ ।
ದೃಢಚಿತ್ತಾ ಮಹಾವೀರಾ ದೇವದ್ರೋಹಿಣ ಏವ ಚ ॥ ೯ ॥

ತೇ ತು ಮೇರುಗುಹಾಂ ಗತ್ವಾ ತಪಶ್ಚಕ್ರುರ್ಮಹಾದ್ಭುತಂ ।
ತ್ರಯಸ್ಸರ್ವಾನ್ಸುಭೋಗಾಂಶ್ಚ ವಿಹಾಯ ಸುಮನೋಹರಾನ್ ॥ ೧೦ ॥

ವಸಂತೇ ಸರ್ವಕಾಮಾಂಶ್ಚ ಗೀತವಾದಿತ್ರನಿಸ್ವನಂ ।
ವಿಹಾಯ ಸೋತ್ಸವಂ ತೇಪುಸ್ತ್ರಯಸ್ತೇ ತಾರಕಾತ್ಮಜಾಃ ॥ ೧೧ ॥

---

೭. ಓ ಮುನೀಂದ್ರ, ಶಿವನ ಪುತ್ರನಾದ ಸ್ಕಂದನಿಂದ ತಾರಕಾಸುರನು ಮಡಿಯಲಾಗಿ, ಆ ತಾರಕಾಸುರನ ಮಕ್ಕಳಾದ ಮೂವರು ದೈತ್ಯರು ಬಹುವಾಗಿ ಕೋಪಾವಿಷ್ಟರಾದರು.

೮-೯. ಅವರಲ್ಲಿ ಮೊದಲನೆಯವನು ತಾರಕಾಕ್ಷನು, ವಿದ್ಯುನ್ಮಾಲಿಯೆಂಬುವನು ನಡುಕಲವನು. ಕಮಲಾಕ್ಷನು ಕಿರಿಯವನು. ಈ ಮೂವರೂ ಸಮಾನ ಬಲಶಾಲಿಗಳು. ಇವರು ಯಾವಾಗಲೂ ಇಂದ್ರಿಯಗಳನ್ನು ನಿಗ್ರಹಿಸಿದವರು. ಸಮರೋತ್ಸಾಹಿಗಳು. ಒಗ್ಗಟ್ಟಿನಿಂದ ಇರತಕ್ಕವರು. ಸತ್ಯವನ್ನೇ ನುಡಿಯುವವರು. ಸ್ಥಿರವಾದ ಮನಸ್ಸುಳ್ಳವರು. ಮಹಾವೀರ್ಯವುಳ್ಳವರು. ದೇವತೆಗಳ ವಿಷಯದಲ್ಲಿ ಮಾತ್ರ ದ್ರೋಹವನ್ನೇ ಬಗೆಯುತ್ತಿದ್ದರು.

೧೦. ಆ ಮೂವರು ದೈತ್ಯರೂ ಸುಖಕರವೂ ಮನೋಹರವೂ ಆದ ದಿವ್ಯ ಭೋಗಗಳನ್ನೂ ತ್ಯಜಿಸಿಬಿಟ್ಟು, ಮೇರುಪರ್ವತದ ಗುಹೆಯನ್ನು ಸೇರಿ ಬಹಳ ಅದ್ಭುತವಾದ ತಪಸ್ಸನ್ನು ಮಾಡತೊಡಗಿದರು.

೧೧. ಆ ತಾರಕಾಸುರನ ಸುತರು ವಸಂತಋತುವಿನಲ್ಲಿ ಸರ್ವವಿಧವಾದ ಕಾಮಗಳೆಲ್ಲವನ್ನೂ ತೊರೆದು, ಗೀತವಾದ್ಯಗಳಲ್ಲಿ ಆಸಕ್ತಿಯನ್ನು ಬಿಟ್ಟು ಸಂಭ್ರಮದಿಂದ ತಪಸ್ಸುಮಾಡಿದರು.

ಗ್ರೀಷ್ಮೇ ಸೂರ್ಯಪ್ರಭಾಂ ಜಿತ್ವಾ ದಿಕ್ಷು ಪ್ರಜ್ವಾಲ್ಯ ಪಾವಕಂ ।
ತನ್ಮಧ್ಯಸಂಸ್ಥಾಸ್ಸಿದ್ಧ್ಯರ್ಥಂ ಜುಹುವುರ್ಹವ್ಯಮಾದರಾತ್ ॥ ೧೨ ॥

ಮಹಾಪ್ರತಾಪಪತಿತಾಸ್ಸರ್ವೇsಪ್ಯಾಸನ್ಸುಮೂರ್ಛಿತಾಃ ।
ವರ್ಷಾಸು ಗತಸಂತ್ರಾಸಾ ವೃಷ್ಟಿಂ ಮೂರ್ಧನ್ಯಧಾರಯನ್ ॥ ೧೩ ॥

ಶರತ್ಕಾಲೇ ಪ್ರಸೂ(ಭೂ?)ತಂ ತು ಭೋಜನಂ ತು ಬುಭುಕ್ಷಿತಾಃ ।
ರಮ್ಯಂಸ್ನಿಗ್ಧಂ ಸ್ಥಿರಂ ಹೃದ್ಯಂ ಫಲಂ ಮೂಲಮನುತ್ತಮಂ ॥ ೧೪ ॥

ಸಂಯಮಾತ್ಕ್ಷುತ್ತೃಷೋ ಜಿತ್ವಾ ಪಾನಾನ್ಯುಚ್ಚಾವಚಾನ್ಯಪಿ ।
ಬುಭುಕ್ಷಿತೇಭ್ಯೋ ದತ್ವಾ ತು ಬಭೂವುರುಪಲಾ ಇವ ॥ ೧೫ ॥

ಸಂಸ್ಥಿತಾಸ್ತೇ ಮಹಾತ್ಮಾನೋ ನಿರಾಧಾರಾಶ್ಚತುರ್ದಿಶಂ ।
ಹೇಮಂತೇ ಗಿರಿಮಾಶ್ರಿತ್ಯ ಧೈರ್ಯೇಣ ಪರಮೇಣ ತು ॥ ೧೬ ॥

---

೧೨. ಗ್ರೀಷ್ಮಋತುವಿನಲ್ಲಿ ಸೂರ್ಯನ ಉರಿಬಿಸಿಲನ್ನೂ ಲೆಕ್ಕಿಸದೆ, ಸುತ್ತಲೂ ಬೆಂಕಿಗಳನ್ನು ಹೊತ್ತಿಸಿ ಉರಿಸುತ್ತಾ ಅದರ ನಡುವೆ ಇದ್ದುಕೊಂಡು, ಸಿದ್ಧಿಯನ್ನು ಪಡೆಯಲೋಸುಗ ಆದರಪೂರ್ವಕವಾಗಿ ಹವಿಸ್ಸನ್ನು ಯಜ್ಞೇಶ್ವರನಲ್ಲಿ ಹೋಮ ಮಾಡಿದರು.

೧೩. ಅತಿಶಯವಾದ ಬೇಗೆಗೆ ಸಿಲುಕಿ ಅವರು ಬಹುವಾಗಿ ಮೂರ್ಛಿತರಾಗುತ್ತಿದ್ದರು. ವರ್ಷಋತುವಿನಲ್ಲಿ ಸ್ವಲ್ಪವೂ ಹೆದರದೆ ತಲೆಯಮೇಲೆ ಮಳೆಯು ಸುರಿಯುತ್ತಿದರೂ ಸಹಿಸಿಕೊಂಡಿದ್ದರು.

೧೪-೧೫. ಶರದೃತುವಿನಲ್ಲಿ ಆ ತಾರಕಪುತ್ರರು ಹಸಿವಿನಿಂದ ಕಂಗೆಟ್ಟಿದ್ದರೂ ಅವುಗಳನ್ನು ಗಣನೆಗೇ ತಾರದೆ, ಸಂಯಮಶೀಲರಾಗಿ ಅತಿ ಶ್ರೇಷ್ಠವೂ ರುಚಿಕರವೂ, ಪುಷ್ಟಿಕರವೂ, ಮನೋಹರವೂ ಆದಹಣ್ಣುಹಂಪಲು, ಗೆಡ್ಡೆಗೆಣಸು ಮುಂತಾದ ಆಹಾರಗಳನ್ನೂ, ಬಗೆಬಗೆಯಾದ ಪಾನೀಯಗಳನ್ನೂ ತಾವು ಒಲ್ಲದೆ ಹಸಿದಿರುವ ಮತ್ತೊಬ್ಬರಿಗೆ ಕೊಟ್ಟುಬಿಟ್ಟು, ನಾಲ್ಕಾಕಡೆ ಯಾವುದೊಂದು ಆಸರೆಯೂ ಇಲ್ಲದೆ, ಬಂಡೆಗಳಂತೆ ಚಲಿಸದೆ ಇದ್ದರು.

೧೬-೧೭. ಹೇಮಂತಋತುವಿನಲ್ಲಿ ಎತ್ತರವಾದ ಬೆಟ್ಟಗಳನ್ನೇರಿ, ನೀರಿನಿಂದ ನೆನೆದುಹೋದ ಬಟ್ಟೆಗಳನ್ನುಟ್ಟು ಮೈಮೇಲೆಲ್ಲಾ ಬೀಳುತ್ತಿರುವ ಮಂಜಿನಿಂದ ಮುಸು

ತುಷಾರದೇಹಸಂಛನ್ನಾ ಜಲಕ್ಲಿನ್ನೇನ ವಾಸಸಾ ।
ಆಸಾದ್ಯ ದೇಹಂ ಕ್ಷ್ಮಾಪೇಣ ಶಿಶಿರೇ ತೋಯಮಧ್ಯಗಾಃ ॥ ೧೭ ॥

ಅನಿರ್ವಿಣ್ಣಾಸ್ತತಸ್ಸರ್ವೇ ಕ್ರಮಶೋಽವರ್ಧಯಂಸ್ತಪಃ ।
ತೇಪುಸ್ತ್ರಯಸ್ತೇ ತತ್ಪುತ್ರಾ ವಿಧಿಮುದ್ದಿಶ್ಯ ಸತ್ತಮಾಃ ॥ ೧೮ ॥

ತಪ ಉಗ್ರಂ ಸಮಾಸ್ಥಾಯ ನಿಯಮೇ ಪರಮೇ ಸ್ಥಿತಾಃ ।
ತಪಸಾ ಕರ್ಶಯಾಮಾಸುರ್ದೇಹಾರ್ ಸ್ವಾರ್ ದಾನವೋತ್ತಮಾಃ ॥ ೧೯ ॥

ವರ್ಷಾಣಾಂ ಶತಕಂ ಚೈವ ಪದಮೇಕಂ ನಿಧಾಯ ಚ ।
ಭೂಮೌ ಸ್ಥಿತ್ವಾ ಪರಂ ತತ್ರ ತೇಪುಸ್ತೇ ಬಲವತ್ತರಾಃ ॥ ೨೦ ॥

ತೇ ಸಹಸ್ರಂ ತು ವರ್ಷಾಣಾಂ ವಾತಭಕ್ಷಾಸ್ಸುದಾರುಣಾಃ ।
ತಪಸ್ತೇಪುರ್ದುರಾತ್ಮಾನಃ ಪರಂ ತಾಪಮುಪಾಗತಾಃ ॥ ೨೧ ॥

---

ಕಲ್ಪಟ್ಟವರಾಗಿ ಮಹಾಧೈರ್ಯದಿಂದ ತಪವೆಸಗಿದರು. ಶಿಶಿರಋತುವಿನಲ್ಲಿ ನವುರಾದ ಒಟ್ಟೆಯುಟ್ಟು ನೀರಿನ ನಡುವೆ ನಿಂತು ತಪಸ್ಸನ್ನೆಸಗಿದರು.

೧೮. ಇಂತು ಆ ತಾರಕನ ಮೂವರು ಮಕ್ಕಳೂ ಸ್ವಲ್ಪವೂ ಬೇಸರಪಡದೆ ಸಾಧ್ವಾಚಾರನಿರತರಾಗಿ ಬ್ರಹ್ಮನನ್ನು ಕುರಿತು ತಮ್ಮ ತಪಸ್ಸನ್ನು ಕ್ರಮಕ್ರಮವಾಗಿ ಹೆಚ್ಚಿಸಿದರು.

೧೯. ಆ ದಾನವಶ್ರೇಷ್ಠರು ಮಿಗಿಲಾದ ನೇಮದಿಂದ ಬಹು ಘೋರವಾದ ತಪಸ್ಸನ್ನುಮಾಡುತ್ತಾ ತಂತಮ್ಮ ದೇಹಗಳನ್ನು ಸವೆಸಿಬಿಟ್ಟರು.

೨೦. ನೂರುವರ್ಷಗಳಕಾಲ ನೆಲದಮೇಲೆ ಒಂದು ಕಾಲನ್ನು ಮಾತ್ರ ಊರಿ ಆ ಬಲಿಷ್ಠರಾದ ಅಸುರರು ತಪವೆಸಗಿದರು.

೨೧. ದುರಭಿಸಂಧಿಯುಳ್ಳ ಆ ದಾನವರು ಬಹಳ ಬಳಲಿದ್ದರೂ ಒಂದು ಸಾವಿರವರ್ಷಗಳವರೆಗೆ ಕೇವಲ ವಾಯ್ವಾಹಾರಿಗಳಾಗಿ ತಪಸ್ಸುಮಾಡಿದರು.

ವರ್ಷಾಣಾಂ ತು ಸಹಸ್ರಂ ವೈ ಮಸ್ತಕೇನಾಸ್ಥಿತಾಸ್ತಥಾ ।
ವರ್ಷಾಣಾಂ ಶತೇಸ್ಸೈವ ಊರ್ಧ್ವಬಾಹವ ಆಸ್ಥಿತಾಃ ॥ ೨೨ ॥

ಏವಂ ದುಃಖಂ ಪರಂ ಪ್ರಾಪ್ತಾ ದುರಾಗ್ರಹಪರಾ ಇಮೇ
ಈದೃಕ್ತೇ ಸಂಸ್ಥಿತಾ ದೈತ್ಯಾ ದಿವಾರಾತ್ರಮತಂದ್ರಿತಾಃ ॥ ೨೩ ॥

ಏವಂ ತೇಷಾಂ ಗತಃ ಕಾಲೋ ಮಹಾನ್ ಸುತಪತಾಂ ಮುನೇ ।
ಬ್ರಹ್ಮಾತ್ಮನಾಂ ತಾರಕಾಣಾಂ ಧರ್ಮೇಣೇತಿ ಮತಿರ್ಮಮ ॥ ೨೪ ॥

ಪ್ರಾದುರಾಸೀತ್ತತೋ ಬ್ರಹ್ಮಾ ಸುರಾಸುರಗುರುರ್ಮಹಾನ್ ।
ಸಂತುಷ್ಟಸ್ತಪಸಾ ತೇಷಾಂ ವರಂ ದಾತುಂ ಮಹಾಯಶಾಃ ॥ ೨೫ ॥

ಮುನಿದೇವಾಸುರೈಸ್ಸಾರ್ಧಂ ಸಾಂತ್ವಪೂರ್ವಮಿದಂ ವಚಃ ।
ತತಸ್ತಾನಬ್ರವೀತ್ಸರ್ವಾನ್ ಸರ್ವಭೂತಪಿತಾಮಹಃ ॥ ೨೬ ॥

---

೨೨. ಅವರು ಒಂದು ಸಹಸ್ರವರ್ಷಗಳಕಾಲ ತಲೆಕೆಳಗುಮಾಡಿಯೂ ಮತ್ತು ಒಂದುನೂರುವರ್ಷಗಳು ತೋಳುಗಳನ್ನು ಮೇಲೆ ಮಾಡಿಯೂ ನಿಂತುಕೊಂಡು ತಪಸ್ಸನ್ನಾಚರಿಸಿದರು.

೨೩. ಈರೀತಿ ದುರಾಗ್ರಹಗ್ರಸ್ತರಾದ ಆ ದೈತ್ಯರು ಹಗಲಿರುಳೆನ್ನದೆ ಸ್ವಲ್ಪವೂ ಅಲಸಿಕೆಯಿಲ್ಲದೆ ಕಡುಕಷ್ಟವನ್ನು ಅನುಭವಿಸಿದರು.

೨೪. ಓ ವ್ಯಾಸ, ಈರೀತಿಯಾಗಿ ನನಗೆ ತಿಳಿದಂತೆ ಆ ತಾರಕಪುತ್ರರು ಬ್ರಹ್ಮನಲ್ಲೇ ತಮ್ಮ ಮನಸ್ಸು ನಿಲ್ಲಿಸಿ ಧರ್ಮಮಾರ್ಗದಿಂದ ತಪಸ್ಸನ್ನು ಆಚರಿಸುತ್ತಿರಲು ಬಹಳಕಾಲ ಕಳೆದುಹೋಯಿತು.

೨೫-೨೬. ಆಮೇಲೆ ಸುರಾಸುರರಿಗೆ ಗುರುವೂ ಮಹಾಯಶಸ್ವಿಯೂ ಎಲ್ಲಾ ಪ್ರಾಣಿಗಳಿಗೂ ಹಿರಿಯನೂ ಆದ ಬ್ರಹ್ಮನು ಅವರ ತಪಸ್ಸಿಗೆ ಸುಪ್ರೀತನಾಗಿ ವರಗಳನ್ನು ಕೊಡಲು, ಮುನಿಗಳು ದೇವತೆಗಳು ರಾಕ್ಷಸರು ಇವರೊಡನೆ ಆ ತಾರಕಪುತ್ರರಿಗೆ ಪ್ರತ್ಯಕ್ಷನಾಗಿ ಸಾಂತ್ವಪೂರ್ವಕವಾದ ಮಾತಿನಿಂದ ಅವರನ್ನಿಂತೆಂದನು.

॥ ಬ್ರಹ್ಮೋವಾಚ ॥

ಪ್ರಸನ್ನೋಽಸ್ಮಿ ಮಹಾದೈತ್ಯಾ ಯುಷ್ಮಾಕಂ ತಪಸಾ ಮುನೇ ।
ಸರ್ವಂ ದಾಸ್ಯಾಮಿ ಯುಷ್ಮಭ್ಯಂ ವರಂ ಬ್ರೂತ ಯದೀಪ್ಸಿತಂ ॥ ೨೭ ॥

ಕಿಮರ್ಥಂ ಸುತಪಸ್ತಪ್ತಂ ಕಥಯಧ್ವಂ ಸುರದ್ವಿಷಃ ।
ಸರ್ವೇಷಾಂ ತಪಸೋ ದಾತಾ ಸರ್ವಕರ್ತಾಸ್ಮಿ ಸರ್ವದಾ ॥ ೨೮ ॥

॥ ಸನತ್ಕುಮಾರ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ಶನೈಸ್ತೇ ಸ್ವಾತ್ಮನೋಗತಂ ।
ಊಚುಃ ಪ್ರಾಂಜಲಯಸ್ಸರ್ವೇ ಪ್ರಣಿಪತ್ಯ ಪಿತಾಮಹಂ ॥ ೨೯ ॥

॥ ದೈತ್ಯಾ ಊಚುಃ ॥

ಯದಿ ಪ್ರಸನ್ನೋ ದೇವೇಶ ಯದಿ ದೇಯೋ ವರಸ್ತ್ವಯಾ ।
ಅವಧ್ಯತ್ವಂ ಚ ಸರ್ವೇಷಾಂ ಸರ್ವಭೂತೇಷು ದೇಹಿನಃ ॥ ೩೦ ॥

ಸ್ಥಿರಾನ್ ಕುರು ಜಗನ್ನಾಥ ಪಾಂತು ನಃ ಪರಿಪಂಥಿನಃ ।
ಜರಾರೋಗಾದಯಸ್ಸರ್ವೇ ನಾಸ್ಮಾನ್ಮೃತ್ಯುರಗಾತ್ಕ್ವಚಿತ್ ॥ ೩೧ ॥

---

೨೭-೨೮. ಎಲೈ ದೈತ್ಯಶ್ರೇಷ್ಠರೇ, ನಿಮ್ಮ ತಪಸ್ಸಿಗೆ ನಾನು ಮೆಚ್ಚಿದೆನು. ನಿಮಗೇನು ಇಷ್ಟವೋ ಕೇಳಿಕೊಳ್ಳಿರಿ. ಅದೆಲ್ಲವನ್ನೂ ನಿಮಗೆ ಕೊಡುವೆನು. ನೀವು ಇಷ್ಟು ದೊಡ್ಡ ತಪಸ್ಸುಮಾಡಿದುದೇಕೆ? ಎಲೈ ದೇವವೈರಿಗಳಿರಾ, ಹೇಳಿರಿ. ಸೃಷ್ಟಿ ಕರ್ತನಾದ ನಾನು ಎಲ್ಲರ ತಪಸ್ಸಿಗೂ ಫಲವನ್ನೀಯಲು ಸದಾ ಸಿದ್ಧನಾಗಿರುವೆನು.

೨೯. ಸನತ್ಕುಮಾರನು ಹೇಳಿದನು ;—ಬ್ರಹ್ಮನ ಮಾತನ್ನು ಕೇಳಿ ಆ ಮೂವರು ತಾರಕಪುತ್ರರೂ, ಆತನಿಗೆ ನಮಸ್ಕರಿಸಿ ಕೈಗಳನ್ನು ಮುಗಿದುಕೊಂಡು ತಮ್ಮ ಬಯಕೆಯನ್ನು ಮೆಲ್ಲನೆ ಬಿನ್ನವಿಸಿಕೊಂಡರು.

೩೦-೩೧. ದೇವತೆಗಳಿಗೆಲ್ಲಾ ಒಡೆಯನಾದ ಓ ಬ್ರಹ್ಮದೇವನೆ, ನೀನು ನಮ್ಮಲ್ಲಿ ಪ್ರಸನ್ನನಾಗಿ ನಮಗೆ ನೀನು ವರಗಳನ್ನೀಯಬೇಕೆಂದು ಇದ್ದರೆ ನಾವು ಮೂವರೂ ಈ ಜಗತ್ತಿನಲ್ಲಿರುವ ಅಸಂಖ್ಯಾತವಾದ ಜೀವರಾಶಿಗಳಲ್ಲಿ ಒಂದು ಪ್ರಾಣಿಯಿಂದಲೂ ಮರಣಹೊಂದದಂತೆ ಅನುಗ್ರಹಿಸು. ಶತ್ರುಗಳನ್ನು ನಿಗ್ರಹಿಸಿ ಈ ಜಗತ್ತನ್ನು ಪಾಲಿ

ಅಜರಾಶ್ಚಾಮರಾಸ್ಸರ್ವೇ ಭವಾಮ ಇತಿ ನೋ ಮತಂ ।
ಸಮೃತ್ಯವಃ ಕರಿಷ್ಯಾಮಸ್ಸರ್ವಾನನ್ಯಾಂಸ್ತ್ರಿಲೋಕಕೇ ॥ ೩೨ ॥

ಲಕ್ಷ್ಮ್ಯಾ ಕಿಂ ತದ್ವಿಪುಲಯಾ ಕಿಂ ಕಾರ್ಯಂ ಹಿ ಪುರೋತ್ತಮೈಃ ।
ಅನ್ಯೈಶ್ಚ ವಿಪುಲೈರ್ಭೋಗೈಸ್ಸ್ಥಾನೈಶ್ವರ್ಯೇಣ ವಾ ಪುನಃ ॥ ೩೩ ॥

ಯತ್ರೈವ ಮೃತ್ಯುನಾ ಗ್ರಸ್ತೋ ನಿಯತಂ ಪಂಚಭಿರ್ದಿನೈಃ ।
ವ್ಯರ್ಥಂ ತಸ್ಯಾಖಿಲಂ ಬ್ರಹ್ಮನ್ ನಿಶ್ಚಿತಂ ನ ಇತೀವ ಹಿ ॥ ೩೪ ॥

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ವಚಸ್ತೇಷಾಂ ದೈತ್ಯಾನಾಂ ಚ ತಪಸ್ವಿನಾಂ ।
ಪ್ರತ್ಯುವಾಚ ಶಿವಂ ಸ್ಮೃತ್ವಾ ಸ್ವಪ್ರಭುಂ ಗಿರಿಶಂ ವಿಧಿಃ ॥ ೩೫ ॥

॥ ಬ್ರಹ್ಮೋವಾಚ ॥

ನಾಸ್ತಿ ಸರ್ವಾಮರತ್ವಂ ಚ ನಿವರ್ತಧ್ವಮತೋಽಸುರಾಃ ।
ಅನ್ಯಂ ವರಂ ವೃಣೀಧ್ವಂ ವೈ ಯಾದೃಶೋ ವೋ ಹಿ ರೋಚತೇ ॥ ೩೬ ॥

---

ಸಲೋಸುಗ ನಮ್ಮನ್ನು ಸ್ಥಿರರನ್ನಾಗಿ ಮಾಡು. ಮುಪ್ಪು, ಸಾವುಗಳು, ಖಾಯಿಲೆ ಕಸಾಲೆಗಳು, ಇವೊಂದೂ ನಮ್ಮ ಬಳಿಸಾರದಂತೆ ಮಾಡು. ನಾವು ಮೂವರೂ ಅಜರರೂ ಅಮರರೂ ಆಗಬೇಕೆಂದು ನಮ್ಮಾಸೆ. ಮೃತ್ಯುವಿನ ಹೆದರಿಕೆಯಿದ್ದಲ್ಲಿ ಈ ಜಗತ್ತಿನಲ್ಲಿ ಉಳಿದ ಇನ್ನೇನನ್ನು ತಾನೇ ಸಾಧಿಸಬಲ್ಲೆವು? ವಿಪುಲವಾದ ಸಂಪತ್ತಿದ್ದರೇನು? ಉತ್ತಮವಾದ ನಗರಗಳಿದ್ದರೇನು? ಉಳಿದ ಉತ್ತಮ ಭೋಗಗಳಾದರೂ ಏನುಮಾಡಿಯಾವು? ಯಾವ ಪದವಿಯಾದರೆ ತಾನೆ ಏನು? ಯಾವನು ನಾಲ್ಕೈದುದಿನಗಳಲ್ಲೇ ಖಂಡಿತವಾಗಿಯೂ ಮೃತ್ಯುವಿನ ವಶವಾಗುವನೋ ಅವನಿಗೆ ಎಲ್ಲವೂ ವ್ಯರ್ಥವೇ ಎಂದು ನಮಗೆ ದೃಢವಾದ ನಂಬಿಕೆಯಾಗಿ ಬಿಟ್ಟಿದೆ.

೩೫. ಹೀಗೆ ತಪಸ್ವಿಗಳಾದ ಆ ದೈತ್ಯರ ಮಾತನ್ನು ಕೇಳಿ ಬ್ರಹ್ಮನು ತನ್ನ ಪ್ರಭುವಾದ ಶಂಕರನನ್ನು ನೆನೆದು ಅವರಿಗೆ ಹೀಗೆ ಹೇಳಿದನು.

೩೬-೩೮. ಎಲೈ ಅಸುರರೇ, ಎಲ್ಲರಿಗೂ ಅಮರತ್ವವು ದೊರೆಯಲಾರದು. ಅದುದರಿಂದ ಈ ಅಪೇಕ್ಷೆಯನ್ನು ತೊರೆಯಿರಿ. ನಿಮಗಿಷ್ಟವಾದ ಬೇರೊಂದು ವರ

ಜಾತೋ ಜನಿಷ್ಯತೇ ನೂನಂ ಜಂತುಃ ಕೋಽಪ್ಯಸುರಾಃ ಕ್ವಚಿತ್ ।
ಅಜರಶ್ಚಾಮರೋ ಲೋಕೇ ನ ಭವಿಷ್ಯತಿ ಭೂತಲೇ ॥ ೩೭ ॥

ಋತೇ ತು ಖಂಡಪರಶೋಃ ಕಾಲಕಾಲಾದ್ಧರೇಸ್ತಥಾ ।
ತೌ ಧರ್ಮಾಧರ್ಮಪರಮಾವವ್ಯಕ್ತೌ ವ್ಯಕ್ತರೂಪಿಣೌ ॥ ೩೮ ॥

ಸಂಪೀಡನಾಯ ಜಗತೋ ಯದಿ ಸ ಕ್ರಿಯತೇ ತಪಃ ।
ಸಫಲಂ ತದ್ಗತಂ ವೇದ್ಯಂ ತಸ್ಮಾತ್ಸನ್ನಿಹಿತಂ ತಪಃ ॥ ೩೯ ॥

ತದ್ವಿಚಾರ್ಯ ಸ್ವಯಂ ಬುದ್ಧ್ಯಾ ನ ಶಕ್ಯಂ ಯತ್ಸುರಾಸುರೈಃ ।
ದುರ್ಲಭಂ ವಾ ಸುದುಸ್ಸಾಧ್ಯಂ ಮೃತ್ಯುಂ ವಂಚಯತಾನಘಾಃ ॥ ೪೦ ॥

ತತ್ಕಿಂಚಿನ್ಮರಣೇ ಹೇತುಂ ವೃಣೀಧ್ವಂ ಸತ್ತ್ವಮಾಶ್ರಿತಾಃ ।
ಯೇನ ಮೃತ್ಯುರ್ನೈವ ವೃತೋ ರಕ್ಷತಸ್ತತ್ಪೃಥಕ್ಪೃಥಕ್ ॥ ೪೧ ॥

---

ವನ್ನು ಕೇಳಿರಿ. ಈ ಭೂತಲದಲ್ಲಿ ಪ್ರಾಣಿಸಾಮಾನ್ಯವು ಈಗ ಹುಟ್ಟಿರುವುದು. ಮತ್ತು ಮುಂದೆಯೂ ಹುಟ್ಟುವುದು. ಮೃತ್ಯುವಿಗೂ ಮೃತ್ಯುವಾದ ಶಿವನನ್ನೂ ಮತ್ತು ಹರಿಯನ್ನೂ ಬಿಟ್ಟರೆ ಮತ್ತಾವ ಪ್ರಾಣಿಯೂ ಮುಪ್ಪಿಲ್ಲದೆಯೂ ಸಾವಿಲ್ಲದೆಯೂ ಇಲ್ಲ. ಆ ಶಿವನೂ ಹರಿಯೂ ಧರ್ಮಾಧರ್ಮಗಳಿಗೆ ನಿಯಾಮಕರು. ಅವರೇ ವ್ಯಕ್ತರಾಗಿಯೂ ಅವ್ಯಕ್ತರಾಗಿಯೂ ಇರಬಲ್ಲವರು.

೩೯-೪೧. ಜಗತ್ತನ್ನು ಪೀಡಿಸಲೆಂದು ಆ ದೇವನನ್ನು ಕುರಿತು ತಪಸ್ಸುಮಾಡಿದರೂ ಆ ತಪಸ್ಸಿಗೆ ಗುರಿಯು ಆತನಾದುದರಿಂದ ಅದು ಸಫಲವೆನಿಸುವುದು. ವಿಹಿತವೆನಿಸುವುದು. ಆದುದರಿಂದ ನೀವಾಗಿಯೇ ನಿಮ್ಮ ಬುದ್ಧಿಶಕ್ತಿಯಿಂದ ವಿಚಾರಮಾಡಿ ಸುರರಿಗೂ ಅಸುರರಿಗೂ ಹೊಂದಲೂ ಮತ್ತು ಸಾಧಿಸಲೂ ಎಂದಿಗೂ ಸಾಧ್ಯವಲ್ಲದ ಮೃತ್ಯುವನ್ನು ಮೋಸಗೊಳಿಸಲು ಯತ್ನಿಸಿರುವಿರಲ್ಲವೇ. ಆದುದರಿಂದ ತಿಳಿಯಾದ ಮನಸ್ಸಿನಿಂದ ನಿಮ್ಮ ಮರಣಕ್ಕೆ ಯಾವುದಾದರೂ ಕಾರಣವೊಂದನ್ನು ಆರಿಸಿಕೊಳ್ಳಿರಿ. ಮೃತ್ಯುವೊಂದುಹೊರತು ಇತರವಿಧವಾದ ಯಾವ ರಕ್ಷಣೆಯನ್ನಾದರೂ ಕೇಳಿಕೊಳ್ಳಿರಿ ಎಂದನು.

॥ ಸನತ್ಕುಮಾರ ಉವಾಚ ॥

ಏತದ್ವಿಧಿವಚಶ್ಶ್ರುತ್ವಾ ಮುಹೂರ್ತಂ ಧ್ಯಾನಮಾಸ್ಥಿತಾಃ ।
ಪ್ರೋಚುಸ್ತೇ ಚಿಂತಯಿತ್ವಾಥ ಸರ್ವಲೋಕಪಿತಾಮಹಂ ॥ ೪೨ ॥

॥ ದೈತ್ಯಾ ಊಚುಃ ॥

ಭಗವನ್ನಾಸ್ತಿ ನೋ ವೇಶ್ಮ ಪರಾಕ್ರಮವತಾಮಪಿ ।
ಅಧೃಷ್ಯಾಶ್ಯಾತ್ರವಾಣಾಂ ತು ಯತ್ರ ವತ್ಸ್ಯಾಮಹೇ ಸುಖಂ ॥ ೪೩ ॥

ಪುರಾಣಿ ತ್ರೀಣಿ ನೋ ದೇಹಿ ನಿರ್ಮಾಯಾತ್ಯದ್ಭುತಾನಿ ಹಿ ।
ಸರ್ವಸಂಪತ್ಸಮೃದ್ಧಾನ್ಯಪ್ರಧೃಷ್ಯಾಣಿ ದಿವೌಕಸಾಂ ॥ ೪೪ ॥

ವಯಂ ಪುರಾಣಿ ತ್ರೀಣ್ಯೇವಂ ಸಮಾಸ್ಥಾಯ ಮಹೀಮಿಮಾಂ ।
ಚರಿಷ್ಯಾಮೋ ಹಿ ಲೋಕೇಶ ತ್ವತ್ಪ್ರಸಾದಾಜ್ಜಗದ್ಗುರೋ ॥ ೪೫ ॥

ತಾರಕಾಕ್ಷಸ್ತತಃ ಪ್ರಾಹ ಯದಭೇದ್ಯಂ ಸುರೈರಪಿ ।
ಕರೋತಿ ವಿಶ್ವಕರ್ಮಾ ತನ್ಮಮ ಹೇಮಮಯಂ ಪುರಂ ॥ ೪೬ ॥

---

೪೨. ಸನತ್ಕುಮಾರನಿಂತೆಂದನು :—ಬ್ರಹ್ಮನ ಈ ಮಾತನ್ನು ಕೇಳಿ ಒಂದು ಮುಹೂರ್ತಕಾಲ ಆ ದೈತ್ಯರು ಆಲೋಚಿಸಿ ಆ ಪಿತಾಮಹನನ್ನು ಕುರಿತು ಇಂತೆಂದರು.

೪೩. ದೇವ, ನಾವು ಎಷ್ಟೇ ಪರಾಕ್ರಮಶಾಲಿಗಳಾಗಿದ್ದರೂ ಶತ್ರುಗಳಿಗೆ ಜಗ್ಗದಂತೆ ಸುಖವಾಗಿ ವಾಸಮಾಡಲು ಅನುಕೂಲವಾದ ಒಂದು ನೆಲೆಯು ನಮಗೆ ಇಲ್ಲವಾಗಿದೆ.

೪೪. ನಮಗೋಸ್ಕರ ದೇವತೆಗಳಿಗೂ ಜಗ್ಗದ, ಸಕಲೈಶ್ವರ್ಯಗಳಿಂದಲೂ ಪರಿಪೂರ್ಣವಾದ, ಆಶ್ಚರ್ಯಕರವಾದ ಮೂರು ನಗರಗಳನ್ನು ನಿರ್ಮಿಸಿ ಕೊಡು.

೪೫. ನಾವು ಇಂತಹ ಮೂರು ನಗರಗಳನ್ನೇರಿ ಕುಳಿತು ಈ ಭೂಮಂಡಲವೆಲ್ಲವನ್ನೂ ಸುತ್ತುವಂತೆ ನಿನ್ನನುಗ್ರಹದಿಂದಾಗಬೇಕು.

೪೬. ಆಮೇಲೆ ಹಿರಿಯವನಾದ ತಾರಕಾಕ್ಷನು ದೇವತೆಗಳಿಗೂ ಭೇದಿಸಲಸಾಧ್ಯವಾದ ಸ್ವರ್ಣಮಯವಾದ ಊರನ್ನು ವಿಶ್ವಕರ್ಮನು ನನಗೆ ನಿರ್ಮಿಸಿಕೊಡಬೇಕು ಎಂದು ಕೇಳಿಕೊಂಡನು.

ಯಯಾಚೇ ಕಮಲಾಕ್ಷಸ್ತು ರಾಜತಂ ಸುಮಹತ್ಪುರಂ ।
ವಿದ್ಯುನ್ಮಾಲೀ ಚ ಸಂಹೃಷ್ಟೋ ವಜ್ರಾಯಸಮಯಂ ಮಹತ್ ॥ ೪೭ ॥

ಪುರೇಷ್ವೇತೇಷು ಭೋ ಬ್ರಹ್ಮನ್ನೇಕಸ್ಥಾನಸ್ಥಿತೇಷು ಚ ।
ಮಧ್ಯಾಹ್ನಾಭಿಜಿತೇ ಕಾಲೇ ಶೀತಾಂಶೌ ಪುಷ್ಯಸಂಸ್ಥಿತೇ ॥ ೪೮ ॥

ಉಪರ್ಯುಪರ್ಯದೃಷ್ಟೇಷು ವ್ಯೋಮ್ನಿ ಲೀಲಾಭ್ರಸಂಸ್ಥಿತೇ ।
ವರ್ಷತ್ಸು ಕಾಲಮೇಘೇಷು ಪುಷ್ಕರಾವರ್ತನಾಮಸು ॥ ೪೯ ॥

ತಥಾ ವರ್ಷಸಹಸ್ರಾಂತೇ ಸಮೇಷ್ಯಾಮಃ ಪರಸ್ಪರಂ ।
ಏಕೀಭಾವಂ ಗಮಿಷ್ಯಂತಿ ಪುರಾಣ್ಯೇತಾನಿ ನಾನ್ಯಥಾ ॥ ೫೦ ॥

ಸರ್ವದೇವಮಯೋ ದೇವಸ್ಸರ್ವೇಷಾಂ ನಃ ಕುಹೇಲಯಾ ।
ಅಸಂಭವೇ ರಥೇ ತಿಷ್ಠ ನ್ಸರ್ವೋಪಸ್ಕರಣಾನ್ವಿತೇ ॥ ೫೧ ॥

ಅಸಂಭಾವ್ಯೈಕಕಾಂಡೇನ ಭಿನತ್ತು ನಗರಾಣಿ ನಃ ।
ನಿರ್ವೈರಃ ಕೃತ್ತಿವಾಸಾಸ್ತು ಯೋಽಸ್ಮಾಕಮಿತಿ ನಿತ್ಯಶಃ ॥ ೫೨ ॥

---

೪೭. ಕಮಲಾಕ್ಷನು ದೊಡ್ಡ ಬೆಳ್ಳಿಯ ಪಟ್ಟಣವನ್ನೂ, ವಿದ್ಯುನ್ಮಾಲಿಯು ವಜ್ರಸಾರವಾದ ಕಬ್ಬಿಣದ ಪಟ್ಟಣವನ್ನೂ ನಿರ್ಮಿಸಿಕೊಡುವಂತೆ ಕೇಳಿಕೊಂಡರು.

೪೮-೫೩. ಆಮೇಲೆ ಎಲ್ಲರೂ ಬ್ರಹ್ಮನನ್ನು ಕುರಿತು ಇಂತೆಂದರು :—ಓ ದೇವ, ಮೋಡಗಳು ತೇಲುತ್ತಿರುವ ಈ ಆಕಾಶದಲ್ಲಿ ಯಾರಿಗೂ ಕಾಣದಂತೆ ಮೇಲೆ ಮೇಲೆ ಹಾರಾಡುತ್ತಿರುವ ಈ ಮೂರು ಊರುಗಳು ಒಂದೆಡೆ ಸಂಧಿಸಿದಾಗ ನಾವು ಪರಸ್ಪರ ಸೇರುವೆವು. ಚಂದ್ರನು ಪುಷ್ಯನಕ್ಷತ್ರದಲ್ಲಿರುವಾಗ ಮಧ್ಯಾಹ್ನ ಅಭಿಜಿನ್ಮುಹೂರ್ತದಲ್ಲಿ ಪುಷ್ಕರಾವರ್ತಗಳೆಂಬ ಪ್ರಳಯಕಾಲದ ಮೇಘಗಳು ಘೋರವಾಗಿ ಮಳೆ ಗರೆಯುವ ಸಮಯದಲ್ಲಿ ಈ ಮೂರು ನಗರಗಳೂ ಸಾವಿರವರ್ಷಗಳಿಗೊಮ್ಮೆ ಪರಸ್ಪರ ಸಂಧಿಸುವುವಲ್ಲದೆ ಇನ್ನು ಬೇರೆ ಸಮಯದಲ್ಲಿ ಸಂಧಿಸಲಾರವು. ಆ ಸಮಯದಲ್ಲಿ ಸರ್ವದೇವಸ್ವರೂಪನಾದ ದೇವನೊಬ್ಬನು, ಇದುವರೆಗೂ ಯಾರೂ ಕಂಡು ಕೇಳರಿಯದ ತೇರಿನಲ್ಲಿ ಕುಳಿತು ಅದೇರೀತಿಯ ಊಹೆಗೂ ನಿಲುಕದ ಒಂದೇ ಒಂದು ಬಾಣದಿಂದ ನಮ್ಮಾ ಮೂವರ ಊರುಗಳನ್ನೂ ಲೀಲಾಮಾತ್ರದಲ್ಲಿ ಭೇದಿಸಿಬಿಡಲಿ. ಓ ವ್ಯಾಸ, ಆದೈತ್ಯರ ಅಭಿಪ್ರಾಯ ಹೀಗೆ:-ಸರ್ವದೇವಮಯನಾದ ಅಂತಹ ದೇವನು,

ವಂದ್ಯಃ ಪೂಜ್ಯೋಽಭಿವಾದ್ಯಶ್ಚ ಸೋಽಸ್ಮಾಕಂ ನಿರ್ದಹೇತ್ಕಥಂ ।
ಇತಿ ಚೇತಸಿ ಸಂಧಾಯ ತಾದೃಶೋ ಭುವಿ ದುರ್ಲಭಃ ॥ ೫೩ ॥

॥ ಸನತ್ಕುಮಾರ ಉವಾಚ ॥

ಏತಚ್ಛ್ರುತ್ವಾ ವಚಸ್ತೇಷಾಂ ಬ್ರಹ್ಮಾ ಲೋಕಪಿತಾಮಹಃ ।
ಏವಮಸ್ತ್ವಿತಿ ತಾನ್ಪ್ರಾಹ ಸೃಷ್ಟಿಕರ್ತಾ ಸ್ಮರನ್ ಶಿವಂ ॥ ೫೪ ॥

ಆಜ್ಞಾಂ ದದೌ ಮಯಸ್ಯಾಪಿ ಕುರು ತ್ವಂ ನಗರತ್ರಯಂ ।
ಕಾಂಚನಂ ರಾಜತಂ ಚೈವ ಆಯಸಂ ಚೇತಿ ಭೋ ಮಯ ॥ ೫೫ ॥

ಇತ್ಯಾದಿಶ್ಯ ಮಯಂ ಬ್ರಹ್ಮಾ ಪ್ರತ್ಯಕ್ಷಂ ಪ್ರಾವಿಶದ್ದಿವಂ ।
ತೇಷಾಂ ತಾರಕಪುತ್ರಾಣಾಂ ಪಶ್ಯತಾಂ ನಿಜಧಾಮ ಹಿ ॥ ೫೬ ॥

---

ಶಿವನಲ್ಲದೆ ಬೇರೆ ಇನ್ನಾರೂ ಇಲ್ಲ. ಆ ಶಿವನನ್ನು ನಿತ್ಯವೂ ನಾವು ಪೂಜಿಸುವೆವು. ನಮಸ್ಕರಿಸುವೆವು. ಹೀಗಿರುವಾಗ ಶಿವನಿಗೆ ನಮ್ಮಲ್ಲಿ ವೈರವೆಲ್ಲಿಯದು ? ಆ ಶಿವನು, ನಮ್ಮ ಊರುಗಳನ್ನು ಸುಡುವುದಾದರೂ ಎಂತು ? ಶಿವನನ್ನು ಬಿಟ್ಟರೆ ಮತ್ತೊಬ್ಬನು ಅಂಥವನು ಸಿಗಲಾರನು. ಹೀಗೆ ಆಲೋಚಿಸಿ ಆ ದೈತ್ಯರು ಮೇಲೆ ಹೇಳಿದಂತೆ ಕೇಳಿ ಕೊಂಡರು.

೫೪. ಎಲೈ ವ್ಯಾಸನೇ ಕೇಳು, ತಾರಕಾಸುರನ ಮಕ್ಕಳಾದ ಆ ಮೂವರು ದೈತ್ಯರು ನುಡಿದ ಈ ಮಾತನ್ನು ಕೇಳಿ ಚತುರ್ಮುಖನು ಶಿವನನ್ನು ನೆನೆಸುತ್ತಾ ಅವರನ್ನು ಕುರಿತು ನಿಮ್ಮಿಷ್ಟದಂತೆಯೇ ಆಗುವುದು ಎಂದನು.

೫೫. ಬಳಿಕ ದೈತ್ಯಶಿಲ್ಪಿಯಾದ ಮಯನನ್ನು ಕರೆದು ಚಿನ್ನ, ಬೆಳ್ಳಿ, ಉಕ್ಕು, ಈ ಮೂರು ಲೋಹಗಳಿಂದ ಮೂರು ಪಟ್ಟಣಗಳನ್ನು ನಿರ್ಮಿಸುವಂತೆ ಅಪ್ಪಣೆ ಯಿತ್ತನು.

೫೬. ಈರೀತಿ ಮಯನಿಗೆ ಅಪ್ಪಣೆಮಾಡಿ ಬ್ರಹ್ಮನು ಆ ತಾರಕಾಸುರನ ಮಕ್ಕಳು ನೋಡುತ್ತಿರುವಂತೆಯೇ ತನ್ನ ಲೋಕಕ್ಕೆ ತೆರಳಿದನು.

ತತೋ ಮಯಶ್ಚ ತಪಸಾ ಚಕ್ರೇ ಧೀರಃ ಪುರಾಣ್ಯಥ ।
ಕಾಂಚನಂ ತಾರಕಾಕ್ಷಸ್ಯ ಕಮಲಾಕ್ಷಸ್ಯ ರಾಜತಂ　　॥ ೫೭ ॥

ವಿದ್ಯುನ್ಮಾಲ್ಯಾಯಸಂ ಚೈವ ತ್ರಿವಿಧಂ ದುರ್ಗಮುತ್ತಮಂ ।
ಸ್ವರ್ಗೇ ವ್ಯೋಮ್ನಿ ಚ ಭೂಮೌ ಚ ಕ್ರಮಾಜ್ಜ್ಞೇಯಾನಿ ತಾನಿ ವೈ॥ ೫೮ ॥

ದತ್ವಾ ತೇಭ್ಯೋಽಸುರೇಭ್ಯಶ್ಚ ಪುರಾಣಿ ತ್ರೀಣಿ ವೈ ಮಯಃ ।
ಪ್ರವಿವೇಶ ಸ್ವಯಂ ತತ್ರ ಹಿತಕಾಮಪರಾಯಣಃ　　॥ ೫೯ ॥

ಏವಂ ಪುರತ್ರಯಂ ಪ್ರಾಪ್ಯ ಪ್ರವಿಷ್ಟಾಸ್ತಾರಕಾತ್ಮಜಾಃ ।
ಬುಭುಜುಸ್ಸಕಲಾನ್ಭೋಗಾನ್ ಮಹಾಬಲಪರಾಕ್ರಮಾಃ　　॥ ೬೦ ॥

ಕಲ್ಪದ್ರುಮೈಶ್ಚ ಸಂಕೀರ್ಣಂ ಗಜವಾಜಿಸಮಾಕುಲಂ ।
ನಾನಾಪ್ರಾಸಾದಸಂಕೀರ್ಣಂ ಮಣಿಜಾಲಸಮಾವೃತಂ　　॥ ೬೧ ॥

---

೫೭-೫೯. ಬಳಿಕ ದೈತ್ಯಶಿಲ್ಪಿಯಾದ ಮಯನು ತನ್ನ ತಪೋಬಲದಿಂದ ಪರರಿಗೆ ಪ್ರವೇಶಿಸಲು ಅಸಾಧ್ಯವೂ ಉತ್ತಮವೂ ಆದ ಚಿನ್ನ, ಬೆಳ್ಳಿ, ಉಕ್ಕುಗಳಿಂದ ಮಾಡಲ್ಪಟ್ಟ ಮೂರು ನಗರಗಳನ್ನು ಕ್ರಮವಾಗಿ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿಯೆಂಬ ಆ ಮೂವರು ದೈತ್ಯರಿಗೆ ಸ್ವರ್ಗ, ಅಂತರಿಕ್ಷ, ಭೂಲೋಕಗಳಲ್ಲಿ ನಿರ್ಮಿಸಿ ಕೊಟ್ಟು ಅವರ ಹಿತವನ್ನೇ ಬಯಸುತ್ತಾ ತಾನೂ ಆನಗರಗಳಲ್ಲೇ ಪ್ರವೇಶಿಸಿ ಇದ್ದನು. ತಾರಕಾಕ್ಷನಿಗೆ ಚಿನ್ನದಿಂದ ಸ್ವರ್ಗದಲ್ಲಿಯೂ ಕಮಲಾಕ್ಷನಿಗೆ ಬೆಳ್ಳಿಯಿಂದ ಅಂತರಿಕ್ಷದಲ್ಲಿಯೂ ವಿದ್ಯುನ್ಮಾಲಿಗೆ ಉಕ್ಕಿನಿಂದ ಭೂಮಿಯಲ್ಲಿಯೂ ಊರುಗಳನ್ನು ನಿರ್ಮಿಸಿದನೆಂದು ತಾತ್ಪರ್ಯ.

೬೦-೬೨. ಈರೀತಿಯಾಗಿ ಮಹಾಬಲಿಷ್ಠರೂ ಪರಾಕ್ರಮಶಾಲಿಗಳೂ ಆದ ಆ ತಾರಕಾಸುರನ ಮಕ್ಕಳು ಮೂರು ಪಟ್ಟಣಗಳನ್ನು ಪಡೆದು ಅವುಗಳಲ್ಲಿ ವಾಸ ಮಾಡುತ್ತಾ ಸಕಲ ಭೋಗಭಾಗ್ಯಗಳನ್ನೂ ಅನುಭವಿಸುತ್ತಿದ್ದರು. ಆ ನಗರಗಳ ವೈಭವವನ್ನು ಏನೆಂದು ಹೇಳಲಿ ? ಎಲ್ಲಿ ನೋಡಿದರೂ ಕಲ್ಪವೃಕ್ಷಗಳು, ಎತ್ತೆತ್ತಲೂ ಆನೆ ಕುದುರೆಗಳು, ನಾನಾವಿಧವಾದ ಉಪ್ಪರಿಗೆಗಳು, ರಾಶಿರಾಶಿಯಾಗಿ ರತ್ನಗಳು,

ಸೂರ್ಯಮಂಡಲಸಂಕಾಶೈರ್ವಿಮಾನೈಸ್ಸರ್ವತೋಮುಖೈಃ ।
ಪದ್ಮರಾಗಮಯೈಶ್ಚೈವ ಶೋಭಿತಂ ಚಂದ್ರಸನ್ನಿಭೈಃ ॥ ೬೨ ॥

ಪ್ರಾಸಾದೈರ್ಗೋಪುರೈರ್ದಿವ್ಯೈಃ ಕೈಲಾಸಶಿಖರೋಪಮೈಃ ।
ದಿವ್ಯಸ್ತ್ರೀಜನಸಂಕೀರ್ಣೈರ್ಗಂಧರ್ವೈಸ್ಸಿದ್ಧಚಾರಣೈಃ ॥ ೬೩ ॥

ರುದ್ರಾಲಯೈಃ ಪ್ರತಿಗೃಹಮಗ್ನಿಹೋತ್ರೈಃ ಪ್ರತಿಷ್ಠಿತೈಃ ।
ದ್ವಿಜೋತ್ತಮೈಶ್ಶಾಸ್ತ್ರವಿಜ್ಞೈಶ್ಶಿವಭಕ್ತಿರತೈಸ್ಸದಾ ॥ ೬೪ ॥

ವಾಪೀಕೂಪತಡಾಗೈಶ್ಚ ದೀರ್ಘಿಕಾಭಿಸ್ಸುಶೋಭಿತಂ ।
ಉದ್ಯಾನವನವೃಕ್ಷೈಶ್ಚ ಸ್ವರ್ಗಚ್ಯುತಗುಣೋತ್ತಮೈಃ ॥ ೬೫ ॥

ನದೀನದಸರಿನ್ಮುಖ್ಯಪುಷ್ಕರೈಶ್ಶೋಭಿತಂ ಸದಾ ।
ಸರ್ವಕಾಮಫಲಾಢ್ಯೈಶ್ಚಾನೇಕೈರ್ವೃಕ್ಷೈರ್ಮನೋಹರಂ ॥ ೬೬ ॥

---

ಸೂರ್ಯಮಂಡಲದಂತೆ ಹೊಳೆಯುತ್ತಿರುವ ವಿಮಾನಗಳು, ಅಲ್ಲಿ ಎಲ್ಲೆಲ್ಲಿಯೂ ಕಂಗೊಳಿಸುತ್ತಿದ್ದುವು. ಅವುಗಳಲ್ಲಿ ಕೆಲವು ಪದ್ಮರಾಗಮಣಿಯಿಂದ ಮಾಡಲ್ಪಟ್ಟಿದ್ದುವು. ಕೆಲವು ಚಂದ್ರನಂತೆ ಥಳಥಳಿಸುತ್ತಿದ್ದುವು.

೬೩-೬೪. ಆ ಪಟ್ಟಣಗಳಲ್ಲಿ ಉಪ್ಪರಿಗೆಗಳೂ, ಊರ ಹೆಬ್ಬಾಗಿಲುಗಳೂ ಕೈಲಾಸ ಪರ್ವತದಂತೆ ಮಹೋನ್ನತವಾಗಿದ್ದುವು. ಆ ಉಪ್ಪರಿಗೆಗಳೆಲ್ಲವೂ ಮಹಾರೂಪವತಿಯರಾದ ಸ್ತ್ರೀಯರಿಂದ ಶೋಭಿಸುತ್ತಿದ್ದುವು. ಗಂಧರ್ವರೂ ಸಿದ್ಧರೂ ಚಾರಣರೂ ಆ ಊರಲ್ಲಿ ತುಂಬಿರುತ್ತಿದ್ದರು. ಎಲ್ಲಿ ನೋಡಿದರೂ ಶಿವಾಲಯಗಳು, ಪ್ರತಿಯೊಂದು ಮನೆಯಲ್ಲೂ ಅಗ್ನಿಹೋತ್ರಗಳು. ಅಲ್ಲಿಯ ಬ್ರಾಹ್ಮಣೋತ್ತಮರು ಅನೇಕ ಶಾಸ್ತ್ರಗಳನ್ನು ಬಲ್ಲವರೂ ಸರ್ವದಾ ಶಿವನಲ್ಲಿ ಭಕ್ತಿಯುಳ್ಳವರಾಗಿಯೂ ಇದ್ದರು.

೬೫-೬೬. ಅಲ್ಲಿ ಎಲ್ಲೆಲ್ಲಿಯೂ ವಾಪೀಕೂಪತಟಾಕಗಳೂ, ದೀರ್ಘಿಕೆಗಳೆಂಬ ಜಲವಿಹಾರಕ್ಕನುಗುಣವಾದ ಕೊಳಗಳೂ ಕಂಗೊಳಿಸುತ್ತಿದ್ದುವು. ಅಲ್ಲಿಯ ಉದ್ಯಾನಗಳು ಸ್ವರ್ಗದಲ್ಲಿಯೂ ದುರ್ಲಭವಾದಂಥ ಉತ್ತಮ ಗುಣಗಳಿಂದ ಒಪ್ಪುತ್ತಿರುವ ಲತಾವೃಕ್ಷಗಳಿಂದ ರಮ್ಯವಾಗಿದ್ದುವು. ಅಲ್ಲದೆ ಆ ಪಟ್ಟಣಗಳಲ್ಲಿ ನದೀನದಗಳೂ ಪುಷ್ಕರಿಣಿಗಳೂ ಶೋಭಿಸುತ್ತಿದ್ದುವು. ಅಲ್ಲಿಯ ವೃಕ್ಷಗಳು ಎಲ್ಲಾ ಇಷ್ಟಾರ್ಥಗಳನ್ನೂ ನೀಡುವ ಫಲಗಳಿಂದ ನಿಬಿಡವಾಗಿದ್ದುವು.

ಮತ್ತಮಾತಂಗಯೂಥೈಶ್ಚ ತುರಂಗೈಶ್ಚ ಸುಶೋಭನೈಃ ।
ರಥೈಶ್ಚ ವಿವಿಧಾಕಾರೈಶ್ಶಿಬಿಕಾಭಿರಲಂಕೃತಂ ॥ ೬೭ ॥

ಸಮುಯಾದೇಶಿಕೈಶ್ಚೈವ ಕ್ರೀಡಾಸ್ಥಾನೈಃ ಪೃಥಕ್ಪೃಥಕ್ ।
ವೇದಾಧ್ಯಯನಶಾಲಾಭಿರ್ವಿವಿಧಾಭಿಃ ಪೃಥಕ್ಪೃಥಕ್ ॥ ೬೮ ॥

ಅದೃಷ್ಟಂ ಮನಸಾ ವಾಚಾ ಪಾಪಾನ್ವಿತನರೈಸ್ಸದಾ ।
ಮಹಾತ್ಮಭಿಶ್ಶುಭಾಚಾರೈಃ ಪುಣ್ಯವದ್ಭಿಃ ಪ್ರವೀಕ್ಷ್ಯತೇ ॥ ೬೯ ॥

ಪತಿವ್ರತಾಭಿಸ್ಸರ್ವತ್ರ ಪಾವಿತಂ ಸ್ಥಲಮುತ್ತಮಂ ।
ಪತಿಸೇವನಶೀಲಾಭಿರ್ವಿಮುಖಾಭಿಃ ಕುಧರ್ಮತಃ ॥ ೭೦ ॥

ದೈತ್ಯಶೂರೈರ್ಮಹಾಭಾಗೈಸ್ಸದಾರೈಸ್ಸಸುತೈರ್ದ್ವಿಜೈಃ ।
ಶ್ರೌತಸ್ಮಾರ್ತಾರ್ಥತತ್ತ್ವಜ್ಞೈಸ್ಸ್ವಧರ್ಮನಿರತೈರ್ಯುತಂ ॥ ೭೧ ॥

ವ್ಯೂಢೋರಸ್ಕೈರ್ವೃಷಸ್ಕಂಧೈಸ್ಸಾಮಯುದ್ಧಧರೈಸ್ಸದಾ ।
ಪ್ರಶಾಂತೈಃ ಕುಪಿತೈಶ್ಚೈವ ಕುಬ್ಜೈರ್ವಾಮನಕೈಸ್ತಥಾ ॥ ೭೨ ॥

---

೬೭-೬೮. ಅಲ್ಲಿ ಮದಿಸಿದ ಆನೆಗಳೂ, ಒಳ್ಳೆಯ ಜಾತ್ಯಶ್ವಗಳೂ, ವಿಧವಿಧ ವಾದ ಆಕಾರವುಳ್ಳ ರಥಗಳೂ, ಪಲ್ಲಕ್ಕಿಗಳೂ ಕಂಗೊಳಿಸುತ್ತಿದ್ದುವು. ಅಲ್ಲಲ್ಲಿ ಭವಿಷ್ಯ ವನ್ನು ನುಡಿಯುವವರೂ ಪ್ರತ್ಯೇಕಪ್ರತ್ಯೇಕವಾದ ವಿಹಾರಸ್ಥಾನಗಳೂ ವೇದಾಧ್ಯಯನ ಶಾಲೆಗಳೂ ಇರುತ್ತಿದ್ದುವು.

೬೯-೭೦ ಆ ನಗರತ್ರಯವನ್ನು ಪಾಪಿಷ್ಠರಾದ ಮಾನವರು ಮನಸ್ಸಿನಿಂ ದಲೂ ಮಾತಿನಿಂದಲೂ ಕಂಡು ಅರಿಯರು. ಶುದ್ಧನಾದ ಆಚಾರವುಳ್ಳ ಪುಣ್ಯಾತ್ಮರಿಗೆ ಮಾತ್ರ ಅದು ಗೋಚರವಾಗುವುದು. ಅಲ್ಲಿ ಕೆಟ್ಟನಡತೆಗೆ ಹೇಸುವವರೂ ಪತಿಸೇವೆಯೇ ಪರಮಧರ್ಮವಾಗಿ ಉಳ್ಳವರೂ ಆದ ಸಾಧ್ವೀಮಣಿಯರು ಪಾವನಗೊಳಿಸುತ್ತಿದ್ದರು.

೭೧-೭೩. ಅಲ್ಲಿ ಸತೀಸುತಸಹಿತರೂ ಶ್ರುತಿಸ್ಮೃತಿಗಳ ಅರ್ಥವನ್ನು ಬಲ್ಲವರೂ ಸ್ವಧರ್ಮನಿರತರೂ ದ್ವಿಜಶ್ರೇಷ್ಠರೂ ಆದ ಅಗಲವಾದ ಎದೆಯುತ್ತು ಎತ್ತರವಾದ ಹೆಗಲು ಗಳಿಂದ ಶೋಭಿತರೂ ಸಾಮದಲ್ಲಿಯೂ ಯುದ್ಧದಲ್ಲಿಯೂ ವಿಶಾರದರೂ ಪ್ರಶಾಂತರೂ ಕುಪಿತರೂ ಕುಳ್ಳರೂ ಗಿಡ್ಡರೂ ಕನ್ನೈದಿಲೆಯಂತೆ ಕಾಂತಿಯುಳ್ಳವರೂ ಸುಶೀಲವೂ

ನೀಲೋತ್ಪಲದಲಪ್ರಖ್ಯೈರ್ನೀಲಕುಂಚಿತಮೂರ್ಧಜೈಃ ।
ಮಯೇನ ರಕ್ಷಿತೈಸ್ಸರ್ವೈಶ್ಶಿಕ್ಷಿತೈರ್ಯುದ್ಧಲಾಲಸೈಃ ॥ ೭೩ ॥

ವರಸಮರರತೈ(ಸ್ತಥಾ)ಸಮಂತಾ-
ದಜಶಿವಪೂಜನಯಾ ವಿಶುದ್ಧವೀರ್ಯೈಃ ।
ರವಿಮರುತಮಹೇಂದ್ರಸನ್ನಿಕಾಶೈಃ
ಸುರಮಥನೈಸ್ಸುದೃಢೈಸ್ಸುಸೇವಿತಂ ಯತ್ ॥ ೭೪ ॥

ಶಾಸ್ತ್ರವೇದಪುರಾಣೇಷು ಯೇ ಯೇ ಧರ್ಮಾಃ ಪ್ರಕೀರ್ತಿತಾಃ ।
ಶಿವಪ್ರಿಯಾಸ್ಸದಾ ದೈವಾಸ್ತೇ ಧರ್ಮಾಸ್ತತ್ರ ಸರ್ವತಃ ॥ ೭೫ ॥

ಏವಂ ಲಬ್ಧವರಾಸ್ತೇ ತು ದೈತೇಯಾಸ್ತಾರಕಾತ್ಮಜಾಃ ।
ಶೈವಂ ಮಯಮುಪಾಶ್ರಿತ್ಯ ನಿವಸಂತಿ ಸ್ಮ ತತ್ರ ಹ ॥ ೭೬ ॥

---

ಗುಂಗುರುಗುಂಗುರಾಗಿಯೂ ಇರುವ ಕುರುಳುಗಳಿಂದ ಶೋಭಿತರೂ ಆದ ಮಹಾಶೂರರಾದ ದೈತ್ಯರೂ ಕಂಗೊಳಿಸುತ್ತಿದ್ದರು. ಅವರೆಲ್ಲರೂ ಮಯನಿಂದ ಸಂರಕ್ಷಿಸಲ್ಪಟ್ಟವರು. ಪ್ರತಿಯೊಬ್ಬರೂ ಸುಶಿಕ್ಷಿತರು, ಯುದ್ಧೋತ್ಸಾಹಿಗಳು.

೭೪. ಅವರು ಬ್ರಹ್ಮನನ್ನೂ ಶಿವನನ್ನೂ ಪೂಜಿಸುತ್ತ ವಿಶುದ್ಧವಾದ ವೀರ್ಯವನ್ನುತಳೆದವರು. ಪ್ರತಿಯೊಬ್ಬರೂ ತಮ್ಮ ತೇಜಸ್ಸಿನಿಂದ ಸೂರ್ಯನನ್ನೂ, ಪರಾಕ್ರಮದಿಂದ ವಾಯುವನ್ನೂ, ವೈಭವದಿಂದ ದೇವೇಂದ್ರನನ್ನೂ ಹೋಲುತ್ತಿದ್ದರು. ಇಂಥ ಪ್ರಜೆಗಳಿಂದನಿಬಿಡವಾದ ಊರುಗಳನ್ನುಪಡೆದು ಆ ತಾರಕಪುತ್ರರು ಬಹು ಸುಖದಿಂದಿದ್ದರು.

೭೫. ಯಾವಯಾವ ಧರ್ಮಗಳು ಶಾಸ್ತ್ರದಲ್ಲಿಯೂ ವೇದದಲ್ಲಿಯೂ ಪುರಾಣಗಳಲ್ಲಿಯೂ ಶಿವನಿಗೆ ಪ್ರಿಯವಾದವುಗಳೆಂದೂ ದೇವತಾಪ್ರೀತಿಕರಗಳೆಂದೂ ಹೇಳಲ್ಪಟ್ಟಿರುವುವೋ ಆ ಧರ್ಮಗಳೆಲ್ಲವೂ ಅಲ್ಲಿ ಎಲ್ಲೆಡೆಯಲ್ಲೂ ಸರ್ವಕಾಲದಲ್ಲಿಯೂ ಇರುತ್ತಿದ್ದುವು.

೭೬. ಈರೀತಿ ತಾರಕಾತ್ಮಜರು ವರಗಳನ್ನು ಪಡೆದು ಶಿವಭಕ್ತನಾದ ಮಯನ ಆಶ್ರಯದಲ್ಲಿ ಆ ಪುರತ್ರಯದಲ್ಲಿ ವಾಸಮಾಡಿಕೊಂಡಿದ್ದರು.

ಸರ್ವಂ ತ್ರೈಲೋಕ್ಯಮುತ್ಸಾರ್ಯ ಪ್ರವಿಶ್ಯ ನಗರಾಣಿ ತೇ ।
ಕುರ್ವಂತಿ ಸ್ಮ ಮಹದ್ರಾಜ್ಯಂ ಶಿವಮಾರ್ಗರತಾಸ್ಸದಾ ॥ ೭೭ ॥

ತತೋ ಮಹಾನ್ ಗತಃ ಕಾಲೋ ವಸತಾಂ ಪುಣ್ಯಕರ್ಮಣಾಂ ।
ಯಥಾಸುಖಂ ಯಥಾಜೋಷಂ ಸದ್ರಾಜ್ಯಂ ಕುರ್ವತಾಂ ಮುನೇ ॥ ೭೮ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ತ್ರಿಪುರವಧೋಪಾಖ್ಯಾನೇ ತ್ರಿಪುರ
ವರ್ಣನಂ ನಾಮ ಪ್ರಥಮೋಽಧ್ಯಾಯಃ

---

೭೭. ಮೂರು ಲೋಕಗಳೆಲ್ಲವನ್ನೂ ಬಿಟ್ಟು ಈ ಮೂರು ನಗರಗಳನ್ನೂ ಸೇರಿ ಯಾವಾಗಲೂ ಶಿವನಿಗೆ ಪ್ರೀತಿಯನ್ನುಂಟುಮಾಡುವ ಧರ್ಮಮಾರ್ಗದಲ್ಲಿ ನಿರತರಾಗಿ ಮಹತ್ತಾಗಿ ರಾಜ್ಯಭಾರವನ್ನು ಮಾಡಿಕೊಂಡಿದ್ದರು.

೭೮. ಓ ವ್ಯಾಸ, ಈರೀತಿಯಾಗಿ ಆ ತಾರಕಪುತ್ರರು ಪುಣ್ಯಕರ್ಮನಿರತರಾಗಿ ಅಲ್ಲಿರುತ್ತಾ ತಮ್ಮಿಷ್ಟಬಂದಂತೆ ಸುಖಕರವಾಗಿಯೂ ವಿಹಿತವಾಗಿಯೂ ರಾಜ್ಯಭಾರವನ್ನು ಮಾಡುತ್ತಿರಲು ಬಹಳಕಾಲ ಕಳೆದುಹೋಯಿತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯಲ್ಲಿ
ಐದನೆಯದಾದ ಯುದ್ಧಖಂಡದ ತ್ರಿಪುರವಧೋಪಾಖ್ಯಾನದಲ್ಲಿ
ತ್ರಿಪುರವರ್ಣನವೆಂಬ ಮೊದಲನೆಯ ಅಧ್ಯಾಯವು
ಮುಗಿಧುದು.

॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ದ್ವಿತೀಯೋಽಧ್ಯಾಯಃ

॥ ವ್ಯಾಸ ಉವಾಚ ॥

ಬ್ರಹ್ಮಪುತ್ರ ಮಹಾಪ್ರಾಜ್ಞ ವದ ಮೇ ವದತಾಂ ವರ ।
ತತಃ ಕಿಮಭವದ್ದೇವಾಃ ಕಥಂ ಚ ಸುಖಿನೋಽಭವರ್ ॥ ೧ ॥

॥ ಬ್ರಹ್ಮೋವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ವ್ಯಾಸಸ್ಯಾಮಿತಧೀಮತಃ ।
ಸನತ್ಕುಮಾರಃ ಪ್ರೋವಾಚ ಸ್ಮೃತ್ವಾ ಶಿವಪದಾಂಬುಜಂ ॥ ೨ ॥

---

### ಎರಡನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯು ಬ್ರಹ್ಮಪುತ್ರನಾದ ಸನತ್ಕುಮಾರನನ್ನು ಕುರಿತು, ಓ ವಾಗ್ಮಿಶ್ರೇಷ್ಠ, ಮಹಾಪ್ರಾಜ್ಞ! ಬಳಿಕ ಏನಾಯಿತು? ದೇವತೆಗಳೆಲ್ಲರೂ ಹೇಗೆ ತಾನೇ ಸುಖದಿಂದಿದ್ದರು? ಅದನ್ನು ತಿಳಿಸು ಎಂದನು.

೨. ಬ್ರಹ್ಮನಿಂತೆಂದನು :—ಅಪರಿಮಿತ ಬುದ್ಧಿಶಾಲಿಯಾದ ವ್ಯಾಸಮಹರ್ಷಿಯ ಈ ಮಾತನ್ನು ಕೇಳಿ, ಸನತ್ಕುಮಾರನು ಶಿವನ ಅಡಿದಾವರೆಗಳನ್ನು ಮನಸ್ಸಿನಲ್ಲಿ ನೆನಸಿ, ಈ ಪರಿಯಾಗಿ ಹೇಳತೊಡಗಿದನು.

॥ ಸನತ್ಕುಮಾರ ಉವಾಚ ॥

ಅಥ ತತ್ಪ್ರಭಯಾ ದಗ್ಧಾ ದೇವಾ ಹೀಂದ್ರಾದಯಸ್ತಥಾ ।
ಸಂಮಂತ್ರ್ಯ ದುಃಖಿತಾಸ್ಸರ್ವೇ ಬ್ರಹ್ಮಾಣಂ ಶರಣಂ ಯಯುಃ ॥ ೩ ॥

ನತ್ವಾ ಪಿತಾಮಹಂ ಪ್ರೀತ್ಯಾ ಪರಿಕ್ಷಿತ್ವಾಖಿಲಾಸ್ಸುರಾಃ ।
ದುಃಖಂ ವಿಜ್ಞಾಪಯಾಮಾಸುರ್ವಿಲೋಕ್ಯಾವಸರಂ ತತಃ ॥ ೪ ॥

॥ ದೇವಾ ಊಚುಃ ॥

ಧಾತಸ್ತ್ರಿಪುರನಾಥೇನ ಸತಾರಕಸುತೇನ ಹಿ ।
ಸರ್ವೇ ಪ್ರತಾಪಿತಾ ನೂನಂ ಮಯೇನ ತ್ರಿದಿವೌಕಸಃ ॥ ೫ ॥

ಅತಸ್ತೇ ಶರಣಂ ಯಾತಾ ದುಃಖಿತಾ ಹಿ ವಿಧೇ ವಯಂ ।
ಕುರು ತ್ವಂ ತದ್ವಧೋಪಾಯಂ ಸುಖಿನಸ್ಸ್ಯಾಮ ತದ್ಯಥಾ ॥ ೬ ॥

---

೩. ಸನತ್ಕುಮಾರನು ಹೇಳಿದನು :—ಬಳಿಕ ಆ ತ್ರಿಪುರಾಸುರರ ತೇಜಸ್ಸಿನಿಂದ ಕಳೆಗುಂದಿಹೋದ ಇಂದ್ರಾದಿದೇವತೆಗಳು ವ್ಯಸನಾಕ್ರಾಂತರಾಗಿ ತಮ್ಮತಮ್ಮೊಳಗೆ ಪರಸ್ಪರ ಆಲೋಚಿಸಿಕೊಂಡು ಬ್ರಹ್ಮನನ್ನು ಮರೆಹೊಕ್ಕರು.

೪. ಬಳಿಕ ಅವರೆಲ್ಲರೂ, ಪ್ರೀತಿಯಿಂದ ಬ್ರಹ್ಮನಿಗೆ ನಮಸ್ಕಾರಮಾಡಿ, ಸಮಯವನ್ನು ನೋಡಿಕೊಂಡು, ಪರೀಕ್ಷೀಣರಾಗಿ ತಮ್ಮ ದುಃಖವನ್ನು ಬಿನ್ನವಿಸಿಕೊಂಡರು.

೫. ದೇವತೆಗಳು ಹೇಳಿದರು :—ಓ ವಿಧಾತ, ತಾರಕಾಕ್ಷನೇ ಮೊದಲಾದ ತಾರಕಾತ್ಮಜರಿಂದ ಒಡಗೂಡಿದ, ತ್ರಿಪುರಗಳಿಗೆ ಒಡೆಯನಾದ ಮಯನಿಂದ ನಾವೆಲ್ಲರೂ ಬಹು ಬಾಧೆಗೊಳಗಾಗಿರುವೆವು.

೬. ಆದುದರಿಂದ ಎಲೈ ವಿಧಿಯೇ ! ದುಃಖಿತರಾದ ನಾವು ನಿನ್ನನ್ನು ಮರೆಹೊಕ್ಕಿರುವೆವು. ನಾವೆಲ್ಲರೂ ಸುಖವಾಗಿ ಇರುವಂತೆಯೂ ಅವರು ನಾಶವಾಗುವಂತೆಯೂ ಉಪಾಯವನ್ನು ಹುಡುಕು ಎಂದು ಬಿನ್ನವಿಸಿದರು.

॥ ಸನತ್ಕುಮಾರ ಉವಾಚ ॥

ಇತಿ ವಿಜ್ಞಾಪಿತೋ ದೇವೈರ್ವಿಹಸ್ಯ ಭವಕೃದ್ವಿಧಿಃ ।
ಪ್ರತ್ಯುವಾಚಾಥ ತಾನ್ಸರ್ವಾನ್ ಮಯತೋ ಭೀತಮಾನಸಾನ್ ॥ ೭ ॥

॥ ಬ್ರಹ್ಮೋವಾಚ ॥

ನ ಭೇತವ್ಯಂ ಸುರಾಸ್ತೇಭ್ಯೋ ದಾನವೇಭ್ಯೋ ವಿಶೇಷತಃ ।
ಆಚಕ್ಷೇ ತದ್ವಧೋಪಾಯಂ ಶಿವಂ ಶರ್ವಃ ಕರಿಷ್ಯತಿ ॥ ೮ ॥

ಮತ್ತೋ ವಿವರ್ಧಿತೋ ದೈತ್ಯೋ ವಧಂ ಮತ್ತೋ ನ ಚಾರ್ಹತಿ ।
ತಥಾಪಿ ಪುಣ್ಯಂ ವರ್ಧೇತ ನಗರೇ ತ್ರಿಪುರೇ ಪುನಃ ॥ ೯ ॥

ಶಿವಂ ಚ ಪ್ರಾರ್ಥಯಧ್ವಂ ವೈ ಸರ್ವೇ ದೇವಾಸ್ಸವಾಸವಾಃ ।
ಸರ್ವಾಧೀಶಃ ಪ್ರಸನ್ನಶ್ಚೇತ್ಸ ವಃ ಕಾರ್ಯಂ ಕರಿಷ್ಯತಿ ॥ ೧೦ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಿಧೇರ್ವಾಣೀಂ ಸರ್ವೇ ದೇವಾಸ್ಸವಾಸವಾಃ ।
ದುಃಖಿತಾಸ್ತೇ ಯಯುಸ್ತತ್ರ ಯತ್ರಾಸ್ತೇ ವೃಷಭಧ್ವಜಃ ॥ ೧೧ ॥

---

೭. ಸನತ್ಕುಮಾರನು ಹೇಳಿದನು :—ಹೀಗೆ ದೇವತೆಗಳು ಬಿನ್ನವಿಸಿ ಕೊಂಡುದನ್ನು ಕೇಳಿ ಸೃಷ್ಟಿಕರ್ತನಾದ ಬ್ರಹ್ಮನು ನಕ್ಕು, ಮಯನ ದೆಸೆಯಿಂದ ಹೆದರಿ ಕೊಂಡಿರುವ ಅವರೆಲ್ಲರನ್ನೂ ಇಂತೆಂದನು.

೮-೧೦. ಬ್ರಹ್ಮನು ಹೇಳಿದನು :—ಎಲೈ ದೇವತೆಗಳಿರಾ ! ನೀವು ಆ ದಾನವರಿಗೋಸ್ಕರ ವಿಶೇಷವಾಗಿ ಹೆದರಬೇಕಾಗಿಲ್ಲ. ಅವರ ವಧವುಂಟಾಗುವ ಬಗೆಯನ್ನು ನಿಮಗೆ ಹೇಳುವೆನು. ಶಿವನು ನಿಮಗೆಲ್ಲರಿಗೂ ಒಳ್ಳೆಯದನ್ನುಂಟುಮಾಡುವನು. ನನ್ನಿಂದಲೇ ಬೆಳೆಸಲ್ಪಟ್ಟ ಈ ದೈತ್ಯರು ನನ್ನಿಂದಲೇ ನಾಶವನ್ನು ಹೊಂದುವುದು ಸರಿಯಲ್ಲ. ಅದೂ ಅಲ್ಲದೆ ಆ ತ್ರಿಪುರದಲ್ಲಿ ಪುಣ್ಯಕರ್ಮಗಳೇ ಹೆಚ್ಚುತ್ತಿವೆ. ನೀವೆಲ್ಲರೂ ಇಂದ್ರನೊಡಗೂಡಿ, ಶಿವನನ್ನು ಪ್ರಾರ್ಥಿಸಿರಿ. ಆ ಸರ್ವೇಶ್ವರನು ಪ್ರಸನ್ನನಾದರೆ ನಿಮ್ಮ ಕೆಲಸವನ್ನು ಮಾಡಿಕೊಡುವನು ಎಂದನು.

೧೧-೧೨. ಸನತ್ಕುಮಾರನಿಂತೆಂದನು-ಓ ವ್ಯಾಸ, ಹೀಗೆ ಬ್ರಹ್ಮನು ನುಡಿದ ಮಾತನ್ನುಕೇಳಿ ದೇವೇಂದ್ರನೇ ಮೊದಲಾದ ದೇವತೆಗಳೆಲ್ಲರೂ, ದುಃಖಿತರಾಗಿ ಶಿವನು

ಪ್ರಣಮ್ಯ ಭಕ್ತ್ಯಾ ದೇವೇಶಂ ಸರ್ವೇ ಪ್ರಾಂಜಲಯಸ್ತದಾ ।
ತುಷ್ಟುವುರ್ವಿನತಸ್ಕಂಧಾಶ್ಶಂಕರಂ ಲೋಕಶಂಕರಂ ॥ ೧೨ ॥

॥ ದೇವಾ ಊಚುಃ ॥

ನಮೋ ಹಿರಣ್ಯಗರ್ಭಾಯ ಸರ್ವಸೃಷ್ಟಿವಿಧಾಯಿನೇ ।
ನಮಸ್ಸ್ಥಿತಿಕೃತೇ ತುಭ್ಯಂ ವಿಷ್ಣವೇ ಪ್ರಭವಿಷ್ಣವೇ ॥ ೧೩ ॥

ನಮೋ ಹರಸ್ವರೂಪಾಯ ಭೂತಸಂಹಾರಕಾರಿಣೇ ।
ನಿರ್ಗುಣಾಯ ನಮಸ್ತುಭ್ಯಂ ಶಿವಾಯಾಮಿತತೇಜಸೇ ॥ ೧೪ ॥

ಅವಸ್ಥಾರಹಿತಾಯಾಥ ನಿರ್ವಿಕಾರಾಯ ವರ್ಚಸೇ ।
ಮಹಾಭೂತಾತ್ಮಭೂತಾಯ ನಿರ್ಲಿಪ್ತಾಯ ಮಹಾತ್ಮನೇ ॥ ೧೫ ॥

ನಮಸ್ತೇ ಭೂತಪತಯೇ ಮಹಾಭಾರಸಹಿಷ್ಣವೇ ।
ತೃಷ್ಣಾಹರಾಯ ನಿರ್ವೈರಾಕೃತಯೋ ಭೂರಿತೇಜಸೇ ॥ ೧೬ ॥

---

ಇರುವ ಬಳಿಗೆ ತೆರಳಿದರು. ಅಲ್ಲಿ ಎಲ್ಲ ದೇವತೆಗಳಿಗೂ ಒಡೆಯನೂ, ಪ್ರಪಂಚ ಕ್ಕೆಲ್ಲಾ ಕಲ್ಯಾಣವನ್ನುಂಟುಮಾಡುವವನೂ ಆದ ಶಂಕರನನ್ನು ಭಕ್ತಿಯಿಂದ ನಮ ಸ್ಕರಿಸಿ, ಕೈಗಳನ್ನು ಮುಗಿದುಕೊಂಡು, ವಿನಮ್ರರಾಗಿ ಸ್ತುತಿಸತೊಡಗಿದರು.

೧೩-೧೪. ದೇವತೆಗಳು ಹೀಗೆ ಸ್ತೋತ್ರಮಾಡಿದರು :—ಪ್ರಕೃತಿಯ ವಿಕಾರ ಗಳಾದ ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಗುಣಗಳ ವಶನಾಗಿ, ಪ್ರಪಂಚದ ಸೃಷ್ಟಿ ಸಮಯದಲ್ಲಿ ಹಿರಣ್ಯಗರ್ಭನಾಗಿಯೂ, ಸ್ಥಿತಿ ಸಮಯದಲ್ಲಿ ಸರ್ವಶಕ್ತನಾದ ವಿಷ್ಣು ವಾಗಿಯೂ, ಲಯ ಸಮಯದಲ್ಲಿ ಸರ್ವಸಂಹಾರಕರ್ತೃವಾದ ಹರನಾಗಿಯೂ, ಇರುವ ನಿನಗೆ ನಮಸ್ಕಾರ. ನಿರ್ಗುಣಾವಸ್ಥೆಯಲ್ಲಿ ಶಿವನಾಗಿರುವ ಅಪರಿಮಿತ ತೇಜಶ್ಶಾಲಿ ಯಾದ ನಿನಗೆ ವಂದನೆಗಳು.

೧೫-೧೬. ಯಾವುದೊಂದು ಅವಸ್ಥೆಗೂ, ವಿಕಾರಕ್ಕೂ, ಸಿಲುಕದೆ ನಿರ್ಲೇಪನೂ, ಮಹಾಭೂತಸ್ವರೂಪನೂ ಆದ ಶುದ್ಧಪ್ರಕಾಶಸ್ವರೂಪನಾದ ನಿನಗೆ ಪ್ರಣಾಮಗಳು. ಮಹಾಭಾರವನ್ನು ಸಹಿಸುವವನೂ, ಚಾಪಲ್ಯವನ್ನು ನೀಗಿಸುವವನೂ, ಸೌಮ್ಯಾ ಕಾರನೂ, ಅಪಾರತೇಜಶ್ಶಾಲಿಯೂ, ಸರ್ವಭೂತಾಧಿಪತಿಯೂ ಆದ ನಿನಗೆ ನಮ ಸ್ಕಾರಗಳು.

ಮಹಾದೈತ್ಯಮಹಾರಣ್ಯನಾಶಿನೇ ದಾವವಹ್ನಯೇ ।
ದೈತ್ಯದ್ರುಮಕುಠಾರಾಯ ನಮಸ್ತೇ ಶೂಲಪಾಣಯೇ ॥ ೧೭ ॥

ಮಹಾದನುಜನಾಶಾಯ ನಮಸ್ತೇ ಪರಮೇಶ್ವರ ।
ಅಂಬಿಕಾಪತಯೇ ತುಭ್ಯಂ ನಮಸ್ಸರ್ವಾಸ್ತ್ರಧಾರಕ ॥ ೧೮ ॥

ನಮಸ್ತೇ ಪಾರ್ವತೀನಾಥ ಪರಮಾತ್ಮನ್ಮಹೇಶ್ವರ ।
ನೀಲಕಂಠಾಯ ರುದ್ರಾಯ ನಮಸ್ತೇ ರುದ್ರರೂಪಿಣೇ ॥ ೧೯ ॥

ನಮೋ ವೇದಾಂತವೇದ್ಯಾಯ ಮಾರ್ಗಾತೀತಾಯ ತೇ ನಮಃ ।
ನಮೋ ಗುಣಸ್ವರೂಪಾಯ ಗುಣಿನೇ ಗುಣವರ್ಜಿತ ॥ ೨೦ ॥

ಮಹಾದೇವ ನಮಸ್ತುಭ್ಯಂ ತ್ರಿಲೋಕೀನಂದನಾಯ ಚ ।
ಪ್ರದ್ಯುಮ್ನಾಯಾನಿರುದ್ಧಾಯ ವಾಸುದೇವಾಯ ತೇ ನಮಃ ॥ ೨೧ ॥

ಸಂಕರ್ಷಣಾಯ ದೇವಾಯ ನಮಸ್ತೇ ಕಂಸನಾಶಿನೇ ।
ಚಾಣೂರಮರ್ದಿನೇ ತುಭ್ಯಂ ದಾಮೋದರ ವಿಷಾದಿನೇ ॥ ೨೨ ॥

---

೧೭-೧೮. ಪ್ರಬಲರಾದ ದೈತ್ಯರೆಂಬ ದೊಡ್ಡ ಅಡವಿಗೆ ಕಾಳ್ಗಿಚ್ಚಾದ ನಿನಗೆ ವಂದನೆಗಳು. ದೈತ್ಯರೆಂಬ ಮರಗಳಿಗೆ ಕುಠಾರನೆನಿಸಿದ ನಿನ್ನನ್ನು ನಮಿಸುವೆವು. ಓ ಶೂಲಪಾಣೀ, ಓ ಪರಮೇಶ್ವರಾ, ಓ ಅಂಬಿಕಾನಾಥಾ ! ನೀನು ಮಹಾದನುಜನಾಶಕನೂ, ಸರ್ವಾಸ್ತ್ರಧಾರಿಯೂ ಆಗಿರುವೆ. ಇಂತಹ ನಿನಗೆ ಪ್ರಣಾಮಗಳು,

೧೯-೨೧. ಪಾರ್ವತೀಪತಿಯೂ, ಪರಮಾತ್ಮನೂ, ಮಹೇಶ್ವರನೂ, ನೀಲಕಂಠನೂ, ಭಯಂಕರಾಕಾರನೂ, ರುದ್ರನೂ ಆದ ನಿನ್ನನ್ನು ನಮಿಸುವೆವು. ವೇದಾಂತವೇದ್ಯನೂ, ಮಾರ್ಗಾತೀತನೂ, ಸತ್ತ್ವಾದಿಗುಣಸ್ವರೂಪನೂ, ಗುಣಶಾಲಿಯೂ, ಗುಣರಹಿತನೂ, ಆದ ನಿನ್ನನ್ನು ಅಭಿವಂದಿಸುವೆವು. ಓ ಮಹಾದೇವ ! ಮೂರು ಲೋಕಗಳಿಗೂ, ಆನಂದದಾಯಕನೂ, ಪ್ರದ್ಯುಮ್ನನೂ, ಅನಿರುದ್ಧನೂ ವಾಸುದೇವನೂ ಎಂದೆನಿಸಿದ ನಿನಗೆ ನಮಸ್ಕಾರಗಳು.

೨೨-೨೩. ಓ ದಾಮೋದರ, ಸಂಕರ್ಷಣನೂ, ಕಂಸಸಂಹಾರಿಯೂ, ಚಾಣೂರನಿಷೂದನನೂ, ವಿಷಭಕ್ಷಕನೂ ಆದ ನಿನಗೆ ಕೈಮುಗಿಯುವೆವು. ಓ

ಹೃಷೀಕೇಶಾಚ್ಯುತ ವಿಭೋ ಮೃಡ ಶಂಕರ ತೇ ನಮಃ ।
ಅಧೋಕ್ಷಜ ಗಜಾರಾತೇ ಕಾಮಾರೇ ವಿಷಭಕ್ಷಣ ॥ ೨೩ ॥

ನಾರಾಯಣಾಯ ದೇವಾಯ ನಾರಾಯಣಪರಾಯ ಚ ।
ನಾರಾಯಣಸ್ವರೂಪಾಯ ನಾರಾಯಣತನೂದ್ಭವ ॥ ೨೪ ॥

ನಮಸ್ತೇ ಸರ್ವರೂಪಾಯ ಮಹಾನರಕಹಾರಿಣೇ ।
ಪಾಪಾಪಹಾರಿಣೇ ತುಭ್ಯಂ ನಮೋ ವೃಷಭವಾಹನ ॥ ೨೫ ॥

ಕ್ಷಣಾದಿಕಾಲರೂಪಾಯ ಸ್ವಭಕ್ತಬಲದಾಯಿನೇ ।
ನಾನಾರೂಪಾಯ ರೂಪಾಯ ದೈತ್ಯಚಕ್ರವಿಮರ್ದಿನೇ ॥ ೨೬ ॥

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।
ಸಹಸ್ರಮೂರ್ತಯೇ ತುಭ್ಯಂ ಸಹಸ್ರಾವಯವಾಯ ಚ ॥ ೨೭ ॥

ಧರ್ಮರೂಪಾಯ ಸತ್ತ್ವಾಯ ನಮಸ್ಸತ್ತ್ವಾತ್ಮನೇ ಹರ ।
ವೇದವೇದ್ಯಸ್ವರೂಪಾಯ ನಮೋ ವೇದಪ್ರಿಯಾಯ ಚ ॥ ೨೮ ॥

---

ಹೃಷೀಕೇಶ, ಅಚ್ಯುತ, ವಿಭೂ, ಮೃಡ, ಶಂಕರ, ಓ ಅಧೋಕ್ಷಜ, ಗದವೈರಿ, ಮದನಾಂತಕ, ವಿಷಹರ, ನಿನಗೆ ತಲೆಬಾಗುವೆವು.

೨೪-೨೬. ಓ ದೇವ, ನಾರಾಯಣನೂ, ನಾರಾಯಣಪಕ್ಷಪಾತಿಯೂ, ನಾರಾಯಣಸ್ವರೂಪನೂ, ನಾರಾಯಣ ಶರೀರಸಂಜಾತನೂ ಆದ ನಿನಗೆ ವಂದಿಸು ವೆವು. ಓ ವೃಷಭವಾಹನ, ಸರ್ವಸ್ವರೂಪನೂ, ಮಹಾನರಕನಿವಾರಕನೂ, ಪಾಪ ನಾಶಕನೂ ಆದ ನಿನಗೆ ಪ್ರಣಾಮಗಳು. ಕ್ಷಣ, ಮುಹೂರ್ತ, ತ್ರುಟಿ, ಮೊದಲಾದ ಕಾಲಾತ್ಮಕನೂ, ತನ್ನನ್ನು ನಂಬಿದ ಭಕ್ತರಿಗೆ ಬಲವನ್ನು ನೀಡುವವನೂ, ವಿವಿಧ ರೂಪವುಳ್ಳವನೂ, ದೈತ್ಯರ ಗುಂಪನ್ನು ನುಚ್ಚುನೂರು ಮಾಡುವವನೂ ಆದ ನಿನ್ನನ್ನು ವಂದಿಸುವೆವು.

೨೭-೨೮. ಓ ಬ್ರಹ್ಮಣ್ಯದೇವ, ಗೋಬ್ರಾಹ್ಮಣಪ್ರಿಯನೂ, ಸಹಸ್ರ ದೇಹ ಗಳೂ, ಸಹಸ್ರ ಅವಯವಗಳೂ ಉಳ್ಳವನೂ ಆದ ನಿನ್ನನ್ನು ನಮಿಸುವೆವು. ಧರ್ಮ ರೂಪನೂ, ಸತ್ತ್ವಗುಣಸ್ವರೂಪನೂ, ಸತ್ತ್ವಗುಣಶಾಲಿಯೂ ಆದ ಹರನೇ, ನಿನಗೆ

ನಮೋ ವೇದಸ್ವರೂಪಾಯ ವೇದವಕ್ತ್ರೇ ನಮೋನಮಃ ।
ಸದಾಚಾರಾಧ್ವಗಮ್ಯಾಯ ಸದಾಚಾರಾಧ್ವಗಾಮಿನೇ ॥ ೨೯ ॥

ವಿಷ್ಟರಶ್ರವಸೇ ತುಭ್ಯಂ ನಮಸ್ಸತ್ಯಮಯಾಯ ಚ ।
ಸತ್ಯಪ್ರಿಯಾಯ ಸತ್ಯಾಯ ಸತ್ಯಗಮ್ಯಾಯ ತೇ ನಮಃ ॥ ೩೦ ॥

ನಮಸ್ತೇ ಮಾಯಿನೇ ತುಭ್ಯಂ ಮಾಯಾಧೀಶಾಯ ವೈ ನಮಃ ।
ಬ್ರಹ್ಮಗಾಯ ನಮಸ್ತುಭ್ಯಂ ಬ್ರಹ್ಮಣೇ ಬ್ರಹ್ಮಜಾಯ ಚ ॥ ೩೧ ॥

ತಪಸೇ ತೇ ನಮಸ್ತ್ವೀಶ ತಪಸಾಂ ಫಲದಾಯಿನೇ ।
ಸ್ತುತ್ಯಾಯ ಸ್ತುತಯೇ ನಿತ್ಯಂ ಸ್ತುತಿಸಂಪ್ರೀತಚೇತಸೇ ॥ ೩೨ ॥

ಶ್ರುತ್ಯಾಚಾರಪ್ರಸನ್ನಾಯ ಸ್ತುತ್ಯಾಚಾರಪ್ರಿಯಾಯ ಚ ।
ಚತುರ್ವಿಧಸ್ವರೂಪಾಯ ಜಲಸ್ಥಲಜರೂಪಿಣೇ ॥ ೩೩ ॥

---

ನಮಸ್ಕಾರ. ವೇದಗಳಿಗೆ ಮಾತ್ರ ಗೋಚರವಾಗುವ ಸ್ವರೂಪವುಳ್ಳವನೂ, ವೇದಪ್ರಿಯನೂ ವೇದಾತ್ಮಕನೂ, ವೇದಪಾರಾಯಣನಿರತನೂ ಆದ ನಿನಗೆ ಅನಂತ ನಮಸ್ಕಾರಗಳು.

೨೯-೩೦. ಕೇವಲ ಸದಾಚಾರಗಳಿಂದ ಹೊಂದಲ್ಪಡತಕ್ಕವನೂ, ಸದಾಚಾರನಿರತನೂ, ಆದ ನಿನಗೆ ಪ್ರಣಾಮಗಳು. ವಿಶ್ವವನ್ನೇ ವ್ಯಾಪಿಸಿರುವ ವಿಶಾಲಕೀರ್ತಿಯುಳ್ಳವನೂ, ಸತ್ಯಶಾಲಿಯೂ, ಸತ್ಯಪ್ರಿಯನೂ, ಸತ್ಯಗಮ್ಯನೂ, ಆದ ನಿನಗೆ ವಂದನೆಗಳು.

೩೧-೩೨. ಮಾಯಾಶೀಲನೂ, ಮಾಯಾಧೀಶ್ವರನೂ ಆದ ನಿನಗೆ ನಮಸ್ಕಾರಗಳು. ಬ್ರಹ್ಮ (ವೇದ) ಗಾನನಿರತನೂ, ಬ್ರಹ್ಮನೂ, ಬ್ರಹ್ಮಪುತ್ರನೂ, ಆದ ನಿನಗೆ ನಮಸ್ಕಾರಗಳು. ಹೇ ಈಶ! ತಪಸ್ಸೂ, ತಪಸ್ಸಿಗೆ ಫಲವೀಯುವವನೂ ಸ್ತುತಿಗೆ ಆಶ್ರಯನೂ, ಸ್ತುತಿಯೂ, ಸ್ತುತಿಯಿಂದ ಸಂತೋಷಗೊಂಡವನೂ ಆದ ನಿನ್ನನ್ನು ನಮಿಸುವೆವು.

೩೩-೩೬. ಶ್ರುತಿಸಮ್ಮತವಾದ ಆಚರಣೆಗಳಿಗೆ ಪ್ರಸನ್ನನೂ, ಸ್ತುತಿಗೆ ಪ್ರಿಯನೂ, ಚತುರ್ವಿಧಸ್ವರೂಪನೂ, ಜಲಜ, ಸ್ಥಲಜ ಸ್ವರೂಪನೂ ಆದ ನಿನ್ನನ್ನು ವಂದಿಸುವೆವು. ಓ ಪ್ರಭೂ, ಈ ಜಗತ್ತಿನಲ್ಲಿ ದೇವತೆಗಳಿಂದ ಹಿಡಿದು ಪ್ರತಿ ವಸ್ತುವಿ

ಸರ್ವೇ ದೇವಾದಯೋ ನಾಥ ಶ್ರೇಷ್ಠತ್ವೇನ ವಿಭೂತಯಃ ।
ದೇವಾನಾಮಿಂದ್ರರೂಪೋऽಸಿ ಗ್ರಹಾಣಾಂ ತ್ವಂ ರವಿರ್ಮತಃ ॥ ೩೪ ॥

ಸತ್ಯಲೋಕೋऽಸಿ ಲೋಕಾನಾಂ ಸರಿತಾಂ ದ್ಯುಸರಿದ್ಭವಾನ್ ।
ಶ್ವೇತವರ್ಣೋऽಸಿ ವರ್ಣಾನಾಂ ಸರಸಾಂ ಮಾನಸಂ ಸರಃ ॥ ೩೫ ॥

ಶೈಲಾನಾಂ ಗಿರಿಜಾತಾತಃ ಕಾಮಧುಕ್ತ್ವಂ ಚ ಗೋಷು ಹ ।
ಕ್ಷೀರೋದಧಿಸ್ತು ಸಿಂಧೂನಾಂ ಧಾತೂನಾಂ ಹಾಟಕೋ ಭವಾನ್ ॥ ೩೬ ॥

ವರ್ಣಾನಾಂ ಬ್ರಾಹ್ಮಣೋऽಸಿ ತ್ವಂ ನೃಣಾಂ ರಾಜಾಸಿ ಶಂಕರ ।
ಮುಕ್ತಿಕ್ಷೇತ್ರೇಷು ಕಾಶೀ ತ್ವಂ ತೀರ್ಥಾನಾಂ ತೀರ್ಥರಾಡ್ಭವಾನ್ ॥ ೩೭ ॥

ಉಪಲೇಷು ಸಮಸ್ತೇಷು ಸ್ಫಟಿಕಸ್ತ್ವಂ ಮಹೇಶ್ವರ ।
ಕಮಲಸ್ತ್ವಂ ಪ್ರಸೂನೇಷು ಶೈಲೇಷು ಹಿಮವಾಂಸ್ತಥಾ ॥ ೩೮ ॥

ಭವಾನ್ ವಾಗ್ವ್ಯವಹಾರೇಷು ಭಾರ್ಗವಸ್ತ್ವಂ ಕವಿಷ್ವಪಿ ।
ಪಕ್ಷಿಷ್ವೇವಾಸಿ ಶರಭಸ್ಸಿಂಹೋ ಹಿಂಸ್ರೇಷು ಸಂಮತಃ ॥ ೩೯ ॥

---

ನಲ್ಲಿಯೂ ಆವಾವುದು ಉತ್ತಮವೆಂದಿರುವುದೋ ಅದೆಲ್ಲವೂ, ನಿನ್ನಂಶವೆಂದೇ (ವಿಭೂತಿ) ನಮ್ಮ ಭಾವನೆ. ನೀನು ದೇವತೆಗಳಲ್ಲಿ ಇಂದ್ರನೂ, ಗ್ರಹಗಳಲ್ಲಿ ಸೂರ್ಯನೂ ಆಗಿರುವೆ. ಲೋಕಗಳಲ್ಲೆಲ್ಲಾ ಸತ್ಯಲೋಕವೂ, ನದಿಗಳಲ್ಲಿ ಗಂಗೆಯೂ, ಬಣ್ಣಗಳಲ್ಲಿ ಬಿಳುವೂ, ಸರಸ್ಸುಗಳಲ್ಲಿ ಮಾನಸಸರೋವರವೂ ನೀನೇ ಆಗಿರುವೆ. ನೀನು ಬೆಟ್ಟಗಳಲ್ಲಿ ಹಿಮವಂತನು. ಧೇನುಗಳಲ್ಲಿ ಕಾಮಧೇನು. ಸಮುದ್ರಗಳಲ್ಲಿ ಕ್ಷೀರಸಾಗರ, ಧಾತುಗಳಲ್ಲಿ ಚಿನ್ನವೂ ಆಗಿರುವೆ.

೩೭-೩೯. ಓ ಶಂಕರ! ವರ್ಣಗಳಲ್ಲಿ ಬ್ರಾಹ್ಮಣನೂ, ನರರಲ್ಲಿ ನರಪತಿಯೂ, ಮುಕ್ತಿದಾಯಕವೆನಿಸಿದ ಕ್ಷೇತ್ರಗಳಲ್ಲಿ ಕಾಶಿಯೂ, ತೀರ್ಥಗಳಲ್ಲಿ ತೀರ್ಥರಾಜನಾದ ಪ್ರಯಾಗವೂ, ನೀನೆ. ಓ ಮಹೇಶ, ಎಲ್ಲ ವಿಧವಾದ ಕಲ್ಲುಗಳಲ್ಲಿ ಸ್ಫಟಿಕವೂ, ಹೂಗಳಲ್ಲಿ ಕಮಲವೂ, ಪರ್ವತಗಳಲ್ಲಿ ಹಿಮಾಲಯವೂ ನೀನೇ. ನಮ್ಮ ಅಭಿಪ್ರಾಯಗಳನ್ನು ಮತ್ತೊಬ್ಬರಿಗೆ ತಿಳಿಸುವ ವಿವಿಧ ರೀತಿಗಳಲ್ಲಿ ಮಾತೂ, ಕವಿಗಳಲ್ಲಿ ಶುಕ್ರನೂ, ಪಕ್ಷಿಗಳಲ್ಲಿ ಶರಭವೂ, ಹಿಂಸ್ರ ಮೃಗಗಳಲ್ಲಿ ಸಿಂಹವೂ, ನೀನಾಗಿರುವೆ.

ಶಾಲಗ್ರಾಮಶಿಲಾ ಚ ತ್ವಂ ಶಿಲಾಸು ವೃಷಭಧ್ವಜ ।
ಪೂಜ್ಯರೂಪೇಷು ಸರ್ವೇಷು ನರ್ಮದಾಲಿಂಗಮೇವ ಹಿ ॥ ೪೦ ॥

ನಂದೀಶ್ವರೋಽಸಿ ಪಶುಷು ವೃಷಭಃ ಪರಮೇಶ್ವರಃ ।
ವೇದೇಷೂಪನಿಷದ್ರೂಪೋ ಯಜ್ವನಾಂ ಶೀತಭಾನುಮಾರ್ ॥ ೪೧ ॥

ಪ್ರತಾಪಿನಾಂ ಪಾವಕಸ್ತ್ವಂ ಶೈವಾನಾಮಚ್ಯುತೋ ಭವಾರ್ ।
ಭಾರತಂ ತ್ವಂ ಪುರಾಣಾನಾಂ ಮಕಾರೋಽಸ್ಯಕ್ಷರೇಷು ಚ ॥ ೪೨ ॥

ಪ್ರಣವೋ ಬೀಜಮಂತ್ರಾಣಾಂ ದಾರುಣಾನಾಂ ವಿಷಂ ಭವಾರ್ ।
ವ್ಯೋಮ ವ್ಯಾಪ್ತಿಮತಾಂ ತ್ವಂ ವೈ ಪರಮಾತ್ಮಾಸಿ ಚಾತ್ಮನಾಂ ॥ ೪೩ ॥

ಇಂದ್ರಿಯಾಣಾಂ ಮನಶ್ಚ ತ್ವಂ ದಾನಾನಾಮಭಯಂ ಭವಾರ್ ।
ಪಾವನಾನಾಂ ಜಲಂ ಚಾಸಿ ಜೀವನಾನಾಂ ತಥಾ ಮೃತಂ ॥ ೪೪ ॥

ಲಾಭಾನಾಂ ಪುತ್ರಲಾಭೋಽಸಿ ವಾಯುರ್ವೇಗವತಾಮಪಿ ।
ನಿತ್ಯಕರ್ಮಸು ಸರ್ವೇಷು ಸಂಧ್ಯೋಪಾಸ್ತಿರ್ಭವಾನ್ಮತಾ ॥ ೪೫ ॥

---

೪೦-೪೧. ಓ ವೃಷಭಧ್ವಜ! ಶಿಲೆಗಳಲ್ಲಿ ಶಾಲಿಗ್ರಾಮಶಿಲೆಯೂ, ಪೂಜೆಗೆ ಅರ್ಹವಾದ ಆಕೃತಿಗಳಲ್ಲಿ ನರ್ಮದಾ ಬಾಣಲಿಂಗವೂ ನೀನಾಗಿರುವೆ. ನೀನು ಪಶುಗಳಲ್ಲಿ ನಂದೀಶ್ವರನು. ವೇದಗಳಲ್ಲಿ ಉಪನಿಷತ್ತು. ಯಜ್ಞಕರ್ತೃಗಳಲ್ಲಿ ಸೋಮನು. (ಚಂದ್ರ) ಪ್ರತಾಪಶಾಲಿಗಳಲ್ಲಿ ನೀನು ವಹ್ನಿಯೆನಿಸಿರುವೆ. ಶೈವಮಾರ್ಗಾನುಯಾಯಿಗಳಲ್ಲಿ ಶ್ರೀ ಹರಿಯಾಗಿರುವೆ.

೪೨-೪೪. ಪುರಾಣಗಳಲ್ಲಿ ಭಾರತವಾಗಿರುವೆ. ಅಕ್ಷರಗಳಲ್ಲಿ ಮಕಾರವಾಗಿರುವೆ. ನೀನು ಬೀಜಾಕ್ಷರಗಳಲ್ಲಿ ಪ್ರಣವವೂ, ಕ್ರೂರ ವಸ್ತುಗಳಲ್ಲಿ ವಿಷವೂ, ಸರ್ವ ವ್ಯಾಪಿಗಳಲ್ಲಿ ಆಕಾಶವೂ, ಆತ್ಮರಲ್ಲಿ ಪರಮಾತ್ಮನೂ ಆಗಿರುವೆ. ಇಂದ್ರಿಯಗಳಲ್ಲಿ ಮನಸ್ಸು, ದಾನಗಳಲ್ಲಿ ಅಭಯದಾನ, ಶುಚಿಗೊಳಿಸುವ ವಸ್ತುಗಳಲ್ಲಿ ನೀರು, ಜೀವನದಾಯಕವಾದ ವಸ್ತುಗಳಲ್ಲಿ ಅಮೃತ ಇವು ನೀನೇ ಅಲ್ಲದೆ ಬೇರೆಯಲ್ಲ.

೪೫-೪೮. ಲಾಭಗಳಲ್ಲಿ ಪುತ್ರಲಾಭವೂ, ವೇಗಶಾಲಿಗಳಲ್ಲಿ ವಾಯುವೂ, ನಿತ್ಯಕರ್ಮಗಳಲ್ಲಿ ಸಂಧ್ಯಾವಂದನೆಯೂ ನೀನೆಂದೇ ತಿಳಿದಿರುವೆವು. ಯಜ್ಞಗಳಲ್ಲಿ ಅಶ್ವಮೇಧವು ನೀನು. ಯುಗಗಳಲ್ಲಿ ಕೃತಯುಗವು ನೀನು. ಸರ್ವತೋಭದ್ರ ಮೊದ

ಕ್ರೆತೂನಾಮಶ್ವಮೇಧೋಽಸಿ ಯುಗಾನಾಂ ಪ್ರಥಮೋ ಯುಗಃ ।
ಪುಷ್ಪಸ್ತ್ವಂ ಸರ್ವಧಿಷ್ಣ್ಯಾನಾಮಮಾವಾಸ್ಯಾ ತಿಥಿಷ್ವಸಿ ॥ ೪೬ ॥

ಸರ್ವರ್ತುಷು ವಸಂತಸ್ತ್ವಂ ಸರ್ವಸರ್ವಸುಸಂಕ್ರಮಃ ।
ಕುಶೋಽಸಿ ತೃಣಜಾತೀನಾಂ ಸ್ಥೂಲವೃಕ್ಷೇಷು ವೈ ವಟಃ ॥ ೪೭ ॥

ಯೋಗೇಷು ಚ ವ್ಯತೀಪಾತಃ ಸೋಮವಲ್ಲೀ ಲತಾಸು ಚ ।
ಬುದ್ಧೀನಾಂ ಧರ್ಮಬುದ್ಧಿಸ್ತ್ವಂ ಕಲತ್ರಂ ಸುಹೃದಾಂ ಭವಾನ್ ॥ ೪೮ ॥

ಸಾಧಕಾನಾಂ ಶುಚೀನಾಂ ತ್ವಂ ಪ್ರಾಣಾಯಾಮೋ ಮಹೇಶ್ವರಃ ।
ಜ್ಯೋತಿರ್ಲಿಂಗೇಷು ಸರ್ವೇಷು ಭವಾನ್ವಿಶ್ವೇಶ್ವರೋ ಮತಃ ॥ ೪೯ ॥

ಧರ್ಮಸ್ತ್ವಂ ಸರ್ವಬಂಧೂನಾಮಾಶ್ರಮಾಣಾಂ ಪರೋ ಭವಾನ್ ।
ಮೋಕ್ಷಸ್ತ್ವಂ ಸರ್ವವರ್ಗೇಷು ರುದ್ರಾಣಾಂ ನೀಲಲೋಹಿತಃ ॥ ೫೦ ॥

ಆದಿತ್ಯಾನಾಂ ವಾಸುದೇವೋ ಹನೂಮಾನ್ ವಾನರೇಷು ಚ ।
ಯಜ್ಞಾನಾಂ ಜಪಯಜ್ಞೋಽಸಿ ರಾಮಶ್ಶಸ್ತ್ರಭೃತಾಂ ಭವಾನ್ ॥ ೫೧ ॥

---

ಲಾದ ಗೃಹಗಳಲ್ಲಿ ಪುಷ್ಪವೆಂಬುದು ನೀನು. ತಿಥಿಗಳಲ್ಲಿ ಅಮಾವಾಸ್ಯೆಯು ನೀನು. ನೀನು ಸರ್ವ ಋತುಗಳಲ್ಲಿ ವಸಂತನೂ, ತೃಣಜಾತಿಯಲ್ಲಿ ದರ್ಭೆಯೂ, ದೊಡ್ಡಮರಗಳಲ್ಲಿ ಆಲದಮರವೂ, ಯೋಗಗಳಲ್ಲಿ ವ್ಯತೀಪಾತವೂ, ಲತೆಗಳಲ್ಲಿ ಸೋಮಲತೆಯೂ, ಬುದ್ಧಿಗಳಲ್ಲಿ ಧರ್ಮಬುದ್ಧಿಯೂ, ಸ್ನೇಹಿತರಲ್ಲಿ ಹೆಂಡತಿಯೂ ಆಗಿರುವೆ.

೪೯-೫೧. ಪರಮಾತ್ಮನ ಸಾಕ್ಷಾತ್ಕಾರಕ್ಕೆ ಅನುಗುಣವಾದ ಉತ್ತಮಸಾಧನಗಳಲ್ಲಿ ಪ್ರಾಣಾಯಾಮವೂ, ದ್ವಾದಶಜ್ಯೋತಿರ್ಲಿಂಗಗಳಲ್ಲಿ ವಿಶ್ವೇಶ್ವರನೂ, ಬಂಧುಗಳಲ್ಲಿ ಧರ್ಮವೂ, ಗೃಹಸ್ಥಾದ್ಯಾಶ್ರಮಗಳಲ್ಲಿ ಸಂನ್ಯಾಸವೂ, ಧರ್ಮಾದಿಪುರುಷಾರ್ಥಗಳಲ್ಲಿ ಮೋಕ್ಷವೂ ನೀನಲ್ಲದೆ ಬೇರೆಯಲ್ಲ. ನೀನು ರುದ್ರರಲ್ಲಿ ನೀಲಲೋಹಿತನೂ, ಆದಿತ್ಯರಲ್ಲಿ ವಾಸುದೇವನೂ, ಕಪಿಗಳಲ್ಲಿ ಆಂಜನೇಯನೂ, ಯಜ್ಞಗಳಲ್ಲಿ ಜಪಯಜ್ಞವೂ, ಶಸ್ತ್ರಧಾರಿಗಳಲ್ಲಿ ಶ್ರೀರಾಮಚಂದ್ರನೂ ಆಗಿರುವೆ.

ಗಂಧರ್ವಾಣಾಂ ಚಿತ್ರರಥೋ ವಸೂನಾಂ ಪಾವಕೋ ಧ್ರುವಂ ।
ಮಾಸಾನಾಮಧಿಮಾಸಸ್ತ್ವಂ ವ್ರತಾನಾಂ ತ್ವಂ ಚತುರ್ದಶೀ ॥ ೫೨ ॥

ಐರಾವತೋ ಗಜೇಂದ್ರಾಣಾಂ ಸಿದ್ಧಾನಾಂ ಕಪಿಲೋ ಮತಃ ।
ಅನಂತಸ್ತ್ವಂ ಹಿ ನಾಗಾನಾಂ ಪಿತೄಣಾಮರ್ಯಮಾ ಭವಾನ್ ॥ ೫೩ ॥

ಕಾಲಃ ಕಲಯತಾಂ ಚ ತ್ವಂ ದೈತ್ಯಾನಾಂ ಬಲಿರೇವ ಚ ।
ಕಿಂ ಬಹೂಕ್ತೇನ ದೇವೇಶ ಸರ್ವಂ ವಿಷ್ಟಭ್ಯ ವೈ ಜಗತ್ ॥ ೫೪ ॥

ಏಕಾಂಶೇನ ಸ್ಥಿತಸ್ತ್ವಂ ಹಿ ಬಹಿಸ್ಥೋಽನ್ವಿತ ಏವ ಚ ॥ ೫೫ ॥

॥ ಸನತ್ಕುಮಾರ ಉವಾಚ ॥

ಇತಿ ಸ್ತುತ್ವಾ ಸುರಾಸ್ಸರ್ವೇ ಮಹಾದೇವಂ ವೃಷಧ್ವಜಂ ।
ಸ್ತೋತ್ರೈರ್ನಾನಾವಿಧೈರ್ದಿವ್ಯೈ ಶೂಲಿನಂ ಪರಮೇಶ್ವರಂ ॥ ೫೬ ॥

ಪ್ರತ್ಯೂಚುಃ ಪ್ರಸ್ತುತಂ ದೀನಾಃ ಸ್ವಾರ್ಥಂ ಸ್ವಾರ್ಥವಿಚಕ್ಷಣಾಃ ।
ವಾಸವಾದ್ಯಾ ಲಿನತಸ್ಕಂಧಾಃ ಕೃತಾಂಜಲಿಪುಟಾ ಮುನೇ ॥ ೫೭ ॥

---

೫೨-೫೫. ಗಂಧರ್ವರಲ್ಲಿ ಚಿತ್ರರಥನೂ, ವಸ್ತುಗಳಲ್ಲಿ ಪಾವಕನೂ, ಮಾಸಗಳಲ್ಲಿ ಅಧಿಕಮಾಸವೂ, ವ್ರತಗಳಲ್ಲಿ ಚತುರ್ದಶಿಯೂ, ಆನೆಗಳಲ್ಲಿ ಐರಾವತವೂ, ಸಿದ್ಧರಲ್ಲಿ ಕಪಿಲನೂ, ನಾಗರಲ್ಲಿ ಅನಂತನೂ, ಪಿತೃಗಳಲ್ಲಿ ಅರ್ಯಮನೂ, ಎಲ್ಲವನ್ನೂ ಹಿಡಿದು ಹಾಕುವವರಲ್ಲಿ ಯಮನೂ, ದೈತ್ಯರಲ್ಲಿ ಬಲಿಯೂ, ನೀನೇ ಆಗಿರುವೆ. ಓ ದೇವ! ಹೆಚ್ಚು ಹೇಳಿ ಏನು ಪ್ರಯೋಜನ? ಈ ಪ್ರಪಂಚವೆಲ್ಲವನ್ನೂ ಒಂದು ಅಂಶದಿಂದ ವ್ಯಾಪಿಸಿಕೊಂಡು ಮತ್ತೊಂದು ಅಂಶದಿಂದ ನಮಗೆ ಈ ರೀತಿ ಹೊರಗೆ ಗೋಚರನಾಗಿರುವೆ.

೫೬-೫೭. ಸನತ್ಕುಮಾರನು ಹೇಳಿದನು :— ಓ ವ್ಯಾಸನೆ, ಈರೀತಿ, ಸ್ವಾರ್ಥಪರಾಯಣರೂ, ದೀನರೂ, ಆದ ಇಂದ್ರಾದಿ ದೇವತೆಗಳೆಲ್ಲರೂ, ಮಹಾದೇವನೂ, ವೃಷಭಧ್ವಜನೂ, ಶೂಲಧಾರಿಯೂ, ಆದ ಪರಶಿವನನ್ನು ವಿಧವಿಧವಾದ ದಿವ್ಯವಾದ ಸ್ತೋತ್ರಗಳಿಂದ ಕೈಗಳನ್ನು ಮುಗಿದುಕೊಂಡು ತಲೆಯನ್ನು ಮೇಲೆತ್ತದೆ ನಮ್ರತೆಯಿಂದ ತಾವು ಬಂದ ಕಾರಣವನ್ನು ತಿಳಿಸಿದರು.

॥ ದೇವಾ ಊಚುಃ ॥

ಪರಾಜಿತಾ ಮಹಾದೇವ ಭ್ರಾತೃಭ್ಯಾಂ ಸಹಿತೇನ ತು ।
ಭಗವಂಸ್ತಾರಕೋತ್ಪನ್ನೈಸ್ಸರ್ವೇದೇವಾಸ್ಸವಾಸವಾಃ ॥ ೫೮ ॥

ತ್ರೈಲೋಕ್ಯಂ ಸ್ವವಶಂ ನೀತಂ ತಥಾ ಚ ಮುನಿಸತ್ತಮಾಃ ।
ವಿಧ್ವಸ್ತಾಸ್ಸರ್ವಸಂಸಿದ್ಧಾಸ್ಸರ್ವಮುತ್ಸಾದಿತಂ ಜಗತ್ ॥ ೫೯ ॥

ಯಜ್ಞಭಾಗಾನ್ಸಮಸ್ತಾಂಸ್ತು ಸ್ವಯಂ ಗೃಹ್ಣಾತಿ ದಾರುಣಃ ।
ಪ್ರವರ್ತಿತೋ ಹ್ಯಧರ್ಮಸ್ತೈರ್ಋಷೀಣಾಂ ಚ ನಿವಾರಿತಃ ॥ ೬೦ ॥

ಅವಧ್ಯಾಸ್ಸರ್ವಭೂತಾನಾಂ ನಿಯತಂ ತಾರಕಾತ್ಮಜಾಃ ।
ತದಿಚ್ಛಯಾ ಪ್ರಕುರ್ವಂತಿ ಸರ್ವೇ ಕರ್ಮಾಣಿ ಶಂಕರ ॥ ೬೧ ॥

ಯಾವನ್ನ ಕ್ಷೀಯತೇ ದೈತ್ಯೈರ್ಘೋರೈಸ್ತ್ರಿಪುರವಾಸಿಭಿಃ ।
ತಾವದ್ವಿಧೀಯತಾಂ ನೀತಿರ್ಯಯಾ ಸಂರಕ್ಷ್ಯತೇ ಜಗತ್ ॥ ೬೨ ॥

---

೫೮-೬೨. ದೇವತೆಗಳು ಹೇಳಿದರು :—ಓ ಮಹಾದೇವ ! ತಾರಕಾಸುರನ ಮಗನಾದ ತಾರಕಾಕ್ಷನು ತನ್ನ ತಮ್ಮಂದಿರಾದ ಕಮಲಾಕ್ಷವಿದ್ಯುನ್ಮಾಲಿಯರೊಡನೆ, ದೇವೇಂದ್ರ ಸಹಿತರಾದ ನಮ್ಮೆಲ್ಲರನ್ನೂ ಸೋಲಿಸಿಬಿಟ್ಟಿರುವನು. ಈ ಮೂರು ಲೋಕವೆಲ್ಲವೂ, ಈಗ ಅವನ ಅಧಿಕಾರಕ್ಕೆ ಒಳಪಟ್ಟಿದೆ. ಸರ್ವಸಿದ್ಧಿಗಳನ್ನು ಪಡೆದವರೂ, ಮಹಾಮುನಿಶ್ರೇಷ್ಠರೂ, ಈಗ ನಾಶವಾದರು. ಜಗತ್ತು ಹಾಳಾಗಿಹೋಯಿತು. ಯಜ್ಞಗಳಲ್ಲಿ ನೀಡುವ ಹವಿರ್ಭಾಗವೆಲ್ಲವನ್ನೂ ಅವನೇ ಸ್ವೀಕರಿಸುತ್ತಿರುವನು. ಅಧರ್ಮವನ್ನು ಹರಡುತ್ತಿರುವನು. ಋಷಿಗಳ ಧರ್ಮವನ್ನು ನಿಲ್ಲಿಸಿ ಬಿಟ್ಟಿರುವನು. ನಿಜವಾಗಿಯೂ ಆ ತಾರಕಪುತ್ರರು ಯಾವ ಪ್ರಾಣಿಯಿಂದಲೂ, ಸಾಯಲು ಅಸಾಧ್ಯರಾಗಿರುವರು. ಓ ಶಂಕರ ಈಗ ಎಲ್ಲರೂ, ಆ ಅಸುರನ ಇಚ್ಛೆಯಂತೆ ಕರ್ಮಗಳನ್ನು ಮಾಡುತ್ತಿದ್ದಾರೆ. ಈ ತ್ರಿಪುರ ನಿವಾಸಿಗಳಾದ ಘೋರರಾದ ದೈತ್ಯರಿಂದ, ಜಗತ್ಸಂರಕ್ಷಣೆಗೆ ಕಾರಣವಾದ ನೀತಿಯು ನಾಶವಾಗುವುದರೊಳಗಾಗಿ ಅದನ್ನು ಉದ್ಧಾರಮಾಡು ಎಂದರು.

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಮಿಂದ್ರಾದೀನಾಂ ದಿವೌಕಸಾಂ ।
ಶಿವಸ್ಸಂಭಾಷಮಾಣಾನಾಂ ಪ್ರತಿವಾಕ್ಯಮುವಾಚ ಸಃ ॥ ೬೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ದೇವಸ್ತುತಿರ್ನಾಮ
ದ್ವಿತಿಯೋಽಧ್ಯಾಯಃ

---

೬೩. ಸನತ್ಕುಮಾರನು ಹೇಳಿದನು :—ಓ ವ್ಯಾಸಮುನಿ, ಈ ರೀತಿ ನುಡಿಯುತ್ತಿರುವ ಇಂದ್ರಾದಿ ದೇವತೆಗಳ ಮಾತನ್ನು ಕೇಳಿ ಶಿವನು ಅವರನ್ನು ಕುರಿತು ಇಂತೆಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯಲ್ಲಿಯ
ಐದನೆಯ ಯುದ್ಧಖಂಡದಲ್ಲಿ ದೇವಸ್ತುತಿಯೆಂಬ ಎರಡನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ತೃತೀಯೋಽಧ್ಯಾಯಃ

---

॥ ಶಿವ ಉವಾಚ ॥

ಅಯಂ ವೈ ತ್ರಿಪುರಾಧ್ಯಕ್ಷಃ ಪುಣ್ಯವಾನ್ವರ್ತತೇಽಧುನಾ ।
ಯತ್ರ ಪುಣ್ಯಂ ಪ್ರವರ್ತೇತ ನ ಹಂತವ್ಯೋ ಬುಧೈಃ ಕ್ವಚಿತ್ ॥ ೧ ॥

ಜಾನಾಮಿ ದೇವಕಷ್ಟಂ ಚ ವಿಬುಧಾಸ್ಸಕಲಂ ಮಹತ್ ।
ದೈತ್ಯಾಸ್ತೇ ಪ್ರಬಲಾ ಹಂತುಮಶಕ್ಯಾಸ್ತು ಸುರಾಸ್ಸುರೈಃ ॥ ೨ ॥

---

## ಮೂರನೆಯ ಅಧ್ಯಾಯವು.

೧. ಶಿವನಿಂತೆಂದನು :—ಎಲೈ ದೇವತೆಗಳಿರಾ, ಈ ತ್ರಿಪುರಗಳ ಅಧಿಪತಿಯು ಈಗ ಪುಣ್ಯಶಾಲಿಯಾಗಿರುವನು. ಯಾವನು ಪುಣ್ಯಕರ್ಮಗಳಲ್ಲಿ ತೊಡಗಿರುವನೋ ಅಂಥವನನ್ನು ತಿಳಿದವರು ಕೊಲ್ಲಲಾರರು.

೨. ನಿಮಗೆ ಒದಗಿರುವ ಮಹತ್ತಾದ ತೊಂದರೆಯನ್ನು ನಾನು ಬಲ್ಲೆನು. ಆ ದೈತ್ಯರು ಪ್ರಬಲರು. ಎಲೈ ಸುರರೇ! ನೀವು ಅವರನ್ನು ಕೊಲ್ಲಲು ಸಾಧ್ಯವಿಲ್ಲ.

ಪುಣ್ಯವಂತಸ್ತು ತೇ ಸರ್ವೇ ಸಮಯಾಸ್ತಾರಕಾತ್ಮಜಾಃ ।
ದುಸ್ಸಾಧ್ಯಸ್ತು ವಧಸ್ತೇಷಾಂ ಸರ್ವೇಷಾಂ ಪುರವಾಸಿನಾಂ ॥ ೩ ॥

ಮಿತ್ರದ್ರೋಹಂ ಕಥಂ ಜಾನಸ್ಕರೋಮಿ ರಣಕರ್ಕಶಃ ।
ಸುಹೃದ್ದ್ರೋಹೇ ಮಹತ್ಪಾಪಂ ಪ್ರೋಕ್ತಮುಕ್ತಂ ಸ್ವಯಂಭುವಾ ॥ ೪ ॥

ಬ್ರಹ್ಮಘ್ನೇ ಚ ಸುರಾಪೇ ಚ ಸ್ತೇಯೇ ಭಗ್ನವ್ರತೇ ತಥಾ ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ ॥ ೫ ॥

ಮಮ ಭಕ್ತಾಸ್ತು ತೇ ದೈತ್ಯಾ ಮಯಾ ವಧ್ಯಾಃ ಕಥಂ ಸುರಾಃ ।
ವಿಚಾರ್ಯತಾಂ ಭವದ್ಭಿಶ್ಚ ಧರ್ಮಜ್ಞೈರೇವ ಧರ್ಮತಃ ॥ ೬ ॥

ತಾವತ್ತೇ ನೈವ ಹಂತವ್ಯಾಃ ಯಾವದ್ಭಕ್ತಿಕೃತಶ್ಚ ಮೇ ।
ತಥಾಪಿ ವಿಷ್ಣವೇ ದೇವಾ ನಿವೇದ್ಯಂ ಕಾರಣಂ ತ್ವಿದಂ ॥ ೭ ॥

---

೩. ದೈತ್ಯಶಿಲ್ಪಿಯಾದ ಮಯನಿಂದೊಡಗೂಡಿದ ಆ ತಾರಕಸುತರೆಲ್ಲರೂ ಪುಣ್ಯವಂತರು. ಆದುದರಿಂದ ಆ ತ್ರಿಪುರನಿವಾಸಿಗಳೆಲ್ಲರನ್ನೂ ಕೊಲ್ಲುವುದೆಂದರೆ ಎಂದಿಗೂ ಸಾಧ್ಯವಾಗದು.

೪. ರಣರಂಗದಲ್ಲಿ ಯಾರಿಗೂ ಸಗ್ಗದ ನಾನು, ತಿಳಿದೂ ತಿಳಿದೂ, ಮಿತ್ರದ್ರೋಹವನ್ನೆಂತು ಮಾಡಲಿ ? ಮಿತ್ರದ್ರೋಹವನ್ನು ಎಸಗಿದಲ್ಲಿ ಮಹಾಪಾಪವೆಂದು ಮೊದಲೇ ಈ ಬ್ರಹ್ಮನು ಹೇಳಿರುವನು.

೫. ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ, ವ್ರತಭಂಗ ಇವುಗಳನ್ನು ಮಾಡಿದವರಿಗೂ ಪ್ರಾಯಶ್ಚಿತ್ತವುಂಟು. ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ.

೬. ಆ ದೈತ್ಯರೆಲ್ಲರೂ ನನ್ನ ಭಕ್ತರು. ಅವರನ್ನು ನಾನೇ ಕೊಲ್ಲುವುದು ಹೇಗೆ ? ಧರ್ಮವನ್ನು ಬಲ್ಲ ನೀವೇ ಧರ್ಮದಿಂದ ಈ ಅಂಶವನ್ನು ವಿಚಾರಮಾಡಿ.

೭. ಎಲ್ಲಿಯವರೆಗೆ ಅವರು ನನ್ನಲ್ಲಿ ಭಕ್ತಿಯನ್ನಿಟ್ಟಿರುವರೋ ಅಲ್ಲಿಯವರೆಗೂ, ಅವರನ್ನು ಕೊಲ್ಲಲು ಸಾಧ್ಯವಿಲ್ಲ. ಆದರೂ, ನೀವೆಲ್ಲರೂ ಈ ವಿಷಯವನ್ನು ವಿಷ್ಣುವಿಗೆ ತಿಳಿಸಿರಿ.

॥ ಸನತ್ಕುಮಾರ ಉವಾಚ ॥

ಇತ್ಯೇವಂ ತದ್ವಚಶ್ಶ್ರುತ್ವಾ ದೇವಾಶ್ಶಕ್ರಪುರೋಗಮಾಃ ।
ನ್ಯವೇದಯನ್ ದ್ರುತಂ ಸರ್ವೇ ಬ್ರಹ್ಮಣೇ ಪ್ರಥಮಂ ಮುನೇ ॥ ೮ ॥

ತತೋ ವಿಧಿಂ ಪುರಸ್ಕೃತ್ಯ ಸರ್ವೇ ದೇವಾಸ್ಸವಾಸವಾಃ ।
ವೈಕುಂಠಂ ಪ್ರಯಯುಶ್ಶೀಘ್ರಂ ಸರ್ವೇ ಶೋಭಾಸಮನ್ವಿತಂ ॥ ೯ ॥

ತತ್ರ ಗತ್ವಾ ಹರಿಂ ದೃಷ್ಟ್ವಾ ಪ್ರಣೇಮುರ್ಜಾತಸಂಭ್ರಮಾಃ ।
ತುಷ್ಟುವುಶ್ಚ ಮಹಾಭಕ್ತ್ಯಾ ಕೃತಾಂಜಲಿಪುಟಾಸ್ಸುರಾಃ ॥ ೧೦ ॥

ಸ್ವದುಃಖಕಾರಣಂ ಸರ್ವಂ ಪೂರ್ವವತ್ತದನಂತರಂ ।
ನ್ಯವೇದಯನ್ ದ್ರುತಂ ತಸ್ಮೈ ವಿಷ್ಣವೇ ಪ್ರಭವಿಷ್ಣವೇ ॥ ೧೧ ॥

ದೇವದುಃಖಂ ತತಶ್ಶ್ರುತ್ವಾ ದತ್ತಂ ಚ ತ್ರಿಪುರಾಲಯೈಃ ।
ಜ್ಞಾತ್ವಾ ವ್ರತಂ ಚ ತೇಷಾಂ ತದ್ವಿಷ್ಣುರ್ವಚನಮಬ್ರವೀತ್ ॥ ೧೨ ॥

---

೮. ಇಂತು ಶಿವನು ನುಡಿದ ಮಾತುಗಳನ್ನು ಕೇಳಿ ಇಂದ್ರನೇ ಮೊದಲಾದ ಆ ದೇವತೆಗಳೆಲ್ಲರೂ, ಬೇಗನೆ ಈ ವಿಷಯವನ್ನು ಬ್ರಹ್ಮನಿಗೆ ಮೊದಲು ತಿಳಿಸಿದರು.

೯. ಬಳಿಕ ಇಂದ್ರಾದಿ ದೇವತೆಗಳು ಬ್ರಹ್ಮನನ್ನು ಮುಂದಿಟ್ಟುಕೊಂಡು ಕಾಂತಿಯಿಂದ ಬೆಳಗುತ್ತಿದ್ದ ವೈಕುಂಠವನ್ನು ಕುರಿತು ಬೇಗನೆ ತೆರಳಿದರು.

೧೦. ಅಲ್ಲಿ ಶ್ರೀಹರಿಯನ್ನು ಕಂಡು ಬಹು ಸಂಭ್ರಮದಿಂದ ನಮಸ್ಕರಿಸಿ ಭಕ್ತಿಯಿಂದ, ಬದ್ಧಾಂಜಲಿಪುಟರಾಗಿ ಆತನನ್ನು ಸ್ತೋತ್ರಮಾಡಿದರು.

೧೧. ಬಳಿಕ ತಮ್ಮ ದುಃಖಕ್ಕೆ ಕಾರಣವಾವುದೋ ಅದೆಲ್ಲವನ್ನೂ ಸರ್ವಶಕ್ತನಾದ ಆ ವಿಷ್ಣುವಿಗೆ ಮೊದಲಿನಂತೆ ಆತುರದಿಂದ ಅರಿಕೆಮಾಡಿಕೊಂಡರು.

೧೨. ಅನಂತರ ತ್ರಿಪುರಾಸುರರಿಂದ ದೇವತೆಗಳಿಗೆ ಒದಗಿದ ಸಂಕಟವನ್ನು ಕೇಳಿ, ಆ ತ್ರಿಪುರರು ನೇಮನಿಷ್ಠೆಗಳಿಂದ ಇರುತ್ತಿರುವುದನ್ನೂ ಅರಿತು, ವಿಷ್ಣುವು ದೇವತೆಗಳನ್ನು ಕುರಿತು,

॥ ವಿಷ್ಣುರುವಾಚ ॥
ಇದಂ ಸತ್ಯಂ ವಚಶ್ಚೈವ ಯತ್ರ ಧರ್ಮಸ್ಸನಾತನಃ ।
ತತ್ರ ದುಃಖಂ ನ ಜಾಯೇತ ಸೂರ್ಯೇ ದೃಷ್ಟೇ ಯಥಾ ತಮಃ ॥ ೧೩ ॥

॥ ಸನತ್ಕುಮಾರ ಉವಾಚ ॥
ಇತ್ಯೇ ತದ್ವಚನಂ ಶ್ರುತ್ವಾ ದೇವಾ ದುಃಖಮುಪಾಗತಾಃ ।
ಪುನರೂಚುಸ್ತಥಾ ವಿಷ್ಣುಂ ಪರಿಮ್ಲಾನಮುಖಾಂಬುಜಾಃ ॥ ೧೪ ॥

॥ ದೇವಾ ಊಚುಃ ॥
ಕಥಂ ಚೈವ ಪ್ರಕರ್ತವ್ಯಂ ಕಥಂ ದುಃಖಂ ನಿರಸ್ಯತೇ ।
ಕಥಂ ಭವೇಮ ಸುಖಿನಃ ಕಥಂ ಸ್ಥಾಸ್ಯಾಮಹೇ ವಯಂ ॥ ೧೫ ॥

ಕಥಂ ಧರ್ಮಾ ಭವಿಷ್ಯಂತಿ ತ್ರಿಪುರೇ ಜೀವಿತೇ ಸತಿ ।
ದೇವದುಃಖಪ್ರದಾ ನೂನಂ ಸರ್ವೇ ತ್ರಿಪುರವಾಸಿನಃ ॥ ೧೬ ॥

ಕಿಂ ವಾ ತೇ ತ್ರಿಪುರಸ್ಯೇಹ ವಧಶ್ಚೈವ ವಿಧೀಯತಾಂ ।
ನೋ ಚೇದಕಾಲಿಕೀ ದೇವ ಸಂಹತಿಃ ಕ್ರಿಯತಾಂ ಧ್ರುವಂ ॥ ೧೭ ॥

---

೧೩. ಎಲೈ ಸುರರೇ, ಇದು ಸತ್ಯವಾದ ಮಾತು. ಸೂರ್ಯನು ಇರುವಾಗ ಕತ್ತಲೆಯೆಂತು ಇರದೋ, ಆರೀತಿ ಸನಾತನವಾದ ಧರ್ಮವಿರುವೆಡೆಯಲ್ಲಿ ದುಃಖವೆನ್ನುವುದು ಉಂಟಾಗಲಾರದು ಎಂದನು.

೧೪. ಓ ವ್ಯಾಸಮಹರ್ಷಿ, ವಿಷ್ಣುವು ಹೀಗೆ ಹೇಳಿದುದನ್ನು ಕೇಳಿ ದೇವತೆಗಳೆಲ್ಲರೂ ಬಹು ದುಃಖಿತರಾಗಿ, ಬಾಡಿದ ಮುಖದಿಂದ ಮತ್ತೆ ವಿಷ್ಣುವನ್ನು ಕುರಿತು ಇಂತೆಂದರು.

೧೫-೧೭. ನಾವೀಗ ಏನು ಮಾಡೋಣ? ನಮ್ಮ ದುಃಖವು ಕಳೆಯುವುದಾದರೂ ಎಂತು? ನಾವು ಸುಖಿಗಳಾಗುವುದು ಹೇಗೆ? ನಾವು ಸ್ಥಿರರಾಗಿ ನಿಲ್ಲುವುದಾದರೂ ಎಂತು? ಆ ತ್ರಿಪುರರು ಜೀವಂತರಾಗಿರುವಾಗ ಧರ್ಮಗಳಾದರೂ ನಡೆಯುವ ಬಗೆ ಹೇಗೆ? ಆ ತ್ರಿಪುರ ನಿವಾಸಿಗಳೆಲ್ಲರೂ ಸದಾ ದೇವತೆಗಳಿಗೆ ಕಿರುಕುಳವನ್ನೇ ಕೊಡುತ್ತಿರುವರು. ಆ ತ್ರಿಪುರರು ನಾಶವಾಗುವುದು ನಿನಗೆ ಸಮ್ಮತವೇ? ಇಲ್ಲವೇ ಈ ಎಲ್ಲ ದೇವತೆಗಳೂ ಹಾಳಾಗುವುದು ನಿನಗೆ ಇಷ್ಟವೇ? ಎಂದರು.

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ತೇ ತದಾ ದೇವಾ ದುಃಖಂ ಕೃತ್ವಾ ಪುನಃ ಪುನಃ ।
ಸ್ಥಿತಿಂ ನೈವ ಗತಿಂ ತೇ ವೈ ಚಕ್ರುರ್ದೇವವರಾದಿಹ ॥ ೧೮ ॥

ತಾನ್ವೈ ತಥಾ ವಿಧಾನ್ದೃಷ್ಟ್ವಾ ಹೀನಾನ್ವಿನಯಸಂಯುತಾನ್ ।
ಸೋಽಪಿ ನಾರಾಯಣಶ್ರೀಮಾಂಶ್ಚಿಂತಯಂಶ್ಚೇತಸಾ ತಥಾ ॥ ೧೯ ॥

ಕಿಂ ಕಾರ್ಯಂ ದೇವಕಾರ್ಯೇಷು ಮಯಾ ದೇವಸಹಾಯಿನಾ ।
ಶಿವಭಕ್ತಾಸ್ತು ತೇ ದೈತ್ಯಾಸ್ತಾರಕಸ್ಯ ಸುತಾ ಇತಿ ॥ ೨೦ ॥

ಇತಿ ಸಂಚಿಂತ್ಯ ತತ್ಕಾಲೇ ವಿಷ್ಣುನಾ ಪ್ರಭವಿಷ್ಣುನಾ ।
ತತೋ ಯಜ್ಞಾಸ್ಸ್ಮೃತಾಸ್ತೇನ ದೇವಕಾರ್ಯಾರ್ಥಮಕ್ಷಯಾಃ ॥ ೨೧ ॥

ತದ್ವಿಷ್ಣುಸ್ಮೃತಿಮಾತ್ರೇಣ ಯಜ್ಞಾಸ್ತೇ ತತ್ಕ್ಷಣಂ ದ್ರುತಂ ।
ಆಗತಾಸ್ತತ್ರ ಯತ್ರಾಸ್ತೇ ಶ್ರೀಪತಿಃ ಪುರುಷೋತ್ತಮಃ ॥ ೨೨ ॥

ತತೋ ವಿಷ್ಣುಂ ಯಜ್ಞಪತಿಂ ಪುರಾಣಂ ಪುರುಷಂ ಹರಿಂ ।
ಪ್ರಣಮ್ಯ ತುಷ್ಟುವುಸ್ತೇ ವೈ ಕೃತಾಂಜಲಿಪುಟಾಸ್ತದಾ ॥ ೨೩ ॥

---

೧೮. ಓ ವ್ಯಾಸ, ಹೀಗೆ ದೇವತೆಗಳು ಹೇಳಿ ಪುನಃ ಪುನಃ ದುಃಖಿಸುತ್ತಾ ಅಲ್ಲಿ ನಿಲ್ಲಲೂ ಲಾರದೆ, ಹೊರಡಲೂ ಲಾರದೆ ತಳಮಳಿಸುತ್ತಿದ್ದರು.

೧೯. ಹೀಗೆ ತಳಮಳಿಸುತ್ತಾ ಕಳೆಗುಂದಿರುವ ವಿನೀತರಾದ ದೇವತೆಗಳನ್ನು ಕಂಡು ಶ್ರೀಮನ್ನಾರಾಯಣನು ತನ್ನ ಮನಸ್ಸಿನಲ್ಲಿ ಈರೀತಿ ಆಲೋಚನೆಮಾಡಿದನು.

೨೦-೨೧. ದೇವತೆಗಳ ಎಲ್ಲ ಕಾರ್ಯಗಳಲ್ಲೂ ಸಹಾಯಕನಾದ ನಾನು ಈ ಸಮಯಲ್ಲಿ ಯಾವ ರೀತಿ ಅವರ ಕೆಲಸವನ್ನು ನೆರವೇರಿಸಲಿ? ಆ ತಾರಕನ ಮಕ್ಕಳಾದ ದೈತ್ಯರು ಶಿವನಲ್ಲಿ ಭಕ್ತಿಯನ್ನಿಟ್ಟಿರುವರಲ್ಲಾ ಎಂದು ಯೋಚಿಸುತ್ತಾ ಆ ಸರ್ವಶಕ್ತನಾದ ವಿಷ್ಣುವು ದೇವತೆಗಳ ಕಾರ್ಯಸಾಧನೆಗಾಗಿ ಯಜ್ಞಗಳನ್ನು ಸ್ಮರಿಸಿದನು.

೨೨-೨೩. ವಿಷ್ಣುವು ಸ್ಮರಿಸಿದೊಡನೆಯೇ ಆ ಯಜ್ಞಗಳು ಭರದಿಂದ ವಿಷ್ಣುವಿದ್ದಲ್ಲಿಗೆ ಬಂದು, ಯಜ್ಞಗಳಿಗೆಲ್ಲಾ ಸ್ವಾಮಿಯೂ ಪುರಾಣಪುರುಷನೂ ಆದ ಆ ಶ್ರೀಪತಿಯನ್ನು ನಮಸ್ಕರಿಸಿ ಕೈಗಳನ್ನು ಮುಗಿದುಕೊಂಡು ಸ್ತೋತ್ರಮಾಡಿದವು.

ಭಗವಾನಪಿ ತಾನ್ ದೃಷ್ಟ್ವಾ ಯಜ್ಞಾನ್ಪ್ರಾಹ ಸನಾತನಾನ್ ।
ಸನಾತನಸ್ತದಾ ಸೇಂದ್ರಾನ್ ದೇವಾನಾಲೋಕ್ಯ ಚಾಚ್ಯುತಃ ॥ ೨೪ ॥

॥ ವಿಷ್ಣುರುವಾಚ ॥
ಅನೇನೈವ ಸದಾ ದೇವಾ ಯಜಧ್ವಂ ಪರಮೇಶ್ವರಂ ।
ಪುರತ್ರಯವಿನಾಶಾಯ ಜಗತ್ತ್ರಯವಿಭೂತಯೇ ॥ ೨೫ ॥

॥ ಸನತ್ಕುಮಾರ ಉವಾಚ ॥
ಅಚ್ಯುತಸ್ಯ ವಚಶ್ಶ್ರುತ್ವಾ ದೇವದೇವಸ್ಯ ಧೀಮತಃ ।
ಪ್ರೇಮ್ಣಾ ತೇ ಪ್ರಣತಿಂ ಕೃತ್ವಾ ಯಜ್ಞೇಶಂ ತೇಽಸ್ತುವಸ್ಸುರಾಃ॥ ೨೬ ॥

ಏವಂ ಸ್ತುತ್ವಾ ತತೋ ದೇವಾ ಅಯಜನ್ ಯಜ್ಞಪೂರುಷಂ ।
ಯಜ್ಞೋಕ್ತೇನ ವಿಧಾನೇನ ಸಂಪೂರ್ಣವಿಧಯೋ ಮುನೇ ॥ ೨೭ ॥

ತತಸ್ತಸ್ಮಾದ್ಯಜ್ಞಕುಂಡಾತ್ಸಮುತ್ಪೇತುಸ್ಸಹಸ್ರಶಃ ।
ಭೂತಸಂಘಾ ಮಹಾಕಾಯಾಶ್ಶೂಲಶಕ್ತಿಗದಾಯುಧಾಃ ॥ ೨೮ ॥

---

೨೪. ಸನಾತನನಾದ ಆ ಭಗವಂತನು ಯಜ್ಞಗಳನ್ನೂ ಇಂದ್ರಾದಿ ದೇವತೆಗಳನ್ನೂ ನೋಡಿ.

೨೫. ಎಲೈ ದೇವತೆಗಳಿರಾ, ಈ ಯಜ್ಞಗಳ ಮುಖಾಂತರ, ಆ ಪರಮೇಶ್ವರನನ್ನು ಕುರಿತು, ಪುರತ್ರಯಗಳು ನಾಶವಾಗಲೆಂದೂ, ಜಗತ್ತಿಗೆ ಕಲ್ಯಾಣವಾಗಲೆಂದೂ ಆರಾಧಿಸಿ ಎಂದನು.

೨೬-೨೭. ವ್ಯಾಸನೇ, ದೇವದೇವನೂ, ಧೀಮಂತನೂ ಆದ ನಾರಾಯಣನ ಮಾತನ್ನು ಕೇಳಿ ದೇವತೆಗಳು, ಪ್ರೀತಿಯಿಂದ ನಮಸ್ಕರಿಸಿ, ಯಜ್ಞಪುರುಷನನ್ನು ಸ್ತೋತ್ರಮಾಡಿದರು. ಬಳಿಕ ಯಜ್ಞೀಯವಾದ ವಿಧಾನಗಳಿಂದ ಒಂದೂ ಲೋಪ ಬರದಂತೆ ಆ ಯಜ್ಞಪುರುಷನನ್ನುದ್ದೇಶಿಸಿ ಯಾಗಮಾಡಿದರು.

೨೮. ಅನಂತರ ಆ ಯಜ್ಞಕುಂಡದಿಂದ ಶೂಲ, ಶಕ್ತಿ, ಗದೆ ಮೊದಲಾದ ಆಯುಧಗಳನ್ನು ಹಿಡಿದು ಬೃಹದಾಕಾರದ ಭೂತಗಳು ಸಾವಿರಾರು ಗಟ್ಟಲೆ ಗುಂಪು ಗುಂಪಾಗಿ ಮೇಲೆದ್ದು ಬಂದರು.

ದದೃಶುಸ್ತೇ ಸುರಾಸ್ತಾನ್ವೈ ಭೂತಸಂಘಾನ್ ಸಹಸ್ರಶಃ ।
ಶೂಲಶಕ್ತಿಗದಾಹಸ್ತಾನ್ ದಂಡಚಾಪಶಿಲಾಯುಧಾನ್ ॥ ೨೯ ॥

ನಾನಾಪ್ರಹರಣೋಪೇತಾನ್ನಾನಾವೇಷಧರಾಂಸ್ತಥಾ ।
ಕಾಲಾಗ್ನಿರುದ್ರಸದೃಶಾನ್ ಕಾಲಸೂರ್ಯೋಪಮಾಂಸ್ತದಾ ॥ ೩೦ ॥

ದೃಷ್ಟ್ವಾ ತಾನಬ್ರವೀದ್ವಿಷ್ಣುಃ ಪ್ರಣಿಪತ್ಯ ಪುರಸ್ಥಿತಾನ್ ।
ಭೂತಾನ್ಯಜ್ಞಪತಿಶ್ಶ್ರೀವಾನ್ ರುದ್ರಾಜ್ಞಾಪರಿಪಾಲಕಃ ॥ ೩೧ ॥

॥ ವಿಷ್ಣುರುವಾಚ ॥

ಭೂತಾಶ್ಶೃಣುತ ಮದ್ವಾಕ್ಯಂ ದೇವಕಾರ್ಯಾರ್ಥಮುದ್ಯತಾಃ ।
ಗಚ್ಛಂತು ತ್ರಿಪುರಂ ಸದ್ಯಸ್ಸರ್ವೇ ಹಿ ಬಲವತ್ತರಾಃ ॥ ೩೨ ॥

ಗತ್ವಾ ದಗ್ಧ್ವಾ ಚ ಭಿತ್ತ್ವಾ ಚ ಭಂಕ್ತ್ವಾ ದೈತ್ಯಪುರತ್ರಯಂ ।
ಪುನರ್ಯಥಾಗತಾ ಭೂತಾ ಗಂತುಮರ್ಹಥ ಭೂತಯೇ ॥ ೩೩ ॥

---

೨೯-೩೧. ಹೀಗೆ ಗುಂಪು ಗುಂಪಾಗಿ ಮೇಲೆದ್ದು ಬಂದ ಆ ಭೂತಗಳನ್ನು ದೇವತೆಗಳು ಕಂಡರು. ಅವರಲ್ಲಿ ಒಬ್ಬೊಬ್ಬರೂ ಶೂಲ, ಶಕ್ತಿ, ಗದೆ, ದಂಡ, ಬಿಲ್ಲು ಕಲ್ಲು ಮೊದಲಾದ ವಿವಿಧ ಆಯುಧಗಳನ್ನು ಕೈಲಿ ತಳೆದಿದ್ದರು. ಒಬ್ಬೊಬ್ಬರದೂ ನಾನಾರೀತಿಯ ವೇಷಭೂಷಣಗಳು. ಅವರನ್ನು ನೋಡಿವರೆ ಕಾಲಾಗ್ನಿರುದ್ರನನ್ನೂ ಪ್ರಳಯಕಾಲದ ಸೂರ್ಯನನ್ನೂ ಕಂಡಂತೆ ಆಗುತ್ತಿತ್ತು. ಅವರು ಮುಂದೆ ಬಂದು ನಿಂತುದನ್ನು ಕಂಡು, ಶಿವಾಜ್ಞೆಯನ್ನು ನೆರವೇರಿಸುವವನೂ, ಯಜ್ಞಪತಿಯೂ ಆದ ಶ್ರೀವಿಷ್ಣುವು ನಮಸ್ಕರಿಸಿ ಇಂತೆಂದನು.

೩೨-೩೩. ದೇವತೆಗಳ ಕೆಲಸವನ್ನು ನೆಲವೇರಿಸಲು ಸಿದ್ಧರಾದ ಎಲೈ ಭೂತಗಳೇ, ನನ್ನ ಮಾತು ಕೇಳಿರಿ. ನೀವೀಗಲೇ ಆ ತ್ರಿಪುರವನ್ನು ಕುರಿತು ತೆರಳಿರಿ. ನೀವು ಅಲ್ಲಿಗೆ ಹೋಗಿ ಆ ತ್ರಿಪುರರನ್ನು ಸುಟ್ಟು ಒಡೆದು ಪುಡಿ ಪುಡಿ ಮಾಡಿ, ಮತ್ತೆ ನೀವು ಬಂದಂತೆಯೇ, ನಿಮ್ಮ ನಿಮ್ಮ ಸ್ವಸ್ಥಾನಗಳಿಗೆ ಪ್ರಯಾಣಮಾಡಿರಿ ಎಂದನು.

॥ ಸನತ್ಕುಮಾರ ಉವಾಚ ॥

ತಚ್ಛ್ರುತ್ವಾ ಭಗವದ್ವಾಕ್ಯಂ ತತೋ ಭೂತಗಣಾಶ್ಚ ತೇ ।
ಪ್ರಣಮ್ಯ ದೇವದೇವಂ ತಂ ಯಯುರ್ದೈತ್ಯಪುರತ್ರಯಂ ॥ ೩೪ ॥

ಗತ್ವಾ ತತ್ಪ್ರವಿಶಂತಶ್ಚ ತ್ರಿಪುರಾಧಿಪತೇಜಸಿ ।
ಭಸ್ಮಸಾದಭವನ್ ಸದ್ಯಶ್ಶಲಭಾ ಇವ ಪಾವಕೇ ॥ ೩೫ ॥

ಅವಶಿಷ್ಟಾಶ್ಚ ಯೇ ಕೇಚಿತ್ಪಲಾಯನಪರಾಯಣಾಃ ।
ನಿಸೃತ್ಯಾರಂ ಸಮಾಯಾತಾ ಹರೇರ್ನಿಕಟಮಾಕುಲಾಃ ॥ ೩೬ ॥

ತಾನ್ದೃಷ್ಟ್ವಾ ಸ ಹರಿಶ್ಶ್ರುತ್ವಾ ತಚ್ಚ ವೃತ್ತಮಶೇಷತಃ ।
ಚಿಂತಯಾಮಾಸ ಭಗವಾನ್ ಮನಸಾ ಪುರುಷೋತ್ತಮಃ ॥ ೩೭ ॥

ಕಿಂ ಕೃತ್ಯಮಧುನಾಕಾರ್ಯಮಿತಿ ಸಂತಪ್ತಮಾನಸಃ ।
ಸಂತಪ್ತಾನಮರಾನ್ ಸರ್ವಾನಾಜ್ಞಾಯ ಚ ಸವಾಸವಾನ್ ॥ ೩೮ ॥

ಕಥಂ ತೇಷಾಂ ಚ ದೈತ್ಯಾನಾಂ ಬಲಾದ್ಧತ್ವಾ ಪುರತ್ರಯಂ ।
ದೇವಕಾರ್ಯಂ ಕರಿಷ್ಯಾಮೀತ್ಯಾಸೀಚ್ಚಿಂತಾಸಮಾಕುಲಃ ॥ ೩೯ ॥

---

೩೪. ಬಳಿಕ ಆ ಭೂತಗಣಗಳೆಲ್ಲವೂ, ವಿಷ್ಣುವಿನ ಆ ಮಾತನ್ನು ಕೇಳಿ ಆತನಿಗೆ ನಮಸ್ಕರಿಸಿ, ತ್ರಿಪುರಗಳಿಗೆ ಹೊರಟರು.

೩೫-೩೬. ಅಲ್ಲಿಗೆ ತಲುಪಿ ಒಳಗೆ ಕಾಲಿಡುವಷ್ಟರಲ್ಲೇ, ಆ ತ್ರಿಪುರಾಧಿಪತಿಯ ತೇಜಸ್ಸಿಗೆ ಸಿಕ್ಕಿ, ಬೆಂಕಿಗೆ ಬಿದ್ದ ಪತಂಗಗಳಂತೆ ಸುಟ್ಟು ಬೂದಿಯಾದರು. ಅಳಿದುಳಿದ ಹಲಕೆಲವರು ಕಾಲಿಗೆ ಬುದ್ಧಿ ಹೇಳಿ, ಹೆದರಿಕೆಯಿಂದ ತತ್ತಳಿಸುತ್ತಾ, ಬೇಗ ಬೇಗನೆ ಓಡಿಬಂದು ವಿಷ್ಣುವಿನ ಬಳಿಗೆ ಹಿಂದಿರುಗಿದರು.

೩೭. ಅವರನ್ನು ಕಂಡು, ಅಲ್ಲಿ ನಡೆದ ವಿಷಯವನ್ನೆಲ್ಲವನ್ನೂ ಕೇಳಿ ಶ್ರೀಹರಿಯು ಮನಸ್ಸಿನಲ್ಲಿಯೇ ಆಲೋಚಿಸಿದನು.

೩೮-೪೮. ಇಂದ್ರಾದಿ ದೇವತೆಗಳೆಲ್ಲರೂ ಬಹಳ ಖಿನ್ನರಾಗಿರುವರು ನಾನೀಗ ಮಾಡತಕ್ಕ ಕೆಲಸವೇನು? ಆ ದೈತ್ಯಾಧಿಪತಿಗಳ ಪುರತ್ರಯವನ್ನು ಯಾವ

ನಾಶೋಽಭಿಚಾರತೋ ನಾಸ್ತಿ ಧರ್ಮಿಷ್ಠಾನಾಂ ನ ಸಂಶಯಃ ।
ಇತಿ ಪ್ರಾಹ ಸ್ವಯಂ ಚೇಶಃ ಶ್ರುತ್ಯಾಚಾರಪ್ರಮಾಣಕೃತ್ ॥ ೪೦ ॥

ದೈತ್ಯಾಶ್ಚ ತೇ ಹಿ ಧರ್ಮಿಷ್ಠಾಸ್ಸರ್ವೇ ತ್ರಿಪುರವಾಸಿನಃ ।
ತಸ್ಮಾದವಧತಾಂ ಪ್ರಾಪ್ತಾ ನಾನ್ಯಥಾಸುರಪುಂಗವಾಃ ॥ ೪೧ ॥

ಕೃತ್ವಾ ತು ಸುಮಹತ್ಪಾಪಂ ರುದ್ರಮಭ್ಯರ್ಚಯಂತಿ ತೇ ।
ಮುಚ್ಯಂತೇ ಪಾತಕೈಸ್ಸರ್ವೈಃ ಪದ್ಮಪತ್ರಮಿವಾಂಭಸಾ ॥ ೪೨ ॥

ರುದ್ರಾಭ್ಯರ್ಚನತೋ ದೇವಾಸ್ಸರ್ವೇ ಕಾಮಾ ಭವಂತಿ ಹಿ ।
ನಾನೋಪಭೋಗಸಂಪತ್ತಿರ್ವಶ್ಯತಾಂ ಯಾತಿ ವೈ ಭುವಿ ॥ ೪೩ ॥

ತಸ್ಮಾತ್ತದ್ಭೋಗಿನೋ ದೈತ್ಯಾ ಲಿಂಗಾರ್ಚನಪರಾಯಣಾಃ ।
ಅನೇಕವಿಧಸಂಪತ್ತೇರ್ಮೋಕ್ಷಸ್ಯಾಪಿ ಪರತ್ರ ಚ ॥ ೪೪ ॥

ತತಃ ಕೃತ್ವಾ ಧರ್ಮವಿಘ್ನಂ ತೇಷಾಮೇವಾತ್ಮಮಾಯಯಾ ।
ದೈತ್ಯಾನಾಂ ದೇವಕಾರ್ಯಾರ್ಥಂ ಹರಿಷ್ಯೇ ತ್ರಿಪುರಂ ಕ್ಷಣಾತ್ ॥ ೪೫ ॥

---

ರೀತಿ ಹಾಳುಗೆಡವಿ ದೇವತೆಗಳ ಕೆಲಸವನ್ನು ನೆರವೇರಿಸಲಿ?' ಕೇವಲ ಧರ್ಮ ನಿರತರಾದವರನ್ನು ಅಭಿಚಾರಾದಿಗಳಿಂದ ಕೊಲ್ಲಲು ಖಂಡಿತವಾಗಿಯೂ ಸಾಧ್ಯವಿಲ್ಲವೆಂದು ಶ್ರುತಿ ಮತ್ತು ಆಚಾರಗಳೇ ಪ್ರಮಾಣವೆಂದು ಸಾರಿದ ಆ ಈಶ್ವರನೇ ಸಾಕ್ಷಾತ್ತಾಗಿ ಹೇಳಿರುವನು. ಆ ತ್ರಿಪುರನಿವಾಸಿಗಳಾದರೋ ಎಲ್ಲರೂ ಧರ್ಮಿಷ್ಠರು. ಆದ್ದರಿಂದ ಅವರೆಲ್ಲರೂ ಅವಧ್ಯತೆಯನ್ನು ಪಡೆದಿರುವರು. ಅವರು ಬಹಳ ಪಾಪಗಳನ್ನೇ ಎಸಗಿದ್ದರೂ ಶಿವಾರ್ಚನಪರಾಯಣರಾದುದರಿಂದ, ತಾವರೆಯೆಲೆಯು ನೀರಿಗೆ ಅಂಟದಂತೆ ಪಾಪಲೇಪವಿಲ್ಲದೆ ಇರುವರು. ಶಿವನನ್ನು ಪೂಜಿಸುವುದರಿಂದ ಎಲ್ಲ ಇಷ್ಟಗಳೂ ನೆರವೇರುವುವು. ಈ ಭೂಮಿಯಲ್ಲಿನ ಸಕಲ ಭೋಗಭಾಗ್ಯಗಳೂ ಕೈಗೂಡುವುವು. ಲಿಂಗಾರ್ಚನ ನಿರತರಾದುದರಿಂದಲೇ ಈ ದೈತ್ಯರು ಇಹದಲ್ಲಿ ನಾನಾವಿಧವಾದ ಸಂಪತ್ತಿಗೂ, ಪರದಲ್ಲಿ ಮೋಕ್ಷ ಸುಖಕ್ಕೂ ಭಾಗಿಗಳಾಗಿರುವರು. ಆದುದರಿಂದ ಈಗ ನನ್ನ ಮಾಯೆಯಿಂದ ಆ ದೈತ್ಯರು ನಡೆಸುತ್ತಿರುವ ಧರ್ಮಗಳಿಗೆ ಅಡಚಣೆಯನ್ನು ತಂದೊಡ್ಡುವೆನು. ದೇವತೆಗಳ ಕೆಲಸವು ನೆರವೇರುವುದಕ್ಕಾಗಿ ಕ್ಷಣಮಾತ್ರದಲ್ಲಿ ತ್ರಿಪುರವನ್ನು ಹಾಳುಗೆಡಿಸಿಬಿಡುವೆನು. ಹೀಗೆ ಪುರುಷೋತ್ತಮನಾದ ಶ್ರೀಹರಿಯು

ವಿಚಾರ್ಯೇತ್ಥಂ ತತಸ್ತೇಷಾಂ ಭಗವಾನ್ ಪುರುಷೋತ್ತಮಃ ।
ಕರ್ತುಂ ವ್ಯವಸ್ಥಿತಃ ಪಶ್ಚಾದ್ಧರ್ಮವಿಘ್ನಂ ಸುರಾರಿಣಾಂ ॥ ೪೬ ॥

ಯಾವಚ್ಚ ವೇದಧರ್ಮಾಸ್ತು ಯಾವದ್ವೈ ಶಂಕರಾರ್ಚನಂ ।
ಯಾವಚ್ಚ ಶುಚಿಕೃತ್ಯಾದಿ ತಾವನ್ನಾಶೋ ಭವೇನ್ನ ಹಿ ॥ ೪೭ ॥

ತಸ್ಮಾದೇವಂ ಪ್ರಕರ್ತವ್ಯಂ ವೇದಧರ್ಮಸ್ತತೋ ವ್ರಜೇತ್ ।
ತ್ಯಕ್ತಲಿಂಗಾರ್ಚನಾ ದೈತ್ಯಾ ಭವಿಷ್ಯಂತಿ ನ ಸಂಶಯಃ ॥ ೪೮ ॥

ಇತಿ ನಿಶ್ಚಿತ್ಯ ವೈ ವಿಷ್ಣುರ್ವಿಘ್ನಾರ್ಥಮಕರೋತ್ತದಾ ।
ತೇಷಾಂ ಧರ್ಮಸ್ಯ ದೈತ್ಯಾನಾಮುಪಾಯಂ ಶ್ರುತಿಖಂಡನಂ ॥ ೪೯ ॥

ತದೈವೋವಾಚ ದೇವಾನ್ಸ ವಿಷ್ಣುರ್ದೇವಸಹಾಯಕೃತ್ ।
ಶಿವಾಜ್ಞಯಾ ಶಿವೇನೈವಾಜ್ಞಪ್ತಸ್ತ್ರೈಲೋಕ್ಯರಕ್ಷಣೇ ॥ ೫೦ ॥

॥ ವಿಷ್ಣುರುವಾಚ ॥

ಹೇ ದೇವಾಸ್ಸಕಲಾ ಯೂಯಂ ಗಚ್ಛತ ಸ್ವಗೃಹಾನ್ ಧ್ರುವಂ ।
ದೇವಕಾರ್ಯಂ ಕರಿಷ್ಯಾಮಿ ಯಥಾಮತಿ ನ ಸಂಶಯಃ ॥ ೫೧ ॥

---

ಆಲೋಚಿಸಿ ಆ ಸುರವೈರಿಗಳ ಧರ್ಮಕಾರ್ಯಗಳಿಗೆ ವಿಘ್ನ ಮಾಡಲು ನಿರ್ಧರಿಸಿದನು. ಎಲ್ಲಿಯವರೆಗೆ ವೇದವಿಹಿತವಾದ ಧರ್ಮಗಳು ನಡೆಯುತ್ತಿರುವುವೋ, ಎಲ್ಲಿಯವರೆಗೆ ಶಂಕರನ ಪೂಜೆಯು ಆಗುತ್ತಿರುವುದೋ, ಎಲ್ಲಿಯವರೆಗೆ ಪವಿತ್ರವಾದ ಕೆಲಸಗಳು ನಡೆಯುತ್ತಿರುವುವೋ ಅಲ್ಲಿಯವರಿಗೆ ಅವರ ನಾಶವು ಆಗಲಾರದು. ಆದುದರಿಂದ ಹೀಗೆ ಮಾಡಬೇಕು. ಹಾಗಾದರೆ ವೇದಧರ್ಮಗಳು ನಾಶವಾಗುವುವು. ಖಂಡಿತ ವಾಗಿಯೂ ಆ ದೈತ್ಯರು ಲಿಂಗಾರ್ಚನೆಯನ್ನು ಬಿಟ್ಟುಬಿಡುವರು.

೪೯. ಹೀಗೆ ನಿಶ್ಚಯಿಸಿ ವಿಷ್ಣುವು, ಆ ದೈತ್ಯರು ಧರ್ಮಭ್ರಷ್ಟರಾಗಲು ಶ್ರುತಿ ಮತ ಖಂಡನೆಯೇ ಸರಿಯಾದ ಉಪಾಯವೆಂದು ಭಾವಿಸಿದನು.

೫೦. ಶಿವನ ಇಚ್ಛೆಯಂತೆ ಲೋಕತ್ರಯಗಳ ರಕ್ಷಣಾಕಾರ್ಯವನ್ನು ಕೈಗೊಂಡ ಆ ವಿಷ್ಣುವು ಶಿವನ ಅಪ್ಪಣೆಯಂತೆಯೇ ದೇವತೆಗಳಿಗೆ ಸಹಾಯಮಾಡಬೇಕೆಂದು ಬಯಸಿ ಆಗ ಅವರನ್ನಿಂತೆಂದನು.

೫೧-೫೨. ಎಲೈ ದೇವತೆಗಳಿರಾ, ನೀವೆಲ್ಲರೂ ನಿಮ್ಮ ನಿಮ್ಮ ಮನೆಗಳಿಗೆ ತೆರ ಳಿರಿ. ಖಂಡಿತವಾಗಿಯೂ ನನ್ನ ಬುದ್ಧಿ ಬಲವಿದ್ದಷ್ಟು ನಿಮ್ಮ ಕೆಲಸವನ್ನು ಮಾಡು

ತಾನ್ ರುದ್ರಾದ್ವಿಮುಖಾನ್ಕೃನಂ ಕರಿಷ್ಯಾಮಿ ಸುಯತ್ನತಃ ।
ಸ್ವಭಕ್ತಿರಹಿತಾನ್ ಜ್ಞಾತ್ವಾ ತಾನ್ ಕರಿಷ್ಯಾಮಿ ಭಸ್ಮಸಾತ್ ॥ ೫೨ ॥

॥ ಸನತ್ಕುಮಾರ ಉವಾಚ ॥

ತದಾಜ್ಞಾಂ ಶಿರಸಾಧಾಯ ಶ್ವಾಸಿತಾಸ್ತೇಽಮರಾ ಮುನೇ ।
ಸ್ವಸ್ವಧಾಮಾನಿ ವಿಶ್ವಸ್ತಾ ಯಯುರ್ಬ್ರಹ್ಮಾಪಿ ನೋದಿತಾಃ ॥ ೫೩ ॥

ತತಶ್ಚೈವಾಕರೋದ್ವಿಷ್ಣುರ್ದೇವಾರ್ಥಂ ಹಿತಮುತ್ತಮಂ ।
ತದೇವ ಶ್ರೂಯತಾಂ ಸಮ್ಯಕ್ಸರ್ವಪಾಪಪ್ರಣಾಶನಂ ॥ ೫೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ತ್ರಿಪುರವಧೋಪಾಖ್ಯಾನೇ ಭೂತ
ತ್ರಿಪುರಧರ್ಮವರ್ಣನಂನಾಮ ತೃತೀಯೋಽಧ್ಯಾಯಃ

---

ವೆನು. ನನ್ನ ಪ್ರಯತ್ನವೆಲ್ಲಾ ಪಟ್ಟು ಆ ದೈತ್ಯರು ಶಿವನಲ್ಲಿ ಆಸಕ್ತಿಯನ್ನು ತೊರೆಯು ವಂತೆ ಮಾಡುವೆನು. ತನ್ನಲ್ಲಿ ಭಕ್ತಿಯು ಯಾವಾಗ ಇಲ್ಲವಾಗುವುದೋ ಆಗ ಆತನು ಅವರನ್ನು ಸುಟ್ಟು ಬೂದಿಮಾಡಿಬಿಡುವನು.

೫೩. ಓ ವ್ಯಾಸ! ಹೀಗೆ ವಿಷ್ಣುವಿನಿಂದ ಸಮಾಧಾನಗೊಳಿಸಲ್ಪಟ್ಟ ಆ ದೇವತೆಗಳೆಲ್ಲರೂ ಆತನ ಅಪ್ಪಣೆಯನ್ನು ಪಡೆದು ನಿಶ್ಚಿಂತರಾಗಿ ಬ್ರಹ್ಮನೊಡನೆ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

೫೪. ಬಳಿಕ ವಿಷ್ಣುವು ದೇವತೆಗಳಿಗೋಸ್ಕರ ಉತ್ತಮವಾದ ಒಂದು ಹಿತ ಕಾರ್ಯವನ್ನೆಸಗಿದನು. ಎಲ್ಲ ಪಾಪಗಳನ್ನೂ ನಿವಾರಿಸುವ ಆ ವೃತ್ತಾಂತವನ್ನು ಹೇಳುವೆನು ಕೇಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಎರಡನೆಯ ರುದ್ರಸಂಹಿತೆಯಲ್ಲಿ ಐದನೆಯ
ಯುದ್ಧಖಂಡದ ತ್ರಿಪುರವಧೋಪಾಖ್ಯಾನದಲ್ಲಿ, ಭೂತಗಳು ಮತ್ತು
ತ್ರಿಪುರಧರ್ಮಗಳ ವರ್ಣನೆವೆಂಬ ಮೂರನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಚತುರ್ಥೋಽಧ್ಯಾಯಃ

---

॥ ಸನತ್ಕುಮಾರ ಉವಾಚ ॥

ಅಸೃಜಚ್ಚ ಮಹಾತೇಜಾಃ ಪುರುಷಂ ಸ್ವಾತ್ಮಸಂಭವಂ ।
ಏಕಂ ಮಾಯಾಮಯಂ ತೇಷಾಂ ಧರ್ಮವಿಘ್ನಾರ್ಥಮಚ್ಯುತಃ ॥ ೧ ॥

ಮುಂಡಿನಂ ಮ್ಲಾನವಸ್ತ್ರಂ ಚ ಗುಂಫಿಪಾತ್ರಸಮನ್ವಿತಂ ।
ದಧಾನಂ ಪುಂಜಿಕಾಂ ಹಸ್ತೇ ಚಾಲಯಂತಂ ಪದೇಪದೇ ॥ ೨ ॥

ವಸ್ತ್ರಯುಕ್ತಂ ತಥಾ ಹಸ್ತಂ ಕ್ಷೀಯಮಾಣಂ ಮುಖೇ ಸದಾ ।
ಧರ್ಮೇತಿ ವ್ಯಾಹರಂತಂ ಹಿ ವಾಚಾ ವಿಕ್ಲವಯಾ ಮುನಿಂ ॥ ೩ ॥

---

### ನಾಲ್ಕನೆಯ ಅಧ್ಯಾಯವು.

೧-೩. ಓ ವ್ಯಾಸಮಹರ್ಷೀ, ಮಹಾತೇಜಸ್ವಿಯಾದ ಆ ಶ್ರೀ ಹರಿಯು ಆ ದೈತ್ಯರ ಧರ್ಮಗಳು ವಿಘ್ನವಾಗಲೆಂದು ತನ್ನ ದೇಹದಿಂದ ಒಬ್ಬ ಮಾಯಾವಿಯಾದ ಪುರುಷನನ್ನು ಸೃಷ್ಟಿಸಿದನು. ಅವನ ತಲೆ ಬೋಳಾಗಿತ್ತು, ಕೊಳಕುಬಟ್ಟೆ, ಒಂದು ಕೈಲಿ ಗುಂಫಿ ಎಂಬ ಪಾತ್ರೆ, ಮತ್ತೊಂದು ಕೈಲಿ ಒಂದು ದೊಂತಿ. ಕ್ಷಣಕ್ಷಣಕ್ಕೂ ಅದನ್ನು ಅಲ್ಲಾಡಿಸುತ್ತಿದ್ದನು. ಆತನ ಮುಖವು ನವೆದುಕೊಂಡು ಹೋಗಿತ್ತು. ಆಗಾಗ ಧರ್ಮ ಧರ್ಮ ಎನ್ನುತ್ತಿದ್ದನು.

ಸ ನಮಸ್ಕೃತ್ಯ ವಿಷ್ಣುಂ ತಂ ತತ್ಪುರಸ್ಸಂಸ್ಥಿತೋಽಥನ್ವೈ ।
ಉವಾಚ ವಚನಂ ತತ್ರ ಹರಿಂ ಸ ಪ್ರಾಂಜಲಿಸ್ತದಾ ॥ ೪ ॥

ಅರಿಹನ್ನಚ್ಯುತಂ ಪೂಜ್ಯಂ ಕಿಂ ಕರೋಮಿ ತದಾದಿಶ ।
ಕಾನಿ ನಾಮಾನಿ ಮೇ ದೇವ ಸ್ಥಾನಂ ವಾಪಿ ವದ ಪ್ರಭೋ ॥ ೫ ॥

ಇತ್ಯೇವಂ ಭಗವಾನ್ವಿಷ್ಣುಶ್ಶ್ರುತ್ವಾ ತಸ್ಯ ಶುಭಂ ವಚಃ ।
ಪ್ರಸನ್ನಮಾನಸೋ ಭೂತ್ವಾ ವಚನಂ ಚೇದಮಬ್ರವೀತ್ ॥ ೬ ॥

॥ ವಿಷ್ಣುರುವಾಚ ॥

ಯದರ್ಥಂ ನಿರ್ಮಿತೋಽಸಿ ತ್ವಂ ನಿಬೋಧ ಕಥಯಾಮಿ ತೇ ।
ಮದಂಗಜ ಮಹಾಪ್ರಾಜ್ಞ ಮದ್ರೂಪಸ್ತ್ವಂ ನ ಸಂಶಯಃ ॥ ೭ ॥

ಮಮಾಂಗಾಚ್ಚ ಸಮುತ್ಪನ್ನೋ ಮತ್ಕಾರ್ಯಂ ಕರ್ತುಮರ್ಹಸಿ ।
ಮದೀಯಸ್ತ್ವಂ ಸದಾ ಪೂಜ್ಯೋ ಭವಿಷ್ಯಸಿ ನ ಸಂಶಯಃ ॥ ೮ ॥

---

೪-೫. ಆ ಪುರುಷನು ಪೂಜ್ಯನಾದ ವಿಷ್ಣುವನ್ನು ನಮಸ್ಕರಿಸಿ, ಎದುರಿಗೆ ಕೈಮುಗಿದು ನಿಂತುಕೊಂಡು ಎಲೈ ಶತ್ರುಸಂಹಾರಕನಾದ ವಿಷ್ಣುವೇ, ಈಗ ನಾನೇನು ಮಾಡಲಿ? ನನ್ನ ಹೆಸರೇನು? ವಾಸಸ್ಥಾನವಾವುದು? ಇದೆಲ್ಲವನ್ನೂ ನಿರ್ದೇಶ ಮಾಡಿ ನಾನು ಮಾಡಬೇಕಾದ ಕಾರ್ಯದಲ್ಲಿ ನನ್ನನ್ನು ನಿಯೋಗಿಸು ಎಂದನು.

೬-೭. ಆ ಪುರುಷನು ಹೀಗೆ ಹೇಳಿದ್ದನ್ನು ಕೇಳಿ ವಿಷ್ಣುವು ಪ್ರಸನ್ನನಾಗಿ ಅವನನ್ನು ಕುರಿತು ವಿಷ್ಣುವು ಹೇಳಿದನು.—ಎಲೈ ಪುರುಷನೇ, ನಿನ್ನನ್ನು ಏತಕ್ಕಾಗಿ ನಿರ್ಮಿಸಿದೆನೆಂಬುದನ್ನು ಹೇಳುವೆನು ಕೇಳು, ನೀನು ನನ್ನ ಅಂಗದಿಂದ ಜನಿಸಿರುವೆ. ಆದುದರಿಂದ ನೀನು ಮಹಾಪ್ರಾಜ್ಞನಾಗಿಯೂ, ನನ್ನಂತೆ ರೂಪವುಳ್ಳವನಾಗಿಯೂ ಇರುವೆ. ಇದರಲ್ಲೇನೂ ಸಂಶಯವಿಲ್ಲ.

೮-೯. ನೀನು ನನ್ನ ಅಂಗದಿಂದ ಜನಿಸಿದವನು, ಆದುದರಿಂದ ನನ್ನ ಕಾರ್ಯವನ್ನು ಮಾಡುವುದು ನ್ಯಾಯವೇ ಆಗಿರುವುದು. ನನ್ನಿಂದ ಜನಿಸಿರುವುದರಿಂದ ನಿನ್ನನ್ನು ಎಲ್ಲರೂ ಪೂಜಿಸುವರು. ನಿನಗೆ ಅರಿಹನ್ (ಅರ್ಹನ್) ಎಂಬ ಹೆಸರಾಗಲಿ.

ಅರಿಹನ್ನಾಮ ತೇ ಸ್ಯಾತ್ತು ಹ್ಯನ್ಯಾನಿ ಚ ಶುಭಾನಿ ಚ ।
ಸ್ಥಾನಂ ವಕ್ಷ್ಯಾಮಿ ತೇ ಪಶ್ಚಾಚ್ಛೃಣು ಪ್ರಸ್ತುತಮಾದರಾತ್ ॥ ೯ ॥

ಮಾಯಿನ್ಮಾಯಾಮಯಂ ಶಾಸ್ತ್ರಂ ತತ್ಷೋಡಶಸಹಸ್ರಕಂ ।
ಶ್ರೌತಸ್ಮಾರ್ತವಿರುದ್ಧಂ ಚ ವರ್ಣಾಶ್ರಮವಿವರ್ಜಿತಂ ॥ ೧೦ ॥

ಅಪಭ್ರಂಶಮಯಂ ಶಾಸ್ತ್ರಂ ಕರ್ಮವಾದಮಯಂ ತಥಾ ।
ರಚಯೇತಿ ಪ್ರಯತ್ನೇನ ತದ್ವಿಸ್ತಾರೋ ಭವಿಷ್ಯತಿ ॥ ೧೧ ॥

ದದಾಮಿ ತವ ನಿರ್ಮಾಣೇ ಸಾಮರ್ಥ್ಯಂ ತದ್ಭವಿಷ್ಯತಿ ।
ಮಾಯಾ ಚ ವಿವಿಧಾ ಶೀಘ್ರಂ ತ್ವದಧೀನಾ ಭವಿಷ್ಯತಿ ॥ ೧೨ ॥

ತಚ್ಛ್ರುತ್ವಾ ವಚನಂ ತಸ್ಯ ಹರೇಶ್ಚ ಪರಮಾತ್ಮನಃ ।
ನಮಸ್ಕೃತ್ಯ ಪ್ರತ್ಯುವಾಚ ಸ ಮಾಯೀ ತಂ ಜನಾರ್ದನಂ ॥ ೧೩ ॥

---

ಈ ಹೆಸರಲ್ಲದೆ ಇನ್ನು ಅನೇಕ ಹೆಸರುಗಳಿಂದಲೂ ನೀನು ಪ್ರಸಿದ್ಧನಾಗುವೆ. ಇನ್ನು ನೀನು ಮಾಡಬೇಕಾದ ಕಾರ್ಯವೇನೆಂಬುದನ್ನು ಹೇಳುವೆನು ಕೇಳು.

೧೦-೧೧. ಎಲೈ ಮಾಯಾವಿಯೆ, ಈಗ ನೀನು ಹದಿನಾರು ಸಾವಿರ ಶ್ಲೋಕ ಪರಿಮಿತಿಯುಳ್ಳ ಮಾಯಾಶಾಸ್ತ್ರವೊಂದನ್ನು ರಚಿಸು. ಆ ಶಾಸ್ತ್ರವು ವೇದ, ಸ್ಮೃತಿ, ವರ್ಣಾಶ್ರಮಧರ್ಮ ಇವುಗಳಿಗೆ ವಿರುದ್ಧವಾಗಿರಬೇಕು ಕರ್ಮವೇ ಮುಖ್ಯವೆಂದು ಪ್ರತಿಪಾದಿಸುತ್ತಾ ವೇದಶಾಸ್ತ್ರಾದಿಗಳನ್ನು ತಿರಸ್ಕರಿಸುವಂತಿರಬೇಕು. ಇಂತಹ ಶಾಸ್ತ್ರವನ್ನು ನಿರ್ಮಾಣಮಾಡು. ಅದಕ್ಕೆ ತಕ್ಕ ಸಾಮರ್ಥ್ಯವನ್ನು ನಿನಗೆ ಅನುಗ್ರಹಿಸುವೆನು. ಈ ಶಾಸ್ತ್ರನಿರ್ಮಾಣಕಾರ್ಯದಲ್ಲಿ ಮಾಯೆಯು ನಿನಗಧೀನವಾಗಿರುವುದು. ಅದರಿಂದ ಆ ಶಾಸ್ತ್ರವು ವಿಶೇಷವಾಗಿ ಪ್ರಚಾರವಾಗುವುದು.

೧೩. ವಿಷ್ಣುವು ಹೇಳಿದ ಈ ಮಾತನ್ನು ಕೇಳಿ ಆ ಮಾಯಾವಿಯಾದ ಪುರುಷನು ವಿಷ್ಣುವನ್ನು ನಮಸ್ಕರಿಸಿ ಮತ್ತೆ ಹೇಳಿದನು.

॥ ಮುಂಡ್ಯುವಾಚ ॥

ಯತ್ಕರ್ತವ್ಯಂ ಮಯಾ ದೇವ ದ್ರುತಮಾದಿಶ ತತ್ಪ್ರಭೋ ।
ತ್ವದಾಜ್ಞಯಾಖಿಲಂ ಕರ್ಮ ಸಫಲಂ ಚ ಭವಿಷ್ಯತಿ ॥ ೧೪ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಪಾಠಯಾಮಾಸ ಶಾಸ್ತ್ರಂ ಮಾಯಾಮಯಂ ತಥಾ ।
ಇಹೈವ ಸ್ವರ್ಗನರಕಪ್ರತ್ಯಯೋ ನಾನ್ಯಥಾ ಪುನಃ ॥ ೧೫ ॥

ತಮುವಾಚ ಪುನರ್ವಿಷ್ಣುಸ್ಸ್ಮೃತ್ವಾ ಶಿವಪದಾಂಬುಜಂ ।
ಮೋಹನೀಯಾ ಇಮೇ ದೈತ್ಯಾ ಸರ್ವೇ ತ್ರಿಪುರವಾಸಿನಃ ॥ ೧೬ ॥

ಕಾರ್ಯಾಸ್ತೇ ದೀಕ್ಷಿತಾ ನೂನಂ ಪಾಠನೀಯಾಃ ಪ್ರಯತ್ನತಃ ।
ಮದಾಜ್ಞಯಾ ನ ದೋಷಸ್ತೇ ಭವಿಷ್ಯತಿ ಮಹಾಮತೇ ॥ ೧೭ ॥

---

೧೪. ಎಲೈ - ಸ್ವಾಮಿಯೇ, ನಾನು ಮಾಡಬೇಕಾದ ಕೆಲಸವೇನೆಂಬುದನ್ನು ಬೇಗನೆ ಅಪ್ಪಣೆಮಾಡು. ನಿನ್ನ ಆಜ್ಞೆಯಿಂದ ಸಮಸ್ತ ಕೆಲಸವೂ ಕೈಗೂಡುವುದು ಎಂದನು.

೧೫. ಸನತ್ಕುಮಾರನು ಹೇಳಿದನು :—ಆ ಮಾಯಾಪುರುಷನು ಹೀಗೆ ಹೇಳಲು ವಿಷ್ಣುವು ಅವನಿಗೆ ಮಾಯಾಶಾಸ್ತ್ರವನ್ನು ಚೆನ್ನಾಗಿ ಉಪದೇಶಮಾಡಿದನು. ಬೇರೆ ಲೋಕಗಳಲ್ಲಿರುವ ಸ್ವರ್ಗನರಕಗಳೆಂದರೇನು? ಅವನ್ನು ನೋಡಿರುವರಾರು? ಇವೆಲ್ಲಾ ಕೇವಲ ಭ್ರಾಂತಿಯು. ಈ ಲೋಕದಲ್ಲಿ ಸುಖಪಡುವುದೇ ಸ್ವರ್ಗವು. ದುಃಖವೇ ನರಕವು. ಇದಲ್ಲದೆ ಸ್ವರ್ಗ ನರಕಗಳು ಬೇರೆ ಯಾವುದೂ ಇಲ್ಲ. ಎಂದು ಮುಂತಾಗಿ ಅವನಿಗೆ ಉಪದೇಶಮಾಡಿದನು.

೧೬. ಹೀಗೆ ಉಪದೇಶಮಾಡಿ ವಿಷ್ಣುವು ಶಿವಪದಾಂಬುಜವನ್ನು ಸ್ಮರಿಸುತ್ತಾ ಆ ಪುರುಷನನ್ನು ಕುರಿತು—ನೀನು ಈ ಮಾಯಾಶಾಸ್ತ್ರವನ್ನು ಆ ತ್ರಿಪುರವಾಸಿಗಳಾದ ದೈತ್ಯರಿಗೆ ಚೆನ್ನಾಗಿ ಬೋಧನೆಮಾಡಿ ಅವರನ್ನು ಆ ಶಾಸ್ತ್ರದಲ್ಲಿ ದೀಕ್ಷೆಗೊಳ್ಳುವಂತೆ ಮೋಹಗೊಳಿಸಬೇಕು.

೧೭-೧೮. ನನ್ನ ಆಜ್ಞೆಯಿಂದ ಮಾಡುವ ಈ ಕಾರ್ಯದಲ್ಲಿ ನಿನಗೆ ಯಾವ

ಧರ್ಮಾಸ್ತತ್ರ ಪ್ರಕಾಶಂತೇ ಶ್ರೌತಸ್ಮಾರ್ತಾ ನ ಸಂಶಯಃ ।
ಅನಯಾ ವಿದ್ಯಯಾ ಸರ್ವೇ ಸ್ಫೋಟನೀಯಾ ಧ್ರುವಂ ಯತೇ ॥ ೧೮ ॥

ಗಂತುಮರ್ಹಸಿ ನಾಶಾರ್ಥಂ ಮುಂಡಿಂಸ್ತ್ರಿಪುರವಾಸಿನಾಂ ।
ತಮೋಧರ್ಮಂ ಸಂಪ್ರಕಾಶ್ಯ ನಾಶಯಸ್ವ ಪುರತ್ರಯಂ ॥ ೧೯ ॥

ತತಶ್ಚೈವ ಪುನರ್ಗತ್ವಾ ಮರುಸ್ಥಲ್ಯಾಂ ತ್ವಯಾ ವಿಭೋ ।
ಸ್ಥಾತವ್ಯಂ ಚ ಸ್ವಧರ್ಮೇಣ ಕಲಿರ್ಯಾವತ್ಸಮಾವ್ರಜೇತ್ ॥ ೨೦ ॥

ಪ್ರವೃತ್ತೇ ತು ಯುಗೇ ತಸ್ಮಿನ್ ಸ್ವೀಯೋ ಧರ್ಮಃ ಪ್ರಕಾಶ್ಯತಾಂ ।
ಶಿಷ್ಯೈಶ್ಚ ಪ್ರತಿಶಿಷ್ಯೈಶ್ಚ ವರ್ತನೀಯಸ್ತ್ವಯಾ ಪುನಃ ॥ ೨೧ ॥

ಮದಾಜ್ಞಯಾ ಭವದ್ಧರ್ಮೋ ವಿಸ್ತಾರಂ ಯಾಸ್ಯತಿ ಧ್ರುವಂ ।
ಮದನುಜ್ಞಾಪರೋ ನಿತ್ಯಂ ಗತಿಂ ಪ್ರಾಪ್ಸ್ಯಸಿ ಮಾಮಕೀಂ ॥ ೨೨ ॥

---

ದೋಷವೂ ಉಂಟಾಗುವುದಿಲ್ಲ. ಎಲೈ ಬುದ್ಧಿಶಾಲಿಯೇ, ಈ ಮಾಯಾಶಾಸ್ತ್ರದಿಂದ ಅಲ್ಲಿ ನೆಲಸಿರುವ ಶ್ರೌತಸ್ಮಾರ್ತಾದಿ ವೇದವಿಹಿತ ಧರ್ಮಗಳೆಲ್ಲವೂ ನಿಶ್ಚಯವಾಗಿಯೂ ನಾಶವನ್ನೈದುವವು.

೧೯. ಎಲೈ ಯತಿಯೇ, ಆ ತ್ರಿಪುರನಿವಾಸಿಗಳಾದ ದೈತ್ಯರನ್ನು ನಾಶಮಾಡು ವುದಕ್ಕೋಸ್ಕರ ನೀನಲ್ಲಿಗೆ ಹೋಗಬೇಕು. ತಾಮಸಗುಣ ಪ್ರಚುರವಾದ ನಿನ್ನ ಈ ಹೊಸ ಧರ್ಮವನ್ನು ಪ್ರಚಾರಕ್ಕೆ ತಂದು ಆ ಪುರತ್ರಯವನ್ನು ಹಾಳುಮಾಡು.

೨೦. ಆ ಮೇಲೆ ನೀನು ಮರುಸ್ಥಲಕ್ಕೆ ತೆರಳಿ, ಕಲಿಯುಗವು ಬರುವವರೆಗೂ, ಅಲ್ಲಿ ನಿನ್ನ ಧರ್ಮವನ್ನೇ ಆಚರಿಸುತ್ತಾ ಇರು.

೨೧. ಆ ಕಲಿಯುಗವು ಆರಂಭವಾದಮೇಲೆ ನಿನ್ನ ಈ ಪಾಷಂಡಧರ್ಮ ವನ್ನು ಶಿಷ್ಯರಿಂದಲೂ, ಅವರ ಶಿಷ್ಯ ಪ್ರಶಿಷ್ಯರಿಂದಲೂ ಪ್ರಚಾರಗೊಳಿಸು.

೨೨. ನನ್ನ ಅಪ್ಪಣೆಯಂತೆ ನಿನ್ನ ಈ ಧರ್ಮವು ಬಹಳ ವಿಸ್ತಾರವಾಗಿ ಹಬ್ಬಿ ಬೆಳೆಯುವುದು. ಇದು ಖಂಡಿತ. ಯಾವಾಗಲೂ ನನ್ನ ಪ್ಪಣೆಯಂತೆಯೇ ನಡೆಯು ವವನಾದುದರಿಂದ ನೀನು ನನ್ನನ್ನೇ ಹೊಂದುವೆ.

ಏವಮಾಜ್ಞಾ ತದಾ ದತ್ತಾ ವಿಷ್ಣುನಾ ಪ್ರಭವಿಷ್ಣುನಾ ।
ಶಾಸನಾದ್ದೇವದೇವಸ್ಯ ಹೃದಾ ತ್ವಂತರ್ದಧೇ ಹರಿಃ ॥ ೨೩ ॥

ತತಸ್ಸ ಮುಂಡೀ ಪರಿಪಾಲಯನ್ ಹರೇ-
ರಾಜ್ಞಾಂ ತಥಾ ನಿರ್ಮಿತವಾಂಶ್ಚ ಶಿಷ್ಯಾನ್ ।
ಯಥಾಸ್ವರೂಪಂ ಚತುರಸ್ತದಾನೀಂ
ಮಾಯಾಮಯಂ ಶಾಸ್ತ್ರಮಪಾಠಯತ್ಸ್ವಯಂ ॥ ೨೪ ॥

ಯಥಾ ಸ್ವಯಂ ತಥಾ ತೇ ಚ ಚತ್ವಾರೋ ಮುಂಡಿನಶ್ಶುಭಾಃ ।
ನಮಸ್ಕೃತ್ಯ ಸ್ಥಿತಾಸ್ತತ್ರ ಹರಯೇ ಪರಮಾತ್ಮನೇ ॥ ೨೫ ॥

ಹರಿಶ್ಚಾಪಿ ಮುನೇ ತತ್ರ ಚತುರಸ್ತಾಂಸ್ತದಾ ಸ್ವಯಂ ।
ಉವಾಚ ಪರಮಪ್ರೀತಶ್ಶಿವಾಜ್ಞಾ ಪರಿಪಾಲಕಃ ॥ ೨೬ ॥

ಯಥಾ ಗುರುಸ್ತಥಾ ಯೂಯಂ ಭವಿಷ್ಯಥ ಮದಾಜ್ಞಯಾ ।
ಧನ್ಯಾಸ್ಸ್ಥ ಸದ್ಗತಿಮಿಹ ಸಂಪ್ರಾಪ್ಸ್ಯಥ ನ ಸಂಶಯಃ ॥ ೨೭ ॥

---

೨೩. ಈ ರೀತಿಯಾಗಿ ಪ್ರಭಾವಶಾಲಿಯಾದ ವಿಷ್ಣುವು, ದೇವದೇವನಾದ ಶಿವನ ಆಜ್ಞೆಯಂತೆ ಆ ಬೋಳು ತಲೆಯ ಯತಿಗೆ ಅಪ್ಪಣೆಯಿತ್ತು ಅಂತರ್ಧಾನವನ್ನು ಹೊಂದಿದನು.

೨೪. ಬಳಿಕ ಆ ಯತಿಯು ಹರಿಯ ಅಪ್ಪಣೆಯನ್ನು ಅನುಸರಿಸಿ, ತನ್ನಂತೆಯೇ ಇರುವ ನಾಲ್ಕು ಮಂದಿ ಶಿಷ್ಯರನ್ನು ಸೃಷ್ಟಿಸಿ, ಅವರಿಗೆ ತನ್ನ ಮಾಯಾಮಯವಾದ ಶಾಸ್ತ್ರವನ್ನು ತಾನೇ ಉಪದೇಶಿಸಿದನು.

೨೫. ಆಮೇಲೆ ಅವನೂ, ಅವನಂತೆಯೇ ಶಿಖಾಹೀನರಾದ ಆ ನಾಲ್ವರು ಯತಿಗಳೂ, ವಿಷ್ಣುವಿಗೆ ನಮಸ್ಕರಿಸಿ ಅಲ್ಲಿ ನಿಂತುಕೊಂಡರು.

೨೬-೨೭. ಬಳಿಕ ಶಿವನ ಅಪ್ಪಣೆಯಂತೆ ನಡೆಯುವ ಆ ಹರಿಯೂ ಸಹ ಬಹುವಾಗಿ ಸಂತೋಷಗೊಂಡು ಆ ನಾಲ್ಕು ಮಂದಿಯನ್ನು ಕುರಿತು ನೀವು ನನ್ನ ಅಪ್ಪಣೆಯಂತೆ ನಿಮ್ಮ ಗುರುವು ಹೇಗೋ ಹಾಗೆಯೇ ಆಗುವಿರಿ, ನೀವು ಧನ್ಯರಾದಿರಿ. ನಿಸ್ಸಂಶಯವಾಗಿಯೂ ನೀವು ಸದ್ಗತಿಯನ್ನು ಹೊಂದುವಿರಿ ಎಂದನು.

ಚತ್ವಾರೋ ಮುಂಡಿನಸ್ತೇಽಥ ಧರ್ಮಂ ಪಾಷಂಡಮಾಶ್ರಿತಾಃ ।
ಹಸ್ತೇ ಪಾತ್ರಂ ದಧಾನಾಶ್ಚ ತುಂಡವಸ್ತ್ರಸ್ಯ ಧಾರಕಾಃ ॥ ೨೮ ॥

ಮಲಿನಾನ್ಯೇವ ವಾಸಾಂಸಿ ಧಾರಯಂತೋ ಹ್ಯಭಾಷಿಣಃ ।
ಧರ್ಮೋ ಲಾಭಃ ಪರಂ ತತ್ತ್ವಂ ವದಂತಸ್ತ್ವತಿಹರ್ಷತಃ ॥ ೨೯ ॥

ಮಾರ್ಜನೀಂ ಧ್ರಿಯಮಾಣಾಶ್ಚ ವಸ್ತ್ರಖಂಡವಿನಿರ್ಮಿತಾಂ ।
ಶನೈಶ್ಶನೈಶ್ಚಲಂತೋ ಹಿ ಜೀವಹಿಂಸಾಭಯಾದ್ಧ್ರುವಂ ॥ ೩೦ ॥

ತೇ ಸರ್ವೇ ಚ ತದಾ ದೇವಂ ಭಗವಂತಂ ಮುದಾನ್ವಿತಾಃ ।
ನಮಸ್ಕೃತ್ಯ ಪುನಸ್ತತ್ರ ಮುನೇ ತಸ್ಥುಸ್ತದಗ್ರತಃ ॥ ೩೦ ॥

ಹರಿಣಾ ಚ ತದಾ ಹಸ್ತೇ ಧೃತ್ವಾ ಚ ಗುರವೇಽರ್ಪಿತಾಃ ।
ಅಭ್ಯಧಾಯಿ ಚ ಸುಪ್ರೀತ್ಯಾ ತನ್ನಾಮಾನಿ ವಿಶೇಷತಃ ॥ ೩೨ ॥

---

೨೮-೩೧. ಓ ವ್ಯಾಸಮಹರ್ಷಿ! ಬಳಿಕ ಆ ನಾಲ್ವರು ಯತಿಗಳು ಪಾಷಂಡ ಧರ್ಮವನ್ನಾಶ್ರಯಿಸಿದರು. ಅವರ ಕೈಯಲ್ಲಿ ಪಾತ್ರೆಯನ್ನು ಹಿಡಿದಿದ್ದರು. ಬಾಯಿಗೆ ಬಟ್ಟೆಯನ್ನು ಕಟ್ಟಿಕೊಂಡಿದ್ದರು. ಕೊಳಕಾದ ಬಟ್ಟೆಗಳನ್ನು ಉಟ್ಟಿದ್ದರು. ಯಾರೊಡನೆಯೂ ಮಾತನಾಡುತ್ತಿರಲಿಲ್ಲ. ಆಗಾಗ್ಗೆ ಬಹು ಸಂತೋಷದಿಂದ ಧರ್ಮವೇ ಲಾಭ. ಧರ್ಮವೇ ಪರಮತತ್ತ್ವವೆಂದು ನುಡಿಯುತ್ತಿದ್ದರು. ಮತ್ತು ಚಿಂದಿ ಚಿಂದಿ ಬಟ್ಟೆಗಳಿಂದ ಮಾಡಲ್ಪಟ್ಟ ದೊಂದಿಯೊಂದನ್ನು ಕೈಲಿ ಹಿಡಿದುಕೊಂಡಿದ್ದರು. ಇರುವೆ ಮುಂತಾದ ನೆಲದ ಮೇಲೆ ಓಡಾಡುವ ಪ್ರಾಣಿಗಳಿಗೆ ಎಲ್ಲಿ ಹಿಂಸೆಯಾದೀತೋ ಎಂಬ ಹೆದರಿಕೆಯಿಂದ ಮೆಲ್ಲಮೆಲ್ಲನೆ ಕಾಲಿಡುತ್ತಿದ್ದರು. ಈ ರೀತಿ ಪಾಷಂಡವೇಷಧಾರಿಗಳಾದ ಆ ನಾಲ್ವರು ಮಂದಿಗಳೂ ಸಂತೋಷದಿಂದ ಭಗವಂತನಾದ ಶ್ರೀಹರಿಯನ್ನು ಮತ್ತೊಮ್ಮೆ ನಮಸ್ಕರಿಸಿ ಆತನೆದುರಿಗೆ ನಿಂತರು.

೩೨. ಶ್ರೀಹರಿಯು ಆ ನಾಲ್ವರನ್ನೂ ಕೈಹಿಡಿದು ಅವರ ಗುರುವಿನ ವಶಕ್ಕೆ ಒಪ್ಪಿಸಿ, ವಿಶೇಷವಾಗಿ ಅವರುಗಳ ಹೆಸರನ್ನೂ ಪ್ರೀತಿಯಿಂದ ತಿಳಿಸಿದನು.

ಯಥಾ ತ್ವಂ ಚ ತಥೈವೇಶೆ ಮದೀಯಾ ವೈ ನ ಸಂಶಯಃ ।
ಆದಿರೂಪಂ ಚ ತನ್ನಾಮ ಪೂಜ್ಯತ್ವಾತ್ಪೂಜ್ಯ ಉಚ್ಯತೇ　　॥ ೩೩ ॥

ಋಷಿರ್ಯತಿಸ್ತಥಾಕೀರ್ಯ ಉಪಾಧ್ಯಾಯ ಇತಿ ಸ್ವಯಂ ।
ಇಮಾನ್ಯಪಿ ತು ನಾಮಾನಿ ಪ್ರಸಿದ್ಧಾನಿ ಭವಂತು ವಃ　　॥ ೩೪ ॥

ಮಮಾಪಿ ಚ ಭವದ್ಭಿಶ್ಚ ನಾಮ ಗ್ರಾಹ್ಯಂ ಶುಭಂ ಪುನಃ ।
ಅರಿಹನ್ನಿತಿ ತನ್ನಾಮ ಧ್ಯೇಯಂ ಪಾಪಪ್ರಣಾಶನಂ　　॥ ೩೫ ॥

ಭವದ್ಭಿಶ್ಚೈವ ಕರ್ತವ್ಯಂ ಕಾರ್ಯಂ ಲೋಕಸುಖಾವಹಂ ।
ಲೋಕಾನುಕೂಲಂ ಚರತಾಂ ಭವಿಷ್ಯತ್ಯುತ್ತಮಾ ಗತಿಃ　　॥ ೩೬ ॥

॥ ಸನತ್ಕುಮಾರ ಉವಾಚ ॥

ತತಃ ಪ್ರಣಮ್ಯ ತಂ ಮಾಯೀ ಶಿಷ್ಯಯುಕ್ತಸ್ಸ್ವಯಂ ತದಾ ।
ಜಗಾಮ ತ್ರಿಪುರಂ ಸದ್ಯಶ್ಶಿವೇಚ್ಛಾಕಾರಿಣಂ ಮುದಾ　　॥ ೩೭ ॥

---

೩೩-೩೬. ಎಲೈ ಮಾಯಾಪುರುಷನೇ, ನಿನ್ನಂತೆಯೇ ಈ ನಾಲ್ವರೂ ಸಹ ನನ್ನವರೆಂದೇ ತಿಳಿ. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ನಿಮ್ಮೆಲ್ಲರಿಗೂ ಹೆಸರೇನು? ಎನ್ನುವಿಯೋ ಕೇಳು. ಆದಿರೂಪವೆಂತಲೂ, ಎಲ್ಲರಿಗೂ ಪೂಜಾರ್ಹರಾದುದರಿಂದ ಪೂಜ್ಯನೆಂಬುದಾಗಿಯೂ ಋಷಿ, ಯತಿ, ಆಕೀರ್ಯ, ಉಪಾಧ್ಯಾಯ ಎಂಬುದಾಗಿಯೂ ನಿಮಗೆ ಲೋಕದಲ್ಲಿ ಹೆಸರುಗಳು ಪ್ರಸಿದ್ಧವಾಗಲಿ. ನೀವೂ ಸಹ ನನ್ನನ್ನು, ಶುಭ ಕರವೂ, ಉಚ್ಚರಿಸುವವರ ಪಾಪಗಳನ್ನು ಹೋಗಲಾಡಿಸುವಂಥದೂ ಆದ ಅರಿಹ ಎಂಬ ಹೆಸರಿನಿಂದ ಧ್ಯಾನಿಸಿರಿ. ನೀವೆಲ್ಲರೂ ಪ್ರಪಂಚಕ್ಕೆ ಕ್ಷೇಮವುಂಟಾಗುವಂತಹ ಕೆಲಸದಲ್ಲೇ ತೊಡಗಿರಿ. ಲೋಕಕಲ್ಯಾಣವನ್ನೇ ಬಯಸಿ ಅವರಿಗೆ ಅನುಕೂಲವಾಗಿ ನಡೆಯುವವರಿಗೆ ಉತ್ತಮವಾದ ಗತಿಯು ದೊರೆತೇ ದೊರೆಯುವುದು ಎಂದನು.

೩೭. ಸನತ್ಕುಮಾರನು ವ್ಯಾಸನನ್ನು ಕುರಿತು ಇಂತೆಂದನು :—ಓ ಮಹರ್ಷಿ, ಬಳಿಕ ಆ ಮಾಯಾವಿಯು, ಶಿವನ ಇಚ್ಛೆಯಂತೆ ನಡೆಯುವ ಆ ಶ್ರೀಹರಿಯನ್ನು ನಮಸ್ಕರಿಸಿ, ತನ್ನ ಶಿಷ್ಯರೊಡನೆ, ತಕ್ಷಣವೇ ತ್ರಿಪುರವನ್ನು ಕುರಿತು ಹೊರಟನು.

ಪ್ರವಿಶ್ಯ ತತ್ಪುರಂ ತೂರ್ಣಂ ವಿಷ್ಣುನಾ ನೋದಿತೋ ವಶೀ ।
ಮಹಾಮಾಯಾವಿನಾ ತೇನ ಋಷಿರ್ಮಾಯಾಂ ತದಾಕರೋತ್ ॥ ೩೮ ॥

ನಗರೋಪವನೇ ಕೃತ್ವಾ ಶಿಷ್ಯೈರ್ಯುಕ್ತಸ್ಸ್ಥಿತಿಂ ತದಾ ।
ಮಾಯಾಂ ಪ್ರವರ್ತಯಾಮಾಸ ಮಾಯಿನಾಮಪಿ ಮೋಹಿನೀಂ ॥ ೩೯ ॥

ಶಿವಾರ್ಚನಪ್ರಭಾವೇಣ ತನ್ಮಾಯಾ ಸಹಸಾ ಮುನೇ ।
ತ್ರಿಪುರೇ ನ ಚಚಲಾಶು ನಿರ್ವಿಣ್ಣೋಽಭೂತ್ತದಾ ಯತಿಃ ॥ ೪೦ ॥

ಅಥ ವಿಷ್ಣುಂ ಸ ಸಸ್ಮಾರ ತುಷ್ಟಾವ ಚ ಹೃದಾ ಬಹು ।
ನಷ್ಟೋತ್ಸಾಹೋ ವಿಚೇತಸ್ಕೋ ಹೃದಯೇನ ವಿದೂಯತಾ ॥ ೪೧ ॥

ತತ್ಸ್ಮೃತಸ್ತ್ವರಿತಂ ವಿಷ್ಣುಸ್ಸಸ್ಮಾರ ಹೃದಿ ಶಂಕರಂ ।
ಪ್ರಾಪ್ಯಾಜ್ಞಾಂ ಮನಸಾ ತಸ್ಯ ಸ್ಮೃತವಾನ್ನಾರದಂ ದ್ರುತಂ ॥ ೪೨ ॥

---

೩೮. ಮಹಾಮಾಯಾವಿಯಾದ ಶ್ರೀಹರಿಯಿಂದ ಪ್ರೇರೇಪಿಸಲ್ಪಟ್ಟ ಆ ಮಾಯಾಪುರುಷನು ಜಾಗ್ರತೆ ಆ ತ್ರಿಪುರವನ್ನು ಸೇರಿ, ಅಲ್ಲಿ ತನ್ನ ಮಾಯೆಯನ್ನು ಪ್ರಯೋಗಿಸತೊಡಗಿದನು.

೩೯. ಆ ನಗರದ ಬಳಿಯಿರುವ ಉದ್ಯಾನವೊಂದರಲ್ಲಿ ತನ್ನ ಶಿಷ್ಯರೊಡನೆ ಇಳಿದುಕೊಂಡು, ಮಾಯಾಶೀಲರಾದ ಆ ದೈತ್ಯರಿಗೂ ಮಂಕುಕವಿಯುವಂತೆ ತನ್ನ ಮಾಯೆಗೆ ಆರಂಭಿಸಿದನು.

೪೦. ಆ ತ್ರಿಪುರದಲ್ಲಿ ನಡೆಯುತ್ತಿದ್ದ ಶಿವಪೂಜಾ ಮಹಿಮೆಯಿಂದ ಈ ಮಾಯಾವಿಯು ಪ್ರಯೋಗಿಸಿದ ಮಾಯೆಯು ತಟಕ್ಕನೆ ಆ ನಗರದಲ್ಲಿ ತನ್ನ ಪ್ರಭಾವವನ್ನು ಬೀರಲಾಗಲಿಲ್ಲ. ಆಗ ಯತಿಯು ಬಹುವಾಗಿ ಮನಗುಂದಿದನು.

೪೧. ಬಳಿಕ ಆ ಯತಿಯು, ತಗ್ಗಿದ ಉತ್ಸಾಹದಿಂದಲೂ, ಕಳೆಗುಂದಿದ ಮನಸ್ಸಿನಿಂದಲೂ, ನೊಂದ ಹೃದಯದಿಂದಲೂ ಕೂಡಿ, ಒಮ್ಮನಸ್ಸಿನಿಂದ ವಿಷ್ಣುವನ್ನು ನೆನೆದು ಬಹುವಾಗಿ ಸ್ತೋತ್ರಮಾಡಿದನು.

೪೨. ಆ ಯತಿಯು ಸ್ಮರಿಸಲು ವಿಷ್ಣುವು ಬೇಗನೆ ತನ್ನ ಹೃದಯದಲ್ಲಿ ಶಿವನನ್ನು ಧ್ಯಾನಿಸಿದನು. ಆತನ ಅಪ್ಪಣೆಯನ್ನು ಪಡೆದುಕೊಂಡು, ತನ್ನ ಮನಸ್ಸಿನಲ್ಲಿ ಜಾಗ್ರತೆಯಾಗಿ ನಾರದನನ್ನು ನೆನೆಸಿಕೊಂಡನು.

ಸ್ಮೃತಮಾತ್ರೇಣ ವಿಷ್ಣೋಶ್ಚ ನಾರದಸ್ಸಮುಪಸ್ಥಿತಃ ।
ನತ್ವಾ ಸ್ತುತ್ವಾ ಪುರಸ್ತಸ್ಯ ಸ್ಥಿತೋಽಭೂತ್ಸಾಂಜಲಿಸ್ತದಾ ॥ ೪೩ ॥

ಅಥ ತಂ ನಾರದಂ ಪ್ರಾಹ ವಿಷ್ಣುರ್ಮತಿಮತಾಂ ವರಃ ।
ಲೋಕೋಪಕಾರನಿರತೋ ದೇವಕಾರ್ಯರತಸ್ಸದಾ ॥ ೪೪ ॥

ಶಿವಾಜ್ಞಯೋಚ್ಯತೇ ತಾತ ಗಚ್ಛ ತ್ವಂ ತ್ರಿಪುರಂ ದ್ರುತಂ ।
ಋಷಿಸ್ತತ್ರ ಗತಶ್ಶಿಷ್ಯೈರ್ಮೋಹಾರ್ಥಂ ತತ್ಸುವಾಸಿನಾಂ ॥ ೪೫ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ನಾರದೋ ಮುನಿಸತ್ತಮಃ ।
ಗತಸ್ತತ್ರ ದ್ರುತಂ ಯತ್ರ ಸ ಋಷಿರ್ಮಾಯಿನಾಂ ವರಃ ॥ ೪೬ ॥

ನಾರದೋಽಪಿ ತಥಾ ಮಾಯೀ ನಿಯೋಗಾನ್ಮಾಯಿನಃ ಪ್ರಭೋಃ ।
ಪ್ರವಿಶ್ಯ ತತ್ಪುರಂ ತೇನ ಮಾಯಿನಾ ಸಹ ದೀಕ್ಷಿತಃ ॥ ೪೭ ॥

---

೪೩. ವಿಷ್ಣುವು ಸ್ಮರಿಸಿದೊಡನೆಯೇ ನಾರದನು ಎದುರಿಗೆ ಬಂದು ನಮಸ್ಕರಿಸಿ ಸ್ತೋತ್ರಮಾಡುತ್ತಾ ಕೈಗಳನ್ನು ಮುಗಿದುಕೊಂಡು ನಿಂತುಕೊಂಡನು.

೪೪-೪೫. ಬಳಿಕ ಮಹಾಮೇಧಾವಿಯೂ, ಲೋಕಕ್ಕೆ ಉಪಕಾರವನ್ನು ಮಾಡುವುದರಲ್ಲೇ ಆಸಕ್ತನೂ, ದೇವತೆಗಳ ಕೆಲಸವನ್ನು ನೆರವೇರಿಸುವವನೂ ಆದ ವಿಷ್ಣುವು ನಾರದನನ್ನು ಕುರಿತು, ಅಪ್ಪಾ ನಾರದ, ಶಿವನ ಅಪ್ಪಣೆಯಂತೆ ಈ ಮಾತನ್ನು ಹೇಳುತ್ತಿದ್ದೇನೆ. ನೀನು ಬೇಗ ತ್ರಿಪುರವನ್ನು ಕುರಿತು ತೆರಳು, ಅಲ್ಲಿಯ ಜನರನ್ನು ಮರುಳುಗೊಳಿಸಲು ಮಾಯಾವಿಯಾದ ಋಷಿಯು ತನ್ನ ಶಿಷ್ಯರೊಡನೆ ಹೊರಟಿರುವನು ಎಂದನು.

೪೬. ಈ ಮಾತನ್ನು ಕೇಳಿ ಮುನಿಶ್ರೇಷ್ಠನಾದ ನಾರದನು, ಮಾಯಾವಿಗಳಲ್ಲಿ ಮೊದಲನೆಯವನಾದ ಆ ಯತಿಯು ಇರುವಲ್ಲಿಗೆ ಬೇಗನೆ ಹೋದನು.

೪೭-೪೮. ಮಾಯಾವಿಗಳಿಗೊಡೆಯನಾದ ವಿಷ್ಣುವಿನ ಅಪ್ಪಣೆಯಂತೆ, ಮಾಯಾವಿಯಾದ ಆ ನಾರದನೂ ಸಹ, ಆ ಮಾಯಾವಿಯಾದ ಯತಿಯೊಡನೆ, ಆ

ತತಶ್ಚ ನಾರದೋ ಗತ್ವಾ ತ್ರಿಪುರಾಧೀಶಸನ್ನಿಧೌ ।
ಕ್ಷೇಮಪ್ರಶ್ನಾದಿಕಂ ಕೃತ್ವಾ ರಾಜ್ಞೇ ಸರ್ವಂ ನ್ಯವೇದಯತ್ ॥ ೪೮ ॥

॥ ನಾರದ ಉವಾಚ ॥

ಕಶ್ಚಿತ್ಸಮಾಗತಶ್ಚಾತ್ರ ಯತಿರ್ಧರ್ಮಪರಾಯಣಃ ।
ಸರ್ವವಿದ್ಯಾಪ್ರಕೃಷ್ಟೋ ಹಿ ವೇದವಿದ್ಯಾಪರಾನ್ವಿತಃ ॥ ೪೯ ॥

ದೃಷ್ಟ್ವಾಶ್ಚ ಚ ಬಹವೋ ಧರ್ಮಾ ನೈತೇನ ಸದೃಶಾಃ ಪುನಃ ।
ವಯಂ ಸುದೀಕ್ಷಿತಾಶ್ಚಾತ್ರ ದೃಷ್ಟ್ವಾ ಧರ್ಮಂ ಸನಾತನಂ ॥ ೫೦ ॥

ತವೇಚ್ಛಾ ಯದಿ ವರ್ತೇತ ತದ್ಧರ್ಮೇ ದೈತ್ಯಸತ್ತಮ ।
ತದ್ಧರ್ಮಸ್ಯ ಮಹಾರಾಜ ಗ್ರಾಹ್ಯಾ ದೀಕ್ಷಾ ತ್ವಯಾ ಪುನಃ ॥ ೫೧ ॥

॥ ಸನತ್ಕುಮಾರ ಉವಾಚ ॥

ತದೀಯಂ ಸ ವಚಶ್ಶ್ರುತ್ವಾ ಮಹದರ್ಥಸುಗರ್ಭಿತಂ ।
ವಿಸ್ಮಿತೋ ಹೃದಿ ದೈತ್ಯೇಶೋ ಜಗೌ ತತ್ರ ವಿಮೋಹಿತಃ ॥ ೫೨ ॥

---

ಮಾಯಾಧರ್ಮದ ದೀಕ್ಷೆಯನ್ನು ವಹಿಸಿ, ಆ ತ್ರಿಪುರವನ್ನು ಪ್ರವೇಶಿಸಿ, ಆ ತ್ರಿಪುರದ ಅಧಿಪತಿಯ ಬಳಿಗೆ ಹೋಗಿ ಆತನ ಕುಶಲಪ್ರಶ್ನೆಯನ್ನು ಮಾಡಿ, ತಾನು ಬಂದ ವಿಷಯವನ್ನು ತಿಳಿಸಿದನು.

೪೯-೫೧. ಓ ದೈತ್ಯೇಂದ್ರ, ಇಲ್ಲಿಗೆ ಧರ್ಮನಿರತನಾದ ಯತಿಯೊಬ್ಬನು ಬಂದಿರುವನು. ಆತನು ಎಲ್ಲ ವಿದ್ಯೆಗಳನ್ನೂ ಬಲ್ಲವನು. ವೇದಶಾಸ್ತ್ರಗಳಲ್ಲಿ ನಿಷ್ಣಾತನು. ನಾನೂ ಅನೇಕ ಧರ್ಮಗಳನ್ನು ಕಂಡಿರುವೆನು. ಆದರೆ ಇದನ್ನು ಹೋಲುವ ಬೇರೊಂದು ಧರ್ಮವನ್ನು ಕಾಣೆನು. ಇದೇ ಸನಾತನವಾದ ಧರ್ಮವೆಂದು ಬಗೆದು ನಾನೂ ಈ ಧರ್ಮದ ದೀಕ್ಷೆಯನ್ನು ಕೈಗೊಂಡಿದ್ದೇನೆ. ಓ ದೈತ್ಯರಾಜ, ನಿನಗೆ ಅಪೇಕ್ಷೆಯಾದರೆ ನೀನೂ ಸಹ ಈ ಧರ್ಮದಲ್ಲಿ ದೀಕ್ಷೆಯನ್ನು ಕೈಗೊಳ್ಳುವವನಾಗು ಎಂದು ಹೇಳಿದನು.

೫೨-೫೪. ಸನತ್ಕುಮಾರನು ಹೇಳಿದನು:—ಓ ವ್ಯಾಸ, ಈ ರೀತಿಯಾಗಿ ಮಹತ್ತಾದ ಅರ್ಥವನ್ನೊಳಗೊಂಡ ನಾರದನ ಮಾತನ್ನು ಕೇಳಿ, ಆ ತ್ರಿಪುರಾಧೀಶನು

ನಾರದೋ ದೀಕ್ಷಿತೋ ಯಸ್ಮಾದ್ವಯಂ ದೀಕ್ಷಾಮವಾಪ್ನುಮಃ ।
ಇತ್ಯೇವಂ ಚ ವಿದಿತ್ವಾ ವೈ ಜಗಾಮ ಸ್ವಯಮೇವ ಹ ॥ ೩೩ ॥

ತದ್ರೂಪಂ ಚ ತದಾ ದೃಷ್ಟ್ವಾ ಮೋಹಿತೋ ಮಾಯಯಾ ತಥಾ ।
ಉವಾಚ ವಚನಂ ತಸ್ಮೈ ನಮಸ್ಕೃತ್ಯ ಮಹಾತ್ಮನೇ ॥ ೩೪ ॥

॥ ತ್ರಿಪುರಾಧಿಪ ಉವಾಚ ॥

ದೀಕ್ಷಾ ದೇಯಾ ತ್ವಯಂ ಮಹ್ಯಂ ನಿರ್ಮಲಾಶಯ ಭೋ ಋಷೇ ।
ಅಹಂ ಶಿಷ್ಯೋ ಭವಿಷ್ಯಾಮಿ ಸತ್ಯಂ ಸತ್ಯಂ ನ ಸಂಶಯಃ ॥ ೩೫ ॥

ಇತ್ಯೇವಂ ತು ವಚಶ್ಶ್ರುತ್ವಾ ದೈತ್ಯರಾಜಸ್ಯ ನಿರ್ಮಲಂ ।
ಪ್ರತ್ಯುವಾಚ ಸುಯತ್ನೇನ ಋಷಿಸ್ಸ ಚ ಸನಾತನಃ ॥ ೩೬ ॥

ಮದೀಯಾ ಕರಣೀಯಾ ಸ್ಯಾದ್ಯದ್ಯಾಜ್ಞಾ ದೈತ್ಯಸತ್ತಮ ।
ತದಾ ದೇಯಾ ಮಯಾ ದೀಕ್ಷಾ ನಾನ್ಯಥಾ ಕೋಟಿಯತ್ನತಃ ॥ ೩೭ ॥

---

ಹೃದಯದಲ್ಲಿ ಬಹಳ ಹರ್ಷವನ್ನು ತಾಳಿ, ಆ ಧರ್ಮದಲ್ಲಿ ಮೋಹಿತನಾದನು. ಬಳಿಕ ನಾರದನಂತಹವನೂ ಆ ಧರ್ಮದ ದೀಕ್ಷೆಯನ್ನು ವಹಿಸಿರುವನೆಂದ ಮೇಲೆ ನಾವೂ ಆ ದೀಕ್ಷೆಯನ್ನು ಕೈಗೊಳ್ಳೋಣ ಎಂದು ಮನಸ್ಸಿನಲ್ಲಿ ನಿರ್ಧರಿಸಿ, ಆ ಕಪಟಯತಿಯು ಇರುವಲ್ಲಿಗೆ ತಾನೇ ಹೋಗಿ, ಆತನ ವೇಷವನ್ನು ಕಂಡು, ಆತನ ಮಾಯೆಗೆ ಸಿಲುಕಿ ಆ ಮಹಾತ್ಮನಿಗೆ ನಮಸ್ಕಾರವನ್ನು ಮಾಡಿ, ಈರೀತಿ ನುಡಿದನು.

೩೫. ಎಲೈ ನಿರ್ಮಲಾಂತಃಕರಣನಾದ ಋಷಿವರ್ಯನೇ, ನೀನು ನನಗೆ ಈ ಧರ್ಮದ ದೀಕ್ಷೆಯನ್ನು ಅನುಗ್ರಹಿಸು. ನಾನು ನಿನ್ನ ಶಿಷ್ಯನಾಗುವೆನು. ಇದರಲ್ಲಿ ಸ್ವಲ್ಪವೂ ಸಂದೇಹಬೇಡ, ಇದು ಸತ್ಯವಾದುದು, ನಿಜವಾದುದು ಎಂದನು.

೩೬-೩೭. ಹೀಗೆ ಕಪಟವಿಲ್ಲದೆ ನುಡಿದ ತ್ರಿಪುರಾಧಿಪತಿಯ ಮಾತನ್ನು ಕೇಳಿ ತನ್ನ ಪ್ರಯತ್ನವು ಸುಲಭವಾಯಿತೆಂದು ತಿಳಿದು ಆ ಸನಾತನನಾದ ಮುನಿಯು, ಆ ದೈತ್ಯರಾಜನನ್ನು ಕುರಿತು, ಓ ದೈತ್ಯಾಗ್ರಣೀ, ನೀನು ನನ್ನ ಅಪ್ಪಣೆಯನ್ನು ಪಾಲಿಸು ವುದೇ ಆದರೆ ನಾನು ಈ ಧರ್ಮದ ದೀಕ್ಷೆಯನ್ನು ಕೊಡುವೆನು. ಹಾಗಲ್ಲದೆ ಇದ್ದರೆ, ನೀನು ಬೇರೆ ಕೋಟಿಗಟ್ಟಲೆ ಪ್ರಯತ್ನಪಟ್ಟರೂ ದೀಕ್ಷೆಯನ್ನು ಕೊಡಲು ಸಾಧ್ಯ ವಿಲ್ಲ ಎಂದನು.

ಇತ್ಯೇವಂ ತು ವಚಶ್ಶ್ರುತ್ವಾ ರಾಜಾ ಮಾಯಾಮಾಯೋಽಭವತ್ ।
ಉವಾಚ ವಚನಂ ಶೀಘ್ರಂ ಯತಿಂ ತಂ ಹಿ ಕೃತಾಂಜಲಿಃ ॥ ೫೮ ॥

॥ ದೈತ್ಯ ಉವಾಚ ॥

ಯಥಾಜ್ಞಾಂ ದಾಸ್ಯಸಿ ತ್ವಂ ಚ ತತ್ತಥೈವ ನ ಚಾನ್ಯಥಾ ।
ತ್ವದಾಜ್ಞಾಂ ನೋಲ್ಲಂಘಯಿಷ್ಯೇ ಸತ್ಯಂ ಸತ್ಯಂ ನ ಸಂಶಯಃ ॥ ೫೯ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ತ್ರಿಪುರಾಧೀಶಿತುಸ್ತದಾ ।
ದೂರೀಕೃತ್ಯ ಮುಖಾದ್ವಸ್ತ್ರಮುವಾಚ ಋಷಿಸತ್ತಮಃ ॥ ೬೦ ॥

ದೀಕ್ಷಾಂ ಗೃಹ್ಣೀಷ್ವ ದೈತ್ಯೇಂದ್ರ ಸರ್ವಧರ್ಮೋತ್ತಮೋತ್ತಮಾಂ ।
ಯೇನ ದೀಕ್ಷಾವಿಧಾನೇನ ಪ್ರಾಪ್ಸ್ಯಸಿ ತ್ವಂ ಕೃತಾರ್ಥತಾಂ ॥ ೬೧ ॥

---

೫೮. ಈ ರೀತಿ ಯತಿಯು ಆಡಿದ ಮಾತನ್ನು ಕೇಳಿ ಆ ದೈತ್ಯರಾಜನು ಮಾಯೆಗೆ ಒಳಗಾಗಿ, ಕೈಗಳನ್ನು ಮುಗಿದುಕೊಂಡು, ಆ ಯತಿಯನ್ನು ಕುರಿತು ಬೇಗನೆ ಇಂತೆಂದನು.

೫೯. ನೀನು ಯಾವರೀತಿ ಅಪ್ಪಣೆಯನ್ನೀಯುವೆಯೋ ಅದನ್ನು ಹಾಗೆಯೇ ನಡೆಸುವೆನು, ಬದಲಾಯಿಸುವುದಿಲ್ಲ, ಆದನ್ನೆಂದಿಗೂ ಮೀರುವುದಿಲ್ಲ, ಇದು ಸತ್ಯ, ಖಂಡಿತವಾಗಿಯೂ ಸತ್ಯ, ಸ್ವಲ್ಪವೂ ಸಂಶಯಬೇಡ ಎಂದನು.

೬೦. ಓ ವ್ಯಾಸ ಮಹರ್ಷೀ, ಹೀಗೆ ತ್ರಿಪುರಾಧಿಪತಿಯು ಆಡಿದ ಮಾತನ್ನು ಕೇಳಿ, ಆ ಮಾಯಾಮುನಿಯು ಮುಖಕ್ಕೆ ಕಟ್ಟಿದ್ದ ಬಟ್ಟೆಯನ್ನು ತೆಗೆದು ಈ ರೀತಿ ಹೇಳತೊಡಗಿದನು.

೬೧. ಓ ದೈತ್ಯೇಂದ್ರ! ಈ ದೀಕ್ಷೆಯನ್ನು ಕೈಗೊಂಡರೆ ನೀನು ಕೃತಕೃತ್ಯನಾಗುವೆ. ಇದು ಎಲ್ಲಾ ಧರ್ಮಗಳಿಗಿಂತಲೂ ಉತ್ತಮೋತ್ತಮುವಾದ ಧರ್ಮವು. ಈ ದೀಕ್ಷೆಯನ್ನು ವಹಿಸುವವನಾಗು ಎಂದನು.

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಸ ತು ಮಾಯಾವೀ ದೈತ್ಯರಾಜಾಯ ಸತ್ವರಂ ।
ದದೌ ದೀಕ್ಷಾಂ ಸ್ವಧರ್ಮೋಕ್ತಾಂ ತಸ್ಮೈ ವಿಧಿವಿಧಾನತಃ ॥ ೬೨ ॥

ದೈತ್ಯರಾಜೇ ದೀಕ್ಷಿತೇ ಚ ತಸ್ಮಿನ್ ಸಸಹಜೇ ಮುನೇ ।
ಸರ್ವೇ ಚ ದೀಕ್ಷಿತಾ ಜಾತಾಸ್ತತ್ರ ತ್ರಿಪುರವಾಸಿನಃ ॥ ೬೩ ॥

ಮುನೇಃ ಶಿಷ್ಯೈಃ ಪ್ರಶಿಷ್ಯೈಶ್ಚ ವ್ಯಾಪ್ತಮಾಸೀದ್ದ್ರುತಂ ತದಾ ।
ಮಹಾಮಾಯಾವಿನಸ್ತತ್ತು ತ್ರಿಪುರಂ ಸಕಲಂ ಮುನೇ ॥ ೬೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಸನತ್ಕುಮಾರಪಾರಾಶರ್ಯ
ಸಂವಾದೇ ತ್ರಿಪುರದೀಕ್ಷಾವಿಧಾನಂನಾಮ
ಚತುರ್ಥೋಽಧ್ಯಾಯಃ.

---

೬೨. ಓ ವ್ಯಾಸ, ಹೀಗೆಂದು ಹೇಳಿ ಆ ಮಾಯಾಮುನಿಯು, ತ್ರಿಪುರಾಧಿಪತಿಯಾದ ಆ ದೈತ್ಯರಾಜನಿಗೆ ತನ್ನ ಧರ್ಮದಲ್ಲಿ ಹೇಳಿರುವಂತೆ, ವಿಧಿಪೂರ್ವಕವಾಗಿ ದೀಕ್ಷೆಯನ್ನು ಕೊಟ್ಟನು.

೬೩. ಈರೀತಿ ತನ್ನ ತಮ್ಮಂದಿರೊಡನೆ ದೈತ್ಯರಾಜನು ಮಾಯಾಧರ್ಮದ ದೀಕ್ಷೆಯನ್ನು ಕೈಗೊಂಡಮೇಲೆ, ಆ ಪುರತ್ರಯದಲ್ಲಿ ವಾಸವಾಗಿದ್ದ ದೈತ್ಯರೆಲ್ಲರೂ ಆ ಧರ್ಮದಲ್ಲಿ ದೀಕ್ಷೆಯನ್ನು ವಹಿಸಿದರು.

೬೪. ಆಗ ಆ ಮಹಾಮಾಯಾವಿಯಾದ ಮುನಿಯ ಶಿಷ್ಯರಿಂದಲೂ, ಅವರ ಶಿಷ್ಯರಿಂದಲೂ ಬಹು ಬೇಗನೆ ಆ ಪುರತ್ರಯವೆಲ್ಲವೂ ತುಂಬಿಹೋಯಿತು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ ಐದನೆಯ
ಯುದ್ಧಖಂಡದಲ್ಲಿ ಸನತ್ಕುಮಾರ ವ್ಯಾಸಸಂವಾದಲ್ಲಿ ತ್ರಿಪುರದೀಕ್ಷಾ
ವಿಧಾನವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

---

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಪಂಚಮೋಽಧ್ಯಾಯಃ

---

॥ ವ್ಯಾಸ ಉವಾಚ ॥

ದೈತ್ಯರಾಜೇ ದೀಕ್ಷಿತೇ ಚ ಮಾಯಿನಾ ತೇನ ಮೋಹಿತೇ ।
ಕಿಮುವಾಚ ತದಾ ಮಾಯೀ ಕಿಂ ಚಕಾರ ಸ ದೈತ್ಯಪಃ ॥ ೧ ॥

॥ ಸನತ್ಕುಮಾರ ಉವಾಚ ॥

ದೀಕ್ಷಾಂ ದತ್ವಾ ಯತಿಸ್ತಸ್ಮಾ ಅರಿಹನ್ನಾರದಾದಿಭಿಃ ।
ಶಿಷ್ಯೈಸ್ಸೇವಿತಪಾದಾಬ್ಜೋ ದೈತ್ಯರಾಜಾನಮಬ್ರವೀತ್ ॥ ೨ ॥

---

### ಐದನೆಯ ಅಧ್ಯಾಯವು.

೧. ವ್ಯಾಸನು ಮತ್ತೆ ಸನತ್ಕುಮಾರನನ್ನು ಕುರಿತು ಇಂತು ಕೇಳಿದನು :— ತ್ರಿಪುರಾಧಿಪತಿಯು ಮಾಯಾವಿಯಾದ ಆಕಪಟಯತಿಯಿಂದ ಮರುಳುಗೊಳಿಸಲ್ಪಟ್ಟು ಆ ಮಾಯಾಧರ್ಮದಲ್ಲಿ ದೀಕ್ಷಿತನಾದಮೇಲೆ ಆ ಮಾಯಾಮುನಿಯು ಏನು ಹೇಳಿದನು? ಅವನ ಹೇಳಿಕೆಯಂತೆ ದೈತ್ಯರಾಜನಾದರೂ ಏನುಮಾಡಿದನು ಎಂದು ಕೇಳಲು,

೨. ಸನತ್ಕುಮಾರನು ಹೇಳಿದನು :—ದೈತ್ಯರಾಜನಿಗೆ ದೀಕ್ಷೆಯನ್ನಿತ್ತಮೇಲೆ ಅರಿಹನ್ನೆಂಬ ಆ ಯತಿಯು ನಾರದಾದಿ ಶಿಷ್ಯರಿಂದ ಸೇವೆಯನ್ನು ಕೈಗೊಳ್ಳುತ್ತಾ ಆ ದೈತ್ಯರಾಜನನ್ನು ಕುರಿತು ಈರೀತಿ ಹೇಳಿದನು.

॥ ಅರಿಹನ್ನುವಾಚ ॥

ಶೃಣು ದೈತ್ಯಪತೇ ವಾಕ್ಯಂ ಮಮ ಸಂಜ್ಞಾನಗರ್ಭಿತಂ ।
ವೇದಾಂತಸಾರಸರ್ವಸ್ವಂ ರಹಸ್ಯಂ ಪರಮೋತ್ತಮಂ ॥ ೩ ॥

ಅನಾದಿಸಿದ್ಧಸ್ಸಂಸಾರಃ ಕರ್ತೃಕರ್ಮನಿವರ್ಜಿತಃ ।
ಸ್ವಯಂ ಪ್ರಾದುರ್ಭವತ್ಯೇವ ಸ್ವಯಮೇವ ವಿಲೀಯತೇ ॥ ೪ ॥

ಬ್ರಹ್ಮಾದಿಸ್ತಂಬಪರ್ಯಂತಂ ಯಾವದ್ದೇಹನಿಬಂಧನಂ ।
ಆತ್ಮೈವೈಕೇಶ್ವರಸ್ತತ್ರ ನ ದ್ವಿತೀಯಸ್ತದೀಶಿತಾ ॥ ೫ ॥

ಯಂದ್ವ್ರಹ್ಮವಿಷ್ಣುರುದ್ರಾಖ್ಯಾ ತಪಾಖ್ಯಾ ದೇಹಿನಾಮಿಮಾಃ ।
ಆಖ್ಯಾ ಯಥಾಸ್ಮದಾದೀನಾಮರಿಹನ್ನಾದಿರುಚ್ಯತೇ ॥ ೬ ॥

ದೇಹೋ ಯಥಾ ಸ್ಮದಾದೀನಾಂ ಸ್ವಕಾಲೇನ ವಿಲೀಯತೇ ।
ಬ್ರಹ್ಮಾದಿಮಶಕಾಂತಾನಾಂ ಸ್ವಕಾಲಾಲ್ಲೀಯತೇ ತಥಾ ॥ ೭ ॥

---

೩. ಓ ದೈತ್ಯೇಂದ್ರ, ಪರಿಪಕ್ವವಾದ ಜ್ಞಾನದಿಂದ ಪರಿಪೂರ್ಣವಾದ ವೇದಾಂತದಸಾರವೆಲ್ಲದರ ನಿಧಿಯುಂತಿರುವ, ಪರಮಶ್ರೇಷ್ಠವೂ ರಹಸ್ಯವೂ ಆದ ನನ್ನ ಮಾತನ್ನು ಕೇಳು.

೪. ಈ ಸಂಸಾರವು ಮೊದಲಿಲ್ಲದುದು. ಇಲ್ಲಿ ಸೃಷ್ಟಿಮಾಡುವವನೂ ಸೃಷ್ಟಿಮಾಡಲ್ಪಡತಕ್ಕುದೂ ಒಂದೂ ಇಲ್ಲ. ಎಲ್ಲವೂ ತಾನಾಗಿಯೇ ಹುಟ್ಟುವುದು. ತಾನಾಗಿಯೇ ಅಣಗುವುದು.

೫. ಬ್ರಹ್ಮನು ಮೊದಲು ಹುಲ್ಲುಕಡ್ಡಿಯವರೆಗೂ ತನ್ನ ದೇಹವಿರುವವರೆಗೂ ತನಗೆ ತಾನೇ ಸ್ವಾಮಿಯೇ ಹೊರತು ಮತ್ತೊಬ್ಬನು ಸ್ವಾಮಿಯಲ್ಲ.

೬. ಹಾಗಾದರೆ ಬ್ರಹ್ಮವಿಷ್ಣುಮಹೇಶ್ವರರೆನ್ನುವರಷ್ಟೆ? ಅವರು ಯಾರು ಎನ್ನುವಿಯೋ ಕೇಳು. ನಮ್ಮಂತಹವರಿಗೆ "ಅರಿಹ" ಎಂದು ಮೊದಲಾದ ಹೆಸರು ಇರುವಂತೆ ಕೆಲವು ಮುಂದಿ ದೇಹಿಗಳಿಗೆ ಆರೀತಿ ಹೆಸರು ಇರುವುದು. ಅಷ್ಟೆ.

೭. ತನ್ನ ಕಾಲಬಂದೊಡನೆ ನಮ್ಮೆಲ್ಲರ ದೇಹಗಳು ನಶಿಸಿಹೋಗುವಂತೆ ಬ್ರಹ್ಮನನ್ನು ಹಿಡಿದು ಸೊಳ್ಳೆಯವರಿಗೆ ಪ್ರತಿಯೊಂದು ಪ್ರಾಣಿಯ ದೇಹವೂ ಸಹ ನಶಿಸಿಹೋಗುವುದು.

ವಿಚಾರ್ಯಮಾಣೇ ದೇಹೇಽಸ್ಮಿನ್ನ ಕಿಂಚಿದಧಿಕಂ ಕ್ವಚಿತ್ ।
ಆಹಾರೋ ಮೈಥುನಂ ನಿದ್ರಾ ಭಯಂ ಸರ್ವತ್ರ ಯತ್ಸಮಂ ॥ ೮ ॥

ನಿರಾಹಾರಪರೀಮಾಣಂ ಪ್ರಾಪ್ಯ ಸರ್ವೋ ಹಿ ದೇಹಭೃತ್ ।
ಸದೃಶೀಮೇವ ಸಂತೃಪ್ತಿಂ ಪ್ರಾಪ್ನುಯಾನ್ನಾಧಿಕೇತರಾಂ ॥ ೯ ॥

ಯಥಾ ವಿತೃಷಿತಾಸ್ಸ್ಯಾಮ ಪೀತ್ವಾ ಪೇಯಂ ಮುದಾ ವಯಂ ।
ತೃಷಿತಾಸ್ತು ತಥಾನ್ಯೇಽಪಿ ನ ವಿಶೇಷೋಽಲ್ಪಕೋಽಧಿಕಃ ॥ ೧೦ ॥

ಸಂತು ನಾರ್ಯಸ್ಸಹಸ್ರಾಣಿ ರೂಪಲಾವಣ್ಯಭೂಮಯಃ ।
ಪರಂ ನಿಧುವನೇ ಕಾಲೇ ಹ್ಯೇಕೈವೇಹೋಪಯುಜ್ಯತೇ ॥ ೧೧ ॥

---

೮. ವಿಚಾರಮಾಡಿನೋಡಿದಲ್ಲಿ ವಿಶೇಷವಾದ ಯಾವುದೊಂದು ಅಂಶವೂ ಈ ದೇಹದಲ್ಲಿ ಹೆಚ್ಚಾಗಿಲ್ಲ. ಏಕೆಂದರೆ, ಆಹಾರ, ನಿದ್ರೆ, ಭಯ, ಮೈಥುನಾದಿಗಳು ಎಲ್ಲರಿಗೂ ಒಂದೇ ಸಮನಾಗಿವೆ.

೯. ಪ್ರತಿಯೊಬ್ಬ ಶರೀರಿಯೂ ಸಹ ಆಹಾರಾದಿಗಳಲ್ಲಿ ಹೆಚ್ಚುಕಮ್ಮಿಯೆಂಬ ಪರಿಮಾಣ ವ್ಯತ್ಯಾಸವಿಲ್ಲದಂತೆ ಸಮಾನವಾದ ಸಂತೃಪ್ತಿಯನ್ನು ಪಡೆಯುವನೇ ವಿನಾ ಹೆಚ್ಚುಕಮ್ಮಿಯಾಗಿ ಪಡೆಯುವುದಿಲ್ಲ.

೧೦. ನೀರಡಿಕೆಯಾದರೆ ನೀರು ಮುಂತಾದ ಪಾನೀಯಗಳನ್ನು ಕುಡಿದು ಬಾಯಾರಿಕೆಯನ್ನು ಅಣಗಿಸಿಕೊಂಡು ನಾವು ಸಂತೋಷದಿಂದ ಇರುವಹಾಗೆಯೇ ಮತ್ತೊಬ್ಬರೂ ಸಹ ಅದೇರೀತಿ ಇರುವರು. ಅಷ್ಟೇ ಹೊರತು ಎಳ್ಳುಕಾಳಿನಷ್ಟು ಹೆಚ್ಚು ವಿಶೇಷವೂ ಅವರಿಗಿಲ್ಲ. ಹುಡುಗ ಮತ್ತು ದೊಡ್ಡವನು ಕುಡಿಯುವ ನೀರುಗಳ ಪ್ರಮಾಣವು ಹೆಚ್ಚುಕಮ್ಮಿಯಾಗಿದ್ದರೂ ಅವರೀರ್ವರಿಗೂ ನೀರನ್ನುಕುಡಿದು ದರಿಂದ ಉಂಟಾದ ತೃಪ್ತಿಯು ಮಾತ್ರ ಸಮಾನವಾದುದೇ ಆಗಿರುವುದು.

೧೧. ರೂಪದಲ್ಲಿಯೂ ಲಾವಣ್ಯದಲ್ಲಿಯೂ ಹೆಸರುವಾಸಿಯಾದ ಸಾವಿರಾರು ಮಂದಿ ಸ್ತ್ರೀಯರು ಇರಬಹುದು, ಇರಲಿ. ಆದರೆ ಸಂಭೋಗ ಸಮಯದಲ್ಲಿ ಎಲ್ಲರೂ ಒಬ್ಬೊಬ್ಬಳನ್ನು ಅಪೇಕ್ಷಿಸುವರೇ ವಿನಾ ಇಬ್ಬರನ್ನಲ್ಲ.

ಅಶ್ವಾಃ ಪರಶ್ಶತಾಸ್ಸಂತು ಸಂತ್ವನೇಕೇऽಪ್ಯನೇಕಧಾ ।
ಅಧಿರೋಹೇ ಶಥಾಪ್ಯೇಕೋ ನ ದ್ವಿತೀಯಸ್ತಥಾತ್ಮನಃ ॥ ೧೨ ॥

ಪರ್ಯಂಕಶಾಯಿನಾಂ ಸ್ವಾಪೇ ಸುಖಂ ಯದುಪಜಾಯತೇ ।
ತದೇವ ಸೌಖ್ಯಂ ನಿದ್ರಾಭಿಭೂತಭೂಶಾಯಿನಾಮಪಿ ॥ ೧೩ ॥

ಯಥೈವ ಮರಣಾದ್ಭೀತಿರಸ್ಮದಾದಿವಪುಷ್ಮತಾಂ ।
ಬ್ರಹ್ಮಾದಿಕೀಟಕಾಂತಾನಾಂ ತಥಾ ಮರಣತೋ ಭಯಂ ॥ ೧೪ ॥

ಸರ್ವೇ ತನುಭೃತಸ್ತುಲ್ಯಾ ಯದಿ ಬುದ್ಧ್ಯಾ ವಿಚಾರ್ಯತೇ ।
ಇದಂ ನಿಶ್ಚಿತ್ಯ ಕೇನಾಪಿ ನೋ ಹಿಂಸ್ಯಃ ಕೋऽಪಿ ಕುತ್ರಚಿತ್ ॥ ೧೫ ॥

ಧರ್ಮೋ ಜೀವದಯಾತುಲ್ಯೋ ನ ಕ್ವಾಪಿ ಜಗತೀತಲೇ ।
ತಸ್ಮಾತ್ಸರ್ವಪ್ರಯತ್ನೇನ ಕಾರ್ಯಾ ಜೀವದಯಾ ನೃಭಿಃ ॥ ೧೬ ॥

---

೧೨. ಕುದುರೆಗಳು ನೂರಾರು ಇವೆ. ಅವೂ ನಾನಾಜಾತಿಗಳು, ನಾನಾವಿಧಗಳು. ಆದರೂ ತನಗೆ ಸವಾರಿಗೆ ಬೇಕಾದುದು ಒಂದು ಕುದುರೆಯೇ ಹೊರತು ಎರಡಲ್ಲ.

೧೩. ಮಂಚದಮೇಲೆಯೇ ಮಲಗಿ ಅಭ್ಯಾಸವಾಗಿರುವವರಿಗೆ ಮಂಚದಮೇಲೆ ಮಲಗಿ ನಿದ್ದೆಮಾಡಿದರೆ ಏನು ಸುಖವುಂಟಾಗುವುದೋ ಹಾಗೆಯೇ ನಿದ್ದೆ ಬಂದಾಗ ನೆಲದಮೇಲೆ ಮಲಗಿ ನಿದ್ದೆಮಾಡುವವರಿಗೂ ಆದರಂತೆಯೇ ಸುಖವಾಗುವುದು.

೧೪. ನಮ್ಮಂಥವರು ಸಾವಿಗೆ ಹೇಗೆ ಅಂಜುವರೋ ಹಾಗೆಯೇ ಬ್ರಹ್ಮನಿಂದ ಹಿಡಿದು ಕೀಟದವರೆಗೆ ಎಲ್ಲರೂ ಸಾವಿಗೆ ಹೆದರುವರು.

೧೫. ಬುದ್ಧಿಪೂರ್ವಕವಾಗಿ ವಿಚಾರಮಾಡಿ ನೋಡಿದರೆ ಶರೀರಿಗಳೆಲ್ಲಾ ಸಮಾನರೇ ಹೊರತು ಬೇರೆಯಿಲ್ಲ. ಹೀಗೆ ತಿಳಿದು ಯಾವನೂ ಎಲ್ಲಿಯೂ ಯಾವ ಪ್ರಾಣಿಯನ್ನೂ ಹಿಂಸಿಸಬಾರದು.

೧೬. ಈ ಜಗತ್ತಿನಲ್ಲಿ ಪ್ರಾಣಿದಯೆಗೆ ಸಮಾನವಾದ ಬೇರೊಂದು ಧರ್ಮವಿಲ್ಲ. ಆದ್ದರಿಂದ ಮನುಷ್ಯನಾದವನು ಎಲ್ಲ ಪ್ರಕಾರದಿಂದಲೂ ಪ್ರಾಣಿಗಳಲ್ಲಿ ದಯೆಯನ್ನು ತೋರಬೇಕು.

ಏಕಸ್ಮಿನ್ ರಕ್ಷಿತೇ ಜೀವೇ ತ್ರೈಲೋಕ್ಯಂ ರಕ್ಷಿತಂ ಭವೇತ್ ।
ಘಾತಿತೇ ಘಾತಿತಂ ತದ್ವತ್ತಸ್ಮಾದ್ರಕ್ಷೇನ್ನ ಘಾತಯೇತ್ ॥ ೧೭ ॥

ಅಹಿಂಸಾ ಪರಮೋ ಧರ್ಮಃ ಪಾಪಮಾತ್ಮಪ್ರಪೀಡನಂ ।
ಅಪರಾಧೀನತಾ ಮುಕ್ತಿಸ್ಸ್ವರ್ಗೋಽಭಿಲಾಷಿತಾಶನಂ ॥ ೧೮ ॥

ಪೂರ್ವಸೂರಿಭಿರುತ್ಯುಕ್ತಂ ಸತ್ಪ್ರಮಾಣತಯಾ ಧ್ರುವಂ ।
ತಸ್ಮಾನ್ನ ಹಿಂಸಾ ಕರ್ತವ್ಯಾ ನರೈರ್ನರಕಭೀರುಭಿಃ ॥ ೧೯ ॥

ನ ಹಿಂಸಾಸದೃಶಂ ಪಾಪಂ ತ್ರೈಲೋಕ್ಯೇ ಸಚರಾಚರೇ ।
ಹಿಂಸಕೋ ನರಕಂ ಗಚ್ಛೇತ್ಸ್ವರ್ಗಂ ಗಚ್ಛೇದಹಿಂಸಕಃ ॥ ೨೦ ॥

ಸಂತಿ ದಾನಾನ್ಯನೇಕಾನಿ ಕಿಂ ತೈಸ್ತುಚ್ಛಫಲಪ್ರದೈಃ ।
ಅಭೀತಿಸದೃಶಂ ದಾನಂ ಪರಮೇಕಮಪೀಹ ನ ॥ ೨೧ ॥

---

೧೭. ಒಂದು ಜೀವವನ್ನು ಕಾಪಾಡಿದರೆ ಮೂರುಲೋಕವನ್ನೂ ಕಾಪಾಡಿದಂತೆ. ಒಂದು ಜೀವವನ್ನು ಕೊಂದರೆ ಮೂರುಲೋಕವನ್ನೂ ಕೊಂದಂತೆ. ಆದುದರಿಂದ ಸಲಹಬೇಕೇ ವಿನಾ ಹಿಂಸೆಮಾಡತಕ್ಕುದಲ್ಲ.

೧೮. ಅಹಿಂಸೆಯೇ ಶ್ರೇಷ್ಠವಾದ ಧರ್ಮ. ಜೀವಹಿಂಸೆಯೇ ಪಾಪ. ಮತ್ತೊಬ್ಬರ ಕೈಕೆಳಗೆ ಇರದಿರುವ ಸ್ವಾತಂತ್ರ್ಯವೇ ಮೋಕ್ಷ. ತನಗೆ ಇಷ್ಟವಾದುದನ್ನು ಅನುಭವಿಸುವುದೇ ಸ್ವರ್ಗ.

೧೯. ಹೀಗೆಂಬುದಾಗಿ ಹಿಂದಿನ ಹಿರಿಯರೆಲ್ಲರೂ ಪ್ರಮಾಣವಾಗಿ ಮೇಲಿನ ಮಾತುಗಳನ್ನು ಹೇಳಿರುವರು. ಆದುದರಿಂದ ನರಕಕ್ಕೆ ಹೆಸುವ ಯಾವ ಮಾನವನೂ ಹಿಂಸೆಯನ್ನು ಮಾಡಬಾರದು.

೨೦. ಚರಾಚರಾತ್ಮಕವಾದ ಮೂರುಲೋಕದಲ್ಲಿ ಈ ಹಿಂಸೆಯಂತಹ ಪಾಪವು ಇನ್ನೊಂದಿಲ್ಲ. ಹಿಂಸಾನಿರತನು ನರಕಕ್ಕೆ ಹೋಗುವನು. ಅಹಿಂಸಾಪರಾಯಣನು ಸ್ವರ್ಗಕ್ಕೆ ತೆರಳುವನು.

೨೧. ದಾನಗಳು ಬೇಕಾದಷ್ಟಿವೆ. ಅಲ್ಪಫಲವನ್ನು ನೀಡುವ ಅವುಗಳು ಎಷ್ಟಿದ್ದರೆ ಏನು ? ಅಭಯಕ್ಕೆ ಸಮನಾದುದು ಬೇರೊಂದಿಲ್ಲ.

ಇಹ ಚತ್ವಾರಿ ದಾನಾನಿ ಪ್ರೋಕ್ತಾನಿ ಪರಮರ್ಷಿಭಿಃ ।
ವಿಚಾರ್ಯ ನಾನಾಶಾಸ್ತ್ರಾಣಿ ಶರ್ಮಣೇಽತ್ರ ಪರತ್ರ ಚ ॥ ೨೨ ॥

ಭೀತೇಭ್ಯಶ್ಚಾಭಯಂ ದೇಯಂ ವ್ಯಾಧಿತೇಭ್ಯಸ್ತಥೌಷಧಂ ।
ದೇಯಾ ವಿದ್ಯಾರ್ಥಿನಾಂ ವಿದ್ಯಾ ದೇಯಮನ್ನಂ ಕ್ಷುಧಾತುರೇ ॥ ೨೩ ॥

ಯಾನಿ ಯಾನೀಹ ದಾನಾನಿ ಬಹು ಮುನ್ಯುದಿತಾನಿ ಚ ।
ಜೀವಾಭಯಪ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೨೪ ॥

ಅವಿಚಿಂತ್ಯಪ್ರಭಾವಂ ಹಿ ಮಣಿಮಂತ್ರೌಷಧಂ ಬಲಂ ।
ತದಭ್ಯಸ್ಯಂ ಪ್ರಯತ್ನೇನ ನಾನಾರ್ಥೋಪಾರ್ಜನಾಯ ವೈ ॥ ೨೫ ॥

ಅರ್ಥಾನುಪಾರ್ಜ್ಯ ಬಹುಶೋ ದ್ವಾದಶಾಯತನಾನಿ ವೈ ।
ಪರಿತಃ ಪರಿಪೂಜ್ಯಾನಿ ಕಿಮನ್ಯೈರಿಹ ಪೂಜಿತೈಃ ॥ ೨೬ ॥

---

೨೨. ಹಿರಿಯರಾದ ಋಷಿಶ್ರೇಷ್ಠರು, ನಾನಾ ಶಾಸ್ತ್ರಗಳನ್ನು ವಿಮರ್ಶಿಸಿ. ಇಹದಲ್ಲಿಯೂ ಪರದಲ್ಲಿಯೂ ಸುಖವು ದೊರೆಯಬೇಕಾದರೆ ಈ ನಾಲ್ಕು ದಾನಗಳಿಂದಲೇ ಎಂದು ಹೇಳಿರುವರು.

೨೩. ಹೆದರಿದವನಿಗೆ ಅಭಯವನ್ನು ಕೊಡಬೇಕು. ವ್ಯಾಧಿಗ್ರಸ್ತನಾದವನಿಗೆ ಔಷಧಿಯನ್ನು ಕೊಡಬೇಕು. ವಿದ್ಯೆಯನ್ನು ಕೇಳಿದವನಿಗೆ ವಿದ್ಯೆಯನ್ನು ಕಲಿಸಬೇಕು. ಹಸಿದವನಿಗೆ ಅನ್ನವನ್ನಿಡಬೇಕು. ಇವೇ ಆ ನಾಲ್ಕು ದಾನಗಳು.

೨೪. ಯಾವಯಾವ ದಾನಗಳು ಅನೇಕ ಮಹರ್ಷಿಗಳಿಂದ ಉಕ್ತವಾಗಿವೆಯೋ ಅವೆಲ್ಲವೂ ಜೀವನಿಗೆ ಅಭಯವನ್ನು ಕೊಡುವುದರ ಹದಿನಾರನೇ ಅಂಶವನ್ನೂ ಹೋಲಲಾರವು.

೨೫. ಮಣಿ, ಮಂತ್ರ, ಔಷಧಗಳ ಪ್ರಭಾವವು ಹೀಗೆಂದು ನಮ್ಮ ಊಹೆಗೂ ಸಿಲುಕುವುದಿಲ್ಲ. ಆದುದರಿಂದ ನಾನಾ ಅನುಕೂಲಗಳನ್ನು ಪಡೆಯಬೇಕೆನ್ನುವವನು ಪ್ರಯತ್ನಪೂರ್ವಕವಾಗಿ ಅವುಗಳನ್ನು ಕಲಿಯಬೇಕು.

೨೬. ಬೇಕಾದಷ್ಟು ಧನವನ್ನು ಸಂಪಾದಿಸಿ ದ್ವಾದಶಾಯತನಗಳನ್ನು ಸದಾ ಸೇವಿಸಬೇಕು. ಉಳಿದವುಗಳನ್ನು ಪೂಜಿಸಿ ಮಾಡಿ ಏನು ಫಲ?

ಪಂಚಕರ್ಮೇಂದ್ರಿಯಗ್ರಾಮಃ ಪಂಚ ಬುದ್ಧೀಂದ್ರಿಯಾಣಿ ಚ ।
ಮನೋ ಬುದ್ಧಿರಿಹ ಪ್ರೋಕ್ತಂ ದ್ವಾದಶಾಯತನಂ ಶುಭಂ ॥ ೨೭ ॥

ಇಹೈವ ಸ್ವರ್ಗನರಕೌ ಪ್ರಾಣಿನಾಂ ನಾನ್ಯತಃ ಕ್ವಚಿತ್ ।
ಸುಖಂ ಸ್ವರ್ಗಸ್ಸಮಾಖ್ಯಾತೋ ದುಃಖಂ ನರಕಮೇವ ಚ ॥ ೨೮ ॥

ಸುಖೇಷು ಭುಜ್ಯಮಾನೇಷು ಯತ್ಸ್ಯಾದ್ದೇಹವಿಸರ್ಜನಂ ।
ಅಯಮೇವ ಪರೋ ಮೋಕ್ಷೋ ವಿಜ್ಞೇಯಸ್ತತ್ತ್ವಚಿಂತಕೈಃ ॥ ೨೯ ॥

ವಾಸನಾಸಹಿತೇ ಕ್ಲೇಶಸಮುಚ್ಛೇದೇ ಸತಿ ಧ್ರುವಂ ।
ಅಜ್ಞಾನೋಪರಮೋ ಮೋಕ್ಷೋ ವಿಜ್ಞೇಯಸ್ತತ್ತ್ವಚಿಂತಕೈಃ ॥ ೩೦ ॥

---

೨೭. ವಾಕ್ಕು, ಪಾಣಿ, ಪಾದ, ಗುದ, ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳು. ಚಕ್ಷುಸ್ಸು, ಜಿಹ್ವಾ, ಘ್ರಾಣ, ತ್ವಕ್ಕು, ಶ್ರೋತ್ರಗಳೆಂಬ ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು, ಬುದ್ಧಿ ಇವುಗಳೇ ಶುಭಕರವಾದ ದ್ವಾದಶಾಯತನವೆಂಬುದಾಗಿ ಹೇಳಲ್ಪಟ್ಟಿರುವುದು.

೨೮. ಎಲ್ಲ ಪ್ರಾಣಿಗಳಿಗೂ ಇಹದಲ್ಲಿಯೇ ಸ್ವರ್ಗ ನರಕಗಳಿವೆ. ಬೇರೆಕಡೆ ಇಲ್ಲ. ಸುಖವೇ ಸ್ವರ್ಗ, ದುಃಖವೇ ನರಕ.

೨೯. ಸುಖವನ್ನು ಅನುಭವಿಸುತ್ತಿರುವಾಗ ಈ ದೇಹವನ್ನು ಬಿಟ್ಟುಹೋಗುವುದೇ ಪರಮಶ್ರೇಷ್ಠವಾದ ಮೋಕ್ಷವೆಂಬುದಾಗಿ ತತ್ತ್ವವನ್ನು ಪರಿಶೀಲಿಸುವವರು ತಿಳಿಯಬೇಕು.

೩೦. ವಾಸನಾವಶದಿಂದ ಪ್ರಾಪ್ತವಾದ ಕ್ಲೇಶಗಳು ಕೊನೆಗೊಂಡಮೇಲೆ ಉಂಟಾಗುವ ಅಜ್ಞಾನನಿವೃತ್ತಿಯೇ ಮೋಕ್ಷವೆಂದು ತತ್ತ್ವವಿಮರ್ಶಕರು ಅರಿಯಬೇಕು.

ಪ್ರಾಮಾಣಿಕೀ ಶ್ರುತಿರಿಯಂ ಪ್ರೋಚ್ಯತೇ ವೇದವಾದಿಭಿಃ ।
ನ ಹಿಂಸ್ಯಾತ್ಸರ್ವಭೂತಾನಿ ನಾನ್ಯಾ ಹಿಂಸಾ ಪ್ರವರ್ತಿಕಾಃ ॥ ೩೧ ॥

ಅಗ್ನಿಷ್ಟೋಮೀಯಮಿತಿ ಯಾ ಭ್ರಾಮಿಕಾ ಸ್ಯಾಽಸತಾಮಿಹ ।
ನ ಸಾ ಪ್ರಮಾಣಂ ಜ್ಞಾತೃಣಾಂ ಪಶ್ವಾಲಂಭನಕಾರಿಕಾ ॥ ೩೨ ॥

ವೃಕ್ಷಾಂಶ್ಛಿತ್ವಾ ಪಶೂನ್ ಹತ್ವಾ ಕೃತ್ವಾ ರುಧಿರಕರ್ದಮಂ ।
ದಗ್ಧ್ವಾ ವಹ್ನೌ ತಿಲಾಜ್ಯಾದಿ ಚಿತ್ರಂ ಸ್ವರ್ಗೋಽಭಿಲಷ್ಯತೇ ॥ ೩೩ ॥

ಇತ್ಯೇವಂ ಸ್ವಮತಂ ಪ್ರೋಚ್ಯ ಯತಿಸ್ತ್ರಿಪುರನಾಯಕಂ ।
ಶ್ರಾವಯಿತ್ವಾಖಿಲಾನ್ ಪೌರಾನುವಾಚ ಪುನರಾದರಾತ್ ॥ ೩೪ ॥

ದೃಷ್ಟಾರ್ಥಪ್ರತ್ಯಯಕರಾನ್ ದೇಹಸೌಖ್ಯೈಕಸಾಧಕಾನ್ ।
ಬೌದ್ಧಾಗಮವಿನಿರ್ದಿಷ್ಟಾನ್ ಧರ್ಮಾನ್ ವೇದಪರಾಂಸ್ತತಃ ॥ ೩೫ ॥

---

೩೧. ವೇದವಾದಿಗಳು ಶ್ರುತಿಯನ್ನು ಪ್ರಾಮಾಣಿಕವೆನ್ನುವರು. "ನಹಿಂಸ್ಯಾತ್ಸರ್ವಭೂತಾನಿ" ಪ್ರಾಣಿಹಿಂಸೆಮಾಡಬಾರದು ಎನ್ನುವ ಶ್ರುತಿಯೇ ಅಗ್ನಿಷ್ಟೋಮಾದಿಯಾಗಗಳಲ್ಲಿ ಪಶುಹಿಂಸೆಗೆ ಪ್ರೇರಿಸಿದರೆ ಅದು ಪ್ರಮಾಣವಾಗುವುದು ಹೇಗೆ?

೩೨. "ಅಗ್ನಿಷ್ಟೋಮೀಯಂ ಪಶುಮಾಲಭೇತ" ಮುಂತಾದ ಶ್ರುತಿಯಾವುದಿರುವುದೋ ಅದೆಲ್ಲವೂ ಜನರನ್ನು ಭ್ರಮೆಗೊಳಿಸಲು ದುಷ್ಟರು ಮಾಡಿದ ಕೈವಾಡವೇ ಹೊರತು ಮತ್ತೆ ಬೇರೆ ಅಲ್ಲ. ಪಶುವನ್ನು ಕೊಲ್ಲುವಂತೆ ವಿಧಾಯಕಮಾಡುವ ಆ ಶ್ರುತಿಯು ಬಲ್ಲವರಿಗೆ ಎಂದಿಗೂ ಪ್ರಮಾಣವಾಗಲಾರದು.

೩೩. ಮರಗಳನ್ನು ಕಡಿದು, ಪಶುಗಳನ್ನು ಕೊಂದು, ಕೆಸರುಗಟ್ಟುವಂತೆ ರಕ್ತವನ್ನು ಹರಿಸಿ ಬೆಂಕಿಯಲ್ಲಿ ಎಳ್ಳು, ತುಪ್ಪ ಮೊದಲಾದುವನ್ನು ಸುಟ್ಟು ಸ್ವರ್ಗವನ್ನು ಪಡೆಯಬೇಕಂತೆ, ಆಹಾ! ಎಷ್ಟು ಚೆನ್ನಾಗಿದೆ!

೩೪. ಈರೀತಿಯಾಗಿ ಆ ಮಾಯಾಯತಿಯು ತ್ರಿಪುರಾಧಿಪತಿಗೆ ತನ್ನ ಮತವನ್ನು ತಿಳಿಸಿ ಪೌರರೆಲ್ಲರಿಗೂ ಆ ಮತವು ತಿಳಿಯುವಂತೆ ಮಾಡಿ ಮತ್ತೆ ಅವರೆಲ್ಲರಿಗೂ ಆದರದಿಂದ ಈರೀತಿ, ಹೇಳತೊಡಗಿದನು.

೩೫. ಲೋಕದಲ್ಲಿ ಎಲ್ಲರಿಗೂ ಅನುಭವಕ್ಕೆ ಬರುವಂತಹುದೂ ದೇಹಸೌಖ್ಯವೊಂದನ್ನೇ ಗುರಿಯಾಗಿಉಳ್ಳುದೂ, ವೇದವಿರುದ್ಧವೂ ಆದ ಬೌದ್ಧಾಗಮಗಳಲ್ಲಿ

ಆನಂದಬ್ರಹ್ಮಣೋ ರೂಪಂ ಶ್ರುತ್ಯೈವಂ ಯನ್ನಿಗದ್ಯತೇ ।
ತತ್ತಥೈವೇಹ ಮಂತವ್ಯಂ ಮಿಥ್ಯಾ ನಾನಾತ್ವಕಲ್ಪನಾ ॥ ೩೬ ॥

ಯಾವತ್ಸ್ವಸ್ಥಮಿದಂ ವರ್ಷ್ಮ ಯಾವನ್ನೇಂದ್ರಿಯವಿಕ್ಲವಃ ।
ಯಾವಜ್ಜರಾ ಚ ದೂರೇಽಸ್ತಿ ತಾವತ್ಸೌಖ್ಯಂ ಪ್ರಸಾಧಯೇತ್ ॥ ೩೭ ॥

ಅಸ್ವಾಸ್ಥ್ಯೇಂದ್ರಿಯವೈಕಲ್ಯೇ ವಾರ್ಧಕ್ಯೇ ಚ ಕುತಸ್ಸುಖಂ ।
ಶರೀರಮಪಿ ದಾತವ್ಯಮರ್ಥಿಭ್ಯೋಽತಸ್ಸುಖೇಪ್ಸುಭಿಃ ॥ ೩೮ ॥

ಯಾಚಮಾನಮನೋವೃತ್ತಿಪ್ರೀಣನೇ ಯಸ್ಯ ನೋಜನಿಃ ।
ತೇನ ಭೂರ್ಭಾರವತ್ಯೇಷಾ ಸಮುದ್ರಾಗದ್ರುಮೈರ್ನ ಹಿ ॥ ೩೯ ॥

---

ಉಕ್ತವಾದ ಧರ್ಮಗಳನ್ನು ಆ ಮುನಿಯು ಅವರಿಗೆ ಬೋಧಿಸಿದನು. ಅದು ಹೇಗೆಂದರೆ :—

೩೬. "ಆನಂದಂ ಬ್ರಹ್ಮಣೋ ರೂಪಂ" ಎಂಬ ಶ್ರುತಿಯಲ್ಲಿ ಆನಂದವೇ ಬ್ರಹ್ಮವೆಂದು ಹೇಳಿರುವುದು. ಅದರಂತೆ ನಮ್ಮ ಮತದಲ್ಲಿಯೂ ಆನಂದವೇ ಬ್ರಹ್ಮವೆಂದು ತಿಳಿಯಿರಿ. ಅದರೆ ಆ ನಾನಾಪ್ರಕಾರಗಳ ಕಲ್ಪನೆಯು ಮಾತ್ರ ಸುಳ್ಳು.

೩೭. ಈ ದೇಹವು ಎಲ್ಲಿಯವರೆಗೆ ಆರೋಗ್ಯವಾಗಿರುವುದೋ ಇಂದ್ರಿಯಗಳು ಎಲ್ಲಿಯವರೆಗೆ ದುರ್ಬಲಗಳಾಗುವುದಿಲ್ಲವೋ ಎದುವರೆಗೆ ಮುಪ್ಪುಬಾರದೆ ದೂರದಲ್ಲಿರುವುದೋ ಅದುವರೆಗೆ ಹೇಗಾದರೂ ಮಾಡಿ ಸೌಖ್ಯವನ್ನು ಪಡೆಯಬೇಕು.

೩೮. ದೇಹವು ಆರೋಗ್ಯವಾಗಿಲ್ಲದಿದ್ದರೆ, ಇಂದ್ರಿಯಗಳು ಗಳಿತವಾದರೆ, ಮುಪ್ಪೂ ಬಂದೊದಗಿದರೆ ಸುಖವು ಎಲ್ಲಿಯದು ? ಆದುದರಿಂದ ಸುಖವನ್ನು ಬಯಸುವವರು ಕೇಳಿದವರಿಗೆ ಶರೀರವನ್ನು ಸಹ ಕೊಟ್ಟುಬಿಡಬೇಕು.

೩೯. ಬೇಡಿದವನ ಮನಸ್ಸನ್ನು ಸಂತೋಷಗೊಳಿಸಲು ಯಾವನು ಜನ್ಮವನ್ನು ಎತ್ತಲಿಲ್ಲವೋ ಅವನು ಭೂಮಿಗೆ ಭಾರವಾಗುವನೇ ಹೊರತು ಸಮುದ್ರಗಳೂ, ಬೆಟ್ಟಗುಡ್ಡಗಳೂ, ಮರಗಿಡಗಳೂ ಭಾರವಲ್ಲ.

ಸತ್ವರಂ ಗತ್ವರೋ ದೇಹಃ ಸಂಚಯಾಸ್ಸಪರೀತ್ಯಯಾಃ ।
ಇತಿ ವಿಜ್ಞಾಯ ವಿಜ್ಞಾತಾ ದೇಹಸೌಖ್ಯಂ ಪ್ರಸಾಧಯೇತ್ ॥ ೪೦ ॥

ಶ್ವವಾಯಸಕೃಮೀಣಾಂ ಚ ಪ್ರಾತರ್ಭೋಜ್ಯಮಿದಂ ವಪುಃ ।
ಭಸ್ಮಾಂತಂ ತಚ್ಛರೀರಂ ಚ ವೇದೇ ಸತ್ಯಂ ಪ್ರಪಶ್ಯತೇ ॥ ೪೧ ॥

ಮುಧಾ ಜಾತಿವಿಕಲ್ಪೋಽಯಂ ಲೋಕೇಷು ಪರಿಕಲ್ಪ್ಯತೇ ।
ಮಾನುಷ್ಯೇ ಸತಿ ಸಾಮಾನ್ಯೇ ಕೋಽಧಮಃ ಕೋಽಥ ಚೋತ್ತಮಃ ॥

ಬ್ರಹ್ಮಾದಿಸೃಷ್ಟಿರೇಷೇತಿ ಪ್ರೋಚ್ಯತೇ ವೃದ್ಧಪೂರುಷೈಃ ।
ತಸ್ಯ ಜಾತೌ ಸುತೌ ದಕ್ಷಮರೀಚೀ ಚೇತಿ ವಿಶ್ರುತೌ ॥ ೪೩ ॥

ಮಾರೀಚೇನ ಕಶ್ಯಪೇನ ದಕ್ಷಕನ್ಯಾಸ್ಸುಲೋಚನಾಃ ।
ಧರ್ಮೇಣ ಕಿಲ ಮಾರ್ಗೇಣ ಪರಿಣೀತಾಸ್ತ್ರಯೋದಶ ॥ ೪೪ ॥

---

೪೦. ಈ ದೇಹವು ಬೇಗನೆ ಹಾಳಾಗುವಂಥದು. ಕೂಡಿಟ್ಟವುಗಳೆಲ್ಲವೂ ಕರಗುವಂತವೇ ಎಂದು ತಿಳಿದು ಮನುಷ್ಯನು ತನ್ನ ಸೌಖ್ಯವನ್ನು ಚೆನ್ನಾಗಿ ಗಳಿಸಿ ಕೊಳ್ಳಬೇಕು.

೪೧. ಈ ದೇಹವು ನಾಯಿ, ಕಾಗೆ, ಕೃಮಿಗಳಿಗೆ ತಂಗಳು ಇದ್ದಹಾಗೆ. ಅಲ್ಲದೆ ಕಡೆಗೆ ಸುಟ್ಟು ಬೂದಿಯಾಗಿ ಹೋಗುವುದು ಎಂದು ಶ್ರುತಿಯಲ್ಲಿ ಹೇಳಿರುವುದು ಖಂಡಿತವಾಗಿಯೂ ಸತ್ಯವಾದುದು.

೪೨. ಲೋಕದಲ್ಲಿ ವ್ಯರ್ಥವಾಗಿ ಜಾತಿವ್ಯತ್ಯಾಸಗಳನ್ನು ಕಲ್ಪಿಸಿಕೊಂಡಿರುವರು. ಮನುಷ್ಯತ್ವವೆಂಬುದು ಎಲ್ಲರಿಗೂ ಸಮಾನವಾಗಿರುವಾಗ ಅವರಲ್ಲಿ ಅಧಮನು ಯಾರು ? ಉತ್ತಮನು ಯಾರು ? ಕೀಳು ಯಾರು ? ಮೇಲು ಯಾರು ?

೪೩. ಹಿಂದಿನ ಹಿರಿಯರು ಈ ಸೃಷ್ಟಿಯು (ಪ್ರಜಾವೃದ್ಧಿಯು) ಬ್ರಹ್ಮನಿಂದ ಮೊದಲಾದುದೆನ್ನುವರು. ಆ ಬ್ರಹ್ಮನಿಗೆ ಪ್ರಖ್ಯಾತರಾದ ದಕ್ಷ ಮತ್ತು ಮರೀಚಿ ಯೆಂಬ ಮಕ್ಕಳು ಹುಟ್ಟಿದರು.

೪೪. ಮರೀಚಿಯ ಮಗನಾದ ಕಶ್ಯಪನು ತನ್ನ ತಂದೆಯೊಡನೆ ಹುಟ್ಟಿದ ದಕ್ಷನ ಪುತ್ರಿಯರನ್ನೇ ಮದುವೆಯಾದನು. ಆ ಮದುವೆಯು ಧರ್ಮಮಾರ್ಗದಿಂದ ನಡೆದುದಂತೆ !

ಅಪೀದಾನೀಂತನೈರ್ಮರ್ತ್ಯೈರಲ್ಪಬುದ್ಧಿಪರಾಕ್ರಮೈಃ ।
ಅಪಿ ಗಮ್ಯಸ್ತ್ವಗಮ್ಯೋಽಯಂ ವಿಚಾರಃ ಕ್ರಿಯತೇ ಮುಧಾ ॥ ೪೫ ॥

ಮುಖಬಾಹೂರುಸಂಜಾತಂ ಚಾತುರ್ವರ್ಣ್ಯಂ ಸಹೋದಿತಂ ।
ಕಲ್ಪನೇಯಂ ಕೃತಾ ಪೂರ್ವೈರ್ನ ಘಟೇತ ವಿಚಾರತಃ ॥ ೪೬ ॥

ಏಕಸ್ಯಾಂ ಚ ತನೌ ಜಾತಾ ಏಕಸ್ಮಾದ್ಯದಿ ವಾ ಕ್ವಚಿತ್ ।
ಚತ್ವಾರಸ್ತನಯಾಸ್ತತ್ಕಿಂ ಭಿನ್ನವರ್ಣತ್ವಮಾಪ್ನುಯುಃ ॥ ೪೭ ॥

ವರ್ಣಾವರ್ಣವಿಭಾಗೋಽಯಂ ತಸ್ಮಾನ್ನ ಪ್ರತಿಭಾಸತೇ ।
ಅತೋ ಭೇಧೋ ನ ಮಂತವ್ಯೋ ಮಾನುಷ್ಯೇ ಕೇನಚಿತ್ಕ್ವಚಿತ್ ॥ ೪೮ ॥

॥ ಸನತ್ಕುಮಾರ ಉವಾಚ ॥
ಇತ್ಥಮಾಭಾಷ್ಯ ದೈತ್ಯೇಶಂ ಪೌರಾಂಶ್ಚ ಸ ಯತಿರ್ಮುನೇ ।
ಸಶಿಷ್ಯೋ ವೇದಧರ್ಮಾಂಶ್ಚ ನಾಶಯಾಮಾಸ ಚಾದರಾತ್ ॥ ೪೯ ॥

---

೪೫. ಈಗಿನವರು ಬುದ್ಧಿಯಲ್ಲಿಯೂ ಕಮ್ಮಿ. ಪರಾಕ್ರಮದಲ್ಲಿಯೂ ಕಮ್ಮಿ. ಆದರೂ ಇದು ಗಮ್ಯ, ಇದು ಅಗಮ್ಯವೆಂದು ವ್ಯರ್ಥವಾಗಿ ವಿಚಾರಕ್ಕೆ ಮೊದಲು ಮಾಡುತ್ತಾರೆ.

೪೬. ಬ್ರಾಹ್ಮಣಾದಿ ಚತುರ್ವರ್ಣಗಳು, ಪರಮಪುರುಷನ ಮುಖ, ತೋಳು, ತೊಡೆ, ಕಾಲುಗಳಿಂದ ಹುಟ್ಟಿದುವೆಂದು ಹಿಂದಿನವರು ಕತೆಯೊಂದನ್ನು ಕಟ್ಟಿರುವರು. ವಿಚಾರಮಾಡಿದಲ್ಲಿ ಇದು ಸರಿಯಲ್ಲ

೪೭. ಒಂದೇ ಶರೀರದಲ್ಲಿ ಅಥವಾ ಒಬ್ಬನಿಂದಲೇ ಹುಟ್ಟಿದ ನಾಲ್ಕು ಮಕ್ಕಳು ಎಲ್ಲಿಯಾದರೂ ಬೇರೆಬೇರೆ ಜಾತಿಯವರಾಗುವರೇನು ?

೪೮. ಆದುದರಿಂದ ಈ ಸವರ್ಣಾವರ್ಣ ವಿಭಾಗವು ಶೋಭಿಸಲಾರದು. ಆದ್ದರಿಂದ ಮನುಷ್ಯರಲ್ಲಿ ಯಾರೂ ಎಲ್ಲಿಯೂ ಈ ಭೇದವನ್ನು ಎಣಿಸಬಾರದು ಎಂದನು.

೪೯. ಸನತ್ಕುಮಾರನಿಂತೆಂದನು ;—ಓ ವ್ಯಾಸ, ಈರೀತಿಯಾಗಿ ದೈತ್ಯರಾಜನಿಗೂ, ತ್ರಿಪುರನಿವಾಸಿಗಳಿಗೂ ಬೋಧಿಸಿ, ಆ ಯತಿಯು ತನ್ನ ಶಿಷ್ಯರೊಡನೆ ಬಹಳ ಆದರದಿಂದ ವೇದಧರ್ಮಗಳನ್ನು ನಾಶಗೊಳಿಸಿದನು.

ಸ್ತ್ರೀಧರ್ಮಂ ಖಂಡಯಾಮಾಸ ಪಾತಿವ್ರತ್ಯ ಪರಂಮಹತ್ ।
ಜಿತೇಂದ್ರಿಯತ್ವಂ ಸರ್ವೇಷಾಂ ಪುರುಷಾಣಾಂ ತಥೈವ ಸಃ ॥ ೫೦ ॥

ದೇವಧರ್ಮಾ‌ನ್ ವಿಶೇಷೇಣ ಶ್ರಾದ್ಧಧರ್ಮಾಂಸ್ತಥೈವ ಚ ।
ಮಖಧರ್ಮಾನ್ವ್ರತಾದೀಂಶ್ಚ ತೀರ್ಥಶ್ರಾದ್ಧಂ ವಿಶೇಷತಃ ॥ ೫೧ ॥

ಶಿವಪೂಜಾಂ ವಿಶೇಷೇಣ ಲಿಂಗಾರಾಧನಪೂರ್ವಿಕಾಂ ।
ವಿಷ್ಣುಸೂರ್ಯಗಣೇಶಾದಿಪೂಜನಂ ವಿಧಿಪೂರ್ವಕಂ ॥ ೫೨ ॥

ಸ್ನಾನದಾನಾದಿಕಂ ಸರ್ವಂ ಪರ್ವಕಾಲೇ ವಿಶೇಷತಃ ।
ಖಂಡಯಾಮಾಸ ಸ ಯತಿರ್ಮಾಯಿಮಾಯಾವಿನಾಂ ವರಃ ॥ ೫೩ ॥

ಕಿಂ ಬಹೂಕ್ತೇನ ವಿಪ್ರೇಂದ್ರ ತ್ರಿಪುರೇ ತೇನ ಮಾಯಿನಾ ।
ವೇದಧರ್ಮಾಶ್ಚ ಯೇ ಕೇಚಿತ್ತೇ ಸರ್ವೇ ದೂರತಃ ಕೃತಾಃ ॥ ೫೪ ॥

---

೫೦. ಪಾತಿವ್ರತ್ಯವೇ ಮುಖ್ಯವಾಗಿರತಕ್ಕ ಸ್ತ್ರೀಧರ್ಮವನ್ನು ಖಂಡಿಸಿದುದಲ್ಲದೆ ಆ ಮಾಯಾಮುನಿಯು ಪುರುಷರೆಲ್ಲರಿಗೂ ಜಿತೇಂದ್ರಿಯತ್ವವು ಅನವಶ್ಯಕವೆಂಬುದಾಗಿ ಅದನ್ನು ಖಂಡಿಸಿದನು.

೫೧-೫೩. ಮಾಯಾವಿಗಳಿಗೆಲ್ಲಾ ಮೊದಲನೆಯವನಾದ ಆ ಕಪಟಸನ್ಯಾಸಿಯು ದೇವತಾಪ್ರೀತಿಕರಗಳಾದ ಯಜ್ಞಯಾಗಾದಿ ಧರ್ಮಗಳನ್ನೂ, ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವ ಶ್ರಾದ್ಧಾದಿ ಧರ್ಮಗಳನ್ನೂ, ಪೂಜಾವ್ರತಾದಿಗಳು, ತೀರ್ಥ ಶ್ರಾದ್ಧಾದಿಗಳು, ಲಿಂಗಾರಾಧನೆ ಮೊದಲಾದ ಶಿವಪೂಜೆಗಳು, ವಿಷ್ಣು, ಸೂರ್ಯ, ಗಣೇಶ ಮೊದಲಾದ ದೇವಪೂಜೆಗಳು, ಇವೆಲ್ಲವನ್ನೂ, ಪರ್ವಕಾಲದಲ್ಲಿಯೂ, ಇತರ ಕಾಲದಲ್ಲಿಯೂ ಮಾಡತಕ್ಕ ಸ್ನಾನದಾನಾದಿ ಧಾರ್ಮಿಕಕೃತ್ಯಗಳನ್ನೂ ವಿಶೇಷವಾಗಿ ಖಂಡಿಸಿಬಿಟ್ಟನು.

೫೪. ಓ ಬ್ರಾಹ್ಮಣೋತ್ತಮ, ಇನ್ನೂ ಹೆಚ್ಚಾಗಿ ಏನುಹೇಳಲಿ ? ಆ ಮಾಯಾವಿಯು ಪುರತ್ರಯದಲ್ಲಿ ನಡೆಯುತ್ತಿದ್ದ ವೇದವಿಹಿತವಾದ ಧರ್ಮಗಳೆಲ್ಲವನ್ನೂ ದೂರವಾಗಿ ದೂಡಿಬಿಟ್ಟನು.

ಪತಿಧರ್ಮಾಶ್ರಯಾಸ್ಸರ್ವಾ ಮೋಹಿತಾಸ್ತ್ರಿಪುರಾಂಗನಾಃ ।
ಭರ್ತೃಶುಶ್ರೂಷಣವತೀಂ ನಿಜಧರ್ಮಮತಿಮುತ್ತಮಾಂ ॥ ೫೫ ॥

ಅಭ್ಯಸ್ಯಾಕರ್ಷಿಣೀಂ ವಿದ್ಯಾಂ ವಶೀಕೃತ್ಯಮಯೀಮಪಿ ।
ಪುರುಷಾಸ್ಸಫಲೀಚಕ್ರುಃ ಪರದಾರೇಷು ಮೋಹಿತಾಃ ॥ ೫೬ ॥

ಅಂತಃಪುರಚರಾ ನಾರ್ಯಸ್ತಥಾ ರಾಜಕುಮಾರಕಾಃ ।
ಪೌರಾಃ ಪುರಾಂಗನಾಶ್ಚಾಪಿ ಸರ್ವೇ ತೈಶ್ಚ ವಿಮೋಹಿತಾಃ ॥ ೫೭ ॥

ಏವಂ ಪೌರೇಷು ಸರ್ವೇಷು ನಿಜಧರ್ಮೇಷು ಸರ್ವಥಾ ।
ಪರಾಙ್ಮುಖೇಷು ಜಾತೇಷು ಪ್ರೋಲ್ಲಲಾಸ ವೃಷೇತರಃ ॥ ೫೮ ॥

ಮಾಯಾ ಚ ದೇವದೇವಸ್ಯ ವಿಷ್ಣೋಸ್ತಸ್ಯಾಜ್ಞಯಾ ಪ್ರಭೋಃ ।
ಅಲಕ್ಷ್ಮೀಶ್ಚ ಸ್ವಯಂ ತಸ್ಯ ನಿಯೋಗಾತ್ತ್ರಿಪುರಂ ಗತಾ ॥ ೫೯ ॥

---

೫೫ ಪತಿಯೇ ಪರದೈವವೆಂದು ನಂಬಿದ್ದ ತ್ರಿಪುರಾಂಗನೆಯರೆಲ್ಲರೂ ಮಾಯೆಯಿಂದ ಮೋಹಿತರಾಗಿ ಪತಿಶುಶ್ರೂಷೆಯಲ್ಲಿ ಆಸಕ್ತವಾಗಿದ್ದ ಉತ್ತಮವಾದ ತಮ್ಮ ಬುದ್ಧಿಯನ್ನೇ ತೊರೆದುಬಿಟ್ಟರು.

೫೬. ಪುರುಷರೂ ಸಹ ಮಾಯಾವಶರಾಗಿ ಆಕರ್ಷಣ, ವಶೀಕರಣ ಮೊದಲಾದ ವಿದ್ಯೆಗಳನ್ನು ಕಲಿತು ಪರಸ್ತ್ರೀಯರಲ್ಲಿ ಆಸಕ್ತರಾಗಿ ಕಲಿತವಿದ್ಯೆಯನ್ನು ಸಫಲಗೊಳಿಸಿದರು.

೫೭. ಅಂತಃಪುರದಲ್ಲೇ ಇರುವ ರಾಜಾಂಗನೆಯರೂ ರಾಜಕುಮಾರರೂ ಪಟ್ಟಣಿಗರಾದ ಸಾಮಾನ್ಯ ಸ್ತ್ರೀಪುರುಷರೂ ಎಲ್ಲರೂ ಈರೀತಿ ವಿಮೋಹಿತರಾಗಿ ಧರ್ಮಭ್ರಷ್ಟರಾದರು.

೫೮. ಹೀಗೆ ಪಟ್ಟಣಿಗರೆಲ್ಲರೂ ಸಂಪೂರ್ಣವಾಗಿ ತಂತಮ್ಮ ಧರ್ಮಗಳಲ್ಲಿ ಪರಾಙ್ಮುಖರಾದಮೇಲೆ ಅಧರ್ಮವು ಅಲ್ಲಿ ಪ್ರಬಲಿಸತೊಡಗಿತು.

೫೯. ದೇವದೇವನಾದ ವಿಷ್ಣುವಿನ ಅಪ್ಪಣೆಯಂತೆ ಮಾಯೆಯೂ ಆ ಲಕ್ಷ್ಮಿ (ಜ್ಯೇಷ್ಠೆ) ಯೂ ತ್ರಿಪುರಕ್ಕೆ ತೆರಳಿದರು.

ಯಾ ಲಕ್ಷ್ಮೀಸ್ತಪಸಾ ತೇಷಾಂ ಲಬ್ಧಾ ದೇವೇಶ್ವರಾದರಾತ್ ।
ಬಹಿರ್ಗತಾ ಪರಿತ್ಯಜ್ಯ ನಿಯೋಗಾದ್ಬ್ರಹ್ಮಣಃ ಪ್ರಭೋಃ ॥ ೬೦ ॥

ಬುದ್ಧಿಮೋಹಂ ತಥಾ ಭೂತಂ ವಿಷ್ಣೋರ್ಮಾಯಾವಿನಿರ್ಮಿತಂ ।
ತೇಷಾಂ ದತ್ವಾ ಕ್ಷಣಾದೇವ ಕೃತಾರ್ಥೋಽಭೂತ್ಸ ನಾರದಃ ॥ ೬೧ ॥

ನಾರದೋಽಪಿ ತಥಾರೂಪೋ ಯಥಾ ಮಾಯಿಾ ತಥೈವ ಸಃ ।
ತಥಾಪಿ ವಿಕೃತೋ ನಾ ಭೂತ್ಪರಮೇಶಾದನುಗ್ರಹಾತ್ ॥ ೬೨ ॥

ಆಸೀತ್ಕುಂಠಿತಸಾಮರ್ಥ್ಯೋ ದೈತ್ಯರಾಜೋಽಪಿ ಭೋ ಮುನೇ ।
ಭ್ರಾತೃಭ್ಯಾಂ ಸಹಿತಸ್ತತ್ರ ಮಯೇನ ಚ ಶಿವೇಚ್ಛಯಾ ॥ ೬೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ತ್ರಿಪುರಮೋಹನಂನಾಮ
ಪಂಚಮೋಽಧ್ಯಾಯಃ.

---

೬೦. ಆ ತ್ರಿಪುರರ ತಪಸ್ಸಿಗೆ ಮೆಚ್ಚಿ, ದೇವದೇವನಾದ ಶಿವನು ಅವರಲ್ಲಿ ಪ್ರಸನ್ನನಾದುದರಿಂದ ಆ ಪುರತ್ರಯದಲ್ಲಿ ಲಕ್ಷ್ಮಿಯು ಇದುವರೆಗೆ ನೆಲಸಿದ್ದಳಷ್ಟೆ. ಈಗ ಆ ಲಕ್ಷ್ಮಿಯು ಬ್ರಹ್ಮನ ಅಪ್ಪಣೆಯಂತೆ ಅದನ್ನು ಬಿಟ್ಟು ತೆರಳಿದಳು.

೬೧. ಈ ರೀತಿ ಕ್ಷಣಮಾತ್ರದಲ್ಲಿಯೇ ಆ ದೈತ್ಯರೆಲ್ಲರಿಗೂ ವಿಷ್ಣುಮಾಯಾ ಪ್ರಭಾವದಿಂದ ಬುದ್ಧಿಮೋಹವನ್ನುಂಟುಮಾಡಿ ನಾರದನು ಕೃತಾರ್ಥನಾದನು.

೬೨. ನಾರದನು ರೂಪದಲ್ಲಿಯೂ ನಡೆನುಡಿಯಲ್ಲಿಯೂ ಆ ಕಪಟಯತಿಯಂತೆಯೇ ಇದ್ದರೂ ಪರಮೇಶ್ವರನ ಅನುಗ್ರಹದಿಂದ ಯಾವ ವಿಕಾರಕ್ಕೂ ಒಳಗಾಗಲಿಲ್ಲ.

೬೩. ಓ ಮಹರ್ಷೀ, ಆ ದೈತ್ಯರಾಜನೂ ಸಹ ತನ್ನ ತಮ್ಮಂದಿರೊಡನೆಯೂ ಮಯನೊಂದಿಗೂ ಸಹ ಶಿವನ ಇಚ್ಛೆಯಿಂದ ಬಲಹೀನನಾಗತೊಡಗಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯೊಳಗಿನ
ಐದನೆಯ ಯುದ್ಧಖಂಡದಲ್ಲಿ ತ್ರಿಪುರಮೋಹನವೆಂಬ
ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಷಷ್ಠೋಽಧ್ಯಾಯಃ

---

॥ ವ್ಯಾಸ ಉವಾಚ ॥

ತಸ್ಮಿನ್ ದೈತ್ಯಾಧಿಪೇ ಪೌರೇ ಸಭ್ರಾತರಿ ವಿಮೋಹಿತೇ ।
ಸನತ್ಕುಮಾರ ಕಿಂಚಾಸೀತ್ತದಾಚಕ್ಷ್ವಾಖಿಲಂ ವಿಭೋ ॥ ೧ ॥

॥ ಸನತ್ಕುಮಾರ ಉವಾಚ ॥

ತ್ರಿಪುರೇ ಚ ತಥಾ ಭೂತೇ ದೈತ್ಯೇ ತ್ಯಕ್ತಶಿವಾರ್ಚನೇ ।
ಸ್ತ್ರೀಧರ್ಮೇ ನಿಖಿಲೇ ನಷ್ಟೇ ದುರಾಚಾರೇ ವ್ಯವಸ್ಥಿತೇ ॥ ೨ ॥

---

### ಆರನೆಯ ಅಧ್ಯಾಯವು.

೧. ಬಳಿಕ ವ್ಯಾಸಮಹರ್ಷಿಯು, ಸನತ್ಕುಮಾರನನ್ನು ಕುರಿತು, ಓ ವಿಭೂ, ಆ ತ್ರಿಪುರಾಧಿಪತಿಯು ತನ್ನ ತಮ್ಮಂದಿರೊಡನೆಯೂ, ಪಟ್ಟಣಿಗರೊಡನೆಯೂ ಮಹಾ ಮೋಹಕ್ಕೆ ಸಿಲುಕಿದ ಮೇಲೆ ಏನಾಯಿತು? ಅದೆಲ್ಲವನ್ನೂ ನನಗೆ ತಿಳಿಸಬೇಕು ಎಂದು ಕೇಳಿದನು.

೨-೩. ಸನತ್ಕುಮಾರನು ಹೇಳತೊಡಗಿದನು :—ಈ ರೀತಿ ಪುರವು ಮೋಹ ಪಾಶಕ್ಕೆ ಸಿಲುಕಿಹೋಯಿತು. ದೈತ್ಯರೆಲ್ಲರೂ ಶಿವಪೂಜೆಯನ್ನು ತೊರೆದರು. ಸ್ತ್ರೀಯರ

ಕೃತಾರ್ಥ ಇವ ಲಕ್ಷ್ಮೀಶೋ ದೇವೈಸ್ಸಾರ್ಧಮುಮಾಪತಿಂ ।
ನಿವೇದಿತುಂ ತಚ್ಚರಿತ್ರಂ ಕೈಲಾಸಮಗಮದ್ಧರಿಃ ॥ ೩ ॥

ತಸ್ಯೋಪಕಂಠಂ ಸ್ಥಿತ್ವಾSಸೌ ದೇವೈಸ್ಸಹ ರಮಾಪತಿಃ ।
ತತೋ ಭೂರಿ ಸ ಚ ಬ್ರಹ್ಮಾ ಪರಮೇಣ ಸಮಾಧಿನಾ ॥ ೪ ॥

ಮನಸಾ ಪ್ರಾಪ್ಯ ಸರ್ವಜ್ಞಂ ಬ್ರಹ್ಮಣಾ ಸ ಹರಿಸ್ತದಾ ।
ತುಷ್ಟಾವ ವಾಗ್ಭಿರಿಷ್ಟಾಭಿಶ್ಶಂಕರಂ ಪುರುಷೋತ್ತಮಃ ॥ ೫ ॥

॥ ವಿಷ್ಣುರುವಾಚ ॥

ಮಹೇಶ್ವರಾಯ ದೇವಾಯ ನಮಸ್ತೇ ಪರಮಾತ್ಮನೇ ।
ನಾರಾಯಣಾಯ ರುದ್ರಾಯ ಬ್ರಹ್ಮಣೇ ಬ್ರಹ್ಮರೂಪಿಣೇ ॥ ೬ ॥

ಏವಂ ಕೃತ್ವಾ ಮಹಾದೇವಂ ದಂಡವತ್ಪ್ರಣಿಪತ್ಯ ಚ ।
ಜಜಾಪ ರುದ್ರಮಂತ್ರಂ ಚ ದಕ್ಷಿಣಾಮೂರ್ತಿಸಂಭವಂ ॥ ೭ ॥

---

ಶೀಲವೆಲ್ಲವೂ ಹಾಳಾಯಿತು. ದುರಾಚಾರವು ಬಲವಾಗಿ ಬೇರೂರಿತು. ಆಗ ಶ್ರೀ ಹರಿಯು ಕೃತಕೃತ್ಯನಾದವನಂತೆ ಆ ತ್ರಿಪುರರ ಚರಿತ್ರವನ್ನು ಶಿವನಿಗೆ ತಿಳಿಸಬೇಕೆಂದು ದೇವತೆಗಳೊಡನೆ ಕೈಲಾಸಕ್ಕೆ ಹೊರಟನು.

೪-೫. ಕೈಲಾಸದ ಬಳಿಯನ್ನು ಸೇರಿದ ಮೇಲೆ, ಶ್ರೀಹರಿಯೂ, ಬ್ರಹ್ಮನೂ ಮಹಾ ಏಕಾಗ್ರತೆಯಿಂದ ಮನಸ್ಸಿನಲ್ಲಿಯೇ ಶಂಕರನನ್ನು ಭಾವಿಸಿ ದೇವತೆಗಳೊಡನೆ, ಪ್ರಿಯವಾದ ವಾಕ್ಯಗಳಿಂದ ಬಹುವಾಗಿ ಸ್ತೋತ್ರಮಾಡತೊಡಗಿದರು.

೬. ವಿಷ್ಣುವು ಸ್ತುತಿಸಿದನು.—ಮಹೇಶ್ವರನೂ, ದೇವನೂ, ಪರಮಾತ್ಮನೂ, ನಾರಾಯಣನೂ, ರುದ್ರನೂ, ಬ್ರಹ್ಮನೂ, ಬ್ರಹ್ಮಸ್ವರೂಪನೂ, ಆದ ನಿನಗೆ ನಮಸ್ಕಾರವು.

೭-೮. ಈ ರೀತಿಯಾಗಿ ವಿಷ್ಣುವು ಮಹಾದೇವನನ್ನು ಸ್ತೋತ್ರಮಾಡಿ, ಸಾಷ್ಟಾಂಗಪ್ರಣಾಮವನ್ನೆಸಗಿ, ನೀರಿನಲ್ಲಿ ನಿಂತುಕೊಂಡು ಶಿವನಲ್ಲೇ ನೆಟ್ಟಮನಸ್ಸುಳ್ಳ

ಜಲೇ ಸ್ಥಿತ್ವಾ ಸಾರ್ಧಕೋಟಿಪ್ರಮಿತಂ ತನ್ಮನಾಃ ಪ್ರಭುಃ ।
ಸಂಸ್ಮರನ್ ಮನಸಾ ಶಂಭುಂ ಸ್ವಪ್ರಭುಂ ಪರಮೇಶ್ವರಂ ॥ ೮ ॥

ತಾವದ್ದೇವಾಸ್ತದಾ ಸರ್ವೇ ತನ್ಮನಸ್ಕಾ ಮಹೇಶ್ವರಂ ॥ ೯ ॥

॥ ದೇವಾ ಊಚುಃ ॥

ನಮಸ್ಸರ್ವಾತ್ಮನೇ ತುಭ್ಯಂ ಶಂಕರಾಯಾರ್ತಿಹಾರಿಣೇ ।
ರುದ್ರಾಯ ನೀಲಕಂಠಾಯ ಚಿದ್ರೂಪಾಯ ಪ್ರಚೇತಸೇ ॥ ೧೦ ॥

ಗತಿರ್ನಸ್ಸರ್ವದಾ ತ್ವಂ ಹಿ ಸರ್ವಾಪದ್ವಿನಿವಾರಕಃ ।
ತ್ವಮೇವ ಸರ್ವದಾಸ್ಮಾಭಿರ್ವಂದ್ಯೋ ದೇವಾರಿಸೂದನ ॥ ೧೧ ॥

ತ್ವಮಾದಿಸ್ತ್ವಮನಾದಿಶ್ಚ ಸ್ವಾನಂದಶ್ಚಾಕ್ಷಯಃ ಪ್ರಭುಃ ।
ಪ್ರಕೃತೇಃ ಪುರುಷಸ್ಯಾಪಿ ಸಾಕ್ಷಾತ್ಸ್ರಷ್ಟಾ ಜಗತ್ಪ್ರಭುಃ ॥ ೧೨ ॥

ತ್ವಮೇವ ಜಗತಾಂ ಕರ್ತಾ ಭರ್ತಾ ಹರ್ತಾ ತ್ವಮೇವ ಹಿ ।
ಬ್ರಹ್ಮಾ ವಿಷ್ಣುರ್ಹರೋ ಭೂತ್ವಾ ರಜಸ್ಸತ್ತ್ವತಮೋಗುಣಃ ॥ ೧೩ ॥

---

ವನಾಗಿ, ಶಿವನನ್ನೇ ಧ್ಯಾನಿಸುತ್ತಾ ಶ್ರೀರುದ್ರಸೂಕ್ತವನ್ನೂ, ದಕ್ಷಿಣಾಮೂರ್ತಿ ಮಂತ್ರವನ್ನೂ, ಒಂದೂವರೆ ಕೋಟಿ ಸಂಖ್ಯೆಯಷ್ಟು ಜಪಿಸತೊಡಗಿದನು.

೯-೧೦. ಆ ಸಮಯದಲ್ಲಿ ದೇವತೆಗಳೆಲ್ಲರೂ, ತದೇಕಚಿತ್ತರಾಗಿ ಶಿವನನ್ನು ಸ್ತೋತ್ರಮಾಡತೊಡಗಿದರು. ಸರ್ವಸ್ವರೂಪನೂ, ಮಂಗಳದಾಯಕನೂ, ದುಃಖ ವಿನಾಶಕನೂ, ರುದ್ರನೂ, ನೀಲಕಂಠನೂ, ಜ್ಞಾನಸ್ವರೂಪನೂ, ಉನ್ನತವಾದ ಮನಸ್ಸುಳ್ಳವನೂ, ಆದ ನಿನಗೆ ನಮಸ್ಕಾರವು.

೧೧. ಓ ದಾನವಾಂತಕ, ಬಂದ ಎಲ್ಲ ತೊಂದರೆಗಳನ್ನೂ ಪರಿಹರಿಸುವ ನೀನೇ ನಮಗೆ ದಿಕ್ಕು. ನೀನು ಯಾವಾಗಲೂ ನಮಗೆ ವಂದ್ಯನಾಗಿರುವೆ.

೧೨. ನೀನು ಎಲ್ಲದಕ್ಕೂ ಆದಿಭೂತನು, ನಿನಗೆ ಮೊದಲು ಯಾವುದೂ ಇಲ್ಲ. ನೀನು ಸುಖಸ್ವರೂಪನು, ನಾಶರಹಿತನು, ಪ್ರಕೃತಿಯನ್ನೂ ಪುರುಷನನ್ನೂ ಸಾಕ್ಷಾತ್ತಾಗಿ ಸೃಷ್ಟಿಸಿದ ಜಗತ್ಪ್ರಭುವು ನೀನೇ.

೧೩. ನೀನೇ ರಜೋಗುಣವುಳ್ಳವನಾಗಿ ಬ್ರಹ್ಮನೆಂಬ ಹೆಸರಿನಿಂದ ಈ ಜಗತ್ತನ್ನು ಸೃಷ್ಟಿಸುವೆ. ಸತ್ತ್ವಗುಣವುಳ್ಳವನಾಗಿ ವಿಷ್ಣುವೆನಿಸಿ, ಅದನ್ನು ಪಾಲಿಸುವೆ. ಶುದ್ಧತಮೋಗುಣದಿಂದ ಹರನೆನಿಸಿ ಅದನ್ನು ಸಂಹರಿಸುವೆ.

ತಾರಕೋಽಸಿ ಜಗತ್ಯಸ್ಮಿನ್ ಸರ್ವೇಷಾಮಧಿಪೋಽವ್ಯಯಃ ।
ವರದೋ ವಾಙ್ಮಯೋ ವಾಚ್ಯೋ ವಾಚ್ಯವಾಚಕವರ್ಜಿತಃ　　　॥ ೧೪ ॥

ಯಾಚ್ಯೋ ಮುಕ್ತ್ಯರ್ಥಮೀಶಾನೋ ಯೋಗಿಭಿರ್ಯೋಗವಿತ್ತಮೈಃ ।
ಹೃತ್ಪುಂಡರೀಕವಿವರೇ ಯೋಗಿನಾಂ ತ್ವಂ ಹಿ ಸಂಸ್ಥಿತಃ　　　॥ ೧೫ ॥

ವದಂತಿ ವೇದಾಸ್ತ್ವಾಂ ಸಂತಃ ಪರಬ್ರಹ್ಮಸ್ವರೂಪಿಣಂ ।
ಭವಂತಂ ತತ್ತ್ವಮಿತ್ಯದ್ಯ ತೇಜೋರಾಶಿಂ ಪರಾತ್ಪರಂ　　　॥ ೧೬ ॥

ಪರಮಾತ್ಮಾನಮಿತ್ಯಾಹುರಸ್ಮಿನ್ ಜಗತಿ ಯದ್ವಿಭೋ ।
ತ್ವಮೇವ ಶರ್ವ ಸರ್ವಾತ್ಮಂಸ್ತ್ರಿಲೋಕಾಧಿಪತೇ ಭವ　　　॥ ೧೭ ॥

ದೃಷ್ಟಂ ಶ್ರುತಂ ಸ್ತುತಂ ಸರ್ವಂ ಜ್ಞಾಯಮಾನಂ ಜಗದ್ಗುರೋ ।
ಅಣೋರಲ್ಪತರಂಪ್ರಾಹುರ್ಮಹತೋಽಪಿ ಮಹತ್ತರಂ　　　॥ ೧೮ ॥

---

೧೪. ಈ ಜಗತ್ತಿನಲ್ಲಿ ನೀನು ಎಲ್ಲರಿಗೂ ತಾರಕನಾಗಿರುವೆ. ನೀನು ಎಲ್ಲರಿಗೂ ಅಧಿಪತಿಯು. ನೀನು ನಾಶವಿಲ್ಲದವನು. ನೀನು, ವರದಾಯಕನೂ, ವಾಙ್ಮಯರೂಪನೂ, ವಾಚ್ಯನೂ, ವಾಚ್ಯವಾಚಕ ವಿನಿರ್ಮುಕ್ತನೂ ಆಗಿರುವೆ.

೧೫. ಯೋಗಶಾಸ್ತ್ರವನ್ನು ಬಲ್ಲಯೋಗಿಶ್ರೇಷ್ಠರು ಮೋಕ್ಷವ ಸಲುವಾಗಿ, ನಿನ್ನನ್ನು ಬೇಡುವರು. ನೀನು ಆ ಯೋಗಿಗಳ ಹೃದಯಕಮಲದ ನಡುವೆ ನೆಲಸಿರುವೆ.

೧೬. ಯಥಾರ್ಥವನ್ನೇ ಹೇಳುವ ವೇದಗಳು, ನಿನ್ನನ್ನು ಪರಬ್ರಹ್ಮವೆಂದೂ, ಪರತತ್ತ್ವವೆಂದೂ, ತೇಜೋರಾಶಿಯೆಂದೂ ಪರಾತ್ಪರನೆಂದೂ ಹೊಗಳುತ್ತವೆ.

೧೭. ಓ ವಿಭೂ, ಶರ್ವ, ತ್ರಿಲೋಕನಾಥ, ಭವ, ಈ ಜಗತ್ತಿನಲ್ಲಿ ಎಲ್ಲರೂ ಹೇಳುವ ಪರಮಾತ್ಮನು ನೀನೇ.

೧೮. ಹೇ ಜಗದ್ಗುರೂ, ಕಣ್ಣಿಗೆ ಕಾಣುವುದೂ, ಕಿವಿಗೆ ಕೇಳುವುದೂ, ಜ್ಞಾನಕ್ಕೆ ಗೋಚರವಾಗುವುದೂ ಯಾವುದಿದೆಯೋ ಅದೆಲ್ಲವೂ ನೀನೇ. ನಿನ್ನನ್ನು ಅಣುವಿಗಿಂತಲೂ, ಅಣುವೆಂದೂ, ಮಹತ್ತಿಗಿಂತಲೂ ಮಹತ್ತೆಂದೂ ಬಲ್ಲವರು ಹೇಳುವರು.

ಸರ್ವತಃ ಪಾಣಿಪಾದಾಂತಂ ಸರ್ವತೋಽಕ್ಷಿಶಿರೋಮುಖಂ ।
ಸರ್ವತಶ್ಶ್ರವಣಘ್ರಾಣಂ ತ್ವಾ ನಮಾಮಿ ಚ ಸರ್ವಶಃ ॥ ೧೯ ॥

ಸರ್ವಜ್ಞಂ ಸರ್ವತೋ ವ್ಯಾಪಿ ಸರ್ವೇಶ್ವರಮನಾವೃತಂ ।
ವಿಶ್ವರೂಪಂ ವಿರೂಪಾಕ್ಷಂ ತ್ವಾಂ ನಮಾಮಿ ಚ ಸರ್ವತಃ ॥ ೨೦ ॥

ಸರ್ವೇಶ್ವರಂ ಭವಾಧ್ಯಕ್ಷಂ ಸತ್ಯಂ ಶಿವಮನುತ್ತಮಂ ।
ಕೋಟಿಭಾಸ್ಕರಸಂಕಾಶಂ ತ್ವಾಂ ನಮಾಮಿ ಚ ಸರ್ವತಃ ॥ ೨೧ ॥

ವಿಶ್ವದೇವಮನಾದ್ಯಂತಂ ಷಟ್ತ್ರಿಂಶತ್ಕಮನೀಶ್ವರಂ ।
ಪ್ರವರ್ತಕಂ ಚ ಸರ್ವೇಷಾಂ ತ್ವಾಂ ನಮಾಮಿ ಚ ಸರ್ವತಃ ॥ ೨೨ ॥

ಪ್ರವರ್ತಕಂ ಚ ಪ್ರಕೃತೇಸ್ಸರ್ವಸ್ಯ ಪ್ರಪಿತಾಮಹಂ ।
ಸರ್ವನಿಗ್ರಹಮೀಶಂ ಹಿ ತ್ವಾಂ ನಮಾಮಿ ಚ ಸರ್ವತಃ ॥ ೨೩ ॥

---

೧೯. ಎಲ್ಲ ಕಡೆಯಲ್ಲೂ, ಕೈ, ಕಾಲು, ಕಣ್ಣು, ತಲೆ, ಮುಖ, ಕಿವಿ, ಮೂಗು ಗಳನ್ನುಳ್ಳ ನಿನ್ನನ್ನು ಎಲ್ಲ ಕಡೆಗಳಿಂದಲೂ ನಮಸ್ಕರಿಸುವೆನು. ಎಂದರೆ ಎಲ್ಲೆಲ್ಲಿಯೂ ನೀನು ವ್ಯಾಪಿಸಿರುವೆ. ಕೈಕಾಲು ಮೊದಲಾದ ಅವಯವಗಳ ಅವಶ್ಯಕತೆ ನಿನಗಿಲ್ಲ. ಆ ಅವಯವಗಳಿಂದ ಆಗಬೇಕಾದ ಕಾರ್ಯಗಳನ್ನು ಅವುಗಳ ಸಹಾಯವಿಲ್ಲದೆ ಮಾಡುವೆ.

೨೦. ಓ ಸರ್ವವ್ಯಾಪಿಯಾದ ವಿರೂಪಾಕ್ಷನೆ, ಸರ್ವಜ್ಞನೂ, ಸರ್ವೇಶ್ವರನೂ, ಆವರಣರಹಿತನೂ, ವಿಶ್ವರೂಪನೂ ಆದ ನಿನ್ನನ್ನು ಸರ್ವತೋಮುಖವಾಗಿ ವಂದಿಸುವೆನು.

೨೧. ನೀನು ಸರ್ವೇಶ್ವರನು, ಜಗತ್ಸಾಕ್ಷಿಯು, ಸತ್ಯರೂಪನು, ಮಂಗಳಕರನು, ಸರ್ವಶ್ರೇಷ್ಠನು, ಕೋಟಿ ಸೂರ್ಯರನ್ನು ಹೋಲುವ ಪ್ರಕಾಶವುಳ್ಳವನು. ಇಂತಹ ನಿನ್ನನ್ನು ನಮಿಸುವೆನು.

೨೨-೨೩. ನೀನು ಸರ್ವದೇವಸ್ವರೂಪನು, ಆದ್ಯಂತ ರಹಿತನು. ತನಗೆ ಮೇಲ್ಪಟ್ಟವನಿಲ್ಲದವನು, ಎಲ್ಲರಿಗೂ ಪ್ರೇರಣೆಯನ್ನುಂಟುಮಾಡತಕ್ಕವನು, ಪ್ರಕೃತಿಗೂ ಪ್ರವರ್ತಕನು, ಎಲ್ಲದಕ್ಕೂ ಪ್ರಪಿತಾಮಹನು, ವಿವಿಧ ಆಕಾರವುಳ್ಳವನು, ಎಲ್ಲರಿಗೂ ಸ್ವಾಮಿಯು. ಇಂತಹ ನಿನಗೆ ಪ್ರಣಾಮಮಾಡುವೆನು.

ಏವಂ ವದಂತಿ ವರದಂ ಸರ್ವಾವಾಸಂ ಸ್ವಯಂಭುವಂ ।
ಶ್ರುತಯಶ್ಶ್ರುತಿಸಾರಜ್ಞಂ ಶ್ರುತಿಸಾರವಿದಶ್ಚ ಯೇ ॥ ೨೪ ॥

ಅದೃಶ್ಯಮಸ್ಮಾಭಿರನೇಕಭೂತಂ
ತ್ವಯಾ ಕೃತಂ ಯದ್ಭವತಾಥ ಲೋಕೇ ।
ತ್ವಮೇವ ದೇವಾಸುರಭೂಸುರಾಶ್ಚ
ಅನ್ಯೇ ಚ ವೈ ಸ್ಥಾವರಜಂಗಮಾಶ್ಚ ॥ ೨೫ ॥

ಪಾಹ್ಯನನ್ಯಗತೀನ್ಶಂಭೋ ಸುರಾನ್ನೋ ದೇವವಲ್ಲಭ ।
ನಷ್ಟಪ್ರಾಯಾಂಸ್ತ್ರಿಪುರತೋ ವಿನಿಹತ್ಯಾಸುರಾನ್ ಕ್ಷಣಾತ್ ॥ ೨೬ ॥

ಮಾಯಯಾ ಮೋಹಿತಾಸ್ತೇಽದ್ಯ ಭವತಃ ಪರಮೇಶ್ವರ ।
ವಿಷ್ಣುನಾ ಪ್ರೋಕ್ತಯುಕ್ತ್ಯಾ-ತು ಉಜ್ಝಿತಾ ಧರ್ಮತಃ ಪ್ರಭೋ ॥ ೨೭ ॥

ಸಂತ್ಯಕ್ತಸರ್ವಧರ್ಮಾಶ್ಚ ಬೌದ್ಧಾಗಮಸಮಾಶ್ರಿತಾಃ ।
ಅಸ್ಮದ್ಭಾಗ್ಯವಶಾಜ್ಜಾತಾ ದೈತ್ಯಾಸ್ತೇ ಭಕ್ತವತ್ಸಲ ॥ ೨೮ ॥

---

೨೪. ಹೇ ಶ್ರುತಿಸಾರಜ್ಞ, ಈ ರೀತಿಯಾಗಿ ಶ್ರುತಿಗಳೂ, ಶ್ರುತ್ಯರ್ಥವನ್ನು ಚೆನ್ನಾಗಿ ಬಲ್ಲವರೂ, ಎಲ್ಲೆಡೆಯೂ ಇರುವವನೂ, ಸ್ವಯಂಭುವೂ ಆದ ನಿನ್ನನ್ನು ಬಣ್ಣಿಸುವರು.

೨೫. ನೀನು ಲೋಕದಲ್ಲಿ ಏನೇನು ಮಾಡಿರುವೆಯೋ ಅದೆಲ್ಲವನ್ನೂ ನಾವು ಕಾಣೆವು. ದೇವತೆಗಳೂ, ರಾಕ್ಷಸರೂ, ಬ್ರಾಹ್ಮಣರೂ, ಚರವಸ್ತುಗಳೂ, ಅಚರವಸ್ತುಗಳೂ ಎಲ್ಲವೂ ನೀನೇ.

೨೬. ಎಲೈ ಶಂಭುವೇ, ನೀನು ದೇವತೆಗಳಲ್ಲಿ ವಿಶ್ವಾಸವುಳ್ಳವನು. ರಾಕ್ಷಸರನ್ನು ಕ್ಷಣಮಾತ್ರದಲ್ಲಿ ಸಂಹರಿಸಿ, ಅವರಿಂದ ಪೀಡಿಸಲ್ಪಟ್ಟು ನಷ್ಟಪ್ರಾಯರಾಗಿ ಬೇರಾರೂ ದಿಕ್ಕಿಲ್ಲದೆ ಇರುವ ನಮ್ಮನ್ನು ಕಾಪಾಡು.

೨೭. ಓ ಪರಮೇಶ್ವರಾ ! ವಿಷ್ಣುವಿನ ಯುಕ್ತಿಯಿಂದ, ಆ ತ್ರಿಪುರರೆಲ್ಲರೂ, ನಿನ್ನ ಮಾಯೆಯಿಂದ ಮೋಹಿತರಾಗಿ, ಧರ್ಮಭ್ರಷ್ಟರಾಗಿ ಹೋಗಿರುವರು.

೨೮. ಎಲೈ ಭಕ್ತವತ್ಸಲನೇ, ನಮ್ಮ ಭಾಗ್ಯವಶದಿಂದ ಆ ದೈತ್ಯರೆಲ್ಲರೂ ವೇದಧರ್ಮಗಳನ್ನು ತೊರೆದು ಬೌದ್ಧಧರ್ಮಗಳನ್ನು ಅವಲಂಬಿಸಿರುವರು.

ಸದಾ ತ್ವಂ ಕಾರ್ಯಕರ್ತಾ ಹಿ ದೇವಾನಾಂ ಶರಣಪ್ರದ ।
ವಯಂ ತೇ ಶರಣಾಪನ್ನಾ ಯಥೇಚ್ಛಸಿ ತಥಾ ಕುರು ॥ ೨೯ ॥

॥ ಸನತ್ಕುಮಾರ ಉವಾಚ ॥

ಇತಿ ಸ್ತುತ್ವಾ ಮಹೇಶಾನಂ ದೇವಾಸ್ತು ಪುರತಸ್ಸ್ಥಿತಾಃ ।
ಕೃತಾಂಜಲಿಪುಟಾ ದೀನಾ ಆಸನ್ ಸಂನತಮೂರ್ತಯಃ ॥ ೩೦ ॥

ಸ್ತುತಶ್ಚೈವಂ ಸುರೇಂದ್ರಾದ್ಯೈರ್ವಿಷ್ಣೋರ್ಜಾಪ್ಯೇನ ಚೇಶ್ವರಃ ।
ಅಗಚ್ಛತ್ತತ್ರ ಸರ್ವೇಶೋ ವೃಷಮಾರುಹ್ಯ ಹರ್ಷಿತಃ ॥ ೩೧ ॥

ವಿಷ್ಣುಮಾಲಿಂಗ್ಯ ನಂದೀಶಾದವರುಹ್ಯ ಪ್ರಸನ್ನಧೀಃ ।
ದದರ್ಶ ಸುದೃಶಾ ತತ್ರ ನಂದಿದತ್ತಕರೋಽಖಿಲಾನ್ ॥ ೩೨ ॥

ಅಥ ದೇವಾನ್ ಸಮಾಲೋಕ್ಯ ಕೃಪಾದೃಷ್ಟ್ಯಾ ಹರಿಂ ಹರಃ ।
ಪ್ರಾಹ ಗಂಭೀರಯಾ ವಾಚಾ ಪ್ರಸನ್ನಃ ಪಾರ್ವತೀಪತಿಃ ॥ ೩೩ ॥

---

೨೯. ಹೇ ಶರಣಾಗತವತ್ಸಲ ! ನೀನು ಯಾವಾಗಲೂ, ದೇವತೆಗಳ ಕೆಲಸ ವನ್ನು ನೆರವೇರಿಸುತ್ತಿರುವೆ. ನಾವು ನಿನ್ನನ್ನು ಮರೆಹೊಕ್ಕಿರುವೆವು. ನಿನಗೆ ಯಾವ ರೀತಿ ತೋರುವುದೋ ಆ ರೀತಿ ಮಾಡು ಎಂದು ಪ್ರಾರ್ಥಿಸಿದರು.

೩೦. ಸನತ್ಕುಮಾರನಿಂತೆಂದನು ;—ಓ ವ್ಯಾಸ ! ಹೀಗೆ ಪರಮೇಶ್ವರನನ್ನು ಸ್ತೋತ್ರಮಾಡಿ, ದೇವತೆಗಳು, ದೀನರಾಗಿ ಕೈಗಳನ್ನು ಮುಗಿದುಕೊಂಡು ವಿನಯ ದಿಂದ ನಿಂತುಕೊಂಡರು.

೩೧. ಈ ರೀತಿ ದೇವತೆಗಳ ಸ್ತುತಿಯಿಂದಲೂ, ವಿಷ್ಣುವಿನ ಜಪದಿಂದಲೂ, ಸಂತೋಷವನ್ನು ಹೊಂದಿ, ಸರ್ವೇಶ್ವರನಾದ ಶಿವನು ವೃಷಭವನ್ನೇರಿ ಅವರೆಲ್ಲರಿದ್ದ ಕಡೆಗೆ ಬಂದನು.

೩೨. ಆ ಸರ್ವೇಶ್ವರನು ವೃಷಭದಿಂದ ಕೆಳಗಿಳಿದು, ಪ್ರಸನ್ನವಾದ ಹೃದಯ ದಿಂದ ವಿಷ್ಣುವನ್ನು ಆಲಿಂಗಿಸಿಕೊಂಡು, ನಂದಿಯು ಇತ್ತ ಹಸ್ತಲಾಘವನ್ನು ಕೈಗೊ ಳ್ಳುತ್ತಾ ಸೌಮ್ಯದೃಷ್ಟಿಯಿಂದ ಎಲ್ಲರನ್ನೂ ನೋಡಿದನು.

೩೩. ವಿಷ್ಣುವನ್ನೂ ದೇವತೆಗಳನ್ನೂ ಕೃಪಾದೃಷ್ಟಿಯಿಂದ ಕಂಡ ಮೇಲೆ ಗಂಭೀರವಾದ ವಾಣಿಯಿಂದ ಆ ಪಾರ್ವತೀಪತಿಯು ಅವರನ್ನು ಕುರಿತು ಇಂತೆಂದನು.

॥ ಶಿವ ಉವಾಚ ॥

ಜ್ಞಾತಂ ಮಯೇದಮಧುನಾ ದೇವಕಾರ್ಯಂ ಸುರೇಶ್ವರ ।
ವಿಷ್ಣೋರ್ಮಾಯಾಬಲಂ ಚೈವ ನಾರದಸ್ಯ ಚ ಧೀಮತಃ ॥ ೩೪ ॥

ತೇಷಾಮಧರ್ಮನಿಷ್ಠಾನಾಂ ದೈತ್ಯಾನಾಂ ದೇವಸತ್ತಮಃ ।
ಪುರತ್ರಯವಿನಾಶಂ ಚ ಕರಿಷ್ಯೇಽಹಂ ನ ಸಂಶಯಃ ॥ ೩೫ ॥

ಪರಂ ತು ತೇ ಮಹಾದೈತ್ಯಾ ಮದ್ಭಕ್ತಾ ದೃಢಮಾನಸಾಃ ।
ಅಥ ವಧ್ಯಾ ಮಯೈವ ಸ್ಯುರ್ನ್ಯಾಜತ್ಯಕ್ತವೃಷೋತ್ತಮಾಃ ॥ ೩೬ ॥

ವಿಷ್ಣುರ್ಹನ್ಯಾತ್ಪರೋ ವಾಥ ಯತ್ತ್ಯಾಜಿತವೃಷಾಃ ಕೃತಾಃ ।
ದೈತ್ಯಾ ಮದ್ಭಕ್ತಿರಹಿತಾಸ್ಸರ್ವೇ ತ್ರಿಪುರವಾಸಿನಃ ॥ ೩೭ ॥

ಇತಿ ಶಂಭೋಸ್ತು ವಚನಂ ಶ್ರುತ್ವಾ ಸರ್ವೇ ದಿವೌಕಸಃ ।
ವಿಮನಸ್ಕಾ ಬಭೂವುಸ್ತೇ ಹರಿಶ್ಚಾಪಿ ಮುನೀಶ್ವರ ॥ ೩೮ ॥

---

೩೪. ದೇವೇಂದ್ರ! ದೇವತೆಗಳು ಈಗ ಮಾಡಬೇಕಾದುದೇನೆಂಬುದನ್ನೂ, ವಿಷ್ಣುವೂ ಮತ್ತು ಬುದ್ಧಿಶಾಲಿಯಾದ ನಾರದನೂ ಹೂಡಿದ ಮಾಯೆಯ ಪ್ರಭಾವವನ್ನೂ ನಾನು ತಿಳಿದೇ ಇರುವೆನು.

೩೫. ಅಧರ್ಮನಿರತರಾದ ಆ ದೈತ್ಯರ ಮೂರು ನಗರಗಳನ್ನೂ ನಾನು ನಾಶಮಾಡುವೆನು. ಸಂಶಯಪಡಬೇಡಿ.

೩೬. ಆದರೆ ಆ ದೈತ್ಯರು ನನ್ನ ಭಕ್ತರು, ದೃಢವಾದ ಮನಸ್ಸುಳ್ಳವರು. ಕೃತ್ರಿಮೋಪಾಯಕ್ಕೆ ಒಳಗಾಗಿ ಧರ್ಮವನ್ನು ತೊರೆದವರು. ಇವರನ್ನು ನಾನು ಕೊಲ್ಲುವುದು ಯೋಗ್ಯವೇ?

೩೭. ಆ ತ್ರಿಪುರ ನಿವಾಸಿಗಳನ್ನು ವಿಷ್ಣುವಾಗಲಿ, ಮತ್ತಾರಾದರೂ ಆಗಲಿ ಕೊಲ್ಲಬಹುದು. ಏಕೆಂದರೆ, ಅವರು ಧರ್ಮವನ್ನೂ ನನ್ನಲ್ಲಿ ಭಕ್ತಿಯನ್ನೂ ತೊರೆದಿರುವರು.

೩೮. ಓ ವ್ಯಾಸ! ಈ ರೀತಿ ಶಿವನು ನುಡಿದ ಮಾತನ್ನು ಕೇಳಿ ದೇವತೆಗಳೂ ವಿಷ್ಣುವೂ ಮನಗುಂದಿದವರಾದರು.

ದೇವಾನ್ ವಿಷ್ಣುಮುದಾಸೀನಾನ್ ದೃಷ್ಟ್ವಾ ಚ ಭವಕೃದ್ವಿಧಿಃ ।
ಕೃತಾಂಜಲಿಪುಟಶ್ಯಂಭುಂ ಬ್ರಹ್ಮಾ ವಚನಮಬ್ರವೀತ್ ॥ ೩೯ ॥

॥ ಬ್ರಹ್ಮೋವಾಚ ॥

ನ ಕಿಂಚಿದ್ವಿದ್ಯತೇ ಪಾಪಂ ಯಸ್ಮಾತ್ತ್ವಂ ಯೋಗವಿತ್ತಮಃ ।
ಪರಮೇಶಃ ಪರಬ್ರಹ್ಮ ಸದಾ ದೇವರ್ಷಿರಕ್ಷಕಃ ॥ ೪೦ ॥

ತವೈವ ಶಾಸನಾತ್ತೇ ವೈ ಮೋಹಿತಾಃ ಪ್ರೇರಕೋ ಭವಾನ್ ।
ತ್ಯಕ್ತಸ್ವಧರ್ಮತತ್ವತ್ಪೂಜಾಃ ಪರವಧ್ಯಾಸ್ತಥಾಪಿ ನ ॥ ೪೧ ॥

ಅತಸ್ತ್ವಯಾ ಮಹಾದೇವ ಸುರರ್ಷಿಪ್ರಾಣರಕ್ಷಕ ।
ಸಾಧೂನಾಂ ರಕ್ಷಣಾರ್ಥಾಯ ಹಂತವ್ಯಾ ಮ್ಲೇಚ್ಛಜಾತಯಃ ॥ ೪೨ ॥

ರಾಜ್ಞಸ್ತಸ್ಯ ನ ತತ್ಪಾಪಂ ವಿದ್ಯತೇ ಧರ್ಮತಸ್ತವ ।
ತಸ್ಮಾದ್ರಕ್ಷೇದ್ದ್ವಿಜಾನ್ ಸಾಧೂನ್ ಕಂಟಕಾದ್ವೈ ವಿಶೋಧಯೇತ್ ॥ ೪೩ ॥

---

೩೯. ಹೀಗೆ ಖಿನ್ನಮನಸ್ಕರಾದ ದೇವತೆಗಳನ್ನೂ ವಿಷ್ಣುವನ್ನೂ ನೋಡಿ ಸೃಷ್ಟಿಕರ್ತನಾದ ಬ್ರಹ್ಮನು ಕೈಗಳನ್ನು ಮುಗಿದುಕೊಂಡು ಶಿವನನ್ನು ಕುರಿತು ಇಂತೆಂದನು.

೪೦. ಓ ದೇವ, ನೀನು ಯೋಗಿಶ್ರೇಷ್ಠನಾದ ಪರಮೇಶ್ವರನಲ್ಲವೆ? ನಿನಗೆ ಪಾಪ ಲೇಶವಾದರೂ ಉಂಟೆ? ನೀನು ಸಾಕ್ಷಾತ್ ಪರಬ್ರಹ್ಮವಸ್ತುವಾಗಿರುವೆ. ದೇವತೆಗಳನ್ನೂ ಋಷಿಗಳನ್ನೂ ಯಾವಾಗಲೂ ಕೈಬಿಡದೆ ಕಾಪಾಡುತ್ತಿರುವೆ.

೪೧. ನಿನ್ನ ಅಪ್ಪಣೆಯಂತೆಯೇ ಆ ದೈತ್ಯರು ಮರುಳುಗೊಳಿಸಲ್ಪಟ್ಟರು. ತಮ್ಮ ಧರ್ಮವನ್ನೂ ನಿನ್ನ ಪೂಜೆಯನ್ನೂ ಬಿಟ್ಟಿರುವರು. ಆದರೂ ಅವರನ್ನು ಮತ್ತೊಬ್ಬರು ಕೊಲ್ಲಲಾರರು.

೪೨. ಆದ್ದರಿಂದ ಹೇ ಮಹಾದೇವ, ನೀನು ದೇವತೆಗಳ ಮತ್ತು ಋಷಿಗಳ ಪ್ರಾಣಗಳನ್ನು ಸಂರಕ್ಷಿಸುವವನು. ಸಾಧುಗಳನ್ನು ಸಲಹುವುದಕ್ಕೋಸ್ಕರ ಆ ಮ್ಲೇಚ್ಛ ಜಾತಿಯವರನ್ನು (ಅಧಮರನ್ನು) ನಾಶಗೊಳಿಸಬೇಕು.

೪೩. ನೀನು ನಮ್ಮೆಲ್ಲರಿಗೂ ಪ್ರಭು. ಆದುದರಿಂದ ಧರ್ಮತಃ ನಿನಗೆ ಯಾವ ಪಾಪವೂ ಇಲ್ಲ. ದೊರೆಯಾದವನು ಬ್ರಾಹ್ಮಣರನ್ನೂ ಸಾಧುಗಳಗನ್ನೂ ಸಂಕಟಗಳಿಂದ ಪಾರುಮಾಡಿ ಸಲಹಬೇಕು.

ಏವಮಿಚ್ಛೇದಿಹಾನ್ಯತ್ರ ರಾಜಾ ಚೇದ್ರಾಜ್ಯಮಾತ್ಮನಃ ।
ಪ್ರಭುಸ್ತ್ವಂ ಸರ್ವಲೋಕಾನಾಂ ತಸ್ಮಾದ್ರಕ್ಷಸ್ವ ಮಾಚಿರಂ ॥ ೪೪ ॥

ಮುನೀಂದ್ರೇಶಾಸ್ತಥಾ ಯಜ್ಞಾ ವೇದಾಶ್ಶಾಸ್ತ್ರಾದಯೋಽಖಿಲಾಃ ।
ಪ್ರಜಾಸ್ತೇ ದೇವದೇವೇಶ ಹ್ಯಹಂ ವಿಷ್ಣುರಪಿ-ಧ್ರುವಂ ॥ ೪೫ ॥

ದೇವತಾಸಾರ್ವಭೌಮಸ್ತ್ವಂ ಸಮ್ರಾಟ್ ಸರ್ವೇಶ್ವರಃ ಪ್ರಭೋ ।
ಪರಿವಾರಸ್ತವೈವೈಷ ಹರ್ಯಾದಿ ಸಕಲಂ ಜಗತ್ ॥ ೪೬ ॥

ಯುವರಾಜೋ ಹರಿಸ್ತೇಽಜ ಬ್ರಹ್ಮಾಹಂ ತೇ ಪುರೋಹಿತಃ ।
ರಾಜಕಾರ್ಯಕರಃ ಶಕ್ರಸ್ತ್ವದಾಜ್ಞಾಪರಿಪಾಲಕಃ ॥ ೪೭ ॥

ದೇವಾ ಅನ್ಯೇಽಪಿ ಸರ್ವೇಶ ತವ ಶಾಸನಯಂತ್ರಿತಾಃ ।
ಸ್ವಸ್ವಕಾರ್ಯಕರಾ ನಿತ್ಯಂ ಸತ್ಯಂ ಸತ್ಯಂ ನ ಸಂಶಯಃ ॥ ೪೮ ॥

---

೪೪. ರಾಜನಾದವನು ತನ್ನ ರಾಜ್ಯದಲ್ಲಿ ಅಭಿಲಾಷೆಯುಳ್ಳವನಾದರೆ, ಬ್ರಾಹ್ಮಣರನ್ನೂ ಸಾಧುಗಳನ್ನೂ ತೊಂದರೆಗಳಿಂದ ಬಿಡಿಸಲು ಆಶಿಸುತ್ತಿರಬೇಕು. ಆದುದರಿಂದ ಸಮಸ್ತ ಲೋಕಗಳಿಗೂ ಪ್ರಭುವಾದ ನೀನು ಬೇಗನೆ ಕಾಪಾಡು.

೪೫. ಓ ದೇವದೇವ, ಮುನಿಶ್ರೇಷ್ಠರೂ ಯಜ್ಞಗಳೂ ವೇದಶಾಸ್ತ್ರಗಳೂ ನಾನೂ ವಿಷ್ಣುವೂ ನಿನ್ನ ಪ್ರಜೆಗಳೇ ಆಗಿರುವೆವು.

೪೬. ಓ ಪ್ರಭೂ, ನೀನು ದೇವತೆಗಳೆಲ್ಲರಿಗೂ ಸಾರ್ವಭೌಮನಾಗಿರುವೆ. ವಿಷ್ಣುವೇ ಮೊದಲಾಗಿ ಈ ಜಗತ್ತೆಲ್ಲವೂ ನಿನ್ನ ಪರಿವಾರವು.

೪೭. ಓ ಜನ್ಮರಹಿತನೆ, ನಿನಗೆ ಯುವರಾಜನು ವಿಷ್ಣುವು. ಪುರೋಹಿತನು ಬ್ರಹ್ಮನಾದ ನಾನು. ನಿನ್ನ ಅಪ್ಪಣೆಯನ್ನು ಪಾಲಿಸುತ್ತಾ ರಾಜಕಾರ್ಯವನ್ನು ನೆರವೇರಿಸುವವನು ಇಂದ್ರನು.

೪೮. ಓ ಸರ್ವೇಶ್ವರ, ಉಳಿದ ದೇವತೆಗಳೂ ಸಹ ನಿನ್ನ ಆಜ್ಞೆಗೆ ಬದ್ಧರಾಗಿ ತಂತಮ್ಮ ಕೆಲಸಗಳನ್ನು ಸರ್ವದಾ ನಿರ್ವಹಿಸುತ್ತಿರುವರು. ಇದು ಸತ್ಯವಾದುದು ಎಂದನು.

॥ ಸನತ್ಕುಮಾರ ಉವಾಚ ॥
ಏತಚ್ಛ್ರುತ್ವಾ ವಚಸ್ತಸ್ಯ ಬ್ರಹ್ಮಣಃ ಪರಮೇಶ್ವರಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಶಂಕರಸ್ಸುರಪೋ ವಿಧಿಂ ॥ ೪೯ ॥

॥ ಶಿವ ಉವಾಚ ॥
ಹೇ ಬ್ರಹ್ಮನ್ ಯದ್ಯಹಂ ದೇವರಾಜಸ್ಸಮ್ರಾಟ್ಪ್ರಕೀರ್ತಿತಃ ।
ತತ್ಪ್ರಕಾರೋ ನ ಮೇ ಕಶ್ಚಿದ್ಗೃಹ್ಣೀಯಾಂ ಯಮಿಹ ಪ್ರಭು: ॥ ೫೦ ॥

ರಥೋ ನಾಸ್ತಿ ಮಹಾದಿವ್ಯಸ್ತಾದೃಕ್ಸಾರಥಿನಾ ಸಹ ।
ಧನುರ್ಬಾಣಾದಿಕಂ ಚಾಪಿ ಸಂಗ್ರಾಮೇ ಜಯಕಾರಕಂ ॥ ೫೧ ॥

ಯಮಾಸ್ಥಾಯ ಧನುರ್ಬಾಣಾನ್ ಗೃಹೀತ್ವಾ ಯೋಜ್ಯ ವೈ ಮನಃ ।
ನಿಹನಿಷ್ಯಾಮ್ಯಹಂ ದೈತ್ಯಾನ್ ಪ್ರಬಲಾನಪಿ ಸಂಗರೇ ॥ ೫೨ ॥

॥ ಸನತ್ಕುಮಾರ ಉವಾಚ ॥
ಅಥ ಸಬ್ರಹ್ಮಕಾ ದೇವಾಸ್ಸೇಂದ್ರೋಪೇಂದ್ರಾಃ ಪ್ರಹರ್ಷಿತಾಃ ।
ಶ್ರುತ್ವಾ ಪ್ರಭೋಸ್ತದಾ ವಾಕ್ಯಂ ನತ್ವಾ ಪ್ರೋಚುರ್ಮಹೇಶ್ವರಂ ॥ ೫೩ ॥

---

೪೯. ಸನತ್ಕುಮಾರನಿಂತೆಂದನು :—ಓ ವ್ಯಾಸ, ಹೀಗೆ ಬ್ರಹ್ಮನು ಹೇಳಿದ ಮಾತನ್ನು ಕೇಳಿ ದೇವತೆಗಳ ಪಾಲಕನಾದ ಪರಮೇಶ್ವರನು ಪ್ರಸನ್ನಹೃದಯನಾಗಿ ಬ್ರಹ್ಮನನ್ನು ಕುರಿತು ಈರೀತಿ ಹೇಳಿದನು.

೫೦. ಎಲೈ ಬ್ರಹ್ಮನೇ. ನಾನು ದೇವತೆಗಳಿಗೆಲ್ಲಾ ಒಡೆಯನೂ ಸಾರ್ವಭೌಮನೂ ಅಹುದು ಎಂನೆಯಲ್ಲವೇ ? ಹಾಗಾದರೆ ಪ್ರಭುವಾದವನು ಬಳಸುವ ಯಾವ ಸಲಕರಣೆಯೂ ನನಗೆ ಇಲ್ಲವಲ್ಲ ?

೫೧-೫೨. ಧನುರ್ಬಾಣಗಳನ್ನು ಕೈಲಿಹಿಡಿದು ಮನಸ್ಸನ್ನು ಸ್ಥಿರಗೊಳಿಸಿ ಆ ದೈತ್ಯರು ಎಷ್ಟೇ ಬಲಿಷ್ಠರಾಗಿರಲಿ ಅವರನ್ನು ಯುದ್ಧದಲ್ಲಿ ಧ್ವಂಸಮಾಡಲು ಅಂತಹ ಜಯಸಾಧನವಾದ ದಿವ್ಯವಾದ ದೊಡ್ಡ ರಥವಿಲ್ಲ. ಸಾರಥಿಯೂ ಇಲ್ಲ. ಧನುರ್ಬಾಣ ಮೊದಲಾದವಂತೂ ಇಲ್ಲವೇ ಇಲ್ಲ ಎಂದನು.

೫೩. ಓ ವ್ಯಾಸ, ಈರೀತಿ ಪ್ರಭುವಾದ ಶಿವನು ನುಡಿಯುತ್ತಲೇ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ಸಮಸ್ತ ದೇವತೆಗಳೂ ಆನಂದಭರಿತರಾಗಿ ಆ ಶಿವನನ್ನು ನಮಸ್ಕರಿಸಿ ಇಂತೆಂದರು.

॥ ದೇವಾ ಊಚುಃ ॥

ವಯಂ ಭವಾಮ ದೇವೇಶ ತತ್ಪ್ರಕಾರಾ ಮಹೇಶ್ವರ ।
ರಥಾದಿಕಾಸ್ತವ ಸ್ವಾಮಿನ್ ಸನ್ನದ್ಧಾಸ್ಸಂಗರಾಯ ಹಿ ॥ ೫೪ ॥

ಇತ್ಯುಕ್ತ್ವಾ ಸಂಹತಾಸ್ಸರ್ವೇ ಶಿವೇಚ್ಛಾಮಧಿಗಮ್ಯ ಹ ।
ಪೃಥಗೂಚುಃ ಪ್ರಸನ್ನಾಸ್ತೇ ಕೃತಾಂಜಲಿಪುಟಾಸ್ಸುರಾಃ ॥ ೫೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಿವಸ್ತುತಿವರ್ಣನಂ ನಾಮ
ಷಷ್ಠೋಽಧ್ಯಾಯಃ

---

೫೪. ಹೇ ಪ್ರಭೂ, ಯುದ್ಧಕ್ಕೆ ಬೇಕಾದ ರಥವೇ ಮೊದಲಾದ ಸಲಕರಣೆಗಳು ನಾವೇ ಆಗುವೆವು.

೫೫. ಹೀಗೆಂದು ಆ ದೇವತೆಗಳು ಎಲ್ಲರೂ ಒಟ್ಟಿಗೆ ಹೇಳಿ ಬಳಿಕ ಕೈಮುಗಿದುಕೊಂಡು ಒಬ್ಬೊಬ್ಬರಾಗಿ ಶಿವನ ಅಪ್ಪಣೆಪಡೆದು ಇಂತೆಂದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯಲ್ಲಿ
ಆರನೆಯದಾದ ಯುದ್ಧಖಂಡದ ಶಿವಸ್ತುತಿವರ್ಣನವೆಂಬ
ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಸಪ್ತಮೋಽಧ್ಯಾಯಃ

---

॥ ಸನತ್ಕುಮಾರ ಉವಾಚ ॥

ಏತಚ್ಛ್ರುತ್ವಾ ತು ಸರ್ವೇಷಾಂ ದೇವಾದೀನಾಂ ವಚೋ ಹರಃ ।
ಅಂಗೀಚಕಾರ ಸುಪ್ರೀತ್ಯಾ ಶರಣ್ಯೋ ಭಕ್ತವತ್ಸಲಃ ॥ ೧ ॥

ಏತಸ್ಮಿನ್ನಂತರೇ ದೇವೀ ಪುತ್ರಾಭ್ಯಾಂ ಸಂಯುತಾ ಶಿವಾ ।
ಆಜಗಾಮ ಮುನೇ ತತ್ರ ಯತ್ರ ದೇವಾನ್ವಿತೋ ಹರಃ ॥ ೨ ॥

---

### ಏಳನೆಯ ಅಧ್ಯಾಯವು.

೧. ಸನತ್ಕುಮಾರನು ವ್ಯಾಸಮಹರ್ಷಿಯನ್ನು ಕುರಿತು ಇಂತೆಂದನು ;— ಹೀಗೆ ದೇವತೆಗಳೆಲ್ಲರೂ ಒಟ್ಟಾಗಿ ಹೇಳಿದ ಮಾತನ್ನು ಶರಣಾಗತವತ್ಸಲನಾದ ಶಿವನು ಸಂತೋಷದಿಂದ ಒಪ್ಪಿದನು.

೨. ಓ ಮಹರ್ಷೀ, ಇಷ್ಟರಲ್ಲಿ ಮಂಗಲಸ್ವರೂಪಿಣಿಯಾದ ಪಾರ್ವತೀದೇವಿಯು ತನ್ನ ಇಬ್ಬರು ಮಕ್ಕಳೊಂದಿಗೆ ಶಿವನು ಮಾತನಾಡುತ್ತಿದ್ದ ಸ್ಥಳಕ್ಕೆ ಬಂದಳು.

ಅಥಾಗತಾಂ ಶಿವಾಂ ದೃಷ್ಟ್ವಾ ಸರ್ವೇ ವಿಷ್ಣ್ವಾದಯೋ ದ್ರುತಂ ।
ಪ್ರಣೇಮುರತಿನಮ್ರಾಸ್ತೇ ವಿಸ್ಮಿತಾ ಗತಸಂಭ್ರಮಾಃ ॥ ೩ ॥

ಪ್ರೋಚುರ್ಜಯೇತಿ ಸದ್ವಾಕ್ಯಂ ಮುನೇ ಸರ್ವಂ ಸುಲಕ್ಷಣಂ ।
ತೂಷ್ಣೀಮಾಸನ್ನಜಾನಂತಸ್ತದಾಗಮನಕಾರಣಂ ॥ ೪ ॥

ಅಥ ಸರ್ವೈಸ್ಸ್ತುತಾದೇವೈರ್ದೇವ್ಯದ್ಭುತಕುತೂಹಲಾ ।
ಉವಾಚ ಸ್ವಾಮಿನಂ ಪ್ರೀತ್ಯಾ ನಾನಾಲೀಲಾವಿಶಾರದಂ ॥ ೫ ॥

॥ ದೇವ್ಯುವಾಚ ॥

ಕ್ರೀಡಮಾನಂ ವಿಭೋ ಪಶ್ಯ ಷಣ್ಮುಖಂ ರತಿಸನ್ನಿಭಂ ।
ಪುತ್ರಂ ಪುತ್ರವತಾಂ ಶ್ರೇಷ್ಠ ಭೂಷಿತಂ ಭೂಷಣೈರ್ವರೈಃ ॥ ೬ ॥

ಇತ್ಯೇವಂ ಲೋಕಮಾತ್ರಾ ಚ ವಾಗ್ಭಿಸ್ಸಂಬೋಧಿತಶ್ಶಿವಃ ।
ನ ಯಯೌ ತೃಪ್ತಿಮಾಶಾನಃ ಪಿಬನ್ ಸ್ಕಂದಾನನಾಮೃತಂ ॥ ೭ ॥

---

೩-೪. ಬಳಿಕ ವಿಷ್ಣುವೇ ಮೊದಲಾದ ಆ ದೇವತೆಗಳೆಲ್ಲರೂ ಪಾರ್ವತೀ ದೇವಿಯು ಅಲ್ಲಿಗೆ ಬಂದುದನ್ನು ಕಂಡು ಆಶ್ಚರ್ಯಹೊಂದಿದವರಾಗಿ ಗಾಬರಿಪಡದೆ ಬಹು ನಮ್ರತೆಯಿಂದ ಆಕೆಗೆ ನಮಸ್ಕರಿಸಿ ಎಲ್ಲರೂ ಮಂಗಲಕರವಾದ ಜಯಜಯಶಬ್ದವನ್ನು ಮಾಡಿದರು. ಬಳಿಕ ಆಕೆಯು ಅಲ್ಲಿಗೆ ಬಂದ ಕಾರಣ ತಿಳಿಯದೆ ಸುಮ್ಮನೆ ಇದ್ದರು.

೫. ಹೀಗೆ ದೇವತೆಗಳೆಲ್ಲರೂ ತನ್ನನ್ನು ಸ್ತೋತ್ರಮಾಡಿದಮೇಲೆ ಪಾರ್ವತಿಯು ಬಹಳ ಕುತೂಹಲದಿಂದ ಕೂಡಿ ನಾನಾಲೀಲಾವಿಶಾರದನಾದ ತನ್ನ ಪತಿಯನ್ನು ಕುರಿತು ಇಂತೆಂದಳು.

೬. ಪುತ್ರವಂತರಲ್ಲೆಲ್ಲಾ ಶ್ರೇಷ್ಠನಾದ ಹೇ ಪ್ರಭೂ, ಬೆಲೆಬಾಳುವ ಆಭರಣ ಗಳಿಂದ ಅಲಂಕರಿಸಲ್ಪಟ್ಟು ಸೂರ್ಯನಂತೆ ಹೊಳೆಯುತ್ತಾ ಆಡುತ್ತಿರುವ ನಿನ್ನ ಮಗ ನಾದ ಷಣ್ಮುಖನನ್ನು ನೋಡು.

೭. ಇಂತೆಂದು ಲೋಕಮಾತೆಯಾದ ಪಾರ್ವತಿಯು ಹೇಳಿದ ಮಾತುಗಳನ್ನು ಕೇಳಿ ಶಿವನು ಕುಮಾರನ ಕಡೆಗೆ ತಿರುಗಿ ಆತನ ಮುಖವೆಂಬ ಅಮೃತವನ್ನು ಎಷ್ಟು ಪಾನಮಾಡಿದರೂ ತೃಪ್ತಿಯನ್ನು ಹೊಂದಲಿಲ್ಲ.

ನ ಸಸ್ಮಾರಾಗತಾನ್ ದೇವಾನ್ ದೈತ್ಯತೇಜೋನಿಪೀಡಿತಾನ್ ।
ಸ್ಕಂದಮಾಲಿಂಗ್ಯ ಚಾಘ್ರಾಯ ಮುಮೋದಾತಿ ಮಹೇಶ್ವರಃ ॥ ೮ ॥

ಜಗದಂಬಾಥ ತತ್ರೈವ ಸಂಮಂತ್ರ್ಯ ಪ್ರಭುಣಾ ಚ ಸಾ ।
ಸ್ಥಿತ್ವಾ ಕಿಂಚಿತ್ಸಮುತ್ತಸ್ಥೌ ನಾನಾಲೀಲಾವಿಶಾರದಾ ॥ ೯ ॥

ತತಸ್ಸನಂದೀ ಸಹ ಷಣ್ಮುಖೇನ
ತಯಾ ಚ ಸಾರ್ಧಂ ಗಿರಿರಾಜಪುತ್ರ್ಯಾ ।
ವಿವೇಶ ಶಂಭುರ್ಭವನಂ ಸುಲೀಲಃ
ಸುರೈಸ್ಸಮಸ್ತೈರಭಿವಂದ್ಯಮಾನಃ ॥ ೧೦ ॥

ದ್ವಾರಸ್ಯ ಪಾರ್ಶ್ವತಸ್ತಸ್ಥುರ್ದೇವದೇವಸ್ಯ ಧೀಮತಃ ।
ತೇಽಥ ದೇವಾ ಮಹಾವ್ಯಗ್ರಾ ವಿಮನಸ್ಕಾ ಮುನೇಽಖಿಲಾಃ ॥ ೧೧ ॥

ಕಿಂ ಕರ್ತವ್ಯಂ ಕ್ವ ಗಂತವ್ಯಂ ಕಸ್ಸ್ಯಾದಸ್ಮತ್ಸುಖಪ್ರದಃ ।
ಕಿಂ ತು ಕಿಂ ತ್ವಿತಿ ಸಂಜಾತಂ ಹಾ ಹತಾಸ್ಸ್ಮೇತಿ ವಾದಿನಃ ॥ ೧೨ ॥

---

೮. ತ್ರಿಪುರಾಸುರರ ಬೇಗೆಯನ್ನು ತಾಳಲಾರದೆ ಕಂಗೆಟ್ಟು ದೀನರಾಗಿ ತನ್ನ ಬಳಿಗೆ ಬಂದಿದ್ದ ದೇವತೆಗಳನ್ನು ಮರತೇಬಿಟ್ಟು ಷಣ್ಮುಖನನ್ನು ಎತ್ತಿಕೊಂಡು ಆತ ನನ್ನು ಆಲಂಗಿಸಿ ತಲೆಯನ್ನು ಮೂಸಿನೋಡಿ ಸಂತೋಷಪಡುತ್ತಿದ್ದನು.

೯. ಅನೇಕವಿಧವಾದ ಲೀಲೆಗಳಲ್ಲಿ ಪಾರಂಗತಳಾದ ಜಗನ್ಮಾತೆಯು ತನ್ನ ಪತಿಯಾದ ಶಿವನೊಡನೆ ಏನೋ ಆಲೋಚಿಸುತ್ತಾ ಸ್ವಲ್ಪಹೊತ್ತು ಕುಳಿತಿದ್ದು ಬಳಿಕ ಮೇಲಕ್ಕೆದ್ದಳು.

೧೦. ಅನಂತರ ಶಿವನು ನಂದಿಯೊಡನೆಯೂ ಷಣ್ಮುಖ ಮತ್ತು ಪಾರ್ವತಿ ಯರೊಡನೆಯೂ ಎಲ್ಲ ದೇವತೆಗಳಿಂದಲೂ ನಮಸ್ಕಾರಗಳನ್ನು ಕೈಗೊಳ್ಳುತ್ತಾ ತನ್ನ ಮಂದಿರವನ್ನು ಪ್ರವೇಶಿಸಿದನು.

೧೧. ಓ ಮಹರ್ಷೀ, ಬಳಿಕ ದೇವತೆಗಳೆಲ್ಲರೂ ಬಹುವಾಗಿ ವ್ಯಾಕುಲವುಳ್ಳವ ರಾಗಿ ದೇವದೇವನಾದ ಶಿವನ ಮಂದಿರದ ಬಾಗಿಲ ಉಭಯಪಾರ್ಶ್ವದಲ್ಲೂ ನಿಂತು ಕೊಂಡರು.

೧೨-೧೩. ನಾವು ಈಗೇನು ಮಾಡಬೇಕು ? ಎಲ್ಲಿಗೆ ಹೋಗಬೇಕು ? ನಮ್ಮ ಕಷ್ಟಗಳನ್ನೆಲ್ಲಾ ಪರಿಹರಿಸಿ ನಮಗೆ ಸೌಖ್ಯವನ್ನುಂಟುಮಾಡುವವನು ಯಾರು ? ಈಗ

ಅನ್ಯೋನ್ಯಂ ಪ್ರೇಕ್ಷ್ಯ ಶಕ್ರಾದ್ಯಾ ಬಭೂವುಶ್ಚಾತಿವಿಹ್ವಲಾಃ ।
ಪ್ರೋಚುರ್ವಿಕಲವಾಕ್ಯಂ ತೇ ಧಿಕ್ಕುರ್ವಂತೋ ನಿಜಂ ವಿಧಿಂ ॥ ೧೩ ॥

ಪಾಪಾ ವಯಮಿಹೇತ್ಯನ್ಯೇ ಹ್ಯಭಾಗ್ಯಾಶ್ಚೇತಿ ಚಾಪರೇ ।
ತೇ ಭಾಗ್ಯವಂತೋ ದೈತ್ಯೇಂದ್ರಾ ಇತಿ ಚಾನ್ಯೇಽಬ್ರುವನ್ ಸುರಾಃ ॥ ೧೪ ॥

ತಸ್ಮಿನ್ನೇವಾಂತರೇ ತೇಷಾಂ ಶ್ರುತ್ವಾ ಶಬ್ದಾನನೇಕಶಃ ।
ಕುಂಭೋದರೋ ಮಹಾತೇಜಾ ದಂಡೇನಾತಾಡಯತ್ಸುರಾನ್ ॥ ೧೫ ॥

ದುದ್ರುವುಸ್ತೇ ಭಯಾವಿಷ್ಟಾ ದೇವಾ ಹಾಹೇತಿ ವಾದಿನಃ ।
ಅಪತನ್ಮುನಯಶ್ಚಾನ್ಯೇ ವಿಹ್ವಲತ್ವಂ ಬಭೂವ ಹ ॥ ೧೬ ॥

ಇಂದ್ರಸ್ತು ವಿಕಲೋಽತೀವ ಜಾನುಭ್ಯಾಮವನೀಂ ಗತಃ ।
ಅನ್ಯೇ ದೇವರ್ಷಯೋಽತೀವ ವಿಕಲಾಃ ಪತಿತಾ ಭುವಿ ॥ ೧೭ ॥

---

ಏನೋ ಆಗಿಹೋಯಿತಲ್ಲಾ ! ಅಯ್ಯೋ ಸಾವು ಸತ್ತೆವು ಎಂದು ಮುಂತಾಗಿ ಇಂದ್ರಾದಿ ದೇವತೆಗಳು ಒಬ್ಬರ ಮುಖವನ್ನು ಒಬ್ಬರು ನೋಡುತ್ತಾ ಬಹುವಾಗಿ ವ್ಯಾಕುಲತೆಯನ್ನು ಹೊಂದಿ ತಮ್ಮ ಹಣೆಯಬರೆಹವನ್ನು ನಿಂದಿಸುತ್ತಾ ಅಧೈರ್ಯದ ಮಾತುಗಳನ್ನಾಡುತ್ತಿದ್ದರು.

೧೪. ಕೆಲವು ದೇವತೆಗಳು ತಾವು ಪಾಪಿಷ್ಠರೆಂದು ಹಳಿದುಕೊಂಡರು. ಮತ್ತೆ ಕೆಲವರು ತಾವು ಭಾಗ್ಯಹೀನರೆಂದುಕೊಂಡರು. ಇನ್ನೂ ಕೆಲವರು ಆ ತ್ರಿಪುರಾಸುರರೇ ಭಾಗ್ಯವಂತರು ಎಂದು ಹೇಳುತ್ತಿದ್ದರು.

೧೫. ಅಷ್ಟರಲ್ಲಿ ದುಃಖದಿಂದ ವ್ಯಥೆಪಡುತ್ತಲಿದ್ದ ದೇವತೆಗಳ ನಾನಾವಿಧವಾದ ಆಕ್ರಂದನವನ್ನು ಕೇಳಿ ಕುಂಭೋದರನೆಂಬ ಗಣಾಧಿಪತಿಯು ತನ್ನ ಕೈಲಿದ್ದ ಕೋಲಿನಿಂದ ಅವರನ್ನು ಹೊಡೆದಟ್ಟಿದನು.

೧೬. ಬಳಿಕ ದೇವತೆಗಳು ಭಯದಿಂದ ತತ್ತಳಿಸುತ್ತಾ ಹಾಹಾ ಎಂದು ಚೀರಿಡುತ್ತಾ ಓಡಲಾರಂಭಿಸಿದರು. ಕೆಲವು ಮಂದಿ ಮುನಿಗಳು ಗಾಬರಿಯಿಂದ ಮುಗ್ಗರಿಸಿದರು. ಎಲ್ಲೆಲ್ಲಿಯೂ ಕಳವಳವು ಹಬ್ಬಿಹೋಯಿತು.

೧೭. ಇಂದ್ರನು ಬಹಳ ಅಧೀರನಾಗಿ ನೆಲದಮೇಲೆ ಮಂಡಿಯೂರಿ ಕುಳಿತುಬಿಟ್ಟನು. ಇತರ ದೇವತೆಗಳೂ ಋಷಿಗಳೂ ಹೆದರಿಕೆಯಿಂದ ನೆಲದಮೇಲೆ ಬಿದ್ದುಬಿಟ್ಟರು.

ಸರ್ವೇ ಮಿಲಿತ್ವಾ ಮುನಯಸ್ಸುರಾಶ್ಚ ಸಮುಪಾಕುಲಾಃ ।
ಸಂಗತಾ ವಿಧಿಹರ್ಯೋರ್ವೈಸ್ತು ಸಮೀಪಂ ಮಿತ್ರಚೇತಸೋಃ ॥ ೧೮ ॥

ಅಹೋ ವಿಧಿಬಲಂ ಚೈತನ್ಮುನಯಃ ಕಶ್ಯಪಾದಯಃ ।
ವದಂತಿ ಸ್ಮ ತದಾ ಸರ್ವೇ ಹರಿಂ ಲೋಕಭಯಾಪಹಂ ॥ ೧೯ ॥

ಅಭಾಗ್ಯಾನ್ನ ಸಮಾಪ್ತಂ ತು ಕಾರ್ಯಮಿತ್ಯಪರೇ ದ್ವಿಜಾಃ ।
ಕಸ್ಮಾದ್ವಿಘ್ನಮಿದಂ ಜಾತಮಿತ್ಯನ್ಯೇ ಹ್ಯತಿವಿಸ್ಮಿತಾಃ ॥ ೨೦ ॥

ಇತ್ಯೇವಂ ವಚನಂ ಶ್ರುತ್ವಾ ಕಶ್ಯಪಾದ್ಯುದಿತಂ ಮುನೇ ।
ಆಶ್ವಾಸಯನ್ಮುನೀನ್ದೇವಾನ್ ಹರಿರ್ವಾಕ್ಯಮುಪಾದದೇ ॥ ೨೧ ॥

॥ ವಿಷ್ಣುರುವಾಚ ॥

ಹೇ ದೇವಾ ಮುನಯಸ್ಸರ್ವೇ ಮದ್ವಚಶ್ಶೃಣುತಾದರಾತ್ ।
ಕಿಮರ್ಥಂ ದುಃಖಮಾಪನ್ನಾ ದುಃಖಂ ತು ತ್ಯಜತಾಖಿಲಂ ॥ ೨೨ ॥

---

೧೮-೨೦. ಆಮೇಲೆ ದೇವತೆಗಳೂ ಋಷಿಗಳೂ ದುಃಖಸುತ್ತಾ ಎಲ್ಲರೂ ಜೊತೆ ಸೇರಿ ತಮ್ಮಲ್ಲಿ ಸ್ನೇಹಭಾವವನ್ನುಳ್ಳ ಬ್ರಹ್ಮ ಮತ್ತು ಶ್ರೀಹರಿಯ ಸಮೀಪಕ್ಕೆ ಬಂದರು. ಕಶ್ಯಪಾದಿ ಮುನಿಗಳು ಜಗತ್ತಿನ ಭಯವನ್ನು ನಿವಾರಣೆಮಾಡುವ ಶ್ರೀ ಹರಿಯನ್ನು ಕುರಿತು ಅಯ್ಯೋ ವಿಧಿಯು ಬಲವೇ ಬಲ ಎಂದು ನುಡಿಯುತ್ತಿದ್ದರು. ಕೆಲವು ಜನ ನಮ್ಮ ದುರದೃಷ್ಟದಿಂದ ಕೆಲಸವು ಸಂಪೂರ್ಣವಾಗಲಿಲ್ಲ ಎಂದರು. ಇನ್ನೂ ಕೆಲವುಮಂದಿ ಬಹಳ ಆಶ್ಚರ್ಯದಿಂದ, ಏತರಿಂದ ಹೀಗೆ ವಿಘ್ನವೊದಗಿತು ಎನ್ನುತ್ತಿದ್ದರು.

೨೧. ಓ ವ್ಯಾಸ, ಹೀಗೆ ಕಶ್ಯಪಾದಿಗಳು ಆಡುತ್ತಿರುವ ಮಾತುಗಳನ್ನು ಕೇಳಿ ಶ್ರೀಹರಿಯು ದೇವತೆಗಳನ್ನೂ ಮುನಿಗಳನ್ನೂ ಸಮಾಧಾನಪಡಿಸುತ್ತಾ ಇಂತು ನುಡಿದರು.

೨೨. ಎಲೈ ದೇವತೆಗಳಿರಾ, ಮುನಿಗಳಿರಾ, ನನ್ನ ಮಾತನ್ನು ಆದರದಿಂದ ಕೇಳಿ. ನೀವೇಕೆ ದುಃಖಪಡುವಿರಿ. ನಿಮ್ಮ ದುಃಖವೆಲ್ಲವನ್ನೂ ಬಿಟ್ಟುಬಿಡಿರಿ.

ಮಹದಾರಾಧನಂ ದೇವಾ ನ ಸುಸಾಧ್ಯಂ ವಿಚಾರ್ಯತಾಂ ।
ಮಹದಾರಾಧನೇ ಪೂರ್ವಂ ಭವೇದ್ದುಃಖಮಿತಿ ಶ್ರುತಂ ॥ ೨೩ ॥

ವಿಜ್ಞಾಯ ದೃಢತಾಂ ದೇವಾ ಪ್ರಸನ್ನೋ ಭವತಿ ಧ್ರುವಂ ।
ಶಿವಸ್ಸರ್ವಗಣಾಧ್ಯಕ್ಷಃ ಸಹಸಾ ಪರಮೇಶ್ವರಃ ।
ವಿಚಾರ್ಯತಾಂ ಹೃದಾ ಸರ್ವೈಃ ಕಥಂ ವಶ್ಯೋ ಭವೇದಿತಿ ॥ ೨೪ ॥

ಪ್ರಣವಂ ಪೂರ್ವಮುಚ್ಚಾರ್ಯ ನಮಃ ಪಶ್ಚಾದುದಾಹರೇತ್ ।
ಶಿವಾಯೇತಿ ತತಃ ಪಶ್ಚಾಚ್ಛುಭದ್ವಯ ಮತಃ ಪರಂ ॥ ೨೫ ॥

ಕುರುದ್ವಯಂ ತತಃ ಪ್ರೋಕ್ತಂ ಶಿವಾಯ ಚ ತತಃ ಪುನಃ ।
ನಮಶ್ಚ ಪ್ರಣವಶ್ಚೈವ ಮಂತ್ರಮೇವಂ ಸದಾ ಬುಧಾಃ ॥ ೨೬ ॥

ಆವರ್ತಧ್ವಂ ಪುನರ್ಯೂಯಂ ಯದಿ ಶಂಭುಕೃತೇ ತದಾ ।
ಕೋಟಿಮೇಕಂ ತಥಾ ಜಪ್ತ್ವಾ ಶಿವಃ ಕಾರ್ಯಂ ಕರಿಷ್ಯತಿ ॥ ೨೭ ॥

---

೨೩. ದೊಡ್ಡವರನ್ನು ಸೇವಿಸುವುದು ಸುಲಭವಲ್ಲ. ಅವರನ್ನು ಸೇವಿಸುವಾಗ ಮೊದಲು ತೊಂದರೆಯುಂಟಾಗುವುದೆಂದು ಕೇಳಿರುವೆನು. ನೀವೇ ಆಲೋಚಿಸಿರಿ. ನಮ್ಮ ದಾರ್ಢ್ಯವನ್ನು ಪರೀಕ್ಷಿಸಿ ನೋಡಿ, ಆಮೇಲೆ ಶಿವನು ಪ್ರಸನ್ನನಾಗುವುದು ಖಂಡಿತ.

೨೪. ಗಣಗಳಿಗೆಲ್ಲಾ ಅಧಿಪತಿಯೂ ಪರಮೇಶ್ವರನೂ ಆದ ಶಿವನು ವಶನಾಗುವುದಾದರೂ ಹೇಗೆ ಎಂಬುವುದನ್ನು ನೀವೆಲ್ಲರೂ ನಿಮ್ಮ ಮನಸ್ಸಿನಲ್ಲಿಯೇ ವಿಚಾರ ಮಾಡಿ ನೋಡಿ.

೨೫-೨೭. ಮೊದಲು ಪ್ರಣವವನ್ನುಚ್ಚರಿಸಿ ಬಳಿಕ ನಮಃ ಎಂಬುದನ್ನು ಉಚ್ಚರಿಸಬೇಕು. ಆಮೇಲೆ ಶಿವಾಯ ಎಂಬುದನ್ನೂ ಅದಾದಮೇಲೆ ಶುಭಂ ಎಂಬುದಾಗಿ ಎರಡುಸಲವೂ ಉಚ್ಚರಿಸಿದಮೇಲೆ ಕುರು ಎಂದು ಎರಡುಬಾರಿ ಹೇಳಿ ಬಳಿಕ ಶಿವಾಯ ಎಂತಲೂ ಆಮೇಲೆ ನಮಃ ಎಂತಲೂ ಅದೂ ಆದಮೇಲೆ ಪುನಃ ಪ್ರಣವವನ್ನೂ ಸೇರಿಸಿ ಹೇಳಿದರೆ ಶಿವನಿಗೆ ಪ್ರೀತಿಕರವಾದ ಮಂತ್ರವಾಗುವುದು. ಓಂ ನಮಶ್ಶಿವಾಯ ಶುಭಂ ಶುಭಂ ಕುರು ಕುರು ಶಿವಾಯ ನಮ ಓಂ ಎಂಬುದಾಗಿ ಈ ಮಂತ್ರೋದ್ಧಾರವಿರುವುದು. ಎಲೈ ದೇವರ್ಷಿಗಳಿರಾ, ನೀವು ಶಿವನನ್ನು ಒಲಿಸಿಕೊಳ್ಳ

ಇತ್ಯುಕ್ತೇ ಚ ತದಾ ತೇನ ಹರಿಣಾ ಪ್ರಭವಿಷ್ಣುನಾ ।
ತಥಾ ದೇವಾಃ ಪುನಶ್ಚಕ್ರುರ್ಹರಸ್ಯಾರಾಧನಂ ಮುನೇ ॥ ೨೮ ॥

ಸಂಜಜಾಪ ಹರಿಶ್ಚಾಪಿ ಸವಿಧಿಶ್ಶಿವಮಾನಸಃ ।
ದೇವಾನಾಂ ಕಾರ್ಯಸಿದ್ಧ್ಯರ್ಥಂ ಮುನೀನಾಂ ಚ ವಿಶೇಷತಃ ॥ ೨೯ ॥

ಮುಹುಶ್ಶಿವೇತಿ ಭಾಷಂತೋ ದೇವಾ ಧೈರ್ಯಸಮನ್ವಿತಾಃ ।
ಕೋಟಿಸಂಖ್ಯಂ ತದಾ ಕೃತ್ವಾ ಸ್ಥಿತಾಸ್ತೇ ಮುನಿಸತ್ತಮ ॥ ೩೦ ॥

ಏತಸ್ಮಿನ್ನಂತರೇ ಸಾಕ್ಷಾಚ್ಛಿವಃ ಪ್ರಾದುರಭೂತ್ಸ್ವಯಂ ।
ಯಥೋಕ್ತೇನ ಸ್ವರೂಪೇಣ ವಚನಂ ಚೇದಮಬ್ರವೀತ್ ॥ ೩೧ ॥

॥ ಶಿವ ಉವಾಚ ॥

ಹೇ ಹರೇ ಹೇ ವಿಧೇ ದೇವಾ ಮುನಯಶ್ಚ ಶುಭವ್ರತಾಃ ।
ಪ್ರಸನ್ನೋಽಸ್ಮಿ ವರಂ ಬ್ರೂತ ಜಪೇನಾನೇನ ಚೇಪ್ಸಿತಂ ॥ ೩೨ ॥

---

ಲೋಸುಗ ಒಂದು ಕೋಟಿಯಷ್ಟು ಈ ಮಂತ್ರವನ್ನು ಜಪಿಸಿದುದೇ ಆದರೆ ಶಿವನು ನಿಮ್ಮ ಕೆಲಸವನ್ನು ನೆರವೇರಿಸಿಕೊಡುವನು.

೨೮. ಈರೀತಿಯಾಗಿ ಪ್ರಭುವಾದ ವಿಷ್ಣುವು ನುಡಿಯಲಾಗಿ ದೇವತೆಗಳು ಪುನಃ ಶಿವನನ್ನು ಸೇವಿಸತೊಡಗಿದರು.

೨೯. ವಿಷ್ಣುವೂ ಸಹ ದೇವತೆಗಳ ಮತ್ತು ಋಷಿಗಳ ಕೆಲಸವು ನೆರವೇರುವುದಕ್ಕಾಗಿ ವಿಧಿಪೂರ್ವಕವಾಗಿ ಶಿವನಲ್ಲೇ ನೆಟ್ಟಮನಸ್ಸಿನಿಂದ ಮೇಲೆ ಹೇಳಿದ ಮಂತ್ರವನ್ನು ಜಪಿಸತೊಡಗಿದನು.

೩೦. ಓ ವ್ಯಾಸಮಹರ್ಷೀ, ದೇವತೆಗಳೂ ಸಹ ಧೈರ್ಯವನ್ನವಲಂಬಿಸಿ ಬಾರಿಬಾರಿಗೂ ಶಿವ ಶಿವ ಎನ್ನುತ್ತಾ ಒಂದುಕೋಟಿ ಮಂತ್ರಜಪವನ್ನು ಮಾಡಿ ನಿಂತುಕೊಂಡರು.

೩೧. ಇಷ್ಟರೊಳಗಾಗಿ ಸಾಕ್ಷಾತ್ಪರಶಿವನು ತನ್ನ ದಿವ್ಯವಾದ ರೂಪದಿಂದ ಪ್ರತ್ಯಕ್ಷನಾಗಿ ಅವರನ್ನಿಂತೆಂದನು.

೩೨. ಓ ಹರೀ, ಬ್ರಹ್ಮ, ಶುಭವಾದ ವ್ರತವನ್ನು ನೆರವೇರಿಸಿದ ಎಲ್ಲೈ ದೇವತೆಗಳೇ, ಮುನಿಗಳೇ, ನಿಮ್ಮ ಈ ಜಪದಿಂದ ನಾನು ಪ್ರಸನ್ನನಾಗಿರುವೆನು. ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿರಿ ಎನ್ನಲು,

॥ ದೇವಾ ಊಚುಃ ॥

ಯದಿ ಪ್ರಸನ್ನೋ ದೇವೇಶ ಜಗದೀಶ್ವರ ಶಂಕರ ।
ಸುರಾನ್ ವಿಜ್ಞಾಯ ವಿಕಲಾನ್ ಹನ್ಯಂತಾಂ ತ್ರಿಪುರಾಣಿ ಚ ॥ ೩೩ ॥

ರಕ್ಷಾಸ್ಮಾನ್ ಪರಮೇಶಾನ ದೀನಬಂಧೋ ಕೃಪಾಕರ ।
ತ್ವಯೈವ ರಕ್ಷಿತಾ ದೇವಾಸ್ಸದಾಪದ್ಭ್ಯೋ ಮುಹುರ್ಮುಹುಃ ॥ ೩೪ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತಂ ವಚನಂ ತೇಷಾಂ ಶ್ರುತ್ವಾ ಸಹರಿವೇಧಸಾಂ ।
ವಿಹಸ್ಯಾಂತಸ್ತದಾ ಬ್ರಹ್ಮನ್ ಮಹೇಶಃ ಪುನರಬ್ರವೀತ್ ॥ ೩೫ ॥

॥ ಮಹೇಶ ಉವಾಚ ॥

ಹೇ ಹರೇ ಹೇ ವಿಧೇ ದೇವಾ ಮುನಯಶ್ಚಾಖಿಲಾ ವಚಃ ।
ಮದೀಯಂ ಶೃಣುತಾದೃತ್ಯ ನಷ್ಟಂ ಮತ್ವಾ ಪುರತ್ರಯಂ ॥ ೩೬ ॥

---

೩೩-೩೪. ದೇವತೆಗಳೆಲ್ಲರೂ ಶಿವನನ್ನು ಕುರಿತು, ಎಲೈ ಜಗತ್ಪ್ರಭುವಾದ ಶಂಕರನೇ, ನೀನು ಪ್ರಸನ್ನನಾಗಿದ್ದರೆ ನಾವೆಲ್ಲರೂ ದುಃಖಿತರಾಗಿರುವುದನ್ನು ಮನಗಂಡು, ಆ ತ್ರಿಪುರಗಳನ್ನು ಸಂಹರಿಸಿ ನಮ್ಮೆಲ್ಲರನ್ನೂ ಕಾಪಾಡು. ಹೇ ದೀನಬಂಧು, ಕರುಣಾಕರ, ದೇವತೆಗಳಾದ ನಾವೆಲ್ಲರೂ ಸರ್ವದಾ ಪುನಃಪುನಃ ಬಂದು ಒದಗುತ್ತಿರುವ ಸಂಕಟಗಳ ದೆಸೆಯಿಂದ ನಿನ್ನಿಂದಲೇ ಪಾರುಮಾಡಲ್ಪಟ್ಟಿರುತ್ತೇವೆ ಎಂದರು.

೩೫. ಸನತ್ಕುಮಾರನಿಂತೆಂದನು:—ಓ ವ್ಯಾಸಮಹರ್ಷಿಯೇ, ಹೀಗೆ ವಿಷ್ಣು ಬ್ರಹ್ಮರೊಂದಿಗೆ ದೇವತೆಗಳಾಡಿದ ಮಾತನ್ನು ಕೇಳಿ ಮನಸ್ಸಿನಲ್ಲಿಯೇ ನಕ್ಕು ಮತ್ತೆ ಅವರನ್ನು ಕುರಿತು ಶ್ರೀ ಶಿವನು ಇಂತೆಂದನು.

೩೬. ಎಲೈ ಬ್ರಹ್ಮವಿಷ್ಣ್ವಾದಿ ದೇವತೆಗಳಿರಾ ಮತ್ತು ಮುನಿಗಳಿರಾ, ನೀವೆಲ್ಲರೂ ಆ ತ್ರಿಪುರಗಳು ನಿರ್ನಾಮವಾದುವೆಂದು ತಿಳಿದು ನನ್ನ ಮಾತನ್ನು ಆದರದೊಡನೆ ಕೇಳಿರಿ.

ರಥಂ ಚ ಸಾರಥಿಂ ದಿವ್ಯಂ ಕಾರ್ಮುಕಂ ಶರಮುತ್ತಮಂ ।
ಪೂರ್ವಮಂಗೀಕೃತಂ ಸರ್ವಮುಪಪಾದಯತಾಚಿರಂ ॥ ೩೭ ॥

ಹೇ ವಿಷ್ಣೋ ಹೇ ವಿಧೇ ತ್ವಂ ಹಿ ತ್ರಿಲೋಕಾಧಿಪತಿರ್ಧ್ರುವಂ ।
ಸರ್ವಸಮ್ರಾಟ್ಪ್ರಕಾರಂ ಮೇ ಕರ್ತುಮರ್ಹಸಿ ಯತ್ನತಃ ॥ ೩೮ ॥

ನಷ್ಟಂ ಪುರತ್ರಯಂ ಮತ್ವಾ ದೇವಸಾಹಾಯ್ಯಮಿತ್ಯುತ ।
ಕರಿಷ್ಯಥಃ ಪ್ರಯತ್ನೇನಾಧಿಕೃತಾ ಸರ್ಗಪಾಲನೇ ॥ ೩೯ ॥

ಅಯಂ ಮಂತ್ರೋ ಮಹಾಪುಣ್ಯೋ ಮತ್ಪ್ರೀತಿಜನಕಶ್ಶುಭಃ ।
ಭುಕ್ತಿಮುಕ್ತಿಪ್ರದಸ್ಸರ್ವಕಾಮದಶ್ಶೈವಕಾವಹಃ ॥ ೪೦ ॥

ಧನ್ಯೋ ಯಶಸ್ಯ ಆಯುಷ್ಯಃ ಸ್ವರ್ಗಕಾಮಾರ್ಥಿನಾಂ ನೃಣಾಂ ।
ಅಪವರ್ಗೋ ಹ್ಯಕಾಮಾನಾಂ ಮುಕ್ತಾನಾಂ ಭುಕ್ತಿಮುಕ್ತಿದಃ ॥ ೪೧ ॥

---

೩೭. ದಿವ್ಯವಾದ ತೇರು, ಸೊಗಸಾದ ಸಾರಥಿ, ಉತ್ತಮವಾದ ಧನುರ್ಬಾಣಗಳು ಇವನ್ನು ಒದಗಿಸುವೆವೆಂದು ನೀವು ಮೊದಲೇ ಒಪ್ಪಿಕೊಂಡಿರುವಿರಷ್ಟೆ? ಅವೆಲ್ಲವನ್ನೂ ಬೇಗನೆ ಸಿದ್ಧಪಡಿಸಿ.

೩೮-೩೯. ಎಲೈ ಬ್ರಹ್ಮವಿಷ್ಣುಗಳಿರಾ, ನಿಜವಾಗಿಯೂ ನೀವೇ ಮೂರು ಲೋಕಗಳಿಗೂ ಅಧಿಪತಿಗಳು. ನೀವು ಹಿಂದೆ ಹೇಳಿದಂತೆ ಸಾರ್ವಭೌಮನಿಗೆ ಇರಬೇಕಾದ ಎಲ್ಲ ಪರಿಕರಗಳನ್ನೂ ನನಗೆ ಒದಗಿಸಿಕೊಡಿ. ಆ ಪುರತ್ರಯವು ನಾಶವಾಯಿತೆಂದೇ ತಿಳಿದು ಪ್ರಪಂಚದ ಸೃಷ್ಟಿ ಮತ್ತು ರಕ್ಷಣಾಕಾರ್ಯಗಳನ್ನು ನೀವೀರ್ವರೂ ನಡೆಸುತ್ತಿರಿ.

೪೦-೪೧. ಈ ಮಂತ್ರವು ಮಹಾಪುಣ್ಯಕರವಾದುದು. ನನಗೆ ಪ್ರೀತಿಯನ್ನುಂಟುಮಾಡತಕ್ಕುದು. ಶುಭಪ್ರದವಾದುದು. ಭೋಗಮೋಕ್ಷಗಳನ್ನೂ, ಸಕಲೇಷ್ಟಾರ್ಥಗಳನ್ನೂ ಒದಗಿಸುವಂಥದು. ಶಿವಭಕ್ತಿಯುಳ್ಳವರಿಗೆ ಸುಖವನ್ನು ನೀಡುವಂಥದು. ಸ್ವರ್ಗಾದಿ ಫಲಗಳನ್ನು ಅಪೇಕ್ಷಿಸುವ ಮನುಷ್ಯರಿಗೆ ಆಯುಸ್ಸನ್ನೂ ಯಶಸ್ಸನ್ನೂ ಹೆಚ್ಚಿಸುವಂಥದು. ನಿಷ್ಕಾಮರಾದ ಕೇವಲ ಮೋಕ್ಷಾಪೇಕ್ಷಿಗಳಿಗೆ ಕೈವಲ್ಯವನ್ನು ಕೊಡುವಂಥದು.

ಯ ಇಮಂ ಕೀರ್ತಯೇನ್ಮಂತ್ರಂ ಶುಚಿರ್ಭೂತ್ವಾ ಸದಾ ನರಃ ।
ಶೃಣುಯಾಚ್ಛ್ರಾವಯೇದ್ವಾಪಿ ಸರ್ವಾನ್ ಕಾಮಾನವಾಪ್ನುಯಾತ್ ॥೪೨॥

॥ ಸನತ್ಕುಮಾರ ಉವಾಚ ॥
ಇತಿ ಶ್ರುತ್ವಾ ವಚಸ್ತಸ್ಯ ಶಿವಸ್ಯ ಪರಮಾತ್ಮನಃ ।
ಸರ್ವೇ ದೇವಾ ಮುದಂ ಪ್ರಾಪುರ್ಹರಿರ್ಬ್ರಹ್ಮಾಧಿಕಂ ತಥಾ ॥ ೪೩ ॥

ಸರ್ವದೇವಮಯಂ ದಿವ್ಯಂ ರಥಂ ಪರಮಶೋಭನಂ ।
ರಚಯಾಮಾಸ ವಿಶ್ವಾರ್ಥೇ ವಿಶ್ವಕರ್ಮಾ ತದಾಜ್ಞಯಾ ॥ ೪೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ದೇವಸ್ತುತಿವರ್ಣನಂ ನಾಮ
ಸಪ್ತಮೋಽಧ್ಯಾಯಃ

---

೪೨. ಯಾವ ಮನುಷ್ಯನು ಶುಚಿರ್ಭೂತನಾಗಿ ನಿತ್ಯವೂ ಈ ಮಂತ್ರವನ್ನು ಜಪಿಸುವನೋ ಅಥವಾ ಕೇಳುವನೋ ಇಲ್ಲವೇ ಮತ್ತೊಬ್ಬರ ಕಿವಿಗೆ ಶ್ರವಣಮಾಡಿಸುವನೋ ಆತನು ಎಲ್ಲ ಅಭೀಷ್ಟಗಳನ್ನೂ ಪಡೆಯುವನು ಎಂದನು.

೪೩. ಸನತ್ಕುಮಾರನು ನುಡಿದನು :—ಓ ವ್ಯಾಸ, ಈರೀತಿ ಪರಮಪುರುಷನಾದ ಶಿವನು ಹೇಳಿದ ಮಾತನ್ನು ಕೇಳಿ ದೇವತೆಗಳೆಲ್ಲರೂ ಹರ್ಷವನ್ನು ತಾಳಿದರು. ಶ್ರೀಹರಿಯೂ ಬ್ರಹ್ಮನೂ ಮತ್ತಷ್ಟು ಹೆಚ್ಚಾಗಿ ಸಂತೋಷಪಟ್ಟರು.

೪೪. ಬಳಿಕ ಸಕಲ ದೇವತೆಗಳ ಅಂಶವನ್ನು ಒಳಗೊಂಡ ಬಹು ರಮ್ಯವಾದ ಸೊಗಸಾದ ತೇರನ್ನು ಜಗತ್ಕಲ್ಯಾಣಕ್ಕೋಸ್ಕರ ಬ್ರಹ್ಮವಿಷ್ಣುಗಳ ಅಪ್ಪಣೆಯಂತೆ ವಿಶ್ವಕರ್ಮನು ವಿರಚಿಸಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ಎರಡನೆಯ ರುದ್ರಸಂಹಿತೆಯಲ್ಲಿ ಐದನೆಯ
ಯುದ್ಧಖಂಡದ ದೇವಸ್ತುತಿವರ್ಣನವೆಂಬ ಏಳನೆಯ ಅಧ್ಯಾಯವು
ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಅಷ್ಟಮೋಽಧ್ಯಾಯಃ

---

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ಶೈವಪ್ರವರ ಸನ್ಮತೇ ।
ಅದ್ಭುತೇಯಂ ಕಥಾ ತಾತ ಶ್ರಾವಿತಾ ಪರಮೇಶಿತುಃ ॥ ೧ ॥

ಇದಾನೀಂ ರಥನಿರ್ಮಾಣಂ ಬ್ರೂಹಿ ದೇವಮಯಂ ಪರಂ ।
ದೇವಾರ್ಥಂ ಯತ್ಕೃತಂ ದಿವ್ಯಂ ಧೀಮತಾ ವಿಶ್ವಕರ್ಮಣಾ ॥ ೨ ॥

---

## ಎಂಟನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯು ಸನತ್ಕುಮಾರನನ್ನು ಕುರಿತು—ಓ ಸರ್ವಜ್ಞ, ನೀನು ಶಿವಭಕ್ತಾಗ್ರೇಸರನು. ಪರಮೇಶ್ವರನ ಅದ್ಭುತವಾದ ಚರಿತ್ರವನ್ನು ನನಗೆ ಶ್ರವಣಮಾಡಿಸಿದೆ.

೨. ಚದುರನಾದ ದೇವಶಿಲ್ಪಿ ವಿಶ್ವಕರ್ಮನು ಶಿವನಿಗೋಸ್ಕರ ಸರ್ವದೇವ ಮಯವಾದ ದಿವ್ಯವಾದ ರಥವನ್ನು ರಚಿಸಿದನೆಂದು ಹೇಳಿದೆಯಷ್ಟೆ? ಆ ರಥನಿರ್ಮಾಣದ ರೀತಿಯನ್ನು ಈಗ ನನಗೆ ವಿವರಿಸು ಎಂದನು.

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ವ್ಯಾಸಸ್ಯ ಸ ಮುನೀಶ್ವರಃ ।
ಸನತ್ಕುಮಾರಃ ಪ್ರೋವಾಚ ಸ್ಮೃತ್ವಾ ಶಿವಪದಾಂಬುಜಂ ॥ ೩ ॥

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಮಹಾಪ್ರಾಜ್ಞ ರಥಾದೇರ್ನಿರ್ಮಿತಿಂ ಮುನೇ ।
ಯಥಾಮತಿ ಪ್ರವಕ್ಷ್ಯೇಽಹಂ ಸ್ಮೃತ್ವಾ ಶಿವಪದಾಂಬುಜಂ ॥ ೪ ॥

ಅಥ ದೇವಸ್ಯ ರುದ್ರಸ್ಯ ನಿರ್ಮಿತೋ ವಿಶ್ವಕರ್ಮಣಾ ।
ಸರ್ವಲೋಕಮಯೋ ದಿವ್ಯೋ ರಥೋ ಯತ್ನೇನ ಸಾದರಂ ॥ ೫ ॥

ಸರ್ವಭೂತಮಯಶ್ಚೈವ ಸೌವರ್ಣಸ್ಸರ್ವಸಮ್ಮತಃ ।
ರಥಾಂಗಂ ದಕ್ಷಿಣಂ ಸೂರ್ಯಸ್ತದ್ವಾಮಂ ಸೋಮ ಏವ ಚ ॥ ೬ ॥

---

೩. ಸೂತನಿಂತೆಂದನು—ಎಲೈ ಶೌನಕಾದಿಗಳಿರಾ! ಹೀಗೆ ವ್ಯಾಸಮಹರ್ಷಿಯು ಕೇಳಿದ ಪ್ರಶ್ನೆಗೆ ಉತ್ತರವಾಗಿ, ಮುನಿಶ್ರೇಷ್ಠನಾದ ಸನತ್ಕುಮಾರನು ಶಿವನ ಚರಣಕಮಲಗಳನ್ನು ಧ್ಯಾನಿಸಿ ಈ ರೀತಿ ಹೇಳತೊಡಗಿದನು,

೪. ಸನತ್ಕುಮಾರನು ಹೇಳುತ್ತಾನೆ—ಎಲೈ ಮಹಾಜ್ಞಾನಿಯಾದ ವ್ಯಾಸ ಮಹರ್ಷಿಯೇ ಕೇಳು. ಶಿವನ ಚರಣಕಮಲಗಳನ್ನು ಸ್ಮರಿಸಿ, ನನಗೆ ತಿಳಿದಮಟ್ಟಿಗೆ ಆ ದಿವ್ಯವಾದ ರಥವನ್ನು ನಿರ್ಮಾಣಮಾಡಿದ ಬಗೆಯನ್ನು ನಿನಗೆ ವಿವರಿಸುವೆನು.

೫. ಬಳಿಕ ಬ್ರಹ್ಮವಿಷ್ಣುಗಳ ಅಪ್ಪಣೆಯಂತೆ ವಿಶ್ವಕರ್ಮನು ಶಿವನಿಗೋಸುಗ ಸರ್ವಲೋಕಮಯವೂ ಸುಂದರವೂ ಆದ ರಥವನ್ನು ಬಹಳ ಶ್ರಮವಹಿಸಿ ಆಸಕ್ತಿಯಿಂದ ನಿರ್ಮಿಸಿದನು.

೬. ಆ ರಥವು ಎಲ್ಲರಿಗೂ ಒಪ್ಪಿಗೆಯಾಗುವಂತೆ, ಸಕಲ ಭೂತಗಳ (ಚರಾಚರ ವಸ್ತುಗಳ) ತೇಜಸ್ಸನ್ನೂ ಒಳಗೊಂಡು ಚಿನ್ನದಿಂದ ಮಾಡಲ್ಪಟ್ಟಿತ್ತು. ಆ ತೇರಿನ ಬಲಚಕ್ರವು ಸೂರ್ಯನು, ಎಡಚಕ್ರವು ಚಂದ್ರನು.

ದಕ್ಷಿಣಂ ದ್ವಾದಶಾರಂ ಹಿ ಷೋಡಶಾರಂ ತಥೋತ್ತರಂ ।
ಅರೇಷು ತೇಷು ವಿಪ್ರೇಂದ್ರ ಆದಿತ್ಯಾ ದ್ವಾದಶೈವ ತು ॥ ೭ ॥

ಶಶಿನಷ್ಷೋಡಶಾರಾಸ್ತು ಕಲಾ ವಾಮಸ್ಯ ಸುವ್ರತ ।
ಋಕ್ಷಾಣಿ ತು ತಥಾ ತಸ್ಯ ವಾಮಸ್ಯೈವ ವಿಭೂಷಣಂ ॥ ೮ ॥

ಋತವೋ ನೇಮಯಷ್ಷಟ್ಚ ತಯೋರ್ವೈ ವಿಪ್ರಪುಂಗವ ।
ಪುಷ್ಕರಂ ಚಾಂತರಿಕ್ಷಂ ವೈ ರಥನೀಡಶ್ಚ ಮಂದರಃ ॥ ೯ ॥

ಅಸ್ತಾದ್ರಿರುದಯಾದ್ರಿಸ್ತು ತಾವುಭೌ ಕೂಬರೌ ಸ್ಮೃತೌ ।
ಅಧಿಷ್ಠಾನಂ ಮಹಾಮೇರುರಾಶ್ರಯಾಃ ಕೇಸರಾಚಲಾಃ ॥ ೧೦ ॥

ವೇಗಸ್ಸಂವತ್ಸರಾಸ್ತಸ್ಯ ಅಯನೇ ಚಕ್ರಸಂಗಮೌ ।
ಮುಹೂರ್ತಾ ಬಂಧುರಾಸ್ತಸ್ಯ ಶಮ್ಯಾಶ್ಚೈವ ಕಲಾಸ್ಸ್ಮೃತಾಃ ॥ ೧೧ ॥

---

೭. ಬಲಗಡೆಯ ಚಕ್ರಕ್ಕೆ ಹನ್ನೆರಡು ಕವೆಗೋಲು (ಅಡ್ಡಪಟ್ಟಿ) ಗಳೂ, ಎಡಗಡೆಯ ಚಕ್ರಕ್ಕೆ ಹದಿನಾರು ಕವೆಗೋಲುಗಳೂ ಇದ್ದುವು. ಓ ಬ್ರಾಹ್ಮಣೋತ್ತಮ, ಆ ಹನ್ನೆರಡು ಅಡ್ಡಪಟ್ಟಿಗಳು ದ್ವಾದಶಾದಿತ್ಯರೆಂದು ತಿಳಿ.

೮. ಎಡಗಡೆಯ ಚಕ್ರದ ಹದಿನಾರು ಅಡ್ಡಪಟ್ಟಿಗಳು ಚಂದ್ರನ ಹದಿನಾರು ಕಳೆಗಳೆಂದೂ, ಮತ್ತು ಆ ಚಕ್ರದ ಅಲಂಕಾರವು ಇಪ್ಪತ್ತೇಳು ನಕ್ಷತ್ರಗಳೆಂದೂ ತಿಳಿ.

೯. ಓ ವಿಪ್ರವರ್ಯ! ಆರು ಋತುಗಳೂ, ಎರಡು ಚಕ್ರಗಳ ಕಬ್ಬಿಣದ ಪಟ್ಟಿಯೆಂತಲೂ, ಆಕಾಶವು ರಥದ ಪುಷ್ಕರವೆಂತಲೂ, ಮಂದರಪರ್ವತವು ರಥನೀಡವೆಂದೂ ಭಾವಿಸಿ.

೧೦. ಅಸ್ತಾಚಲವೂ, ಉದಯಾದ್ರಿಯೂ, ಆ ರಥಕ್ಕೆ ನೊಗಗಳು. ಮಹಾಮೇರುಪರ್ವತವೇ ಆ ರಥದ ಪೀಠವು. ಕೇಸರಾಚಲಗಳು ಆ ರಥದಲ್ಲಿಯ ನೆಲೆಗಳು.

೧೧. ಸಂವತ್ಸರಗಳೇ ಆ ರಥದ ವೇಗವು. ಉತ್ತರಾಯಣ ದಕ್ಷಿಣಾಯನಗಳು ಎರಡು ಚಕ್ರಗಳೂ ಸೇರುವ ಜಾಗ. ಮುಹೂರ್ತಗಳೇ ಅದರ ಬಂಧುರಗಳು, ಕಲೆಗಳೇ ಅದರ ನೊಗದ ಗೂಟಗಳು.

ತಸ್ಯ ಕಾಷ್ಠಾಸ್ಸ್ಮೃತಾ ಘೋಣಾಶ್ಚಾಕ್ಷದಂಡಾಃ ಕ್ಷಣಾಶ್ಚ ವೈ ।
ನಿಮೇಷಾಶ್ಚಾನುಕರ್ಷಾಶ್ಚ ಈಷಾಶ್ಚಾಸುಲವಾಸ್ಸ್ಮೃತಾಃ ॥ ೧೨ ॥

ದ್ಯೌರ್ವರೂಥಂ ರಥಸ್ಯಾಸ್ಯ ಸ್ವರ್ಗಮೋಕ್ಷಾವುಭೌ ಧ್ವಜೌ ।
ಯುಗಾಂತಕೋಟಿತೌ ತಸ್ಯ ಭ್ರಮಕಾಮದುಘೌ ಸ್ಮೃತೌ ॥ ೧೩ ॥

ಈಷಾದಂಡಸ್ತಥಾ ವ್ಯಕ್ತಂ ವೃದ್ಧಿಸ್ತಸ್ಯೈವ ನಡ್ವಲಃ ।
ಕೋಣಾಸ್ತಸ್ಯಾಪ್ಯಹಂಕಾರೋ ಭೂತಾನಿ ಚ ಬಲಂ ಸ್ಮೃತಂ ॥ ೧೪ ॥

ಇಂದ್ರಿಯಾಣಿ ಚ ತಸ್ಯೈವ ಭೂಷಣಾನಿ ಸಮೇತತಃ ।
ಶ್ರದ್ಧಾ ಚ ಗತಿರಸ್ಯೈವ ರಥಸ್ಯ ಮುನಿಸತ್ತಮ ॥ ೧೫ ॥

ತದಾನೀಂ ಭೂಷಣಾನ್ಯೇವ ಷಡಂಗಾನ್ಯುಪಭೂಷಣಂ ।
ಪುರಾಣನ್ಯಾಯಮೀಮಾಂಸಾಧರ್ಮಶಾಸ್ತ್ರಾಣಿ ಸುವ್ರತಾಃ ॥ ೧೬ ॥

---

೧೨. ಕಲಾ, ಕಾಷ್ಠಾ, ತ್ರುಟ, ಲವ, ಮೊದಲಾದ ಕಾಲದ ಸೂಕ್ಷ್ಮ ಭೇದಗಳೇ ಆ ರಥದ ಘೋಣಗಳು. ಕ್ಷಣಗಳು ಅದರ ಅಚ್ಚು. ನಿಮೇಷಗಳು ಅದರ ಮೂಕಿಯ ಮರ, ಲವಗಳು ಅದರ ಉದ್ದನೆಯ ಕೋಲು.

೧೩. ಆಕಾಶವೇ ಆ ರಥದ ಮೇಲ್ಮುಸುಕು. ಸ್ವರ್ಗ ಮತ್ತು ಮೋಕ್ಷಗಳು ಅದರ ಎರಡು ಧ್ವಜಗಳು. ಭ್ರಮಧುಕ್ ಮತ್ತು ಕಾಮಧುಕ್ ಎಂಬುವು ನೊಗದ ಕೊನೆಯ ಗೂಟಗಳು (ಬಾರುಕಾಣಿ).

೧೪. ವ್ಯಕ್ತವು ಅದರ ಈಷಾದಂಡವು. ವೃದ್ಧಿಯು ಅದರ ನಡ್ವಲವೆನಿಸುವುದು. ಅಹಂಕಾರವು ಆ ರಥದ ಮೂಲೆಗಳು. ಭೂತಗಳು ಅದರ ಬಲವು.

೧೫. ಎಲೈ ಋಷಿಶ್ರೇಷ್ಠನೇ! ಇಂದ್ರಿಯಗಳು ಆ ರಥದ ಅಲಂಕಾರವು. ಶ್ರದ್ಧೆಯು ಅದರ ಚಲನೆಯು.

೧೬. ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರ ಮೊದಲಾದ ಷಡಂಗಗಳೂ ಶ್ರೇಷ್ಠವಾದ ವ್ರತಾದಿನಿಯಮಗಳೂ, ಆ ರಥದ ಭೂಷಣಗಳು ಮತ್ತು ಉಪಭೂಷಣಗಳು ಎಂದು ತಿಳಿ.

ಬಲಾಶಯಾ ವರಾಶ್ಚೈವ ಸರ್ವಲಕ್ಷಣಸಂಯುತಾಃ ।
ಮಂತ್ರಾ ಘಂಟಾಸ್ಸ್ಮೃತಾಸ್ತೇಷಾಂ ವರ್ಣಪಾದಾಸ್ತದಾಶ್ರಮಾಃ ॥೧೭॥

ಅಥೋ ಬಂಧೋ ಹ್ಯನಂತಸ್ತು ಸಹಸ್ರಫಣಭೂಷಿತಃ ।
ದಿಶಃ ಪಾದಾ ರಥಸ್ಯಾಸ್ಯ ತಥಾ ಚೋಪದಿಶಸ್ತಥಾ ॥ ೧೮ ॥

ಪುಷ್ಕರಾದ್ಯಾಃ ಪತಾಕಾಶ್ಚ ಸೌವರ್ಣಾ ರತ್ನಭೂಷಿತಾಃ ।
ಸಮುದ್ರಾಸ್ತಸ್ಯ ಚತ್ವಾರೋ ರಥಕಂಬಲಿನಸ್ಸ್ಮೃತಾಃ ॥ ೧೯ ॥

ಗಂಗಾದ್ಯಾಸ್ಸರಿತಶ್ಶ್ರೇಷ್ಠಾಸ್ಸರ್ವಾಭರಣಭೂಷಿತಾಃ ।
ಚಾಮರಾಸಕ್ತಹಸ್ತಾಗ್ರಾಸ್ಸರ್ವಾಸ್ಸ್ತ್ರೀರೂಪಶೋಭಿತಾಃ ॥ ೨೦ ॥

ತತ್ರ ತತ್ರ ಕೃತಸ್ಥಾನಾಃ ಶೋಭಯಾಂಚಕ್ರಿರೇ ರಥಂ ।
ಆವಹಾದ್ಯಾಸ್ತಥಾ ಸಪ್ತ ಸೋಪಾನಂ ಹೈಮಮುತ್ತಮಂ ॥ ೨೧ ॥

---

೧೭. ಬಲವನ್ನು ಹೆಚ್ಚಿಸುವಂತಹುವೂ, ಶ್ರೇಷ್ಠವೂ, ಎಲ್ಲ ಲಕ್ಷಣಗಳಿಂದ ಕೂಡಿದುವೂ ಆದ ಮಂತ್ರಗಳು ಆ ರಥಕ್ಕೆ ಅಲಂಕಾರವಾದ ಗಂಟೆಗಳಾಗಿದ್ದುವು. ಆ ಮಂತ್ರಗಳ ವರ್ಣಗಳೂ, ಪಾದಗಳೂ ಅದರ ಆಶ್ರಮಗಳಾಗಿದ್ದುವು.

೧೮. ಸಾವಿರಹೆಡೆಗಳಿಂದ ಶೋಭಿಸುವ ಆದಿಶೇಷನು ಆ ರಥಕ್ಕೆ ಬಿಗಿದಿರುವ ಹಗ್ಗವೆಂತಲೂ ದಿಕ್ಕು ಮತ್ತು ವಿದಿಕ್ಕುಗಳು ಆ ರಥದ ಕಾಲುಗಳೆಂತಲೂ ತಿಳಿ.

೧೯. ಪುಷ್ಕರಾವರ್ತಕಾದಿ ಮೇಘಗಳು ರತ್ನದಿಂದ ಅಲಂಕೃತವೂ ಚಿನ್ನದಿಂದ ಮಾಡಲ್ಪಟ್ಟದೂ ಆದ ಧ್ವಜಪಟಗಳೆಂತಲೂ, ಸಮುದ್ರಗಳು ಆ ರಥದ ನಾಲ್ಕು ಎತ್ತುಗಳೆಂಬುದಾಗಿಯೂ ತಿಳಿಯಬೇಕು.

೨೦. ಪವಿತ್ರವಾದ ಗಂಗಾದಿ ಮಹಾನದಿಗಳೆಲ್ಲವೂ ಸ್ತ್ರೀರೂಪವನ್ನು ಧರಿಸಿಕೊಂಡು ಸಮಸ್ತವಾದ ಆಭರಣಗಳಿಂದ ಅಲಂಕೃತರಾಗಿ ಚಾಮರಗಳನ್ನು ಕೈಲಿ ಹಿಡಿದುಕೊಂಡು ಬೀಸುತ್ತಾ ಇದ್ದುವು.

೨೧. ಆವಹಾದಿ ಸಪ್ತಮರುತ್ತುಗಳೂ, ಆಯಾ ಉಚಿತಸ್ಥಾನದಲ್ಲಿದ್ದು ಸುವರ್ಣಮಯವಾದ ಸೋಪಾನದ ರೂಪವನ್ನು ತಾಳಿ ರಥದ ಅಂದವನ್ನು ಹೆಚ್ಚಿಸುತ್ತಿದ್ದುವು.

ಲೋಕಾಲೋಕಾಚಲಸ್ತಸ್ಯೋಪಸೋಪಾನಾಸ್ಸಮಂತತಃ ।
ವಿಷಮಶ್ಚ ತಥಾ ಬಾಹ್ಯೋ ಮಾನಸಾದಿಸ್ತು ಶೋಭನಃ ॥ ೨೨ ॥

ಪಾಶಾಸ್ಸಮಂತತಸ್ತಸ್ಯ ಸರ್ವೇ ವರ್ಷಾಚಲಾಸ್ಸ್ಮೃತಾಃ ।
ತಲಾಸ್ತಸ್ಯ ರಥಸ್ಯಾಸ್ಯ ಸರ್ವೇ ತಲನಿವಾಸಿನಃ ॥ ೨೩ ॥

ಸಾರಥಿರ್ಭಗವಾನ್ಬ್ರಹ್ಮಾ ದೇವಾ ರಶ್ಮಿಧರಾಸ್ಸ್ಮೃತಾಃ ।
ಪ್ರತೋದೋ ಬ್ರಹ್ಮಣಸ್ತಸ್ಯ ಪ್ರಣವೋ ಬ್ರಹ್ಮದೈವತಂ ॥ ೨೪ ॥

ಅಕಾರಶ್ಚ ಮಹಚ್ಛತ್ರಂ ಮಂದರಃ ಪಾರ್ಶ್ವದಂಡಭಾಕ್ ।
ಶೈಲೇಂದ್ರಃ ಕಾರ್ಮುಕಂ ತಸ್ಯ ಜ್ಯಾ ಭುಜಂಗಾಧಿಪಸ್ಸ್ವಯಂ ॥ ೨೫ ॥

ಘಂಟಾ ಸರಸ್ವತೀ ದೇವೀ ಧನುಷಶ್ಶ್ರುತಿರೂಪಿಣೀ ।
ಇಷುರ್ವಿಷ್ಣುರ್ಮಹಾತೇಜಾಸ್ತ್ವಗ್ನಿಶ್ಶಲ್ಯಂ ಪ್ರಕೀರ್ತಿತಂ ॥ ೨೬ ॥

---

೨೨. ಲೋಕಾಲೋಕ ಪರ್ವತವು ಆ ರಥದ ಸುತ್ತಲೂ ಇರುವ ಉಪ ಸೋಪಾನವೆಂತಲೂ ಮಾನಸಾದಿ ಸರೋವರಗಳು ಸುತ್ತಲೂ ಹೊರಗಡೆ ಇರುವ ಮೆಟ್ಟಲುಗಳೆಂತಲೂ ತಿಳಿ.

೨೩. ಭರತವರ್ಷಾದಿ ನವವರ್ಷಗಳೂ, ಮೇರೆಗಳಾದ ವರ್ಷಪರ್ವತಗಳೂ, ಆ ರಥದ ಸುತ್ತಲೂ ಇರುವ ನೇಣುಗಳೆಂತಲೂ, ಆ ರಥದ ಕೆಳಭಾಗವು ಅತಲಾದಿ ಕೆಳ ಲೋಕಗಳ ನಿವಾಸಿಗಳೆಂತಲೂ ತಿಳಿ.

೨೪. ಆ ರಥದ ಸಾರಥಿಯು ಸಾಕ್ಷಾತ್ ಚತುರ್ಮುಖಬ್ರಹ್ಮನು. ಕುದುರೆಗಳ ಲಗಾಮನ್ನು ಹಿಡಿದಿರುವವರು ದೇವತೆಗಳು. ಬ್ರಹ್ಮನ ಕೈಲಿರುವ ಚಾವಟಿಯು ಪರ ಬ್ರಹ್ಮವೇ ಮುಖ್ಯ ದೇವತೆಯಾಗಿರುವ ಓಂಕಾರವು

೨೫. ಅಕಾರವು ಆ ರಥಮಧ್ಯದಲ್ಲಿ ಶೋಭಿಸುತ್ತಿರುವ ವಿಶಾಲವಾದ ಛತ್ರಿಯು. ಮಂದರವು ಆ ಛತ್ರಿಯ ದಿಂಡನ್ನು ಹಿಡಿದಿರುವವನು. ಹಿಮವತ್ಪರ್ವತವು ಧನುಸ್ಸು. ಅದರ ಹೆದೆಯು ಸಾಕ್ಷಾತ್ ನಾಗರಾಜನಾದ ವಾಸುಕಿಯು.

೨೬. ಶ್ರುತಿಸ್ವರೂಪಳಾದ ಸರಸ್ವತಿಯೇ ಆ ಧನುಸ್ಸಿಗೆ ಕಟ್ಟಿದ್ದ ಗಂಟೆಯಾಗಿದ್ದಳು. ಮಹಾತೇಜಸ್ವಿಯಾದ ವಿಷ್ಣುವು ಆ ಧನುಸ್ಸಿನ ಬಾಣವು. ಅಗ್ನಿಯು ಆ ಬಾಣದ ಅಲಗು.

ಹಯಾಸ್ತಸ್ಯ ತಥಾ ಪ್ರೋಕ್ತಾಶ್ಚತ್ವಾರೋ ನಿಗಮಾ ಮುನೇ ।
ಜ್ಯೋತೀಂಷಿ ಭೂಷಣಂ ತೇಷಾಮವಶಿಷ್ಟಾನ್ಯತಃ ಪರಂ ॥ ೨೭ ॥

ಅನೀಕಂ ವಿಷಸಂಭೂತಂ ವಾಯವೋ ವಾಜಕಾಸ್ಸ್ಮೃತಾಃ ।
ಋಷಯೋ ವ್ಯಾಸಮುಖ್ಯಾಶ್ಚ ವಾಹವಾಹಾಸ್ತಥಾಭವನ್ ॥ ೨೮ ॥

ಸ್ವಲ್ಪಾಕ್ಷರೈಸ್ಸಂಬ್ರವೀಮಿ ಕಿಂ ಬಹೂಕ್ತ್ಯಾ ಮುನೀಶ್ವರ ।
ಬ್ರಹ್ಮಾಂಡೇ ಚೈವ ಯತ್ಕಿಂಚಿದ್ವಸ್ತು ತದ್ವೈ ರಥೇ ಸ್ಮೃತಂ ॥ ೨೯ ॥

ಏವಂ ಸಮ್ಯಕ್ಕೃತಸ್ತೇನ ಧೀಮತಾ ವಿಶ್ವಕರ್ಮಣಾ ।
ಸ ರಥಾದಿಪ್ರಕಾರೋ ಹಿ ಬ್ರಹ್ಮವಿಷ್ಣ್ವಾಜ್ಞಯಾ ಶುಭಃ ॥ ೩೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ರಥಾದಿಯುದ್ಧಪ್ರಕಾರವರ್ಣನಂ
ನಾಮಾ ಅಷ್ಟಮೋಽಧ್ಯಾಯಃ

---

೨೭. ಓ ವ್ಯಾಸ, ನಾಲ್ಕು ವೇದಗಳೂ ಆ ರಥದ ನಾಲ್ಕು ಕುದುರೆಗಳು. ಉಳಿದ ಎಲ್ಲಾ ಜ್ಯೋತಿಗಳೂ, ಆ ಕುದುರೆಗಳಿಗೆ ಒಡವೆಯಾಗಿದ್ದವು.

೨೮. ವಿಷದಿಂದ ಹುಟ್ಟಿದುದೆಲ್ಲವೂ ಸೇನೆಯಾಯಿತು. ವಾಯುಗಳು ಕುದುರೆಗಳಾಗಿದ್ದವು. ವ್ಯಾಸರೇ ಮೊದಲಾದ ಮಹರ್ಷಿಗಳು ಕುದುರೆಗಳನ್ನು ನಡೆಸುವರಾಗಿದ್ದರು.

೨೯. ಓ ಮುನೀಂದ್ರ, ಇನ್ನು ಹೆಚ್ಚು ವಿವರಣೆಯೇಕೆ ? ಒಂದೇ ಮಾತಿನಲ್ಲಿ ತಿಳಿಸುತ್ತೇನೆ. ಬ್ರಹ್ಮಾಂಡದಲ್ಲಿ ಏನೇನಿರುವುದೋ ಅದೆಲ್ಲವೂ ಆ ರಥದಲ್ಲಿ ಅಡಕವಾಗಿತ್ತು.

೩೦. ಈ ರೀತಿಯಾಗಿ ಮಹಾಕುಶಲನಾದ ವಿಶ್ವಕರ್ಮನು ಬ್ರಹ್ಮವಿಷ್ಣುಗಳ ಅಪ್ಪಣೆಯಂತೆ ಮಂಗಳಮಯವಾದ ರಥ ಧನುಸ್ಸು ಮುಂತಾದ ಯುದ್ಧದ ಸಲಕರಣೆಗಳನ್ನು ಅಚ್ಚುಕಟ್ಟಾಗಿ ನಿರ್ಮಿಸಿದನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿಯೊಳಗನ
ಐದನೆಯುದ್ಧಖಂಡದಲ್ಲಿ ರಥಾದಿಯುದ್ಧವರ್ಣನವೆಂಬ ಎಂಟನೆಯ
ಅಧ್ಯಾಯವು ಮುಗಿದುದು.

‖ ಶ್ರೀ ‖ ೯೩

‖ ಓಂ ನಮಃ ಶಿವಾಯ ‖

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ನವಮೋಽಧ್ಯಾಯಃ

‖ ಸನತ್ಕುಮಾರ ಉವಾಚ ‖

ಈದೃಗ್ವಿಧಂ ಮಹಾದಿವ್ಯಂ ನಾನಾಶ್ಚರ್ಯಮಯಂ ರಥಂ ।
ಸಂನಹ್ಯ ನಿಗಮಾನಶ್ವಾಂಸ್ತಂ ಬ್ರಹ್ಮಾ ಪ್ರಾರ್ಪಯಚ್ಛಿವಂ ‖ ೧ ‖

ಶಂಭವೇಽಸೌ ನಿವೇದ್ಯಾಧಿರೋಪಯಾಮಾಸ ಶೂಲಿನಂ ।
ಬಹುಶಃ ಪ್ರಾರ್ಥ್ಯ ದೇವೇಶಂ ವಿಷ್ಣ್ವಾದಿಸುರಸಂಮತಂ ‖ ೨ ‖

ತತಸ್ತಸ್ಮಿನ್ರಥೇ ದಿವ್ಯೇ ರಥಪ್ರಾಕಾರಸಂಯುತೇ-
ಸರ್ವದೇವಮಯಃ ಶಂಭುರಾರುರೋಹ ಮಹಾಪ್ರಭುಃ ‖ ೩ ‖

---

### ಒಂಭತ್ತನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :---ಓ ವ್ಯಾಸ, ಈ ರೀತಿಯಾಗಿ ನಾನಾ ಆಶ್ಚರ್ಯಗಳಿಗೆ ನೆಲೆಯೂ, ಅದ್ಭುತವೂ ಆದ ಆ ರಥಕ್ಕೆ ವೇದಗಳೆಂಬ ಕುದುರೆಗಳನ್ನು ಕಟ್ಟಿ, ಅದನ್ನು ಬ್ರಹ್ಮನು ಶಿವನಿಗೆ ತಂದೊಪ್ಪಿಸಿದನು.

೨-೩. ವಿಷ್ಣುವೇ ಮೊದಲಾದ ದೇವತೆಗಳಿಗೆಲ್ಲರಿಗೂ ಪ್ರಿಯನಾದ ಆ ಶಿವನನ್ನು ಅದನ್ನೇರುವಂತೆ ಬ್ರಹ್ಮನು ಪ್ರಾರ್ಥಿಸಿದಮೇಲೆ, ಸರ್ವದೇವತಾಸ್ವರೂಪನಾದ ಶಿವನು ಸುತ್ತಲೂ ಕೋಟೆಯಂತೆ ನಿಂತಿರುವ ರಥಗಳ ನಡುವೆ ಶೋಭಿಸುತ್ತಿದ್ದ ದಿವ್ಯವಾದ ಆ ರಥವನ್ನು ಏರಿದನು.

ಋಷಿಭಿಃ ಸ್ತೂಯಮಾನಶ್ಚ ದೇವಗಂಧರ್ವಪನ್ನಗೈಃ ।
ವಿಷ್ಣುನಾ ಬ್ರಹ್ಮಣಾ ಚಾಪಿ ಲೋಕಪಾಲೈರ್ಬಭೂವ ಹ ॥ ೪ ॥

ಉಪಾವೃತಶ್ಚಾಪ್ಸರಸಾಂ ಗಣೈರ್ಗೀತವಿಶಾರದೈಃ ।
ಶುಶುಭೇ ವರದಶ್ಶಂಭುಸ್ಸ ತಂ ಪ್ರೇಕ್ಷ್ಯ ಚ ಸಾರಥಿಂ ॥ ೫ ॥

ತಸ್ಮಿನ್ನಾರೋಹತಿ ರಥಂ ಕಲ್ಪಿತಂ ಲೋಕಸಂಭೃತಂ ।
ಶಿರೋಭಿಃ ಪತಿತಾ ಭೂಮೌ ತುರಂಗಾ ವೇದಸಂಭವಾಃ ॥ ೬ ॥

ಚಚಾಲ ವಸುಧಾ ಚೇಲುಸ್ಸಕಲಾಶ್ಚ ಮಹೀಧರಾಃ ।
ಚಕಂಪೇ ಸಹಸಾ ಶೇಷೋऽಸೋಢಾ ತದ್ಭಾರಮಾತುರಃ ॥ ೭ ॥

ಅಥಾಧಃ ಸ ರಥಸ್ಯಾಸ್ಯ ಭಗವಾನ್ಧರಣೀಧರಃ ।
ವೃಷೇಂದ್ರರೂಪೀ ಚೋತ್ಥಾಯ ಸ್ಥಾಪಯಾಮಾಸ ವೈ ಕ್ಷಣಂ ॥ ೮ ॥

---

೪. ಇಂತು ಶಿವನು ರಥವನ್ನೇರುತ್ತಲೇ ಋುಷಿಗಳೂ, ದೇವತೆಗಳೂ, ಗಂಧರ್ವರೂ, ನಾಗರೂ, ವಿಷ್ಣುವೂ, ಬ್ರಹ್ಮನೂ, ಇಂದ್ರಾದಿ ಲೋಕಪಾಲಕರೂ ಆತನನ್ನು ಸ್ತುತಿಸತೊಡಗಿದರು.

೫. ಇಂಪಾದಗಾನದಲ್ಲಿ ಹೆಸರಾಂತ ಅಪ್ಸರಸ್ತ್ರೀಯರು ಸಾಲಾಗಿಯೂ ಗುಂಪು ಗುಂಪಾಗಿಯೂ ಸುತ್ತಲೂ ನಿಂತಿರಲು, ಸಾರಥಿಯಾದ ಬ್ರಹ್ಮನನ್ನು ವೀಕ್ಷಿಸುತ್ತಾ ವರದಾಯಕನಾದ ಶಿವನು ಶೋಭಿಸುತ್ತಿದ್ದನು.

೬. ಸಕಲ ಲೋಕಗಳ ಸಾರವೆಲ್ಲವನ್ನೂ ತೆಗೆದುಕೊಂಡು ನಿರ್ಮಿಸಿದ ಆ ರಥರಾಜವನ್ನು ಶಿವನು ಹತ್ತುತ್ತಲೇ ಅದಕ್ಕೆ ಕಟ್ಟಿದ್ದ ವೇದಸ್ವರೂಪವಾದ ಕುದುರೆಗಳು ತಲೆಯನ್ನು ನೆಲಕ್ಕೆ ತಗ್ಗಿಸಿಬಿಟ್ಟವು.

೭. ಭೂಮಿಯು ನಡುಗಿತು. ಪರ್ವತಗಳೆಲ್ಲವೂ ಅಲ್ಲಾಡಿಹೋದವು. ಆ ಹೊರೆಯನ್ನು ತಾಳಲಾರದೆ, ಆದಿಶೇಷನೂ ಸಹ ತತ್ತಳಿಸುತ್ತಾ ನಡುಗಿಬಿಟ್ಟನು.

೮. ಆಮೇಲೆ, ಆರಥದ ಕೆಳಗಡೆ, ಭೂಮಿಯನ್ನು ಕೂರ್ಮರೂಪದಿಂದ ಧರಿಸಿರುವ ಸಾಕ್ಷಾನ್ನಾರಾಯಣನು, ಮಹಾವೃಷಭದ ರೂಪವನ್ನು ಧರಿಸಿ, ಮೇಲೆದ್ದು ನಿಂತು ಕ್ಷಣಕಾಲ ಹೊತ್ತು ನಿಲ್ಲಿಸಿಕೊಂಡು ಇದ್ದನು.

ಕ್ಷಣಾಂತರೇ ವೃಷೇಂದ್ರೋಽಪಿ ಜಾನುಭ್ಯಾಮಗಮದ್ಧರಾಂ ।
ರಥಾರೂಢಮಹೇಶಸ್ಯ ಸುತೇಜಸ್ಸೋಢುಮಕ್ಷಮಃ ॥ ೯ ॥

ಅಭೀಷುಹಸ್ತೋ ಭಗವಾನುದ್ಯಮ್ಯ ಚ ಹಯಾಂಸ್ತದಾ ।
ಸ್ಥಾಪಯಾಮಾಸ ದೇವಸ್ಯ ವಚನಾದ್ವೈ ರಥಂ ವರಂ ॥ ೧೦ ॥

ತತೋಽಸೌ ನೋದಯಾಮಾಸ ಮನೋಮಾರುತರಂಹಸಃ ।
ಬ್ರಹ್ಮಾ ಹಯಾನ್ವೇದಮಯಾನದ್ಧಾನ್ರಥವರೇ ಸ್ಥಿತಃ ॥ ೧೧ ॥

ಪುರಾಣ್ಯುದ್ದಿಶ್ಯ ವೈ ತ್ರೀಣಿ ತೇಷಾಂ ಖಸ್ಥಾನಿ ತಾನಿ ಹಿ ।
ಅಧಿಷ್ಠಿತೇ ಮಹೇಶೇ ತು ದಾನವಾನಾಂ ತರಸ್ವಿನಾಂ ॥ ೧೨ ॥

ಅಥಾಹ ಭಗವಾನ್ರುದ್ರೋ ದೇವಾನಾಲೋಕ್ಯ ಶಂಕರಃ ।
ಪಶೂನಾಮಾಧಿಪತ್ಯಂ ಮೇ ಧತ್ತ್ವಂ ಹನ್ಮಿ ತತೋಽಸುರಾನ್ ॥ ೧೩ ॥

---

೯. ಒಂದು ಕ್ಷಣ ಕಳೆದಮೇಲೆ, ಆ ವೃಷಭವೂ, ರಥವನ್ನೇರಿ ಕುಳಿತ್ತಿರುವ ಆ ಮಹೇಶ್ವರನ ದಿವ್ಯತೇಜಸ್ಸನ್ನು ತಡೆಯಲಾರವೆ ಮಂಡಿಯೂರಿ ನೆಲಕ್ಕೆ ಕುಸಿದು ಬಿಟ್ಟಿತು.

೧೦. ಆಗ ಶಿವನ ಮಾತಿನಿಂದ, ಮಹಾವೃಷಭಸ್ವರೂಪಿಯಾದ ಹರಿಯು, ಹಗ್ಗವನ್ನು ಹಿಡಿದು, ಕುದುರೆಗಳನ್ನು ಎಳೆದು ಜಗ್ಗಿಸಿ ಆ ದಿವ್ಯ ರಥವನ್ನು ಸರಿಯಾಗಿ ನಿಲ್ಲಿಸಿದನು.

೧೧-೧೨. ಶಿವನು ರಥವನ್ನೇರಿ ಕುಳಿತಮೇಲೆ ಆ ರಥದ ಸಾರಥಿಯಾದ ಬ್ರಹ್ಮನು ತ್ರಿಪುರಾಸುರರ ನಿವಾಸವಾದ ಅಂತರಿಕ್ಷದಲ್ಲಿ ನೆಲಸಿದ್ದ, ಆ ಪುರತ್ರಯದ ಕಡೆಗೆ ವಾಯುವೇಗಮನೋವೇಗದಿಂದ ಚಲಿಸುವ ವೇದಮಯಗಳಾದ ಕುದುರೆಗಳನ್ನು ನಡೆಸಿದನು.

೧೩. ಬಳಿಕ ಭಗವಂತನಾದ ಶಿವನು ದೇವತೆಗಳನ್ನು ನೋಡಿ, ನೀವೆಲ್ಲರೂ ಪಶುಗಳಾಗಿ. ನಾನು ಪಶುಪತಿಯೆಂಬುದನ್ನು ಒಪ್ಪಿಕೊಳ್ಳಿರಿ. ಹಾಗಾದರೆ ಆ ದೈತ್ಯರೆಲ್ಲರನ್ನೂ ಸಂಹರಿಸುವೆನು.

ಪೃಥಕ್ಪಶುತ್ವಂ ದೇವಾನಾಂ ತಥಾನ್ಯೇಷಾಂ ಸುರೋತ್ತಮಾಃ ।
ಕಲ್ಪಯಿತ್ವೈವ ವಧ್ಯಾಸ್ತೇ ನಾನ್ಯಥಾ ದೈತ್ಯಸತ್ತಮಾಃ ॥ ೧೪ ॥

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ದೇವದೇವಸ್ಯ ಧೀಮತಃ ।
ವಿಷಾದಮಗಮನ್ಸರ್ವೇ ಪಶುತ್ವಂ ಪ್ರತಿಶಂಕಿತಾಃ ॥ ೧೫ ॥

ತೇಷಾಂ ಭಾವಮಥ ಜ್ಞಾತ್ವಾ ದೇವದೇವೋಽಂಬಿಕಾಪತಿಃ ।
ವಿಹಸ್ಯ ಕೃಪಯಾ ದೇವಾಞ್ಶಂಭುಸ್ತಾನಿದಮಬ್ರವೀತ್ ॥ ೧೬ ॥

॥ ಶಂಭುರುವಾಚ ॥

ಮಾ ವೋಽಸ್ತು ಪಶುಭಾವೇಽಪಿ ಪಾತೋ ವಿಬುಧಸತ್ತಮಾಃ ।
ಶ್ರೂಯತಾಂ ಪಶುಭಾವಸ್ಯ ವಿಮೋಕ್ಷಃ ಕ್ರಿಯತಾಂ ಚ ಸಃ ॥ ೧೭ ॥

ಯೋ ವೈ ಪಾಶುಪತಂ ದಿವ್ಯಂ ಚರಿಷ್ಯತಿ ಸ ಮೋಕ್ಷ್ಯತಿ ।
ಪಶುತ್ವಾದಿತಿ ಸತ್ಯಂ ವಃ ಪ್ರತಿಜ್ಞಾತಂ ಸಮಾಹಿತಾಃ ॥ ೧೮ ॥

---

೧೪. ಎಲೈ ದೇವಶ್ರೇಷ್ಠರೇ, ನಿಮ್ಮ ಪಶುತ್ವವೇ ಬೇರೆ. ಇತರರ ಪಶುತ್ವವೇ ಬೇರೆ, ಈ ರೀತಿಯಾದರೆ, ಆ ದೈತ್ಯನಾಯಕರನ್ನು ಕೊಲ್ಲಬಹುದೇ ಹೊರತು ಬೇರೆ ರೀತಿಯಿಂದ ಸಾಧ್ಯವಿಲ್ಲ ಎಂದನು.

೧೫. ಸನತ್ಕುಮಾರನಿಂತೆಂದನು :—ಓ ವ್ಯಾಸ! ಈರೀತಿ ದೇವದೇವನೂ, ಕುಶಲನೂ ಆದ ಶಿವನು ನುಡಿಯುತ್ತಲೇ, ಅದನ್ನು ಕೇಳಿ, ದೇವತೆಗಳೆಲ್ಲರೂ, ತಮಗೆ ಪಶುಭಾವವುಂಟಾಗುವುದೆಂದು ಹೆದರಿ ಮನಸ್ಸಿನಲ್ಲಿ ಖೇದವನ್ನು ಹೊಂದಿದರು.

೧೬. ಆ ದೇವತೆಗಳ ಮನದ ತಳಮಳವನ್ನು ಕಂಡು, ಶಿವನು ನಕ್ಕು, ಕೃಪೆಯಿಂದ, ಅವರನ್ನು ಕುರಿತು,

೧೭. ಶಿವನು ಹೇಳಿದನು:—ಎಲೈ ದೇವತೆಗಳಿರಾ, ನಿಮಗೆ ಪಶುಭಾವವೊದಗಿದರೂ ನೀವು ಪತಿತರಾಗಬೇಕಾದ್ದಿಲ್ಲ. ಪಶುತ್ವವನ್ನು ಹೇಗೆ ಬಿಡಬಹುದೆಂಬುದನ್ನೂ ಕೇಳಿರಿ. ಅದನ್ನೂ ಮಾಡಿರಿ.

೧೮. ಯಾವನು ದಿವ್ಯವಾದ ಪಾಶುಪತವ್ರತವನ್ನು ಆಚರಿಸುವನೋ ಅವನು ಪಶುಭಾವದಿಂದ ಸತ್ಯವಾಗಿಯೂ ಬಿಡಲ್ಪಡುವನು. ನೀವೆಲ್ಲರೂ ಸಮಾಧಾನವನ್ನು ವಹಿಸಿರಿ. ಇದು ನಿಜವಾದ ಮಾತು.

ಯೇ ಚಾಪನ್ಯೇ ಕರಿಷ್ಯಂತಿ ವ್ರತಂ ಪಾಶುಪತಂ ಮಮ ।
ಮೋಕ್ಷ್ಯಂತಿ ತೇ ನ ಸಂದೇಹಃ ಪಶುತ್ವಾತ್ಸುರಸತ್ತಮಾಃ ॥ ೧೯ ॥

ನೈಷ್ಠಿಕಂ ದ್ವಾದಶಾಬ್ದಂ ವಾ ತದರ್ಧಂ ವರ್ಷಕತ್ರಯಂ ।
ಶುಶ್ರೂಷಾಂ ಕಾರಯೇದ್ಯಸ್ತು ಸ ಪಶುತ್ವಾದ್ವಿಮುಚ್ಯತೇ ॥ ೨೦ ॥

ತಸ್ಮಾತ್ಪರಮಿದಂ ದಿವ್ಯಂ ಚರಿಷ್ಯಥ ಸುರೋತ್ತಮಾಃ ।
ಪಶುತ್ವಾನ್ಮೋಕ್ಷ್ಯಥ ತದಾ ಯೂಯಮತ್ರ ನ ಸಂಶಯಃ ॥ ೨೧ ॥

॥ ಸನತ್ಕುಮಾರ ಉವಾಚ ॥
ಇತ್ಯಾಕರ್ಣ್ಯ ವಚಸ್ತಸ್ಯ ಮಹೇಶಸ್ಯ ಪರಾತ್ಮನಃ ।
ತಥೇತಿ ಚಾಬ್ರುವನ್ದೇವಾ ಹರಿಬ್ರಹ್ಮಾದಯಸ್ತಥಾ ॥ ೨೨ ॥

ತಸ್ಮಾದ್ವೈ ಪಶವಸ್ಸರ್ವೇ ದೇವಾಸುರವರಾಃ ಪ್ರಭೋಃ ।
ರುದ್ರಃ ಪಶುಪತಿಶ್ಚೈವ ಪಶುಪಾಶವಿಮೋಚಕಃ ॥ ೨೩ ॥

---

೧೯. ನನ್ನೀ ಪಾಶುಪತವ್ರತವನ್ನು ಇನ್ನು ಯಾರು ಆಚರಿಸುವರೋ, ಅವರೆಲ್ಲರೂ, ಸಂದೇಹವಿಲ್ಲದೆ ಪಶುತ್ವದಿಂದ ಬಿಡುಗಡೆಹೊಂದುವರು.

೨೦. ಯಾವನು, ನಿಷ್ಠೆಯಿಂದ ಹನ್ನೆರಡು ವರ್ಷಗಳಾಗಲಿ, ಅಥವಾ ಆರು ವರ್ಷಗಳಾಗಲಿ, ಇಲ್ಲವೇ ಮೂರು ವರ್ಷಗಳಾಗಲಿ, ಈರೀತಿ ಪಾಶುಪತವ್ರತವನ್ನು ಆಚರಿಸುವನೋ ಅವನು ಪಶುತ್ವದಿಂದ ಬಿಡಲ್ಪಡುವನು.

೨೧. ಆದುದರಿಂದ ಎಲೈ ದೇವಶ್ರೇಷ್ಠರೇ, ಶ್ರೇಷ್ಠವೂ, ದಿವ್ಯವೂ ಆದ ಈ ಪಾಶುಪತವ್ರತವನ್ನು ಆಚರಿಸಿರಿ. ಹಾಗಾದರೆ ನೀವು ನಿಸ್ಸಂಶಯವಾಗಿ ಪಶುಭಾವವನ್ನು ಕಳೆದುಕೊಳ್ಳುವಿರಿ ಎಂದನು.

೨೨. ಸನತ್ಕುಮಾರನು ಹೇಳಿದನು ;—ಈರೀತಿ ಪರಮಾತ್ಮನಾದ ಶಿವನು ಹೇಳಿದುದನ್ನು ಕೇಳಿ, ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳೆಲ್ಲರೂ ಆಗ ಹಾಗೆಯೇ ಆಗಲಿ ಎಂದು ಒಪ್ಪಿದರು.

೨೩. ಆದುದರಿಂದ ದೇವತೆಗಳೂ, ಅಸುರರೂ, ಎಲ್ಲರೂ ಅಂದಿನಿಂದ ಶಿವನಿಗೆ ಪಶುಗಳಾಗಿ ಪರಿಗಣಿಸಲ್ಪಟ್ಟರು. ಪಶುತ್ವದ ಬಂಧನವನ್ನು ಬಿಡಿಸುವ ಶಿವನು ಪಶುಪತಿಯೆನಿಸಿದನು.

ತದಾ ಪಶುಪತೀತ್ಯೇತತ್ತಸ್ಯ ನಾಮ ಮಹೇಶಿತುಃ ।
ಪ್ರಸಿದ್ಧಮಭವದ್ವಧ್ವಾ ಸರ್ವಲೋಕೇಷು ಶರ್ಮದಂ ॥ ೨೪ ॥

ಮುದಾ ಜಯೇತಿ ಭಾಷಂತಸ್ಸರ್ವೇ ದೇವರ್ಷಯಸ್ತದಾ ।
ಅಮುದಂಶ್ಚಾತಿ ದೇವೇಶೋ ಬ್ರಹ್ಮಾ ವಿಷ್ಣುಃ ಪರೇಽಪಿ ಚ ॥ ೨೫ ॥

ತಸ್ಮಿಂಶ್ಚ ಸಮಯೇ ಯಚ್ಚ ರೂಪಂ ತಸ್ಯ ಮಹಾತ್ಮನಃ ।
ಜಾತಂ ತದ್ವರ್ಣಿತುಂ ಶಕ್ಯಂ ನ ಹಿ ವರ್ಷಶತೈರಪಿ ॥ ೨೬ ॥

ಏವಂ ವಿಧೋ ಮಹೇಶಾನೋ ಮಹೇಶಾನ್ಯಖಿಲೇಶ್ವರಃ ।
ಜಗಾಮ ತ್ರಿಪುರಂ ಹಂತುಂ ಸರ್ವೇಷಾಂ ಸುಖದಾಯಕಃ ॥ ೨೭ ॥

ತಂ ದೇವದೇವಂ ತ್ರಿಪುರಂ ನಿಹಂತುಂ
ತದಾ ನು ಸರ್ವೇ ತು ರವಿಪ್ರಕಾಶಾಃ ।
ಗಜೈರ್ಹಯೈರ್ಸ್ಸಿಂಹವರೈ ರಥೈಶ್ಚ
ವೃಷೈರ್ಯಯುಸ್ತೇಽಮರರಾಜಮುಖ್ಯಾಃ ॥ ೨೮ ॥

---

೨೪. ಆಗ ಮಹೇಶ್ವರನಿಗೆ ಪಶುಪತಿಯೆಂಬ, ಸಕಲ ಪ್ರಪಂಚಕ್ಕೂ ಸುಖಕರವಾದ ಹೆಸರು ಪ್ರಸಿದ್ಧವಾಯಿತು.

೨೫. ಆಗ ಬ್ರಹ್ಮನೂ, ವಿಷ್ಣುವೂ, ದೇವತೆಗಳೂ, ಋಷಿಗಳೂ, ಇತರರೂ ಎಲ್ಲರೂ ಜಯಜಯ ಎಂಬುದಾಗಿ ಸಂತೋಷದಿಂದ ಶಿವನನ್ನು ಹೊಗಳುತ್ತಾ ಹರ್ಷವನ್ನು ತಾಳಿದರು.

೨೬. ಆ ಸಮಯದಲ್ಲಿ ರಾರಾಜಿಸುತ್ತಿದ್ದ ಮಹಾತ್ಮನಾದ ಆ ಶಿವನ ದಿವ್ಯ ಸ್ವರೂಪವನ್ನು ಬಣ್ಣಿಸಲು ನೂರು ವರ್ಷಗಳಾದರೂ ಸಾಲದು.

೨೭-೨೮. ಈರೀತಿಯಾಗಿ ಎಲ್ಲರಿಗೂ ಸುಖವನ್ನುಂಟುಮಾಡುವವನೂ, ಜಗನ್ಮಾತೆಯೇ ಮೊದಲಾಗಿ ಸಕಲರಿಗೂ ಪ್ರಭುವೂ ಆದ ಮಹೇಶ್ವರನು ತ್ರಿಪುರಗಳನ್ನು ಸಂಹರಿಸಲು ಸನ್ನದ್ಧನಾಗಿ ತೆರಳಲು, ಆ ಮಹಾದೇವನನ್ನು, ಸೂರ್ಯನಂತೆ ಮಹಾ ತೇಜಸ್ವಿಗಳಾದ ಇಂದ್ರಾದಿದೇವತೆಗಳು, ಆನೆ, ಕುದುರೆ, ಎತ್ತು, ಸಿಂಹ, ರಥ ಮೊದಲಾದ ವಾಹನಗಳನ್ನೇರಿ ಹಿಂಬಾಲಿಸಿದರು.

ಹಲೈಶ್ಚ ಶಾಲೈರ್ಮುಶಲೈರ್ಭುಶುಂಡ್ಯೈ-
ರ್ಗಿರೀಂದ್ರಕಲ್ಪೈರ್ಗಿರಿಸಂನಿಭಾಶ್ಚ ।
ನಾನಾಯುಧೈಸ್ಸಂಯುತಬಾಹವಸ್ತೇ-
ತತೋ ನು ಹೃಷ್ಟಾಃ ಪ್ರಯಯುಸ್ಸುರೇಶಾಃ ॥ ೨೯ ॥

ನಾನಾಯುಧಾಢ್ಯಾಃ ಪರಮಪ್ರಕಾಶಾ
ಮಹೋತ್ಸವಾಶ್ಯಂಭುಜಯಂ ವದಂತಃ ।
ಯಯುಃ ಪುರಸ್ತಸ್ಯ ಮಹೇಶ್ವರಸ್ಯ
ತದೇಂದ್ರಪದ್ಮೋದ್ಭವವಿಷ್ಣುಮುಖ್ಯಾಃ ॥ ೩೦ ॥

ಜಹೃಷುರ್ಮುನಯಸ್ಸರ್ವೇ ದಂಡಹಸ್ತಾ ಜಟಾಧರಾಃ ।
ವವೃಷುಃ ಪುಷ್ಪವರ್ಷಾಣಿ ಖೇಚರಾಸ್ಸಿದ್ಧಚಾರಣಾಃ ॥ ೩೧ ॥

ಪುತ್ರತ್ರಯಂ ಚ ವಿಪ್ರೇಂದ್ರಾ ವ್ರಜಸ್ಸರ್ವೇ ಗಣೇಶ್ವರಾಃ ।
ತೇಷಾಂ ಸಂಖ್ಯಾಂ ಚ ಕಃ ಕರ್ತುಂ ಸಮರ್ಥೋ ವಚ್ಮಿ ಕಾಂಶ್ಚನ ॥ ೩೨ ॥

---

೨೯. ಒಳಿಕ ದೇವತೆಗಳು ಸಂತೋಷದಿಂದ, ತಮ್ಮ ತಮ್ಮ ಕೈಗಳಲ್ಲಿ ನೇಗಿಲು, ಶಾಲವೆಂಬ ಆಯುಧ, ಒನಕೆ, ಭುಸುಂಡವೆಂಬುದು, ಇವೇ ಮೊದಲಾದ ಬೆಟ್ಟದಂತೆ ಬೃಹದಾಕಾರವಾಗಿರುವ ನಾನಾಬಗೆಯ ಆಯುಧಗಳನ್ನು ಧರಿಸಿ ಹೊರಟರು.

೩೦. ಆಗ ಇಂದ್ರ, ಬ್ರಹ್ಮ, ಮೊದಲಾದ ಮಹಾತೇಜಸ್ವಿಗಳಾದ ದೇವತೆಗಳು ನಾನಾಬಗೆಯ ಆಯುಧಗಳನ್ನು ಧರಿಸಿ ಬಹು ಸಡಗರದಿಂದ ಶಿವನಿಗೆ ವಿಜಯವಾಗ ಲೆಂದು ವಿಜಯಧ್ವನಿಯನ್ನು ಮಾಡುತ್ತಾ ಆತನ ಮುಂದೆ ಹೊರಟರು.

೩೧. ಆಗ ಜಟಾಧಾರಿಗಳಾಗಿ ದಂಡವನ್ನು ಕೈಲಿಹಿಡಿದಿರುವ ಮುನಿಗಳೆಲ್ಲರೂ, ಹರ್ಷವನ್ನು ತಳೆದರು. ಸಿದ್ಧ, ಚಾರಣ ಮೊದಲಾದ ಅಂತರಿಕ್ಷ ಚಾರಿಗಳು ಹೂಮಳೆ ಯನ್ನು ಸುರಿಸಿದರು.

೩೨. ಎಲೈ, ದ್ವಿಜೋತ್ತಮ, ಆ ತ್ರಿಪುರವನ್ನು ಕುರಿತು ಎಲ್ಲ ಪ್ರಮಥಗಣ ಗಳೂ ತೆರಳಿದುವು. ಅವುಗಳನ್ನು ಎಣಿಸಲು ಯಾರಿಗೆ ತಾನೇ ಸಾಧ್ಯವಾಗುವುದು? ಆದರೂ ಕೆಲವರನ್ನು ತಿಳಿಸುತ್ತೇನೆ.

ಗಣೇಶ್ವರರ್ದೇವಗಣೈಶ್ಚ ಭೃಂಗೀ
ಸಮಾವೃತಸ್ಸರ್ವಗಣೇಂದ್ರವರ್ಯಃ ।
ಜಗಾಮ ಯೋಗಾಂಸ್ತ್ರಿಪುರಂ ನಿಹಂತುಂ
ವಿಮಾನಮಾರುಹ್ಯ ಯಥಾ ಮಹೇಂದ್ರಃ ॥ ೩೩ ॥

ಕೇಶೋ ವಿಗತವಾಸಶ್ಚ ಮಹಾಕೇಶೋ ಮಹಾಜ್ವರಃ ।
ಸೋಮವಲ್ಲೀಸವರ್ಣಾಶ್ಚ ಸೋಮಪಸ್ಸನಕಸ್ತಥಾ ॥ ೩೪ ॥

ಸೋಮಧೃಕ್ಸೂರ್ಯವರ್ಚಾಶ್ಚ ಸೂರ್ಯಪ್ರೇಷಣಕಸ್ತಥಾ ।
ಸೂರ್ಯಾಕ್ಷಸ್ಸೂರಿನಾಮಾ ಚ ಸುರಸ್ಸುಂದರ ಏವ ಚ ॥ ೩೫ ॥

ಪ್ರಸ್ಕಂದಃ ಕುಂದರಶ್ಚಂಡಃ ಕಂಪನಶ್ಚಾತಿಕಂಪನಃ ।
ಇಂದ್ರಶ್ಚೇಂದ್ರಜವಶ್ಚೈವ ಯಂತಾ ಹಿಮಕರಸ್ತಥಾ ॥ ೩೬ ॥

ಶತಾಕ್ಷಶ್ಚೈವ ಪಂಚಾಕ್ಷಃ ಸಹಸ್ರಾಕ್ಷೋ ಮಹೋದರಃ ।
ಸತೀಜಹುಶ್ಶತಾಸ್ಯಶ್ಚ ರಂಕಃ ಕರ್ಪೂರಪೂತನಃ ॥ ೩೭ ॥

ದ್ವಿಶಿಖಸ್ತ್ರಿಶಿಖಶ್ಚೈವ ತಥಾಹಂಕಾರಕಾರಕಃ ।
ಅಜವಕ್ತ್ರೋಽಷ್ಟವಕ್ತ್ರಶ್ಚ ಹಯವಕ್ತ್ರೋಽರ್ಧವಕ್ತ್ರಕಃ ॥ ೩೮ ॥

---

೩೩. ಗಣಾಧಿಪತಿಗಳಿಗೆಲ್ಲರಿಗೂ ಶ್ರೇಷ್ಠನಾದ ಭೃಂಗಿಯು ಗಣಮುಖ್ಯರೊಡನೆಯೂ, ದೇವಗಣಗಳೊಡನೆಯೂ, ಇಂದ್ರನು ವಿಮಾನವನ್ನು ಹತ್ತಿ ಹೊರಟಂತೆ ತ್ರಿಪುರರನ್ನು ಸಂಹರಿಸಲು ತೆರಳಿದನು.

೩೪-೩೯. ಕೇಶ, ವಿಗತವಾಸ, ಮಹಾಕೇಶ, ಮಹಾಜ್ವರ, ಸೋಮವಲ್ಲೀಸವರ್ಣರು, ಸೋಮಪ, ಸನಕ, ಸೋಮಧೃಕ್ಕು, ಸೂರ್ಯವರ್ಚಸ್ಸು, ಸೂರ್ಯಪ್ರೇಷಣಕ, ಸೂರ್ಯಾಕ್ಷ, ಸೂರಿಯೆಂಬುವವನು, ಸುರ, ಸುಂದರ, ಪ್ರಸ್ಕಂದ, ಕುಂದರ, ಚಂಡ, ಕಂಪನ, ಅತಿಕಂಪನ, ಇಂದ್ರ, ಇಂದ್ರಜವ, ಇಂದ್ರಜರ ಯಂತೃ, ಹಿಮಕರ, ಶತಾಕ್ಷ, ಪಂಚಾಕ್ಷ, ಸಹಸ್ರಾಕ್ಷ, ಮಹೋದರ ಅಷ್ಟವಕ್ತ್ರ, ಸತೀಜಹು, ಶತಾಸ್ಯ, ರಂಕ, ಕರ್ಪೂರಪೂತನ, ದ್ವಿಶಿಖ, ತ್ರಿಶಿಖ, ಅಹಂಕಾರಕಾರಕ ಅಜವಕ್ತ್ರ, ಹಯವಕ್ತ್ರ, ಅರ್ಧವಕ್ತ್ರ ಮುಂತಾದ ಅಸಂಖ್ಯಾತರಾದ

ಇತ್ಯಾದ್ಯಾ ಗಣಪಾ ವೀರಾ ಬಹವೋಽಪರಿಮೇಯಕಾಃ ।
ಪ್ರಯಯುಃ ಪರಿವಾರ್ಯೇಶಂ ಲಕ್ಷ್ಯಲಕ್ಷಣವರ್ಜಿತಾಃ ॥ ೩೯ ॥

ಸಮಾವೃತ್ಯ ಮಹಾದೇವಂ ತದುಪಾಸ್ತೇ ಪಿನಾಕಿನಂ ।
ದಗ್ಧುಂ ಸಮರ್ಥಾ ಮನಸಾ ಕ್ಷಣೇನ ಸಚರಾಚರಂ ॥ ೪೦ ॥

ದಗ್ಧುಂ ಜಗತ್ಸರ್ವಮಿದಂ ಸಮರ್ಥಾಃ
ಕಿಂ ತತ್ರ ದಗ್ಧುಂ ತ್ರಿಪುರಂ ಪಿನಾಕೀ ।
ರಥೇನ ಕಿಂ ಚಾತ್ರ ಶರೇಣ ತಸ್ಯ
ಗಣೈಶ್ಚ ಕಿಂ ದೇವಗಣೈಶ್ಚ ಶಂಭೋಃ ॥ ೪೧ ॥

ಸ ಏವ ದಗ್ಧುಂ ತ್ರಿಪುರಾಣಿ ತಾನಿ-
ದೇವದ್ವಿಷಾಂ ವ್ಯಾಸ ಪಿನಾಕಪಾಣಿಃ ।
ಸ್ವಯಂಗತಸ್ತತ್ರ ಗಣೈಶ್ಚ ಸಾರ್ಧಂ
ನಿಜೈಸ್ಸುರಾಣಾಮಪಿ ಸೋಽದ್ಭುತೋತಿಃ ॥ ೪೨ ॥

---

ಲಕ್ಷ್ಯಲಕ್ಷಣವೊಂದೂಇಲ್ಲದ, ಮಹಾವೀರರಾದ ಗಣಾಧಿಪತಿಗಳು ಶಿವನನ್ನು ಸುತ್ತು ವರಿದುಕೊಂಡು ಹೊರಟರು.

೪೦. ಕ್ಷಣಮಾತ್ರದಲ್ಲಿ ಮನಸ್ಸಿನಿಂದಲೇ, ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವನ್ನೂ ಸುಟ್ಟುಬಿಡಲು ಸಮರ್ಥರಾದ ಆ ಗಣಾಧಿಪತಿಗಳು, ಪಿನಾಕವೆಂಬ ಧನುಸ್ಸನ್ನು ಕೈಲಿಹಿಡಿದ ಶಿವನನ್ನು ಸುತ್ತುವರಿದು ನಿಂತರು.

೪೧. ಈ ಜಗತ್ತೆಲ್ಲವನ್ನೂ ಸುಟ್ಟುಬೂದಿಮಾಡಿಬಿಡಬಲ್ಲ ಶಿವನಿಗೆ ಈ ಪುರತ್ರಯವು। ಯಾವ ಲೆಕ್ಕ? ಆತನಿಗೆ ರಥವೇಕೆ? ಬಾಣವೇತಕ್ಕೆ? ಗಣಗಳೇಕೆ? ದೇವಗಳು ತಾನೇ ಏತಕ್ಕೆ?

೪೨. ಓ ವ್ಯಾಸ, ಆ ಪಿನಾಕಧಾರಿಯು, ದೇವವೈರಿಗಳಾದ ಆ ತ್ರಿಪುರರ ಮೂರು ನಗರಗಳನ್ನು ಸುಟ್ಟುಬಿಡಲೋಸುಗ ತನ್ನ ಗಣಗಳೊಡನೆಯೂ, ದೇವಗಣಗಳೊಡನೆಯೂ ತಾನಾಗಿಯೇ ಹೊರಟನು.

ಕಿಂ ತತ್ರ ಕಾರಣಂ ಚಾನ್ಯದ್ವಚ್ಮಿ ತೇ ಋಷಿಸತ್ತಮ ।
ಲೋಕೇಷು ಖ್ಯಾಪನಾರ್ಥಂ ವೈ ಯಶಃ ಪರಮಲಾಪಹಂ ॥ ೪೩ ॥

ಅನ್ಯಚ್ಚ ಕಾರಣಂ ಹ್ಯೇತದ್ದುಷ್ಟಾನಾಂ ಪ್ರತ್ಯಯಾಯ ವೈ ।
ಸರ್ವೇಷ್ವಪಿ ಚ ದೇವೇಷು ಯಸ್ಮಾನ್ನಾನ್ಯೋ ವಿಶಿಷ್ಯತೇ ॥ ೪೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಿವಯಾತ್ರಾವರ್ಣನಂ ನಾಮ
ನವಮೋಽಧ್ಯಾಯಃ.

---

೪೩-೪೪. ಎಲೈ ಋಷಿಶ್ರೇಷ್ಠ, ಹೀಗೆ ಶಿವನು ತಾನೇ ತ್ರಿಪುರ ಸಂಹಾರಕ್ಕೆ ಹೊರಡಲು ಏನು ಕಾರಣವೆನ್ನುವುದನ್ನು ತಿಳಿಸುವೆನು. ಮಹಾಪಾಪಗಳನ್ನೂ ನಾಶ ಮಾಡುವಂತಹ ತನ್ನ ಯಶಸ್ಸನ್ನು ಜಗತ್ತಿನಲ್ಲಿ ಪ್ರಖ್ಯಾತಿಗೊಳಿಸುವುದು ಒಂದು ಕಾರಣ. ದೇವತೆಗಳಲ್ಲೆಲ್ಲರಲ್ಲೂ, ಶಿವನಿಗಿಂತಲೂ ಶ್ರೇಷ್ಠನಾದವನು ಮತ್ತೊಬ್ಬನಿಲ್ಲ ವೆಂಬುದು ದುಷ್ಟರಿಗೆಲ್ಲರಿಗೂ ಚೆನ್ನಾಗಿ ಮಂದಟ್ಟಾಗಲಿ ಎಂಬುದು ಮತ್ತೊಂದು ಕಾರಣ ಎಂದು ಸನತ್ಕುಮಾರನು ನುಡಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ
ಐದನೆಯ ಯುದ್ಧ ಖಂಡದಲ್ಲಿ ಶಿವಯಾತ್ರಾವರ್ಣನವೆಂಬ
ಒಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ದಶಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಅಥ ಶಂಭುರ್ಮಹಾದೇವೋ ರಥಸ್ಥಸ್ಸರ್ವಸಂಯುತಃ ।
ತ್ರಿಪುರಂ ಸಕಲಂ ದಗ್ಧುಮುದ್ಯತೋಽಭೂತ್ಸುರದ್ವಿಷಾಂ ॥ ೧ ॥

ಶೀರ್ಷಂ ಸ್ಥಾನಕಮಾಸ್ಥಾಯ ಸಂಧಾಯ ಚ ಶರೋತ್ತಮಂ ।
ಸಜ್ಜಂ ತತ್ಕಾರ್ಮುಕಂ ಕೃತ್ವಾ ಪ್ರತ್ಯಾಲೀಢಂ ಮಹಾದ್ಭುತಂ ॥ ೨ ॥

---

### ಹತ್ತನೆಯ ಅಧ್ಯಾಯವು.

೧. ಸನತ್ಕುಮಾರನು ವ್ಯಾಸನನ್ನು ಕುರಿತು ಇಂತೆಂದನು:—ಬಳಿಕ ಶಿವನು ರಥದಲ್ಲಿ ಕುಳಿತು ಎಲ್ಲರೊಡಗೂಡಿ ದೇವವೈರಿಗಳಾದ ಆ ರಾಕ್ಷಸರ ನಿವಾಸವಾದ ಆ ಪುರತ್ರಯವನ್ನು ಸುಟ್ಟುಬಿಡಲು ಉಜ್ಜುಗಿಸಿದನು.

೨-೩. ತಲೆಯಮೇಲೆ ಶೀರ್ಷತ್ರಾಣವೆಂಬ ಉಕ್ಕಿನ ಟೋಪಿಯನ್ನು ಧರಿಸಿ ಬಿಲ್ಲಿಗೆ ಹೆದೆಯೇರಿಸಿ ಅದರಲ್ಲಿ ಬಾಣವನ್ನು ಹೂಡಿ ಆ ಬಿಲ್ಲನ್ನು ಪ್ರತ್ಯಾಲೀಢಕ್ರಮ ದಲ್ಲಿ ಎಂದರೆ ಎಡಗಾಲುಮುಂಬೆ ಚಾಚಿ ಬಲಗಾಲನ್ನು ಹಿಂದಕ್ಕೆ ಮಡಿಸಿ ಕುಳಿತು

ನಿವೇಶ್ಯ ದೃಢಮುಷ್ಟ್ಯಾ ಚ ದೃಷ್ಟಿಂ ದೃಷ್ಟ್ಯಾ ನಿವೇಶ್ಯ ಚ ।
ಅತಿಷ್ಠನ್ನಿಶ್ಚಲಸ್ತತ್ರ ಶತಂ ವರ್ಷಸಹಸ್ರಕಂ ॥ ೩ ॥

ತತೋಽಂಗುಷ್ಠೇ ಗಣಾಧ್ಯಕ್ಷಸ್ಸ ತುದತ್ಯನಿಶಂ ಸ್ಥಿತಃ ।
ನ ಲಕ್ಷ್ಯಂ ವಿವಿಶುಸ್ತಾನಿ ಪುರಾಣ್ಯಸ್ಯ ತ್ರಿಶೂಲಿನಃ ॥ ೪ ॥

ಶತೋಽಂತರಿಕ್ಷಾದಶೃಣೋದ್ಧನುರ್ಬಾಣಧರೋ ಹರಃ ।
ಮುಂಜಕೇಶೋ ವಿರೂಪಾಕ್ಷೋ ವಾಚಂ ಪರಮಶೋಭನಾಂ ॥ ೫ ॥

ಭೋ ಭೋ ನ ಯಾವದ್ಭಗವನ್ನರ್ಚಿತೋಽಸೌ ವಿನಾಯಕಃ ।
ಪುರಾಣಿ ಜಗದೀಶೇಶ ಸಾಂಪ್ರತಂ ನ ಹನಿಷ್ಯತಿ ॥ ೬ ॥

ಏತಚ್ಛ್ರುತ್ವಾ ತು ವಚನಂ ಗಜವಕ್ತ್ರಮಪೂಜಯತ್ ।
ಭದ್ರಕಾಲೀಂ ಸಮಾಹೂಯ ತತೋಽಂಧಕನಿಷೂದನಃ ॥ ೭ ॥

---

ದೃಢವಾದ ಮುಷ್ಟಿಯಿಂದ ಬಿಗಿಯಾಗಿ ಹಿಡಿದು ಕಣ್ಣಿನಲ್ಲಿ ಕಣ್ಣನ್ನಿಟ್ಟು ಸ್ವಲ್ಪವೂ ಅಲುಗದೆ ನೂರುಸಾವಿರವರ್ಷಗಳಕಾಲ ಒಂದೇಸಮನಾಗಿ ಗುರಿಯಿಡುವುದರಲ್ಲಿ ತೊಡಗಿದ್ದನು.

೪. ಆಮೇಲೆ ಶಿವನ ಹೆಬ್ಬೆರಳಿನಲ್ಲಿ ಗಣಪತಿಯು ಕುಳಿತು ಯಾವಾಗಲೂ ತೊಂದರೆಕೊಡತೊಡಗಿದನು. ಅಲ್ಲದೆ ಆತನ ದೃಷ್ಟಿಗೆ ಆ ತ್ರಿಪುರಗಳು ಬೀಳಲಿಲ್ಲ.

೫. ಬಳಿಕ ಸೊದೆಹುಲ್ಲಿನಂತೆ ಕೂದಲುಳ್ಳವನೂ ವಿರೂಪಾಕ್ಷನೂ ಧನುರ್ಬಾಣ ಧಾರಿಯೂ ಆದ ಶಿವನು ಪರಮಮಂಗಳಕರವಾದ ಅಂತರಿಕ್ಷದಿಂದ ಹೊರಬಿದ್ದ ಅಶರೀರ ವಾಣಿಯನ್ನು ಆಲಿಸಿದನು.

೬. ಎಲೈ ಸ್ವಾಮಿಯೇ, ಈ ವಿಘ್ನೇಶ್ವರನನ್ನು ಎದುವರೆಗೆ ಪೂಜಿಸುವುದಿಲ್ಲವೋ ಅದುವರೆಗೆ ಈ ತ್ರಿಪುರಗಳನ್ನು ಸುಟ್ಟುಬಿಡಲು ಸಾಧ್ಯವಿಲ್ಲ.

೭. ಹೀಗೆಂಬುದಾಗಿ ನುಡಿದ ಈ ಮಾತನ್ನು ಕೇಳಿದನಂತರ ಅಂಧಕಾಸುರನ ಸಂಹಾರಿಯಾದ ಆ ಶಿವನು ಭದ್ರಕಾಳಿಯನ್ನು ಕರೆದು ವಿಘ್ನೇಶ್ವರನನ್ನು ಪೂಜಿಸಿದನು.

ತಸ್ಮಿನ್ಸಂಪೂಜಿತೇ ಹರ್ಷಾತ್ಪರಿತುಷ್ಟೇ ಪುರಸ್ಸರೇ ।
ವಿನಾಯಕೇ ತತೋ ವ್ಯೋಮ್ನಿ ದದರ್ಶ ಭಗವಾನ್ಹರಃ ॥ ೮ ॥

ಪುರಾಣಿ ತ್ರೀಣಿ ದೈತ್ಯಾನಾಂ ತಾರಕಾನಾಂ ಮಹಾತ್ಮನಾಂ ।
ಯಥಾತಥಂ ಹಿ ಯುಕ್ತಾನಿ ಕೇಚಿದಿತ್ಥಂ ವದಂತಿ ಹ ॥ ೯ ॥

ಪರಬ್ರಹ್ಮಣಿ ದೇವೇಶ ಸರ್ವೋಪಾಸ್ಯೇ ಮಹೇಶ್ವರೇ ।
ಅನ್ಯಪ್ರಸಾದತಃ ಕಾರ್ಯಸಿದ್ಧಿರ್ಘಟತಿ ನೇತಿ ಹಿ ॥ ೧೦ ॥

ಸ ಸ್ವತಂತ್ರಃ ಪರಂ ಬ್ರಹ್ಮ ಸಗುಣೋ ನಿರ್ಗುಣೋಽಪಿ ಹ ।
ಅಲಕ್ಷ್ಯಸ್ಸಕಲೈಸ್ಸ್ವಾಮೀ ಪರಮಾತ್ಮಾ ನಿರಂಜನಃ ॥ ೧೧ ॥

ಪಂಚದೇವಾತ್ಮಕಃ ಪಂಚದೇವೋಪಾಸ್ಯಃ ಪರಃ ಪ್ರಭುಃ ।
ತಸ್ಯೋಪಾಸ್ಯೋ ನ ಕೋಽಪ್ಯಸ್ತಿ ಸ ಏವೋಪಾಸ್ಯ ಆಲಯಂ ॥ ೧೨ ॥

---

೮-೯. ಆ ಗಣಾಧಿಪತಿಯನ್ನು ಪೂಜಿಸಿದಮೇಲೆ ಆತನು ಸಂತುಷ್ಟನಾಗಿ ಹರ್ಷದಿಂದ ಮುಂದುವರಿಯಲು ಭಗವಂತನಾದ ಶಿವನು ಮಹಾತ್ಮರಾದ ತಾರಕಾಸುರನ ಮಕ್ಕಳ ಆ ತ್ರಿಪುರನಗರಗಳು ಅಂತರಿಕ್ಷದಲ್ಲಿ ಆಕಸ್ಮಿಕವಾಗಿ ಒಂದುಕಡೆ ಸೇರಿರುವುದನ್ನು ಕಂಡನು. ಹೀಗೆಂದು ಕೆಲವರು ಕಥೆಯನ್ನು ಹೇಳುವರು.

೧೦. ಸಾಕ್ಷಾತ್ಪರಬ್ರಹ್ಮವೂ ದೇವತೆಗಳಿಗೆಲ್ಲಾ ಒಡೆಯನೂ ಎಲ್ಲರಿಂದಲೂ ಸೇವೆಯನ್ನು ಕೈಗೊಳ್ಳುವವನೂ ಆದ ಆ ಮಹೇಶ್ವರನಿಗೆ ಮತ್ತೊಬ್ಬರ ಅನುಗ್ರಹದಿಂದ ಕೆಲಸವು ನೆರವೇರಬೇಕೆ ? ಇಲ್ಲದಿದ್ದರೆ ಇಲ್ಲವೇ ?

೧೧-೧೨. ಆ ಪರಮಾತ್ಮನು ಸ್ವತಂತ್ರನು. ಸಾಕ್ಷಾತ್ಪರಬ್ರಹ್ಮಮೂರ್ತಿಯು. ಸಗುಣನೂ ನಿರ್ಗುಣನೂ ಆತನೇ. ಆತನು ಯಾರಿಗೂ ಗೋಚರನಲ್ಲ. ನಿರ್ಲೇಪನೂ ಪಂಚದೇವಮಯನೂ ಪಂಚದೇವೋಪಾಸ್ಯನೂ ಪರಮಪ್ರಭುವೂ ಆತನೇ. ಆತನಿಂದ ಪೂಜೆಯನ್ನು ಕೈಗೊಳ್ಳುವವನು ಮತ್ತೊಬ್ಬನಿಲ್ಲ. ಆತನೊಬ್ಬನೇ ಎಲ್ಲರಿಗೂ ಪೂಜನೀಯನು. ಎಲ್ಲರಿಗೂ ಆಶ್ರಯನು.

ಅಥ ವಾ ಲೀಲಯಾ ತಸ್ಯ ಸರ್ವಂ ಸಂಘಟತೇ ಮುನೇ ।
ಚರಿತಂ ದೇವದೇವಸ್ಯ ವರದಾತುರ್ಮಹೇಶಿತುಃ ॥ ೧೩ ॥

ತಸ್ಮಿಂಸ್ಥಿತೇ ಮಹಾದೇವೇ ಪೂಜಯಿತ್ವಾ ಗಣಾಧಿಪಂ ।
ಪುರಾಣಿ ತತ್ರ ಕಾಲೇನ ಜಗ್ಮುರೇಕತ್ವಮಾಶು ವೈ ॥ ೧೪ ॥

ಏಕೀಭಾವಂ ಮುನೇ ತತ್ರ ತ್ರಿಪುರೇ ಸಮುಪಾಗತೇ ।
ಬಭೂವ ತುಮುಲೋ ಹರ್ಷೋ ದೇವಾದೀನಾಂ ಮಹಾತ್ಮನಾಂ ॥ ೧೫ ॥

ತತೋ ದೇವಗಣಾಸ್ಸರ್ವೇ ಸಿದ್ಧಾಶ್ಚ ಪರಮರ್ಷಯಃ ।
ಜಯೇತಿ ವಾಚೋ ಮುಮುಚುಃ ಸ್ತುವಂತಶ್ಚಾಷ್ಟಮೂರ್ತಿನಂ ॥ ೧೬ ॥

ಅಥಾಹೇತಿ ತದಾ ಬ್ರಹ್ಮಾ ವಿಷ್ಣುಶ್ಚ ಜಗತಾಂ ಪತಿಃ ।
ಸಮಯೋಽಪಿ ಸಮಾಯಾತೋ ದೈತ್ಯಾನಾಂ ವಧಕರ್ಮಣಃ ॥ ೧೭ ॥

---

೧೩. ಎಲೈ ಮುನೀಂದ್ರ, ದೇವದೇವನೂ ವರದಾಯಕನೂ ಆದ ಆ ಮಹೇಶ್ವರನ ಲೀಲಾಮಾತ್ರದಿಂದ ಎಲ್ಲವೂ ಸಂಭವಿಸುವುದು. ಆದುದರಿಂದ ಈರೀತಿ ಕತೆಯು ನಡೆದಿರಬಹುದು.

೧೪. ಆ ಮಹಾದೇವನು ಗಣಪತಿಯನ್ನು ಪೂಜಿಸಿ ಸಿದ್ಧನಾಗಿ ನಿಂತಮೇಲೆ, ಕಾಲವಶದಿಂದ ಆ ತ್ರಿಪುರಗಳು, ಜಾಗ್ರತೆಯಾಗಿಯೇ ಒಂದು ಕಡೆ ಸೇರಿದುವು.

೧೫-೧೬. ಓ ಮುನೀಂದ್ರ ! ಈರೀತಿ ಆ ತ್ರಿಪುರಗಳು ಒಂದೆಡೆ ಕೂಡುತ್ತಲೇ, ಮಹಾತ್ಮರಾದ ದೇವತೆಗಳ ಮತ್ತು ಮುನಿಗಳ ಹರ್ಷವು ಕಲೆತು ಬೆಳೆಯಲು ದೇವತೆಗಳೂ, ಸಿದ್ಧರೂ ಮಹರ್ಷಿಗಳೂ, ಎಲ್ಲರೂ ಶಿವನನ್ನು ಸ್ತೋತ್ರಮಾಡುತ್ತಾ, ವಿಜಯಶಾಲಿಯಾಗು ಎಂಬುದಾಗಿ ಸಂತೋಷಧ್ವನಿಮಾಡುತ್ತಿದ್ದರು.

೧೭-೧೯. ಆಗ ಬ್ರಹ್ಮನೂ, ಜಗತ್ಪತಿಯಾದ ವಿಷ್ಣುವೂ, ಶಿವನನ್ನು ಕುರಿತು, ದೈತ್ಯರನ್ನು ಸಂಹರಿಸಲು ಸರಿಯಾದ ಕಾಲವು ಬಂದು ಒದಗಿರುವುದು. ದೇವತೆಗಳ

ತೇಷಾಂ ತಾರಕಪುತ್ರಾಣಾಂ ತ್ರಿಪುರಾಣಾಂ ಮಹೇಶ್ವರ ।
ದೇವಕಾರ್ಯಂ ಕುರು ವಿಭೋ ಏಕತ್ವಮಪಿ ಚಾಗತಂ ॥ ೧೮ ॥

ಯಾವನ್ನ ಯಾಂತಿ ದೇವೇಶ ವಿಪ್ರಯೋಗಂ ಪುರಾಣಿ ವೈ ।
ತಾವದ್ಬಾಣಂ ವಿಮುಂಚಸ್ವ ತ್ರಿಪುರಂ ಭಸ್ಮಸಾತ್ಕುರು ॥ ೧೯ ॥

ಅಥ ಸಜ್ಯಂ ಧನುಃ ಕೃತ್ವಾ ಶರ್ವಸ್ಸಂಧಾಯ ತಂ ಶರಂ ।
ಪೂಜ್ಯ ಪಾಶುಪತಾಸ್ತ್ರಂ ಸ ತ್ರಿಪುರಂ ಸಮಚಿಂತಯತ್ ॥ ೨೦ ॥

ಅಥ ದೇವೋ ಮಹಾದೇವೋ ವರಲೀಲಾವಿಶಾರದಃ ।
ಕೇನಾಪಿ ಕಾರಣೇನಾತ್ರ ಸಾವಜ್ಞಂ ತದವೈಕ್ಷತ ॥ ೨೧ ॥

ಪುರತ್ರಯಂ ವಿರೂಪಾಕ್ಷಂ ಕರ್ತುಂ ತದ್ಭಸ್ಮಸಾತ್ಕ್ಷಣಾತ್ ।
ಸಮರ್ಥಃ ಪರಮೇಶಾನೋ ನಿಸಾತು ಚ ಸತಾಂಗತಿಃ ॥ ೨೨ ॥

ದಗ್ಧುಂ ಸಮರ್ಥೋ ದೇವೇಶೋ ವೀಕ್ಷಣೇನ ಜಗತ್ತ್ರಯಂ ।
ಅಸ್ಮದ್ಯಶೋವಿವೃಧ್ಯರ್ಥಂ ಶರಂ ಮೋಕ್ತುಮಿಹಾರ್ಹಸಿ ॥ ೨೩ ॥

---

ಕಾರ್ಯವನ್ನು ನಿರ್ವಹಿಸು. ಆ ತಾರಕಾಸುರನ ಮಕ್ಕಳ ಮೂರು ಪಟ್ಟಣಗಳು ಒಂದೆಡೆ ಸೇರಿವೆ. ಅವು ಬೇರೆಬೇರೆಯಾಗಿ ಚದುರುವಷ್ಟರೊಳಗೆ ನೀನು ಬಾಣವನ್ನು ಪ್ರಯೋಗಿಸಿ ಅವುಗಳನ್ನು ಸುಟ್ಟು ಬೂದಿಮಾಡು ಎಂದನು.

೨೦. ಬಳಿಕ ಶಿವನು ಧನುಸ್ಸಿಗೆ ಹೆದೆಯೇರಿಸಿ ಆ ಬಾಣವನ್ನು ಹೂಡಿ ಪಾಶುಪತಾಸ್ತ್ರವನ್ನು ಪೂಜೆಮಾಡಿ ತ್ರಿಪುರಗಳನ್ನು ಮನಸ್ಸಿನಿಂದ ಭಾವಿಸಿದನು.

೨೧. ಆಮೇಲೆ ದಿವ್ಯವಾದ ನಾನಾವಿಧವಾದ ಲೀಲೆಗಳಲ್ಲಿ ವಿಶಾರದನಾದ ಆ ಮಹೇಶ್ವರನು ಆದಾವ ಕಾರಣದಿಂದಲೋ ಏನೋ ಆ ತ್ರಿಪುರಗಳನ್ನು ಅಲಕ್ಷ್ಯದಿಂದ ಕಂಡನು.

೨೨. ಆ ತ್ರಿಪುರಗಳನ್ನು ಫಾಲನೇತ್ರನಾದ ಪರಮೇಶ್ವರನು ಕ್ಷಣಮಾತ್ರದಲ್ಲಿ ದಹಿಸಿಬಿಡಬಲ್ಲನು. ಅಂಥವನು ಸಮಯಾಸಮಯಗಳನ್ನು ನಿರೀಕ್ಷಿಸಬೇಕೆ ?

೨೩. ಎಲೈ ಸ್ವಾಮಿಯೇ, ನಿನ್ನ ಒಂದು ನೋಟದಿಂದಲೇ ಮೂರು ಲೋಕಗಳನ್ನೂ ಸುಟ್ಟುಬಿಡುವ ಸಾಮರ್ಥ್ಯವು ನಿನ್ನಲ್ಲಿದೆ. ಆದರೂ ನಮ್ಮೆಲ್ಲರ ಕೀರ್ತಿಯೂ ಹೆಚ್ಚುವಂತೆ ನೀನು ಈ ಬಾಣವನ್ನು ಪ್ರಯೋಗಿಸು.

ಇತಿ ಸ್ತುತೋsಮರೈಸ್ಸರ್ವೈರ್ವಿಷ್ಣ್ವಾದಿವಿಧಿಭಿಸ್ತದಾ ।
ದಗ್ಧುಂ ಪುರತ್ರಯಂ ತಸ್ಮೈ ಬಾಣೇನೈಚ್ಛನ್ಮಹೇಶ್ವರಃ ॥ ೨೪ ॥

ಅಭಿಲಾಖ್ಯಮುಹೂರ್ತೇ ತು ವಿಕೃಷ್ಯ ಧನುರದ್ಭುತಂ ।
ಕೃತ್ವಾ ಜ್ಯಾತಲನಿರ್ಘೋಷಂ ನಾದಮತ್ಯಂತದುಸ್ಸಹಂ ॥ ೨೫ ॥

ಆತ್ಮನೋ ನಾಮ ವಿಶ್ರಾವ್ಯ ಸಮಾಭಾಷ್ಯ ಮಹಾಸುರಾನ್ ।
ಮಾರ್ತಂಡಕೋಟಿವಪುಷಂ ಕಾಂಡಮುಗ್ರೋ ಮುಮೋಚ ಹ ॥ ೨೬ ॥

ದದಾಹ ತ್ರಿಪುರಸ್ಥಾಂಸ್ತಾನ್ದೈತ್ಯಾಂಸ್ತ್ರೀನ್ನಿಮಲಾಪಹಃ ।
ಸ ಆಶುಗೋ ವಿಷ್ಣುಮಯೋ ವಹ್ನಿಶಲ್ಯೋ ಮಹಾಜ್ವಲನ್ ॥ ೨೭ ॥

ತತಃ ಪುರಾಣಿ ದಗ್ಧಾನಿ ಚತುರ್ಜಲಧಿಮೇಖಲಾಂ ।
ಗತಾನಿ ಯುಗಪದ್ಭೂಮಿಂ ತ್ರೀಣಿ ದಗ್ಧಾನಿ ಭಸ್ಮಶಃ ॥ ೨೮ ॥

---

೨೪. ಎಂಬುದಾಗಿ ವಿಷ್ಣ್ವಾದಿ ದೇವತೆಗಳು ಸ್ತುತಿಸ್ಯೆಯ್ಯಲು ಆ ಮಹೇಶ್ವರನು ತ್ರಿಪುರಗಳನ್ನು ಬಾಣದಿಂದ ಸುಟ್ಟುಬಿಡಲು ಇಚ್ಛಿಸಿದನು.

೨೫-೨೬. ಆಗ ಶಿವನು ರೌದ್ರಾವೇಶವನ್ನು ತಾಳಿ ಅಭಿಲನೆಂಬ ಮುಹೂರ್ತದಲ್ಲಿ ದಿವ್ಯವಾದ ಆ ಧನುಸ್ಸನ್ನೆಳೆದು ಕಿವಿ ಕಿವುಡಾಗುವಷ್ಟು, ಬಹಳ ಅಸಾಧ್ಯವಾಗಿ ಶಬ್ದವಾಗುವಂತೆ ಹೆದೆಯನ್ನು ಝೇಂಕಾರಮಾಡಿ, ತನ್ನ ಹೆಸರನ್ನು ಎತ್ತಿಹೇಳಿ, ಆ ತ್ರಿಪುರಗಳ ಹೆಸರನ್ನೂ ಗಟ್ಟಿಯಾಗಿ ಕೂಗಿ ಕರೆದು, ಕೋಟಿಸೂರ್ಯರಂತೆ ಜಾಜ್ವಲ್ಯಮಾನವಾಗಿ ಬೆಳಗುತ್ತಿರುವ ಬಾಣವನ್ನು ಆ ತ್ರಿಪುರಗಳಮೇಲೆ ಪ್ರಯೋಗಿಸಿದನು

೨೭. ಪಾಪವನ್ನು ಪರಿಹರಿಸುವಂಥಾ ಅಗ್ನಿಯೇ ಅಲಗಾಗಿ ವಿಷ್ಣುಮಯವಾಗಿರುವ ಆ ಬಾಣವು ಬಹಳವಾಗಿ ಬೆಳಗುತ್ತಾ ಆ ತ್ರಿಪುರನಿವಾಸಿಗಳಾದ ದೈತ್ಯರನ್ನು ಸುಟ್ಟುಬಿಟ್ಟಿತು.

೨೮. ಬಳಿಕ ಆ ಪುರತ್ರಯಗಳೆಲ್ಲವೂ ಏಕಕಾಲದಲ್ಲಿ ಸುಟ್ಟು ಬೂದಿಯಾಗಿ ಚತುಸ್ಸಮುದ್ರಪರಿಮಿತವಾದ ಈ ಭೂಮಿಯಮೇಲೆ ಬಿದ್ದುಹೋದವು.

ದೈತ್ಯಾಸ್ತು ಶತಶೋ ದಗ್ಧಾಸ್ತಸ್ಯ ಬಾಣಸ್ಥವಹ್ನಿನಾ ।
ಹಾಹಾಕಾರಂ ಪ್ರಕುರ್ವಂತಶ್ಶಿವಪೂಜಾವ್ಯತಿಕ್ರಮಾತ್ ॥ ೨೯ ॥

ತಾರಕಾಕ್ಷಸ್ತು ನಿರ್ದಗ್ಧೋ ಭ್ರಾತೃಭ್ಯಾಂ ಸಹಿತೋಽಭವತ್ ।
ಸಸ್ಮಾರ ಸ್ವಪ್ರಭುಂ ದೇವಂ ಶಂಕರಂ ಭಕ್ತವತ್ಸಲಂ ॥ ೩೦ ॥

ಭಕ್ತ್ಯಾ ಪರಮಯಾ ಯುಕ್ತಃ ಪ್ರಲಪನ್ವಿವಿಧಾ ಗಿರಃ ।
ಮಹಾದೇವಂ ಸಮುದ್ವೀಕ್ಷ್ಯ ಮನಸಾ ತಮುವಾಚ ಸಃ ॥ ೩೧ ॥

॥ ತಾರಕಾಕ್ಷ ಉವಾಚ ॥

ಭವ ಜ್ಞಾತೋಽಸಿ ತುಷ್ಟೋಽಸಿ ಯದ್ಯಸ್ಮಾನ್ಸಹ ಬಂಧುಭಿಃ ।
ತೇನ ಸತ್ಯೇನ ಭೂಯೋಽಪಿ ಕದಾ ತ್ವಂ ಪ್ರದಹಿಷ್ಯಸಿ ॥ ೩೨ ॥

ದುರ್ಲಭಂ ಲಬ್ಧಮಸ್ಮಾಭಿರ್ಯದಪ್ರಾಪ್ಯಂ ಸುರಾಸುರೈಃ ।
ತ್ವದ್ಧ್ಯಾನಭಾವಿತಾ ಬುದ್ಧಿರ್ಜಾತೇಜಾತೇ ಭವತ್ವಿತಿ ॥ ೩೩ ॥

---

೨೯. ಶಿವಪೂಜಾಪರಾಙ್ಮುಖರಾದುದರಿಂದ ಅಲ್ಲಿದ್ದ ದೈತ್ಯರೆಲ್ಲರೂ ಹಾಹಾಕಾರವನ್ನು ಮಾಡುತ್ತ ನೂರಾರುಗಟ್ಟಲೆ ಆ ಬಾಣದಲ್ಲಿರುವ ಬೆಂಕಿಯಿಂದ ಸುಟ್ಟು ಹೋದರು.

೩೦. ಆ ತ್ರಿಪುರಾಧಿಪತಿಯಾದ ತಾರಕಾಕ್ಷನು ತನ್ನ ತಮ್ಮಂದಿರಾದ ವಿದ್ಯುನ್ಮಾಲಿ, ಕಮಲಾಕ್ಷರೊಡನೆ ಬಾಣಾಗ್ನಿಯಿಂದ ಬೆಂದುಹೋಗುತ್ತಾ ತನ್ನ ಪ್ರಭುವೂ ಭಕ್ತವತ್ಸಲನೂ ಆದ ಶಂಕರನನ್ನು ಸ್ಮರಿಸಿಕೊಂಡನು.

೩೧. ಅತಿಶಯವಾದ ಭಕ್ತಿಯಿಂದ ಆ ಮಹಾದೇವನನ್ನು ಕಂಡು ನಾನಾವಿಧವಾಗಿ ಮಾತುಗಳನ್ನಾಡುತ್ತ ಮನಸ್ಸಿನಲ್ಲಿ ಆತನನ್ನು ಇಂತೆಂದನು.

೩೨. ಎಲೈ ಶಿವನೇ, ನಿನ್ನನ್ನು ತಿಳಿದುಕೊಂಡೆನು. ನೀನು ಸಂತೋಷಪಟ್ಟಿಯಲ್ಲವೇ ? ಹಾಗಾದರೆ ಪುನಃ ನಮ್ಮನ್ನು ಬಂಧುಗಳೊಡನೆ ಯಾವಾಗ ಸುಡುವೆ ?

೩೩. ದೇವಾಸುರರಿಗೂ ಹೊಂದಲಸಾಧ್ಯವಾದಂತಹುದನ್ನೇ ಈಗ ನಾವು ಪಡೆದೆವು. ಜನ್ಮಜನ್ಮದಲ್ಲಿಯೂ ನಿನ್ನ ಭಕ್ತಿಯಲ್ಲಿಯೇ ನಮ್ಮ ಬುದ್ಧಿಯು ಸ್ಥಿರವಾಗಿ ನೆಲಸಿರಲಿ ಎಂದನು.

ಇತ್ಯೇವಂ ವಿಬ್ರುವಂತಸ್ತೇ ದಾನವಾಸ್ತೇನ ವಹ್ನಿನಾ ।
ಶಿವಾಜ್ಞಯಾ ದ್ರುತಂ ದಗ್ಧಾ ಭಸ್ಮಸಾದಭವನ್ಮುನೇ ॥ ೩೪ ॥

ಅನ್ಯೇಽಪಿ ಬಾಲಾ ವೃದ್ಧಾಶ್ಚ ದಾನವಾಸ್ತೇನ ವಹ್ನಿನಾ ।
ಶಿವಾಜ್ಞಯಾ ದ್ರುತಂ ವ್ಯಾಸ ನಿರ್ದಗ್ಧಾ ಭಸ್ಮಸಾತ್ಕೃತಾಃ ॥ ೩೫ ॥

ಸ್ತ್ರಿಯೋ ವಾ ಪುರುಷಾ ವಾಪಿ ವಾಹನಾನಿ ಚ ತತ್ರ ಯೇ ।
ಸರ್ವೇ ತೇನಾಗ್ನಿನಾ ದಗ್ಧಾಃ ಕಲ್ಪಾಂತೇ ತು ಜಗದ್ಯಥಾ ॥ ೩೬ ॥

ಭರ್ತೄನ್ಕಂಠಗತಾನ್ಹಿತ್ವಾ ಕಾಶ್ಚಿದ್ದಗ್ಧಾ ವರಸ್ತ್ರಿಯಃ ।
ಕಾಶ್ಚಿತ್ಸುಪ್ತಾಃ ಪ್ರಮತ್ತಾಶ್ಚ ರತಿಶ್ರಾಂತಾಶ್ಚ ಯೋಷಿತಃ ॥ ೩೭ ॥

---

೩೪. ಈರೀತಿಯಾಗಿ ಹೇಳುತ್ತಿರುವಾಗಲೇ ಆ ದಾನವರು ಶಿವನ ಅಪ್ಪಣೆಯಂತೆ ಆ ಬಾಣದ ಬೆಂಕಿಯಿಂದ ಸುತ್ತುವರಿಯಲ್ಪಟ್ಟು ಸುಟ್ಟು ಬೂದಿಯಾಗಿ ಹೋದರು.

೩೫. ಓ ವ್ಯಾಸ, ಶಿವನ ಅಪ್ಪಣೆಯಂತೆ ಹುಡುಗರು, ಮುದುಕರು ಮೊದಲಾದ ಅಳಿದುಳಿದ ದಾನವರೆಲ್ಲರೂ ಬಾಣಾಗ್ನಿಗೆ ಸಿಲುಕಿ ಚೆನ್ನಾಗಿ ಬೆಂದು ಬೇಗನೆ ಬೂದಿಯಾಗಿ ಹೋದರು.

೩೬. ಸ್ತ್ರೀಯರು, ಪುರುಷರು, ವಾಹನಗಳು ಎಲ್ಲವೂ ಪ್ರಳಯಕಾಲದಲ್ಲಿ ಪ್ರಪಂಚವು ನಾಶವಾಗುವಂತೆ ಆ ಬೆಂಕಿಯಿಂದ ಭಸ್ಮವಾಗಿ ಹೋದವು.

೩೭. ಕೆಲವುಂದಿ ಉತ್ತಮಾಂಗನೆಯರು ತಮ್ಮ ಕಂಠವನ್ನು ಆಲಂಗಿಸಿ ಕೊಂಡಿದ್ದ ತಮ್ಮ ಪ್ರಿಯರನ್ನು ಬಿಟ್ಟುಬಿಟ್ಟು ಬೆಂಕಿಯಲ್ಲಿ ಸಿಲುಕಿ ಬೆಂದುಹೋದರು. ಅದರಂತೆಯೇ ಕೆಲವುಮಂದಿ ನಿದ್ದೆಹೋಗಿದ್ದವರು, ಕೆಲವುಮಂದಿ ಕುಡಿದು ಮತ್ತರಾಗಿ ಜ್ಞಾನಹೀನರಾಗಿದ್ದವರು, ಮತ್ತೆ ಕೆಲವರು ರತಿಸುಖದಿಂದ ಪರವಶರಾಗಿ ಬಳಲಿಹೋಗಿದ್ದವರು, ಇಂತಹ ರಮಣಿಯರೆಲ್ಲರೂ ಬೆಂಕಿಗೆ ಸಿಕ್ಕಿ ಭಸ್ಮವಾದರು.

ಅರ್ಧದಗ್ಧಾ ವಿಬುದ್ಧಾಶ್ಚ ಬಭ್ರಮುರ್ಮೋಹಮೂರ್ಚ್ಛಿತಾಃ ।
ತೇನ ನಾಸೀತ್ಸುಸೂಕ್ಷ್ಮೋऽಪಿ ಘೋರತ್ರಿಪುರವಹ್ನಿನಾ ॥ ೩೮ ॥

ಅವಿದಗ್ಧೋ ವಿನಿರ್ಮುಕ್ತಃ ಸ್ಥಾವರೋ ಜಂಗಮೋऽಪಿ ವಾ ।
ವರ್ಜಯಿತ್ವಾ ಮಯಂ ದೈತ್ಯ ವಿಶ್ವಕರ್ಮಾಣಮವ್ಯಯಂ ॥ ೩೯ ॥

ಅವಿರುದ್ಧಂ ತು ದೇವಾನಾಂ ರಕ್ಷಿತಂ ಶಂಭುತೇಜಸಾ ।
ವಿಪತ್ಕಾಲೇऽಪಿ ಸದ್ಭಕ್ತಂ ಮಹೇಶಶರಣಾಗತಂ ॥ ೪೦ ॥

ಸನ್ನಿಪಾತೋ ಹಿ ಯೇಷಾಂ ನೋ ವಿದ್ಯತೇ ನಾಶಕಾರಕಃ ।
ದೈತ್ಯಾನಾಮನ್ಯಸತ್ತ್ವಾನಾಂ ಭಾವಾಭಾವೇ ಕೃತಾಕೃತೇ ॥ ೪೧ ॥

ತಸ್ಮಾದ್ಯತ್ನಸ್ಸುಸಂಭಾವ್ಯಃ ಸದ್ಭಿಃ ಕರ್ತವ್ಯ ಏವ ಹಿ ।
ಗರ್ಹಣಾತ್ಕ್ಷೀಯತೇ ಲೋಕೋ ನ ತತ್ಕರ್ಮ ಸಮಾಚರೇತ್ ॥ ೪೨ ॥

---

೩೮-೩೯. ಅವರಲ್ಲಿ ಕೆಲವರು ಅರ್ಧ-ಸುಟ್ಟು ಎಚ್ಚೆತ್ತವರಾಗಿ ಮೋಹದಿಂದ ಮೂರ್ಛೆಯನ್ನು ಹೊಂದಿ ಸುತ್ತಲೂ ಅಲೆಯತೊಡಗಿದರು. ಈರೀತಿಯಾಗಿ ಭಯಂಕರವಾದ ಆ ತ್ರಿಪುರಗಳಲ್ಲಿ ಹಬ್ಬಿದ ಬೆಂಕಿಯು, ದೈತ್ಯಶಿಲ್ಪಿಯಾದ ಮಯ ಒಬ್ಬನನ್ನು ಬಿಟ್ಟು ಉಳಿದ ಸ್ಥಾವರಜಂಗಮಾತ್ಮಕವಾದ ಯಾವುದೊಂದು ವಸ್ತುವನ್ನೂ ಬಿಡದೆ ಸುಟ್ಟುಬಿಟ್ಟಿತು.

೪೦. ಆ ಮಯನು ದೇವತೆಗಳಿಗೆ ವಿರೋಧಿಯಲ್ಲ. ಇಂತಹ ಆಪತ್ಕಾಲದಲ್ಲಿಯೂ ಮಹಾಭಕ್ತಿಯಿಂದ ಮಹೇಶ್ವರನನ್ನು ಮರೆಹೊಕ್ಕಿದ್ದನು ಆದುದರಿಂದ ಶಿವನ ತೇಜಸ್ಸಿನಿಂದ ಆತನು ಕಾಪಾಡಲ್ಪಟ್ಟಿದ್ದನು.

೪೧. ಪ್ರಪಂಚದಲ್ಲಿ ದೈತ್ಯರಿಂದ ಅಥವಾ ದುಷ್ಟರಿಂದ ಯಾರಿಗೂ ಯಾವ ಪ್ರಯೋಜನವೂ ಇಲ್ಲ; ಅಂತವರು ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ.

೪೨. ಆದುದರಿಂದ ಯಾವಾಗಲೂ ಒಳ್ಳೆಯತನದಿಂದ ಇರುವುದನ್ನು ಕಲಿಯಬೇಕು. ನಿಂದೆಯನ್ನು ಪಡೆಯುವಂತಾದರೆ ಅದು ನಾಶವನ್ನು ಪಡೆಯುವುದು. ಆದುದರಿಂದ ನಿಂದ್ಯವಾದುದನ್ನು ಮಾಡಬಾರದು.

ನ ಸಂಯೋಗೋ ಯಥಾ ತೇಷಾಂ ಭೂಯಾತ್ತ್ರಿಪುರವಾಸಿನಾಂ ।
ಮತಮೇತದ್ಧಿ ಸರ್ವೇಷಾಂ ದೈವಾದ್ಯದಿ ಯತೋ ಭವೇತ್ ॥ ೪೩ ॥

ಯೇ ಪೂಜಯಂತಸ್ತತ್ರಾಪಿ ದೈತ್ಯಾ ರುದ್ರಂ ಸಬಾಂಧವಾಃ ।
ಗಾಣಪತ್ಯಂ ಯಯುಸ್ಸರ್ವೇ ಶಿವಪೂಜಾವಿಧೇರ್ಬಲಾತ್ ॥ ೪೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ತ್ರಿಪುರದಾಹವರ್ಣನಂ ನಾಮ
ದಶಮೋಽಧ್ಯಾಯಃ

---

೪೩. ಆ ತ್ರಿಪುರನಿವಾಸಿಗಳು ಪರಸ್ಪರ ಸೇರವೇ ಇದ್ದಿದ್ದರೆ ಹೇಗಾಗುತ್ತಿತ್ತೋ ಎಂದು ಎಲ್ಲರೂ ಭಾವಿಸುತ್ತಿದ್ದರು. ಆದರೆ ದೈವಕ್ಕೆ ಇದಿರು ಯಾರು ? ಅಂತಹುದೂ ದೈವದಿಂದ ನಡೆದುಹೋಯಿತು.

೪೪. ಆಗಲೂ ಕೂಡ ಯಾರು ಶಿವನನ್ನು ಪೂಜಿಸುತ್ತಿದ್ದರೋ ಆ ದೈತ್ಯರು ತಮ್ಮ ಬಂಧುಬಳಗದವರೊಡನೆ ಆ ಪೂಜಾಮಹಿಮೆಯಿಂದ ಆತನ ಗಣಾಧಿಪತ್ಯವನ್ನು ಪಡೆದರು.

ಇಲ್ಲಿಗೆ ಶ್ರೀಶಿವಮಹಾಪುರಾಣದ ಎರಡನೆಯದಾದ ರುದ್ರಸಂಹಿತೆಯೊಳಗಣ ಐದನೆಯ
ಯುದ್ಧಖಂಡದಲ್ಲಿ ತ್ರಿಪುರವರ್ಣನವೆಂಬ ಹತ್ತನೆಯ ಅಧ್ಯಾಯವು
ಮುಗಿದುದು.

॥ ಶ್ರೀ ॥ ೮ಃ

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕಾದಶೋಽಧ್ಯಾಯಃ

॥ ವ್ಯಾಸ ಉವಾಚ ॥

ಬ್ರಹ್ಮಪುತ್ರ ಮಹಾಪ್ರಾಜ್ಞ ಧನ್ಯಸ್ತ್ವಂ ಶೈವಸತ್ತಮ ।
ಕಿಮಕಾರ್ಷುಸ್ತತೋ ದೇವಾ ದಗ್ಧೇ ಚ ತ್ರಿಪುರೇಽಖಿಲಾಃ ॥ ೧ ॥

ಮಯಃ ಕುತ್ರ ಗತೋ ದಗ್ಧೋ ಪತಯಃ ಕುತ್ರ ತೇ ಗತಾಃ ।
ತತ್ಸರ್ವಂ ಮೇ ಸಮಾಚಕ್ಷ್ವ ಯದಿ ಶಂಭುಕಥಾಶ್ರಯಂ ॥ ೨ ॥

---

### ಹನ್ನೊಂದನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯು ಕೇಳಿದನು:—ಓ ಸನತ್ಕುಮಾರನೇ, ನೀನು ಶೈವಶ್ರೇಷ್ಠನು, ಮಹಾಮೇಧಾವಿಯು, ಬ್ರಹ್ಮನಿಗೆ ಪುತ್ರನು. ನೀನೇ ಧನ್ಯನು. ಆ ತ್ರಿಪುರಗಳು ಸುಟ್ಟುಹೋದಮೇಲೆ ದೇವತೆಗಳೆಲ್ಲರೂ ಏನು ಮಾಡಿದರು ?

೨. ಬೆಂಕಿಗೆ ಸಿಲುಕದೆ ಸುಟ್ಟುಹೋಗದಿದ್ದ ಮಯನು ಎಲ್ಲಿಗೆ ಹೋದನು ? ಆ ಯತಿಗಳು ಎಲ್ಲಿಗೆ ಹೋದರು ? ಈ ವಿಷಯವು ಶಿವನ ಚರಿತ್ರೆಗೆ ಸಂಬಂಧಪಟ್ಟದಾದರೆ ಅದೆಲ್ಲವನ್ನೂ ನಮಗೆ ತಿಳಿಸು ಎಂದನು.

॥ ಸೂತ ಉವಾಚ ॥

ಇತ್ಯಾಕರ್ಣ್ಯ ವ್ಯಾಸವಾಕ್ಯಂ ಭಗವಾನ್ಬ್ರಹ್ಮಪುತ್ರಕಃ ।
ಸನತ್ಕುಮಾರಃ ಪ್ರೋವಾಚ ಶಿವಪಾದಯುಗಂ ಸ್ಮರನ್ ॥ ೩ ॥

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಮಹಾಬುದ್ಧೇ ಪಾರಾಶರ್ಯಂ ಮಹೇಶಿತುಃ ।
ಚರಿತಂ ಸರ್ವಪಾಪಘ್ನಂ ಲೋಕಲೀಲಾನುಸಾರಿಣಃ ॥ ೪ ॥

ಮಹೇಶ್ವರೇಣ ಸರ್ವಸ್ಮಿಂಸ್ತ್ರಿಪುರೇ ದೈತ್ಯಸಂಕುಲೇ ।
ದಗ್ಧೇ ವಿಶೇಷತಸ್ತತ್ರ ವಿಸ್ಮಿತಾಸ್ತೇಽಭವನ್ಸುರಾಃ ॥ ೫ ॥

ನ ಕಿಂಚಿದಬ್ರುವನ್ದೇವಾಃ ಸೇಂದ್ರೋಪೇಂದ್ರಾದಯಸ್ತದಾ ।
ಮಹಾತೇಜಸ್ವಿನಂ ರುದ್ರಂ ಸರ್ವೇ ವೀಕ್ಷ್ಯ ಸಸಂಭ್ರಮಾಃ ॥ ೬ ॥

ಮಹಾಭಯಂಕರಂ ರೌದ್ರಂ ಪ್ರಜ್ವಲಂತಂ ದಿಶೋ ದಶ ।
ಕೋಟಿಸೂರ್ಯಪ್ರತೀಕಾಶಂ ಪ್ರಲಯಾನಲಸನ್ನಿಭಂ ॥ ೭ ॥

---

೩. ಸೂತನೆಂತೆಂದನು :—ಎಲೈ ಶೌನಕಾದಿಗಳಿರಾ, ಈ ರೀತಿ ವ್ಯಾಸನು ಕೇಳಿದ ಪ್ರಶ್ನೆಯನ್ನು ಕೇಳಿ, ಸೃಷ್ಟಿಕರ್ತನಾದ ಬ್ರಹ್ಮನ ಮಾನಸಪುತ್ರನಾದ ಸನತ್ಕುಮಾರನು ಆತನನ್ನು ಕುರಿತು ನುಡಿದನು.

೪. ಪರಾಶರಪುತ್ರನೂ ಮಹಾಪ್ರಾಜ್ಞನೂ ಆದ ಎಲೈ ವ್ಯಾಸಮಹರ್ಷಿಯೇ, ಪ್ರಪಂಚಕ್ಕೆ ಅನುಗುಣವಾದ ನಾನಾಲೀಲೆಗಳನ್ನೊಳಗೊಂಡ ಸರ್ವಪಾಪಹರವಾದ ಆ ಮಹೇಶ್ವರನ ಚರಿತ್ರೆಯನ್ನು ಹೇಳುವೆನು ಕೇಳು.

೫ ಆ ತ್ರಿಪುರಗಳೂ, ಅಲ್ಲಿರುವ ದೈತ್ಯರೂ ಎಲ್ಲರೂ, ಮಹೇಶ್ವರನಿಂದ ಸಂಪೂರ್ಣವಾಗಿ ಸುಟ್ಟುಹೋದಮೇಲೆ ದೇವತೆಗಳೆಲ್ಲರೂ, ಆಶ್ಚರ್ಯಚಕಿತರಾದರು.

೬. ಆಗ ಮಹಾತೇಜಶ್ಶಾಲಿಯಾದ ಆ ಶಿವನನ್ನು ಕಂಡು ಇಂದ್ರ, ವಿಷ್ಣು ಮೊದಲಾದ ದೇವತೆಗಳೆಲ್ಲರೂ ಸಂಭ್ರಮದಿಂದ ಮಾತನಾಡಲು ತೋರದೆ ಸುಮ್ಮನೆ ನಿಂತುಕೊಂಡರು.

೭-೮. ಆಗ ನೋಡಿದವರಿಗೆ ನಡುಕಹುಟ್ಟುವಂತೆ ಮಹಾರೌದ್ರಾಕಾರವನ್ನು ತಾಳಿ ಹತ್ತು ದಿಕ್ಕುಗಳನ್ನು ಬೆಳಗುತ್ತಾ, ಕೋಟಿ ಸೂರ್ಯರಿಗೆ ಸರಿಸಾಟಿಯಾಗಿಯೂ

ಭಯಾದ್ದೇವಂ ನಿರೀಕ್ಷ್ಯೈವ ದೇವೀಂ ಚ ಹಿಮವತ್ಸುತಾಂ ।
ಬಿಭ್ಯಿರೇ ನಿಖಿಲಾ ದೇವಪ್ರಮುಖಾಸ್ತಸ್ಥು ರಾನತಾಃ ॥ ೮ ॥

ದೃಷ್ಟ್ವಾನೀಕಂ ತದಾ ಭೀತಂ ದೇವಾನಾಮೃಷಿಪುಂಗವಾಃ ।
ನ ಕಿಂಚಿದೂಚುಸ್ಸಂತಸ್ಥುಃ ಪ್ರಣೇಮುಸ್ತೇ ಸಮಂತತಃ ॥ ೯ ॥

ಅಥ ಬ್ರಹ್ಮಾಪಿ ಸಂಭೀತೋ ದೃಷ್ಟ್ವಾ ರೂಪಂ ಚ ಶಾಂಕರಂ ।
ತುಷ್ಟಾವ ತುಷ್ಟಹೃದಯೋ ದೇವೈಸ್ಸಹ ಸಮಾಹಿತಃ ॥ ೧೦ ॥

ವಿಷ್ಣುನಾ ಚ ಸಭೀತೇನ ದೇವದೇವಂ ಭವಂ ಹರಂ ।
ತ್ರಿಪುರಾರಿಂ ಸಗಿರಿಜಂ ಭಕ್ತಾಧೀನಂ ಮಹೇಶ್ವರಂ ॥ ೧೧ ॥

॥ ಬ್ರಹ್ಮೋವಾಚ ॥

ದೇವದೇವ ಮಹಾದೇವ ಭಕ್ತಾನುಗ್ರಹಕಾರಕ ।
ಪ್ರಸೀದ ಪರಮೇಶಾನ ಸರ್ವದೇವಹಿತಪ್ರದ ॥ ೧೨ ॥

---

ಪ್ರಳಯಕಾಲದ ಅಗ್ನಿಗೆ ಸದೃಶನಾಗಿಯೂ, ಇರುವ ಆ ಶಿವನನ್ನೂ, ಹಿಮವಂತನ ಪುತ್ರಿಯಾದ ಪಾರ್ವತೀದೇವಿಯನ್ನೂ, ಕಂಡು ಭಯದಿಂದ ತತ್ತರಿಸುತ್ತಾ ದೇವತೆಗಳೇ ಆದಿಯಾಗಿ ಎಲ್ಲರೂ ನಮ್ರತೆಯಿಂದ ಬಾಗಿ ನಿಂತುಕೊಂಡರು.

೯. ಈರೀತಿ ದೇವತೆಗಳ ಸಮುದಾಯವೆಲ್ಲವೂ ಭಯದಿಂದ ವಿಹ್ವಲವಾಗಿರುವುದನ್ನು ಕಂಡು, ಮಹರ್ಷಿಗಳೆಲ್ಲರೂ, ಯಾವ ಮಾತನ್ನೂ ಆಡದೆ, ಸುತ್ತಲೂ ನಮಸ್ಕಾರಮಾಡತೊಡಗಿದರು.

೧೦-೧೧. ಬಳಿಕ ಶಿವನ ಆ ರೂಪವನ್ನು ನೋಡಿ ಬ್ರಹ್ಮನೂ ಹೆದರಿ, ತನ್ನಂತೆಯೇ ಭೀತನಾದ ವಿಷ್ಣುವಿನೊಂದಿಗೂ, ದೇವತೆಗಳೊಡನೆಯೂ, ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡು, ಸಂತೋಷದಿಂದ, ದೇವದೇವನೂ, ಜಗತ್ಕಾರಣನೂ, ಸರ್ವಸಂಹಾರಿಯೂ, ತ್ರಿಪುರವೈರಿಯೂ, ಗಿರಿಜಾಕಾಂತನೂ, ಭಕ್ತವತ್ಸಲನೂ ಆದ ಮಹೇಶ್ವರನನ್ನು ಸ್ತೋತ್ರಮಾಡತೊಡಗಿದನು.

೧೨. ಓ ದೇವದೇವ, ಮಹಾದೇವ, ನೀನು ಭಕ್ತರ ವಿಷಯದಲ್ಲಿ ಅನುಗ್ರಹವನ್ನು ತೋರುವವನು. ದೇವತೆಗಳಿಗೆಲ್ಲರಿಗೂ ಹಿತವನ್ನುಂಟುಮಾಡುವವನು, ನಮ್ಮಲ್ಲಿ ಪ್ರಸನ್ನನಾಗು.

ಪ್ರಸೀದ ಜಗತಾಂ ನಾಥ ಪ್ರಸೀದಾನಂದದಾಯಕ ।
ಪ್ರಸೀದ ಶಂಕರ ಸ್ವಾಮಿನ್ ಪ್ರಸೀದ ಪರಮೇಶ್ವರ ॥ ೧೩ ॥

ಓಂಕಾರಾಯ ನಮಸ್ತುಭ್ಯಮಾಕಾರಪರತಾರಕ ।
ಪ್ರಸೀದ ಸರ್ವದೇವೇಶ ತ್ರಿಪುರಘ್ನ ಮಹೇಶ್ವರ ॥ ೧೪ ॥

ನಾನಾಹಾಖ್ಯಾಯ ದೇವಾಯ ವರಣಪ್ರಿಯ ಶಂಕರ ।
ಅಗುಣಾಯ ನಮಸ್ತುಭ್ಯಂ ಪ್ರಕೃತೇಃ ಪುರುಷಾತ್ಪರ ॥ ೧೫ ॥

ನಿರ್ವಿಕಾರಾಯ ನಿತ್ಯಾಯ ನಿತ್ಯತೃಪ್ತಾಯ ಭಾಸ್ವತೇ ।
ನಿರಂಜನಾಯ ದಿವ್ಯಾಯ ತ್ರಿಗುಣಾಯ ನಮೋಽಸ್ತು ತೇ ॥ ೧೬ ॥

ಸಗುಣಾಯ ನಮಸ್ತುಭ್ಯಂ ಸ್ವರ್ಗೇಶಾಯ ನಮೋಽಸ್ತು ತೇ ।
ಸದಾಶಿವಾಯ ಶಾಂತಾಯ ಮಹೇಶಾಯ ಪಿನಾಕಿನೇ ॥ ೧೭ ॥

---

೧೩. ಎಲೈ ಜಗನ್ನಾಥನೇ ಪ್ರಸನ್ನನಾಗು. ಆನಂದಪ್ರದನೇ, ಪ್ರಸನ್ನನಾಗು. ಎಲೈ ಕಲ್ಯಾಣಕಾರಕನೇ, ಸ್ವಾಮಿಯೇ, ನಮ್ಮಲ್ಲಿ ಪ್ರಸಾದವನ್ನು ತೋರು. ಎಲೈ ಪರಮೇಶ್ವರನೇ, ಪ್ರಸನ್ನತೆಯನ್ನು ತಾಳು.

೧೪. ನಿನ್ನ ಆಕೃತಿಯನ್ನೇ ಅನನ್ಯವಾದ ಮನಸ್ಸಿನಿಂದ ಆರಾಧಿಸುವಂಥವರನ್ನು ಈ ಸಂಸಾರದಿಂದ ಉದ್ಧರಿಸುವ ಎಲೈ ಮಹೇಶನೇ, ಓಂಕಾರಸ್ವರೂಪನಾದ ನಿನಗೆ ನಮಸ್ಕಾರವು. ಹೇ ಸರ್ವದೇವೇಶಾ, ತ್ರಿಪುರಾರೀ, ಪ್ರಸನ್ನನಾಗು.

೧೫. ಹೇ ವರದಾಯಕ, ಶಂಕರ, ನೀನು ಈ ಜಗತ್ತಿನಲ್ಲಿ ನಾನಾರೂಪವಾಗಿ ಕರೆಯಲ್ಪಡುವ ಪ್ರತಿಯೊಂದು ವಸ್ತುವಿನ ಸ್ವರೂಪವನ್ನೂ ಹೊಂದಿರುವೆ. ನಿರ್ಗುಣನೂ, ಪ್ರಕೃತಿಪುರುಷರಿಗೂ ಮೇಲಾದವನೂ ಆದ ನಿನಗೆ ನಮಸ್ಕಾರ.

೧೬. ವಿಕಾರರಹಿತನೂ, ನಿತ್ಯನೂ, ನಿತ್ಯತೃಪ್ತನೂ, ಪ್ರಕಾಶಸ್ವರೂಪನೂ, ನಿರ್ಲೇಪನೂ, ಕಾಂತಿಮಯನೂ, ಸತ್ತ್ವರಜಸ್ತಮೋರೂಪನೂ ಆದ ನಿನಗೆ ನಮಸ್ಕಾರವು.

೧೭. ಗುಣತ್ರಯಸಹಿತನೂ, ಸ್ವರ್ಗಕ್ಕೆ ಅಧಿಪತಿಯೂ, ಸರ್ವಕಾಲದಲ್ಲಿಯೂ ಮಂಗಲಸ್ವರೂಪನೂ, ಶಾಂತನೂ, ಮಹೇಶ್ವರನೂ, ಪಿನಾಕಧಾರಿಯೂ ಆದ ನಿನಗೆ ನಮಸ್ಕಾರವು.

ಸರ್ವಜ್ಞಾಯ ಶರಣ್ಯಾಯ ಸದ್ಯೋಜಾತಾಯ ತೇ ನಮಃ ।
ವಾಮದೇವಾಯ ರುದ್ರಾಯ ತದಾಪ್ಯಪುರುಷಾಯ ಚ　　॥ ೧೮ ॥

ಅಘೋರಾಯ ಸುಸೇವ್ಯಾಯ ಭಕ್ತಾಧೀನಾಯ ತೇ ನಮಃ ।
ಈಶಾನಾಯ ವರೇಣ್ಯಾಯ ಭಕ್ತಾನಂದಪ್ರದಾಯಿನೇ　　॥ ೧೯ ॥

ರಕ್ಷ ರಕ್ಷ ಮಹಾದೇವ ಭೀತಾನ್ನಸ್ಸಕಲಾಸುರಾನ್ ।
ದಗ್ಧ್ವಾ ಚ ತ್ರಿಪುರಂ ಸರ್ವೇ ಕೃತಾರ್ಥಾ ಅಸುರಾಃ ಕೃತಾಃ　　॥ ೨೦ ॥

ಸ್ತುತ್ವೈವಂ ದೇವತಾಸ್ಸರ್ವಾ ನಮಸ್ಕಾರಂ ಪೃಥಕ್ಪೃಥಕ್ ।
ಚಕ್ರುಸ್ತೇ ಪರಮಪ್ರೀತ್ಯಾ ಬ್ರಹ್ಮಾದ್ಯಾಸ್ತು ಸದಾಶಿವಂ　　॥ ೨೧ ॥

ಅಥ ಬ್ರಹ್ಮಾ ಸ್ವಯಂ ದೇವಂ ತ್ರಿಪುರಾರಿಂ ಮಹೇಶ್ವರಂ ।
ತುಷ್ಟಾವ ಪ್ರಣತೋ ಭೂತ್ವಾ ನತಸ್ಕಂಧಃ ಕೃತಾಂಜಲಿಃ　　॥ ೨೨ ॥

---

೧೮. ಸರ್ವಜ್ಞನೂ, ಭಯದಿಂದ ಪಾರುಮಾಡತಕ್ಕವನೂ, ಸದ್ಯೋಜಾತನೂ, ವಾಮದೇವನೂ, ರುದ್ರನೂ, ತತ್ಪುರುಷನೂ ಆದ ನಿನಗೆ ನಮಸ್ಕಾರ.

೧೯. ಅಘೋರನೂ, ಸೇವಾಸುಲಭನೂ, ಭಕ್ತಪರಾಧೀನನೂ, ಈಶಾನನೂ ಶ್ರೇಷ್ಠನೂ, ಭಕ್ತರಿಗೆ ಆನಂದವನ್ನುಂಟುಮಾಡುವವನೂ, ಆದ ನಿನಗೆ ನಮಸ್ಕಾರ.

೨೦. ಓ ಮಹಾದೇವ, ಭಯದಿಂದ ತಲ್ಲಣಿಸುತ್ತಿರುವ ನಮ್ಮೆಲ್ಲರನ್ನೂ ಕಾಪಾಡು. ಕಾಪಾಡು. ತ್ರಿಪುರಗಳನ್ನು ದಹಿಸಿ ನಮ್ಮೆಲ್ಲರನ್ನೂ ಕೃತಾರ್ಥರನ್ನಾಗಿ ಮಾಡಿದೆ.

೨೧. ಈ ರೀತಿಯಾಗಿ ಬ್ರಹ್ಮಾದಿದೇವತೆಗಳೆಲ್ಲರೂ ಸ್ತೋತ್ರಮಾಡಿದ ಬಳಿಕ ಬಹುವಾದ ಸಂತೋಷದಿಂದ ಆ ಸದಾಶಿವನನ್ನು ಬೇರೆ ಬೇರೆಯಾಗಿ ನಮಸ್ಕರಿಸಿದರು.

೨೨. ಆಮೇಲೆ ಬ್ರಹ್ಮನು ತ್ರಿಪುರಸಂಹಾರಿಯಾದ ಆ ಮಹೇಶ್ವರನಿಗೆ ವಿನೀತನಾಗಿ, ತಲೆಬಾಗಿ, ಕೈಗಳನ್ನು ಜೋಡಿಸಿ, ನಮಸ್ಕಾರಮಾಡಿ, ಈರೀತಿ ಸ್ತೋತ್ರ ಮಾಡಿದನು.

॥ ಬ್ರಹ್ಮೋವಾಚ ॥

ಭಗವನ್ದೇವ ದೇವೇಶ ತ್ರಿಪುರಾಂತಕ ಶಂಕರ ।
ತ್ವಯಿ ಭಕ್ತಿಃ ಪರಾ ಮೇಽಸ್ತು ಮಹಾದೇವಾನಪಾಯಿನೀ ॥ ೨೩ ॥

ಸರ್ವದಾ ಮೇಽಸ್ತು ಸಾರಥ್ಯಂ ತವ ದೇವೇಶ ಶಂಕರ ।
ಅನುಕೂಲೋ ಭವ ವಿಭೋ ಸದಾ ತ್ವಂ ಪರಮೇಶ್ವರ ॥ ೨೪ ॥

॥ ಸನತ್ಕುಮಾರ ಉವಾಚ ॥

ಇತಿ ಸ್ತುತ್ವಾ ವಿಧಿಶ್ಶಂಭುಂ ಭಕ್ತವತ್ಸಲಮಾನತಃ ।
ವಿರರಾಮ ನತಸ್ಕಂಧಃ ಕೃತಾಂಜಲಿರುದಾರಧೀಃ ॥ ೨೫ ॥

ಜನಾರ್ದನೋಽಪಿ ಭಗವಾನ್ನಮಸ್ಕೃತ್ಯ ಮಹೇಶ್ವರಂ ।
ಕೃತಾಂಜಲಿಪುಟೋ ಭೂತ್ವಾ ತುಷ್ಟಾವ ಚ ಮಹೇಶ್ವರಂ ॥ ೨೬ ॥

॥ ವಿಷ್ಣುರುವಾಚ ॥

ದೇವಾಧೀಶ ಮಹೇಶಾನ ದೀನಬಂಧೋ ಕೃಪಾಕರ ।
ಪ್ರಸೀದ ಪರಮೇಶಾನ ಕೃಪಾಂ ಕುರು ನತಪ್ರಿಯ ॥ ೨೭ ॥

---

೨೩. ಎಲೈ ಭಗವಂತನೇ, ದೇವದೇವನೂ, ತ್ರಿಪುರಸಂಹಾರಿಯೂ, ಕಲ್ಯಾಣ ಕಾರಕನೂ, ಆದ ಎಲೈ ಮಹಾದೇವನೇ, ನನಗೆ ನಿನ್ನಲ್ಲಿ ಭಕ್ತಿಯು ಸ್ಥಿರವಾಗಿ ನೆಲಸಿರಲಿ.

೨೪. ದೇವತೆಗಳಿಗೆಲ್ಲಾ ಅಧಿಪತಿಯಾದ ಓ ಶಂಕರನೇ, ನಾನು ಯಾವಾ ಗಲೂ ನಿನ್ನ ಸಾರಥಿಯಾಗಿಯೇ ಇರುವಂತೆ ಆಗಲಿ. ಹೇ ಪರಮೇಶ್ವರಾ, ನೀನು ಯಾವಾಗಲೂ, ನನ್ನ ವಿಷಯದಲ್ಲಿ ಅನುಕೂಲನಾಗಿರು.

೨೫. ಸನತ್ಕುಮಾರನಿಂತೆಂದನು :—ಓ ವ್ಯಾಸ, ಹೀಗೆಂದು ಆ ಬ್ರಹ್ಮನು ಭಕ್ತವತ್ಸಲನಾದ ಶಂಕರನನ್ನು ಪ್ರಾರ್ಥಿಸಿ ಬದ್ಧಾಂಜಲಿಪುಟನಾಗಿ ತಲೆಬಾಗಿ ನಮಸ್ಕರಿಸಿ ಸುಮ್ಮನಾದನು.

೨೬. ಬಳಿಕ ಭಗವಂತನಾದ ಶ್ರೀಹರಿಯೂ ಸಹ ಶಿವನಿಗೆ ನಮಸ್ಕರಿಸಿ, ಕೈಗಳನ್ನು ಜೋಡಿಸಿಕೊಂಡು ಸ್ತೋತ್ರಮಾಡಿದನು.

೨೭. ಹೇ, ದೇವಾಧೀಶ, ಮಹೇಶ್ವರ, ದೀನಬಂಧೂ, ಕರುಣಾಕರ, ಭಕ್ತವತ್ಸಲ, ಪ್ರಸನ್ನನಾಗು. ನಮ್ಮಲ್ಲಿ ಕೃಪೆಯನ್ನು ಮಾಡು.

ನಿರ್ಗುಣಾಯ ನಮಸ್ತುಭ್ಯಂ ಪುನಶ್ಚ ಸಗುಣಾಯ ಚ ।
ಪುನಃ ಪ್ರಕೃತಿರೂಪಾಯ ಪುನಶ್ಚ ಪುರುಷಾಯ ಚ　　॥ ೨೮ ॥

ಪಶ್ಚಾದ್ಗುಣಸ್ವರೂಪಾಯ ನತೋ ವಿಶ್ವಾತ್ಮನೇ ನಮಃ ।
ಭಕ್ತಿಪ್ರಿಯಾಯ ಶಾಂತಾಯ ಶಿವಾಯ ಪರಮಾತ್ಮನೇ　　॥ ೨೯ ॥

ಸದಾಶಿವಾಯ ರುದ್ರಾಯ ಜಗತಾಂ ಪತಯೇ ನಮಃ ।
ತ್ವಯಿ ಭಕ್ತಿರ್ದೃಢಾ ಮೇಽದ್ಯ ವರ್ಧಮಾನಾ ಭವತ್ವಿತಿ　　॥ ೩೦ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ವಿರರಾಮಾಸೌ ಶೈವಪ್ರವರಸತ್ತಮಃ ।
ಸರ್ವೇ ದೇವಾಃ ಪ್ರಣಮ್ಯೋಚುಸ್ತತಸ್ತಂ ಪರಮೇಶ್ವರಂ　　॥ ೩೧ ॥

॥ ದೇವಾ ಊಚುಃ ॥

ದೇವನಾಥ ಮಹಾದೇವ ಕರುಣಾಕರ ಶಂಕರ ।
ಪ್ರಸೀದ ಜಗತಾಂ ನಾಥ ಪ್ರಸೀದ ಪರಮೇಶ್ವರ　　॥ ೩೨ ॥

---

೨೮. ನೀನು ಸ್ವಸ್ವರೂಪಾವಸ್ಥೆಯಲ್ಲಿ ಗುಣರಹಿತನಾಗಿರುವೆ. ಬಳಿಕ ಸೃಷ್ಟಿ ಸಮಯದಲ್ಲಿ ಗುಣಸಹಿರತನೂ, ಆ ಮೇಲೆ ಪ್ರಕೃತಿಪುರುಷಸ್ವರೂಪನೂ ಆಗಿರುವೆ ಇಂತಹ ನಿನಗೆ ನಮಸ್ಕಾರವು.

೨೯-೩೦. ಅನಂತರ ಸತ್ತ್ವರಜಸ್ತಮೋರೂಪನೂ, ಆಮೇಲೆ, ಪ್ರಪಂಚ ಸ್ವರೂಪನೂ ಆದ ನಿನಗೆ ನಮಸ್ಕಾರವು. ಭಕ್ತಿಗೆ ಒಲಿಯುವವನೂ, ಶಾಂತನೂ, ಮಂಗಲಮಯನೂ, ಪರಮಾತ್ಮನೂ, ಸದಾಶಿವನೂ, ರುದ್ರನೂ, ಜಗತ್ಪತಿಯೂ ಆದ ನಿನಗೆ ನಮಸ್ಕಾರವು. ನನಗೀಗ ನಿನ್ನಲ್ಲಿ ಭಕ್ತಿಯು ದೃಢವಾಗಿರಲಿ, ಅಲ್ಲದೆ ಆ ಭಕ್ತಿಯು ಬೆಳೆಯುತ್ತಿರಲಿ ಎಂದನು.

೩೧. ಓ ವ್ಯಾಸ, ಹೀಗೆಂದು ಶೈವಶ್ರೇಷ್ಠನಾದ ವಿಷ್ಣುವು ಸ್ತೋತ್ರಮಾಡಿ ಸುಮ್ಮನಾದಮೇಲೆ, ಉಳಿದೆಲ್ಲದೇವತೆಗಳೂ, ಆ ಪರಮೇಶ್ವರನಿಗೆ ನಮಸ್ಕಾರಮಾಡಿ ಇಂತೆಂದು ಬಿನ್ನವಿಸಿದರು.

೩೨. ದೇವತೆಗಳಿಗೆಲ್ಲಾ ಪ್ರಭುವಾದ ಎಲೈ ಮಹಾದೇವನೇ, ಹೇ ಕೃಪಾ ನಿಧೀ, ಶಂಕರ, ಹೇ ಜಗನ್ನಾಥ, ಪ್ರಸನ್ನನಾಗು. ಹೇ ಪರಮೇಶ್ವರ ನಮ್ಮಲ್ಲಿ ಸುಪ್ರೀತನಾಗು.

ಪ್ರಸೀದ ಸರ್ವಕರ್ತಾ ತ್ವಂ ನಮಾಮಸ್ತ್ವಾಂ ವಯಂ ಮುದಾ ।
ತ್ವಯಿ ಭಕ್ತಿರ್ದೃಢಾಸ್ಮಾಕಂ ನಿತ್ಯಂ ಸ್ಯಾದನಪಾಯಿನೀ ॥ ೩೩ ॥

॥ ಸನತ್ಕುಮಾರ ಉವಾಚ ॥
ಇತಿ ಸ್ತುತಶ್ಚ ದೇವೇಶೋ ಬ್ರಹ್ಮಣಾ ಹರಿಣಾಮರೈಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಶಂಕರೋ ಲೋಕಶಂಕರಃ ॥ ೩೪ ॥

॥ ಶಂಕರ ಉವಾಚ ॥
ಹೇ ವಿಧೇ ಹೇ ಹರೇ ದೇವಾಃ ಪ್ರಸನ್ನೋಽಸ್ಮಿ ವಿಶೇಷತಃ ।
ಮನೋಽಭಿಲಷಿತಂ ಬ್ರೂತ ವರಂ ಸರ್ವೇ ವಿಚಾರತಃ ॥ ೩೫ ॥

॥ ಸನತ್ಕುಮಾರ ಉವಾಚ ॥
ಇತ್ಯುಕ್ತಂ ವಚನಂ ಶ್ರುತ್ವಾ ಹರೇಣ ಮುನಿಸತ್ತಮ ।
ಪ್ರತ್ಯೂಚುಸ್ಸರ್ವದೇವಾಶ್ಚ ಪ್ರಸನ್ನೇನಾಂತರಾತ್ಮನಾ ॥ ೩೬ ॥

---

೩೩. ಎಲೈ ಸ್ವಾಮಿಯೇ ಪ್ರಸನ್ನನಾಗು. ನೀನು ಸರ್ವಕರ್ತನು. ನಿನ್ನನ್ನು ನಾವು ಸಂತೋಷದಿಂದ ನಮಸ್ಕರಿಸುವೆವು. ನಿನ್ನಲ್ಲಿ ನಮ್ಮ ಭಕ್ತಿಯು ಸರ್ವದಾ ಸ್ಥಿರವಾಗಿರಲಿ ಎಂದರು.

೩೪. ಸನತ್ಕುಮಾರನಿಂತೆಂದನು :—ಓ ವ್ಯಾಸ, ಈ ರೀತಿ ಬ್ರಹ್ಮನಿಂದಲೂ, ವಿಷ್ಣುವಿನಿಂದಲೂ, ದೇವತೆಗಳಿಂದಲೂ, ಸ್ತೋತ್ರಮಾಡಲ್ಪಟ್ಟು ಪ್ರಪಂಚ ಕಲ್ಯಾಣಕಾರಕನಾದ ಶಂಕರನು ಪ್ರಸನ್ನವಾದ ಮನಸ್ಸುಳ್ಳವನಾಗಿ, ಹೀಗೆಂದು ನುಡಿದನು.

೩೫. ಎಲೈ ಬ್ರಹ್ಮವಿಷ್ಣ್ವಾದಿದೇವತೆಗಳಿರಾ, ನಿಮ್ಮಲ್ಲಿ ನಾನು ವಿಶೇಷವಾಗಿ ಪ್ರಸನ್ನನಾಗಿರುವೆನು. ನೀವೆಲ್ಲರೂ ವಿಚಾರಮಾಡಿ ನಿಮ್ಮ ಮನಸ್ಸಿಗೊಪ್ಪಿದ ವರವನ್ನು ಕೇಳಿಕೊಳ್ಳಿರಿ ಎಂದನು.

೩೬. ಎಲೈ ವ್ಯಾಸಮಹರ್ಷಿಯೇ, ಈರೀತಿ ಶಿವನು ಹೇಳಿದ ಮಾತನ್ನು ಕೇಳಿ, ಸಂತೋಷಹೃದಯದಿಂದ ಎಲ್ಲ ದೇವತೆಗಳೂ ಹೀಗೆಂದು ನುಡಿದರು.

॥ ಸರ್ವೇ ದೇವಾ ಊಚುಃ ॥

ಯದಿ ಪ್ರಸನ್ನೋ ಭಗವನ್ಯದಿ ದೇಯೋ ವರಸ್ತ್ವಯಾ ।
ದೇವದೇವೇಶ ಚಾಸ್ಮಭ್ಯಂ ಜ್ಞಾತ್ವಾ ದಾಸಾನ್ಹಿ ನಸ್ಸುರಾನ್ ॥ ೩೭ ॥

ಯದಾ ದುಃಖಂ ತು ದೇವಾನಾಂ ಸಂಭವೇದ್ದೇವಸತ್ತಮ ।
ತದಾ ತ್ವಂ ಪ್ರಕಟೋ ಭೂತ್ವಾ ದುಃಖಂ ನಾಶಯ ಸರ್ವದಾ ॥ ೩೮ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತೋ ಭಗವಾನ್ರುದ್ರೋ ಬ್ರಹ್ಮಣಾ ಹರಿಣಾಮರೈಃ ।
ಯುಗಪತ್ಪ್ರಾಹ ತುಷ್ಟಾತ್ಮಾ ತಥೇತ್ಯಸ್ತು ನಿರಂತರಂ ॥ ೩೯ ॥

ಸ್ತವೈರೇತೈಶ್ಚ ತುಷ್ಟೋಽಸ್ಮಿ ದಾಸ್ಯಾಮಿ ಸರ್ವದಾ ಧ್ರುವಂ ।
ಯದಭೀಪ್ಸಿತಮಂ ಲೋಕೇ ಪಠತಾಂ ಶೃಣ್ವತಾಂ ಸುರಾಃ ॥ ೪೦ ॥

---

೩೭-೩೮. ದೇವತೆಗಳಿಗೆಲ್ಲಾ ಪ್ರಭುವಾದ ಎಲೈ ಶಂಕರನೇ, ನೀನು ನಮ್ಮಲ್ಲಿ ಪ್ರಸನ್ನನಾಗಿ ನಮಗೆ ನೀನು ವರವನ್ನು ಕೊಡಬೇಕೆಂದಿರುವುದಾದರೆ, ನಾವೆಲ್ಲರೂ ನಿನ್ನ ಸೇವಕರೆಂದು ತಿಳಿದು, ನಮಗೆ ಯಾವಾಗಲಾದರೂ ಇಂತಹ ಕಷ್ಟವೊದಗಿದರೆ ಆಗ ನೀನು ಪ್ರತ್ಯಕ್ಷನಾಗಿ ನಮ್ಮ ದುಃಖವನ್ನು ಪರಿಹರಿಸು ಎಂದು ಪ್ರಾರ್ಥಿಸಿದರು.

೩೯-೪೦. ಸನತ್ಕುಮಾರನಿಂತೆಂದನು :—ಹೀಗೆಂಬುದಾಗಿ ಬ್ರಹ್ಮವಿಷ್ಣ್ವಾದಿ ಸಕಲ ದೇವತೆಗಳೂ ಪ್ರಾರ್ಥಿಸಲು ಆ ಭಗವಂತನಾದ ಶಿವನು. ಸಂತುಷ್ಟಮನಸ್ಸಿನಿಂದ ನೀವು ಅಪೇಕ್ಷಿಸಿದಂತೆ ಯಾವಾಗಲೂ ಆಗಲಿ ಎಂಬುದಾಗಿ ಅವರಿಗೆಲ್ಲರಿಗೂ ಒಟ್ಟಿಗೆ ವರವಿತ್ತು ನಿಮ್ಮ ಈ ಸ್ತೋತ್ರದಿಂದ ನಾನು ಸಂತೋಷವನ್ನು ಹೊಂದಿದೆನು. ಈ ಸ್ತೋತ್ರವನ್ನು ಯಾರು ಪಠಿಸುವರೋ, ಯಾರು ಕೇಳುವರೋ, ಅವರು ಯಾವುದನ್ನು ವಿಶೇಷವಾಗಿ ಬಯಸುವರೋ ಅದನ್ನು ಖಂಡಿತವಾಗಿಯೂ ಕೊಡುವೆನು.

ಇತ್ಯುಕ್ತ್ವಾ ಶಂಕರಃ ಪ್ರೀತೋ ದೇವದುಃಖಹರಸ್ಸದಾ ।
ಸರ್ವದೇವಪ್ರಿಯಂ ಯದ್ವೈ ತತ್ಸರ್ವಂ ಚ ಪ್ರದತ್ತವಾನ್ ॥ ೪೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ದೇವಸ್ತುತಿವರ್ಣನಂ ನಾಮ
ಏಕಾದಶೋಽಧ್ಯಾಯಃ

---

೪೧. ಎಂಬುದಾಗಿ ನುಡಿದು, ದೇವತೆಗಳ ದುಃಖವನ್ನು ಪರಿಹರಿಸುವ ಆ ಶಂಕರನು ಸುಪ್ರೀತನಾಗಿ, ಅವರಿಗೆಲ್ಲರಿಗೂ ಏನೇನು ಇಷ್ಟವಾದುವೋ ಅದೆಲ್ಲವನ್ನೂ ಅನುಗ್ರಹಿಸಿದನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯ
ಐದನೆಯ ಯುದ್ಧಖಂಡದಲ್ಲಿ ದೇವಸ್ತುತಿವರ್ಣನವೆಂಬ ಹನ್ನೊಂದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ದ್ವಾದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಏತಸ್ಮಿನ್ನಂತರೇ ಶಂಭುಂ ಪ್ರಸನ್ನಂ ವೀಕ್ಷ್ಯ ದಾನವಃ ।
ತತ್ರಾಜಗಾಮ ಸುಪ್ರೀತೋ ಮಯೋಽದಗ್ಧಃ ಕೃಪಾಬಲಾತ್ ॥ ೧ ॥

ಪ್ರಣನಾಮ ಹರಂ ಪ್ರೀತ್ಯಾ ಸುರಾನನ್ಯಾನಪಿ ಧ್ರುವಂ ।
ಕೃತಾಂಜಲಿರ್ನತಸ್ಕಂಧಃ ಪ್ರಣನಾಮ ಪುನಶ್ಶಿವಂ ॥ ೨ ॥

ಅಥೋತ್ಥಾಯ ಶಿವಂ ದೃಷ್ಟ್ವಾ ಪ್ರೇಮ್ಣಾ ಸದ್ಗದಸುಸ್ವರಃ ।
ತುಷ್ಟಾವ ಭಕ್ತಿಪೂರ್ಣಾತ್ಮಾ ಸ ದಾನವವರೋ ಮಯಃ ॥ ೩ ॥

---

### ಹನ್ನೆರಡನೆಯ ಅಧ್ಯಾಯವು.

೧-೨. ಸನತ್ಕುಮಾರನಿಂತೆಂದನು :—ಓ ವ್ಯಾಸ, ಇಷ್ಟರಲ್ಲಿ ಶಿವನ ಕೃಪೆಯಿಂದ ಬೆಂಕಿಗೆ ಸಿಲುಕದೆ ಪಾರಾದ ಮಯನೆಂಬ ದೈತ್ಯಶಿಲ್ಪಿಯು ಶಿವನು ಪ್ರಸನ್ನನಾದನೆಂದು ಅರಿತು ಸಂತೋಷವನ್ನು ತಾಳಿ ಅಲ್ಲಿಗೆ ಬಂದು ಶಿವನನ್ನು ನಮಸ್ಕಾರ ಮಾಡಿದನು. ಇತರ ದೇವತೆಗಳಿಗೂ ನಮಸ್ಕರಿಸಿದನು. ಪುನಃ ತಲೆವಾಗಿ, ಕೈಮುಗಿದುಕೊಂಡು ಶಿವನಿಗೆ ಪ್ರಣಾಮವನ್ನು ಮಾಡಿದನು.

೩. ಆಮೇಲೆ, ದಾನವಶ್ರೇಷ್ಠನಾದ ಆ ಮಯನು ಮೇಲೆದ್ದು, ಶಿವನನ್ನು ಕಂಡು, ಆ ಪರಮಾತ್ಮನಲ್ಲಿ ತನಗಿರುವ ಪ್ರೀತ್ಯತಿಶಯದಿಂದ ಗದ್ಗದವಾದ ಧ್ವನಿಯುಳ್ಳವನಾಗಿ, ಭಕ್ತಿಯಿಂದಕೂಡಿ ಸ್ತುತಿಸತೊಡಗಿದನು.

॥ ಮಯ ಉವಾಚ ॥

ದೇವದೇವ ಮಹಾದೇವ ಭಕ್ತವತ್ಸಲ ಶಂಕರ ।
ಕಲ್ಪವೃಕ್ಷಸ್ವರೂಪೋಽಸಿ ಸರ್ವಪಕ್ಷವಿವರ್ಜಿತಃ ॥ ೪ ॥

ಜ್ಯೋತೀರೂಪೋ ನಮಸ್ತೇಽಸ್ತು ವಿಶ್ವರೂಪ ನಮೋಽಸ್ತು ತೇ ।
ನಮಃ ಪೂತಾತ್ಮನೇ ತುಭ್ಯಂ ಪಾವನಾಯ ನಮೋ ನಮಃ ॥ ೫ ॥

ಚಿತ್ರರೂಪಾಯ ನಿತ್ಯಾಯ ರೂಪಾತೀತಾಯ ತೇ ನಮಃ ।
ದಿವ್ಯರೂಪಾಯ ದಿವ್ಯಾಯ ಸುದಿವ್ಯಾಕೃತಯೇ ನಮಃ ॥ ೬ ॥

ನಮಃ ಪ್ರಣತಸರ್ವಾರ್ತಿನಾಶಕಾಯ ಶಿವಾತ್ಮನೇ ।
ಕರ್ತ್ರೇ ಭರ್ತ್ರೇ ಚ ಸಂಹರ್ತ್ರೇ ತ್ರಿಲೋಕಾನಾಂ ನಮೋ ನಮ ॥ ೭ ॥

ಭಕ್ತಿಗಮ್ಯಾಯ ಭಕ್ತಾನಾಂ ನಮಸ್ತುಭ್ಯಂ ಕೃಪಾಲವೇ ।
ತಪಸ್ಸತ್ಫಲದಾತ್ರೇ ತೇ ಶಿವಾಕಾಂತ ಶಿವೇಶ್ವರ ॥ ೮ ॥

---

೪. ಎಲೈ ದೇವಾದಿದೇವನೇ, ಮಹಾದೇವನೇ, ನೀನು ಭಕ್ತರಲ್ಲಿ ವಾತ್ಸಲ್ಯವುಳ್ಳವನು. ನೀನು ಯಾವೊಂದು ಪಕ್ಷವನ್ನೂ ಅವಲಂಬಿಸದೆ ಎಲ್ಲರಿಗೂ ಕಲ್ಪವೃಕ್ಷನೆನಿಸಿರುವೆ.

೫. ಎಲೈ ಪ್ರಕಾಶಸ್ವರೂಪನೇ, ನಿನಗೆ ನಮಸ್ಕಾರವು. ಹೇ ವಿಶ್ವರೂಪ, ನಿನಗೆ ನಮಸ್ಕಾರವು. ಪರಿಶುದ್ಧಾತ್ಮನಾದ ನಿನಗೆ ನಮಸ್ಕಾರವು. ಪಾವನನಾದ ನಿನಗೆ ನಮಸ್ಕಾರವು.

೬. ಓ ದೇವ, ನೀನು ವಿಧವಿಧವಾದ ರೂಪಗಳನ್ನು ಕೈಗೊಳ್ಳುವವನು, ನಾಶರಹಿತನು. ನಿನ್ನ ಸಹಜಾವಸ್ಥೆಯಲ್ಲಿ ಎಂದರೆ ನಿರ್ಗುಣಾವಸ್ಥೆಯಲ್ಲಿ ನಿನಗೆ ರೂಪಾದಿಗಳಿಲ್ಲ. ಆದರೆ ಸಗುಣಸ್ವರೂಪವನ್ನು ಧರಿಸಿದಾಗ ದಿವ್ಯವಾದ ರೂಪವನ್ನು ತಾಳುವೆ. ಇಂತಹ ನಿನಗೆ ನಮಸ್ಕಾರವು.

೭. ನೀನು ಭಕ್ತರ ಸಕಲ ದುಃಖಗಳನ್ನೂ ಪರಿಹರಿಸುವ ಮಂಗಲಸ್ವರೂಪನು. ಈ ಪ್ರಪಂಚವನ್ನು ಸೃಷ್ಟಿಸುವವನೂ, ಕಾಪಾಡುವವನೂ, ನಾಶಮಾಡುವವನೂ, ಆದ ನಿನಗೆ ನಮಸ್ಕಾರಗಳು.

೮. ಹೇ ಪಾರ್ವತೀನಾಥ, ಓ ಈಶ್ವರ, ನೀನು ಭಕ್ತರ ಭಕ್ತಿಗೆ ಒಲಿಯುವವನು, ಕರುಣಾನಿಧಿಯು, ತಪಸ್ಸಿಗೆ ಒಳ್ಳೆಯ ಫಲವನ್ನು ನೀಡುವವನು. ಇಂತಹ ನಿನಗೆ ನಮಸ್ಕಾರವು.

ನ ಜಾನಾಮಿ ಸ್ತುತಿಂ ಕರ್ತುಂ ಸ್ತುತಿಪ್ರಿಯ ಪರೇಶ್ವರ ।
ಪ್ರಸನ್ನೋ ಭವ ಸರ್ವೇಶ ಪಾಹಿ ಮಾಂ ಶರಣಾಗತಂ ॥ ೯ ॥

॥ ಸನತ್ಕುಮಾರ ಉವಾಚ ॥
ಇತ್ಯಾಕರ್ಣ್ಯ ಮಯೋಽಕ್ತಾಂ ಹಿ ಸಂಸ್ತುತಿಂ ಪರಮೇಶ್ವರಃ ।
ಪ್ರಸನ್ನೋಽಭೂದ್ದ್ವಿಜಶ್ರೇಷ್ಠ ಮಯಂ ಪ್ರೋವಾಚ ಚಾದರಾತ್ ॥ ೧೦ ॥

॥ ಶಿವ ಉವಾಚ
ವರಂ ಬ್ರೂಹಿ ಪ್ರಸನ್ನೋಽಹಂ ಮಯ ದಾನವಸತ್ತಮ ।
ಮನೋಽಭಿಲಷಿತಂ ಯತ್ತೇ ತದ್ದಾಸ್ಯಾಮಿ ನ ಸಂಶಯಃ ॥ ೧೧ ॥

॥ ಸನತ್ಕುಮಾರ ಉವಾಚ ॥
ಶ್ರುತ್ವಾ ಶಿವಂ ವಚಶ್ಶಂಭೋಸ್ಸ ಮಯೋ ದಾನವರ್ಷಭಃ ।
ಪ್ರತ್ಯುವಾಚ ಪ್ರಭುಂ ನತ್ವಾ ನತಸ್ಕಂಧಃ ಕೃತಾಂಜಲಿಃ ॥ ೧೨ ॥

---

೯. ಓ ಮಹೇಶ, ನೀನು ಸ್ತೋತ್ರಪ್ರಿಯನು. ಆದರೆ ನನಗೆ ಸ್ತೋತ್ರ ಮಾಡಲು ಬರುವುದಿಲ್ಲ ಹೇ ಸರ್ವೇಶ, ನನ್ನಲ್ಲಿ ಪ್ರಸನ್ನನಾಗು. ಶರಣಾಗತನಾದ ನನ್ನನ್ನು ಕಾಪಾಡು ಎಂದನು.

೧೦-೧೧. ಸನತ್ಕುಮಾರನಿಂತೆಂದನು:—ಎಲೈ ದ್ವಿಜಶ್ರೇಷ್ಠನಾದ ವ್ಯಾಸ ಮಹರ್ಷಿಯೇ ಕೇಳು. ಈ ರೀತಿ ಮಯನು ಮಾಡಿದ ಸ್ತೋತ್ರವನ್ನು ಕೇಳಿ ಪರಮೇಶ್ವರನು ಪ್ರಸನ್ನನಾಗಿ, ಎಲೈ ದಾನವಶ್ರೇಷ್ಠನಾದ ಮಯನೇ, ನಾನು ನಿನಗೆ ಪ್ರಸನ್ನನಾಗಿರುವೆನು. ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳಿಕೋ, ನಿಸ್ಸಂಶಯ ವಾಗಿ ಅದನ್ನು ಕೊಡುವೆನು ಎಂದನು.

೧೨. ಎಲೈ ವ್ಯಾಸನೇ, ಹೀಗೆಂದು ಶಿವನು ನುಡಿದ ಮಂಗಲಮಯವಾದ ಮಾತನ್ನು ಕೇಳಿ ದಾನವಶ್ರೇಷ್ಠನಾದ ಮಯನು ಆ ಪ್ರಭುವನ್ನು ನಮಸ್ಕರಿಸಿ ತಲೆ ಬಾಗಿ ಕೈಗಳನ್ನು ಮುಗಿದುಕೊಂಡು ಈ ರೀತಿ ಬೇಡಿಕೊಂಡನು.

॥ ಮಯ ಉವಾಚ ॥
ದೇವದೇವ ಮಹಾದೇವ ಪ್ರಸನ್ನೋ ಯದಿ ಮೇ ಭವಾನ್ ।
ವರಯೋಗ್ಯೋಽಸ್ಮ್ಯಹಂ ಚೇದ್ಧಿ ಸ್ವಭಕ್ತಿಂ ದೇಹಿ ಶಾಶ್ವತೀಂ ॥ ೧೩ ॥

ಸ್ವಭಕ್ತೇಷು ಸದಾ ಸಖ್ಯಂ ದೀನೇಷು ಚ ದಯಾಂ ಸದಾ ।
ಉಪೇಕ್ಷಾಮನ್ಯಜೀವೇಷು ಖಲೇಷು ಪರಮೇಶ್ವರ ॥ ೧೪ ॥

ಕದಾಪಿ ನಾಸುರೋ ಭಾವೋ ಭವೇನ್ಮಮ ಮಹೇಶ್ವರ ।
ನಿರ್ಭಯಃ ಸ್ಯಾಂ ಸದಾ ನಾಥ ಭಗ್ನಸ್ತ್ವದ್ಭಜನೇ ಶುಭೇ ॥ ೧೫ ॥

॥ ಸನತ್ಕುಮಾರ ಉವಾಚ ॥
ಇತಿ ಸಂಪ್ರಾರ್ಥ್ಯಮಾನಸ್ತು ಶಂಕರಃ ಪರಮೇಶ್ವರಃ ।
ಪ್ರತ್ಯುವಾಚ ಮಯಂ ನಾಥಃ ಪ್ರಸನ್ನೋ ಭಕ್ತವತ್ಸಲಃ ॥ ೧೬ ॥

॥ ಮಹೇಶ್ವರ ಉವಾಚ ॥
ದಾನವರ್ಷಭ ಧನ್ಯಸ್ತ್ವಂ ಮದ್ಭಕ್ತೋ ನಿರ್ವಿಕಾರವಾನ್ ।
ಪ್ರದತ್ತಾಸ್ತೇ ವರಾಸ್ಸರ್ವೇಽಭೀಪ್ಸಿತಾ ಯೇ ತವಾಽಧುನಾ ॥ ೧೭ ॥

---

೧೩. ಎಲೈ ದೇವದೇವನೇ, ಮಹಾದೇವನೇ, ನೀನು ನನ್ನಲ್ಲಿ ಪ್ರಸನ್ನನಾಗಿದ್ದರೆ, ನಾನು ವರಕ್ಕೆ ಅರ್ಹನಾಗಿದ್ದರೆ ನಿನ್ನಲ್ಲಿ ಶಾಶ್ವತವಾದ ಭಕ್ತಿಯನ್ನು ನನಗೆ ಕರುಣಿಸು.

೧೪. ಹೇ ಪರಮೇಶ್ವರ, ನಿನ್ನ ಭಕ್ತರಲ್ಲಿ ಸರ್ವದಾ ಸ್ನೇಹವು ನೆಲಸುವಂತೆಯೂ, ಆರ್ತರ ವಿಷಯದಲ್ಲಿ ಕರುಣೆಯುಂಟಾಗುವಂತೆಯೂ, ಇತರರಲ್ಲಿಯೂ, ದುಷ್ಟರಲ್ಲಿಯೂ, ತಿರಸ್ಕಾರವುಂಟಾಗುವಂತೆಯೂ ನನಗೆ ಅನುಗ್ರಹಿಸು.

೧೫. ಹೇ ಮಹೇಶ್ವರ, ನನಗೆ ಯಾವಾಗಲೂ ರಾಕ್ಷಸಭಾವವುಂಟಾಗದಿರಲಿ. ನನಗೆ ಭಂಗವುಂಟಾದರೂ, ಶುಭಕರವಾದ ನಿನ್ನ ಸೇವೆಯಲ್ಲಿ ನಿರ್ಭಯನಾಗಿರುವಂತೆ ನನ್ನನ್ನು ಅನುಗ್ರಹಿಸು ಎಂದನು.

೧೬-೧೭. ಸನತ್ಕುಮಾರನು ಹೇಳಿದನು :—ಓ ವ್ಯಾಸ, ಈರೀತಿ ಮಯನು ಪ್ರಾರ್ಥಿಸಲು ಶಂಕರನು ಪ್ರಸನ್ನನಾಗಿ ಎಲೈ ದಾನವಶ್ರೇಷ್ಠನೇ, ನೀನೇ ಧನ್ಯನು. ನಿರ್ವಿಕಾರನಾದ ನನ್ನ ಭಕ್ತನಾಗಿರುವೆ. ನೀನು ಬಯಸಿರುವ ವರಗಳೆಲ್ಲವನ್ನೂ ನಿನಗೀಗ ಕೊಟ್ಟಿರುವೆನು.

ಗಚ್ಛ ತ್ವಂ ವಿತಲಂ ಲೋಕಂ ರಮಣೀಯಂ ದಿವೋಽಪಿ ಹಿ ।
ಸಮೇತಃ ಪರಿವಾರೇಣ ನಿಜೇನ ಮಮ ಶಾಸನಾತ್ ॥ ೧೮ ॥

ನಿರ್ಭಯಸ್ತತ್ರ ಸಂತಿಷ್ಠ ಸಂಹೃಷ್ಟೋ ಭಕ್ತಿಮಾನ್ಸದಾ ।
ಕದಾಪಿ ನಾಸುರೋ ಭಾವೋ ಭವಿಷ್ಯತಿ ಮದಾಜ್ಞಯಾ ॥ ೧೯ ॥

॥ ಸನತ್ಕುಮಾರ ಉವಾಚ ॥

ಇತ್ಯಾಜ್ಞಾಂ ಶಿರಸಾಧಾಯ ಶಂಕರಸ್ಯ ಮಹಾತ್ಮನಃ ।
ತಂ ಪ್ರಣಮ್ಯ ಸುರಾಂಶ್ಚಾಪಿ ವಿತಲಂ ಪ್ರಜಗಾಮ ಸಃ ॥ ೨೦ ॥

ಏತಸ್ಮಿನ್ನಂತರೇ ತೇ ವೈ ಮುಂಡಿನಶ್ಚ ಸಮಾಗತಾಃ ।
ಪ್ರಣಮ್ಯೋಚುಶ್ಚ ತಾನ್ಸರ್ವಾನ್ವಿಷ್ಣುಬ್ರಹ್ಮಾದಿಕಾನ್ಸುರಾನ್ ॥ ೨೧ ॥

ಕುತ್ರ ಯಾಮ ವಯಂ ದೇವಾಃ ಕರ್ಮ ಕಿಂ ಕರವಾಮಹೈ ।
ಆಜ್ಞಾಪಯತ ನಶ್ಶೀಘ್ರಂ ಭವದಾದೇಶಕಾರಕಾನ್ ॥ ೨೨ ॥

---

೧೮. ನೀನು ನನ್ನ ಅಪ್ಪಣೆಯಂತೆ ನಿನ್ನ ಪರಿವಾರದೊಡನೆ, ಸ್ವರ್ಗಕ್ಕಿಂತಲೂ ಸುಂದರವಾದ ವಿತಲಕ್ಕೆ ಹೋಗು.

೧೯. ನೀನು ಆ ವಿತಲಲೋಕದಲ್ಲಿ ನಿರ್ಭಯದಿಂದ, ನನ್ನಲ್ಲಿ ಸರ್ವದಾ ಭಕ್ತಿಯುಳ್ಳವನಾಗಿ ಸಂತೋಷದಿಂದಿರು. ನನ್ನ ಅಪ್ಪಣೆಯಂತೆ ನಿನಗೆ ಯಾವಾಗಲೂ ರಾಕ್ಷಸ ಭಾವವು ಉಂಟಾಗುವುದಿಲ್ಲ ಎಂದು ವರವಿತ್ತನು.

೨೦. ಸನತ್ಕುಮಾರನು ಹೇಳಿದನು:—ಓ ವ್ಯಾಸ, ಈರೀತಿಯಾಗಿ ಮಹಾತ್ಮನಾದ ಶಿವನ ಅಪ್ಪಣೆಯನ್ನು ಶಿರಸಾವಹಿಸಿ, ಆತನನ್ನು ನಮಸ್ಕರಿಸಿ, ದೇವತೆಗಳನ್ನೂ ನಮಸ್ಕರಿಸಿ ಮಯನು ವಿತಲಲೋಕಕ್ಕೆ ಹೊರಟುಹೋದನು.

೨೧-೨೨. ಇಷ್ಟರಲ್ಲಿಯೇ ಆ ತ್ರಿಪುರರನ್ನು ಮೋಹಜಾಲದಲ್ಲಿ ಕೆಡವಿದ ಆ ಮುಂಡಿಗಳೂ, (ಯತಿಗಳೂ) ಅಲ್ಲಿಗೆ ಬಂದು, ವಿಷ್ಣುಬ್ರಹ್ಮ ಮೊದಲಾದ ದೇವತೆಗಳೆಲ್ಲರನ್ನೂ ನಮಸ್ಕರಿಸಿ, ಎಲೈ ದೇವತೆಗಳೇ, ಈಗ ನಾವೆಲ್ಲಿಗೆ ಹೋಗಬೇಕು? ಯಾವ ಕೆಲಸವನ್ನು ಮಾಡಬೇಕು? ನಿಮ್ಮಪ್ಪಣೆಯಂತೆಯೇ ನಡೆಮಕೊಳ್ಳುವ ನಮಗೆ ಮುಂದೇನಪ್ಪಣೆ? ಬೇಗನೆ ತಿಳಿಸಿ.

ಕೃತಂ ದುಷ್ಕರ್ಮ ಚಾಸ್ಮಾಭಿರ್ಹೇ ಹರೇ ಹೇ ವಿಧೇ ಸುರಾಃ ।
ದೈತ್ಯಾನಾಂ ಶಿವಭಕ್ತಾನಾಂ ಶಿವಭಕ್ತಿರ್ವಿನಾಶಿತಾ ॥ ೨೩ ॥

ಕೋಟಿಕಲ್ಪಾನಿ ನರಕೇ ನೋ ವಾಸಸ್ತು ಭವಿಷ್ಯತಿ ।
ನೋದ್ಧಾರೋ ಭವಿತಾ ನೂನಂ ಶಿವಭಕ್ತವಿರೋಧಿನಾಂ ॥ ೨೪ ॥

ಪರಂತು ಭವದಿಚ್ಛಾತ ಇದಂ ದುಷ್ಕರ್ಮ ನಃ ಕೃತಂ ।
ತಚ್ಛಾಂತಿಂ ಕೃಪಯಾ ಬ್ರೂತ ವಯಂ ವಶ್ಯರಣಾಗತಾಃ ॥ ೨೫ ॥

॥ ಸನತ್ಕುಮಾರ ಉವಾಚ ॥
ತೇಷಾಂ ತದ್ವಚನಂ ಶ್ರುತ್ವಾ ವಿಷ್ಣುಬ್ರಹ್ಮಾದಯಸ್ಸುರಾಃ ।
ಅಬ್ರುವನ್ಮುಂಡಿನಸ್ತಾಂಸ್ತೇ ಸ್ಥಿತಾನಗ್ರೇ ಕೃತಾಂಜಲೀನ್ ॥ ೨೬ ॥

॥ ವಿಷ್ಣ್ವಾದಯ ಊಚುಃ ॥
ನ ಭೇತವ್ಯಂ ಭವದ್ಭಿಸ್ತು ಮುಂಡಿನೋ ನೈ ಕದಾಚನ ।
ಶಿವಾಜ್ಞಯೇದಂ ಸಕಲಂ ಜಾತಂ ಚರಿತಮುತ್ತಮಂ ॥ ೨೭ ॥

---

೨೩. ಎಲೈ ಶ್ರೀಹರಿಯೇ, ಬ್ರಹ್ಮನೇ, ದೇವತೆಗಳಿರಾ, ನಾವು ಬಹು ಕೆಟ್ಟ ಕೆಲಸವನ್ನು ಮಾಡಿದೆವು. ಶಿವಭಕ್ತರಾದ ಆ ದೈತ್ಯರ ಶಿವಭಕ್ತಿಯನ್ನು ನಾಶ ಮಾಡಿಬಿಟ್ಟೆವು.

೨೪. ಕೋಟಿ ಕಲ್ಪಗಳು ಕಳೆಯುವವರೆಗೆ ನಾವು ನರಕದಲ್ಲಿ ವಾಸಮಾಡ ಬೇಕಾಗುವುದು. ಶಿವಭಕ್ತರಲ್ಲಿ ಅಪಚಾರವನ್ನೆಸಗಿದ ನಮಗೆ ಖಂಡಿತವಾಗಿಯೂ ಉದ್ಧಾರವಿಲ್ಲ.

೨೫. ಆದರೆ ಆ ಕೆಟ್ಟ ಕೆಲಸವನ್ನು ನಿಮ್ಮ ಇಷ್ಟದಂತೆ ನಾವು ಮಾಡಿದೆವು. ಆದುದರಿಂದ ಕೃಪೆಯಿಟ್ಟು, ಆ ಪಾಪ ಪರಿಹಾರೋಪಾಯವನ್ನು ಹೇಳಿರಿ. ನಿಮ್ಮನ್ನು ನಾವು ಮರೆಹೊಕ್ಕಿರುವೆವು ಎಂದರು.

೨೬-೨೭. ಓ ವ್ಯಾಸ, ಈರೀತಿ ಅವರಾಡಿದ ಮಾತನ್ನು ಕೇಳಿ, ವಿಷ್ಣುವೇ ಮೊದಲಾದ ಆ ದೇವತೆಗಳು ತಮ್ಮ ಮುಂದೆ ಕೈಮುಗಿದುಕೊಂಡು ನಿಂತಿರುವ ಆ ಸನ್ಯಾಸಿಗಳನ್ನು ಕುರಿತು, ಎಲೈ ಸನ್ಯಾಸಿಗಳಿರಾ, ನೀವೆಂದೆಂದಿಗೂ ಹೆದರಬೇಕಾದ್ದಿಲ್ಲ. ಈ ಉತ್ತಮವಾದ ಚರಿತ್ರೆಯೆಲ್ಲವೂ ಶಿವನ ಅಪ್ಪಣೆಯಂತೆಯೇ ನಡೆಯಿತು.

ಯುಷ್ಮಾಕಂ ಭವಿತಾ ನೈವ ಕುಗತಿರ್ದುಃಖದಾಯಿನೀ ।
ಶಿವದಾಸಾ ಯತೋ ಯೂಯಂ ದೇವರ್ಷಿಹಿತಕಾರಕಾಃ ॥ ೨೮ ॥

ಸುರರ್ಷಿಹಿತಕೃಚ್ಛಂಭುಸ್ಸುರರ್ಷಿಹಿತಕೃತ್ಪ್ರಿಯಃ ।
ಸುರರ್ಷಿಹಿತಕೃನ್ನೄಣಾಂ ಕದಾಪಿ ಕುಗತಿರ್ನ ಹಿ ॥ ೨೯ ॥

ಅದ್ಯತೋ ಮತಮೇತಂ ಹಿ ಪ್ರವಿಷ್ಟಾನಾಂ ನೃಣಾಂ ಕಲೌ ।
ಕುಗತಿರ್ಭವಿತಾ ಬ್ರೂಮಃ ಸತ್ಯಂ ನೈವಾತ್ರ ಸಂಶಯಃ ॥ ೩೦ ॥

ಭವದ್ಭಿರ್ಮುಂಡಿನೋ ಧೀರಾ ಗುಪ್ತಭಾವಾನ್ಮಮಾಜ್ಞಯಾ ।
ತಾವನ್ಮರುಸ್ಥಲೀ ಸೇವ್ಯಾ ಕುಲಿರ್ಯಾವತ್ಸಮಾವ್ರಜೇತ್ ॥ ೩೧ ॥

ಆಗತೇ ಚ ಕಲೌ ಯೂಯಂ ಸ್ವಮತಂ ಸ್ಥಾಪಯಿಷ್ಯಥ ।
ಕಲೌ ತು ಮೋಹಿತಾ ಮೂಢಾಸ್ಸಂಗ್ರಹೀಷ್ಯಂತಿ ವೋ ಮತಂ ॥ ೩೨ ॥

---

೨೮. ನಿಮಗೆಂದೆಂದಿಗೂ ದುಃಖದಾಯಕವಾದ ದುರ್ಗತಿಯುಂಟಾಗುವುದಿಲ್ಲ. ಏಕೆಂದರೆ, ನೀವು ದೇವತೆಗಳಿಗೂ ಋಷಿಗಳಿಗೂ ಹಿತವನ್ನೇ ಮಾಡುತ್ತಾ ಶಿವನ ಕಿಂಕರರಾಗಿದ್ದೀರಿ

೨೯. ಆ ಶಿವನು ದೇವತೆಗಳಿಗೂ, ಋಷಿಗಳಿಗೂ, ಹಿತವನ್ನು ಬಯಸುವವನು, ದೇವರ್ಷಿಗಳಿಗೆ ಹಿತವನ್ನು ಮಾಡುವವರಲ್ಲಿ ಪ್ರೀತಿಯುಳ್ಳವನು. ಆದುದರಿಂದ ದೇವರ್ಷಿಗಳಿಗೆ, ಹಿತಕಾರಿಗಳಾದ ಮನುಷ್ಯರಿಗೆ ಎಂದಿಗೂ ದುರ್ಗತಿಯುಂಟಾಗುವುದಿಲ್ಲ.

೩೦. ಇಂದಿನಿಂದ ಈ ಮತವನ್ನು ಆಶ್ರಯಿಸಿದ ಕಲಿಯುಗದ ಮನುಜರಿಗೆ ದುರ್ಗತಿಯು ಉಂಟಾಗುವುದು. ಈ ಮಾತು ಖಂಡಿತವಾದುದು. ಸ್ವಲ್ಪವೂ ಸಂಶಯವಿಲ್ಲ.

೩೧. ಎಲೈ ಧೀರರಾದ ಯತಿಗಳೇ, ನನ್ನ ಅಪ್ಪಣೆಯಂತೆ ಕಲಿಯುಗವು ಬರುವವರೆಗೂ ನೀವು ಗುಟ್ಟಾಗಿ ಮರುಭೂಮಿಯಲ್ಲಿ ನೆಲಸಿರಬೇಕು.

೩೨. ಕಲಿಯುಗವು ಬಂದಮೇಲೆ ನೀವು ನಿಮ್ಮ ಮತವನ್ನು ಸ್ಥಾಪಿಸಿರಿ. ಕಲಿಯುಗದಲ್ಲಿ ವಿವೇಕವಿಲ್ಲದ ಮೂಢರು, ಮಾಯೆಗೆ ಸುಲಭವಾಗಿ ವಶರಾಗಿ ನಿಮ್ಮ ಮತವನ್ನು ಸ್ವೀಕರಿಸುವರು ಎಂದು ಹೇಳಲು,

ಇತ್ಯಾಜ್ಞಪ್ತಾಃ ಸುರೇಶೈಶ್ಚ ಮುಂಡಿನಸ್ತೇ ಮುನೀಶ್ವರ ।
ನಮಸ್ಕೃತ್ಯ ಗತಾಸ್ತತ್ರ ಯಥೋದ್ದಿಷ್ಟಂ ಸ್ವಮಾಶ್ರಮಂ ॥ ೩೩ ॥

ತತಸ್ಸ ಭಗವಾನ್ರುದ್ರೋ ದಗ್ಧ್ವಾ ತ್ರಿಪುರವಾಸಿನಃ ।
ಕೃತಕೃತ್ಯೋ ಮಹಾಯೋಗೀ ಬ್ರಹ್ಮಾದ್ಯೈರಭಿಪೂಜಿತಃ ॥ ೩೪ ॥

ಸ್ವಗಣೈರ್ನಿಖಿಲೈರ್ದೇವ್ಯಾ ಶಿವಯಾ ಸಹಿತಃ ಪ್ರಭುಃ ।
ಕೃತ್ವಾಮರಮಹತ್ಕಾರ್ಯಂ ಸಸುತೋಽಂತರಧಾದಥ ॥ ೩೫ ॥

ತತಶ್ಚಾಂತರ್ಹಿತೇ ದೇವೇ ಪರಿವಾರಾನ್ವಿತೇ ಶಿವೇ ।
ಧನುಶ್ಶರರಥಾದ್ಯಶ್ಚ ಪ್ರಾಕಾರೋಽಂತರ್ಧಿಮಾಗಮತ್ ॥ ೩೬ ॥

ತತೋ ಬ್ರಹ್ಮಾ ಹರಿರ್ದೇವಾ ಮುನಿಗಂಧರ್ವಕಿನ್ನರಾಃ ।
ನಾಗಾಸ್ಸರ್ಪಾಶ್ಚಾಪ್ಸರಸಸ್ಸಂಹೃಷ್ಟಾಶ್ಚಾಥ ಮಾನುಷಾಃ ॥ ೩೭ ॥

ಸ್ವಂ ಸ್ವಂ ಸ್ಥಾನಂ ಮುದಾ ಜಗ್ಮುಶ್ಶಂಸಂತಃ ಶಾಂಕರಂ ಯಶಃ ।
ಸ್ವಂ ಸ್ವಂ ಸ್ಥಾನಮನುಪ್ರಾಪ್ಯ ನಿರ್ವೃತಿಂ ಪರಮಾಂ ಯಯುಃ ॥ ೩೮ ॥

---

೩೩. ಈರೀತಿಯಾಗಿ ದೇವತೆಗಳಿಂದ ಅಪ್ಪಣೆಯನ್ನು ಪಡೆದು ಆ ಸನ್ಯಾಸಿಗಳು ಅವರಿಗೆ ನಮಸ್ಕಾರಮಾಡಿ ಮರುಭೂಮಿಯಲ್ಲಿರುವ ತಮ್ಮ ಆಶ್ರಮಕ್ಕೆ ತೆರಳಿದರು.

೩೪-೩೫. ,ಬಳಿಕ ಬ್ರಹ್ಮಾದಿ ದೇವತೆಗಳಿಂದ ಅಭಿವಂದಿತನಾದ ಭಗವಂತನಾದ ಶಿವನು, ತ್ರಿಪುರನಿವಾಸಿಗಳೆಲ್ಲರನ್ನೂ ಸುಟ್ಟು ಬೂದಿಮಾಡಿ ದೇವಕಾರ್ಯವನ್ನು ನೆರವೇರಿಸಿ, ತನ್ನ ಎಲ್ಲ ಗಣಗಳೊಡನೆಯೂ ಪಾರ್ವತೀದೇವಿಯೊಡನೆಯೂ ತನ್ನ ಕುಮಾರರೊಡನೆಯೂ ಅಂತರ್ಧಾನವನ್ನು ಪಡೆದನು.

೩೬. ಪರಿವಾರಸಮೇತನಾಗಿ ಶಿವನು ಅಂತರ್ಧಾನವನ್ನು ಹೊಂದುತ್ತಲೇ ಬಿಲ್ಲು, ಬಾಣ, ರಥವೇ ಮೊದಲಾದ ಸಲಕರಣೆಗಳೂ ಅಂತರ್ಧಾನವನ್ನು ಹೊಂದಿದುವು.

೩೭-೩೮. ಆಮೇಲೆ ಶ್ರೀಹರಿಯೂ ಬ್ರಹ್ಮನೂ ದೇವತೆಗಳೂ ಮುನಿಗಳೂ, ಗಂಧರ್ವರೂ ಕಿನ್ನರರೂ ನಾಗರೂ ಸರ್ಪರೂ ಅಪ್ಸರಸ್ಸುಗಳೂ ಮನುಷ್ಯರೂ ಸರ್ವರೂ ಸಂತೋಷಗೊಂಡು ಶಿವನ ಯಶಸ್ಸನ್ನು ಕೊಂಡಾಡುತ್ತಾ ತಮ್ಮತಮ್ಮ ಜಾಗಕ್ಕೆ ತೆರಳಿದರು. ತಂತಮ್ಮ ಜಾಗವನ್ನು ಸೇರಿದಮೇಲೆ ಅಲ್ಲಿ ಬಹಳವಾಗಿ ಆನಂದವನ್ನು ಪಡೆದರು.

ಏತತ್ತೇ ಕಥಿತಂ ಸರ್ವಂ ಚರಿತಂ ಶಶಿಮೌಲಿನಃ ।
ತ್ರಿಪುರಕ್ಷಯಸಂಸೂಚಿ ಪರಲೀಲಾನ್ವಿತಂ ಮಹತ್ ॥ ೩೯ ॥

ಧನ್ಯಂ ಯಶಸ್ಯಮಾಯುಷ್ಯಂ ಧನಧಾನ್ಯಪ್ರವರ್ಧಕಂ ।
ಸ್ವರ್ಗದಂ ಮೋಕ್ಷದಂ ಚಾಪಿ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೪೦ ॥

ಇದಂ ಹಿ ಪರಮಾಖ್ಯಾನಂ ಯಃ ಪಠೇಚ್ಛೃಣುಯಾತ್ಸದಾ ।
ಇಹ ಭುಕ್ತ್ವಾಖಿಲಾನ್ಕಾಮಾನಂತೇ ಮುಕ್ತಿಮವಾಪ್ನುಯಾತ್ ॥ ೪೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಸನತ್ಕುಮಾರಪಾರಾಶರ್ಯಸಂವಾದೇ
ತ್ರಿಪುರವಧಾನಂತರದೇವಸ್ತುತಿಮಯಸ್ತುಮುಂಬಿನಿವೇಶನ
ದೇವಸ್ವಸ್ಥಾನಗಮನವರ್ಣನಂ ನಾಮ
ದ್ವಾದಶೋಽಧ್ಯಾಯಃ

---

೩೯. ಓ ವ್ಯಾಸಮುನಿ, ಈಗ ಶ್ರೇಷ್ಠವಾದ ಲೀಲೆಗಳಿಂದ ಕೂಡಿರುವ ತ್ರಿಪುರ ಸಂಹಾರವನ್ನು ಬಣ್ಣಿಸುವ ಶಿವನ ಚರಿತ್ರವೆಲ್ಲವನ್ನೂ ನಿನಗೆ ತಿಳಿಸಿಯಾಯಿತು.

೪೦. ಈ ಚರಿತ್ರವು ಧನ್ಯವಾದುದು. ಯಶಸ್ಕರವಾದುದು. ಆಯುಸ್ಸನ್ನು ಹೆಚ್ಚಿಸುವಂಥದು. ಧನಧಾನ್ಯಸಮೃದ್ಧಿಯನ್ನು ಕೊಡುವಂಥದು. ಸ್ವರ್ಗವನ್ನೂ ಮೋಕ್ಷವನ್ನೂ ನೀಡುವಂಥದು. ಇನ್ನು ಮತ್ತಾವುದನ್ನು ಕೇಳಬೇಕೆನ್ನುವೆ? ಕೇಳು ಎಂದನು.

೪೧. ಈ ಶ್ರೇಷ್ಠವಾದ ಕಥೆಯನ್ನು ಯಾರು ಸದಾ ಓದುವರೋ ಅಥವಾ ಕೇಳುವರೋ ಅಂಥವರು ಈ ಲೋಕದಲ್ಲಿ ಸಮಸ್ತ ಇಷ್ಟಾರ್ಥಗಳನ್ನೂ ಅನುಭವಿಸಿ ಕೊನೆಗೆ ಮೋಕ್ಷವನ್ನು ಹೊಂದುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯೊಳಗಣ ಸನತ್ಕುಮಾರ
ವ್ಯಾಸಸಂವಾದದಲ್ಲಿ ತ್ರಿಪುರವಧಾನಂತರ ದೇವಸ್ತುತಿ, ಮುಂಡಿನಿವೇಶನ
ದೇವಸ್ವಸ್ಥಾನಗಮನವರ್ಣನವೆಂಬ ಹನ್ನೆರಡನೆಯ ಅಧ್ಯಾಯವು
ಮುಗಿದುದು.

---

॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ತ್ರಯೋದಶೋಽಧ್ಯಾಯಃ

॥ ವ್ಯಾಸ ಉವಾಚ ॥

ಭೋ ಬ್ರಹನ್ಭಗವನ್ಪೂರ್ವಂ ಶ್ರುತಂ ಮೇ ಬ್ರಹ್ಮಪುತ್ರಕ ।
ಜಲಂಧರಂ ಮಹಾದೈತ್ಯಮವಧೀಚ್ಛಂಕರಃ ಪ್ರಭುಃ ॥ ೧ ॥

ತತ್ತ್ವಂ ವದ ಮಹಾಪ್ರಾಜ್ಞ ಚರಿತಂ ಶಶಿಮೌಲಿನಃ ।
ವಿಸ್ತಾರಪೂರ್ವಕಂ ಶೃಣ್ವನ್ಕಸ್ತೃಪ್ಯೇತ್ತದ್ಯಶೋಽಮಲಂ ॥ ೨ ॥

---

### ಹದಿಮೂರನೆಯ ಅಧ್ಯಾಯ.

೧-೨. ವ್ಯಾಸಮಹರ್ಷಿಯು ಬ್ರಹ್ಮಮಾನಸಪುತ್ರನಾದ ಸನತ್ಕುಮಾರನನ್ನು ಕುರಿತು, ಓ ಬ್ರಾಹ್ಮಣೋತ್ತಮ, ಪ್ರಭುವಾದ ಶಂಕರನು ಜಲಂಧರನೆಂಬ ಮಹಾ ದೈತ್ಯನನ್ನು ಸಂಹರಿಸಿದನೆಂದು ನಾನು ಕೇಳಿದ್ದೇನೆ. ಆದುದರಿಂದ ನೀನು ಆ ಶಶಿಮೌಲಿಯ ಚರಿತ್ರವನ್ನು ವಿಸ್ತಾರವಾಗಿ ನನಗೆ ತಿಳಿಯಪಡಿಸು. ಓ ಮಹಾ ಪ್ರಾಜ್ಞ, ಆ ಶಿವನ ಪಾವನವಾದ ಯಶಸ್ಸನ್ನು ಕೇಳುತ್ತಿದ್ದರೆ ಯಾವನಿಗೆ ತಾನೇ ತೃಪ್ತಿಯುಂಟಾಗುವುದು ಎಂದು ಕೇಳಿದನು.

॥ ಸೂತ ಉವಾಚ ॥
ಇತ್ಯೇವಂ ವ್ಯಾಸಸಂಪೃಷ್ಟೋ ಬ್ರಹ್ಮಪುತ್ರೋ ಮಹಾಮುನಿಃ ।
ಉವಾಚಾರ್ಥವದವ್ಯಗ್ರಂ ವಾಕ್ಯಂ ವಾಕ್ಯವಿಶಾರದಃ ॥ ೩ ॥

॥ ಸನತ್ಕುಮಾರ ಉವಾಚ ॥
ಏಕದಾ ಜೀವಶಕ್ರೌ ಚ ಭಕ್ತ್ಯಾ ಪರಮಯಾ ಮುನೇ ।
ದರ್ಶನಂ ಕರ್ತುಮೀಶಸ್ಯ ಕೈಲಾಸಂ ಜಗ್ಮತುರ್ಭೃಶಂ ॥ ೪ ॥

ಅಥ ಗುರ್ವಿಂದ್ರಯೋರ್ಜ್ಞಾತ್ವಾಗಮನಂ ಶಂಕರಃ ಪ್ರಭುಃ ।
ಪರೀಕ್ಷಿತುಂ ತಯೋರ್ಜ್ಞಾನಂ ಸ್ವದರ್ಶನರತಾತ್ಮನೋಃ ॥ ೫ ॥

ದಿಗಂಬರೋಽಭೂತ್ತನ್ಮಾರ್ಗಮಾರುಧ್ಯ ಸದ್ಗತಿಸ್ಸತಾಂ ।
ಜಟಾಬದ್ಧೇನ ಶಿರಸಾತಿಸ್ಮತ್ಸಂಶೋಭಿತಾನನಃ ॥ ೬ ॥

ಅಥ ತೌ ಗುರುಶಕ್ರೌ ಚ ಕುರ್ವಂತೌ ಗಮನಂ ಮುದಾ ।
ಆಲೋಕ್ಯ ಪುರುಷಂ ಭೀಮಂ ಮಾರ್ಗಮಧ್ಯೇಽದ್ಭುತಾಕೃತಿಂ ॥ ೭ ॥

---

೩. ಸೂತನಿಂತೆಂದನು :—ಎಲೈ ಶೌನಕಾದಿ ಮುನಿಗಳಿರಾ, ಈ ರೀತಿ ವ್ಯಾಸನು ಪ್ರಶ್ನಿಸಲಾಗಿ ಬ್ರಹ್ಮಪುತ್ರನೂ, ಕುಶಲನಾದ ವಾಗ್ಮಿಯೂ ಮುನಿಶ್ರೇಷ್ಠನೂ ಆದ ಆ ಸನತ್ಕುಮಾರನು, ಅರ್ಥವತ್ತಾದ ಸ್ಫುಟವಾದ ಮಾತುಗಳಿಂದ ಹೇಳ ತೊಡಗಿದನು.

೪. ಓ ವ್ಯಾಸಮುನೀಂದ್ರನೇ ಕೇಳು. ಒಮ್ಮೆ, ಇಂದ್ರ ಬೃಹಸ್ಪತಿಗಳಿಬ್ಬರೂ, ಅತಿಶಯವಾದ ಭಕ್ತಿಯಿಂದ ಶಿವನ ದರ್ಶನವನ್ನು ಪಡೆದು ಬರೋಣವೆಂದು ಕೈಲಾಸಕ್ಕೆ ಸಡಗರದಿಂದ ಹೊರಟರು.

೫-೬. ಬೃಹಸ್ಪತಿಯೂ, ಇಂದ್ರನೂ ತನ್ನ ಬಳಿಗೆ ಬರುತ್ತಿರುವುದನ್ನು ಅರಿತು, ಶಿವನು ತನ್ನನ್ನು ಸಂದರ್ಶಿಸಲು ಬಯಸುವ ಅವರೀರ್ವರ ಜ್ಞಾನವನ್ನು ಪರೀಕ್ಷಿಸಬೇಕೆಂದು ನಿಶ್ಚಯಿಸಿ, ಅವರು ಬರುತ್ತಿರುವ ದಾರಿಯ ನಡುವೆ, ತಲೆಯ ತುಂಬ ಜಟೆಗಳನ್ನು ಬಿಟ್ಟು, ಮೈಮೇಲೆ ಬಟ್ಟೆಯಿಲ್ಲದೆ, ನಗ್ನನಾಗಿ, ಸುಂದರವಾದ ಮುಖದಿಂದ ಅಡ್ಡಲಾಗಿ ಬಂದುನಿಂತನು.

೭-೮. ಬಳಿಕ ಸಂತೋಷದಿಂದ ಪ್ರಯಾಣಮಾಡಿ ಬರುತ್ತಿದ್ದ ಗುರು, ಇಂದ್ರರಿಬ್ಬರೂ, ದಾರಿಯ ನಡುವೆ ತಮ್ಮೆದುರಿಗೆ ಅಡ್ಡಲಾಗಿ ನಿಂತಿರುವ ಪುರುಷನೊಬ್ಬ

ಮಹಾತೇಜಸ್ವಿನಂ ಶಾಂತಂ ಜಟಾಸಂಬದ್ಧಮಸ್ತಕಂ ।
ಮಹಾಬಾಹುಂ ಮಹೋರಸ್ಕಂ ಗೌರಂ ನಯನಭೀಷಣಂ ॥ ೮ ॥

ಅಥೋ ಪುರಂದರೋಽಪೃಚ್ಛತ್ಸ್ವಾಧಿಕಾರೇಣ ದುರ್ಮದಃ ।
ಪುರುಷಂ ತಂ ಸ್ವಮಾರ್ಗಾಂತಸ್ಥಿತಮಜ್ಞಾಯ ಶಂಕರಂ ॥ ೯ ॥

॥ ಪುರಂದರ ಉವಾಚ ॥
ಕಸ್ತ್ವಂ ಭೋಃ ಕುತ ಆಯಾತಃ ಕಿಂ ನಾಮ ವದ ತತ್ತ್ವತಃ ।
ಸ್ವಸ್ಥಾನೇ ಸಂಸ್ಥಿತಶ್ಶಂಭುಃ ಕಿಂ ವಾನ್ಯತ್ರ ಗತಃ ಪ್ರಭುಃ ॥ ೧೦ ॥

॥ ಸನತ್ಕುಮಾರ ಉವಾಚ ॥
ಶಕ್ರೇಣೇತ್ಥಂ ಸ ಪೃಷ್ಟಸ್ತು ಕಿಂಚಿನ್ನೋವಾಚ ತಾಪಸಃ ।
ಶಕ್ರಃ ಪುನರಪೃಚ್ಛದ್ವೈ ನೋವಾಚ ಸ ದಿಗಂಬರಃ ॥ ೧೧ ॥

---

ನನ್ನು ಕಂಡರು. ನೋಡಿದರೆ ಭಯವುಂಟಾಗುವಂತೆ ಅದ್ಭುತವಾದ ಆಕಾರವುಳ್ಳವನಾಗಿದ್ದನು. ಮಹಾತೇಜಶ್ಶಾಲಿಯೂ, ಶಾಂತನೂ, ಜಟಾಧಾರಿಯೂ, ಆಗಿದ್ದನು. ನೀಳವಾದ ತೋಳು, ಅಗಲವಾದ ಎದೆ, ಶುಭ್ರವಾದ ವರ್ಣ ಇವುಗಳಿಂದ ಒಪ್ಪುತ್ತಿದ್ದನು.

೯. ತನ್ನ ಅಧಿಕಾರ ಬಲದಿಂದ ಮತ್ತನಾದ ಇಂದ್ರನು ದಾರಿಯ ನಡುವೆ ನಿಂತಿರುವ ಆ ಪುರುಷನು ಶಿವನಲ್ಲದೆ ಮತ್ತಾರೂ ಅಲ್ಲ ಎಂದು ಅರಿಯದೆ ಅವನನ್ನು ಕುರಿತು,

೧೦. ಎಲೈ ನೀನು ಯಾರು ? ಎಲ್ಲಿಂದ ಬಂದೆ ? ನಿನ್ನ ಹೆಸರೇನು ? ನಿಜವನ್ನು ಹೇಳು. ಪ್ರಭುವಾದ ಶಿವನು ಕೈಲಾಸದಲ್ಲಿಯೇ ಇರುವನೇ ಅಥವಾ ಮತ್ತೆಲ್ಲಾದರೂ ಹೋಗಿರುವನೇ ? ಎಂದನು.

೧೧. ಈ ರೀತಿಯಾಗಿ ಇಂದ್ರನು ಕೇಳಿದರೂ, ಆ ಬೆತ್ತಲೆಯ ತಪಸ್ವಿಯು ಏನೂ ಮಾತಾಡಲಿಲ್ಲ. ಇಂದ್ರನು ಮತ್ತೆ ಕೇಳಿದನು. ಆ ನಗ್ನನು ಆಗಲೂ ಉತ್ತರವನ್ನೇ ಕೊಡಲಿಲ್ಲ.

ಪುನಃ ಪುರಂದರೋಽಪೃಚ್ಛಲ್ಲೋಕಾನಾಮಧಿಪೇಶ್ವರಃ ।
ತೂಷ್ಣೀಮಾಸ ಮಹಾಯೋಗೀ ಲೀಲಾರೂಪಧರಃ ಪ್ರಭುಃ ॥ ೧೨ ॥

ಇತ್ಥಂ ಪುನಃ ಪುನಃ ಪೃಷ್ಟಶ್ಶಕ್ರೇಣ ಸ ದಿಗಂಬರಃ ।
ನೋವಾಚ ಕಿಂಚಿದ್ಭಗವಾಂಛಕ್ರಜ್ಞಾನಪರೀಕ್ಷಯಾ ॥ ೧೩ ॥

ಅಥ ಚುಕ್ರೋಧ ದೇವೇಶಸ್ತ್ರೈಲೋಕ್ಯೈಶ್ವರ್ಯಗರ್ವಿತಃ ।
ಉವಾಚ ವಚನಂ ಚೈವ ತಂ ನಿರ್ಭರ್ತ್ಸ್ಯ ಜಟಾಧರಂ ॥ ೧೪ ॥

॥ ಇಂದ್ರ ಉವಾಚ ॥

ರೇ ಮಯಾ ಪೃಚ್ಛ್ಯಮಾನೋಽಪಿ ನೋತ್ತರಂ ದತ್ತವಾನಸಿ ।
ಅತಸ್ತ್ವಾಂ ಹನ್ಮಿ ವಜ್ರೇಣ ಕಸ್ತೇ ತ್ರಾತಾಸ್ತಿ ದುರ್ಮತೇ ॥ ೧೫ ॥

॥ ಸನತ್ಕುಮಾರ ಉವಾಚ ॥

ಇತ್ಯುದೀರ್ಯ ತತೋ ವಜ್ರೀ ಸಂನಿರೀಕ್ಷ್ಯ ಕ್ರುಧಾ ಹಿ ತಂ ।
ಹಂತುಂ ದಿಗಂಬರಂ ವಜ್ರಮುದ್ಯತಂ ಸ ಚಕಾರ ಹ ॥ ೧೬ ॥

---

೧೨. ತ್ರಿಲೋಕಾಧಿಪತಿಯಾದ ಇಂದ್ರನು ಮತ್ತೆ ಆತನನ್ನು ಕೇಳಿದನು. ಲೀಲಾರೂಪಧಾರಿಯಾದ ಆ ಮಹಾಯೋಗಿಯು ಆಗಲೂ ಮಾತನಾಡದೆ ಸುಮ್ಮ ನಿದ್ದನು.

೧೩. ಈರೀತಿಯಾಗಿ ಇಂದ್ರನು ಮತ್ತೆ ಮತ್ತೆ ಕೇಳುತ್ತಿದ್ದರೂ ಆತನ ಮನಸ್ಸನ್ನು ಪರೀಕ್ಷಿಸಬೇಕೆಂದೆಣಿಸಿ, ಆ ಬರಿಮೈಯಯೋಗಿಯು ಏನೊಂದೂ ಮಾತನಾಡಲಿಲ್ಲ.

೧೪. ಆಮೇಲೆ, ಮೂರು ಲೋಕಗಳಿಗೂ ತಾನು ಅಧಿಪತಿಯೆಂಬ ಅಹಂಕಾರದಿಂದ ಇಂದ್ರನು ಅವನ ಮೇಲೆ ಕುಪಿತನಾಗಿ, ಆ ಜಟಾಧಾರಿಯನ್ನು ಗದರಿಸುತ್ತಾ ಈರೀತಿ ನುಡಿದನು.

೧೫. ಛೀ ನೀಚನೇ, ನಾನು ಕೇಳುತ್ತಿದ್ದರೂ, ಲಕ್ಷಿಸದೆ, ಉತ್ತರವನ್ನು ಕೊಡದೆ ಇರುವೆ. ಆದುದರಿಂದ ಎಲೈ ದುರ್ಮತಿಯೇ, ನಿನ್ನನ್ನು ವಜ್ರಾಯುಧದಿಂದ ಕೊಲ್ಲುವೆನು. ಯಾರು ಕಾಪಾಡುವರೋ ನೋಡೋಣ ಎಂದನು.

೧೬-೧೭. ಎಲೈ ವ್ಯಾಸನೇ ಕೇಳು. ಹೀಗೆಂದು ಹೇಳಿ ಇಂದ್ರನು ಮಹಾ ಕೋಪದಿಂದ ಆ ದಿಗಂಬರನನ್ನು ಕೊಲ್ಲಬೇಕೆಂದು ವಜ್ರಾಯುಧವನ್ನು ಮೇಲಕ್ಕೆತ್ತಲು,

ಪುರಂದರಂ ವಜ್ರಹಸ್ತಂ ದೃಷ್ಟ್ವಾ ದೇವಸ್ಸದಾಶಿವಃ ।
ಚಕಾರ ಸ್ತಂಭನಂ ತಸ್ಯ ವಜ್ರಪಾತಸ್ಯ ಶಂಕರಃ ॥ ೧೭ ॥

ತತೋ ರುದ್ರಃ ಕ್ರುಧಾವಿಷ್ಟಃ ಕರಾಲಾಕ್ಷೋ ಭಯಂಕರಃ ।
ದ್ರುತಮೇವ ಪ್ರಜಜ್ವಾಲ ತೇಜಸಾ ಪ್ರದಹನ್ನಿವ ॥ ೧೮ ॥

ಬಾಹುಪ್ರತಿಷ್ಟಂಭಭುವಾ ಮನ್ಯುನಾಂತಶ್ಶಚೀಪತಿಃ ।
ಸಮದಹ್ಯತ ಭೋಗೀವ ಮಂತ್ರರುದ್ಧಪರಾಕ್ರಮಃ ॥ ೧೯ ॥

ದೃಷ್ಟ್ವಾ ಬೃಹಸ್ಪತಿಸ್ತೂರ್ಣಂ ಪ್ರಜಲ್ವಂತಂ ಸ್ವತೇಜಸಾ ।
ಪುರುಷಂ ತಂ ಧಿಯಾ ಜ್ಞಾತ್ವಾ ಪ್ರಣನಾಮ ಹರಂ ಪ್ರಭುಂ ॥ ೨೦ ॥

ಕೃತಾಂಜಲಿಪುಟೋ ಭೂತ್ವಾ ತತೋ ಗುರುರುಧಾರಧೀಃ ।
ನತ್ವಾ ಚ ದಂಡವದ್ಭೂಮೌ ಪ್ರಭುಂ ಸ್ತೋತುಂ ಪ್ರಚಕ್ರಮೇ ॥ ೨೧ ॥

---

ಅದನ್ನು ಕಂಡು ಶಂಕರನು ವಜ್ರಾಯುಧವು ಬೀಳದಂತೆ ಅವನ್ನು ಅಲ್ಲಿಯೇ ಅಲು ಗಾಡದ ಹಾಗೆ ಸ್ತಂಭಿಸಿಬಿಟ್ಟನು.

೧೮. ಬಳಿಕ ಶಿವನು ಕಡುಕೋಪದಿಂದ ಒಡನೆಯೇ ರೌದ್ರಾಕಾರವನ್ನು ತಾಳಿ, ಭಯಂಕರವಾದ ಕಣ್ಣುಗಳಿಂದ ಕೂಡಿ, ತನ್ನ ತೇಜಸ್ಸಿನಿಂದಲೇ ಸುಟ್ಟುಬಿಡು ವಂತೆ ಉರಿಯತೊಡಗಿದನು.

೧೯. ಆಗ ಶಚೀಪತಿಯಾದ ಇಂದ್ರನಿಗೆ ತನ್ನ ತೋಳು ಅಲುಗಾಡದಂತೆ ನಿಂತುಹೋದುದರಿಂದ ರೇಗಿಹೋಯಿತು. ಮಂತ್ರದಿಂದ ಕಟ್ಟಲ್ಪಟ್ಟ ಸರ್ಪದಂತೆ ಏನೂ ಮಾಡಲಾಗದೆ, ಒಳಗೊಳಗೆ ಕುದಿಯತೊಡಗಿದನು.

೨೦. ತಕ್ಷಣವೇ ಬೃಹಸ್ಪತಿಯು ತನ್ನ ತೇಜಸ್ಸಿನಿಂದ ಬೆಳಗುತ್ತಿರುವ ಆ ಪುರುಷನು ಸಾಕ್ಷಾತ್ಪರಶಿವನೆಂದು ಜ್ಞಾನದೃಷ್ಟಿಯಿಂದ ಅರಿತು ಆತನಿಗೆ ನಮಸ್ಕಾರ ಮಾಡಿದನು.

೨೧. ಆನಂತರ ವಿಶಾಲವಾದ ಜ್ಞಾನವುಳ್ಳ ಆ ಬೃಹಸ್ಪತಿಯು ಕೈಗಳನ್ನು ಜೋಡಿಸಿಕೊಂಡು ನೆಲದಮೇಲೆ ದಂಡವತ್ಪ್ರಣಾಮಮಾಡಿ, ಆ ಪ್ರಭುವನ್ನು ಸ್ತೋತ್ರಮಾಡತೊಡಗಿದನು.

॥ ಗುರುರುವಾಚ ॥

ನಮೋ ದೇವಾಧಿದೇವಾಯ ಮಹಾದೇವಾಯ ಚಾತ್ಮನೇ ।
ಮಹೇಶ್ವರಾಯ ಪ್ರಭವೇ ತ್ರ್ಯಂಬಕಾಯ ಕಪರ್ದಿನೇ ॥ ೨೨ ॥

ದೀನನಾಥಾಯ ವಿಭವೇ ನಮೋಽಂಧಕನಿಷೂದಿನೇ ।
ತ್ರಿಪುರಘ್ನಾಯ ಶರ್ವಾಯ ಬ್ರಹ್ಮಣೇ ಪರಮೇಷ್ಠಿನೇ ॥ ೨೩ ॥

ವಿರೂಪಾಕ್ಷಾಯ ರುದ್ರಾಯ ಬಹುರೂಪಾಯ ಶಂಭವೇ ।
ವಿರೂಪಾಯಾತಿರೂಪಾಯ ರೂಪಾತೀತಾಯ ತೇ ನಮಃ ॥ ೨೪ ॥

ಯಜ್ಞವಿಧ್ವಂಸಕರ್ತ್ರೇ ಚ ಯಜ್ಞಾನಾಂ ಫಲದಾಯಿನೇ ।
ನಮಸ್ತೇ ಮುಖರೂಪಾಯ ಪರಕರ್ಮಪ್ರವರ್ತಿನೇ ॥ ೨೫ ॥

---

೨೨. ಎಲೈ ದೇವಾಧಿದೇವನೇ, ನೀನು ಮಹಾದೇವನೂ, ಆತ್ಮಸ್ವರೂಪನೂ, ಮಹೇಶ್ವರನೂ, ಪ್ರಭುವೂ ಮೂರು ಕಣ್ಣುಳ್ಳವನೂ. ಕಪರ್ದಧಾರಿಯೂ ಆಗಿರುವೆ. ಇಂತಹ ನಿನಗೆ ನಮಸ್ಕಾರವು.

೨೩. ನೀನು ದೀನರನ್ನು ರಕ್ಷಿಸುವವನು ಅಂಧಕಾಸುರ ಸಂಹಾರಿಯು, ಸರ್ವ ವ್ಯಾಪಿಯು, ತ್ರಿಪುರಹರನು. ಶರ್ವನೂ, ಬ್ರಹ್ಮನೂ, ಪರಮೇಷ್ಠಿಯೂ ಎನಿಸಿದ ನಿನಗೆನಮಸ್ಕಾರವು.

೨೪. ವಿಕಾರವಾದ ಕಣ್ಣುಗಳುಳ್ಳವನೂ, ಎಂದರೆ ಸಾಮಾನ್ಯ ಜನರಿಗಿರು ವಂತೆ ಎರಡು ಕಣ್ಣುಗಳಲ್ಲದೆ ನಿನಗೆ ಮೂರನೆಯ ಕಣ್ಣು ಇರುವುದು. ನೀನು ಭಯಂಕರಾಕಾರನು, ನಾನಾರೂಪಧಾರಿಯು, ಶಂಭುವು, ವಿಕಾರರೂಪವುಳ್ಳವನು, ನಾಮರೂಪಗಳಿಲ್ಲದ ಅವ್ಯಕ್ತಸ್ವರೂಪನಾಗಿದ್ದರೂ ಭಕ್ತಾನುಗ್ರಹಕ್ಕಾಗಿ ಅನೇಕ ರೂಪ ಗಳಿಂದ ಪ್ರಕಟನಾಗುವೆ.

೨೫. ದಕ್ಷಯಜ್ಞವಿನಾಶಕನೂ, ಯಜ್ಞಫಲವನ್ನು ಕೊಡುವವನೂ, ಯಜ್ಞ ಸ್ವರೂಪನೂ, ಶ್ರೇಷ್ಠವಾದ ಕರ್ಮಗಳನ್ನು ಮಾಡುವಂತೆ ಪ್ರೇರೇಪಿಸುವವನೂ ಆದ ನಿನಗೆ ನಮಸ್ಕಾರವು.

ಕಾಲಾಂತಕಾಯ ಕಾಲಾಯ ಕಾಲಭೋಗಿಧರಾಯ ಚ ।
ನಮಸ್ತೇ ಪರಮೇಶಾಯ ಸರ್ವತ್ರ ವ್ಯಾಪಿನೇ ನಮಃ ॥ ೨೬ ॥

ನಮೋ ಬ್ರಹ್ಮಶಿರೋಹಂತ್ರೇ ಬ್ರಹ್ಮಚಂದ್ರಸ್ತುತಾಯ ಚ ।
ಬ್ರಹ್ಮಣ್ಯಾಯ ನಮಸ್ತೇಽಸ್ತು ನಮಸ್ತೇ ಪರಮಾತ್ಮನೇ ॥ ೨೭ ॥

ತ್ವಮಗ್ನಿರನಿಲೋ ವ್ಯೋಮ ತ್ವಮೇವಾಪೋ ವಸುಂಧರಾ ।
ತ್ವಂ ಸೂರ್ಯಶ್ಚಂದ್ರಮಾ ಭಾನಿ ಜ್ಯೋತಿಶ್ಚಕ್ರಂ ತ್ವಮೇವ ಹಿ ॥ ೨೮ ॥

ತ್ವಮೇವ ವಿಷ್ಣುಸ್ತ್ವಂ ಬ್ರಹ್ಮಾ ತತ್ಸುತಸ್ತ್ವಂ ಪರೇಶ್ವರಃ ।
ಮುನಯಃ ಸನಕಾದ್ಯಾಸ್ತ್ವಂ ನಾರದಸ್ತ್ವಂ ತಪೋಧನಃ ॥ ೨೯ ॥

ತ್ವಮೇವ ಸರ್ವಲೋಕೇಶಸ್ತ್ವಮೇವ ಜಗದಾತ್ಮಕಃ ।
ಸರ್ವಾನ್ವಯಸ್ಸರ್ವಭಿನ್ನಸ್ತ್ವಮೇವ ಪ್ರಕೃತೇಃ ಪರಃ ॥ ೩೦ ॥

---

೨೬. ನೀನು ಯಮನಿಗೂ ಯಮನಾದವನು, ಯಮಸ್ವರೂಪನು, ಕೃಷ್ಣ ಸರ್ಪವನ್ನು ಧರಿಸಿರುವವನು, ಪರಮೇಶ್ವರನು, ಸರ್ವ ವ್ಯಾಪಿಯು ಇಂತಹ ನಿನಗೆ ನಮಸ್ಕಾರವು.

೨೭. ಬ್ರಹ್ಮನ ಶಿರಸ್ಸನ್ನು ಛೇದಿಸಿದವನು, ಬ್ರಹ್ಮಚಂದ್ರರಿಂದ ಸ್ತೋತ್ರ ಮಾಡಲ್ಪಡುವವನು, ಬ್ರಹ್ಮನಿಷ್ಠನು, ಪರಮಾತ್ಮನು ಇಂತಹ ನಿನಗೆ ನಮಸ್ಕಾರವು.

೨೮. ನೀನೇ ಅಗ್ನಿಯು, ವಾಯುವು, ಆಕಾಶವು, ನೀನೇ ಜಲವು, ನೀನೇ ಪೃಥಿವಿಯು, ಸೂರ್ಯನೂ, ಚಂದ್ರನೂ, ನಕ್ಷತ್ರಗಳೂ ನೀನೇ, ನೀನೇ ಜ್ಯೋತಿರ್ಮಂಡಲವೂ ಆಗಿರುವೆ.

೨೯. ನೀನೇ ವಿಷ್ಣುವು, ನೀನೇ ಬ್ರಹ್ಮನು, ಬ್ರಹ್ಮನ ಮಗನೂ, ಪರಮಾತ್ಮನಾದ ಈಶ್ವರನೂ ನೀನೇ. ಸನಕಾದಿಮುನಿಗಳೂ, ತಪೋಧನನಾದ ನಾರದನೂ ನೀನೇ ಆಗಿರುವೆ.

೩೦. ನೀನೇ ಈ ಎಲ್ಲ ಲೋಕಗಳಿಗೂ ಒಡೆಯನು. ನೀನೇ ಸರ್ವ ಜಗತ್ಸ್ವರೂಪನು. ನೀನು ಎಲ್ಲರಲ್ಲಿಯೂ ಅಡಗಿರುವೆ. ನೀನು ಎಲ್ಲದಕ್ಕಿಂತಲೂ ವಿಲಕ್ಷಣನಾಗಿರುವೆ. ನೀನೇ ಪ್ರಕೃತಿಗಿಂತಲೂ ಪರನೆನಿಸಿರುವೆ.

ತ್ವಂ ವೈ ಸೃಜಸಿ ಲೋಕಾಂಶ್ಚ ರಜಸಾ ವಿಧಿನಾಮಧೃಕ್ ।
ಸತ್ತ್ವೇನ ಹರಿರೂಪಸ್ತ್ವಂ ಸಕಲಂ ಪಾಸಿ ವೈ ಜಗತ್ ॥ ೩೧ ॥

ತ್ವಮೇವಾಸಿ ಮಹಾದೇವ ತಮಸಾ ಹರರೂಪಧೃಕ್ ।
ಲೀಲಯಾ ಭುವನಂ ಸರ್ವಂ ನಿಖಿಲಂ ಪಾಂಚಭೌತಿಕಂ ॥ ೩೨ ॥

ತ್ವದ್ಧ್ಯಾನಬಲತಸ್ಸೂರ್ಯಸ್ತಪತೇ ವಿಶ್ವಭಾವನ ।
ಅಮೃತಂ ಚ್ಯವತೇ ಲೋಕೇ ಶಶೀ ವಾತಿ ಸಮೀರಣಃ ॥ ೩೩ ॥

ತ್ವದ್ಧ್ಯಾನಬಲತೋ ಮೇಘಾಶ್ಚಾಂಬು ವರ್ಷಂತಿ ಶಂಕರ ।
ತ್ವದ್ಧ್ಯಾನಬಲತಶ್ಶಕ್ರಸ್ತ್ರಿಲೋಕೀಂ ಪಾತಿ ಪುತ್ರವತ್ ॥ ೩೪ ॥

ತ್ವದ್ಧ್ಯಾನಬಲತೋಮೇಘಾಸ್ಸರ್ವೇ ದೇವಾ ಮುನೀಶ್ವರಾಃ ।
ಸ್ವಾಧಿಕಾರಂ ಚ ಕುರ್ವಂತಿ ಚಕಿತಾ ಭವತೋ ಭಯಾತ್ ॥ ೩೫ ॥

---

೩೧. ನೀನು ರಜೋಗುಣಯುಕ್ತನಾಗಿ ಬ್ರಹ್ಮನೆಂಬ ಹೆಸರಿನಿಂದ ಪ್ರಪಂಚವೆಲ್ಲವನ್ನೂ ಸೃಷ್ಟಿಸುವೆ. ಸತ್ತ್ವಗುಣಾನ್ವಿತನಾಗಿ, ವಿಷ್ಣುರೂಪದಿಂದ ಈ ಜಗತ್ತೆಲ್ಲವನ್ನೂ ಸಂರಕ್ಷಿಸುವೆ.

೩೨. ಓ ಮಹಾದೇವ, ನೀನೇ ತಮೋಗುಣದಿಂದ ಹರನೆಂಬುವವನಾಗಿ, ಲೀಲಾಮಾತ್ರದಿಂದ ಪಂಚಭೂತಮಯವಾದ ಈ ಸಕಲ ಜಗತ್ತನ್ನೂ ಸಂಹರಿಸಿಬಿಡುವೆ.

೩೩. ನಿನ್ನನ್ನು ಧ್ಯಾನಿಸುವುದರಿಂದ ಉಂಟಾದ ಮಹಿಮೆಯಿಂದಲೇ ಈ ಪ್ರಪಂಚದಲ್ಲಿ ಸೂರ್ಯನು ಬೆಳಗುವನು. ಚಂದ್ರನು ಅಮೃತವನ್ನು ಕರೆಯುವನು. ಗಾಳಿಯು ಬೀಸುವುದು.

೩೪. ನಿನ್ನ ಧ್ಯಾನದ ಬಲದಿಂದಲೇ ಮೇಘಗಳು ಮಳೆಗರೆಯುತ್ತವೆ. ಓ ಶಂಕರ, ನಿನ್ನ ಧ್ಯಾನದ ಬಲದಿಂದಲೇ ಈ ಇಂದ್ರನೂ ಮೂರು ಲೋಕವನ್ನು ತನ್ನ ಮಕ್ಕಳಂತೆ ಕಾಪಾಡುತ್ತಿದ್ದಾನೆ.

೩೫. ನಿನ್ನ ಧ್ಯಾನಬಲದಿಂದ, ಮೋಡಗಳೂ, ದೇವತೆಗಳೂ, ಋಷಿಗಳೂ, ಎಲ್ಲರೂ ನಿನಗೆ ಭಯಪಡುತ್ತಾ ಚಕಿತರಾಗಿ ತಮ್ಮ ತಮ್ಮ ಅಧಿಕಾರವನ್ನು ನಿರ್ವಹಿಸುತ್ತಿರುವರು.

ತ್ವತ್ಪಾದಕಮಲಸ್ಯೈವ ಸೇವಾನಾದ್ಭುವಿ ಮಾನವಾಃ ।
ನಾದ್ರಿಯಂತೇ ಸುರಾನ್ರುದ್ರ ಲೋಕೈಶ್ವರ್ಯಂ ಚ ಭುಂಜತೇ ॥ ೩೬ ॥

ತ್ವತ್ಪಾದಕಮಲಸ್ಯೈವ ಸೇವನಾದಗಮನ್ಪರಾಂ ।
ಗತಿಂ ಯೋಗಧನಾನಾಮಪ್ಯಗಮ್ಯಾಂ ಸರ್ವದುರ್ಲಭಾಂ ॥ ೩೭ ॥

॥ ಸನತ್ಕುಮಾರ ಉವಾಚ ॥

ಬೃಹಸ್ಪತಿರಿತಿ ಸ್ತುತ್ವಾ ಶಂಕರಂ ಲೋಕಶಂಕರಂ ।
ಪಾದಯೋಃ ಪಾತಯಾಮಾಸ ತಸ್ಯೇಶಸ್ಯ ಪುರಂದರಂ ॥ ೩೮ ॥

ಪಾತಯಿತ್ವಾ ಚ ದೇವೇಶಮಿಂದ್ರಂ ನತಶಿರೋಧರಂ ।
ಬೃಹಸ್ಪತಿರುವಾಚೇದಂ ಪ್ರಶ್ರಯಾವನತಶ್ಶಿವಂ ॥ ೩೯ ॥

॥ ಬೃಹಸ್ಪತಿರುವಾಚ ॥

ದೀನನಾಥ ಮಹಾದೇವ ಪ್ರಣತಂ ತವ ಪಾದಯೋಃ ।
ಸಮುದ್ಧರ ಚ ಶಾಂತಂ ತ್ವಂ ಕ್ರೋಧಂ ನಯನಜಂ ಕುರು ॥ ೪೦ ॥

---

೩೬-೩೭. ನಿನ್ನ ಚರಣಕಮಲದ ಸೇವನೆಯ ಮಹಿಮೆಯಿಂದಲೇ, ಭೂಲೋಕದಲ್ಲಿ ಸಮಸ್ತ ಭೋಗಭಾಗ್ಯಗಳನ್ನು ಅನುಭವಿಸುತ್ತಾ ಮಾನವರು ದೇವತೆಗಳನ್ನೂ ಲೆಕ್ಕಿಸದೆ ಇರುವರು. ನಿನ್ನ ಪಾದಪೂಜಾಪ್ರಭಾವದಿಂದಲೇ ಅವರು ಎಲ್ಲರಿಗೂ ದುರ್ಲಭವೂ, ಯೋಗಿಶ್ರೇಷ್ಠರಿಗೂ ಸಾಧ್ಯವಿಲ್ಲದಿರುವುದೂ ಆದ ಉತ್ತಮವಾದ ಗತಿಯನ್ನು ಹೊಂದಿರುವರು. ಎಂದು ಅನೇಕ ವಿಧವಾಗಿ ಸ್ತೋತ್ರಮಾಡಿದನು.

೩೮. ಓ ವ್ಯಾಸ, ಈರೀತಿಯಾಗಿ ಲೋಕಕಲ್ಯಾಣಕಾರಕನಾದ ಶಂಕರನನ್ನು ಬೃಹಸ್ಪತಿಯು ಸ್ತೋತ್ರಮಾಡಿ, ಆ ಶಿವನ ಕಾಲುಗಳ ಮೇಲೆ, ಇಂದ್ರನನ್ನು ಕೆಡವಿ ನಮಸ್ಕಾರಮಾಡಿಸಿದನು.

೩೯. ತಲೆಬಾಗಿ ನಿಂತಿದ್ದ ದೇವಾಧೀಶ್ವರನಾದ ಇಂದ್ರನನ್ನು ಆತನಕಾಲ್ಗಳ ಮೇಲೆ ಕೆಡವಿ ಬೃಹಸ್ಪತಿಯು ವಿನಯದಿಂದ ತಲೆಯನ್ನು ಬಗ್ಗಿಸಿ, ಶಿವನನ್ನು ಕುರಿತು ಈರೀತಿ ಬಿನ್ನವಿಸಿದನು.

೪೦. ಎಲೈ ದೀನವತ್ಸಲನೇ, ನಿನ್ನ ಕಾಲಿಗೆ ಬಿದ್ದಿರುವ ಈ ಇಂದ್ರನನ್ನು ಉದ್ಧಾರಮಾಡು. ನಿನ್ನ ನೇತ್ರದಲ್ಲಿ ಆವಿರ್ಭವಿಸಿದ ಆ ಕೋಪವನ್ನು ಶಾಂತಗೊಳಿಸು.

ತುಷ್ಟೋ ಭವ ಮಹಾದೇವ ಪಾಹೀಂದ್ರಂ ಶರಣಾಗತಂ ।
ಅಗ್ನಿರೇಷ ಶಮಂ ಯಾತು ಭಾಲನೇತ್ರ ಸಮುದ್ಭವಃ ॥ ೪೧ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ಗುರೋರ್ವಾಕ್ಯಂ ದೇವದೇವೋ ಮಹೇಶ್ವರಃ ।
ಉವಾಚ ಕರುಣಾಸಿಂಧುರ್ಮೇಘನಿರ್ಹ್ರಾದ್ರಯಾಗಿರಾ ॥ ೪೨ ॥

॥ ಮಹೇಶ್ವರ ಉವಾಚ ॥

ಕ್ರೋಧಂ ಚ ನಿಸ್ಸೃತಂ ನೇತ್ರಾದ್ಧಾರಯಾಮಿ ಬೃಹಸ್ಪತೇ ।
ಕಥಂ ಹಿ ಕಂಚುಕೀಂ ಸರ್ಪಸ್ಸಂಧತ್ತೇ ನೋಜ್ಝಿತಾಂ ಪುನಃ ॥ ೪೩ ॥

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ಶಂಕರಸ್ಯ ಬೃಹಸ್ಪತಿಃ ।
ಉವಾಚ ಕ್ಲಿಷ್ಟರೂಪಶ್ಚ ಭಯವ್ಯಾಕುಲಮಾನಸಃ ॥ ೪೪ ॥

---

೪೧. ಎಲೈ ಮಹಾದೇವನೇ, ಪ್ರಸನ್ನನಾಗು. ಶರಣಾಗತನಾದ ಇಂದ್ರನನ್ನು ಕಾಪಾಡು. ನಿನ್ನ ಹಣೆಗಣ್ಣಿನಲ್ಲಿ ಹುಟ್ಟಿದ ಈ ಕೋಪಾಗ್ನಿಯು ಶಾಂತಿಯನ್ನು ಹೊಂದಲಿ ಎಂದನು.

೪೨. ಓ ವ್ಯಾಸಮಹರ್ಷೀ! ಈ ರೀತಿ ಬೃಹಸ್ಪತಿಯು ಬಿನ್ನವಿಸಿದುದನ್ನು ಕೇಳಿ, ಕರುಣಾಸಾಗರನಾದ, ದೇವದೇವನಾದ ಆ ಶಂಭುವು ಮೇಘದಂತೆ ಗಂಭೀರವಾದ ಧ್ವನಿಯಿಂದ ಈರೀತಿ ನುಡಿದನು.

೪೩. ಎಲೈ ಬೃಹಸ್ಪತಿಯೇ ಕಣ್ಣಿನಿಂದ ಹೊರಬಿದ್ದ ಈ ಕೋಪವನ್ನು ನಾನೆಂತು ಹಿಂದಕ್ಕೆ ತೆಗೆದುಕೊಳ್ಳಲಿ? ಹಾವು ಎಂದಿಗಾದರೂ ಬಿಟ್ಟಪೊರೆಯನ್ನು ಮತ್ತೆ ಮೈಯಲ್ಲಿ ಸೇರಿಸಿಕೊಳ್ಳುವುದೇ?

೪೪. ಹೇ ವ್ಯಾಸ, ಹೀಗೆ ಶಿವನು ನುಡಿದ ಮಾತನ್ನು ಕೇಳಿ ಬೃಹಸ್ಪತಿಯು ತಳಮಳಗೊಳ್ಳುತ್ತಾ, ಭಯದಿಂದ ವ್ಯಾಕುಲವಾದ ಮನಸ್ಸುಳ್ಳವನಾಗಿ

॥ ಬೃಹಸ್ಪತಿರುವಾಚ ॥

ದೇವ ಹೇ ಭಗವನ್ ಭಕ್ತಾ ಅನುಕಂಪ್ಯಾಸ್ಸದೈವ ಹಿ ।
ಭಕ್ತವತ್ಸಲನಾಮೇತಿ ತ್ವಂ ಸತ್ಯಂ ಕುರು ಶಂಕರ ॥ ೪೫ ॥

ಕ್ಷೇಪ್ತುಮನ್ಯತ್ರ ದೇವೇಶ ಸ್ವತೇಜೋsತ್ಯುಗ್ರಮರ್ಹಸಿ ।
ಉದ್ಧರ್ತಸ್ಸರ್ವಭಕ್ತಾನಾಂ ಸಮುದ್ಧರ ಪುರಂದರಂ ॥ ೪೬ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತೋ ಗುರುಣಾ ರುದ್ರೋ ಭಕ್ತವತ್ಸಲನಾಮಭಾಕ್ ।
ಪ್ರತ್ಯುವಾಚ ಪ್ರಸನ್ನಾತ್ಮಾ ಸುರೇಜ್ಯಂ ಪ್ರಣತಾರ್ತಿಹಾ ॥ ೪೭ ॥

ಶಿವ ಉವಾಚ ॥

ಪ್ರೀತಸ್ಸ್ತುತ್ಯಾನಯಾ ತಾತ ದದಾಮಿ ವರಮುತ್ತಮಂ ।
ಇಂದ್ರಸ್ಯ ಜೀವದಾನೇನ ಜೀವೇತಿ ತ್ವಂ ಪ್ರಥಾಂ ವ್ರಜ ॥ ೪೮ ॥

ಸಮುದ್ಭೂತೋsನಲೋ ಯೋsಯಂ ಭಾಲನೇತ್ರಾತ್ಸುರೇಶಹಾ ।
ಏನಂ ತ್ಯಕ್ಷ್ಯಾಮ್ಯಹಂ ದೂರೇ ಯಥೇಂದ್ರಂ ನೈವ ಪೀಡಯೇತ್ ॥ ೪೯ ॥

---

೪೫. ಎಲೈ ಭಗವಂತನೇ, ಭಕ್ತರು ಯಾವಾಗಲೂ ಕೃಪೆಗೆ ಪಾತ್ರರಲ್ಲವೇ ? ಓ ಶಂಕರ, ಭಕ್ತವತ್ಸಲನೆಂಬ ನಿನ್ನ ಹೆಸರನ್ನು ಸತ್ಯವಾದುದನ್ನಾಗಿಮಾಡು.

೪೬. ಎಲೈ ದೇವೇಶ, ಮಹಾಕ್ರೂರವಾದ ನಿನ್ನ ತೇಜಸ್ಸನ್ನು ಬೇರೊಂದೆಡೆ ಬಿಸುಟುಬಿಟ್ಟು, ಸರ್ವಭಕ್ತೋದ್ಧಾರಕನಾದ ನೀನು ಈ ಇಂದ್ರನನ್ನು ಉದ್ಧರಿಸು ಎಂದನು.

೪೭. ಓ ವ್ಯಾಸ, ಈರೀತಿ ಬೃಹಸ್ಪತಿಯು ಪ್ರಾರ್ಥಿಸಲು, ಮರೆಹೊಕ್ಕವರ ಕಷ್ಟಗಳನ್ನು ಪರಿಹರಿಸುವವನೂ, ಭಕ್ತವತ್ಸಲನೆಂಬ ಬಿರುದನ್ನು ಪಡೆದವನೂ ಆದ ಆ ಶಿವನು ಪ್ರಸನ್ನನಾಗಿ

೪೮. ಅಪ್ಪಾ, ನಿನ್ನ ಸ್ತುತಿಗೆ ನಾನು ಮೆಚ್ಚಿರುವೆನು. ನಿನಗೆ ಉತ್ತಮವಾದ ವರವನ್ನೀಯುವೆನು. ಇಂದ್ರನಿಗೆ ನೀನು ಇಂತು ಜೀವವನ್ನು ಉಳಿಸಿದುದರಿಂದ ಇನ್ನುಮೇಲೆ ನಿನಗೆ ಜೀವನೆಂದೇ ಹೆಸರು ಪ್ರಸಿದ್ಧಿಯಾಗಲಿ.

೪೯. ನನ್ನ ಹಣೆಗಣ್ಣಿನಿಂದ, ಇಂದ್ರನನ್ನು ಸುಟ್ಟುಬಿಡಲು ಯಾವ ಬೆಂಕಿಯು ಹೊರಹೊರಟಿತೋ ಆ ಕ್ರೋಧಾನಲವನ್ನು, ಇಂದ್ರನನ್ನು ಎಂದಿಗೂ ಪೀಡಿಸದ ಹಾಗೆ ದೂರದಲ್ಲಿ ವಿಸರ್ಜಿಸಿಬಿಡುವೆನು ಎಂದನು.

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ತಂ ಕರೇ ಧೃತ್ವಾ ಸ್ವತೇಜೋಽನಲಮುದ್ಭವಂ ।
ಭಾಲನೇತ್ರಾತ್ಸಮುದ್ಭೂತಂ ಪ್ರಾಕ್ಷಿಪಲ್ಲವಣಾಂಭಸಿ ॥ ೫೦ ॥

ತತಶ್ಚಾಂತರ್ದಧೇ ರುದ್ರೋ ಮಹಾಲೀಲಾಕರಃ ಪ್ರಭುಃ ।
ಗುರುಶಕ್ರೌ ಭಯಾನ್ಮುಕ್ತೌ ಜಗ್ಮತುಸ್ಸುಖಮುತ್ತಮಂ ॥ ೫೧ ॥

ಯದರ್ಥಂ ಗಮನೋದ್ಯುಕ್ತೌ ದರ್ಶನಂ ಪ್ರಾಪ್ಯ ತಸ್ಯ ವೈ ।
ಕೃತಾರ್ಥೌ ಗುರುಶಕ್ರೌ ಹಿ ಸ್ವಸ್ಥಾನಂ ಜಗ್ಮತುರ್ಮುದಾ ॥ ೫೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರವಧೋಪಾಖ್ಯಾನೇ
ಶಕ್ರಜೀವನಂ ನಾಮ ತ್ರಯೋದಶೋಽಧ್ಯಾಯಃ.

---

೫೦. ಓ ವ್ಯಾಸ, ಹೀಗೆಂದು ನುಡಿದು, ಅದ್ಭುತವಾದ ತನ್ನ ಹಣೆಗಣ್ಣಿನಿಂದ ಹೊರಬಿದ್ದ ಕೋಪಾನಲವನ್ನು ಕೈಗೆ ತೆಗೆದುಕೊಂಡು ಲವಣಸಮುದ್ರದಲ್ಲಿ ಬೀಳುವಂತೆ ಎಸೆದುಬಿಟ್ಟನು.

೫೧. ಬಳಿಕ ನಾನಾಲೀಲಾವಿಶಾರದನಾದ ಶಿವನು ಅಂತರ್ಧಾನವನ್ನು ಹೊಂದಿದನು. ಇಂದ್ರ ಬೃಹಸ್ಪತಿಗಳಿಬ್ಬರೂ ಭಯವನ್ನು ಬಿಟ್ಟು ಮನಸ್ಸಿನಲ್ಲಿ ಸೌಖ್ಯವನ್ನು ತಾಳಿದರು.

೫೨. ಯಾರನ್ನು ನೋಡಲೋಸುಗ ಹೊರಟದ್ದರೋ ಆತನ ದರ್ಶನವನ್ನೇ ಪಡೆದು, ಕೃತಾರ್ಥರಾದ ಗುರು ಮತ್ತು ದೇವೇಂದ್ರರು ತಮ್ಮ ತಮ್ಮ ಜಾಗಗಳಿಗೆ ಸಂತೋಷದಿಂದ ಹಿಂದಿರುಗಿದರು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯೊಳಗಣ
ಐದನೆಯ ಯುದ್ಧಖಂಡದಲ್ಲಿ ಜಲಂಧರವಧೋಪಾಖ್ಯಾನದ
ಶಕ್ರಜೀವನವೆಂಬ ಹದಿಮೂರನೆಯ ಅಧ್ಯಾಯವು
ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಚತುರ್ದಶೋಽಧ್ಯಾಯಃ

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ಬ್ರಹ್ಮಪುತ್ರ ನಮೋಽಸ್ತು ತೇ ।
ಶ್ರುತೇಯಮದ್ಭುತಾ ಮೇಽದ್ಯ ಕಥಾ ಶಂಭೋರ್ಮಹಾತ್ಮನಃ ॥ ೧ ॥

ಕ್ಷಿಪ್ತೇ ಸ್ವತೇಜಸಿ ಬ್ರಹ್ಮನ್ ಭಾಲನೇತ್ರಸಮುದ್ಭವೇ ।
ಲವಣಾಂಭಸಿ ಕಿಂ ತತ್ರಾಭವತ್ತತ್ರ ವದಾಶು ತತ್ ॥ ೨ ॥

---

### ಹದಿನಾಲ್ಕನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯು ಸನತ್ಕುಮಾರನನ್ನು ಕುರಿತು, ಎಲೈ ಸರ್ವಜ್ಞನಾದ ಬ್ರಹ್ಮಪುತ್ರನೇ, ನಿನಗೆ ನಮಸ್ಕಾರವು. ಮಹಾತ್ಮನಾದ ಶಿವನ ಅದ್ಭುತವಾದ ಈ ಕಥೆಯನ್ನು ಕೇಳಿದೆನು.

೨. ಓ ಬ್ರಾಹ್ಮಣಶ್ರೇಷ್ಠ, ಶಿವನು ತನ್ನ ಹಣೆಗಣ್ಣಿನಿಂದ ಹೊರಗೆ ಹೊರಟ ತನ್ನ ತೇಜಸ್ಸನ್ನು ಲವಣಸಮುದ್ರದಲ್ಲಿ ಎಸೆದುಬಿಟ್ಟಮೇಲೆ, ಮುಂದೆ ಏನಾಯಿತು? ಅದನ್ನು ಬೇಗನೆ ಹೇಳು ಎಂದನು.

॥ ಸನತ್ಕುಮಾರ ಉವಾಚ ॥

ಶೃಣು ತಾತ ಮಹಾಪ್ರಾಜ್ಞ ಶಿವಲೀಲಾಂ ಮಹಾದ್ಭುತಾಂ ।
ಯಚ್ಛ್ರುತ್ವಾ ಶ್ರದ್ಧಯಾ ಭಕ್ತೋ ಯೋಗಿನಾಂ ಗತಿಮಾಪ್ನುಯಾತ್ ॥

ಅಥೋ ಶಿವಸ್ಯ ತತ್ತೇಜೋ ಭಾಲನೇತ್ರ ಸಮುದ್ಭವಂ ।
ಕ್ಷಿಪ್ತಂ ಚ ಲವಣಾಂಭೋಧೌ ಸದ್ಯೋ ಬಾಲತ್ವಮಾಪ ಹ ॥ ೨ ॥

ತತ್ರ ವೈ ಸಿಂಧುಗಂಗಾಯಾಸ್ಸಾಗರಸ್ಯ ಚ ಸಂಗಮೇ ।
ರುರೋದೋಚ್ಚೈಸ್ಸ ವೈ ಬಾಲಸ್ಸರ್ವಲೋಕಭಯಂಕರಃ ॥ ೩ ॥

ರುದತಸ್ತಸ್ಯ ಶಬ್ದೇನ ಪ್ರಾಕಂಪದ್ಧರಣೀ ಮುಹುಃ ।
ಸ್ವರ್ಗಶ್ಚ ಸತ್ಯಲೋಕಶ್ಚ ತತ್ಸ್ವನಾದ್ಬಧಿರೀಕೃತಃ ॥ ೪ ॥

ಬಾಲಸ್ಯ ರೋದನೇನೈವ ಸರ್ವೇ ಲೋಕಾಶ್ಚ ತತ್ರಸುಃ ।
ಸರ್ವತೋ ಲೋಕಪಾಲಾಶ್ಚ ವಿಹ್ವಲೀಕೃತಮಾನಸಾಃ ॥ ೫ ॥

---

೧. ಮಹಾಮೇಧಾವಿಯಾದ ವ್ಯಾಸಮಹರ್ಷಿಯೇ ಕೇಳು. ಭಕ್ತನಾದವನು ಯಾವುದನ್ನು ಶ್ರದ್ಧೆಯಿಂದ ಕೇಳಿದರೆ, ಯೋಗಿಗಳ ಗತಿಯನ್ನು ಪಡೆಯುವನೋ, ಅಂತಹ ಮಹಾಶ್ಚರ್ಯಕರವಾದ ಶಿವಲೀಲೆಯನ್ನು ವರ್ಣಿಸುವೆನು.

೨. ಶಿವನ ಲಲಾಟನೇತ್ರದಲ್ಲಿ ಉದ್ಭವಿಸಿದ ಆ ತೇಜಸ್ಸು ಲವಣಸಮುದ್ರದಲ್ಲಿ ಎಸೆಯಲ್ಪಟ್ಟು, ಒಡನೆಯೇ ಆಗತಾನೇ ಹುಟ್ಟಿದ ಶಿಶುವಿನ ರೂಪವನ್ನು ಧಾರಣೆ ಮಾಡಿತು.

೩. ಗಂಗಾನದಿಯೂ, ಸಾಗರವೂ ಸೇರುವೆಡೆಯಲ್ಲಿ ಬಿಸುಡಲ್ಪಟ್ಟ, ಪ್ರಪಂಚಕ್ಕೇ ಹೆದರಿಕೆಯನ್ನುಂಟುಮಾಡುವ ಆ ಶಿಶುವು ಗಟ್ಟಿಯಾಗಿ ಅಳತೊಡಗಿತು.

೪. ಆ ಮಗುವು ಅಳತೊಡಗುತ್ತಲೇ ಅದರ ಧ್ವನಿಯಿಂದ ಭೂಮಿಯು ಮೇಲೆ ಮೇಲೆ ಅಲ್ಲಾಡತೊಡಗಿತು. ಸ್ವರ್ಗವೂ ಸತ್ಯಲೋಕವೂ ಆ ಶಬ್ದದಿಂದ ಕಿವುಡಾಗಿ ಹೋಯಿತು.

೫. ಆ ಶಿಶುವಿನ ಅಳುವಿಗೆ ಎಲ್ಲ ಲೋಕಗಳೂ ತಲ್ಲಣಿಸಿದವು. ಲೋಕಪಾಲಕರೆಲ್ಲರೂ, ಅಧೈರ್ಯಹೊಂದಿದರು.

ಕಿಂ ಬಹೂಕ್ತೇನ ವಿಪ್ರೇಂದ್ರ ಚಚಾಲ ಸಚರಾಚರಂ ।
ಭುವನಂ ನಿಖಿಲಂ ತಾತ ರೋದನಾತ್ತಚ್ಛಿಶೋರ್ವಿಭೋ ॥ ೮ ॥

ಅಥ ತೇ ವ್ಯಾಕುಲಾಸ್ಸರ್ವೇ ದೇವಾಸ್ಸಮುನಯೋ ದ್ರುತಂ ।
ಪಿತಾಮಹಂ ಲೋಕಗುರುಂ ಬ್ರಹ್ಮಾಣಂ ಶರಣಂ ಯಯುಃ ॥ ೯ ॥

ತತ್ರ ಗತ್ವಾ ಚ ತೇ ದೇವಾ ಮುನಯಶ್ಚ ಸವಾಸವಾಃ ।
ಪ್ರಣಮ್ಯ ಚ ಸುಸಂಸ್ತುತ್ಯ ಪ್ರೋಚುಸ್ತಂ ಪರಮೇಷ್ಠಿನಂ ॥ ೧೦ ॥

॥ ದೇವಾ ಊಚುಃ ॥

ಲೋಕಾಧೀಶ ಸುರಾಧೀಶ ಭಯಂನಸ್ಸಮುಪಸ್ಥಿತಂ ।
ತನ್ನಾಶಯ ಮಹಾಯೋಗಿನ್ ಜಾತೋಽಯಂ ಹ್ಯದ್ಭುತೋ ರವಃ ॥ ೧೧ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಬ್ರಹ್ಮಾ ಲೋಕಪಿತಾಮಹಃ ।
ಗಂತುಮೈಚ್ಛತ್ತತಸ್ತತ್ರ ಕಿಮೇತದಿತಿ ವಿಸ್ಮಿತಃ ॥ ೧೨ ॥

---

೮. ಓ ಬ್ರಾಹ್ಮಣೋತ್ತಮ, ಹೆಚ್ಚಾಗಿ ಹೇಳಿಯೇನು? ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ, ಆ ಶಿಶುವಿನ ಅಳುವಿನಿಂದ ತಲ್ಲಣಿಸಿಹೋಯಿತು.

೯. ಆಗ ದೇವತೆಗಳೆಲ್ಲರೂ ಕಳವಳಪಡುತ್ತಾ ಮುನಿಗಳೊಡನೆ, ಬೇಗಬೇಗನೆ ಬ್ರಹ್ಮನ ಬಳಿಗೆ ತೆರಳಿ ಆ ಲೋಕಗುರುವಾದ ಪಿತಾಮಹನನ್ನು ಮರೆಹೊಕ್ಕರು.

೧೦. ಅಲ್ಲಿಗೆ ಹೋದಮೇಲೆ, ಇಂದ್ರಾದಿದೇವತೆಗಳೂ ಋಷಿಗಳೂ ಬ್ರಹ್ಮನಿಗೆ ನಮಸ್ಕಾರಮಾಡಿ, ಚೆನ್ನಾಗಿ ಸ್ತೋತ್ರಮಾಡಿ, ಬಳಿಕ ಆ ಪರಮೇಷ್ಠಿಯನ್ನು ಕುರಿತು,

೧೧. ಓ ಲೋಕನಾಥ, ಸುರಾಧೀಶ್ವರ, ನಮಗೆ ಈಗ ಒದಗಿರುವ ಭಯವನ್ನು ಹೋಗಲಾಡಿಸು. ಓ ಯೋಗಿಶ್ರೇಷ್ಠ, ಇದಾವುದೋ ಒಂದು ಆತ್ಯಾಶ್ಚರ್ಯಕರವಾದ ಶಬ್ದವು ಹೊಸದಾಗಿ ಕೇಳಿಬರುತ್ತಿದೆ ಎಂದರು.

೧೨. ಓ ವ್ಯಾಸ, ಇಂತೆಂದು ಆ ದೇವತೆಗಳು ಆಡಿದುದನ್ನು ಕೇಳಿ ಪ್ರಪಂಚಕ್ಕೆ ಪಿತಾಮಹನಾದ ಆ ಬ್ರಹ್ಮನು, ಇದೇನೆಂದು ಅಚ್ಚರಿಗೊಂಡು ಆ ಶಬ್ದವು ಬರುನೆಡೆಯಲ್ಲಿಗೆ ಅಲ್ಲಿಂದ ಹೊರಡಲೆಳಸಿದನು.

ತತೋ ಬ್ರಹ್ಮಾ ಸುರೈಸ್ಸಾರ್ತಾವತರತ್ಸತ್ಯಲೋಕತಃ ।
ರಸಾಂತ ಜ್ಞಾತುಮಿಚ್ಛರ್ಸ ಸಮುದ್ರಮುಗಮತ್ತದಾ ॥ ೧೩ ॥

ಯಾವತ್ತತ್ರಾಗತೋ ಬ್ರಹ್ಮಾ ಸರ್ವಲೋಕಪಿತಾಮಹಃ ।
ತಾವತ್ಸಮುದ್ರಸ್ಯೋತ್ಸಂಗೇ ತಂ ಬಾಲಂ ಸ ದದರ್ಶ ಹ ॥ ೧೪ ॥

ಆಗತಂ ವಿಧಿಮಾಲೋಕ್ಯ ದೇವರೂಪ್ಯಥ ಸಾಗರಃ ।
ಪ್ರಣಮ್ಯ ಶಿರಸಾ ಬಾಲಂ ತಸ್ಯೋತ್ಸಂಗೇ ನ್ಯವೇಶಯತ್ ॥ ೧೫ ॥

ತತೋ ಬ್ರಹ್ಮಾಬ್ರವೀದ್ವಾಕ್ಯಂ ಸಾಗರಂ ವಿಸ್ಮಯಾನ್ವಿತಃ ।
ಜಲರಾಶೇ ದ್ರುತಂ ಬ್ರೂಹಿ ಕಸ್ಯಾಯಂ ಶಿಶುರದ್ಭುತಃ ॥ ೧೬ ॥

॥ ಸನತ್ಕುಮಾರ ಉವಾಚ ॥

ಬ್ರಹ್ಮಣೋ ವಾಕ್ಯಮಾಕರ್ಣ್ಯ ಮುದಿತಸ್ಸಾಗರಸ್ತದಾ ।
ಪ್ರತ್ಯುವಾಚ ಪ್ರಜೇಶಂ ಸ ನತ್ವಾ ಸ್ತುತ್ವಾ ಕೃತಾಂಜಲಿಃ ॥ ೧೭ ॥

---

೧೩. ಅಪ್ಪಾ, ಮುನಿಯೇ, ಆಮೇಲೆ ಬ್ರಹ್ಮನು ದೇವತೆಗಳೊಡನೆ ಸತ್ಯಲೋಕದಿಂದ ಭೂಮಿಗೆ ಇಳಿದುಬಂದು ಆ ಶಬ್ದವಾವುದೆಂದು ತಿಳಿಯಲು ಸಮುದ್ರಾಭಿಮುಖನಾಗಿ ತೆರಳಿದನು.

೧೪. ಸರ್ವಲೋಕಪಿತಾಮಹನಾದ ಬ್ರಹ್ಮನು ಆ ಸಮುದ್ರವನ್ನು ತಲುಪುವಷ್ಟರಲ್ಲಿಯೇ, ಆ ಸಮುದ್ರದಂಚಿನಲ್ಲಿ ಅಳುತ್ತಿರುವ ಮಗುವನ್ನು ಕಂಡನು.

೧೫. ಬ್ರಹ್ಮನು ಅಲ್ಲಿಗೆ ಬಂದುದನ್ನು ಕಂಡು, ಸಾಗರನು ದೇವತಾರೂಪವನ್ನು ಧರಿಸಿ, ಬಂದು ತಲೆಬಾಗಿ ಆತನಿಗೆ ನಮಸ್ಕರಿಸಿ ಆ ಬ್ರಹ್ಮನ ತೊಡೆಯಮೇಲೆ ಆ ಶಿಶುವನ್ನು ಮಲಗಿಸಿದನು.

೧೬. ಅನಂತರ ಆಶ್ಚರ್ಯಚಕಿತನಾದ ಬ್ರಹ್ಮನು ಸಾಗರನನ್ನು ಕುರಿತು, ಎಲೈ ಸಮುದ್ರನೇ, ಅದ್ಭುತವಾದ ಈ ಶಿಶುವು ಯಾರದು? ಬೇಗನೆ ಹೇಳು ಎಂದನು.

೧೭. ಓ ವ್ಯಾಸ, ಬ್ರಹ್ಮನ ಮಾತನ್ನು ಕೇಳಿ ಸಾಗರನು ಹರ್ಷವನ್ನು ತಾಳಿ, ಸೃಷ್ಟಿಕರ್ತನಾದ ಆ ಬ್ರಹ್ಮನನ್ನು ನಮಸ್ಕರಿಸಿ, ಸ್ತೋತ್ರಮಾಡಿ, ಕೈಮುಗಿದುಕೊಂಡು,

॥ ಸಮುದ್ರ ಉವಾಚ ॥

ಭೋ ಭೋ ಬ್ರಹ್ಮನ್ ಮಯಾ ಪ್ರಾಪ್ತೋ ಬಾಲಕೋಽಯಮಜಾನತಾ ।
ಪ್ರಭವಂ ಸಿಂಧುಗಂಗಾಯಾಮುಕಸ್ಮಾತ್ಸರ್ವಲೋಕಪ ॥ ೧೮ ॥

ಜಾತಕರ್ಮಾದಿಸಂಸ್ಕಾರಾನ್ ಕುರುಷ್ವಾಸ್ಯ ಜಗದ್ಗುರೋ ।
ಜಾತಕೋಕ್ತಫಲಂ ಸರ್ವಂ ವಿಧಾತರ್ವಕ್ತುಮರ್ಹಸಿ ॥ ೧೯ ॥

॥ ಸನತ್ಕುಮಾರ ಉವಾಚ ॥

ಏವಂ ವದತಿ ಪಾಥೋಧೌ ಸ ಬಾಲಸ್ಸಾಗರಾತ್ಮಜಃ ।
ಬ್ರಹ್ಮಾಣಮಗ್ರಹೀತ್ಕಂಠೇ ವಿಧುನ್ವಂತಂ ಮುಹುರ್ಮುಹುಃ ॥ ೨೦ ॥

ವಿಧೂನನಂ ಚ ತಸ್ಯೈವಂ ಸರ್ವಲೋಕಕೃತೋ ವಿಧೇಃ ।
ಪೀಡಿತಸ್ಯ ಚ ಕಾಲೇಯ ನೇತ್ರಾಭ್ಯಾಮಗಮಜ್ಜಲಂ ॥ ೨೧ ॥

ಕರಾಭ್ಯಾಮಬ್ಧಿಜಾತಸ್ಯ ತತ್ಸುತಸ್ಯ ಮಹೌಜಸಃ ।
ಕಥಂಚಿನ್ಮುಕ್ತಕಂಠಸ್ತು ಬ್ರಹ್ಮಾ ಪ್ರೋವಾಚ ಸಾದರಂ ॥ ೨೨ ॥

---

೧೮. ಸರ್ವ ಪ್ರಪಂಚಕ್ಕೂ ಸ್ವಾಮಿಯಾದ ಎಲೈ ಬ್ರಹ್ಮನೇ ಕೇಳು, ನನಗೆ ಈ ಶಿಶುವು ಯಾರದೋ ತಿಳಿಯದು. ಸಿಂಧುಗಂಗೆಯ ಬಳಿಯಲ್ಲಿ ಆಗತಾನೇ ಹುಟ್ಟಿದ ಈ ಶಿಶುವನ್ನು ಕಂಡೆನು.

೧೯. ಓ ಜಗತ್ಪ್ರಭೂ, ಈ ಶಿಶುವಿಗೆ ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ನೀನು ನಡೆಸು. ಈ ಶಿಶುವಿನ ಜಾತಕದಲ್ಲಿ ಹೇಳಿದ ಫಲಗಳೆಲ್ಲವನ್ನೂ ನಮಗೆ ತಿಳಿಸು ಎಂದನು.

೨೦. ಎಲೈ ವ್ಯಾಸನೇ, ಈರೀತಿ ಸಮುದ್ರನು ಹೇಳುತ್ತಿರುವಾಗ, ಆ ಸಾಗರ ಶಿಶುವು ಬ್ರಹ್ಮನು ಪುನಃ ಪುನಃ ಕೊಡವಿಕೊಳ್ಳುತ್ತಿದ್ದರೂ ಬಿಡದೆ ಆತನ ಕುತ್ತಿಗೆಯನ್ನು ಗಟ್ಟಿಯಾಗಿ ಅಮುಕಿ ಹಿಡಿದುಬಿಟ್ಟಿತು.

೨೧. ಈರೀತಿ ಆ ಶಿಶುವಿನಿಂದ ಪೀಡಿತನಾಗಿ ತಲೆಯನ್ನು ಕೊಡವಿಕೊಳ್ಳುತ್ತಿರುವ ಸೃಷ್ಟಿಕರ್ತನಾದ ಆ ಬ್ರಹ್ಮನ ಕಣ್ಣುಗಳಿಂದು ನೀರು ಕಿತ್ತುಕೊಂಡಿತು.

೨೨. ಸಮುದ್ರದಲ್ಲಿ ಹುಟ್ಟಿದ್ದ ಮಹಾಪರಾಕ್ರಮಶಾಲಿಯಾದ ಆ ಶಿಶುವಿನ ಕೈಗಳಿಂದ ತನ್ನ ಕತ್ತನ್ನು ಬಹಳ ಶ್ರಮಪಟ್ಟು ಬಿಡಿಸಿಕೊಂಡು ಬ್ರಹ್ಮನು ಆದರದಿಂದ ಇಂತೆಂದನು.

॥ ಬ್ರಹ್ಮೋವಾಚ ॥

ಶೃಣು ಸಾಗರ ವಕ್ಷ್ಯಾಮಿ ತವಾಸ್ಯ ತನಯಸ್ಯ ಹಿ ।
ಜಾತಕೋಕ್ತಫಲಂ ಸರ್ವಂ ಸಮಾಧಾನರತಃ ಖಲು ॥ ೨೩ ॥

ನೇತ್ರಾಭ್ಯಾಂ ವಿಧೃತಂ ಯಸ್ಮಾದನೇನೈವ ಜಲಂ ಮಮ ।
ತಸ್ಮಾಜ್ಜಲಂಧರೇತೀಹ ಖ್ಯಾತೋ ನಾಮ್ನಾ ಭವತ್ವಸೌ ॥ ೨೪ ॥

ಅಧುನೈವೈಷ ತರುಣಸ್ಸರ್ವಶಾಸ್ತ್ರಾರ್ಥಪಾರಗಃ ।
ಮಹಾಪರಾಕ್ರಮೋ ಧೀರೋ ಯೋದ್ಧಾ ಚ ರಣದುರ್ಮದಃ ॥ ೨೫ ॥

ಭವಿಷ್ಯತಿ ಚ ಗಂಭೀರಸ್ತ್ವಂ ಯಥಾ ಸಮರೇ ಗುಹಃ ।
ಸರ್ವಜೇತಾ ಚ ಸಂಗ್ರಾಮೇ ಸರ್ವಸಂಪದ್ವಿರಾಜಿತಃ ॥ ೨೬ ॥

ದೈತ್ಯಾನಾಮಧಿಪೋ ಬಾಲಃ ಸರ್ವೇಷಾಂ ಚ ಭವಿಷ್ಯತಿ ।
ವಿಷ್ಣೋರಪಿ ಭವೇಜ್ಜೇತಾ ನಕುತಶ್ಚಿತ್ಪರಾಭವಃ ॥ ೨೭ ॥

---

೨೩. ಎಲೈ ಸಮುದ್ರನೇ, ಈ ನಿನ್ನ ಮಗನ ಜಾತಕದ ಫಲವೆಲ್ಲವನ್ನೂ ತಿಳಿಸುವೆನು. ಸಮಾಧಾನದಿಂದ ಕೇಳು.

೨೪. ಇವನಿಂದಲೇ ನನ್ನ ಕಣ್ಣಿನಲ್ಲಿ ನೀರು ಬರುವಂತಾದುದರಿಂದ ಈ ಶಿಶುವು ಜಲಂಧರನೆಂಬ ಹೆಸರಿನಿಂದಲೇ ಪ್ರಸಿದ್ಧನಾಗಲಿ.

೨೫. ಈಗಲೇ ಈ ಶಿಶುವು ಸಕಲ ಶಾಸ್ತ್ರಾರ್ಥಗಳನ್ನು ಸಂಪೂರ್ಣವಾಗಿ ಬಲ್ಲ ತರುಣನಾಗುವನು. ಮಹಾಪರಾಕ್ರಮಶಾಲಿಯೂ, ಧೀರನೂ, ಯುದ್ಧದಲ್ಲಿ ಮಹೋತ್ಸಾಹಶಾಲಿಯಾದ ಯೋಧನೂ ಆಗುವನು.

೨೬. ಇವನು ನಿನ್ನಂತೆ ಗಾಂಭೀರ್ಯವನ್ನು ಪಡೆಯುವನು. ಯುದ್ಧದಲ್ಲಿ ಷಣ್ಮುಖನಿಗೆ ಸಮಾನನಾಗುವನು. ಯುದ್ಧದಲ್ಲಿ ಎದುರಾದವರನ್ನೆಲ್ಲ ಗೆಲ್ಲುವನು. ಎಲ್ಲ ಸಂಪತ್ತುಗಳಿಂದಲೂ ಶೋಭಿಸುವನು.

೨೭. ಈ ಶಿಶುವು ದೈತ್ಯರೆಲ್ಲರಿಗೂ ಅಧಿಪತಿಯಾಗುವನು. ವಿಷ್ಣುವನ್ನೂ ಯುದ್ಧದಲ್ಲಿ ಜಯಿಸುವನು. ಅವನಿಗೆ ಯಾರಿಂದಲೂ ಅಪಜಯವುಂಟಾಗುವುದಿಲ್ಲ.

ಅವಧ್ಯಸ್ಸರ್ವಭೂತಾನಾಂ ವಿನಾ ರುದ್ರಂ ಭವಿಷ್ಯತಿ ।
ಯತ ಏಷ ಸಮುದ್ಭೂತಸ್ತತ್ರೇದಾನೀಂ ಗಮಿಷ್ಯತಿ ॥ ೨೮ ॥

ಪತಿವ್ರತಾಸ್ಯ ಭವಿತಾ ಪತ್ನೀ ಸೌಭಾಗ್ಯವರ್ಧಿನೀ ।
ಸರ್ವಾಂಗಸುಂದರೀ ರಮ್ಯಾ ಪ್ರಿಯವಾಕ್ಷೀಲಸಾಗರಾ ॥ ೨೯ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಶುಕ್ರಮಾಹೂಯ ರಾಜ್ಯೇ ತಂ ಚಾಭ್ಯಷೇಚಯತ್ ।
ಆಮಂತ್ರ್ಯ ಸರಿತಾಂ ನಾಥಂ ಬ್ರಹ್ಮಾಂತರ್ಧಾನಮನ್ವಗಾತ್ ॥ ೩೦ ॥

ಅಥ ತದ್ದರ್ಶನೋತ್ಫುಲ್ಲನಯನಸ್ಸಾಗರಸ್ತದಾ ।
ತಮಾತ್ಮಜಂ ಸಮಾದಾಯ ಸ್ವಗೇಹಮಗಮನ್ಮುದಾ ॥ ೩೧ ॥

ಅಪೋಷಯನ್ಮಹೋಪಾಯೈಸ್ಸ್ತಬಾಲಂ ಮುದಿತಾತ್ಮಕಃ ।
ಸರ್ವಾಂಗಸುಂದರಂ ರಮ್ಯಂ ಮಹಾದ್ಭುತಸುತೇಜಸಂ ॥ ೩೨ ॥

---

೨೮. ಶಿವನನ್ನೊಬ್ಬನನ್ನು ಬಿಟ್ಟು ಉಳಿದ ಯಾವ ಪ್ರಾಣಿಯಿಂದಲೂ ಇವನಿಗೆ ಮರಣವುಂಟಾಗಲಾರದು. ಇವನು ಎಲ್ಲಿ ಹುಟ್ಟಿದನೋ ಅಲ್ಲಿಯೇ ಹೋಗಿ ಸೇರುವನು.

೨೯. ಇವನಿಗೆ ಮಹಾಪತಿವ್ರತೆಯೂ, ಸೌಭಾಗ್ಯಶಾಲಿನಿಯೂ, ಮಹಾ ಲಾವಣ್ಯವತಿಯೂ, ಮನೋಹಾರಿಣಿಯೂ ಪ್ರಿಯವಾದ ಮಾತುಗಳನ್ನಾಡುವವಳೂ, ಒಳ್ಳೆಯ ಶೀಲವತಿಯೂ ಆದ ಓರ್ವ ವಧುವು ಪತ್ನಿಯಾಗುವಳು ಎಂದನು.

೩೦. ಎಲೈ ವ್ಯಾಸನೇ, ಹೀಗೆ ಹೇಳಿ, ದೈತ್ಯಗುರುವಾದ ಶುಕ್ರನನ್ನು ಕರೆದು ಆ ಜಲಂಧರನಿಗೆ ಪಟ್ಟಾಭಿಷೇಕವನ್ನುಮಾಡಿಸಿದನು. ಬಳಿಕ ಸಮುದ್ರನನ್ನು ಬೀಳ್ಕೊಂಡು ಬ್ರಹ್ಮನು ಅಂತರ್ಧಾನವನ್ನು ಹೊಂದಿದನು.

೩೧-೩೨. ಆಮೇಲೆ, ಸಮುದ್ರನು, ತನ್ನ ಮಗನಿಗೆ ಜರುಗಿದ ಪಟ್ಟಾಭಿಷೇಕವನ್ನು ನೋಡಿ, ಸಂತೋಷದಿಂದ ಆ ಮಗನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಸರ್ವಾಂಗಸುಂದರನೂ, ಮಹಾತೇಜಸ್ವಿಯೂ ಆದ ತನ್ನ ಆ ಮಗನನ್ನು ಮಹಾಮಹೋಪಾಯಗಳಿಂದ ಚೆನ್ನಾಗಿ ಬೆಳೆಸಿದನು.

ಅಥಾಂಬುಧಿಸ್ಸಮಾಹೂಯ ಕಾಲನೇಮಿಂ ಮಹಾಸುರಂ ।
ವೃಂದಾಭಿಧಾಂಸುತಾ ತಸ್ಯ ತದ್ಭಾರ್ಯಾರ್ಥಮಯಾಚಕ ॥ ೩೩ ॥

ಕಾಲನೇಮ್ಯಸುರೋ ವೀರೋಽಸುರಾಣಾಂ ಪ್ರವರಸ್ಸುಧೀಃ ।
ಸಾಧು ಮೇನೇಂಬುಧೇರ್ಯಾಚ್ಞಾಂ ಸ್ವಕರ್ಮನಿಪುಣೋ ಮುನೇ ॥ ೩೪ ॥

ಜಲಂಧರಾಯ ವೀರಾಯ ಸಾಗರಪ್ರಭವಾಯ ಚ ।
ದದೌ ಬ್ರಹ್ಮವಿಧಾನೇನ ಸ್ವಸುತಾಂ ಪ್ರಾಣವಲ್ಲಭಾಂ ॥ ೩೫ ॥

ತದೋತ್ಸವೋ ಮಹಾನಾಸೀದ್ವಿವಾಹೇ ಚ ತಯೋಸ್ತದಾ ।
ಸುಖಂ ಪ್ರಾಪುರ್ನದಾ ನದ್ಯೋಽಸುರಾಶ್ಚೈವಾಖಿಲಾ ಮುನೇ ॥ ೩೬ ॥

ಸಮುದ್ರೋಽತಿ ಸುಖಂ ಪ್ರಾಪ ಸುತಂ ದೃಷ್ಟ್ವಾ ಹಿ ಸಸ್ತ್ರಿಯಂ ।
ದಾನಂ ದದೌ ದ್ವಿಜಾತಿಭ್ಯೋಽಪ್ಯನ್ಯೇಭ್ಯಶ್ಚ ಯಥಾವಿಧಿ ॥ ೩೭ ॥

---

೩೩. ಅನಂತರ ಆ ಸಾಗರನು ಕಾಲನೇಮಿಯೆಂಬ ಅಸುರಶ್ರೇಷ್ಠನನ್ನು ಕರೆದು ವೃಂದೆಯೆಂಬ ಆತನ ಮಗಳನ್ನು ಜಲಂಧರನಿಗೆ ಮದುವೆಮಾಡಿಕೊಡುವಂತೆ ಕೇಳಿದನು.

೩೪-೩೫ ಮಹಾಧೀಮಂತನೂ, ಸ್ವಕರ್ಮಕುಶಲನೂ ಅಸುರಶ್ರೇಷ್ಠನೂ ಆದ ಕಾಲನೇಮಿಯು, ಸಾಗರನ ಈ ಪ್ರಾರ್ಥನೆಯನ್ನು ಒಳ್ಳೆಯದೆಂದೇ ಭಾವಿಸಿ ತನ್ನ ಪ್ರಾಣಗಳಿಗಿಂತಲೂ ಪ್ರಿಯಳಾದ ತನ್ನ ಮಗಳು ವೃಂದೆಯನ್ನು ಸಾಗರಾತ್ಮಜನಾದ ವೀರನಾದ ಜಲಂಧರನಿಗೆ ಕೊಟ್ಟು, ಬ್ರಾಹ್ಮವಿವಾಹವಿಧಿಗನುಸಾರವಾಗಿ ಮದುವೆ ಮಾಡಿದನು.

೩೬. ಎಲೈ ಮುನಿಯೇ, ಅವರ ಮದುವೆಯು ಬಹಳ ವೈಭವದಿಂದ ಜರುಗಿತು. ನದೀನದಗಳೂ, ಅಸುರರೂ, ಎಲ್ಲರೂ ಸೌಖ್ಯವನ್ನು ತಾಳಿದರು.

೩೭. ಆ ಸಮುದ್ರನು ತನ್ನ ಸುತನು ಸಪತ್ನೀಕನಾದುದನ್ನು ಕಂಡು ಬಹಳ ಸುಖಿತನಾಗಿ, ಬ್ರಾಹ್ಮಣರಿಗೂ, ಇತರರಿಗೂ, ವಿಧಿಯುಕ್ತವಾಗಿ ಅನೇಕ ದಾನಗಳನ್ನು ಮಾಡಿದನು.

ಯೇ ದೇವೈರ್ನಿರ್ಜಿತಾಃ ಪೂರ್ವಂ ದೈತ್ಯಾಃ ಪಾತಾಲಸಂಸ್ಥಿತಾಃ ।
ತೇ ಹಿ ಭೂಮಂಡಲಂ ಯಾತಾ ನಿರ್ಭಯಾಸ್ತಮುಪಾಶ್ರಿತಾಃ ॥ ೩೮ ॥

ತೇ ಕಾಲನೇಮಿ ಪ್ರಮುಖಾಸ್ತತೋಽಸುರಾ
ಸ್ತಸ್ಮೈ ಸುತಾಂ ಸಿಂಧುಸುತಾಯ ದತ್ವಾ ।
ಬಭೂವುರತ್ಯಂತಮುದಾನ್ವಿತಾ ಹಿ
ತಮಾಶ್ರಿತಾ ದೇವವಿನಿರ್ಜಯಾಯ ॥ ೩೯ ॥

ಸ ಚಾಪಿ ವೀರೋಽಬುಧಿಬಾಲಕೋಽಸೌ
ಜಲಂಧರಾಖ್ಯೋಽಸುರವೀರವೀರಃ ।
ಸಂಪ್ರಾಪ್ಯ ಭಾರ್ಯಾಮತಿಸುಂದರೀಂ ವಶೀ
ಚಕಾರ ರಾಜ್ಯಂ ಹಿ ಕವಿಪ್ರಭಾವಾತ್ ॥ ೪೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರವಧೋಪಾಖ್ಯಾನೇ
ಜಲಂಧರೋತ್ಪತ್ತಿವಿವಾಹವರ್ಣನಂ ನಾಮ
ಚತುರ್ದಶೋಽಧ್ಯಾಯಃ.

---

೩೮. ಹಿಂದೆ ದೇವತೆಗಳಿಂದ ಸೋಲಿಸಲ್ಪಟ್ಟು ಪಾತಾಳದಲ್ಲಿ ಅಡಗಿಕೊಂಡಿದ್ದ ದೈತ್ಯರೆಲ್ಲರೂ ಈಗ ನಿರ್ಭೀತರಾಗಿ ಭೂಮಂಡಲಕ್ಕೆ ಬಂದು ಆ ಜಲಂಧರನನ್ನು ಆಶ್ರಯಿಸಿ ನಿಂತರು.

೩೯. ಕಾಲನೇಮಿಯೇ ಮೊದಲಾದ ಆ ದೈತ್ಯರೆಲ್ಲರೂ, ತಮ್ಮ ಮಗಳನ್ನು ಆ ಸಾಗರಸುತನಾದ ಜಲಂಧರನಿಗಿತ್ತು, ಅವನನ್ನಾಶ್ರಯಿಸಿಕೊಂಡು ದೇವತೆಗಳನ್ನು ಗೆಲ್ಲುವೆವೆಂದು ಬಹಳ ಸಂತೋಷದಿಂದ ಇದ್ದರು.

೪೦. ಅಂಬುಧಿಯ ಮಗನೂ, ದೈತ್ಯವೀರರಿಗೆಲ್ಲಾ ಮೊದಲನೆಯವನೂ, ಆದ ಆ ಜಲಂಧರನು ಮಹಾರೂಪವತಿಯಾದ ಮಡದಿಯನ್ನು ಪಡೆದು, ಶುಕ್ರಾಚಾರ್ಯರ ನೀತಿ ಪ್ರಭಾವದಿಂದ ರಾಜ್ಯವನ್ನು ತನ್ನ ಕೈಕೆಳಗಿಟ್ಟುಕೊಂಡನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಯುದ್ಧಖಂಡದಲ್ಲಿ ಜಲಂಧರವಧೋಪಾಖ್ಯಾನದ ಜಲಂಧರೋತ್ಪತ್ತಿ ವಿವಾಹವರ್ಣನವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಪಂಚದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಏಕದಾ ವಾರಿಧಿಸುತೋ ವೃಂದಾಪತಿರುದಾರಧೀಃ ।
ಸಭಾರ್ಯಸ್ಸಂಸ್ಥಿತೋ ವೀರೋಽಸುರೈಸ್ಸರ್ವೈಃ ಸಮನ್ವಿತಃ ॥ ೧ ॥

ತತ್ರಾಜಗಾಮ ಸುಪ್ರೀತಸ್ಸುವರ್ಚಾಸ್ತ್ವಥ ಭಾರ್ಗವಃ ।
ತೇಜಃಪುಂಜೋ ಮೂರ್ತ ಇವ ಭಾಸಯನ್ಸಕಲಾ ದಿಶಃ ॥ ೨ ॥

---

### ಹದಿನೈದನೆಯ ಅಧ್ಯಾಯವು.

೧. ಸನತ್ಕುಮಾರನು ವ್ಯಾಸಮಹರ್ಷಿಯನ್ನು ಕುರಿತು ಹೇಳತೊಡಗಿದನು. ಒಂದಾನೊಂದು ಸಲ ಸಾಗರಪುತ್ರನೂ, ವೃಂದಾಪತಿಯೂ ಆದ ಆ ಜಲಂಧರನು ತನ್ನ ಮಡದಿಯೊಡನೆಯೂ, ಅಸುರವೀರರೆಲ್ಲರೊಡನೆಯೂ ಸಭೆಯಲ್ಲಿ ಕುಳಿತ್ತಿದ್ದನು.

೨. ಆ ಸಮಯದಲ್ಲಿ ಸಾಕಾರವಾಗಿ ಬಂದ ತೇಜಸ್ಸಮೂಹವೋ ಎಂಬಂತೆ, ದಿಕ್ಕುಗಳೆಲ್ಲವನ್ನೂ ಬೆಳಗುತ್ತ ಮಹಾತೇಜಸ್ವಿಯಾದ ಶುಕ್ರಾಚಾರ್ಯನು ಸಂತೋಷದಿಂದ ಅಲ್ಲಿಗೆ ಬಂದನು.

ತಂ ದೃಷ್ಟ್ವಾ ಗುರುಮಾಯಾಂತಮಸುರಾಸ್ತೇಽಖಿಲಾ ದ್ರುತಂ ।
ಪ್ರಣೇಮುಃ ಪ್ರೀತಮನಸಸ್ಸಿಂಧುಪುತ್ರೋಽಪಿ ಸಾದರಂ ॥ ೩ ॥

ದತ್ವಾಶೀರ್ವಚನಂ ತೇಭ್ಯೋ ಭಾರ್ಗವಸ್ತೇಜಸಾಂ ನಿಧಿಃ ।
ನಿಷಸಾದಾಸನೇ ರಮ್ಯೇ ಸಂತಸ್ಥುಸ್ತೇಽಪಿ ಪೂರ್ವವತ್ ॥ ೪ ॥

ಅಥ ಸಿಂಧ್ವಾತ್ಮಜೋ ವೀರೋ ದೃಷ್ಟ್ವಾ ಪ್ರೀತ್ಯಾ ನಿಜಾಂ ಸಭಾಂ ।
ಜಲಂಧರಃ ಪ್ರಸನ್ನೋಽಭೂದನಷ್ಟವರಶಾಸನಃ ॥ ೫ ॥

ತತ್ರಸ್ಥಿತಂ ಛಿನ್ನಶಿರಸಂ ದೃಷ್ಟ್ವಾ ರಾಹುಂ ಸ ದೈತ್ಯರಾಟ್ ।
ಪಪ್ರಚ್ಛ ಭಾರ್ಗವಂ ಶೀಘ್ರಮಿದಂ ಸಾಗರನಂದನಃ ॥ ೬ ॥

॥ ಜಲಂಧರ ಉವಾಚ ॥

ಕೇನೇದಂ ವಿಹಿತಂ ರಾಹೋಶ್ಶಿರಶ್ಛೇದನಕಂ ಪ್ರಭೋ ।
ತದ್ಬ್ರೂಹಿ ನಿಖಿಲಂ ವೃತ್ತಂ ಯಥಾವತ್ತತ್ವತೋ ಗುರೋ ॥ ೭ ॥

---

೩. ಆಗ ತಮ್ಮ ಗುರುವು ಬರುತ್ತಿರುವುದನ್ನು ಕಂಡು, ಆ ಎಲ್ಲ ಅಸುರವೀರರೂ ಸಾಗರಸುತನಾದ ಜಲಂಧರನೂ ಝುಗ್ಗನೆ ಮೇಲೆದ್ದು, ಸಂತೋಷದಿಂದ ಆದರ ಪೂರ್ವಕವಾಗಿ ಆಚಾರ್ಯನಿಗೆ ನಮಸ್ಕರಿಸಿದರು.

೪. ತೇಜೋನಿಧಿಯಾದ ಆ ದೈತ್ಯಗುರುವು ಅವರೆಲ್ಲರನ್ನೂ ಆಶೀರ್ವದಿಸಿ ಮನೋಹರವಾದ ಆಸನದಲ್ಲಿ ಮಂಡಿಸಿದನು. ಬಳಿಕ ಅಸುರರೆಲ್ಲರೂ ತಮ್ಮ ತಮ್ಮ ಪೀಠಗಳಲ್ಲಿ ಮೊದಲಿನಂತೆ ಕುಳಿತುಕೊಂಡರು.

೫. ಅಪ್ರತಿಹತವಾದ ಆಜ್ಞೆಯುಳ್ಳವನೂ, ಧೀರನೂ ಆದ ಆ ಜಲಂಧರನು ತುಂಬಿದ ತನ್ನ ಸಭೆಯನ್ನು ಪ್ರೀತಿಯಿಂದ ನೋಡಿ ಮನಸ್ಸಿನಲ್ಲಿಯೇ ಹಿಗ್ಗಿದನು.

೬-೭. ಆ ಸಭೆಯಲ್ಲಿ ತಲೆಮಾತ್ರವೇ ಉಳಿದಿರುವ ರಾಹುವನ್ನು ಕಂಡು ಆ ಸಾಗರಪುತ್ರನಾದ ದೈತ್ಯೇಶ್ವರನು ಕೂಡಲೇ ಶುಕ್ರಾಚಾರ್ಯರನ್ನು ಕುರಿತು ಎಲೈ ಆಚಾರ್ಯನೆ, ಈ ರಾಹುವಿನ ಶಿರಶ್ಛೇದವನ್ನು ಮಾಡಿದವರು ಯಾರು ? ಈ ಸಂಗತಿ ಯೆಲ್ಲವನ್ನೂ ಇದ್ದುದಿದ್ದಂತೆ ಮರೆಮಾಜದೆ ನಿಜವಾಗಿ ತಿಳಿಸಬೇಕು ಎಂದನು.

॥ ಸನತ್ಕುಮಾರ ಉವಾಚ ॥
ಇತ್ಯಾಕರ್ಣ್ಯ ವಚಸ್ತಸ್ಯ ಸಿಂಧುಪುತ್ರಸ್ಯ ಭಾರ್ಗವಃ ।
ಸ್ಮೃತ್ವಾ ಶಿವಪದಾಂಭೋಜಂ ಪ್ರತ್ಯುವಾಚ ಯಥಾರ್ಥವತ್ ॥ ೮ ॥

॥ ಶುಕ್ರ ಉವಾಚ ॥
ಜಲಂಧರ ಮಹಾವೀರ ಸರ್ವಾಸುರಸಹಾಯಕ ।
ಶೃಣು ವೃತ್ತಾಂತಮಖಿಲಂ ಯಥಾವತ್ಕಥಯಾಮಿ ತೇ ॥ ೯ ॥

ಪುರಾಭವದ್ಬಲಿರ್ವೀರೋ ವಿರೋಚನಸುತೋ ಬಲೀ ।
ಹಿರಣ್ಯಕಶಿಪೋಶ್ಚೈವ ಪ್ರಪೌತ್ರೋ ಧರ್ಮವಿತ್ತಮ ॥ ೧೦ ॥

ಪರಾಜಿತಾಸ್ಸುರಾಸ್ತೇನ ರಮೇಶಂ ಶರಣಂ ಯಯುಃ ।
ಸವಾಸವಾಸ್ಸ್ವವೃತ್ತಾಂತಮಾಚಖ್ಯುಃ ಸ್ವಾರ್ಥಸಾಧಕಾಃ ॥ ೧೧ ॥

ತದಾಜ್ಞಯಾಸುರೈಃ ಸಾರ್ಧಂ ಚಕ್ರುಸ್ಸಂಧಿಮಥೋ ಸುರಾಃ ।
ಸ್ವಕಾರ್ಯಸಿದ್ಧಯೇ ತಾತ ಚ್ಛಲಕರ್ಮವಿಚಕ್ಷಣಾಃ ॥ ೧೨ ॥

---

೮. ಓ ವ್ಯಾಸ, ಹೀಗೆ ಜಲಂಧರನು ನುಡಿದ ಮಾತನ್ನು ಕೇಳಿ, ಭೃಗುಪುತ್ರನಾದ ಆ ಶುಕ್ರನು ಶಿವನ ಪದಕಮಲಗಳನ್ನು ನೆನೆದು ಯಥಾರ್ಥವಾದ ವೃತ್ತಾಂತವನ್ನು ತಿಳಿಸಿದನು.

೯. ಅಸುರರೆಲ್ಲರಿಗೂ, ಬೆಂಬಲವಾದವನೂ, ಮಹಾವೀರನೂ ಆದ ಎಲೈ ಜಲಂಧರನೆ ಕೇಳು. ನಡೆದ ಸಂಗತಿಯೆಲ್ಲವನ್ನೂ ನಿನಗೆ ಇದ್ದುದಿದ್ದಂತೆ ತಿಳಿಸುವೆನು.

೧೦. ಹಿಂದೆ, ಹಿರಣ್ಯಕಶಿಪುವಿನ ಮುಮ್ಮಗನೂ, ವಿರೋಚನನ ಮಗನೂ, ಮಹಾಬಲಿಷ್ಠನೂ, ಧರ್ಮಶೀಲನೂ ಆದ ಬಲಿಯೆಂಬ ಅಸುರನು ಇದ್ದನು.

೧೧. ಆ ಬಲಿಯಿಂದ ಪರಾಜಿತರಾದ ಇಂದ್ರಾದಿದೇವತೆಗಳು ವಿಷ್ಣುವನ್ನು ಮರೆಹೊಕ್ಕು, ಕೇವಲ ಸ್ವಾರ್ಥಪರಾಯಣರಾಗಿ, ತಮ್ಮ ಸಂಗತಿಯನ್ನು ಅರಿಕೆ ಮಾಡಿಕೊಂಡರು.

೧೨. ಆ ವಿಷ್ಣುವಿನ ಅಪ್ಪಣೆಯಮೇರೆಗೆ, ತಮ್ಮ ಕೆಲಸವನ್ನು ಸಾಧಿಸಲೋಸುಗ, ಮೋಸದಲ್ಲಿ ಬಹು ಕುಶಲರಾದ ದೇವತೆಗಳು ಅಸುರರೊಡನೆ ಸಂಧಿಯನ್ನು ಮಾಡಿಕೊಂಡರು.

ಅಥಾಮೃತಾರ್ಥಂ ಸಿಂಧೋಶ್ಚ ಮಂಥನಂ ಚಕ್ರುರಾದರಾತ್ ।
ವಿಷ್ಣೋಸ್ಸಹಾಯಿನಸ್ತೇ ಹಿ ಸುರಾಸ್ಸರ್ವೇಽಸುರೈಸ್ಸಹ ॥ ೧೩ ॥

ತತೋ ರತ್ನೋಪಹರಣಮಾಕಾರ್ಷುರ್ದೈತ್ಯಶತ್ರವಃ ।
ಜಗೃಹುರ್ಯತ್ನತೋ ದೇವಾಃ ಪಪುರಪ್ಯಮೃತಂ ಛಲಾತ್ ॥ ೧೪ ॥

ತತಃ ಪರಾಭವಂ ಚಕ್ರುರಸುರಾಣಾಂ ಸಹಾಯತಃ ।
ವಿಷ್ಣೋಸ್ಸುರಾಸ್ಸಶಕ್ರಾಸ್ತೇಽಮೃತಪಾನಾದ್ಬಲಾನ್ವಿತಾಃ ॥ ೧೫ ॥

ಶಿರಶ್ಛೇದಂ ಚಕಾರಾಸೌ ಪಿಬತಶ್ಚಾಮೃತಂ ಹರಿಃ ।
ರಾಹೋರ್ದೇವಸಭಾಯಾಂ ವೈ ಪಕ್ಷಪಾತೀ ಹರೇಸ್ಸದಾ ॥ ೧೬ ॥

॥ ಸನತ್ಕುಮಾರ ಉವಾಚ ॥

ಏವಂ ಕವಿಸ್ತಸ್ಯ ಶಿರಶ್ಛೇದಂ ರಾಹೋಶ್ಶಶಂಸ ಚ ।
ಅಮೃತಾರ್ಥೇ ಸಮುದ್ರಸ್ಯ ಮಂಥನಂ ದೇವಕಾರಿತಂ ॥ ೧೭ ॥

---

೧೩. ಬಳಿಕ ವಿಷ್ಣುವಿನ ಬೆಂಬಲವುಳ್ಳ ಆ ದೇವತೆಗಳೆಲ್ಲರೂ, ದೈತ್ಯರೊಡನೆ ಕಲೆತು, ಅಮೃತವನ್ನು ಪಡೆಯಲೋಸುಗ ಸಮುದ್ರವನ್ನು ಕಡೆಯಲು ಆರಂಭಿಸಿದರು.

೧೪. ದೈತ್ಯವೈರಿಗಳಾದ ಆ ದೇವತೆಗಳು, ಎಲ್ಲ ರತ್ನಗಳನ್ನೂ ತಾವು ವಶಪಡಿಸಿಕೊಂಡು, ಉಪಾಯದಿಂದ ಅಮೃತವನ್ನು ಸಂಪಾದಿಸಿ, ಮೋಸದಿಂದ ಅದನ್ನು ಕುಡಿದೂಬಿಟ್ಟರು.

೧೫. ಅನಂತರ ವಿಷ್ಣುವಿನ ಸಹಾಯವುಳ್ಳ ಆ ಇಂದ್ರಾದಿದೇವತೆಗಳು, ಅಮೃತಪಾನದಿಂದ ಅತೀವಬಲಿಷ್ಠರಾಗಿ ಅಸುರರೆಲ್ಲರನ್ನೂ ಸೋಲಿಸಿದ್ದರು.

೧೬. ಆಗ ದೇವತೆಗಳ ಗುಂಪಿನಲ್ಲಿ ಸೇರಿ ಅಮೃತವನ್ನು ಕುಡಿಯುತ್ತಿರುವ ರಾಹುವಿನ ತಲೆಯನ್ನು, ಸರ್ವದಾ ದೇವೇಂದ್ರನ ಪಕ್ಷಪಾತಿಯಾದ ವಿಷ್ಣುವು ಕತ್ತರಿಸಿಬಿಟ್ಟನು ಎಂದನು.

೧೭-೧೮. ಎಲೈ ವ್ಯಾಸನೇ, ಈರೀತಿ ಶುಕ್ರಾಚಾರ್ಯನು, ದೇವತೆಗಳೆಲ್ಲರೂ, ಅಮೃತವನ್ನು ಪಡೆಯಲೋಸುಗ, ಸಮುದ್ರವನ್ನು ಕಡೆದ ವಿಷಯವನ್ನೂ, ನಾನಾ

ರತ್ನೋಽಪಹರಣಂ ಚೈವ ದೈತ್ಯಾನಾಂ ಚ ಪರಾಭವಂ ।
ದೇವೈರಮೃತಪಾನಂ ಚ ಕೃತಂ ಸರ್ವಂ ಚ ವಿಸ್ತರಾತ್　　　॥ ೧೮ ॥

ತದಾಕರ್ಣ್ಯ ಮಹಾವೀರೋಽಮ್ಬುಧಿಬಾಲಃ ಪ್ರತಾಪವಾನ್ ।
ಚುಕ್ರೋಧ ಕ್ರೋಧರಕ್ತಾಕ್ಷಸ್ಸ್ವಪಿತುರ್ಮಂಥನಂ ತದಾ　　　॥ ೧೯ ॥

ಅಥ ದೂತಂ ಸಮಾಹೂಯ ಘಸ್ಮರಾಭಿದಮುತ್ತಮಂ ।
ಸರ್ವಂ ಶಶಂಸ ಚರಿತಂ ಯದಾಹ ಗುರುರಾತ್ಮವಾನ್　　　॥ ೨೦ ॥

ಅಥ ತಂ ಪ್ರೇಷಯಾಮಾಸ ಸ್ವದೂತಂ ಶಕ್ರಸನ್ನಿಧೌ ।
ಸಂಮಾನ್ಯ ಬಹುಶಃ ಪ್ರೀತ್ಯಾಽಭಯಂ ದತ್ವಾ ವಿಶಾರದಂ　　　॥ ೨೧ ॥

ದೂತಸ್ತ್ರಿವಿಷ್ಟಪಂ ತಸ್ಯ ಜಗಾಮಾರಮಲಂ ಸುಧೀಃ ।
ಘಸ್ಮರೋಽಂಬುಧಿಬಾಲಸ್ಯ ಸರ್ವದೇವಸಮನ್ವಿತಂ　　　॥ ೨೨ ॥

---

ರತ್ನಗಳನ್ನು ತಾವೇ ತೆಗೆದುಕೊಂಡುದನ್ನೂ, ದೈತ್ಯರು ಸೋತುಹೋದ ಬಗೆಯನ್ನೂ, ದೇವತೆಗಳು ಅಮೃತವನ್ನು ಪಾನಮಾಡಿದುದನ್ನೂ, ರಾಹುವಿನ ತಲೆಯನ್ನು ಕತ್ತರಿಸಿದುದನ್ನೂ ಆ ಜಲಂಧರನಿಗೆ ವಿಸ್ತಾರವಾಗಿ ವರ್ಣಿಸಿದನು.

೧೯. ಆಗ ಪ್ರತಾಪಶಾಲಿಯೂ ಮಹಾವೀರನೂ ಆದ ಆ ಸಾಗರಕುಮಾರನು, ತನ್ನ ತಂದೆಯಾದ ಸಮುದ್ರನನ್ನು ಕಡೆದರೆಂಬುದನ್ನು ಕೇಳಿ, ಕಣ್ಣುಕೆಂಪಡರಿ ಮಹಾ ಕೋಪವನ್ನು ತಾಳಿದನು.

೨೦-೨೧. ಆಮೇಲೆ ಘಸ್ಮರನೆಂಬ ದೂತಶ್ರೇಷ್ಠನನ್ನು ಕರೆದು ಜ್ಞಾನಿಯಾದ ಶುಕ್ರಾಚಾರ್ಯನು ಹೇಳಿದ ಕಥೆಯೆಲ್ಲವನ್ನೂ ಅವನಿಗೆ ತಿಳಿಸಿ, ಕುಶಲನಾದ ಆ ದೂತನನ್ನು ಪ್ರೀತಿಯಿಂದ ಸನ್ಮಾನಿಸಿ, ಅವನಿಗೆ ಅಭಯವಿತ್ತು ಇಂದ್ರನ ಬಳಿಗೆ ಕಳುಹಿಸಿದನು.

೨೨-೨೩. ಮಹಾಕುಶಲನಾದ ಘಸ್ಮರನೆಂಬ, ಆ ಜಲಂಧರನ ದೂತನು, ದೇವತೆಗಳೆಲ್ಲರ ನಿವಾಸವಾದ ಸ್ವರ್ಗಲೋಕವನ್ನು ಸೇರಿ, ಶೀಘ್ರವಾಗಿ ಇಂದ್ರಸಭೆ

ತತ್ರ ಗತ್ವಾ ಸ ದೂತಸ್ತು ಸುಧರ್ಮಾಂ ಪ್ರಾಪ್ಯ ಸತ್ವರಂ ।
ಗರ್ವಾದಖರ್ವಮೌಲಿರ್ಹಿ ದೇವೇಂದ್ರಂ ವಾಕ್ಯಮಬ್ರವೀತ್ ॥ ೨೩ ॥

॥ ಘಸ್ಮರ ಉವಾಚ ॥

ಜಲಂಧರೋಽಬ್ಧಿತನಯಸ್ಸರ್ವದೈತ್ಯಜನೇಶ್ವರಃ ।
ಸುಪ್ರತಾಪೀ ಮಹಾವೀರಸ್ಸ್ವಯಂ ಕವಿಸಹಾಯವಾನ್ ॥ ೨೪ ॥

ದೂತೋಽಹಂ ತಸ್ಯ ವೀರಸ್ಯ ಘಸ್ಮರಾಖ್ಯೋ ನ ಘಸ್ಮರಃ ।
ಪ್ರೇಷಿತಸ್ತೇನ ವೀರೇಣ ತ್ವತ್ಸಕಾಶಮಿಹಾಗತಃ ॥ ೨೫ ॥

ಅವ್ಯಾಹತಾಜ್ಞಸ್ಸರ್ವತ್ರ ಜಲಂಧರ ಉದಗ್ರಧೀಃ ।
ನಿರ್ಜಿತಾಖಿಲದೈತ್ಯಾರಿಸ್ಸ ಯದಾಹ ಶೃಣುಷ್ವ ತತ್ ॥ ೨೬ ॥

॥ ಜಲಂಧರ ಉವಾಚ ॥

ಕಸ್ಮಾತ್ತ್ವಯಾ ಮಮ ಪಿತಾ ಮಥಿತಸ್ಸಾಗರೋಽದ್ರಿಣಾ ।
ನೀತಾನಿ ಸರ್ವರತ್ನಾನಿ ಪಿತುರ್ಮೇ ದೇವತಾಧಮ ॥ ೨೭ ॥

---

ಯಾದ ಸುಧರ್ಮೆಯನ್ನು ಹೊಕ್ಕು, ಗರ್ವದಿಂದ ತಲೆಯನ್ನು ತಗ್ಗಿಸದೆ ದೇವೇಂದ್ರ ನನ್ನು ಕುರಿತು ಈರೀತಿ ನುಡಿದನು.

೨೪. ಸಮುದ್ರಪುತ್ರನೂ, ಸರ್ವದೈತ್ಯರಿಗೂ ಅಧಿಪತಿಯೂ ಆದ ಜಲಂಧರ ನೆಂಬ ಮಹಾಪ್ರತಾಪಶಾಲಿಯಿರುವನು. ಅವನು ಮಹಾವೀರನು. ಶುಕ್ರಾಚಾರ್ಯನು ಅವನಿಗೆ ಸಹಾಯವಾಗಿರುವನು

೨೫. ಘಸ್ಮರನೆಂಬ ಹೆಸರುಳ್ಳ ನಾನು ಆ ದೈತ್ಯೇಶ್ವರನ ದೂತನೆಂದು ತಿಳಿ. ಬರೀ ತಿಂಡಿಪೋತನೆಂದು ತಿಳಿಯಬೇಡ. ಆ ವೀರನು ನಿನ್ನ ಬಳಿಗೆ ಕಳುಹಿಸಿದುದ ರಿಂದ ನಾನಿಲ್ಲಿಗೆ ಬಂದಿರುವನು.

೨೬. ನಿಪುಣಾಗ್ರೇಸರನಾದ ಆ ಜಲಂಧರನು, ಎಲ್ಲೆಡೆಯಲ್ಲೂ ಅಪ್ರತಿಹತ ವಾದ ಆಜ್ಞೆಯುಳ್ಳವನು. ಸಕಲ ದೇವತೆಗಳನ್ನೂ ಸೋಲಿಸಿದ ಆ ವೀರನು ಏನು ಹೇಳಿರುವನೆಂಬುದನ್ನು ಹೇಳುವೆನು ಕೇಳು.

೨೭. ನನ್ನ ತಂದೆಯಾದ ಸಾಗರನನ್ನು ನೀನು ಏಕೆ ಪರ್ವತದಿಂದ ಮಥಿಸಿದೆ? ಎಲೈ ದೇವತಾಧಮನೇ, ನಮ್ಮ ತಂದೆಯ ಬಳಿಯಿದ್ದ ರತ್ನಗಳೆಲ್ಲವನ್ನೂ ದೋಚಿ ಕೊಂಡು ಹೋಗಿರುವೆಯಲ್ಲವೇ ?

ಉಚಿತಂ ನ ಕೃತಂ ತೇಽದ್ಯ ತಾನಿ ಶೀಘ್ರಂ ಪ್ರಯಚ್ಛ ಮೇ ।
ಮಮಾಯಾಹಿ ವಿಚಾರ್ಯೇತ್ಥಂ ಶರಣಂ ದೈವತೈಸ್ಸಹ ॥ ೨೮ ॥

ಅನ್ಯಥಾ ತೇ ಭಯಂ ಭೂರಿ ಭವಿಷ್ಯತಿ ಸುರಾಧಮ ।
ರಾಜ್ಯವಿಧ್ವಂಸನಂ ಚೈವ ಸತ್ಯಮೇತದ್ಬ್ರವೀಮ್ಯಹಂ ॥ ೨೯ ॥

॥ ಸನತ್ಕುಮಾರ ಉವಾಚ ॥

ಇತಿ ದೂತವಚಶ್ಶ್ರುತ್ವಾ ವಿಸ್ಮಿತಸ್ತ್ರಿದಶಾಧಿಪಃ ।
ಉವಾಚ ತಂ ಸ್ಮರನ್ನಿಂದ್ರೋ ಭಯರೋಷಸಮನ್ವಿತಃ ॥ ೩೦ ॥

ಅದ್ರಯೋ ಮದ್ಭಯಾತ್ತ್ರಸ್ತಾಸ್ಸ್ವಕುಕ್ಷಿಸ್ಥಾ ಯತಃ ಕೃತಾಃ ।
ಅನ್ಯೇಽಪಿ ಮದ್ದ್ವಿಷಸ್ತೇನ ರಕ್ಷಿತಾ ದಿತಿಜಾಃ ಪುರಾ ॥ ೩೧ ॥

ತಸ್ಮಾತ್ತದ್ರತ್ನಜಾತಂ ತು ಮಯಾ ಸರ್ವಂ ಹೃತಂ ಕಿಲ ।
ನ ತಿಷ್ಠತಿ ಮಮ ದ್ರೋಹೀ ಸುಖಂ ಸತ್ಯಂ ಬ್ರವೀಮ್ಯಹಂ ॥ ೩೨ ॥

---

೨೮. ನೀನು ಮಾಡಿದುದು ಸರಿಯಲ್ಲ. ಈಗ ಅದೆಲ್ಲವನ್ನೂ ನನಗೆ ತಂದೊಪ್ಪಿಸು. ನಾನು ಹೇಳಿದಂತೆ, ನೀನು ವಿಚಾರಮಾಡಿ, ದೇವತೆಗಳೆಲ್ಲರೊಡನೆಯೂ, ನನಗೆ ಶರಣಾಗತನಾಗು.

೨೯. ಇಲ್ಲದೆಹೋದರೆ, ಎಲೈ ಸುರಾಧಮ, ನಿನಗೆ ಬಹಳ ತೊಂದರೆಯಾಗುವುದು. ಅಲ್ಲದೆ ನಿನ್ನ ರಾಜ್ಯವೂ ನುಚ್ಚುನೂರಾಗುವುದು. ಇದನ್ನು ನಿನಗೆ ಖಂಡಿತವಾಗಿ ತಿಳಿಸುತ್ತೇನೆ ಎಂದನು.

೩೦. ಹೀಗೆ ದೂತನು ಹೇಳಿದ ಮಾತನ್ನು ಕೇಳಿ, ದೇವತೆಗಳಿಗೆಲ್ಲಾ ಒಡೆಯನಾದ ಇಂದ್ರನು, ಅದೆಲ್ಲವನ್ನೂ ಜ್ಞಾಪಿಸಿಕೊಂಡು, ಭಯದಿಂದಲೂ, ಕೋಪದಿಂದಲೂ ಕೂಡಿ ಆ ದೂತನನ್ನು ಇಂತೆಂದನು.

೩೧. ಎಲೆ ದೂತನೇ ಕೇಳು. ನನ್ನ ಭಯದಿಂದ ತತ್ತಳಿಸಿ ಓಡಿಹೋದ ಪರ್ವತಗಳೆಲ್ಲವನ್ನೂ ಆ ಸಮುದ್ರನು ತನ್ನ ಹೊಟ್ಟೆಯಲ್ಲಿಟ್ಟುಕೊಂಡು ಕಾಪಾಡಲಿಲ್ಲವೇ? ಹಿಂದೆಯೂ ಸಹ ನನ್ನ ಶತ್ರುಗಳಾದ ದೈತ್ಯರನ್ನು ಹೀಗೆಯೇ ಕಾಪಾಡಿರುವನು.

೩೨. ಆದುದರಿಂದಲೇ ಸಮುದ್ರನ ಎಲ್ಲ ರತ್ನಗಳನ್ನೂ ನಾನು ಕಸಿದುಕೊಂಡಿರುವೆನು. ನನಗೆ ದ್ರೋಹವನ್ನು ಮಾಡಿದವನು ಎಂದಿಗೂ ಸುಖವಾಗಿರುವುದಿಲ್ಲ. ಇದನ್ನು ಖಂಡಿತವಾಗಿ ಹೇಳುತ್ತೇನೆ.

ಶಂಖೋಽಪ್ಯೇವಂ ಪುರಾ ದೈತ್ಯೋ ಮಾಂ ದ್ವಿಷನ್ಸಾಗರಾತ್ಮಜಃ ।
ಅಭವನ್ಮೂಢಚಿತ್ತಸ್ತು ಸಾಧುಸಂಗಾತ್ಸಮುಜ್ಝಿತಃ ॥ ೩೩ ॥

ಮಮಾನುಜೇನ ಹರಿಣಾ ನಿಹತಸ್ಸ ಹಿ ಪಾಪಧೀಃ ।
ಹಿಂಸಕಸ್ಸಾಧುಸಂಘಸ್ಯ ಪಾಪಿಷ್ಠಸ್ಸಾಗರೋದರೇ ॥ ೩೪ ॥

ತದ್ಗಚ್ಛ ದೂತ ಶೀಘ್ರಂ ತ್ವಂ ಕಥಯಸ್ವಾಸ್ಯ ತತ್ತ್ವತಃ ।
ಅಬ್ಧಿಪುತ್ರಸ್ಯ ಸರ್ವೇ ಹಿ ಸಿಂಧೋರ್ಮಂಥನಕಾರಣಂ ॥ ೩೫ ॥

॥ ಸನತ್ಕುಮಾರ ಉವಾಚ ॥

ಇತ್ಥಂ ವಿಸರ್ಜಿತೋ ದೂತೋ ಘಸ್ಮರಾಖ್ಯಸ್ಸುಬುದ್ಧಿಮಾನ್ ।
ತದೇಂದ್ರೇಣಾಗಮತ್ತೂರ್ಣಂ ಯತ್ರ ವೀರೋ ಜಲಂಧರಃ ॥ ೩೬ ॥

ತದಿದಂ ವಚನಂ ದೈತ್ಯರಾಜೋ ಹಿ ತೇನ ಧೀಮತಾ ।
ಕಥಿತೋ ನಿಖಿಲಂ ಶಕ್ರಪ್ರೋಕ್ತಂ ದೂತೇನ ವೈ ತದಾ ॥ ೩೭ ॥

---

೩೩. ಹಿಂದೆ ಸಾಗರಪುತ್ರನಾದ ಶಂಖನೆಂಬ ದೈತ್ಯನೂ ಕೂಡ, ವಿವೇಕವಿಲ್ಲದೆ ಸತ್ಸಹವಾಸವನ್ನು ಬಿಟ್ಟು, ನನ್ನನ್ನು ದ್ವೇಷಿಸತೊಡಗಿದನು.

೩೪. ಸತ್ಪುರುಷರನ್ನು ಹಿಂಸೆಮಾಡುತ್ತಿದ್ದ ಆ ಪಾಪಿಷ್ಠನು ನನ್ನ ತಮ್ಮನಾದ ವಿಷ್ಣುವಿನಿಂದ ಸಮುದ್ರ-ಮಧ್ಯದಲ್ಲಿಯೇ ಕೊಲ್ಲಲ್ಪಟ್ಟನು.

೩೫. ಆದುದರಿಂದ ಎಲೈ ದೂತನೇ ನೀನು ಬೇಗ ಹೋಗಿ ಸಾಗರಸುತನಾದ ಆ ಜಲಂಧರನಿಗೆ, ಸಮುದ್ರವನ್ನು ಮಥಿಸಲು ಇದ್ದ ಈ ಕಾರಣಗಳೆಲ್ಲವನ್ನೂ ನಿಜವಾಗಿ ತಿಳಿಸು ಎಂದನು.

೩೬-೩೭. ಹೀಗೆಂಬುದಾಗಿ ಇಂದ್ರನು ಹೇಳಿಕಳುಹಿಸಲು ಆ ಘಸ್ಮರನೆಂಬ ದೂತನು, ಜಲಂಧರನಿರುವೆಡೆಗೆ ಬೇಗನೆ ಬಂದು ದೈತ್ಯರಾಜನಾದ ಜಲಂಧರನಿಗೆ ಇಂದ್ರನು ಹೇಳಿದ ಎಲ್ಲ ಮಾತುಗಳನ್ನೂ ಚಾಚೂ ತಪ್ಪದೆ ತಿಳಿಸಿದನು.

ತನ್ನಿಶಮ್ಯ ತತೋ ದೈತ್ಯೋ ರೋಷಾತ್ಪ್ರಸ್ಫುರಿತಾಧರಃ ।
ಉದ್ಯೋಗಮಕರೋತ್ತೂರ್ಣಂ ಸರ್ವದೇವಜಿಗೀಷಯಾ ॥ ೩೮ ॥

ತದೋದ್ಯೋಗೇಽಸುರೇಂದ್ರಸ್ಯ ದಿಗ್ಭ್ಯಃ ಪಾತಾಲತಸ್ತಥಾ ।
ದಿತಿಜಾಃ ಪ್ರತ್ಯಪದ್ಯಂತ ಕೋಟಿಶಃ ಕೋಟಿಶಸ್ತಥಾ ॥ ೩೯ ॥

ಅಥ ಶುಂಭನಿಶುಂಭಾದ್ಯೈರ್ಬಲಾಧಿಪತಿಕೋಟಿಭಿಃ ।
ನಿರ್ಜಗಾಮ ಮಹಾವೀರಃ ಸಿಂಧುಪುತ್ರಃ ಪ್ರತಾಪವಾನ್ ॥ ೪೦ ॥

ಪ್ರಾಪ ತ್ರಿವಿಷ್ಟಪಂ ಸದ್ಯಃ ಸರ್ವಸೈನ್ಯಸಮಾವೃತಃ ।
ದಧ್ಮೌ ಶಂಖಂ ಜಲಧಿಜೋ ನೇದುರ್ವೀರಾಶ್ಚ ಸರ್ವತಃ ॥ ೪೧ ॥

ಗತ್ವಾ ತ್ರಿವಿಷ್ಟಪಂ ದೈತ್ಯೋ ನಂದನಾಧಿಷ್ಠಿತೋಽಭವತ್ ।
ಸರ್ವಸೈನ್ಯಂ ಸಮಾವೃತ್ಯ ಕುರ್ವಾಣಃ ಸಿಂಹವದ್ರವಂ ॥ ೪೨ ॥

---

೩೮. ಆ ಮಾತನ್ನು ಕೇಳಿದೊಡನೆಯೇ ಆ ದೈತ್ಯರಾಜನು ಕೋಪದಿಂದ ತುಟಿಗಳು ಅಲುಗುತ್ತಿರಲು ಬೇಗನೆ ದೇವತೆಗಳೆಲ್ಲರನ್ನೂ ಜಯಿಸಬೇಕೆಂದು ಸನ್ನಾಹ ಮಾಡಿದನು.

೩೯. ಆಗ ಆ ಅಸುರಾಧಿಪತಿಯ ಆಜ್ಞೆಯಂತೆ ಯುದ್ಧೋದ್ಯಮದಲ್ಲಿ ಭಾಗ ವಹಿಸಲು ಕೋಟಿಗಟ್ಟಲೆ ದೈತ್ಯರು ಗುಂಪುಗುಂಪಾಗಿ ನಾನಾದಿಕ್ಕುಗಳಿಂದಲೂ ಪಾತಾಳದಿಂದಲೂ ಬರತೊಡಗಿದರು.

೪೦. ಬಳಿಕ ಸಾಗರಸೂನುವೂ ಮಹಾಪ್ರತಾಪಶಾಲಿಯೂ ಆದ ಜಲಂಧರನು ಶುಂಭನಿಶುಂಭರೇ ಮೊದಲಾದ ಕೋಟಿ ಸೇನಾಪತಿಗಳೊಡನೆ ದಂಡಯಾತ್ರೆಗೆ ಹೊರಟನು.

೪೧. ಅವನು ಒಡನೆಯೇ ತನ್ನ ಎಲ್ಲ ಸೈನ್ಯಗಳಿಂದಲೂ ಕೂಡಿ ಸ್ವರ್ಗಲೋಕ ವನ್ನು ಸೇರಿದನು. ಅಲ್ಲಿ ಸೇರಿದಮೇಲೆ, ಆ ಸಮುದ್ರಪುತ್ರನು ತನ್ನ ಶಂಖವನ್ನು ಊದಿದನು. ಉಳಿದೆಲ್ಲ ವೀರರೂ ಸುತ್ತಲೂ ಕೋಲಾಹಲಮಾಡಿದರು.

೪೨. ಆ ದೈತ್ಯರಾಜನು ತನ್ನೆಲ್ಲ ಸೈನಿಕರೊಡನೆ, ಸಿಂಹನಾದವನ್ನು ಮಾಡುತ್ತಾ ನಂದನವನದಲ್ಲಿ ಬೀಡುಬಿಟ್ಟನು.

ಪುರಮಾವೃತ್ಯ ತಿಷ್ಠತ್ತದ್ದೃಷ್ಟ್ವಾ ಸೈನ್ಯಬಲಂ ಮಹತ್ ।
ನಿರ್ಯಯುಸ್ತ್ವಮರಾವತ್ಯಾ ದೇವಾ ಯುದ್ಧಾಯ ದಂಶಿತಾಃ ॥ ೪೩ ॥

ತತಸ್ಸಮಭವದ್ಯುದ್ಧಂ ದೇವದಾನವಸೇನಯೋಃ ।
ಮುಸಲೈಃ ಪರಿಘೈರ್ಬಾಣೈರ್ಗದಾಪರಶುಶಕ್ತಿಭಿಃ ॥ ೪೪ ॥

ತೇಽನ್ಯೋನ್ಯಂ ಸಮಧಾವೇತಾಂ ಜಘ್ನತುಶ್ಚ ಪರಸ್ಪರಂ ।
ಕ್ಷಣೇನಾಭವತಾಂ ಸೇನೇ ರುಧಿರೌಘಪರಿಪ್ಲುತೇ ॥ ೪೫ ॥

ಪತಿತೈಃ ಪಾತ್ಯಮಾನೈಶ್ಚ ಗಜಾಶ್ವರಥಪತ್ತಿಭಿಃ ।
ವ್ಯರಾಜತ ರಣೇ ಭೂಮಿಸ್ಸಂಧ್ಯಾಭ್ರಪಟಲೈರಿವ ॥ ೪೬ ॥

ತತ್ರ ಯುದ್ಧೇ ಮೃತಾನ್ದೈತ್ಯಾನ್ಭಾರ್ಗವಸ್ತಾನಜೀವಯತ್ ।
ವಿದ್ಯಯಾಮೃತಜೀವಿನ್ಯಾ ಮಂತ್ರಿತೈಸ್ತೋಯಬಿಂದುಭಿಃ ॥ ೪೭ ॥

---

೪೩. ಈರೀತಿ ದೊಡ್ಡ ಸೈನ್ಯವು ತಮ್ಮ ಊರಿಗೆ ಮುತ್ತಿಗೆ ಹಾಕಿರುವುದನ್ನು ಕಂಡು ದೇವತೆಗಳೆಲ್ಲರೂ, ಕವಚ ಬಿಲ್ಲುಬಾಣಗಳನ್ನು ಧರಿಸಿ ಯುದ್ಧ ಸನ್ನದ್ಧರಾಗಿ ಅಮರಾವತಿಯಿಂದ ಹೊರಹೊರಟರು.

೪೪. ಅನಂತರ ದೇವದಾನವರ ಸೈನ್ಯಗಳೆರಡೂ, ಮುಸಲಗಳಿಂದಲೂ, ಪರಿಘಗಳಿಂದಲೂ, ಬಾಣಗಳಿಂದಲೂ, ಗದೆ, ಗಂಡುಗೊಡಲಿ, ಶಕ್ತಿ ಮುಂತಾದ ಆಯುಧಗಳಿಂದಲೂ ಯುದ್ಧಮಾಡತೊಡಗಿದುವು.

೪೫. ಆ ಎರಡು ಸೈನ್ಯಗಳೂ ಪರಸ್ಪರವಾಗಿ ಮುನ್ನುಗ್ಗಿದುವು, ಹೊಡೆದಾಡಿದುವು. ಕ್ಷಣಮಾತ್ರದಲ್ಲಿ ಆ ಸೈನ್ಯಗಳೆರಡೂ ರಕ್ತದಿಂದ ತೊಯ್ದುಹೋದುವು.

೪೬. ಹೀಗೆ ಯುದ್ಧದಲ್ಲಿ ಆನೆಗಳೂ, ಕುದುರೆಗಳೂ, ಕಾಲಾಳುಗಳೂ, ಪರಸ್ಪರ ಹೋರಾಡುತ್ತಾ ತಾವಾಗಿಯೇ ಬೀಳುತ್ತಲೂ, ಎದುರುಕಡೆಯವರಿಂದ ಬೀಳಿಸಲ್ಪಡುತ್ತಿರಲೂ ಇರಲು ಆ ಭೂಮಿಯು ಗುಂಪುಗುಂಪಾಗಿ ಮೋಡಗಳು ಓಲಾಡುತ್ತಿರುವ ಸಂಜೆಯಂತೆ ಶೋಭಿಸುತ್ತಿತ್ತು.

೪೭. ಆ ಯುದ್ಧದಲ್ಲಿ ಸತ್ತುಹೋದ ದೈತ್ಯರನ್ನು ಶುಕ್ರನು ಮೃತಸಂಜೀವಿನೀ ವಿದ್ಯೆಯಿಂದ ಅಭಿಮಂತ್ರಿಸಿದ ನೀರನ್ನು ಚಿಮುಕಿಸಿ ಬದುಕಿಸುತ್ತಿದ್ದನು.

ದೇವಾನಪಿ ತಥಾ ಯುದ್ಧೇ ತತ್ರಾಜೀವಯದಂಗಿರಾಃ ।
ದಿವ್ಯೌಷಧ್ಯೈಸ್ಸಮಾನೀಯ ದ್ರೋಣಾದ್ರೇಸ್ಸ ಪುನಃ ಪುನಃ ॥ ೪೮ ॥

ದೃಷ್ಟವಾನ್ಸ ತಥಾ ಯುದ್ಧೇ ಪುನರೇವ ಸಮುತ್ಥಿತಾನ್ ।
ಜಲಂಧರಃ ಕ್ರೋಧವಶೋ ಭಾರ್ಗವಂ ವಾಕ್ಯಮಬ್ರವೀತ್ ॥ ೪೯ ॥

॥ ಜಲಂಧರ ಉವಾಚ ॥

ಮಯಾ ದೇವಾ ಹತಾ ಯುದ್ಧೇ ಉತ್ತಿಷ್ಠಂತಿ ಕಥಂ ಪುನಃ ।
ತತಃ ಸಂಜೀವಿನೀ ವಿದ್ಯಾ ನೈವಾನ್ಯತ್ರೇತಿ ವೈ ಶ್ರುತಾ ॥ ೫೦ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಸಿಂಧುಪುತ್ರಸ್ಯ ಭಾರ್ಗವಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಗುರುಶ್ಶುಕ್ರೋ ಜಲಂಧರಂ ॥ ೫೧ ॥

॥ ಶುಕ್ರ ಉವಾಚ ॥

ದಿವ್ಯೌಷಧೀಸ್ಸಮಾನೀಯ ದ್ರೋಣಾದ್ರೇರಂಗಿರಾಸ್ಸುರಾನ್ ।
ಜೀವಯತ್ಯೇಷ ವೈ ತಾತ ಸತ್ಯಂ ಜಾನೀಹಿ ಮೇ ವಚಃ ॥ ೫೨ ॥

---

೪೮. ಅದೇ ರೀತಿಯಲ್ಲಿ ಬೃಹಸ್ಪತಿಯು ಸಹ ದ್ರೋಣಾದ್ರಿಯಿಂದ ಪುನಃ ಪುನಃ ಔಷಧಗಳನ್ನು ತಂದು ದೇವತೆಗಳನ್ನು ಬದುಕಿಸುತ್ತಿದ್ದನು.

೪೯. ಯುದ್ಧದಲ್ಲಿ ಮಡಿದವರೇಲ್ಲಾ ಸಹ ದೇವತೆಗಳು ಈ ರೀತಿ ಮತ್ತೆ ಬದುಕಿ ಬರುತ್ತಿರುವುದನ್ನು ಕಂಡು ಆ ಜಲಂಧರನು ಕೋಪಗೊಂಡು ಭೃಗುಪುತ್ರನಾದ ಶುಕ್ರನನ್ನಿಂತೆಂದನು.

೫೦. ಓ ಆಚಾರ್ಯ, ಇದೇನು ನನ್ನಿಂದ ಕೊಲ್ಲಲ್ಪಟ್ಟ ದೇವತೆಗಳೆಲ್ಲರೂ ಮತ್ತೆ ಹೇಗೆ ಎದ್ದುನಿಲ್ಲುತ್ತಿರುವರು? ನಿನಗೊಬ್ಬನಿಗಲ್ಲದೆ ಮತ್ತಾರಿಗೂ ಮೃತ ಸಂಜೀವಿನೀವಿದ್ಯೆಯು ಬರುವುದಿಲ್ಲವೆಂದು ನಾವು ಕೇಳಿರುವಲ್ಲವೇ? ಎಂದನು.

೫೧. ಓ ವ್ಯಾಸ, ಈರೀತಿ ಜಲಂಧರನಾಡಿದ ಮಾತನ್ನು ಕೇಳಿ, ಅವನ ಗುರುವಾದ ಶುಕ್ರಾಚಾರ್ಯನು ಪ್ರಸನ್ನನಾಗಿ ಅವನನ್ನಿಂತೆಂದನು.

೫೨. ಅಪ್ಪಾ! ದ್ರೋಣಪರ್ವತದಿಂದ ದಿವ್ಯವಾದ ಓಷಧಿಗಳನ್ನು (ಮೂಲಿಕೆಗಳು) ತಂದು ಬೃಹಸ್ಪತಿಯು ದೇವತೆಗಳನ್ನು ಬದುಕಿಸುತ್ತಿರುವನು. ನನ್ನ ಈ ಮಾತು ಸತ್ಯವೆಂದು ತಿಳಿ.

ಜಯಮಿಚ್ಛಸಿ ಚೇತ್ತಾತ ಶೃಣು ಮೇ ವಚನಂ ಶುಭಂ ।
ತತಃ ಸೋಽರಂ ಭುಜಾಭ್ಯಾಂ ತ್ವಂ ದ್ರೋಣಮುದ್ಧಾವುಪಾಹರ ॥ ೫೩ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತಸ್ಸ ತು ದೈತ್ಯೇಂದ್ರೋ ಗುರುಣಾ ಭಾರ್ಗವೇಣ ಹ ।
ದ್ರುತಂ ಜಗಾಮ ಯತ್ರಾಸಾವಾಸ್ತೇ ಚೈವಾದ್ರಿರಾಟ್ಟ ಸಃ ॥ ೫೪ ॥

ಭುಜಾಭ್ಯಾಂ ತರಸಾ ದೈತ್ಯೋ ನೀತ್ವಾ ದ್ರೋಣಂ ಚ ತಂ ತದಾ ।
ಪ್ರಾಕ್ಷಿಪತ್ಸಾಗರೇ ತೂರ್ಣಂ ಚಿತ್ರಂ ನ ಹರತೇಜಸಿ ॥ ೫೫ ॥

ಪುನರಾಯಾನ್ಮಹಾವೀರಸ್ಸಿಂಧುಪುತ್ರೋ ಮಹಾಹವಂ ।
ಜಘಾನಾಸ್ತ್ರೈಶ್ಚ ವಿವಿಧೈಸ್ಸುರಾನ್ಕೃತ್ವಾ ಬಲಂ ಮಹತ್ ॥ ೫೬ ॥

ಅಥ ದೇವಾನ್ಹತಾನ್ದೃಷ್ಟ್ವಾ ದ್ರೋಣಾದ್ರಿಮಗಮದ್ಗುರುಃ ।
ತಾವತ್ತತ್ರ ಗಿರೀಂದ್ರಂ ತಂ ನ ದದರ್ಶ ಸುರಾರ್ಚಿತಃ ॥ ೫೭ ॥

ಜ್ಞಾತ್ವಾ ದೈತ್ಯಹೃತಂ ದ್ರೋಣಂ ಧಿಷಣೋ ಭಯವಿಹ್ವಲಃ ।
ಆಗತ್ಯ ದೇವಾನ್ಪ್ರೋವಾಚ ಜೀವೋ ವ್ಯಾಕುಲಮಾನಸಃ ॥ ೫೮ ॥

---

೫೩. ಅಪ್ಪಾ, ನೀನು ಗೆಲ್ಲಬೇಕೆನ್ನುವುದಾದರೆ ನನ್ನ ಮಾತನ್ನು ಕೇಳು. ನೀನು ಬೇಗನೆ ಹೋಗಿ ಆ ದ್ರೋಣಪರ್ವತವನ್ನು ನಿನ್ನ ತೋಳುಗಳಿಂದ ಕಿತ್ತು ಸಮುದ್ರದಲ್ಲಿ ಎಸೆದುಬಿಡು ಎಂದನು.

೫೪. ಓ ವ್ಯಾಸ, ಈರೀತಿ ತನ್ನ ಗುರುವಾದ ಶುಕ್ರಾಚಾರ್ಯರು ಹೇಳಲು, ಆ ಜಲಂಧರನು, ಆ ದ್ರೋಣಪರ್ವತವಿರುವಲ್ಲಿಗೆ ಹೋದನು.

೫೫. ಆ ದೈತ್ಯನು ಆ ದ್ರೋಣಗಿರಿಯನ್ನು ತನ್ನ ತೋಳುಗಳಿಂದ ಬಲವಾಗಿ ಕಿತ್ತು ಜಾಗ್ರತೆಯಾಗಿ ಸಮುದ್ರದಲ್ಲಿ ಬಿಸಾಡಿಬಿಟ್ಟನು. ಜಲಂಧರನು ಶಿವನ ತೇಜಸ್ಸೇ ಅಲ್ಲವೇ ? ಶಿವನ ತೇಜಸ್ಸಿಗೆ ಇದೊಂದು ಆಶ್ಚರ್ಯವೇ ?

೫೬. ಮತ್ತೆ ಜಲಂಧರನು ಯುದ್ಧಭೂಮಿಗೆ ಬಂದು ನಾನಾಬಗೆಯಾದ ಅಸ್ತ್ರಗಳಿಂದ ದೇವತೆಗಳನ್ನು ಸಂಹರಿಸಿದನು.

೫೭. ಈರೀತಿ ದೇವತೆಗಳೆಲ್ಲರೂ ಮಡಿದುಬಿದ್ದುದನ್ನು ಕಂಡು ದ್ರೋಣಪರ್ವತಕ್ಕೆ ಬೃಹಸ್ಪತಿಯು ತೆರಳಿ ನೋಡಲು ಅಲ್ಲಿ ದ್ರೋಣಪರ್ವತವೇ ಇರಲಿಲ್ಲ.

೫೮-೫೯. ಆ ದ್ರೋಣಾದ್ರಿಯು ಜಲಂಧರನಿಂದ ಅಪಹರಿಸಲ್ಪಟ್ಟಿತೆಂದು ತಿಳಿದು ಬೃಹಸ್ಪತಿಯು ಭಯದಿಂದ ಕಳವಳಪಡುತ್ತಾ ಚಿಂತಾಕ್ರಾಂತನಾಗಿ ದೇವತೆ

॥ ಗುರುರುವಾಚ ॥

ಪಲಾಯಧ್ವಂ ಸುರಾಸ್ಸರ್ವೇ ದ್ರೋಣೋ ನಾಸ್ತಿ ಗಿರಿರ್ಮಹಾನ್ ।
ಧ್ರುವಂ ಧ್ವಸ್ತಶ್ಚ ದೈತ್ಯೇನ ಪಾಥೋಧಿತನಯೇನ ಹಿ ॥ ೫೯ ॥

ಜಲಂಧರೋ ಮಹಾದೈತ್ಯೋ ನಾಯಂ ಜೇತುಂ ಕ್ಷಮೋ ಯತಃ ।
ರುದ್ರಾಂಶಸಂಭವೋ ಹ್ಯೇಷ ಸರ್ವಾಮರವಿಮರ್ದನಃ ॥ ೬೦ ॥

ಮಯಾ ಜ್ಞಾತಃ ಪ್ರಭಾವೋಽಸ್ಯ ಯಥೋತ್ಪನ್ನಃ ಸ್ವಯಂ ಸುರಾಃ ।
ಶಿವಾಪಮಾನಕೃಚ್ಛುಕ್ರಚೇಷ್ಟಿತಂ ಸ್ಮರತಾಖಿಲಂ ॥ ೬೧ ॥

॥ ಸನತ್ಕುಮಾರ ಉವಾಚ ॥

ಶ್ರುತ್ವಾ ತದ್ವಚನಂ ದೇವಾಸ್ಸುರಾಚಾರ್ಯಪ್ರಕೀರ್ತಿತಂ ।
ಜಯಾಶಾಂ ತ್ಯಕ್ತವಂತಸ್ತೇ ಭಯವಿಹ್ವಲಿತಾಸ್ತಥಾ ॥ ೬೨ ॥

ದೈತ್ಯರಾಜೇನ ತೇನಾತಿಹನ್ಯಮಾನಾಸ್ಸಮಂತತಃ ।
ಧೈರ್ಯಂ ತ್ಯಕ್ತ್ವಾಪಲಾಯಂತ ದಿಶೋ ದಶ ಸವಾಸವಾಃ ॥ ೬೩ ॥

---

ಗಳನ್ನು ಕುರಿತು, ಎಲೈ ದೇವತೆಗಳೇ, ಯುದ್ಧದಿಂದ ಬೇಗನೆ ಹಿಂತಿರುಗಿ ಓಡಿಹೋಗಿ. ಏಕೆಂದರೆ ಆ ದೊಡ್ಡದಾದ ದ್ರೋಣಗಿರಿಯು ಇಲ್ಲವಾಗಿದೆ. ಸಮುದ್ರಪುತ್ರನಾದ ಆ ದೈತ್ಯನು ಖಂಡಿತವಾಗಿಯೂ ಅದನ್ನು ನಾಶಗೊಳಿಸಿರಬೇಕು.

೬೦. ದೇವತೆಗಳೆಲ್ಲರನ್ನೂ ಧ್ವಂಸಮಾಡಿಬಿಡುವ ಈ ಜಲಂಧರನನ್ನು ಗೆಲ್ಲಲು ಸಾಧ್ಯವಿಲ್ಲ. ಇವನು ಸಾಕ್ಷಾದ್ರುದ್ರಾಂಶಸಂಭೂತನು.

೬೧. ನಾನು ಇವನ ಪ್ರಭಾವವೇನೆಂಬುದನ್ನು ಬಲ್ಲೆನು. ಅಲ್ಲದೆ ಇವನ ಉತ್ಪತ್ತಿಯು ಹೇಗಾಯಿತೆಂಬುದನ್ನೂ ಬಲ್ಲೆನು. ಎಲೈ ದೇವತೆಗಳಿರಾ, ಹಿಂದೆ ಶುಕ್ರನು ಶಿವನಿಗೆ ಕೋಪವುಂಟಾಗುವಂತೆ ಅಪಚಾರವೆಸಗಿದುದನ್ನು ನೀವು ಜ್ಞಾಪಿಸಿಕೊಳ್ಳಿರಿ ಎಂದನು.

೬೨-೬೩. ಓ ವ್ಯಾಸ, ಹೀಗೆ ಬೃಹಸ್ಪತಿಯು ಹೇಳಿದ ಮಾತುಗಳನ್ನು ಕೇಳಿ ಇಂದ್ರಾದಿದೇವತೆಗಳು, ಗೆಲುವಿನಾಸೆಯನ್ನು ಬಿಟ್ಟು ಭಯದಿಂದ ತತ್ತಳಿಸುತ್ತಾ, ದೈತ್ಯರಾಜನಾದ ಆ ಜಲಂಧರನು ಸುತ್ತುಮುತ್ತಲೂ ಬಲವಾಗಿ ಕೊಡುತ್ತಿರುವ ಏಟುಗಳನ್ನು ತಾಳಲಾರದೆ ಧೈರ್ಯವನ್ನು ತೊರೆದು ದಿಕ್ಕುದಿಕ್ಕಿಗೂ ಓಡಿಹೋದರು.

ದೇವಾನ್ವಿದ್ರಾವಿತಾನ್ದೃಷ್ಟ್ವಾ ದೈತ್ಯಸ್ಸಾಗರನಂದನಃ ।
ಶಂಖಭೇರೀಜಯರವೈಃ ಪ್ರವಿವೇಶಾಮರಾವತೀಂ ॥ ೬೪ ॥

ಪ್ರವಿಷ್ಟೇ ನಗರೀಂ ದೈತ್ಯೇ ದೇವಾಃ ಶಕ್ರಪುರೋಗಮಾಃ ।
ಸುವರ್ಣಾದ್ರಿಗುಹಾಂ ಪ್ರಾಪ್ತಾ ನ್ಯವಸನ್ದೈತ್ಯತಾಪಿತಾಃ ॥ ೬೫ ॥

ತದೈವ ಸರ್ವೇಷ್ವಸುರೋಽಧಿಕಾರೇ-
ಷ್ವಿಂದ್ರಾದಿಕಾನಾಂ ವಿನಿವೇಶ್ಯ ಸಮ್ಯಕ್ ।
ಶುಂಭಾದಿಕಾನ್ದೈತ್ಯವರಾನ್ಪೃಥಕ್ಪೃಥಕ್-
ಸ್ವಯಂ ಸುವರ್ಣಾದ್ರಿಗುಹಾಂ ವ್ಯಗಾನ್ಮುನೇ ॥ ೬೬ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರವಧೋಪಾಖ್ಯಾನೇ
ದೇವಜಲಂಧರಯುದ್ಧವರ್ಣನಂ ನಾಮ
ಪಂಚದಶೋಽಧ್ಯಾಯಃ

---

೬೪. ದೇವತೆಗಳು ಈರೀತಿ ದಿಕ್ಕೆಟ್ಟು ಓಡಿಹೋದುದನ್ನು ಕಂಡು ಸಮುದ್ರ ಪುತ್ರನಾದ ಆ ಜಲಂಧರನು ಶಂಖ, ಭೇರಿ ಮೊದಲಾದವುಗಳಿಂದಲೂ ಜಯಶಬ್ದ ಗಳಿಂದಲೂ ಅಮರಾವತಿಯನ್ನು ಪ್ರವೇಶಿಸಿದನು.

೬೫. ಆ ದೈತ್ಯನು ಅಮರಾವತಿಯನ್ನು ಪ್ರವೇಶಿಸಿದಮೇಲೆ, ಅವನಿಂದ ಹಿಂಸಿಸಲ್ಪಟ್ಟ ಇಂದ್ರಾದಿ ದೇವತೆಗಳು ಮೇರುಪರ್ವತದ ಗುಹೆಗಳನ್ನು ಸೇರಿ ಅಲ್ಲಿ ವಾಸಮಾಡತೊಡಗಿದರು.

೬೬. ಓ ಮುನೀಂದ್ರ, ದೈತ್ಯರಾಜನಾದ ಆ ಜಲಂಧರನು ಇಂದ್ರಾದಿದೇವತೆಗಳ ಅಧಿಕಾರಕ್ಕೆ ಶುಂಭನೇ ಮೊದಲಾದ ದೈತ್ಯವೀರರನ್ನು ಆ ಕ್ಷಣವೇ ಬೇರಬೇರೆಯಾಗಿ ನೇಮಿಸಿ ತಾನು ಮೇರುಪರ್ವತದ ಗುಹೆಗಳ ಕಡೆ ನಡೆದನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯೊಳಗಣ
ಐದನೆಯ ಯುದ್ಧಖಂಡದಲ್ಲಿ ಜಲಂಧರವಧೋಪಾಖ್ಯಾನದಲ್ಲಿ
ದೇವಜಲಂಧರ ಯುದ್ಧವರ್ಣನವೆಂಬ ಹದಿನೈದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಷೋಡಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಪುನರ್ದೈತ್ಯಂ ಸಮಾಯಾಂತಂ ದೃಷ್ಟ್ವಾ ದೇವಾಸ್ಸವಾಸವಾಃ ।
ಭಯಾತ್ಪ್ರಕಂಪಿತಾಸ್ಸರ್ವೇ ಸಹೈವಾದುದ್ರುವುರ್ದ್ರುತಂ ॥ ೧ ॥

ವೈಕುಂಠಂ ಪ್ರಯಯುಸ್ಸರ್ವೇ ಪುರಸ್ಕೃತ್ಯ ಪ್ರಜಾಪತಿಂ ।
ತುಷ್ಟುವುಸ್ತೇ ಸುರಾ ನತ್ವಾ ಸಪ್ರಜಾಪತಯೋಽಖಿಲಾಃ ॥ ೨ ॥

॥ ದೇವಾ ಊಚುಃ ॥

ಹೃಷೀಕೇಶ ಮಹಾಬಾಹೋ ಭಗವನ್ಮಧುಸೂದನ ।
ನಮಸ್ತೇ ದೇವದೇವೇಶ ಸರ್ವದೈತ್ಯವಿನಾಶಕ ॥ ೩ ॥

---

## ಹದಿನಾರನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು.—ಓ ವ್ಯಾಸ, ಮತ್ತೆ ಆ ದೈತ್ಯನು ತಮ್ಮ ಬೆನ್ನಟ್ಟಿ ಬರುತ್ತಿರುವುದನ್ನು ಕಂಡು ಇಂದ್ರಾದಿದೇವತೆಗಳು ಭಯದಿಂದ ನಡುಗುತ್ತಾ, ಎಲ್ಲರೂ ಒಟ್ಟಿಗೆ ಬೇಗ ಬೇಗ ಓಡಿಹೋದರು.

೨. ಅವರೆಲ್ಲರೂ ಬ್ರಹ್ಮನನ್ನು ಮುಂದಿಟ್ಟುಕೊಂಡು ವೈಕುಂಠಕ್ಕೆ ತೆರಳಿದರು. ಅಲ್ಲಿ ಆ ಬ್ರಹ್ಮಾದಿದೇವತೆಗಳೆಲ್ಲರೂ ಶ್ರೀ ಹರಿಯನ್ನು ನಮಸ್ಕರಿಸಿ ಈರೀತಿ ಸ್ತೋತ್ರ ಮಾಡತೊಡಗಿದರು.

೩. ಎಲೈ ಹೃಷೀಕೇಶ, ಮಹಾಬಾಹೂ, ಮಧುಸೂದನ, ದೇವದೇವನೂ. ಸರ್ವದೈತ್ಯಸಂಹಾರಿಯೂ ಆದ ನಿನಗೆ ನಮಸ್ಕಾರವು.

ಮತ್ಸ್ಯರೂಪಾಯ ತೇ ವಿಷ್ಣೋ ವೇದಾನ್ನೀತವತೇ ನಮಃ ।
ಸತ್ಯವ್ರತೇನ ಸದ್ರಾಜ್ಞಾ ಪ್ರಲಯಾಬ್ಧಿವಿಹಾರಿಣೇ ॥ ೪ ॥

ಕುರ್ವಾಣಾನಾಂ ಸುರಾಣಾಂ ಚ ಮಂಥನಾಯೋದ್ಯಮಂ ಭೃಶಂ ।
ಬಿಭ್ರತೇ ಮಂದರಗಿರಿಂ ಕೂರ್ಮರೂಪಾಯ ತೇ ನಮಃ ॥ ೫ ॥

ನಮಸ್ತೇ ಭಗವನ್ನಾಥ ಕ್ರತವೇ ಸೂಕರಾತ್ಮನೇ ।
ವಸುಂಧರಾಂ ಜನಾಧಾರಾಂ ಮೂರ್ಧತೋ ಬಿಭ್ರತೇ ನಮಃ ॥ ೬ ॥

ವಾಮನಾಯ ನಮಸ್ತುಭ್ಯಮುಪೇಂದ್ರಾಖ್ಯಾಯ ವಿಷ್ಣವೇ ।
ವಿಪ್ರರೂಪೇಣ ದೈತ್ಯೇಂದ್ರಂ ಬಲಿಂ ಛಲಯತೇ ವಿಭೋ ॥ ೭ ॥

ನಮಃ ಪರಶುರಾಮಾಯ ಕ್ಷತ್ರನಿಃಕ್ಷತ್ರಕಾರಿಣೇ ।
ಮಾತುರ್ಹಿತಕೃತೇ ತುಭ್ಯಂ ಕುಪಿತಾಯಾಸತಾಂ ದ್ರುಹೇ ॥ ೮ ॥

---

೪. ಪ್ರಳಯಕಾಲದಲ್ಲಿ ಉಕ್ಕಿಬಂದ ಸಮುದ್ರದಲ್ಲಿ ವಿಹರಿಸುತ್ತಾ ಸತ್ಯವ್ರತ ನೆಂಬ ರಾಜರ್ಷಿಯೊಡನೆ ವೇದಗಳನ್ನು ಉದ್ಧರಿಸಿ ತಂದ ಮತ್ಸ್ಯಾವತಾರಿಯಾದ ನಿನ್ನನ್ನು ನಮಸ್ಕರಿಸುವೆವು.

೫. ಸಮುದ್ರವನ್ನು ಕಡೆಯಬೇಕೆಂದು ಮಹತ್ಪ್ರಯತ್ನವನ್ನು ದೇವತೆಗಳು ಮಾಡುತ್ತಿದ್ದಾಗ ಕೂರ್ಮಾಕಾರವನ್ನು ತಾಳಿ ಮಂದರಪರ್ವತವನ್ನು ಹೊತ್ತು ಸಲಹಿದ ನಿನಗೆ ನಮಸ್ಕಾರವು.

೬. ಹೇ ನಾಥ, ಯಜ್ಞರೂಪನಾದ ನಿನಗೆ ನಮಸ್ಕಾರವು. ಜನರಿಗೆ ಆಶ್ರಯವಾದ ಈ ಭೂಮಿಯನ್ನು ತಲೆಯಮೇಲೆ ಹೊತ್ತು ನಿಂತಿರುವ ಮಹಾ ವರಾಹಮೂರ್ತಿಯಾದ ನಿನಗೆ ನಮಸ್ಕಾರವು

೭ ಇಂದ್ರನ ತಮ್ಮನಾಗಿ ಹುಟ್ಟಿ (ಅದಿತಿಯ ಉದರದಲ್ಲಿ) ಉಪೇಂದ್ರನೆಂದು ಹೆಸರು ಪಡೆದು, ದೈತ್ಯರಾಜನಾದ ಬಲಿಯನ್ನು ಬ್ರಾಹ್ಮಣರೂಪದಿಂದ ವಂಚಿಸಿದ ವಾಮನನಾದ ನಿನಗೆ ನಮಸ್ಕಾರವು.

೮. ಇಪ್ಪತ್ತೊಂದು ಸಲ ಕ್ಷತ್ರಿಯರ ಕುಲವನ್ನೇ ಹುಟ್ಟಿಲ್ಲದಂತೆ ಅಡಗಿಸಿ ಬಿಟ್ಟ, ತಾಯಿಗೆ ಪ್ರಿಯವನ್ನುಂಟುಮಾಡಿದ, ದುಃಷ್ಟರಿಗೆ ವೈರಿಯಾದ, ಮಹಾಕೋಪ ಶಾಲಿಯಾದ ಪರಶುರಾಮನೆನಿಸಿದ ನಿನಗೆ ನಮಸ್ಕಾರವು.

ರಾಮಾಯ ಲೋಕರಾಮಾಯ ಮರ್ಯಾದಾಪುರುಷಾಯ ತೇ ।
ರಾವಣಾಂತಕರಾಯಾಶು ಸೀತಾಯಾಃ ಪತಯೇ ನಮಃ　　॥ ೯ ॥

ನಮಸ್ತೇ ಜ್ಞಾನಗೂಢಾಯ ಕೃಷ್ಣಾಯ ಪರಮಾತ್ಮನೇ ।
ರಾಧಾವಿಹಾರಶೀಲಾಯ ನಾನಾಲೀಲಾಕರಾಯ ಚ　　॥ ೧೦ ॥

ನಮಸ್ತೇ ಗೂಢದೇಹಾಯ ವೇದನಿಂದಾಕರಾಯ ಚ ।
ಯೋಗಾಚಾರ್ಯಾಯ ಜೈನಾಯ ಬೌದ್ಧರೂಪಾಯ ಮಾಪತೇ　　॥ ೧೧ ॥

ನಮಸ್ತೇ ಕಲ್ಕಿರೂಪಾಯ ಮ್ಲೇಚ್ಛಾನಾಮಂತಕಾರಿಣೇ ।
ಅನಂತಶಕ್ತಿರೂಪಾಯ ಸದ್ಧರ್ಮಸ್ಥಾಪನಾಯ ಚ　　॥ ೧೨ ॥

ನಮಸ್ತೇ ಕಪಿಲರೂಪಾಯ ದೇವಹೂತ್ಯೈ ಮಹಾತ್ಮನೇ ।
ವದತೇ ಸಾಂಖ್ಯಯೋಗಂ ಚ ಸಾಂಖ್ಯಾಚಾರ್ಯಾಯ ವೈ ಪ್ರಭೋ ॥೧೩॥

---

೯. ಎಲ್ಲರಿಗೂ ಪ್ರಿಯದರ್ಶನನೂ, ಪುರುಷರಿಗೆ ಆದರ್ಶಪ್ರಾಯನೂ, ರಾವಣಾಸುರಸಂಹಾರಿಯೂ, ಸೀತಾಕಾಂತನೂ, ಆದ ಶ್ರೀರಾಮಚಂದ್ರಮೂರ್ತಿಯಾದ ನಿನಗೆ ನಮಸ್ಕಾರಗಳು.

೧೦. ರಾಧಾವಿಹಾರಶೀಲನೂ, ನಾನಾಬಗೆಯ ಲೀಲೆಗಳನ್ನೂ ತೋರಿದವನೂ, ಮಹಾಜ್ಞಾನಿಯೂ ಆದ ಕೃಷ್ಣಪರಮಾತ್ಮನಾದ ನಿನಗೆ ನಮಸ್ಕಾರವು.

೧೧. ಮೈಮೇಲೆ ಬಟ್ಟೆಯಿಲ್ಲದೆ ತಿರುಗುತ್ತಾ ವೇದಗಳನ್ನು ಬೈಯುತ್ತಾ, ಪ್ರಮಾಣವಾದವನ್ನಾಶ್ರಯಿಸಿದ ಜೈನ, ಬೌದ್ಧಸ್ವರೂಪನಾದ ಯೋಗಾಚಾರ್ಯನೆನಿಸಿದ ನಿನಗೆ ನಮಸ್ಕಾರವು.

೧೨. ಅನಂತಶಕ್ತಿಯನ್ನು ಪಡೆದು, ಮ್ಲೇಚ್ಛರನ್ನು ಸಂಹರಿಸಿ, ಸದ್ಧರ್ಮವನ್ನು ಸ್ಥಾಪಿಸಿದ ಕಲ್ಕಿರೂಪನಾದ ನಿನಗೆ ನಮಸ್ಕಾರವು.

೧೩. ದೇವಹೂತಿಗೆ ಸಾಂಖ್ಯಯೋಗವನ್ನು ಉಪದೇಶಿಸಿದ ಸಾಂಖ್ಯಾಚಾರ್ಯನಾನ ಕಪಿಲಮುನಿಯೆನಿಸಿದ ನಿನಗೆ ನಮಸ್ಕಾರವು.

ನಮಃ ಪರಮಹಂಸಾಯ ಜ್ಞಾನಂ ಸಂವದತೇ ಪರಂ ।
ವಿಧಾತ್ರೇ ಜ್ಞಾನರೂಪಾಯ ಯೇನಾತ್ಮಾ ಸಂಪ್ರಸೀದತಿ ॥ ೧೪ ॥

ವೇದವ್ಯಾಸಾಯ ವೇದಾನಾಂ ವಿಭಾಗಂ ಕುರ್ವತೇ ನಮಃ ।
ಹಿತಾಯ ಸರ್ವಲೋಕಾನಾಂ ಪುರಾಣರಚನಾಯ ಚ ॥ ೧೫ ॥

ಏವಂ ಮತ್ಸ್ಯಾದಿತನುಭಿರ್ಭಕ್ತಕಾರ್ಯೋದ್ಯತಾಯ ತೇ ।
ಸರ್ಗಸ್ಥಿತಿಧ್ವಂಸಕರ್ತ್ರೇ ನಮಸ್ತೇ ಬ್ರಹ್ಮಣೇ ಪ್ರಭೋ ॥ ೧೬ ॥

ಆರ್ತಿಹಂತ್ರೇ ಸ್ವದಾಸಾನಾಂ ಸುಖದಾಯ ಶುಭಾಯ ಚ ।
ಪೀತಾಂಬರಾಯ ಹರಯೇ ತಾರ್ಕ್ಷ್ಯಯಾನಾಯ ತೇ ನಮಃ । ॥ ೧೭ ॥

ಸರ್ವಕ್ರಿಯಾಯೈಕಕರ್ತ್ರೇ ಶರಣ್ಯಾಯ ನಮೋನಮಃ
ದೈತ್ಯಸಂತಾಪಿತಾಮರ್ತ್ಯದುಃಖಾದ್ರಿಧ್ವಂಸವಜ್ರಕ ।
ಶೇಷತಲ್ಪಶಯಾಯಾರ್ಕಚಂದ್ರನೇತ್ರಾಯ ತೇ ನಮಃ ॥ ೧೮ ॥

---

೧೪. ಯಾವುದನ್ನು ಪಡೆದರೆ, ಆತ್ಮವು ಆನಂದವನ್ನು ಪಡೆವುದೋ, ಅಂತಹ ಪರಮತತ್ತ್ವಜ್ಞಾನವನ್ನು ಬೋಧಿಸುವ ಜ್ಞಾನಸ್ವರೂಪನಾದ ಪರಮಹಂಸಾವತಾರನೂ ಪರಬ್ರಹ್ಮನೂ ಎನಿಸಿದ ನಿನಗೆ ನಮಸ್ಕಾರವು.

೧೫. ಜನರಿಗೆಲ್ಲರಿಗೂ ಒಳ್ಳೆಯದಾಗಲೆಂದು ವೇದಗಳನ್ನು ವಿಭಾಗಿಸಿ, ಪುರಾಣಗಳನ್ನು ರಚಿಸಿ ವೇದವ್ಯಾಸನೆಂದು ಹೆಸರು ಪಡೆದ ನಿನಗೆ ನಮಸ್ಕಾರವು.

೧೬. ಹೇ ಪ್ರಭೂ, ಈರೀತಿ ಮತ್ಸ್ಯಾದಿ ಅವತಾರಗಳನ್ನೆತ್ತಿ ಭಕ್ತರ ಕೆಲಸಗಳಲ್ಲಿ ತೊಡಗಿದ ಸೃಷ್ಟಿ, ಸ್ಥಿತಿ, ಸಂಹಾರಕಾರಿಯಾದ ಬ್ರಹ್ಮರೂಪನಾದ ನಿನಗೆ ನಮಸ್ಕಾರವು.

೧೭. ತನ್ನ ಭಕ್ತರ ಕಷ್ಟಗಳನ್ನು ಪರಿಹರಿಸುವವನೂ, ಸೌಖ್ಯಪ್ರದನೂ, ಶುಭಕರನೂ, ಪೀತಾಂಬರಧಾರಿಯೂ, ಗರುಡವಾಹನನೂ ಆದ ಶ್ರೀಹರಿಯೇ, ನಿನಗೆ ನಮಸ್ಕಾರವು,

೧೮. ದೈತ್ಯರಿಂದ ಪೀಡಿತರಾದ ದೇವತೆಗಳ ದುಃಖಗಳೆಂಬ ಪರ್ವತಗಳಿಗೆ ವಜ್ರಾಯುಧನೆನಿಸಿದ ಸ್ವಾಮಿಯೇ, ಸರ್ವಕ್ರಿಯಾಸ್ವರೂಪವೂ ಏಕೈಕಕರ್ತೃವೂ, ಆಶ್ರಯದಾತನೂ, ಶೇಷತಲ್ಪಶಾಯಿಯೂ, ಚಂದ್ರಸೂರ್ಯರೇ ನೇತ್ರಗಳಾಗಿ ಉಳ್ಳವನೂ ಆದ ನಿನಗೆ ನಮಸ್ಕಾರಗಳು.

ಕೃಪಾಸಿಂಧೋ ರಮಾನಾಥ ಪಾಹಿ ನಶ್ಶರಣಾಗತಾನ್ ।
ಜಲಂಧರೇಣ ದೇವಾಶ್ಚ ಸ್ವರ್ಗಾತ್ಸರ್ವೇ ನಿರಾಕೃತಾಃ ॥ ೧೯ ॥

ಸೂರ್ಯೋ ನಿಸ್ಸಾರಿತಃ ಸ್ಥಾನಾಚ್ಚಂದ್ರೋ ವಹ್ನಿಸ್ತಥೈವ ಚ ।
ಪಾತಾಲಾನ್ನಾಗರಾಜಶ್ಚ ಧರ್ಮರಾಜೋ ನಿರಾಕೃತಃ ॥ ೨೦ ॥

ವಿಚರಂತಿ ಯಥಾ ಮರ್ತ್ಯಾಶ್ಶೋಭಂತೇ ನೈವ ತೇ ಸುರಾಃ ।
ಶರಣಂ ತೇ ವಯಂ ಪ್ರಾಪ್ತಾ ವಧಸ್ತಸ್ಯ ವಿಚಿಂತ್ಯತಾಂ ॥ ೨೧ ॥

॥ ಸನತ್ಕುಮಾರ ಉವಾಚ ॥

ಇತಿ ದೀನವಚಶ್ಶ್ರುತ್ವಾ ದೇವಾನಾಂ ಮಧುಸೂದನಃ ।
ಜಗಾದ ಕರುಣಾಸಿಂಧುರ್ಮೇಘನಿರ್ಹ್ರಾದಯಾ ಗಿರಾ ॥ ೨೨ ॥

॥ ವಿಷ್ಣುರುವಾಚ ॥

ಭಯಂ ತ್ಯಜತ ಹೇ ದೇವಾ ಗಮಿಷ್ಯಾಮ್ಯಹಮಾಹವಂ ।
ಜಲಂಧರೇಣ ದೈತ್ಯೇನ ಕರಿಷ್ಯಾಮಿ ಪರಾಕ್ರಮಂ ॥ ೨೩ ॥

---

೧೯. ಎಲೈ ಕರುಣಾಸಾಗರನೇ, ಓ ಲಕ್ಷ್ಮೀಕಾಂತ, ನಿನ್ನನ್ನು ಮರೆಹೊಕ್ಕಿರುವ ನಮ್ಮನ್ನು ಕಾಪಾಡು. ದೇವತೆಗಳೆಲ್ಲರೂ ಜಲಂಧರನಿಂದ ಸ್ವರ್ಗವನ್ನು ಬಿಟ್ಟು ಓಡಿಸಲ್ಪಟ್ಟಿರುವರು.

೨೦. ಸೂರ್ಯನು ತನ್ನ ಜಾಗದಿಂದ ಓಡಿಸಲ್ಪಟ್ಟನು. ಚಂದ್ರನೂ, ಅಗ್ನಿಯೂ, ಅವನಂತೆಯೇ ಸ್ಥಾನಭ್ರಷ್ಟರಾದರು. ಪಾತಾಳದಿಂದ ಆದಿಶೇಷನೂ ಸಂಯಮನಿಯಿಂದ ಯಮನೂ ಓಡಿಸಲ್ಪಟ್ಟರು.

೨೧. ಮನುಷ್ಯರು ಓಡಾಡುವಂತೆ, ಅಲೆದಾಡುತ್ತಿರುವ ಈ ದೇವತೆಗಳು ಎಂದಿಗೂ ಶೋಭಿಸುವುದಿಲ್ಲ. ನಾವು ನಿನ್ನನ್ನು ಮರೆಹೊಕ್ಕಿರುವೆವು. ಅವನನ್ನು ಕೊಲ್ಲುವ ಬಗೆಯನ್ನು ಯೋಚಿಸು ಎಂದು ಪ್ರಾರ್ಥಿಸಿದರು.

೨೨-೨೩. ಓ ವ್ಯಾಸ, ಈರೀತಿ ದೇವತೆಗಳು ದೈನ್ಯದಿಂದ ನುಡಿದ ಮಾತನ್ನು ಕೇಳಿ ಕರುಣಾಸಾಗರನಾದ ಶ್ರೀ ಹರಿಯು ಮೇಘಗಂಭೀರಧ್ವನಿಯಿಂದ ಅವರನ್ನು ಕುರಿತು, ಎಲೈ ದೇವತೆಗಳಿರಾ, ಭಯಪಡಬೇಡಿ. ನಾನು ಯುದ್ಧಕ್ಕೆ ಹೋಗುವೆನು. ಜಲಂಧರನೊಡನೆ ನಾನು ಸೆಣಸುವೆನು ಎಂದು ಅವರನ್ನು ಸಮಾಧಾನಪಡಿಸಿದನು.

ಇತ್ಯುಕ್ತ್ವಾ ಸಹಸೋತ್ಥಾಯ ದೈತ್ಯಾರಿಃ ಖಿನ್ನಮಾನಸಃ ।
ಆರೋಹದ್ಗರುಡಂ ವೇಗಾತ್ಕೃಪಯಾ ಭಕ್ತವತ್ಸಲಃ ॥ ೨೪ ॥

ಗಚ್ಛಂತಂ ವಲ್ಲಭಂ ದೃಷ್ಟ್ವಾ ದೇವೈಸ್ಸಾರ್ಧಂ ಸಮುದ್ರಜಾ ।
ಸಾಂಜಲಿರ್ಬಾಷ್ಪನಯನಾ ಲಕ್ಷ್ಮೀರ್ವಚನಮಬ್ರವೀತ್ ॥ ೨೫ ॥

॥ ಲಕ್ಷ್ಮ್ಯುವಾಚ ॥

ಅಹಂ ತೇ ವಲ್ಲಭಾ ನಾಥ ಭಕ್ತಾ ಯದಿ ಚ ಸರ್ವದಾ ।
ತತ್ಕಥಂ ತೇ ಮಮ ಭ್ರಾತಾ ಯುದ್ಧೇ ವಧ್ಯಃ ಕೃಪಾನಿಧೇ ॥ ೨೬ ॥

॥ ವಿಷ್ಣುರುವಾಚ ॥

ಜಲಂಧರೇಣ ದೈತ್ಯೇನ ಕರಿಷ್ಯಾಮಿ ಪರಾಕ್ರಮಂ ।
ತ್ವೈಸ್ಸಂಸ್ತುತೋ ಗಮಿಷ್ಯಾಮಿ ಯುದ್ಧಾಯ ತ್ವರಿತಾನ್ವಿತಾಃ ॥ ೨೭ ॥

ರುದ್ರಾಂಶಸಂಭವತ್ವಾಚ್ಚ ಬ್ರಹ್ಮಣೋ ವಚನಾದಪಿ ।
ಪ್ರೀತ್ಯಾ ಚ ತವ ನೈವಾಯಂ ಮಮ ವಧ್ಯೋ ಜಲಂಧರಃ ॥ ೨೮ ॥

---

೨೪. ಈ ರೀತಿಯಾಗಿ ದೈತ್ಯಾಂತಕನಾದ ಶ್ರೀಹರಿಯು ಅವರಿಗೆ ಹೇಳಿ ಮನಸ್ಸಿನಲ್ಲಿ ಮರುಕಪಟ್ಟು, ಭಕ್ತರಲ್ಲಿ ವಾತ್ಸಲ್ಯದಿಂದ ವೇಗವಾಗಿ ಗರುಡನನ್ನೇರಿ ಹೊರಟನು.

೨೫. ದೇವತೆಗಳೊಡನೆ ಹೊರಡುತ್ತಿರುವ ತನ್ನ ಪ್ರಿಯನನ್ನು ಕಂಡು, ಸಮುದ್ರಪುತ್ರಿಯಾದ ಲಕ್ಷ್ಮಿಯು, ಕಣ್ಣಿನಲ್ಲಿ ನೀರುತುಂಬಿ, ಕೈಮುಗಿದುಕೊಂಡು ಶ್ರೀ ಹರಿಯನ್ನು ಕುರಿತು,

೨೬. ಓ ನಾಥ, ಕರುಣಾಸಾಗರ, ನಾನು ನಿನಗೆ ಯಾವಾಗಲೂ ಪ್ರೀತಿ ಪಾತ್ರಳೂ ಸದಾ ನಿನ್ನಲ್ಲಿ ಭಕ್ತಿಯುಳ್ಳವಳೂ ಆಗಿದ್ದರೆ ನನ್ನ ಒಡಹುಟ್ಟಿದವನನ್ನು ನೀನು ಸಂಹರಿಸುವುದು ಯುಕ್ತವೇ ? ಎನ್ನಲು,

೨೭. ಅದನ್ನು ಕೇಳಿ ವಿಷ್ಣುವಿಂತೆಂದನು.—ದೈತ್ಯನಾದ ಜಲಂಧರನೊಡನೆ ನನ್ನ ಪರಾಕ್ರಮವನ್ನು ತೋರುವೆನು· ಆ ದೇವತೆಗಳ ಸ್ತೋತ್ರಕ್ಕೆ ವಶನಾಗಿ ಆತುರದಿಂದ ಯುದ್ಧಕ್ಕೆ ತೆರಳುತ್ತಿದ್ದೇನೆ.

೨೮. ಈ ಜಲಂಧರನು ಸಾಕ್ಷಾದ್ರುದ್ರಾಂಶಸಂಭೂತನಾದುದರಿಂದಲೂ, ಬ್ರಹ್ಮನ ಮಾತಿನಂತೆಯೂ, ನಿನ್ನಲ್ಲಿ ನನಗೆ ಇರುವ ಪ್ರೀತಿಯಿಂದಲೂ ಇವನನ್ನು ನಾನು ಕೊಲ್ಲುವುದಿಲ್ಲ.

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಗರುಡಾರೂಢಶ್ಶಂಖಚಕ್ರಗದಾಸಿಭೃತ್ ।
ವಿಷ್ಣುರ್ವೇಗಾದ್ಯಯೌ ಯೋದ್ಧುಂ ದೇವೈಶ್ಶಕ್ರಾದಿಭಿಸ್ಸಹ ॥ ೨೯ ॥

ದ್ರುತಂ ಸ ಪ್ರಾಪ ತತ್ರೈವ ಯತ್ರ ದೈತ್ಯೋ ಜಲಂಧರಃ ।
ಕುರ್ವನ್ಸಿಂಹರವಂ ದೇವೈರ್ಜ್ವಲದ್ಭಿರ್ವಿಷ್ಣುತೇಜಸಾ ॥ ೩೦ ॥

ಅಥಾರುಣಾನುಜಜವಪಕ್ಷವಾತಪ್ರಪೀಡಿತಾಃ ।
ವಾತ್ಯಾವಿವರ್ತಿತಾ ದೈತ್ಯಾ ಬಭ್ರಮುಃ ಖೇ ಯಥಾ ಘನಾಃ ॥ ೩೧ ॥

ತತೋ ಜಲಂಧರೋ ದೃಷ್ಟ್ವಾ ದೈತ್ಯಾನ್ವಾತ್ಯಾಪ್ರಪೀಡಿತಾನ್ ।
ಉದ್ಧೃತ್ಯ ವಚನಂ ಕ್ರೋಧಾದ್ದ್ರುತಂ ವಿಷ್ಣುಂ ಸಮಭ್ಯಗಾತ್ ॥ ೩೨ ॥

ಏತಸ್ಮಿನ್ನಂತರೇ ದೇವಾಶ್ಚಕ್ರುರ್ಯುದ್ಧಂ ಪ್ರಹರ್ಷಿತಾಃ ।
ತೇಜಸಾ ಚ ಹರೇಃ ಪುಷ್ಟಾ ಮಹಾಬಲಸಮನ್ವಿತಾಃ ॥ ೩೩ ॥

---

೨೯. ಇಂತೆಂದು ನುಡಿದು ಶಂಖ, ಚಕ್ರ, ಗದೆ, ನಂದಕವೆಂಬ ಖಡ್ಗಗಳನ್ನು ಧರಿಸಿ, ವಿಷ್ಣುವು ಗರುಡನನ್ನೇರಿ ಇಂದ್ರಾದಿದೇವತೆಗಳೊಡನೆ, ಯುದ್ಧಕ್ಕೆ ಬೇಗನೆ ಹೊರಟನು.

೩೦. ವಿಷ್ಣುವಿನ ಬೆಂಬಲದಿಂದ ದೇವತೆಗಳು ಉತ್ಸಾಹಭರಿತರಾದರು. ಬಳಿಕ ವಿಷ್ಣುವು ಸಿಂಹನಾದಮಾಡುತ್ತಾ, ಆ ಜಲಂಧರನಿರುವೆಡೆಗೆ ಜಾಗ್ರತೆಯಾಗಿ ಹೋದನು.

೩೧. ಅನಂತರ ಗರುಡನ ರೆಕ್ಕೆಗಳ ವೇಗದಿಂದ ಉಂಟಾದ ಗಾಳಿಗೆ ಸಿಕ್ಕಿ ಪೀಡಿತರಾದ ಆ ದೈತ್ಯರು, ಬಿರುಗಾಳಿಗೆ ಸಿಕ್ಕಿದ ಮೋಡಗಳು ಆಕಾಶದಲ್ಲಿ ತಿರುಗಿ ಹೋಗುವಂತೆ ಗರಗರನೆ ತಿರುಗಿದರು.

೩೨. ಗರುಡನ ರೆಕ್ಕೆಯ ಗಾಳಿಗೆ ಸಿಲುಕಿ ಒದ್ದಾಡುತ್ತಿರುವ ದೈತ್ಯರನ್ನು ಕಂಡು ಜಲಂಧರನು ಕೋಪದಿಂದ ಗರ್ಜಿಸುತ್ತಾ ವಿಷ್ಣುವಿನ ಬಳಿಗೆ ವೇಗವಾಗಿ ನುಗ್ಗಿದನು.

೩೩. ಈ ಮಧ್ಯದಲ್ಲಿ ವಿಷ್ಣುವಿನ ತೇಜಸ್ಸಿನಿಂದ ಮತ್ತಷ್ಟು ಬಲಾಢ್ಯರಾದ ದೇವತೆಗಳು ಬಹು ಹರ್ಷಿತರಾಗಿ ಯುದ್ಧವನ್ನು ಮಾಡತೊಡಗಿದರು.

ಯುದ್ಧೋದ್ಯತಂ ಸಮಾಲೋಕ್ಯ ದೇವಸೈನ್ಯಮುಪಸ್ಥಿತಂ ।
ದೈತ್ಯಾನಾಜ್ಞಾಪಯಾಮಾಸ ಸಮರೇ ಚಾತಿದುರ್ಮದಾನ್ ॥ ೩೪ ॥

॥ ಜಲಂಧರ ಉವಾಚ ॥

ಭೋ ಭೋ ದೈತ್ಯವರಾ ಯೂಯಂ ಯುದ್ಧಂ ಕುರುತ ದುಸ್ತರಂ ।
ಶಕ್ರಾದ್ಯೈರಮರೈರದ್ಯ ಪ್ರಬಲೈಃ ಕಾತರೈಸ್ಸದಾ ॥ ೩೫ ॥

ಮೌರ್ಯಾಸ್ತು ಲಕ್ಷಸಂಖ್ಯಾತಾ ಧೌಮ್ರಾ ಹಿ ಶತಸಂಖ್ಯಕಾಃ ।
ಅಸುರಾಃ ಕೋಟಿಸಂಖ್ಯಾತಾಃ ಕಾಲಕೇಯಾಸ್ತಥೈವ ಚ ॥ ೩೬ ॥

ಕಾಲಕಾನಾಂ ದೌಹೃದಾನಾಂ ಕಂಕಾನಾಂ ಲಕ್ಷಸಂಖ್ಯಯಾ ।
ಅನ್ಯೇऽಪಿ ಸ್ವಬಲೈರ್ಯುಕ್ತಾ ವಿನಿರ್ಯಾಂತು ಮಮಾಜ್ಞಯಾ ॥ ೩೭ ॥

ಸರ್ವೇ ಸಜ್ಜಾ ವಿನಿರ್ಯಾತ ಬಹುಸೇನಾಭಿಸಂಯುತಾಃ ।
ನಾನಾಶಸ್ತ್ರಾರ್ಥಸಂಯುಕ್ತಾ ನಿರ್ಭಯಾ ಗತಸಂಶಯಾಃ ॥ ೩೮ ॥

---

೩೪. ದೇವತೆಗಳ ಸೈನ್ಯಗಳು ಕಲೆತು ಈರೀತಿ ಯುದ್ಧದಲ್ಲಿ ತೊಡಗಿದುದನ್ನು ಕಂಡು ಆ ಜಲಂಧರನು ಯುದ್ಧದಲ್ಲಿ ಬಹಳ ನಿಷ್ಣಾತರಾದ ದೈತ್ಯಾಗ್ರಣಿಗಳನ್ನು ಯುದ್ಧಮಾಡುವಂತೆ ಆಜ್ಞಾಪಿಸಿದನು.

೩೫. ಎಲೈ ದೈತ್ಯಶ್ರೇಷ್ಠರೇ, ಸರ್ವದಾ ಹೇಡಿಗಳೂ, ಹೆದರುವವರೂ ಆದ ಈ ಇಂದ್ರಾದಿದೇವತೆಗಳು ಇಂದೇನೋ ಸ್ವಲ್ಪ ಬಲಿಷ್ಠರಾಗಿರುವಂತಿದೆ. ಇವರೊಡನೆ ಅಸಾಧ್ಯವಾದ ಯುದ್ಧವನ್ನು ಮಾಡಿರಿ.

೩೬-೩೭. ಒಂದು ಲಕ್ಷ ಮೌರ್ಯರೂ, ನೂರು ಮಂದಿ ಧೌಮ್ರರೂ, ಕೋಟಿ ಮಂದಿ ಅಸುರರೂ, ಕೋಟಿ ಮಂದಿ ಕಾಲಕೇಯರೂ, ಒಂದೊಂದು ಲಕ್ಷ ಕಾಲಕರೂ, ದೌಹೃದರೂ, ಕಂಕರೂ, ತಮ್ಮ ತಮ್ಮ ಸೈನ್ಯದೊಡನೆ ಮತ್ತು ಇತರರೂ ನನ್ನಪ್ಪಣೆ ಯಂತೆ ಯುದ್ಧಕ್ಕೆ ಹೊರಡಲಿ.

೩೮. ಎಲ್ಲರೂ ಹೆಚ್ಚು ಹೆಚ್ಚು ಸೇನೆಗಳೊಡನೆ ಕೂಡಿಕೊಂಡು ನಾನಾವಿಧ ವಾದ ಶಸ್ತ್ರಗಳನ್ನೂ, ಅಸ್ತ್ರಗಳನ್ನೂ ಧರಿಸಿ ಸ್ವಲ್ಪವೂ ಭೀತಿಯಿಲ್ಲದೆ ಸಂಶಯವನ್ನು ತೊರೆದು, ಸನ್ನದ್ಧರಾಗಿ ತೆರಳಿರಿ.

ಭೋ ಭೋ ಶಂಭುನಿಶುಂಭೌ ಚ ದೇವಾನ್ಸಮರಕಾತರಾನ್ ।
ಕ್ಷಣೇನ ಸುಮಹಾವೀರ್ಯೌ ತುಚ್ಛಾನ್ನಾಶಯತಂ ಯುವಾಂ ॥ ೩೯ ॥

॥ ಸನತ್ಕುಮಾರ ಉವಾಚ ॥

ದೈತ್ಯಾ ಜಲಂಧರಾಜ್ಞಪ್ತಾ ಇತ್ಥಂ ಯುದ್ಧವಿಶಾರದಾಃ ।
ಯುಯುಧುಸ್ತೇ ಸುರಾಸ್ಸರ್ವೇ ಚತುರಂಗಬಲಾನ್ವಿತಾಃ ॥ ೪೦ ॥

ಗದಾಭಿಸ್ತೀಕ್ಷ್ಣಬಾಣೈಶ್ಚ ಶೂಲಪಟ್ಟಿಶತೋಮರೈಃ ।
ಕೇಚಿತ್ಪರಶುಶೂಲೈಶ್ಚ ನಿರ್ಜಘ್ನುಸ್ತೇ ಪರಸ್ಪರಂ ॥ ೪೧ ॥

ನಾನಾಯುಧೈಃ ಪರೈಸ್ತತ್ರ ನಿಜಘ್ನುಸ್ತೇ ಬಲಾನ್ವಿತಾಃ ।
ದೇವಾಸ್ತಥಾ ಮಹಾವೀರಾ ಹೃಷೀಕೇಶಬಲಾನ್ವಿತಾಃ ।
ಯುಯುಧುಸ್ತೀಕ್ಷ್ಣಬಾಣಾಂಶ್ಚ ಕ್ಷಿಪಂತಸ್ಸಿಂಹವದ್ರವಾಃ ॥ ೪೨ ॥

---

೩೯. ಎಲೈ ಶುಂಭನಿಶುಂಭರೇ, ಮಹಾವೀರ್ಯಶಾಲಿಗಳಾದ ನೀವಿಬ್ಬರೂ ಯುದ್ಧವೆಂದರೆ ಹೆದರಿ ನಡುಗುವ ನೀಚರಾದ ಈ ದೇವತೆಗಳನ್ನು ಕ್ಷಣಮಾತ್ರದಲ್ಲಿ ಸಂಹರಿಸಿಬಿಡಿ ಎಂದನು.

೪೦. ಎಲೈ ವ್ಯಾಸನೇ, ಈರೀತಿ ಜಲಂಧರನಿಂದ ಆಜ್ಞಪ್ತರಾಗಲು, ಯುದ್ಧದಲ್ಲಿ ನಿಪುಣರಾದ ಆ ಅಸುರರೆಲ್ಲರೂ ಆನೆ, ಕುದುರೆ, ತೇರು, ಕಾಲಾಳು ಎಂಬ ಚತುರಂಗಬಲದೊಡಗೂಡಿ ಯುದ್ಧಕ್ಕೆ ತೊಡಗಿದರು.

೪೧. ಗದೆಗಳಿಂದಲೂ, ಹರಿತವಾದ ಬಾಣಗಳಿಂದಲೂ, ಶೂಲ, ಪಟ್ಟಿಸ, ತೋಮರಗಳಿಂದಲೂ, ಕೊಡಲಿ, ಶೂಲಾಯುಧಗಳಿಂದಲೂ ಒಬ್ಬರೊಡನೊಬ್ಬರು ಹೊಡೆದಾಡಿದರು.

೪೨. ಉತ್ತಮವಾದ ಆಯುಧಗಳಿಂದ ಮಹಾಬಲಶಾಲಿಗಳಾದ ಆ ದೈತ್ಯರು ಹೊಡೆದಾಡಿದರು. ಹಾಗೆಯೇ ಮಹಾವೀರರಾದ ದೇವತೆಗಳೂ ವಿಷ್ಣುವಿನ ಬೆಂಬಲದಿಂದ ಕೂಡಿ ಚೂಪಾದ ಬಾಣಗಳನ್ನು ಪ್ರಯೋಗಿಸುತ್ತಾ ಸಿಂಹನಾದವನ್ನು ಮಾಡುತ್ತಾ ಹೋರಾಡಿದರು.

ಕೇಚಿದ್ಬಾಣೈಸ್ಸುತೀಕ್ಷ್ಣೈಶ್ಚ ಕೇಚಿನ್ಮುಸಲತೋಮರೈಃ ।
ಕೇಚಿತ್ಪರಶುಶೂಲೈಶ್ಚ ನಿಜಘ್ನುಸ್ತೇ ಪರಸ್ಪರಂ ॥ ೪೩ ॥

ಇತ್ಥಂ ಸುರಾಣಾಂ ದೈತ್ಯಾನಾಂ ಸಂಗ್ರಾಮಸ್ಸಮಭೂನ್ಮಹಾ ।
ಅತ್ಯುಲ್ಬಣೋ ಮುನೀನಾಂ ಹಿ ಸಿದ್ಧಾನಾಂ ಭಯಕಾರಕಃ ॥ ೪೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ದೇವಯುದ್ಧವರ್ಣನಂ ನಾಮ
ಷೋಡಶೋಽಧ್ಯಾಯಃ.

---

೪೩. ಕೆಲವರು ಮೊನಚಾದ ಬಾಣಗಳಿಂದಲೂ, ಮತ್ತೆ ಕೆಲವರು ಒನಕೆ, ತೋಮರಗಳಿಂದಲೂ, ಬೇರೆ ಕೆಲವರು ಗಂಡುಗೊಡಲಿ, ಶೂಲಗಳಿಂದಲೂ ಪರಸ್ಪರವಾಗಿ ಹೊಡೆದಾಡಿದರು.

೪೪. ಈರೀತಿಯಾಗಿ ದೇವತೆಗಳಿಗೂ, ದೈತ್ಯರಿಗೂ ಬಹು ಭಯಂಕರವಾದ ಯುದ್ಧವೆಸಗಿತು. ಮುನಿಗಳಿಗೂ, ಸಿದ್ಧರಿಗೂ ಭಯವನ್ನುಂಟುಮಾಡುತ್ತಿತ್ತು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಯುದ್ಧಖಂಡದಲ್ಲಿ ಜಲಂಧರವಧೋಪಾಖ್ಯಾನದ
ದೇವಯುದ್ಧವರ್ಣನವೆಂಬ ಹದಿನಾರನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಸಪ್ತದಶೋಽಧ್ಯಾಯಃ

---

॥ ಸನತ್ಕುಮಾರ ಉವಾಚ ॥

ಅಥ ದೈತ್ಯಾ ಮಹಾವೀರ್ಯಾಶ್ಶೂಲೈಃ ಪರಶುಪಟ್ಟಿಶೈಃ ।
ನಿಜಘ್ನುಸ್ಸರ್ವದೇವಾಂಶ್ಚ ಭಯವ್ಯಾಕುಲಮಾನಸಾ ॥ ೧ ॥

ದೈತ್ಯಾಯುಧಃ ಸಮಾವಿದ್ಧದೇಹಾ ದೇವಾಸ್ಸವಾಸವಾಃ ।
ರಣಾದ್ವಿದುದ್ರುವುಸ್ಸರ್ವೇ ಭಯವ್ಯಾಕುಲಮಾನಸಾಃ ॥ ೨ ॥

ಪಲಾಯನಪರಾನ್ದೃಷ್ಟ್ವಾ ಹೃಷೀಕೇಶಸ್ಸುರಾನಥ ।
ವಿಷ್ಣುರ್ವೈ ಗರುಡಾರೂಢೋ ಯೋದ್ಧುಮಭ್ಯಾಯಯೌ ದ್ರುತಂ ॥ ೩ ॥

---

### ಹದಿನೇಳನೆಯ ಅಧ್ಯಾಯವು.

೧. ಸನತ್ಕುಮಾರನು ವ್ಯಾಸಮಹರ್ಷಿಯನ್ನು ಕುರಿತು ಹೇಳತೊಡಗಿದನು-ಬಳಿಕ ಮಹಾಶೂರರಾದ ಆ ದೈತ್ಯರೂ ಶೂಲಗಳಿಂದಲೂ ಪರಶುಪಟ್ಟಸಗಳಿಂದಲೂ, ಭಯದಿಂದ ತತ್ತಳಿಸುತ್ತಿರುವ ಆ ದೇವಸೈನ್ಯವೆಲ್ಲವನ್ನೂ ಚೆನ್ನಾಗಿ ಪ್ರಹರಿಸಿದರು.

೨. ದೈತ್ಯರ ಆಯುಧಗಳಿಂದ ಜರ್ಜರಿತವಾದ ದೇಹವುಳ್ಳವರಾಗಿ ಇಂದ್ರನೇ ಮೊದಲಾದ ಆ ದೇವತೆಗಳೆಲ್ಲರೂ ಭಯದಿಂದ ಕಳವಳಪಡುತ್ತಾ ಯುದ್ಧವನ್ನು ಬಿಟ್ಟು ಪಲಾಯನಮಾಡಿದರು.

೩. ಹೀಗೆ ದೇವತೆಗಳು ಯುದ್ಧಮಾಡಲಾರದೆ ಓಡಿಹೋಗುತ್ತಿರುವುದನ್ನು ವಿಷ್ಣುವು ಕಂಡು ತಾನೇ ಗರುಡನನ್ನೇರಿ ಯುದ್ಧಮಾಡಲು ಬೇಗಬೇಗನೆ ಬಂದನು.

ಸುದರ್ಶನೇನ ಚಕ್ರೇಣ ಸರ್ವತಃ ಪ್ರಸ್ಫುರನ್ರುಚಾ ।
ಸುಶೋಭಿತಕರಾಬ್ಜಶ್ಚ ರೇಜೇ ಭಕ್ತಾಭಯಂಕರಃ ॥ ೪ ॥

ಶಂಖಖಡ್ಗಗದಾಶಾರ್ಙ್ಗಧಾರೀ ಕ್ರೋಧಸಮನ್ವಿತಃ ।
ಕಠೋರಾಸ್ತ್ರೀ ಮಹಾವೀರಸ್ಸರ್ವಯುದ್ಧವಿಶಾರದಃ ॥ ೫ ॥

ಧನುಷಂ ಶಾರ್ಙ್ಗನಾಮಾನಂ ವಿಸ್ಫಾರ್ಯ ವಿನನಾದ ಹ ।
ತಸ್ಯ ನಾದೇನ ತ್ರೈಲೋಕ್ಯಂ ಪೂರಿತಂ ಮಹತಾ ಮುನೇ ॥ ೬ ॥

ಶಾರ್ಙ್ಗನಿಸ್ಸೃತಬಾಣೈಶ್ಚ ದಿತಿಜಾನಾಂ ಶಿರಾಂಸಿ ವೈ ।
ಚಕರ್ತ ಭಗವಾನ್ವಿಷ್ಣುಃ ಕೋಟಿಶೋ ರುಟ್ಸಮಾಕುಲಃ ॥ ೭ ॥

ಅಥಾರುಣಾನುಜಜವಪಕ್ಷವಾತಪ್ರಪೀಡಿತಾಃ ।
ವಾತ್ಯಾವಿವರ್ತಿತಾ ದೈತ್ಯಾ ಬಭ್ರಮುಃ ಖೇ ಯಥಾ ಘನಾಃ ॥ ೮ ॥

---

೪. ಭಕ್ತರಿಗೆ ಅಭಯಪ್ರದನಾದ ಆ ಶ್ರೀಹರಿಯು ಸುತ್ತಲೂ ಕಾಂತಿಯನ್ನು ಬೀರುತ್ತಿರುವ ಸುದರ್ಶನ ಚಕ್ರವನ್ನು ಕೈಯ್ಯಲ್ಲಿ ಹಿಡಿದು ನಿಂತಿರಲು, ಅತಿಯಾಗಿ ಪ್ರಕಾಶಿಸುತ್ತಿದ್ದನು.

೫-೬. ಎಲ್ಲ ವಿಧವಾದ ಯುದ್ಧಗಳಲ್ಲಿಯೂ ಮಹಾನಿಪುಣನೂ, ಮಹಾ ಶೂರನೂ ಆದ ಆ ವಿಷ್ಣುವು ಭಯಂಕರವಾದ ಅಸ್ತ್ರಗಳನ್ನೂ ಶಂಖ, ಗದಾ, ಶಾರ್ಙ್ಗ ಗಳೆಂಬ ಆಯುಧಗಳನ್ನೂ ಧರಿಸಿ ಕುಪಿತನಾಗಿ, ಶಾರ್ಙ್ಗವೆಂಬ ಧನುಸ್ಸನ್ನು ಠೇಂಕರಿ ಸುತ್ತಾ ಸಿಂಹನಾದಮಾಡಿದನು. ಓ ಮುನೀಂದ್ರ! ಆ ಮಹಾನಾದದಿಂದ ಮೂರು ಲೋಕವೂ ತುಂಬಿಹೋಯಿತು.

೭. ಕೋಪಪರವಶನಾದ ಶ್ರೀಹರಿಯು, ಶಾರ್ಙ್ಗಧನುಸ್ಸಿನಿಂದ ಹೊರಹೊರಟ ಬಾಣಗಳಿಂದ ಆ ದೈತ್ಯರ ತಲೆಗಳನ್ನು ಕೋಟಿಗಟ್ಟಲೆ ಕತ್ತರಿಸಿಬಿಟ್ಟನು.

೮. ಅನಂತರ ಆ ದೈತ್ಯರು ಅರುಣನ ತಮ್ಮನಾದ ಆ ಗರುಡನು ವೇಗವಾಗಿ ತನ್ನ ರೆಕ್ಕೆಗಳನ್ನು ಬೀಸಿದುದರಿಂದ ಉಂಟಾದ ಗಾಳಿಗೆ ಸಿಕ್ಕಿ, ಬಿರುಗಾಳಿಗೆ ಸಿಕ್ಕಿದ ಮೋಡಗಳು ಆಕಾಶದಲ್ಲಿ ಅಲೆದಾಡುವಂತೆ ಗರಗರನೆ ಸುತ್ತಾಡಿದರು.

ತತೋ ಜಲಂಧರೋ ದೃಷ್ಟ್ವಾ ದೈತ್ಯಾನ್ವಾತ್ಯಾಪ್ರಪೀಡಿತಾನ್ ।
ಚುಕ್ರೋಧಾತಿ ಮಹಾದೈತ್ಯೋ ದೇವವೃಂದಭಯಂಕರಃ ॥ ೯ ॥

ಮರ್ದಯಂತಂ ಚ ತಂ ದೃಷ್ಟ್ವಾ ದೈತ್ಯಾನ್ಪ್ರಸ್ಫುರಿತಾಧರಃ ।
ಯೋದ್ಧುಮುಭ್ಯಾಯಯೌ ವೀರೋ ವೇಗೇನ ಹರಿಣಾ ಸಹ ॥ ೧೦ ॥

ಸ ಚಕಾರ ಮಹಾನಾದಂ ದೇವಾಸುರಭಯಂಕರಂ ।
ದೈತ್ಯಾನಾಮಧಿಪಃ ಕರ್ಣಾ ವಿದೀರ್ಣಾಃ ಶ್ರವಣಾತ್ತತಃ ॥ ೧೧ ॥

ಭಯಂಕರೇಣ ದೈತ್ಯಸ್ಯ ನಾದೇನಾ ಪೂರಿತಂ ತದಾ ।
ಜಲಂಧರಸ್ಯ ಮಹತಾ ಚಕಂಪೇ ಸಕಲಂ ಜಗತ್ ॥ ೧೨ ॥

ತತಸ್ಸಮಭವದ್ಯುದ್ಧಂ ವಿಷ್ಣುದೈತ್ಯೇಂದ್ರಯೋರ್ಮಹತ್ ।
ಆಕಾಶಂ ಕುರ್ವತೋರ್ಬಾಣೈಸ್ತದಾ ನಿರವಕಾಶವತ್ ॥ ೧೩ ॥

---

೯. ಈರೀತಿ ಗರುಡನ ರೆಕ್ಕೆಗಳ ಗಾಳಿಗೆ ಸಿಲುಕಿ ಪರಿದಾಡುತ್ತಿರುವ ತನ್ನವರನ್ನು ಕಂಡು, ದೇವತೆಗಳ ಸಮೂಹವನ್ನೇ ನಡುಗಿಸುವ ಆ ಜಲಂಧರನು ಮಹಾಕೋಪವನ್ನು ತಾಳಿದನು.

೧೦. ದೈತ್ಯರನ್ನು ಸದೆಬಡಿಯುತ್ತಿರುವ ಆ ಹರಿಯನ್ನು ಕಂಡು ಕೋಪದಿಂದ ತುಟಿಗಳು ನಡುಗುತ್ತಿರಲು, ಆ ಜಲಂಧರನು ಅವನೊಡನೆ ಸೆಣಸಬೇಕೆಂದು ಬೇಗನೆ ನುಗ್ಗಿಬಂದನು.

೧೧-೧೨. ಬಳಿಕ ಆ ದೈತ್ಯರಾಜನು, ದೇವದಾನವರೂ ತಲ್ಲಣಿಸಿಹೋಗುವಂತೆ ಒಂದು ಸಲ ಭಯಂಕರವಾಗಿ ಸಿಂಹನಾದವನ್ನು ಮಾಡಿದನು. ಅದನ್ನು ಕೇಳಿದೊಡನೆಯೇ, ಕಿವಿಗಳು ಬಿರಿದುಹೋದುವು. ಆ ಜಲಂಧರನು ಮಾಡಿದ ಬಲವಾದ ಆ ಬೊಬ್ಬೆಯಿಂದ ಜಗತ್ತೆಲ್ಲವೂ ತುಂಬಿಹೋಗಿ, ತತ್ತಳಿಸಿಹೋಯಿತು.

೧೩. ಆಮೇಲೆ ಆ ಹರಿಜಲಂಧರರಿಗೆ ಬಹು ಭಾರಿಯಾದ ಯುದ್ಧವು ಜರುಗಿತು. ಆ ಯುದ್ಧದಲ್ಲಿ ಅವರು ಬಿಟ್ಟ ಬಾಣಗಳಿಂದ ಆಕಾಶವೆಲ್ಲ ಸ್ವಲ್ಪವೂ ಅವಕಾಶವಿಲ್ಲದಂತೆ ಮುಚ್ಚಿಹೋಯಿತು.

ತಯೋಃ ಶ್ಚ ತೇನ ಯುದ್ಧೇನ ಪರಸ್ಪರಮುಭೂನ್ಮುನೇ ।
ದೇವಾಸುರರ್ಷಿಸಿದ್ಧಾನಾಂ ಭೀಕರೇಣಾತಿವಿಸ್ಮಯಃ ॥ ೧೪ ॥

ವಿಷ್ಣುರ್ದೈತ್ಯಸ್ಯ ಬಾಣೌಘೈರ್ಧ್ವಜಂ ಛತ್ರಂ ಧನುಶ್ಶರಾನ್ ।
ಚಿಚ್ಛೇದ ತಂ ಚ ಹೃದಯೇ ಬಾಣೇನೈಕೇನ ತಾಡಯನ್ ॥ ೧೫ ॥

ತತೋ ದೈತ್ಯಸ್ಸಮುತ್ಪತ್ಯ ಗದಾಪಾಣಿಸ್ತ್ವರಾನ್ವಿತಃ ।
ಆಹತ್ಯ ಗರುಡಂ ಮೂರ್ಧ್ನಿ ಪಾತಯಾಮಾಸ ಭೂತಲೇ ॥ ೧೬ ॥

ವಿಷ್ಣುಂ ಜಘಾನ ಶೂಲೇನ ತೀಕ್ಷ್ಣೇಣ ಪ್ರಸ್ಫುರದ್ರುಚಾ ।
ಹೃದಯೇ ಕ್ರೋಧಸಂಯುಕ್ತೋ ದೈತ್ಯಃ ಪ್ರಸ್ಫುರಿತಾಧರಃ ॥ ೧೭ ॥

ವಿಷ್ಣುರ್ಗದಾಂ ಚ ಖಡ್ಗೇನ ಚಿಚ್ಛೇದ ಪ್ರಹಸನ್ನಿವ ।
ತಂ ವಿವ್ಯಾಧ ಶರೈಸ್ತೀಕ್ಷ್ಣೈಶ್ಶಾರ್ಙ್ಗ ವಿಸ್ಫೂರ್ಯ ದೈತ್ಯಹಾ ॥ ೧೮ ॥

---

೧೪. ಓ ವ್ಯಾಸ, ಈರೀತಿ ಪರಸ್ಪರವಾಗಿ ಬಹು ಘೋರವಾಗಿ ಅವರೀರ್ವರೂ ಮಾಡುತ್ತಿರುವ ಯುದ್ಧವನ್ನು ಕಂಡು ದೇವತೆಗಳೂ, ಅಸುರರೂ, ಋಷಿಗಳೂ, ಸಿದ್ಧರೂ ಬಹುವಾಗಿ ಆಶ್ಚರ್ಯಪಟ್ಟರು.

೧೫. ವಿಷ್ಣುವು ಅಲೆಯಲೆಯಾಗಿ ಬಾಣಗಳನ್ನು ಬಿಡುತ್ತಾ ಆ ದೈತ್ಯನ ಧ್ವಜವನ್ನೂ, ಛತ್ರಿಯನ್ನೂ, ಬಿಲ್ಲುಬಾಣಗಳನ್ನೂ ಕತ್ತರಿಸಿದುದಲ್ಲದೆ, ಒಂದು ಬಾಣದಿಂದ ಅವನ ಎದೆಯಮೇಲೆ ಪ್ರಹರಿಸಿದನು.

೧೬. ಅದನ್ನು ತಪ್ಪಿಸಿಕೊಂಡು ಆ ದೈತ್ಯನು ಮೇಲಕ್ಕೆ ನೆಗೆದು, ಗದೆಯನ್ನು ಕೈಲಿ ಹಿಡಿದು ವೇಗದಿಂದ ಮುನ್ನುಗ್ಗಿ, ವಿಷ್ಣುವಿನ ವಾಹನವಾದ ಗರುಡನನ್ನು ತಲೆಯ ಮೇಲೆ ಹೊಡೆದಪ್ಪಳಿಸಿ, ನೆಲಕ್ಕೆ ಕೆಡವಿದನು.

೧೭. ಕೋಪದಿಂದ ತುಟಿಗಳನ್ನು ಅಲುಗಿಸುತ್ತಾ, ಬಹಳ ಮೊನಚಾಗಿ ಥಳ ಥಳಿಸುತ್ತಿರುವ ಶೂಲವೊಂದರಿಂದ, ವಿಷ್ಣುವನ್ನು ಎದೆಯಲ್ಲಿ ಇರಿದನು.

೧೮. ದೈತ್ಯಾಂತಕನಾದ ವಿಷ್ಣುವು ನಗುನಗುತ್ತಾ ಲೀಲಾಮಾತ್ರದಿಂದ ತನ್ನ ಖಡ್ಗದಿಂದ ಆ ದೈತ್ಯನ ಶೂಲವನ್ನೂ, ಗದೆಯನ್ನೂ ಕತ್ತರಿಸಿಬಿಟ್ಟುದಲ್ಲದೆ ಶಾರ್ಙ್ಗವೆಂಬ ಧನುಸ್ಸನ್ನು ಝೇಂಕಾರಮಾಡಿ, ಚೂಪಾದ ಬಾಣಗಳಿಂದ ಅವನನ್ನು ಹೊಡೆದನು.

ವಿಷ್ಣುರ್ಜಲಂಧರಂ ದೈತ್ಯಂ ಭಯಂಕರೇಣ ಶರೇಣ ಹ ।
ಕ್ರೋಧಾವಿಷ್ಟೋಽತಿತೀಕ್ಷ್ಣೇನ ಜಘಾನಾಶು ಸುರಾರಿಹಾ ॥ ೧೯ ॥

ಆಗತಂ ತಸ್ಯ ತಂ ಬಾಣಂ ದೃಷ್ಟ್ವಾ ದೈತ್ಯೋ ಮಹಾಬಲಃ ।
ಛಿತ್ವಾ ಬಾಣೇನ ವಿಷ್ಣುಂ ಚ ಜಘಾನ ಹೃದಯೇ ದ್ರುತಂ ॥ ೨೦ ॥

ಕೇಶವೋಽಪಿ ಮಹಾಬಾಹುಂ ವಿಕ್ಷಿಪ್ತಮಸುರೇಣ ತಂ ।
ಶರಂ ತಿಲಪ್ರಮಾಣೇನ ಛಿತ್ವಾ ವೀರೋ ನನಾದ ಹ ॥ ೨೧ ॥

ಪುನರ್ಬಾಣಂ ಸಮಾಧತ್ತ ಧನುಷಿ ಕ್ರೋಧವೇಪಿತಃ ।
ಮಹಾಬಲೋಽಥ ಬಾಣೇನ ಚಿಚ್ಛೇದ ಸ ಶಿಲೀಮುಖಂ ॥ ೨೨ ॥

ವಾಸುದೇವಃ ಪುನರ್ಬಾಣಂ ನಾಶಾಯ ವಿಬುಧದ್ವಿಷಃ ।
ಕ್ರೋಧೇನಾಧತ್ತ ಧನುಷಿ ಸಿಂಹವದ್ವಿನನಾದ ಹ ॥ ೨೩ ॥

---

೧೯. ಸುರವೈರಿವಿನಾಶಕನಾದ ಆ ವಿಷ್ಣುವು ಕ್ರೋಧಾನ್ವಿತನಾಗಿ, ಅತಿ ಚೂಪಾಗಿಯೂ ಭಯಂಕರವಾಗಿಯೂ ಇರುವ ಬಾಣದಿಂದ ಆ ಜಲಂಧರನನ್ನು ಪ್ರಹರಿಸಿದನು.

೨೦. ಆ ಬಾಣವು ತನ್ನ ಬಳಿಗೆ ಬರುತ್ತಿರುವುದನ್ನು ಕಂಡು ಮಹಾಬಲಿಷ್ಠನಾದ ಆ ದೈತ್ಯನು, ತನ್ನ ಒಂದು ಬಾಣದಿಂದ ಅದನ್ನು ಕತ್ತರಿಸಿ ವಿಷ್ಣುವಿನ ಹೃದಯದಲ್ಲಿ ಬಲವಾಗಿ ಹೊಡೆದನು.

೨೧. ಮಹಾಬಾಹುವಾದ ಶ್ರೀಹರಿಯೂ ಸಹ, ಅಸುರನಿಂದ ಬಿಡಲ್ಪಟ್ಟ ಆ ಬಾಣವನ್ನು ಎಳ್ಳುಕಾಳಿನಷ್ಟು ಚೂರುಚೂರಾಗುವಂತೆ ಕತ್ತರಿಸಿ ವೀರನಾದವನ್ನು ಮಾಡಿದನು.

೨೨. ಕೋಪದಿಂದ ನಡುಗುತ್ತಾ, ಮತ್ತೆ ಧನುಸ್ಸಿನಲ್ಲಿ ಬಾಣವನ್ನು ಹೂಡಿ ಆ ದೈತ್ಯನಮೇಲೆ ಪ್ರಯೋಗಿಸಿದನು. ಆ ದೈತ್ಯನೂ ಅದನ್ನು ಬಾಣದಿಂದ ಕತ್ತರಿಸಿ ಬಿಟ್ಟನು.

೨೩. ಇದನ್ನು ನೋಡಿ ಶ್ರೀಹರಿಯು ಮಹಾಕೋಪದಿಂದ ಆ ದೇವವೈರಿಯು ನಾಶವಾಗಲೆಂದು ಧನುಸ್ಸಿನಲ್ಲಿ ಬಾಣವನ್ನು ತೊಟ್ಟು ಸಿಂಹನಾದವನ್ನು ಮಾಡಿದನು.

ಜಲಂಧರೋऽಥ ದೈತ್ಯೇಂದ್ರಃ ಕೋಪಚ್ಛಿನ್ನಾಧರೋ ಬಲೀ ।
ಶರೇಣ ಸ್ವೇನ ಶಾರ್ಙ್ಗಾಖ್ಯಂ ಧನುಶ್ಚಿಚ್ಛೇದ ವೈಷ್ಣವಂ ॥ ೨೪ ॥

ಪುನರ್ಬಾಣೈಸ್ಸುತೀಕ್ಷ್ಣೈಶ್ಚ ಜಘಾನ ಮಧುಸೂದನಂ ।
ಉಗ್ರವೀರ್ಯೋ ಮಹಾವೀರೋ ದೇವಾನಾಂ ಭಯಕಾರಕಃ ॥ ೨೫ ॥

ಸ ಛಿನ್ನಧನ್ವಾ ಭಗವಾನ್ಕೇಶವೋ ಲೋಕರಕ್ಷಕಃ ।
ಜಲಂಧರಸ್ಯ ನಾಶಾಯ ಚಿಕ್ಷೇಪ ಸ್ವಗದಾಂ ಪರಾಂ ॥ ೨೬ ॥

ಸಾ ಗದಾ ಹರಿಣಾ ಕ್ಷಿಪ್ತಾ ಜ್ವಲಜ್ಜ್ವಲಸನ್ನಿಭಾ ।
ಅಮೋಘಗತಿಕಾ ಶೀಘ್ರಂ ತಸ್ಯ ದೇಹೇ ಲಲಾಗ ಹ ॥ ೨೭ ॥

ತಯಾ ಹತೋ ಮಹಾದೈತ್ಯೋ ನ ಚಚಾಲಾಪಿ ಕಿಂಚನ ।
ಜಲಂಧರೋ ಮದೋನ್ಮತ್ತಃ ಪುಷ್ಪಮಾಲಾ ಹತೋ ಯಥಾ ॥ ೨೮ ॥

---

೨೪. ಅನಂತರ ದೈತ್ಯರಾಜನಾದ ಜಲಂಧರನು ಕೋಪದಿಂದ ತುಟಿಯನ್ನು ಕಡಿಯುತ್ತಾ, ತನ್ನ ಬಾಣವೊಂದರಿಂದ ವಿಷ್ಣುವಿನ ಶಾರ್ಙ್ಗವೆಂಬ ಧನುಸ್ಸನ್ನು ಕತ್ತರಿಸಿಬಿಟ್ಟನು.

೨೫. ಮಹಾಬಲಶಾಲಿಯೂ, ಅಸಾಧ್ಯವಾದ ಪರಾಕ್ರಮವುಳ್ಳವನೂ ಆದ ಆ ದೈತ್ಯನು ಬಹು ಮೊನಚಾದ ಅಲುಗುಳ್ಳ ಬಾಣಗಳಿಂದ ವಿಷ್ಣುವನ್ನು ಮತ್ತೆ ಮತ್ತೆ ಪ್ರಹರಿಸಿದನು.

೨೬. ಈರೀತಿ ತನ್ನ ಧನುಸ್ಸು ಕತ್ತರಿಸಿ ಹೋಗಲಾಗಿ, ಲೋಕಪಾಲಕನಾದ ಆ ಕೇಶವನು, ಜಲಂಧರನು ವಿನಾಶವನ್ನು ಹೊಂದಲೆಂದು ತನ್ನ ಅಮೋಘವಾದ ಗದೆಯನ್ನು ಬೀಸಿ ಅವನಮೇಲೆ ಬಿಟ್ಟನು.

೨೭. ಎಂದಿಗೂ ವ್ಯರ್ಥವಾಗದ ಆ ಗದೆಯು, ಉರಿಯುವ ಕೆಂಡದಂತೆ ಕಿಡಿಗಳನ್ನು ಕಾರುತ್ತಾ ಬೇಗನೆ ಬಂದು ಆ ಜಲಂಧರನ ಮೈಗೆ ಜೋರಾಗಿ ಬಡಿಯಿತು.

೨೮. ಆ ಗದೆಯು ಏಟಿನಿಂದ ಮಹಾಮದಾಂಧನಾದ ಆ ಜಲಂಧರನಿಗೆ ಏನೂ ನೋವಾಗಲಿಲ್ಲ. ಹೂವಿನ ಮಾಲೆಯಿಂದ ಹೊಡೆದಂತೆ ಹಿತಕರವಾಗಿತ್ತು.

ತತೋ ಜಲಂಧರಃ ಕ್ರೋಧೀ ದೇವತ್ರಾಸಕರೋಽಕ್ಷಿಪತ್ ।
ತ್ರಿಶೂಲಮನಲಾಕಾರಂ ಹರಯೇ ರಣದುರ್ಮದಃ ॥ ೨೯ ॥

ಅಥ ವಿಷ್ಣುಸ್ತತ್ತ್ರಿಶೂಲಂ ಚಿಚ್ಛೇದ ತರಸಾದ್ರುತಂ ।
ನಂದಕಾಖ್ಯೇನ ಖಡ್ಗೇನ ಸ್ಮೃತ್ವಾ ಶಿವಪದಾಂಬುಜಂ ॥ ೩೦ ॥

ಛಿನ್ನೇ ತ್ರಿಶೂಲೇ ದೈತ್ಯೇಂದ್ರ ಉತ್ಪಲ್ಯ ಸಹಸಾ ದ್ರುತಂ ।
ಆಗತ್ಯ ಹೃದಯೇ ವಿಷ್ಣುಂ ಜಘಾನ ದೃಢಮುಷ್ಟಿನಾ ॥ ೩೧ ॥

ಸೋಽಪಿ ವಿಷ್ಣುರ್ಮಹಾವೀರೋಽವಿಗಣಯ್ಯ ಚ ತದ್ವ್ಯಥಾಂ ।
ಜಲಂಧರಂ ಚ ಹೃದಯೇ ಜಘಾನ ದೃಢಮುಷ್ಟಿನಾ ॥ ೩೨ ॥

ತತಸ್ತೌ ಬಾಹುಯುದ್ಧೇನ ಯುಯುಧಾತೇ ಮಹಾಬಲೌ ।
ಬಾಹುಭಿರ್ಮುಷ್ಟಿಭಿಶ್ಚೈವ ಜಾನುಭಿರ್ನಾದಯನ್ಮಹೀಂ ॥ ೩೩ ॥

---

೨೯. ಬಳಿಕ ರಣದುರ್ಮದನಾದ ಆ ಜಲಂಧರನು ಮಹಾಕೋಪವನ್ನು ತಾಳಿ, ಬೆಂಕಿಯಂತೆ ಜ್ವಲಿಸುತ್ತಿರುವ ತ್ರಿಶೂಲವೊಂದನ್ನು ತೆಗೆದು ವಿಷ್ಣುವಿನ ಮೇಲೆ ಪ್ರಯೋಗಿಸಿದನು.

೩೦. ಶಿವನ ಪಾದಕಮಲವನ್ನು ಹೃದಯದಲ್ಲಿ ಸ್ಮರಿಸಿ ವಿಷ್ಣುವು ತನ್ನ ಬಳಿಗೆ ಬರುತ್ತಿರುವ ಆ ತ್ರಿಶೂಲವನ್ನು ತನ್ನ ನಂದಕವೆಂಬ ಕತ್ತಿಯಿಂದ ಕ್ಷಣಮಾತ್ರದಲ್ಲಿ ಕತ್ತರಿಸಿಬಿಟ್ಟನು.

೩೧. ಹೀಗೆ ತನ್ನ ತ್ರಿಶೂಲವು ಕತ್ತರಿಸಿ ಕೆಳಗೆ ಬಿದ್ದೊಡನೆಯೇ ಆ ದೈತ್ಯ ರಾಜನು ಒಂದೇ ಏಟಿಗೆ ಛಂಗನೆ ಹಾರಿ ಮುಂದೆ ಬಂದು ದೃಢವಾದ ಮುಷ್ಟಿಯಿಂದ ವಿಷ್ಣುವಿನ ಎದೆಯಮೇಲೆ ಬಲವಾಗಿ ಅಪ್ಪಳಿಸಿದನು.

೩೨. ಮಹಾಪರಾಕ್ರಮಶಾಲಿಯಾದ ಆ ವಿಷ್ಣುವೂ ಸಹ ಆ ಏಟನ್ನು ಗಣನೆಗೇ ತಾರದೆ ತಾನೂ ಬಿಗಿಯಾದ ಮುಷ್ಟಿಯಿಂದ ಜಲಂಧರನ ಹೃದಯದಲ್ಲಿ ಅಪ್ಪಳಿಸಿ ಹೊಡೆದನು.

೩೩. ಬಳಿಕ ಮಹಾಬಲಶಾಲಿಗಳಾದ ಅವರೀರ್ವರೂ ಭೂಮಿಯು ಪ್ರತಿಧ್ವನಿಯಾಗುವಂತೆ ಬಾಹುಗಳಿಂದಲೂ ಮುಷ್ಟಿಗಳಿಂದಲೂ ಮಂಡಿಗಳಿಂದಲೂ ಹೊಡೆದಾಡುತ್ತಾ ಮಲ್ಲಯುದ್ಧದಲ್ಲಿ ತೊಡಗಿದರು.

ಏವಂ ಹಿ ಸುಚಿರಂ ಯುದ್ಧಂ ಕೃತ್ವಾ ತೇನಾಸುರೇಣ ವೈ ।
ವಿಸ್ಮಿತೋಽಭೂನ್ಮುನಿಶ್ರೇಷ್ಠ ಹೃದಿ ಗ್ಲಾನಿಮವಾಪ ಹ ॥ ೩೪ ॥

ಅಥ ಪ್ರಸನ್ನೋ ಭಗವಾನ್ಮಾಯೀ ಮಾಯಾವಿದಾಂ ವರಃ ।
ಉವಾಚ ದೈತ್ಯರಾಜಾನಂ ಮೇಘಗಂಭೀರಯಾ ಗಿರಾ ॥ ೩೫ ॥

॥ ವಿಷ್ಣುರುವಾಚ ॥

ಭೋ ಭೋ ದೈತ್ಯವರಶ್ರೇಷ್ಠ ಧನ್ಯಸ್ತ್ವಂ ರಣದುರ್ಮದಃ ।
ಮಹಾಯುಧವರೈರ್ಯಸ್ತ್ವಂ ನ ಭೀತೋ ಹಿ ಮಹಾಪ್ರಭುಃ ॥ ೩೬ ॥

ಏಭಿರೇವಾಯುಧೈರುಗ್ರೈರ್ದೈತ್ಯಾ ಹಿ ಬಹವೋ ಹತಾಃ ।
ಮಹಾಜೌ ದುರ್ಮದಾ ವೀರಾಶ್ಛಿನ್ನದೇಹಾ ಮೃತಿಂ ಗತಾಃ ॥ ೩೭ ॥

ಯುದ್ಧೇನ ತೇ ಮಹಾದೈತ್ಯ ಪ್ರಸನ್ನೋಽಸ್ಮಿ ಮಹಾನ್ಭವಾನ್ ।
ನ ದೃಷ್ಟಸ್ತ್ವತ್ಸಮೋ ವೀರಸ್ತ್ರೈಲೋಕ್ಯೇ ಸಚರಾಚರೇ ॥ ೩೮ ॥

---

೩೪. ಎಲೈ ಮುನಿಶ್ರೇಷ್ಠನೇ, ಈರೀತಿ ಬಹುಕಾಲ ಆ ಜಲಂಧರನೊಡನೆ ಯುದ್ಧವನ್ನು ಮಾಡಿದಮೇಲೆ ಇವನ ಬಲವನ್ನು ನೋಡಿ ವಿಷ್ಣುವಿಗೆ ಆಶ್ಚರ್ಯವಾಯಿತು. ಹೃದಯದಲ್ಲಿ ಬಳಲಿಕೆಯೂ ಉಂಟಾಯಿತು.

೩೫. ಅನಂತರ ಮಾಯಾವಿಗಳೆಲ್ಲೆಲ್ಲಾ ಮೊದಲನೆಯವನಾದ ಆ ಭಗವಂತನು ಆ ದೈತ್ಯಾಧಿಪತಿಯನ್ನು ಕುರಿತು ಮೇಘಗಂಭೀರಧ್ವನಿಯಿಂದ ಈರೀತಿ ನುಡಿದನು.

೩೬. ಎಲೈ ದೈತ್ಯಶ್ರೇಷ್ಠನಾದ ಜಲಂಧರನೇ, ಯುದ್ಧದಲ್ಲಿ ಅಸಮಾನಸಾಹಸಶೀಲನಾದ ನೀನೇ ಧನ್ಯನು. ದಿವ್ಯವಾದ ಆಯುಧಗಳಿಗೆ ಸ್ವಲ್ಪವೂ ಹೆದರದೆ ಇರುವೆಯಲ್ಲಾ.

೩೭. ಇಂತಹ ಕ್ರೂರವಾದ ಆಯುಧಗಳಿಂದಲೇ ಹಿಂದೆ ಅನೇಕಮಂದಿ ಯುದ್ಧೋನ್ಮತ್ತರೂ ಮಹಾಶೂರರೂ ಆದ ದೈತ್ಯರ ಶರೀರಗಳೆಲ್ಲವೂ ಛಿನ್ನಛಿನ್ನವಾಗಿರುವವು. ಅನೇಕರು ಮರಣವನ್ನೂ ಹೊಂದಿರುವರು.

೩೮. ಎಲೈ ದೈತ್ಯಶ್ರೇಷ್ಠನೇ, ನಿನ್ನ ಯುದ್ಧದಿಂದ ನಾನು ಪ್ರಸನ್ನನಾಗಿರುವೆನು. ನೀನು ದೊಡ್ಡವನೇ ಸರಿ. ಚರಾಚರಗಳಿಂದ ಕೂಡಿರುವ ಈ ಮೂರು ಲೋಕಗಳಲ್ಲಿಯೂ ನಿನಗೆ ಸಮಾನನಾದವನನ್ನು ನಾನೆಲ್ಲೂ ಕಂಡಿರಲಿಲ್ಲ.

ವರಂ ವರಯ ದೈತ್ಯೇಂದ್ರ ಪ್ರೀತೋಽಸ್ಮಿ ತವ ವಿಕ್ರಮಾತ್ ।
ಅದೇಯಮಪಿ ತೇ ದದ್ಮಿ ಯತ್ತೇ ಮನಸಿ ವರ್ತತೇ ॥ ೩೯ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ವಿಷ್ಣೋರ್ಮಾಯಾವಿನೋ ಹರೇಃ ।
ಪ್ರತ್ಯುವಾಚ ಮಹಾಬುದ್ಧಿರ್ದೈತ್ಯರಾಜೋ ಜಲಂಧರಃ ॥ ೪೦ ॥

॥ ಜಲಂಧರ ಉವಾಚ ॥

ಯದಿ ಭಾವುಕ ತುಷ್ಟೋಽಸಿ ವರಮೇತಂ ದದಸ್ವ ಮೇ ।
ಮದ್ಭಗಿನ್ಯಾ ಮಯಾ ಸಾರ್ಧಂ ಮದ್ಗೇಹೇ ಸಗಣೋ ವಸ ॥ ೪೧ ॥

॥ ಸನತ್ಕುಮಾರ ಉವಾಚ ॥

ತದಾಕರ್ಣ್ಯ ವಚಸ್ತಸ್ಯ ಮಹಾದೈತ್ಯಸ್ಯ ಖಿನ್ನಧೀಃ ।
ತಥಾಸ್ತ್ವಿತಿ ಚ ದೇವೇಶೋ ಜಗಾದ ಭಗವಾನ್ಹರಿಃ ॥ ೪೨ ॥

---

೩೯. ಓ ದೈತ್ಯೇಂದ್ರ, ನಿನಗೆ ಬೇಕಾದ ವರವನ್ನು ಕೇಳಿಕೋ. ನಿನ್ನ ಪರಾಕ್ರಮದಿಂದ ನಾನು ಸಂತೋಷಗೊಂಡಿರುವೆನು. ನಿನ್ನ ಮನಸ್ಸಿನಲ್ಲಿ ಏನಿದೆಯೋ ಅದನ್ನು-ಕೊಡಬಾರದಂತಹುದೇ ಆದರೂ-ಕೊಟ್ಟುಬಿಡುವೆನು ಎಂದನು.

೪೦. ಸನತ್ಕುಮಾರನಿಂತೆಂದನು :— ಓ ವ್ಯಾಸ, ಈರೀತಿ ಮಹಾಮಾಯಾ ವಿಶಾರದನಾದ ವಿಷ್ಣುವು ನುಡಿದುದನ್ನು ಕೇಳಿ ಮಹಾಬುದ್ಧಿಶಾಲಿಯಾದ ಆ ದೈತ್ಯರಾಜ ನಾದ ಜಲಂಧರನು ಅವನನ್ನು ಕುರಿತು ಇಂತೆಂದನು.

೪೧. ಭಾವನೆ, ನಿನಗೆ ಸಂತೋಷವುಂಟಾಗಿರುವುದೇ ಆದರೆ ನನ್ನ ಸೋದರಿ ಯಾದ ಲಕ್ಷ್ಮಿಯೊಡನೆ ನಿನ್ನ ಪರಿವಾರಸಮೇತನಾಗಿ ನನ್ನ ಮನೆಯಲ್ಲಿ ವಾಸಮಾಡಿ ಕೊಂಡಿರು. ನನಗೆ ಈ ವರವನ್ನು ಕೊಡು ಎಂದನು.

೪೨. ಈರೀತಿ ಆ ದೈತ್ಯೇಂದ್ರನು ವರವನ್ನು ಬೇಡಿದುದನ್ನು ಕೇಳಿ ಭಗವಂತ ನಾದ ಆ ಶ್ರೀಹರಿಯು ಖಿನ್ನನಾಗಿ ಹಾಗೆಯೇ ಆಗಲೆಂದು ಒಪ್ಪಿದನು.

ಉವಾಸ ಸ ತತೋ ವಿಷ್ಣುಸ್ಸರ್ವದೇವಗಣೈಸ್ಸಹ ।
ಜಲಂಧರಂ ನಾಮ ಪುರಮಾಗತ್ಯ ರಮಯಾ ಸಹ ॥ ೪೩ ॥

ಅಥೋ ಜಲಂಧರೋ ದೈತ್ಯಸ್ಸ್ವಭಗಿನ್ಯಾ ಚ ವಿಷ್ಣುನಾ ।
ಉವಾಸ ಸ್ವಾಲಯಂ ಪ್ರಾಪ್ತೋ ಹರ್ಷಾಕುಲಿತಮಾನಸಃ ॥ ೪೪ ॥

ಜಲಂಧರೋಽಥ ದೇವಾನಾಮಧಿಕಾರೇಷು ದಾನವಾನ್ ।
ಸ್ಥಾಪಯಿತ್ವಾ ಸಹರ್ಷಸ್ಸನ್ಪುನರಾಗಾನ್ಮಹೀತಲಂ ॥ ೪೫ ॥

ದೇವಗಂಧರ್ವಸಿದ್ಧೇಷು ಯತ್ಕಿಂಚಿದ್ರತ್ನಸಂಚಿತಂ ।
ತದಾತ್ಮವಶಗಂ ಕೃತ್ವಾಽತಿಷ್ಠತ್ಸಾಗರನಂದನಃ ॥ ೪೬ ॥

ಪಾತಾಲಭವನೇ ದೈತ್ಯಂ ನಿಶುಂಭಂ ಸುಮಹಾಬಲಂ ।
ಸ್ಥಾಪಯಿತ್ವಾ ಸ ಶೇಷಾದೀನಾನಯದ್ಭೂತಲಂ ಬಲೀ ॥ ೪೭ ॥

---

೪೩. ಬಳಿಕ ಶ್ರೀಹರಿಯು ದೇವತೆಗಳೆಲ್ಲರೊಡನೆಯೂ ಲಕ್ಷ್ಮಿಯೊಡನೆಯೂ, ಜಲಂಧರನೆಂಬ ಆ ದೈತ್ಯನ ಪಟ್ಟಣಕ್ಕೆ ಬಂದು ಅಲ್ಲಿ ವಾಸಮಾಡತೊಡಗಿದನು.

೪೪. ಆಮೇಲೆ ಜಲಂಧರನು ತನ್ನ ಸಹೋದರಿಯೊಡನೆಯೂ ವಿಷ್ಣುವಿನೊಡನೆಯೂ, ತನ್ನ ಮನೆಯನ್ನು ಸೇರಿ ಬಹಳ ಸಂತೋಷದಿಂದ ಅಲ್ಲಿ ವಾಸಮಾಡುತ್ತಿದ್ದನು.

೪೫. ಕೆಲವು ಕಾಲಾನಂತರ ಜಲಂಧರನು ದೇವತೆಗಳು ಇದ್ದ ಅಧಿಕಾರಗಳಲ್ಲೆಲ್ಲಾ ದಾನವರನ್ನು ನೇಮಿಸಿ, ಹರ್ಷದಿಂದ ಮತ್ತೆ ಭೂಮಿಗೆ ಹಿಂದಿರುಗಿದನು.

೪೬. ದೇವತೆಗಳು ಗಂಧರ್ವರು, ಸಿದ್ಧರು ಮೊದಲಾದವರು ಗುಟ್ಟಾಗಿ ಕೂಡಿಟ್ಟಿದ್ದ ರತ್ನರಾಶಿಗಳೆಲ್ಲವನ್ನೂ ಆ ಸಾಗರಸುತನಾದ ಜಲಂಧರನು ತನ್ನ ಅಧೀನಕ್ಕೆ ಸೇರಿಸಿಕೊಂಡನು.

೪೭. ಇದಲ್ಲದೆ ಆ ಬಲಿಷ್ಠನಾದ ದೈತ್ಯನು, ಪಾತಾಲಲೋಕದಲ್ಲಿ ಬಲಾಢ್ಯನಾದ ನಿಶುಂಭನೆಂಬ ದೈತ್ಯನನ್ನು ಆಳುವಂತೆ ನಿಯಮಿಸಿ, ಶೇಷ, ತಕ್ಷಕ ಮೊದಲಾದವರನ್ನು ಭೂಮಿಗೆ ಕರೆದುಕೊಂಡು ಬಂದುಬಿಟ್ಟನು.

ದೇವಗಂಧರ್ವಸಿದ್ಧೌಘಾನ್ಸರ್ಪರಾಕ್ಷಸಮಾನುಷಾನ್ ।
ಸ್ವಪುರೇ ನಾಗರಾನ್ಕೃತ್ವಾ ಶಶಾಸ ಭುವನತ್ರಯಂ　　　　॥ ೪೮ ॥

ಏವಂ ಜಲಂಧರಃ ಕೃತ್ವಾ ದೇವಾನ್ಸ್ವವಶವರ್ತಿನಃ ।
ಧರ್ಮೇಣ ಪಾಲಯಾಮಾಸ ಪ್ರಜಾಃ ಪುತ್ರಾನಿವೌರಸಾನ್　　　　॥ ೪೯ ॥

ನ ಕಶ್ಚಿದ್ವ್ಯಾಧಿತೋ ನೈವ ದುಃಖಿತೋ ನ ಕೃಶಸ್ತಥಾ ।
ನ ದೀನೋ ದೃಶ್ಯತೇ ತಸ್ಮಿನ್ಧರ್ಮಾದ್ರಾಜ್ಯಂ ಪ್ರಶಾಸತಿ　　　　॥ ೫೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರೋಪಾಖ್ಯಾನೇ
ವಿಷ್ಣುಜಲಂಧರಯುದ್ಧವರ್ಣನಂ ನಾಮ
ಸಪ್ತದಶೋಽಧ್ಯಾಯಃ,

---

೪೮. ದೇವತೆಗಳು, ಗಂಧರ್ವರು, ಸಿದ್ಧರು, ಸರ್ಪಗಳು, ರಾಕ್ಷಸರು, ಮನುಷ್ಯರು, ಇವರೆಲ್ಲರನ್ನೂ ತನ್ನ ಪ್ರಜೆಗಳಾಗಿರುವಂತೆ ಮಾಡಿಕೊಂಡು ಮೂರು ಲೋಕವನ್ನೂ ಆಳಿದನು.

೪೯. ಈರೀತಿಯಾಗಿ ಆ ಜಲಂಧರನು ದೇವತೆಗಳೆಲ್ಲರನ್ನೂ ತನ್ನ ಕೈಕೆಳಗಿಟ್ಟುಕೊಂಡು, ಪ್ರಜೆಗಳನ್ನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಧರ್ಮದಿಂದ ರಾಜ್ಯಪರಿಪಾಲನೆಮಾಡಿದನು.

೫೦. ಆತನು ಧರ್ಮದಿಂದ ರಾಜ್ಯಭಾರವನ್ನು ಮಾಡುತ್ತಿರಲು ಯಾವನೂ ಖಾಯಿಲೆಯಿಂದ ನರಳುತ್ತಿರಲಿಲ್ಲ. ಒಬ್ಬನೂ, ದುಃಖದಿಂದ ಕೊರಗುತ್ತಿರಲಿಲ್ಲ. ಯಾವನೂ ಬಡವಾಗಿರಲಿಲ್ಲ. ಯಾರಿಗೂ ಬಡತನವೆಂಬುದಿರಲಿಲ್ಲ.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಯುದ್ಧಖಂಡದಲ್ಲಿ ಜಲಂಧರೋಪಾಖ್ಯಾನದಲ್ಲಿ
ವಿಷ್ಣುಜಲಂಧರಯುದ್ಧವರ್ಣನವೆಂಬ ಹದಿನೇಳಯ ಅಧ್ಯಾಯವು
ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಅಷ್ಟಾದಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಏವಂ ಶಾಸತಿ ಧರ್ಮೇಣ ಮಹೀಂ ತಸ್ಮಿನ್ಮಹಾಸುರೇ ।
ಬಭೂವುರ್ದುಃಖಿನೋ ದೇವಾ ಭ್ರಾತೃಭಾವಾನ್ಮುನೀಶ್ವರ ॥ ೧ ॥

ದುಃಖಿತಾಸ್ತೇ ಸುರಾಸ್ಸರ್ವೇ ಶಿವಂ ಶರಣಮಾಯಯುಃ ।
ಮನಸಾ ಶಂಕರಂ ದೇವದೇವಂ ಸರ್ವಪ್ರಭುಂ ಪ್ರಭುಂ ॥ ೨ ॥

ತುಷ್ಟುವುರ್ವಾಗ್ಭಿರಿಷ್ಟಾಭಿರ್ಭಗವಂತಂ ಮಹೇಶ್ವರಂ ।
ನಿವೃತ್ತಯೇ ಸ್ವದುಃಖಸ್ಯ ಸರ್ವದಂ ಭಕ್ತವತ್ಸಲಂ ॥ ೩ ॥

---

### ಹದಿನೆಂಟನೆಯ ಅಧ್ಯಾಯವು.

೧-೨. ಸನತ್ಕುಮಾರನಿಂತೆಂದನು :—ಎಲೈ ವ್ಯಾಸಮಹರ್ಷಿಯೇ, ಕೇಳು. ಈರೀತಿಯಾಗಿ ಆ ಮಹಾದೈತ್ಯನು ಧರ್ಮದಿಂದ ಭೂಲೋಕವನ್ನು ಪಾಲಿಸುತ್ತಿರಲಾಗಿ ದಾಯಾದಮಾತ್ಸರ್ಯದಿಂದ ದುಃಖಿತರಾದ ದೇವತೆಗಳೆಲ್ಲರೂ, ಎಲ್ಲರಿಗೂ ಒಡೆಯನೂ, ದೇವದೇವನೂ ಆದ ಶಿವನನ್ನು ಮನಸ್ಸಿನಲ್ಲಿಯೇ ಮರೆಹೊಕ್ಕರು.

೩. ತಮ್ಮ ಸಂಕಟವು ಪರಿಹಾರವಾಗಲೆಂದು ಭಕ್ತರಲ್ಲಿ ವಾತ್ಸಲ್ಯವುಳ್ಳವನೂ ಎಲ್ಲವನ್ನೂ ಕೊಡತಕ್ಕವನೂ ಆದ ಆ ಮಹೇಶ್ವರನನ್ನು ಪ್ರೀತಿಕರವಾದ ಮಾತುಗಳಿಂದ ಸ್ತೋತ್ರಮಾಡಿದರು.

ಆಹೂಯ ಸ ಮಹಾದೇವೋ ಭಕ್ತಾನಾಂ ಸರ್ವಕಾಮದಃ ।
ನಾರದಂ ಪ್ರೇರಯಾಮಾಸ ದೇವಕಾರ್ಯಚಿಕೀರ್ಷಯಾ ॥ ೪ ॥

ಅಥ ದೇವಮುನಿರ್ಜ್ಞಾನೀ ಶಂಭುಭಕ್ತಸ್ಸತಾಂ ಗತಿಃ ।
ಶಿವಾಜ್ಞಯಾ ಯಯೌ ದೈತ್ಯಪುರೀ ದೇವಾನ್ಸ ನಾರದಃ ॥ ೫ ॥

ವ್ಯಾಕುಲಾಸ್ತೇ ಸುರಾಸ್ಸರ್ವೇ ವಾಸವಾದ್ಯಾ ದ್ರುತಂ ಮುನಿಂ ।
ಆಗಚ್ಛಂತಂ ಸಮಾಲೋಕ್ಯ ಸಮುತ್ತಸ್ಥುರ್ಹಿ ನಾರದಂ ॥ ೬ ॥

ದದುಸ್ತ ಆಸನಂ ನತ್ವಾ ಮುನಯೇ ಪ್ರೀತಿಪೂರ್ವಕಂ ।
ನಾರದಾಯ ಸುರಾಶ್ಯಕ್ರಮುಖಾ ಉತ್ಕಂಠಿತಾನನಾಃ ॥ ೭ ॥

ಸುಖಾಸೀನಂ ಮುನಿವರಮಾಸನೇ ಸುಪ್ರಣಮ್ಯ ತಂ ।
ಪುನಃ ಪ್ರೋಚುಃ ಸುರಾ ದೀನಾ ವಾಸವಾದ್ಯಾ ಮುನೀಶ್ವರಂ ॥ ೮ ॥

---

೪. ಭಕ್ತರ ಇಷ್ಟಾರ್ಥಗಳೆಲ್ಲವನ್ನೂ ಈಡೇರಿಸುವ ಆ ಮಹಾದೇವನು ನಾರದನನ್ನು ಕರೆದು ದೇವತೆಗಳ ಕೆಲಸವನ್ನು ನೆರವೇರಿಸುವಂತೆ ಆತನನ್ನು ಪ್ರೇರೇಪಿಸಿದನು.

೫. ಆ ನಾರದನು ಮಹಾಜ್ಞಾನಿಯೂ, ಶಿವನ ಭಕ್ತನು, ಸಾಧುಗಳಿಗೆಲ್ಲಾ ಬೇಕಾದವನು, ದೇವಋುಷಿಯು. ಇಂತಹ ಆ ಮುನಿಶ್ರೇಷ್ಠನು ಶಿವನ ಅಪ್ಪಣೆಯಂತೆ ಆ ದೈತ್ಯನ ನಗರದಲ್ಲಿರುವ ದೇವತೆಗಳ ಬಳಿಗೆ ಹೋಗಲು,

೬. ದುಃಖದಿಂದ ತಳಮಳಿಸುತ್ತಿರುವ ಇಂದ್ರಾದಿ ದೇವತೆಗಳೆಲ್ಲರೂ, ನಾರದ ಮಹರ್ಷಿಯು ತಮ್ಮಬಳಿಗೆ ಬರುತ್ತಿರುವುದನ್ನು ಕಂಡು ಝುಗ್ಗನೆ ಮೇಲಕ್ಕೆದ್ದು ನಿಂತರು.

೭. ಅವರೆಲ್ಲರೂ ತಮ್ಮ ಮುಖದಲ್ಲಿ ಕುತೂಹಲವನ್ನು ವ್ಯಕ್ತಪಡಿಸುತ್ತ ಆ ನಾರದಮಹರ್ಷಿಗೆ ನಮಸ್ಕಾರಮಾಡಿ ಪ್ರೀತಿಯಿಂದ ಆಸನವನ್ನು ಇತ್ತು ಉಪಚರಿಸಿದರು.

೮. ಆ ನಾರದಮಹರ್ಷಿಯು ಆ ಪೀಠದಲ್ಲಿ ಸುಖವಾಗಿ ಕುಳಿತುಕೊಂಡಮೇಲೆ ಖಿನ್ನರಾದ ಆ ಇಂದ್ರಾದಿ ದೇವತೆಗಳು ಮತ್ತೊಮ್ಮೆ ನಮಸ್ಕರಿಸಿ, ಆತನನ್ನು ಕುರಿತು,

॥ ದೇವಾ ಊಚುಃ ॥

ಭೋ ಭೋ ಮುನಿವರಶ್ರೇಷ್ಠ ದುಃಖಂ ಶೃಣು ಕೃಪಾಕರ ।
ಶ್ರುತ್ವಾ ತನ್ನಾಶಯ ಕ್ಷಿಪ್ರಂ ಪ್ರಭುಸ್ತ್ವಂ ಶಂಕರಪ್ರಿಯಃ ॥ ೯ ॥

ಜಲಂಧರೇಣ ದೈತ್ಯೇನ ಸುರಾ ವಿದ್ರಾವಿತಾ ಭೃಶಂ ।
ಸ್ವಸ್ಥಾನಾದ್ಭರ್ತೃಭಾವಾಚ್ಚ ದುಃಖಿತಾ ವಯಮಾಕುಲಾಃ ॥ ೧೦ ॥

ಸ್ವಸ್ಥಾನಾದುಷ್ಣರಶ್ಮಿಶ್ಚ ಚಂದ್ರೋ ನಿಸ್ಸಾರಿತಸ್ತಥಾ ।
ವಹ್ನಿಶ್ಚ ಧರ್ಮರಾಜಶ್ಚ ಲೋಕಪಾಲಾಸ್ತಥೇತರೇ ॥ ೧೧ ॥

ಸುಬಲಿಷ್ಠೇನ ವೈ ತೇನ ಸರ್ವೇ ದೇವಾಃ ಪ್ರಪೀಡಿತಾಃ ।
ದುಃಖಂ ಪ್ರಾಪ್ತಾ ವಯಂ ಚಾತಿ ಶರಣಂ ತ್ವಾಂ ಸಮಾಗತಾಃ ॥ ೧೨ ॥

ಸಂಗ್ರಾಮೇ ಸ ಹೃಷೀಕೇಶಂ ಸ್ವವಶಂ ಕೃತವಾನ್ಬಲೀ ।
ಜಲಂಧರೋ ಮಹಾದೈತ್ಯಃ ಸರ್ವಾಮರವಿಮರ್ದಕಃ ॥ ೧೩ ॥

---

೯. ಎಲೈ ಮುನಿಶ್ರೇಷ್ಠನೇ, ನಮ್ಮ ದುಃಖವನ್ನು ನಿನ್ನಲ್ಲಿ ಬಿನ್ನವಿಸುವೆವು, ಆಲಿಸು. ಎಲೈ ಕರುಣಾಕರನೇ, ಆ ದುಃಖವನ್ನು ಬೇಗನೆ ಹೋಗಲಾಡಿಸು. ಶಿವನಿಗೆ ಪ್ರಿಯನಾದ ನೀನೇ ನಮಗೆ ಗತಿಯಾಗಿರುವೆ.

೧೦. ದೈತ್ಯರಾಜನಾದ ಈ ಜಲಂಧರನು ದೇವತೆಗಳಾದ ನಮ್ಮೆಲ್ಲರನ್ನೂ ನಮ್ಮನಮ್ಮ ಸ್ಥಳಗಳಿಂದಲೂ ಅಧಿಕಾರಗಳಿಂದಲೂ ಓಡಿಸಿರುವನು. ಬಹುವಾಗಿ ದುಃಖವನ್ನು ಹೊಂದಿ ಕಳವಳಪಡುತ್ತಲಿರುವೆವು.

೧೧. ತನ್ನ ಸ್ಥಾನದಿಂದ ಸೂರ್ಯನು ಓಡಿಸಲ್ಪಟ್ಟನು. ಚಂದ್ರನೂ ಹಾಗೆಯೇ ನಿಸ್ಸಾರಿತನಾದನು. ಈ ಅಗ್ನಿಯೂ ಯಮನೂ ಇನ್ನೂ ಉಳಿದ ದಿಕ್ಪಾಲಕರೂ ಎಲ್ಲರೂ ತಮ್ಮತಮ್ಮ ಅಧಿಕಾರಗಳನ್ನು ಕಳೆದುಕೊಂಡು ಸ್ಥಾನಭ್ರಷ್ಟರಾದರು.

೧೨. ಮಹಾಬಲಾಢ್ಯನಾದ ಆ ದೈತ್ಯನು ದೇವತೆಗಳಾದ ನಮ್ಮೆಲ್ಲರನ್ನೂ ಬಹುವಾಗಿ ಪೀಡಿಸುತ್ತಿರುವನು. ಕಡುದುಃಖವನ್ನು ಹೊಂದಿ ನಿನ್ನನ್ನೀಗ ಮರೆ ಹೊಕ್ಕಿರುವೆವು.

೧೩. ಜಲಂಧರನು ಯುದ್ಧದಲ್ಲಿ ದೇವತೆಗಳೆಲ್ಲರನ್ನೂ ನುಚ್ಚುನೂರುಮಾಡು ವಷ್ಟು ಬಲಿಷ್ಠನಾಗಿರುವನು. ಆ ಶ್ರೀಹರಿಯನ್ನೂ ತನ್ನ ವಶನನ್ನಾಗಿ ಮಾಡಿಕೊಂಡು ಬಿಟ್ಟನು.

ತಸ್ಯ ವಶ್ಯೋ ವರಾಧೀನೋಽವಾತ್ಸೀತ್ತತ್ಸದನೇ ಹರಿಃ ।
ಸ ಲಕ್ಷ್ಮ್ಯಾ ಸಹಿತೋ ವಿಷ್ಣುರ್ಯೋ ನಸ್ಸರ್ವಾರ್ಥಸಾಧಕಃ ॥ ೧೪ ॥

ಜಲಂಧರವಿನಾಶಾಯ ಯತ್ನಂ ಕುರು ಮಹಾಮತೇ ।
ತ್ವಂ ನೋ ದೈವವಶಾತ್ಪ್ರಾಪ್ತಸ್ಸದಾ ಸರ್ವಾರ್ಥಸಾಧಕಃ ॥ ೧೫ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಮಮರಾಣಾಂ ಸ ನಾರದಃ ।
ಆಶ್ವಾಸ್ಯ ಮುನಿಶಾರ್ದೂಲಸ್ತಾನುವಾಚ ಕೃಪಾಕರಃ ॥ ೧೬ ॥

॥ ನಾರದ ಉವಾಚ ॥

ಜಾನೇಽಹಂ ವೈ ಸುರಾ ಯೂಯಂ ದೈತ್ಯರಾಜಪರಾಜಿತಾಃ ।
ದುಃಖಂ ಪ್ರಾಪ್ತಾಃ ಪೀಡಿತಾಶ್ಚ ಸ್ಥಾನಾನ್ನಿಸ್ಸಾರಿತಾಃ ಖಲು ॥ ೧೭ ॥

---

೧೪. ನಮ್ಮೆಲ್ಲರ ಕೆಲಸಗಳೆಲ್ಲವನ್ನೂ ಸಾಧಿಸುವ ಆ ಶ್ರೀಹರಿಯು ತಾನಿತ್ತ ವರಕ್ಕೆ ಕಟ್ಟುಬಿದ್ದು ಅವನ ಕೈಕೆಳಗೆ ಲಕ್ಷ್ಮಿಯೊಂದಿಗೆ ಅವನ ಮನೆಯಲ್ಲೇ ವಾಸವಾಗಿರುವನು.

೧೫. ಎಲೈ ಮಹಾಬುದ್ಧಿಶಾಲಿಯೇ, ಆ ಜಲಂಧರನು ನಾಶವಾಗುವಂತೆ ಏನಾದರೂ ಪ್ರಯತ್ನವನ್ನು ಮಾಡು. ನೀನು ಯಾವಾಗಲೂ ನಮಗೆ ಬೇಕಾದುದನ್ನು ಸಾಧಿಸುವೆ. ನಮ್ಮ ಅದೃಷ್ಟದಿಂದಲೇ ಇಲ್ಲಿಗೆ ಬಂದಿರುವೆ ಎಂದರು.

೧೬. ಸನತ್ಕುಮಾರನಿಂತೆಂದನು :—ಎಲೈ ವ್ಯಾಸನೇ, ಕೇಳು. ಆ ನಾರದ ಮಹರ್ಷಿಯು ಆ ದೇವತೆಗಳ ಮಾತನ್ನು ಕೇಳಿ ಕನಿಕರದಿಂದ ಅವರೆಲ್ಲರನ್ನೂ ಸಮಾಧಾನಗೊಳಿಸಿ,

೧೭. ಎಲೈ ದೇವತೆಗಳಿರಾ, ನೀವೆಲ್ಲರೂ ಆ ದೈತ್ಯರಾಜನಿಂದ ಪರಾಜಿತರಾಗಿ ದುಃಖಪಡುತ್ತಿರುವುದನ್ನೂ ಹಿಂಸೆಗೊಳಗಾಗಿರುವುದನ್ನೂ ನಾನು ಬಲ್ಲೆನು. ನೀವೆಲ್ಲರೂ ನಿಮ್ಮನಿಮ್ಮ ಜಾಗಗಳಿಂದ ಹೊರದೂಡಲ್ಪಟ್ಟಿರುವಿರೆಂಬುದನ್ನು ಬಲ್ಲೆನು.

ಸ್ವಶಕ್ತ್ಯಾ ಭವತಾಂ ಸ್ವಾರ್ಥಂ ಕರಿಷ್ಯೇ ನಾತ್ರ ಸಂಶಯಃ ।
ಅನುಕೂಲೋಽಹಮಿಹ ವೋ ದುಃಖಂ ಪ್ರಾಪ್ತಾ ಯತೋಽಮರಾಃ ॥೧೮॥

॥ ಸನತ್ಕುಮಾರ ಉವಾಚ ॥

ಏವಮುಕ್ತ್ವಾ ಮುನಿಶ್ರೇಷ್ಠ ದ್ರಷ್ಟುಂ ದಾನವವಲ್ಲಭಂ ।
ಆಶ್ವಾಸ್ಯ ಸಕಲಾನ್ದೇವಾನ್ಜಲಂಧರಸಭಾಂ ಯಯೌ ॥ ೧೯ ॥

ಅಥಾಗತಂ ಮುನಿಶ್ರೇಷ್ಠಂ ದೃಷ್ಟ್ವಾ ದೇವೋ ಜಲಂಧರಃ ।
ಉತ್ಥಾಯ ಪರಯಾ ಭಕ್ತ್ಯಾ ದದೌ ಶ್ರೇಷ್ಠಾಸನಂ ವರಂ ॥ ೨೦ ॥

ಸ ತಂ ಸಂಪೂಜ್ಯ ವಿಧಿವದ್ದಾನವೇಂದ್ರೋಽತಿವಿಸ್ಮಿತಃ ।
ಸುಪ್ರಹಸ್ಯ ತದಾ ವಾಕ್ಯಂ ಜಗಾದ ಮುನಿಸತ್ತಮಂ ॥ ೨೧ ॥

॥ ಜಲಂಧರ ಉವಾಚ ॥

ಕುತ ಆಗಮ್ಯತೇ ಬ್ರಹ್ಮನ್ಕಿಂ ಚ ದೃಷ್ಟಂ ತ್ವಯಾ ಕ್ವಚಿತ್ ।
ಯಥಾರ್ಥಮಿಹ ಆಯಾತಸ್ತದಾಜ್ಞಾಪಯ ಮಾಂ ಮುನೇ ॥ ೨೨ ॥

---

೧೮. ನೀವೆಲ್ಲ ದೇವತೆಗಳೂ ದುಃಖದಲ್ಲಿ ಮುಳುಗಿರುವಿರಿ. ನನ್ನ ಶಕ್ತಿಯಿಂದಲೇ ನಿಮ್ಮೆಲ್ಲರ ಸ್ವಾರ್ಥವನ್ನು ಸಾಧಿಸುವೆನು. ಈ ವಿಷಯದಲ್ಲಿ ಸಂದೇಹ ಪಡಬೇಡಿ. ನಾನು ನಿಮಗೆ ಅನುಕೂಲವಾಗಿರುವೆನು ಎಂದನು.

೧೯. ಎಲೈ ಮುನೀಂದ್ರ, ಈರೀತಿ ನುಡಿದು ಆ ನಾರದಮಹರ್ಷಿಯು, ದೇವತೆಗಳನ್ನು ಸಮಾಧಾನಗೊಳಿಸಿ, ಆ ದಾನವೇಶ್ವರನನ್ನು ಕಾಣಲು, ಆತನ ಸಭೆಗೆ ಹೋದನು.

೨೦. ನಾರದಮಹರ್ಷಿಯು ತನ್ನ-ಬಳಿಗೆ ಬಂದುದನ್ನು ಕಂಡು, ಆ ದೈತ್ಯಾಧಿಪತಿಯಾದ ಜಲಂಡರನು ಭಕ್ತ್ಯತಿಶಯದಿಂದ ಮೇಲಕ್ಕೆದ್ದು ನಿಂತು, ಗೌರವಿಸಿ ಆತನಿಗೆ ಉತ್ತಮವಾದ ಪೀಠವನ್ನು ಕೊಟ್ಟು ಉಪಚರಿಸಿದನು.

೨೧-೨೨. ಆ ದಾನವೇಶ್ವರನು, ಆ ಮುನಿಶ್ರೇಷ್ಠನನ್ನು ವಿಧಿವತ್ತಾಗಿ ಪೂಜಿಸಿ, ಮಂದಹಾಸದಿಂದ ಓ ಬ್ರಾಹ್ಮಣೋತ್ತಮ, ಎಲ್ಲಿಂದ ಬರುತ್ತಿರುವೆ? ಎಲ್ಲೆಲ್ಲಿ ಏನೇನು ವಿಶೇಷಗಳನ್ನು ಕಂಡೆ? ಏತಕ್ಕೋಸ್ಕರ ಇಲ್ಲಿಗೆ ಬಂದೆ? ಇದನ್ನೆಲ್ಲಾ ದಯವಿಟ್ಟು ನನಗೆ ಅಪ್ಪಣೆಕೊಡಿಸು ಎಂದು ಪ್ರಾರ್ಥಿಸಿದನು.

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ದೈತ್ಯೇಂದ್ರಸ್ಯ ಮಹಾಮುನಿಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ನಾರದೋ ಹಿ ಜಲಂಧರಂ　　॥ ೨೩ ॥

॥ ನಾರದ ಉವಾಚ ॥

ಸರ್ವದಾನವದೈತ್ಯೇಂದ್ರ ಜಲಂಧರ ಮಹಾಮತೇ ।
ಧನ್ಯಸ್ತ್ವಂ ಸರ್ವಲೋಕೇಶ ರತ್ನಭೋಕ್ತಾ ತ್ವಮೇವ ಹಿ　　॥ ೨೪ ॥

ಮದಾಗಮನಹೇತುಂ ವೈ ಶೃಣು ದೈತ್ಯೇಂದ್ರಸತ್ತಮ ।
ಯದರ್ಥಮಿಹ ಜಾಯಾತಸ್ತ್ವಹಂ ವಕ್ಷ್ಯೇಽಖಿಲಂ ಹಿ ತತ್　　॥ ೨೫ ॥

ಗತಃ ಕೈಲಾಸಶಿಖರಂ ದೈತ್ಯೇಂದ್ರಾಹಂ ಯದೃಚ್ಛಯಾ ।
ಯೋಜನಾಯುತವಿಸ್ತೀರ್ಣಂ ಕಲ್ಪದ್ರುಮಮಹಾವನಂ　　॥ ೨೬ ॥

---

೨೩. ಸನತ್ಕುಮಾರನಿಂತೆಂದನು. ಈರೀತಿ ದೈತ್ಯೇಂದ್ರನಾದ ಜಲಂಧರನು ನುಡಿದುದನ್ನು ಕೇಳಿ ಆ ನಾರದಮಹರ್ಷಿಯು ಸುಪ್ರೀತನಾಗಿ ಅವನನ್ನು ಕುರಿತು,

೨೪. ಎಲೈ ಜಲಂಧರನೇ, ನೀನು ಸರ್ವದಾನವರಿಗೂ, ದೈತ್ಯರಿಗೂ ಅಧಿಪತಿಯಾಗಿರುವೆ. ಮಹಾಬುದ್ಧಿಶಾಲಿಯು. ಎಲ್ಲ-ಲೋಕಗಳಿಗೂ ಒಡೆಯನಾದ ನೀನೇ ಧನ್ಯನು. ಎಲ್ಲ ತೆರನಾದ ರತ್ನಗಳನ್ನೂ ಅನುಭವಿಸತಕ್ಕವನು.

೨೫. ಎಲೈ ದೈತ್ಯೇಂದ್ರನೇ, ನಾಸಿಲ್ಲಿಗೆ ಬಂದುದರ ಕಾರಣವೇನೆಂಬುದನ್ನು ಹೇಳುವೆನು ಕೇಳು. ನಾಸಿಲ್ಲಿಗೆ ಏತಕ್ಕೋಸ್ಕರ ಬಂದೆನು. ಅದೆಲ್ಲವನ್ನೂ ವಿವರವಾಗಿ ನಿನಗೆ ತಿಳಿಸುವೆನು.

೨೬. ಓ ದೈತ್ಯರಾಜ, ಒಮ್ಮೆ ನಾನು ಅಕಸ್ಮಾತ್ತಾಗಿ ಕೈಲಾಸಪರ್ವತಕ್ಕೆ ಹೋಗಿದ್ದೆನು. ಆ ಕೈಲಾಸವು ಹತ್ತು ಸಹಸ್ರ ಯೋಜನಗಳಷ್ಟು ಅಗಲವಾಗಿರುವುದು. ಅಲ್ಲಿಯ ಉದ್ಯಾನವನಗಳಲ್ಲಿ ಕಲ್ಪದ್ರುಮಗಳೇ ಕಂಗೊಳಿಸುತ್ತಿರುವುವು.

ಕಾಮಧೇನುಶತಾಕೀರ್ಣಂ ಚಿಂತಾಮಣಿಸುದೀಪಿತಂ ।
ಸರ್ವರುಕ್ಮಮಯಂ ದಿವ್ಯಂ ಸರ್ವತ್ರಾದ್ಭುತಸೇವಿತಂ ॥ ೨೭ ॥

ತತ್ರೋಮಯಾ ಸಹಾಸೀನಂ ದೃಷ್ಟವಾನಸ್ಮಿ ಶಂಕರಂ ।
ಸರ್ವಾಂಗಸುಂದರಂ ಗೌರಂ ತ್ರಿನೇತ್ರಂ ಚಂದ್ರಶೇಖರಂ ॥ ೨೮ ॥

ತಂ ದೃಷ್ಟ್ವಾ ಮಹದಾಶ್ಚರ್ಯಂ ವಿತರ್ಕೋ ಮೇಽಭವತ್ತದಾ ।
ಕ್ವಾಪೀದೃಶೀ ಭವೇದ್ವೃದ್ಧಿಸ್ತ್ರಿಲೋಕ್ಯೇ ವಾ ನ ವೇತಿ ಚ ॥ ೨೯ ॥

ತಾವತ್ತವಾಪಿ ದೈತ್ಯೇಂದ್ರ ಸಮೃದ್ಧಿಸ್ಸಂಸ್ಮೃತಾ ಮಯಾ ।
ತದ್ವಿಲೋಕನಕಾಮೋಽಹಂ ತ್ವತ್ಸಾಂನಿಧ್ಯಮಿಹಾಗತಃ ॥ ೩೦ ॥

॥ ಸನತ್ಕುಮಾರ ಉವಾಚ ॥

ಇತಿ ನಾರದತಃ ಶ್ರುತ್ವಾ ಸ ದೈತ್ಯೇಂದ್ರೋ ಜಲಂಧರಃ ।
ಸ್ವಸಮೃದ್ಧಿಂ ಸಮಗ್ರಾಂ ವೈ ದರ್ಶಯಾಮಾಸ ಸಾದರಂ ॥ ೩೧ ॥

---

೨೭. ಅಲ್ಲಿ ಕಾಮಧೇನುಗಳು ನೂರಾರುಗಟ್ಟಲೆ ವಿಹರಿಸುತ್ತಿರುವುವು. ಕೇಳಿದ್ದೆಲ್ಲವನ್ನೂ ಕೊಡುವ ಚಿಂತಾಮಣಿಯೆಂಬ ರತ್ನಗಳು ಎಲ್ಲೆಲ್ಲೂ ಹೊಳೆಯುತ್ತಿರುವುವು. ಅಲ್ಲಿ ಎಲ್ಲವೂ ಚಿನ್ನದಿಂದ ಮಾಡಲ್ಪಟ್ಟುದೇ ಆಗಿರುವುದು. ಎಲ್ಲೆಲ್ಲಿ ನೋಡಿದರೂ ಬಹಳ ಅದ್ಭುತವಾಗಿ ಆ ಕೈಲಾಸವು ಶೋಭಿಸುತ್ತಿರುವುದು.

೨೮. ಅಲ್ಲಿ ಸರ್ವಾಂಗಸುಂದರನೂ, ಶುಭ್ರವಾದ ವರ್ಣವುಳ್ಳವನೂ, ಮೂರು ಕಣ್ಣುಗಳಿಂದ ಕೂಡಿರುವನೂ, ಬಾಲಚಂದ್ರನನ್ನು ಶಿರಸ್ಸಿನಲ್ಲಿ ತಳೆದವನೂ, ಆದ ಶಿವನು ಉಮೆಯೊಡನೆ ಕುಳಿತಿರುವುದನ್ನು ಕಂಡೆನು.

೨೯. ಈರೀತಿ ಮಹಾ ಆಶ್ಚರ್ಯಗಳಿಗೆ ನೆಲೆಯಾದ ಆತನನ್ನು ಕಂಡು, ಇಂತಹ ಸಂಪತ್ತು ಮೂರು ಲೋಕಗಳಲ್ಲಿ ಮತ್ತೆಲ್ಲಿಯಾದರೂ ಇರುವುದೇ? ಇಲ್ಲವೇ, ಎಂಬುದಾಗಿ ನನಗೆ ಸಂದೇಹವುಂಟಾಯಿತು.

೩೦. ಈ ವಿಚಾರವು ನನ್ನ ತಲೆಯಲ್ಲಿ ಸುಳಿಯುತ್ತಲೇ, ನಿನ್ನ ಸಂಪತ್ತು ನನ್ನ ಸ್ಮೃತಿಪಥಕ್ಕೆ ಬಂದಿತು. ಆ ಸಂಪತ್ತನ್ನು ನೋಡೋಣವೆಂದೇ ನಾನೀಗ ನಿನ್ನ ಬಳಿಗೆ ಬಂದಿರುವೆನು ಎಂದನು.

೩೧. ಸನತ್ಕುಮಾರನಿಂತೆಂದನು :—ಓ ವ್ಯಾಸ, ಈರೀತಿ ನಾರದನು ಹೇಳಿದ ಮಾತನ್ನು ಕೇಳಿ, ದೈತ್ಯಪ್ರಭುವಾದ ಆ ಜಲಂಧರನು ತನ್ನ ವೈಭವವೆಲ್ಲವನ್ನೂ ಆದರದಿಂದ ಆತನಿಗೆ ತೋರಿಸಿದನು.

ದೃಷ್ಟ್ವಾ ಸ ನಾರದೋ ಜ್ಞಾನೀ ದೇವಕಾರ್ಯಸುಸಾಧಕಃ ।
ಪ್ರಭುಪ್ರೇರಣಯಾ ಪ್ರಾಹ ದೈತ್ಯೇಂದ್ರಂ ತಂ ಜಲಂಧರಂ ॥ ೩೨ ॥

॥ ನಾರದ ಉವಾಚ ॥

ತವಾಸ್ತಿ ಸುಸಮೃದ್ಧಿರ್ಹಿ ವರವೀರಾಖಿಲಾಧುನಾ ।
ತ್ರೈಲೋಕ್ಯಸ್ಯ ಪತಿಸ್ತ್ವಂ ಹಿ ಚಿತ್ರಂ ಕಿ ಚಾತ್ರ ಸಂಭವಂ ॥ ೩೩ ॥

ಮಣಯೋ ರತ್ನಪುಂಜಾಶ್ಚ ಗಜಾದ್ಯಾಶ್ಚ ಸಮೃದ್ಧಯಃ ।
ತೇ ಗೃಹೇಽದ್ಯ ವಿಭಾಂತೀಹ ಯಾನಿ ರತ್ನಾನಿ ತಾನ್ಯಪಿ ॥ ೩೪ ॥

ಗಜರತ್ನಂ ತ್ವಯಾನೀತಂ ಶಕ್ರಸ್ಯೈರಾವತಸ್ತಥಾ ।
ಅಶ್ವರತ್ನಂ ಮಹಾವೀರ ಸೂರ್ಯಸ್ಯೋಚ್ಚೈಃಶ್ರವಾ ಹಯಃ ॥ ೩೫ ॥

ಕಲ್ಪವೃಕ್ಷಸ್ತ್ವಯಾನೀತೋ ನಿಧಯೋ ಧನದಸ್ಯ ಚ ।
ಹಂಸಯುಕ್ತವಿಮಾನಂ ಚ ತ್ವಯಾನೀತಂ ಹಿ ವೇಧಸಃ ॥ ೩೬ ॥

---

೩೨. ಅದೆಲ್ಲವನ್ನೂ ನೋಡಿ ಮಹಾಜ್ಞಾನಿಯಾದ ಆ ನಾರದನು ದೇವತೆಗಳ ಕಾರ್ಯವನ್ನು ಸಾಧಿಸಬಯಸಿ, ಶಿವನ ಪ್ರೇರಣೆಯಂತೆ ಆ ಜಲಂಧರನನ್ನು ಕುರಿತು,

೩೩. ಎಲೈ ವೀರಶ್ರೇಷ್ಠನೇ, ನಿನಗೂ ಎಲ್ಲ ಸಮೃದ್ಧಿಯೂ ಇರುವುದು. ನೀನೀಗ ಮೂರು ಲೋಕಗಳಿಗೂ ಅಧಿಪತಿಯಲ್ಲವೇ? ಹೀಗಿರುವಲ್ಲಿ ನಿನಗೆ ಈ ಸಂಪತ್ತು ಇರುವುದು ಏನು ಆಶ್ಚರ್ಯ?

೩೪. ನಿನ್ನ ಮನೆಯಲ್ಲೀಗ, ಅನೇಕ ಮಣಿಗಳೂ ರತ್ನಗಳೂ ರಾಶಿರಾಶಿಯಾಗಿರುವವು. ಗಜತುರಗವಾಹನಾದಿ ವಸ್ತುಸಂಪತ್ತಿಯೂ, ಪ್ರತಿಯೊಂದು ಜಾತಿಯಲ್ಲೂ ಉತ್ಕೃಷ್ಟವೆನಿಸಿದ ಎಲ್ಲ ರತ್ನಗಳೂ, ವಿರಾಜಿಸುತ್ತಿವೆ.

೩೫. ಓ ವೀರಾಗ್ರಣಿ, ಇಂದ್ರನ ಬಳಿಯಲ್ಲಿದ್ದ ಐರಾವತವೆಂಬ ಗಜರತ್ನವನ್ನು ನೀನು ತಂದಿರುವೆ. ಅದರಂತೆಯೇ, ಉಚ್ಚೈಃಶ್ರವಸ್ಸೆಂಬ ಸೂರ್ಯನ ಹಯರತ್ನವನ್ನೂ ನೀನು ತಂದಿಟ್ಟುಕೊಂಡಿರುವೆ.

೩೬. ಕುಬೇರನ ಬಳಿಯಲ್ಲಿದ್ದ, ಕಲ್ಪವೃಕ್ಷವನ್ನೂ ನವನಿಧಿಗಳನ್ನೂ ನೀನು ತಂದಿರುವೆ. ಬ್ರಹ್ಮನ, ಹಂಸಗಳು ಹೊತ್ತುಹಾರುವ ವಿಮಾನವನ್ನೂ ಸಹ ನೀನೇ ವಶಪಡಿಸಿಕೊಂಡಿರುವೆ.

ಇತ್ಯೇವಂ ವರರತ್ನಾನಿ ದಿವಿ ಪೃಥ್ವ್ಯಾಂ ರಸಾತಲೇ ।
ಯಾನಿ ದೈತ್ಯೇಂದ್ರ ತೇ ಭಾಂತಿ ಗೃಹೇ ತಾನಿ ಸಮಸ್ತತಃ ॥ ೩೭ ॥

ತ್ವತ್ಸಮೃದ್ಧಿಮಿಮಾಂ ಪಶ್ಯನ್ಸಂಪೂರ್ಣಾಂ ವಿವಿಧಾಮಹಂ ।
ಪ್ರಸನ್ನೋಽಸ್ಮಿ ಮಹಾವೀರ ಗಜಾಶ್ವಾದಿಸುಶೋಭಿತಾಂ ॥ ೩೮ ॥

ಜಾಯಾರತ್ನಂ ಮಹಾಶ್ರೇಷ್ಠಂ ಜಲಂಧರ ನ ತೇ ಗೃಹೇ ।
ತದಾನೇತುಂ ವಿಶೇಷೇಣ ಸ್ತ್ರೀರತ್ನಂ ವೈ ತ್ವಮರ್ಹಸಿ ॥ ೩೯ ॥

ಯಸ್ಯ ಗೇಹೇ ಸುರತ್ನಾನಿ ಸರ್ವಾಣಿ ಹಿ ಜಲಂಧರ ।
ಜಾಯಾರತ್ನಂ ನ ಚೇತ್ತಾನಿ ನ ಶೋಭಂತೇ ವೃಥಾ ಧ್ರುವಂ ॥ ೪೦ ॥

॥ ಸನತ್ಕುಮಾರ ಉವಾಚ ॥

ಇತ್ಯೇವಂ ವಚನಂ ಶ್ರುತ್ವಾ ನಾರದಸ್ಯ ಮಹಾತ್ಮನಃ ।
ಉವಾಚ ದೈತ್ಯರಾಜೋ ಹಿ ಮದನಾಕುಲಮಾನಸಃ ॥ ೪೧ ॥

---

೩೭. ಈರೀತಿ, ಸ್ವರ್ಗ ಮರ್ತ್ಯ ಪಾತಾಲಲೋಕಗಳಲ್ಲಿ ಯಾವಾವುದು ಅತ್ಯುತ್ತಮವಾದುದೆಂದು ಪರಿಗಣಿಸಲ್ಪಟ್ಟಿದೆಯೋ ಅದೆಲ್ಲವೂ ನಿನ್ನ ಮನೆಯಲ್ಲಿ ನೋಡಿದ ಕಡೆಯಲ್ಲೆಲ್ಲ ಕಂಗೊಳಿಸುತ್ತಿದೆ.

೩೮. ಓ ವೀರಾಗ್ರೇಸರ, ಶ್ರೇಷ್ಠವಾದ ಗಜತುರಗಾದಿಗಳಿಂದ ಮನೋಹರವಾಗಿರುವ ನಿನ್ನೀ ಸಮೃದ್ಧಿಯು ಸಂಪೂರ್ಣತೆಯಿಂದ ಒಪ್ಪುವುದನ್ನು ಕಂಡು ನಾನು ಬಹುವಾಗಿ ಮೆಚ್ಚಿದ್ದೇನೆ.

೩೯. ಆದರೆ ರತ್ನಗಳಲ್ಲೆಲ್ಲಾ ಅತ್ಯುತ್ತಮವಾದ ನಿನಗನುರೂಪವಾದ ಪತ್ನೀರತ್ನವು ನಿನ್ನ ಮನೆಯಲ್ಲಿ ಕಾಣಿಸುತ್ತಿಲ್ಲ. ಆದುದರಿಂದ ಆ ಕಾಂತಾರತ್ನವನ್ನು ಹೇಗಾದರೂಮಾಡಿ, ನೀನು ತರಬೇಕು.

೪೦. ಓ ಜಲಂಧರ, ಯಾರ ಮನೆಯಲ್ಲಿ ಎಲ್ಲ ವಿಧವಾದ ಶ್ರೇಷ್ಠರತ್ನಗಳು ಇದ್ದರೂ, ಸುದತೀರತ್ನವೊಂದು ಆ ಮನೆಯನ್ನು ಬೆಳಗದಿದ್ದರೆ, ಉಳಿದುವು ಎಂದಿಗೂ ಕಂಗೊಳಿಸಲಾರವು. ಅವೆಲ್ಲವೂ ವ್ಯರ್ಥವೇ ಸರಿ. ಈ ಮಾತು ನಿಜ ಎಂದನು.

೪೧. ಓ ವ್ಯಾಸ, ಈರೀತಿ ಮಹಾತ್ಮನಾದ ನಾರದನು ಹೇಳಿದ ಮಾತನ್ನು ಕೇಳಿ ಆ ದೈತ್ಯರಾಜನು ಮನಸ್ಸಿನಲ್ಲಿ ಮನ್ಮಥವಿಕಾರಕ್ಕೆ ಸಿಲುಕಿ ಆತನನ್ನು ಕುರಿತು.

॥ ಜಲಂಧರ ಉವಾಚ ॥

ಭೋ ಭೋ ನಾರದ ದೇವರ್ಷೇ ನಮಸ್ತೇಽಸ್ತು ಮಹಾಪ್ರಭೋ ।
ಜಾಯಾರತ್ನವರಂ ಕುತ್ರ ವರ್ತತೇ ತದ್ವದಾಧುನಾ ॥ ೪೨ ॥

ಬ್ರಹ್ಮಾಂಡೇ ಯತ್ರ ಕುತ್ರಾಪಿ ತದ್ರತ್ನಂ ಯದಿ ವರ್ತತೇ ।
ತದಾನೇಷ್ಯೇ ತತೋ ಬ್ರಹ್ಮನ್ಸತ್ಯಂ ಸತ್ಯಂ ನ ಸಂಶಯಃ ॥ ೪೩ ॥

॥ ನಾರದ ಉವಾಚ ॥

ಕೈಲಾಸೇ ಹ್ಯತಿರಮ್ಯೇ ಚ ಸರ್ವರ್ದ್ಧಿಸುಸಮಾಕುಲೇ ।
ಯೋಗಿರೂಪಧರಶ್ಶಂಭುರಸ್ತಿ ತತ್ರ ದಿಗಂಬರಃ ॥ ೪೪ ॥

ತಸ್ಯ ಭಾರ್ಯಾ ಸುರಮ್ಯಾ ಹಿ ಸರ್ವಲಕ್ಷಣಲಕ್ಷಿತಾ ।
ಸರ್ವಾಂಗಸುಂದರೀ ನಾಮ್ನಾ ಪಾರ್ವತೀತಿ ಮನೋಹರಾ ॥ ೪೫ ॥

---

೪೨. ಎಲೈ ನಾರದನೇ, ಓ ಸುರಋಷಿಯೇ, ಹೇ ಮಹಾಪ್ರಭೂ, ನಿನಗೆ ನಮಸ್ಕಾರವು. ಶ್ರೇಷ್ಠವಾದ ಆ ಜಾಯಾರತ್ನವು ಎಲ್ಲಿದೆ? ಎಂಬುದನ್ನು ನನಗೆ ಈಗಲೇ ತಿಳಿಸು.

೪೩. ಓ ಬ್ರಾಹ್ಮಣೋತ್ತಮ, ಬ್ರಹ್ಮಾಂಡದಲ್ಲಿ ಎಲ್ಲಿಯಾದರೂ ಸರಿಯೇ, ಆ ಕಾಂತಾರತ್ನವು ಇರುವ ಪಕ್ಷದಲ್ಲಿ, ಖಂಡಿತವಾಗಿಯೂ ಅಲ್ಲಿಂದ ಆ ಲಲನಾರತ್ನವನ್ನು ತಂದುಬಿಡುವೆನು. ಇದು ನಿಜ. ಸ್ವಲ್ಪವೂ ಸಂಶಯವಿಲ್ಲ.

೪೪. ಎಂದು ನುಡಿಯಲು ನಾರದನು ಅವನನ್ನು ಕುರಿತು ಹೇಳತೊಡಗಿದನು. ಸಕಲ ಸಂಪತ್ತುಗಳಿಂದಲೂ ತುಂಬಿ ತುಳುಕಾಡುತ್ತಿರುವ ಮನೋಹರವಾದ ಆ ಕೈಲಾಸಪರ್ವತದಲ್ಲಿ ಶಿವನು ಯೋಗಿರೂಪವನ್ನು ಧರಿಸಿ, ಮೈಮೇಲೆ ಬಟ್ಟೆಯೂ ಇಲ್ಲದೆ ಇರುವನು.

೪೫. ಅವನ ಹೆಂಡತಿಯು ಬಹು ಸುಂದರಿಯಾಗಿರುವಳು. ಉತ್ತಮವಾದ ಸ್ತ್ರೀಲಕ್ಷಣಗಳೆಲ್ಲವೂ ಅವಳಲ್ಲಿರುವುವು. ಆಕೆಯ ಪ್ರತಿಯೊಂದು ಅವಯವವೂ ಲಾವಣ್ಯದಿಂದ ಕಂಗೊಳಿಸುತ್ತಿರುವುದು. ನೋಡಿದೊಡನೆಯೇ ಮನಸ್ಸನ್ನು ಸೆಳೆಯುವ ಆ ರಮಣೀರತ್ನದ ಹೆಸರು ಪಾರ್ವತಿಯೆಂದು.

ತದೀದೃಶಂ ರೂಪಮನನ್ಯಸಂಗತಂ
ದೃಷ್ಟಂ ನ ಕುತ್ರಾಪಿ ಕುತೂಹಲಾಢ್ಯಂ ।
ಅತ್ಯದ್ಭುತಂ ಮೋಹನಕೃತ್ಸು ಯೋಗಿನಾಂ
ಸುದರ್ಶನೀಯಂ ಪರಮರ್ದ್ಧಿಕಾರಿ ॥ ೪೬ ॥

ಸ್ವಚಿತ್ತೇ ಕಲ್ಪಯಾಮ್ಯದ್ಯ ಶಿವಾದನ್ಯಸ್ಸಮೃದ್ಧಿಮಾನ್ ।
ಜಾಯಾರತ್ನಾನ್ವಿತಾದ್ವೀರ ತ್ರಿಲೋಕ್ಯಾಂ ನ ಜಲಂಧರ ॥ ೪೭ ॥

ಯಸ್ಯಾ ಲಾವಣ್ಯಜಲಧೌ ನಿಮಗ್ನಶ್ಚತುರಾನನಃ ।
ಸ್ವಧೈರ್ಯಂ ಮುಮುಚೇ ಪೂರ್ವಂ ತಯಾ ಕನ್ಯೋಪಮೀಯತೇ ॥ ೪೮ ॥

ಗತರಾಗೋಽಪಿ ಹಿ ಯಯಾ ಮದನಾರಿಸ್ಸ್ವಲೀಲಯಾ ।
ನಿಜತಂತ್ರೋಽಪಿ ಹಿ ಯತಸ್ಸ ಸ್ವಾತ್ಮವಶಗಃ ಕೃತಃ ॥ ೪೯ ॥

---

೪೬. ಇನ್ನಾರಲ್ಲಿಯೂ ಇಲ್ಲದಂತಹ ಸೌಂದರ್ಯವು ಆ ಪಾರ್ವತಿಯಲ್ಲಿರುವುದು. ನೋಡಿದರೆ ಮತ್ತೆ ನೋಡಬೇಕು ಎನ್ನುವ ಕುತೂಹಲವನ್ನು ಹುಟ್ಟಿಸುವ ಇಂತಹ ಚೆಲುವೆಯನ್ನು ಮತ್ತೆಲ್ಲಿಯೂ ಕಾಣೆನು. ಈ ಚೆಲುವು ಅತ್ಯದ್ಭುತವಾದುದು. ಜಿತೇಂದ್ರಿಯರೆನಿಸಿದ ಯೋಗಿಶ್ರೇಷ್ಠರಿಗೂ ಕೂಡ ಮೋಹವನ್ನು ಹುಟ್ಟಿಸುವಂಥದು. ಅತಿಶಯವಾದ ಸಂಪತ್ತನ್ನು ಉಂಟುಮಾಡುವ ಆ ಚೆಲುವನ್ನು ಪುನಃ ಪುನಃ ನೋಡಬೇಕೆನಿಸುವುದು.

೪೭. ಎಲೈ ವೀರಾಗ್ರೇಸರನಾದ ಜಲಂಧರನೇ. ಇಂತಹ ರಮಣೀರತ್ನವನ್ನು ಪತ್ನಿಯಾಗಿ ಪಡೆದ ಆ ಶಿವನಿಗಿಂತಲೂ ಹೆಚ್ಚು ಭಾಗ್ಯಶಾಲಿಯು ಈ ಮೂರು ಲೋಕದಲ್ಲಿ ಎಲ್ಲಿಯೂ ಇಲ್ಲವೆಂದು ನಾನು ಎಣಿಸುವೆನು.

೪೮. ಯಾವ ಚೆಲುವೆಯ ಸೌಂದರ್ಯಸಾಗರದಲ್ಲಿ ಮುಳುಗಿಹೋಗಿ ಚತುರ್ಮುಖಬ್ರಹ್ಮನೂ ತನ್ನ ಚಿತ್ತಸ್ಥೈರ್ಯವನ್ನು ಹಿಂದೆ ಕಳೆದುಕೊಂಡನೋ ಅಂತಹ ಲಲನೆಯೊಡನೆ ಮತ್ತಾವಳು ತಾನೇ ಸರಿದೂಗುವಳು ?

೪೯. ರಾಗಶೂನ್ಯನೂ, ಮನ್ಮಥನನ್ನೇ ಸುಟ್ಟುಬಿಟ್ಟವನೂ, ಮತ್ತೊಬ್ಬರ ಅಧೀನನಲ್ಲದವನೂ ಆದ ಆ ಪರಶಿವನೂ ಲೀಲಾಮಾತ್ರದಿಂದ ಯಾವಾಕೆಯ ವಶವರ್ತಿಯಾಗಿಬಿಟ್ಟನೋ, ಅಂತಹ ಕಾಂತಾರತ್ನವನ್ನು ಹೋಲುವರಾರು ?

ಯಥಾ ಸ್ತ್ರೀರತ್ನಸಂಭೋಕ್ತುಸ್ಸಮೃದ್ಧಿಸ್ತಸ್ಯ ಸಾಭವತ್ ।
ತಥಾ ನ ತವ ದೈತ್ಯೇಂದ್ರ ಸರ್ವರತ್ನಾಧಿಪಸ್ಯ ಚ ॥ ೫೦ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಸ ತು ದೇವರ್ಷಿರ್ನಾರದೋ ಲೋಕವಿಶ್ರುತಃ ।
ಯಯೌ ವಿಹಾಯಸಾ ದೇವೋಪಕಾರಕರಣೋದ್ಯತಃ ॥ ೫೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರವಧೋಪಾಖ್ಯಾನೇ
ದೇವರ್ಷಿಜಲಂಧರಸಂವಾದೋ ನಾಮ
ಅಷ್ಟಾದಶೋಽಧ್ಯಾಯಃ

---

೫೦. ಓ ದೈತ್ಯೇಂದ್ರ, ನೀನು ಎಲ್ಲ ತೆರದ ರತ್ನಗಳಿಗೂ ಅಧಿಪತಿಯಾಗಿದ್ದರೂ ಅಂತಹ ರಮಣೀರತ್ನವನ್ನು ಅನುಭವಿಸುತ್ತಿರುವ ಶಿವನ ಸೌಭಾಗ್ಯವು ನಿನ್ನಲ್ಲಿ ಎಂದಿಗೂ ಇಲ್ಲವಲ್ಲಾ ಎಂದನು.

೫೧. ಓ ವ್ಯಾಸ, ದೇವತೆಗಳಿಗೆ ಉಪಕಾರಮಾಡುವುದರಲ್ಲೇ ಬದ್ಧಕಂಕಣ ನಾದ, ನಾರದಮಹರ್ಷಿಯು ಈರೀತಿಯಾಗಿ ಜಲಂಧರನಿಗೆ ಹೇಳಿ ಆಕಾಶಮಾರ್ಗದಲ್ಲಿ ತೆರಳಿದನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯೊಳಗಣ
ಯುದ್ಧಖಂಡದ ದೇವರ್ಷಿಜಲಂಧರ ಸಂವಾದವೆಂಬ ಹದಿನೆಂಟಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕೋನವಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ನಾರದೇ ಹಿ ಗತೇ ದಿವಿ ।
ದೈತ್ಯರಾಟ್ಕಿಮಕಾರ್ಷೀತ್ಸ ತನ್ಮೇ ವದ ಸುವಿಸ್ತರಾತ್ ॥ ೧ ॥

॥ ಸನತ್ಕುಮಾರ ಉವಾಚ ॥

ತಮಾಮಂತ್ರ್ಯ ಗತೇ ದೈತ್ಯಂ ನಾರದೇ ದಿವಿ ದೈತ್ಯರಾಟ್ ।
ತದ್ರೂಪಶ್ರವಣಾದಾಸೀದನಂಗಜ್ವರಪೀಡಿತಃ ॥ ೨ ॥

---

### ಹತ್ತೊಂಭತ್ತನೆಯ ಅಧ್ಯಾಯವು.

೧. ವ್ಯಾಸನು ಸನತ್ಕುಮಾರನನ್ನು ಕುರಿತು, ಎಲೈ ಸರ್ವಜ್ಞನೇ, ನಾರದನು ಆಕಾಶದಲ್ಲಿ ತೆರಳಿದಮೇಲೆ ಆ ದೈತ್ಯರಾಜನು ಏನು ಮಾಡಿದನೆಂಬುದನ್ನು ವಿಸ್ತಾರವಾಗಿ ತಿಳಿಸು ಎನ್ನಲು,

೨. ಆಗ ಸನತ್ಕುಮಾರನು ಹೇಳತೊಡಗಿದನು. ನಾರದನು ಆ ದೈತ್ಯನನ್ನು ಬೀಳ್ಕೊಂಡು ಆಕಾಶಮಾರ್ಗದಲ್ಲಿ ತೆರಳಿದಮೇಲೆ, ಆ ದೈತ್ಯರಾಜನು ಪಾರ್ವತಿಯ ಸೌಂದರ್ಯವನ್ನು ಕೇಳಿದುದರಿಂದ ಮನ್ಮಥಜ್ವರದಿಂದ ಪೀಡಿತನಾದನು.

ಅಥೋ ಜಲಂಧರೋ ದೈತ್ಯಃ ಕಾಲಾಧೀನಃ ಪ್ರನಷ್ಟಧೀಃ ।
ದೂತಮಾಹ್ವಾಯಯಾಮಾಸ ಸೈಂಹಿಕೇಯಂ ವಿಮೋಹಿತಃ ॥ ೩ ॥

ಆಗತಂ ತಂ ಸಮಾಲೋಕ್ಯ ಕಾಮಾಕ್ರಾಂತಮನಾಸ್ಸ ಹಿ ।
ಸುಸಂಬೋಧ್ಯ ಸಮಾಚಷ್ಟ ಸಿಂಧುಪುತ್ರೋ ಜಲಂಧರಃ ॥ ೪ ॥

॥ ಜಲಂಧರ ಉವಾಚ ॥

ಭೋ ಭೋ ದೂತವರಶ್ರೇಷ್ಠ ಸರ್ವಕಾರ್ಯಪ್ರಸಾಧಕ ।
ಸೈಂಹಿಕೇಯ ಮಹಾಪ್ರಾಜ್ಞ ಕೈಲಾಸಂ ಗಚ್ಛ ಪರ್ವತಂ ॥ ೫ ॥

ತತ್ರಾಸ್ತಿ ಯೋಗೀ ಶಂಭ್ವಾಖ್ಯಸ್ತಪಸ್ವೀ ಚ ಜಟಾಧರಃ ।
ಭಸ್ಮಭೂಷಿತಸರ್ವಾಂಗೋ ವಿರಕ್ತೋ ವಿಜಿತೇಂದ್ರಿಯಃ ॥ ೬ ॥

ತತ್ರ ಗತ್ವೇತಿ ವಕ್ತವ್ಯಂ ಯೋಗಿನಂ ದೂತ ಶಂಕರಂ ।
ಜಟಾಧರಂ ವಿರಕ್ತಂ ತಂ ನಿರ್ಭಯೇನ ಹೃದಾ ತ್ವಯಾ ॥ ೭ ॥

---

೩. ಕಾಲವಶದಿಂದ ವಿವೇಕವನ್ನು ಕಳೆದುಕೊಂಡು ಮೋಹಪರವಶನಾಗಿ ತನ್ನ ದೂತನಾದ ಸೈಂಹಿಕೇಯ (ರಾಹು) ನನ್ನು ಕರೆಸಿದನು.

೪. ಕಾಮವಿಕಾರಗಳಿಗೆ ಮನಸೋತ ಆ ಸಾಗರಸೂನುವಾದ ಜಲಂಧರನು ಆ ರಾಹುವು ಬಂದುದನ್ನು ಕಂಡು ಆದರದಿಂದ ಮಾತನಾಡಿಸಿದನು.

೫. ಎಲೈ ದೂತಶ್ರೇಷ್ಠನಾದ ರಾಹುವೇ, ನೀನು ಮಹಾಪ್ರಾಜ್ಞನು. ನಿನಗೆ ಒಪ್ಪಿಸಿದ ಕೆಲಸಗಳೆಲ್ಲವನ್ನೂ ಸಾಂಗವಾಗಿ ಸಾಧಿಸಿಕೊಂಡು ಬಂದಿರುವೆಯಲ್ಲವೇ ? ನೀನೀಗ ಕೈಲಾಸಪರ್ವತಕ್ಕೆ ಹೋಗಬೇಕಾಗಿರುವುದು.

೬. ಅಲ್ಲಿ ಶಂಭುವೆಂಬುವನು, ಜಟೆಗಳನ್ನು ಬಿಟ್ಟು, ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡು ವಿರಕ್ತನಾಗಿ, ಇಂದ್ರಿಯಗಳನ್ನು ನಿಗ್ರಹಿಸಿ ತಪಸ್ಸಿನಲ್ಲಿ ನಿರತನಾಗಿರುವನು.

೭. ನೀನಲ್ಲಿಗೆ ಹೋಗಿ ಜಟಾಧಾರಿಯೂ, ವಿರಕ್ತನೂ ಆದ ಆ ಶಂಕರನಿಗೆ ಸ್ವಲ್ಪವೂ ಅಳುಕದೆ ಧೈರ್ಯದಿಂದ ಹೀಗೆ ಹೇಳು.

ಹೇ ಯೋಗಿಂಸ್ತ್ವೇ ದಯಾಸಿಂಧೋ ಜಾಯಾರತ್ನೇನ ಕಿಂ ಭವೇತ್ ।
ಭೂತಪ್ರೇತಪಿಶಾಚಾದಿಸೇವಿತೇನ ವನೌಕಸಾ ॥ ೮ ॥

ಮನ್ನಾಥೇ ಭುವನೇ ಯೋಗಿನ್ನೋಚಿತಾ ಗತಿರೀದೃಶೀ ।
ಜಾಯಾರತ್ನಮತಸ್ತ್ವಂ ಮೇ ದೇಹಿ ರತ್ನಭುಜೇ ನಿಜಂ ॥ ೯ ॥

ಯಾನಿ ಯಾನಿ ಸುರತ್ನಾನಿ ತ್ರೈಲೋಕ್ಯೇ ತಾನಿ ಸಂತಿ ಮೇ ।
ಮದಧೀನಂ ಜಗತ್ಸರ್ವಂ ವಿದ್ಧಿ ತ್ವಂ ಸಚರಾಚರಂ ॥ ೧೦ ॥

ಇಂದ್ರಸ್ಯ ಗಜರತ್ನಂ ಚೋಚ್ಚೈಃಶ್ರವೋರತ್ನಮುತ್ತಮಂ ।
ಬಲಾದ್ಗೃಹೀತಂ ಸಹಸಾ ಪಾರಿಜಾತಸ್ತರುಸ್ತಥಾ ॥ ೧೧ ॥

ವಿಮಾನಂ ಹಂಸಸಂಯುಕ್ತಮಂಗಣೇ ಮಮ ತಿಷ್ಠತಿ ।
ರತ್ನಭೂಯಂ ಮಹಾದಿವ್ಯಮುತ್ತಮಂ ವೇಧಸೋದ್ಭುತಂ ॥ ೧೨ ॥

---

೮. ಎಲೈ ಕರುಣಾಸಾಗರನೇ, ಭೂತ, ಪ್ರೇತ, ಪಿಶಾಚಗಳೊಡನೆ ಸೇವೆಯನ್ನು ಕೈಗೊಳ್ಳುತ್ತಾ ಕಾಡಿನಲ್ಲಿ ವಾಸಮಾಡುವ ಜೋಗಿಯಾದ ನಿನಗೆ ಉತ್ತಮವಾದ ಈ ಕಾಂತಾರತ್ನವು ಏತಕ್ಕೆ ?

೯. ಎಲೈ ಜೋಗಿಯೇ, ನನ್ನೊಡೆಯನು ಆಳುತ್ತಿರುವಾಗ ಇಂತಹ ಸ್ಥಿತಿಯು ಜಗತ್ತಿನಲ್ಲಿ ಉಂಟಾಗುವುದೆಂದರೇನು ? ಆದುದರಿಂದ ಎಲ್ಲ ರತ್ನಗಳಿಗೂ ಅಧಿಪತಿಯಾದ ನನಗೆ ಸೇರಬೇಕಾದ ನಿನ್ನ ಪತ್ನೀರತ್ನವನ್ನು ಒಪ್ಪಿಸಿಬಿಡು.

೧೦. ಈ ಮೂರುಲೋಕದಲ್ಲಿ ಯಾವಾವ ಶ್ರೇಷ್ಠರತ್ನಗಳು ಇರುವುವೋ ಅವೆಲ್ಲವೂ ನನ್ನದೇ ಆಗಿರುವುವು. ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ನನ್ನ ವಶಕ್ಕೆ ಒಳಪಟ್ಟಿದೆಯೆಂಬುದನ್ನು ನೀನು ಚೆನ್ನಾಗಿ ತಿಳಿ.

೧೧. ಇಂದ್ರನ ಬಳಿಯಲ್ಲಿದ್ದ ಶ್ರೇಷ್ಠವಾದ ಐರಾವತವೆಂಬ ಗಜರತ್ನವನ್ನೂ, ಉಚ್ಚೈಃಶ್ರವಸ್ಸೆಂಬ ಅಶ್ವರತ್ನವನ್ನೂ, ಪಾರಿಜಾತವೆಂಬ ವೃಕ್ಷರತ್ನವನ್ನೂ ಬಲವಂತವಾಗಿ ಕಸಿದುಕೊಂಡಿರುವೆನು.

೧೨. ಹಂಸಗಳಿಂದ ಸೆಳೆಯಲ್ಪಡುವ ಅತ್ಯದ್ಭುತವೂ, ಮನೋಹರವೂ ಆದ ಬ್ರಹ್ಮನ ಶ್ರೇಷ್ಠವಾದ ವಿಮಾನರತ್ನವೂ, ನನ್ನ ಅಂಗಳದಲ್ಲೇ ಇದೆ.

ಮಹಾಪದ್ಮಾದಿಕಂ ದಿವ್ಯಂ ನಿಧಿರತ್ನಂ ಸ್ವದಸ್ಯ ಚ ।
ಛತ್ರಂ ಮೇ ವಾರುಣಂ ಗೇಹೇ ಕಾಂಚನಸ್ರಾವಿ ತಿಷ್ಠತಿ ॥ ೧೩ ॥

ಕಿಂಜಲ್ಕಿನೀ ಮಹಾಮಾಲಾ ಸರ್ವದಾಮ್ಲಾನಪಂಕಜಾ ।
ಮತ್ಪಿತುಸ್ಸಾ ಮನ್ಯೈವಾಸ್ತಿ ಪಾಶಾಶ್ಚ ಕಪತೇಸ್ತಥಾ ॥ ೧೪ ॥

ಮೃತ್ಯೋರುತ್ಕ್ರಾಂತಿದಾ ಶಕ್ತಿರ್ಮಯಾನೀತಾ ಬಲಾದ್ವರಾ ।
ದದೌ ಮಹ್ಯಂ ಶುಚಿರ್ದಿವ್ಯೇ ಶುಚಿಶೌಚೇ ಚ ವಾಸಸೀ ॥ ೧೫ ॥

ಏವಂ ಯೋಗೀಂದ್ರ ರತ್ನಾನಿ ಸರ್ವಾಣಿ ವಿಲಸಂತಿ ಮೇ ।
ಅತಸ್ತ್ವಮಪಿ ಮೇ ದೇಹಿ ಸ್ವಸ್ತ್ರೀರತ್ನಂ ಜಟಾಧರ ॥ ೧೬ ॥

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ನಂದಿನಾ ಸ ಪ್ರವೇಶಿತಃ ।
ಜಗಾಮೋಗ್ರಸಭಾಂ ರಾಹುರ್ವಿಸ್ಮಯೋಽದ್ಭುತಲೋಚನಃ ॥ ೧೭ ॥

---

೧೩. ಕುಬೇರನ ಮಹಾಪದ್ಮ ಮೊದಲಾದ ನಿಧಿರತ್ನಗಳೂ, ಚಿನ್ನದ ನೀರನ್ನು ಸುರಿಸುವ ವರುಣನ ಛತ್ರಿಯೂ ನನ್ನ ಮನೆಯಲ್ಲಿವೆ.

೧೪. ಎಂದಿಗೂ ಬಾಡಿಹೋಗದ ಕಮಲಗಳುಳ್ಳ ಕಿಂಜಲ್ಕಿನಿಯೆಂಬ ನಮ್ಮ ತಂದೆಯ ಹಾರವೂ, ವರುಣನ ಪಾಶಾಯುಧವೂ ನನ್ನ ಅಧೀನದಲ್ಲಿಯೇ ಇದೆ.

೧೫. ಎಲ್ಲರಿಗೂ ಮರಣವನ್ನುಂಟುಮಾಡುವ, ಮೃತ್ಯುವಿನ ಶಕ್ತಿಯೆಂಬ ಆಯುಧಶ್ರೇಷ್ಠವನ್ನು ನಾನೇ ಬಲಾತ್ಕಾರವಾಗಿ ಕಸಿದುಕೊಂಡೆನು. ಅಗ್ನಿಯು ನನಗೆ ಯಾವಾಗಲೂ ಶುಭ್ರವಾಗಿರುವ ದಿವ್ಯವಾದ ವಸ್ತ್ರಯುಗಲವನ್ನು ಕೊಟ್ಟಿರುವನು.

೧೬. ಎಲೈ ಜೋಗಿಯೇ, ಈರೀತಿಯಾಗಿ ಎಲ್ಲ ರತ್ನಗಳೂ ನನ್ನ ಬಳಿಯಲ್ಲಿ ಕಂಗೊಳಿಸುತ್ತಿವೆ. ಆದುದರಿಂದ ನೀನೂ ನಿನ್ನ ಸ್ತ್ರೀರತ್ನವನ್ನು ನನಗೆ ಒಪ್ಪಿಸಿಬಿಡು. ಈರೀತಿ ಹೇಳೆಂದು ದೂತನಿಗೆ ಆಜ್ಞಾಪಿಸಿದನು.

೧೭. ಓ ವಾಸ, ಈರೀತಿ ಜಲಂಧರನಿಂದ ಆಜ್ಞಪ್ತನಾಗಿ ರಾಹುವು ಕೈಲಾಸಕ್ಕೆ ಹೊರಟು, ನಂದಿಯು ಒಳಕ್ಕೆ ಬಿಡಲಾಗಿ ಶಿವನ ಸಭೆಯನ್ನು ಹೊಕ್ಕನು. ಅದನ್ನು ನೋಡಿ ಆಶ್ಚರ್ಯದಿಂದ ಅವನ ಕಣ್ಣುಗಳು ಅರಳಿದವು.

ತತ್ರ ಗತ್ವಾ ಶಿವಂ ಸಾಕ್ಷಾದ್ದೇವದೇವಂ ಮಹಾಪ್ರಭುಂ ।
ಸ್ವತೇಜೋಧ್ವಸ್ತತಮಸಂ ಭಸ್ಮಲೇಪವಿರಾಜಿತಂ ॥ ೧೮ ॥

ಮಹಾರಾಜೋಪಚಾರೇಣ ವಿಲಸಂತಂ ಮಹಾದ್ಭುತಂ ।
ಸರ್ವಾಂಗಸುಂದರಂ ದಿವ್ಯಭೂಷಣೈರ್ಭೂಷಿತಂ ಹರಂ ॥ ೧೯ ॥

ಪ್ರಣನಾಮ ಚ ತಂ ಗರ್ವಾತ್ತತ್ತೇಜಃ ಕ್ರಾಂತವಿಗ್ರಹಃ ।
ನಿಕಟಂ ಗತವಾನ್ಶಂಭೋಸ್ಸ ದೂತೋ ರಾಹುಸಂಜ್ಞಕಃ ॥ ೨೦ ॥

ಅಥೋ ತದಗ್ರ ಆಸೀನೋ ವಕ್ತುಕಾಮೋ ಹಿ ಸೈಂಹಿಕಃ ।
ತ್ರ್ಯಂಬಕಂ ಸ ತದಾ ಸಂಜ್ಞಾಪ್ರೇರಿತೋ ವಾಕ್ಯಮಬ್ರವೀತ್ ॥ ೨೧ ॥

॥ ರಾಹುರುವಾಚ ॥

ದೈತ್ಯಪನ್ನಗಸೇವ್ಯಸ್ಯ ತ್ರೈಲೋಕ್ಯಾಧಿಪತೇಸ್ಸದಾ ।
ದೂತೋಽಹಂ ಪ್ರೇಷಿತಸ್ತೇನ ತ್ವತ್ಸಕಾಶಮಿಹಾಗತಃ ॥ ೨೨ ॥

---

೧೮-೨೦. ಅಲ್ಲಿಗೆ ಹೋಗಿ, ಆ ಸಭೆಯ ನಡುವೆ ವಿರಾಜಿಸುತ್ತಿರುವ ದೇವಾದಿದೇವನೂ, ಮಹಾಪ್ರಭುವೂ, ತನ್ನ ತೇಜಸ್ಸಿನಿಂದ ತಮಸ್ಸನ್ನು ಪರಿಹರಿಸುವವನೂ, ಭಸ್ಮೋದ್ಧೂಲನದಿಂದ ಅಲಂಕೃತನಾದವನೂ, ರಾಜಾಧಿರಾಜರಿಗೆ ಉಚಿತವಾದ ಉಪಚಾರಗಳನ್ನು ಕೈಗೊಳ್ಳುತ್ತಿರುವವನೂ, ನಾನಾ ಆಶ್ಚರ್ಯಗಳಿಗೆ ನೆಲೆಯಾದವನೂ, ಅತಿಶಯವಾದ ರೂಪವುಳ್ಳವನೂ, ಅಮೂಲ್ಯವಾದ ಒಡವೆಗಳಿಂದ ಭೂಷಿತನೂ ಆದ ಶಿವನನ್ನು ಕಂಡನು. ಆ ಶಿವನ ತೇಜಸ್ಸನ್ನು ಎದುರಿಸಲಾರದೆ, ಆತನಿಗೆ ನಮಸ್ಕಾರಮಾಡಿದಮೇಲೆ, ಆ ಜಲಂಧರದೂತನಾದ ರಾಹುವು ಅಹಂಕಾರದಿಂದ ಅವನ ಬಳಿಗೆ ಹೋದನು.

೨೧. ಅನಂತರ ರಾಹುವು ಆವನೆದುರು ಕುಳಿತು, ಜಲಂಧರನು ಹೇಳಿ ಕಳುಹಿಸಿದ ಮಾತುಗಳನ್ನು ತಿಳಿಸಬೇಕೆನಿಸುತ್ತಿದ್ದರೂ ನಾಚಿಕೆಯಿಂದ ಹಿಂದೆ ಮುಂದೆ ನೋಡಿದನು. ಆಗ ಶಿವನು ಹೇಳಬಹುದೆಂದು ಸಂಜ್ಞೆಯಿಂದ ಅಪ್ಪಣೆಯಿತ್ತಮೇಲೆ ಆತನನ್ನು ಕುರಿತು ಹೇಳತೊಡಗಿದನು.

೨೨. ದೈತ್ಯರೂ, ಪನ್ನಗರೂ, ಯಾರನ್ನು ಸರ್ವದಾ ಸೇವಿಸುತ್ತ ಓಲೈಸುವರೋ ಆ ತ್ರಿಲೋಕಾಧಿಪತಿಯ ದೂತನು ನಾನು. ಆತನು ಕಳುಹಿಸಲಾಗಿ ನಿನ್ನ ಬಳಿಗೆ ಬಂದಿರುವೆನು.

ಜಲಂಧರೋಽಬ್ಧಿತನಯಸ್ಸರ್ವದೈತ್ಯಜನೇಶ್ವರಃ ।
ತ್ರೈಲೋಕ್ಯಸ್ಯೇಶ್ವರಸ್ಸೋಽಥಾಭವತ್ಸರ್ವಾಧಿನಾಯಕಃ ॥ ೨೩ ॥

ಸ ದೈತ್ಯರಾಜೋ ಬಲವಾನ್ದೇವಾನಾಮಂತಕೋಪಮಃ ।
ಯೋಗಿನಂ ತ್ವಾಂ ಸಮುದ್ದಿಶ್ಯ ಸ ಯದಾಹ ಶೃಣುಷ್ವ ತತ್ ॥ ೨೪ ॥

ಮಹಾದಿವ್ಯಪ್ರಭಾವಸ್ಯ ತಸ್ಯ ದೈತ್ಯಪತೇಃ ಪ್ರಭೋಃ ।
ಸರ್ವರತ್ನೇಶ್ವರಸ್ಯ ತ್ವಮಾಜ್ಞಾಂ ಶೃಣು ವೃಷಧ್ವಜ ॥ ೨೫ ॥

ಶ್ಮಶಾನವಾಸಿನೋ ನಿತ್ಯಮಸ್ಥಿಮಾಲಾಧರಸ್ಯ ಚ ।
ದಿಗಂಬರಸ್ಯ ತೇ ಭಾರ್ಯಾ ಕಥಂ ಹೈಮವತೀ ಶುಭಾ ॥ ೨೬ ॥

ಅಹಂ ರತ್ನಾಧಿನಾಥೋಽಸ್ಮಿ ಸಾ ಚ ಸ್ತ್ರೀರತ್ನಸಂಜ್ಞಿತಾ ।
ತಸ್ಮಾನ್ಮಮೈವ ಸಾ ಯೋಗ್ಯಾ ನೈವ ಭಿಕ್ಷಾಶಿನಸ್ತವ ॥ ೨೭ ॥

---

೨೩. ಸಾಗರಸುತನಾದ ಜಲಂಧರನೆಂಬುವನು ಎಲ್ಲ ದೈತ್ಯರಿಗೂ ಅಧಿಪತಿಯಾಗಿರುವನು. ಆತನೀಗ ಎಲ್ಲರಿಗೂ ಪರಮಪ್ರಭುವಾಗಿ ಮೂರು ಲೋಕಗಳಿಗೂ ಒಡೆಯನಾಗಿರುವನು.

೨೪. ಆ ದೈತ್ಯರಾಜನು ಮಹಾಬಲಶಾಲಿಯು, ದೇವತೆಗಳಿಗೆ ಯಮಸ್ವರೂಪನು. ಅವನು ಜೋಗಿಯಾದ ನಿನಗೆ ಏನು ಹೇಳಿ ಕಳುಹಿಸಿದನೆಂಬುದನ್ನು ತಿಳಿಸುವೆನು ಕೇಳು.

೨೫. ಅತ್ಯದ್ಭುತವಾದ ಮಹಿಮೆಯುಳ್ಳವನೂ, ದೈತ್ಯೇಶ್ವರನೂ, ಸಕಲ ರತ್ನಗಳಿಗೂ, ಏಕಮಾತ್ರನಾದ ಅಧಿಕಾರಿಯೂ ಆದ ಆ ಪ್ರಭುವಿನ ಅಪ್ಪಣೆಯನ್ನು ಎಲೈ ವೃಷಧ್ವಜನೇ ಕೇಳು.

೨೬. ಯಾವಾಗಲೂ ಎಲುಬಿನ ಸರಗಳನ್ನು ಧರಿಸಿಕೊಂಡು ಮೈಮೇಲೆ ಬಟ್ಟೆಯಿಲ್ಲದೆ, ಸರ್ವದಾ ಮಸಣದಲ್ಲೇ ವಾಸಮಾಡುವ ನಿನಗೆ ಮಂಗಳಾಂಗಿಯಾದ ಪರ್ವತರಾಜಪುತ್ರಿಯು ಹೆಂಡತಿಯಾಗಿರುವುದು ಒಪ್ಪುವುದೇ ?

೨೭. ನಾನು ರತ್ನಗಳೆಲ್ಲಕ್ಕೂ ಒಡೆಯನು. ಆ ಹಿಮವತ್ಸುತೆಯು ರಮಣಿಯರಿಗೆ ರತ್ನಪ್ರಾಯಳು. ಆದುದರಿಂದ ಅವಳು ನನಗೆ ಅರ್ಹಳು. ತಿರುಪೆ ಬೇಡಿ ತಿಂದು ಜೀವಿಸುವ ನಿನಗೆ ಎಂದಿಗೂ ಅರ್ಹಳಲ್ಲ.

ಮಮ ವಶ್ಯಾಸ್ತ್ರಯೋ ಲೋಕಾ ಭುಂಜೇऽಹಂ ಮುಖಭಾಗಕಾನ್ ।
ಯಾನಿ ಸಂತಿ ತ್ರಿಲೋಕೇऽಸ್ಮಿನ್ರತ್ನಾನಿ ಮಮ ಸದ್ಮನಿ ॥ ೨೮ ॥

ವಯಂ ರತ್ನಭುಜಸ್ತ್ವಂ ತು ಯೋಗೀ ಖಲು ದಿಗಂಬರಃ ।
ಸ್ವಸ್ತ್ರೀರತ್ನಂ ದೇಹಿ ಮಹ್ಯಂ ರಾಜ್ಞಸ್ಸುಖಕರಾಃ ಪ್ರಜಾಃ ॥ ೨೯ ॥

॥ ಸನತ್ಕುಮಾರ ಉವಾಚ ॥

ವದತ್ಯೇವಂ ತಥಾ ರಾಹೌ ಭ್ರೂಮಧ್ಯಾಚ್ಛೂಲಪಾಣಿನಃ ।
ಅಭವತ್ಪುರುಷೋ ರೌದ್ರಸ್ತೀವ್ರಾಶನಿಸಮಸ್ವನಃ ॥ ೩೦ ॥

ಸಿಂಹಾಸ್ಯಪ್ರಚಲಜ್ಜಿಹ್ವಸ್ಸಜ್ವಾಲನಯನೋ ಮಹಾನ್ ।
ಊರ್ಧ್ವಕೇಶಶ್ಶುಷ್ಕತನುರ್ನೃಸಿಂಹ ಇವ ಚಾಪರಃ ॥ ೩೧ ॥

ಮಹಾತನುರ್ಮಹಾಬಾಹುಸ್ತಾಲಜಂಘೋ ಭಯಂಕರಃ ।
ಅಭಿದುದ್ರಾವ ವೇಗೇನ ರಾಹುಂ ಸ ಪುರುಷೋ ದ್ರುತಂ ॥ ೩೨ ॥

---

೨೮. ಮೂರು ಲೋಕಗಳೂ ನನ್ನ ಕೈಕೆಳಗೆ ಇರುವುವು. ಯಜ್ಞಯಾಗಗಳಲ್ಲಿ ಕೊಡುವ ಹವಿರ್ಭಾಗಗಳೆಲ್ಲವನ್ನೂ ನಾನೇ ಸ್ವೀಕರಿಸುತ್ತಿರುವೆನು. ಮೂರು ಲೋಕಗಳಲ್ಲಿ ಯಾವ ಯಾವ ರತ್ನಗಳು ಇರುವುವೋ ಅವೆಲ್ಲವೂ ನನ್ನ ಮನೆಯಲ್ಲಿಯೇ ಇರುವುವು.

೨೯. ರತ್ನಗಳೆಲ್ಲವನ್ನೂ ಉಪಭೋಗಿಸುವವರು ನಾವು. ನೀನು ಮೈಮೇಲೆ ಬಟ್ಟೆಯೂ ಇಲ್ಲದ ಜೋಗಿಯಲ್ಲವೇ? ನಿನ್ನ ಬಳಿಯಿರುವ ಸ್ತ್ರೀರತ್ನವನ್ನು ನನಗೆ ಒಪ್ಪಿಸಿಬಿಡು. ಪ್ರಜೆಗಳಾದವರು ರಾಜನ ಸೌಖ್ಯವನ್ನು ಈಡೇರಿಸಬೇಕು ಎಂದನು.

೩೦-೩೨. ಸನತ್ಕುಮಾರನಿಂತೆಂದನು :—ಈರೀತಿ ರಾಹುವು ಹೇಳಿ ಮುಗಿಸುತ್ತಲೇ ಶಿವನ ಭ್ರೂಮಧ್ಯಪ್ರದೇಶದಿಂದ ಪುರುಷನೋರ್ವನು ಹೊರಬಿದ್ದನು. ಓ ವ್ಯಾಸ, ಆತನ ಭಯಂಕರಾಕಾರವನ್ನು ಏನುಹೇಳಲಿ. ಆತನ ದನಿಯು ಸಿಡಿಲಿಗಿಂತಲೂ ತೀವ್ರವಾಗಿತ್ತು. ಸಿಂಹದಂತೆ ಮುಖ. ನಾಲಗೆಯು ಅತ್ತಿತ್ತ ಹೊರಳುತ್ತಿತ್ತು. ಕಣ್ಣುಗಳಿಂದ ಉರಿಯು ಏಳುತ್ತಿತ್ತು. ಕೂದಲುಗಳೆಲ್ಲವೂ ಮೇಲ್ಮುಖವಾಗಿ ನೆಟ್ಟನೆ ನಿಂತಿದ್ದುವು. ಮೈ ಒಣಕಲಾಗಿತ್ತು. ಆತನನ್ನು ನೋಡಿದರೆ ಎರಡನೆಯ ನೃಸಿಂಹಾವತಾರವೋ ಎನ್ನಿಸುತ್ತಿತ್ತು. ದೊಡ್ಡ ದೇಹ, ದೊಡ್ಡ ಬಾಹುಗಳು, ತಾಳೆಮರದಷ್ಟು ಉದ್ದವಾದ ಮೊಳಕಾಲುಗಳು. ಈರೀತಿ ಕ್ರೂರವಾದ ಆಕೃತಿಯುಳ್ಳ ಆ ಪುರುಷನು ರಾಹುವಿನ ಕಡೆಗೆ ವೇಗದಿಂದ ಮುನ್ನುಗ್ಗಿದನು.

ಸ ತಂ ಖಾದಿತುಮಾಯಾಂತಂ ದೃಷ್ಟ್ವಾ ರಾಹುರ್ಭಯಾತುರಃ ।
ಅಧಾವದತಿವೇಗೇನ ಬಹಿಸ್ಸ ಚ ದಧಾರ ತಂ ॥ ೩೩ ॥

॥ ರಾಹುರುವಾಚ ॥

ದೇವದೇವ ಮಹೇಶಾನ ಪಾಹಿ ಮಾಂ ಶರಣಾಗತಂ ।
ಸುರಾಸುರೈಸ್ಸದಾ ವಂದ್ಯಃ ಪರಮೈಶ್ವರ್ಯವಾನ್ಪ್ರಭುಃ ॥ ೩೪ ॥

ಬ್ರಾಹ್ಮಣಂ ಮಾಂ ಮಹಾದೇವ ಖಾದಿತುಂ ಸಮುಪಾಗತಃ ।
ಪುರುಷೋಽಯಂ ತವೇಶಾನ ಸೇವಕೋಽತಿಭಯಂಕರಃ ॥ ೩೫ ॥

ಏತಸ್ಮಾದ್ರಕ್ಷ ದೇವೇಶ ಶರಣಾಗತವತ್ಸಲ ।
ನ ಖಾದೇತ ಯಥಾಯಂ ಮಾಂ ನಮಸ್ತೇಽಸ್ತು ಮುಹುರ್ಮುಹುಃ ॥ ೩೬ ॥

---

೩೩. ಈರೀತಿ ತನ್ನನ್ನು ತಿನ್ನಬೇಕೆಂದು ಮುನ್ನುಗ್ಗಿಬರುತ್ತಿರುವ ಆತನನ್ನು ಕಂಡೊಡನೆಯೇ ಆ ರಾಹುವು ಭಯದಿಂದ ತತ್ತಳಿಸುತ್ತ ಬಹುಬೇಗನೆ ಹೊರಕ್ಕೆ ಓಡಿಹೋದನು. ಆದರೇನು? ಆ ಪುರುಷನು ಅವನನ್ನು ಹಿಡಿದು ನಿಲ್ಲಿಸಿಬಿಟ್ಟನು.

೩೪. ಆಗ ರಾಹುವು ಭಯದಿಂದ ಶಿವನಿಗೆ ಮೊರೆಯಿಟ್ಟನು. ಓ ದೇವಾದಿದೇವ, ಮಹೇಶ್ವರ, ಶರಣಾಗತನಾದ ನನ್ನನ್ನು ಕಾಪಾಡು. ದೇವದಾನವರಿಂದ ಸರ್ವದಾ ವಂದನೀಯನೂ, ಎಲ್ಲದಕ್ಕೂ ಮಿಗಿಲಾದ ಐಶ್ವರ್ಯವುಳ್ಳವನೂ, ಆದ ಪ್ರಭುವು ನೀನಲ್ಲವೇ ?

೩೫. ಓ ಮಹಾದೇವ, ನಿನ್ನ ಕಿಂಕರನಾದ ಈ ಮಹಾಭಯಂಕರವಾದ ಆಕೃತಿಯುಳ್ಳ ಪುರುಷನು ಬ್ರಾಹ್ಮಣನಾದ ನನ್ನನ್ನು ನುಂಗಿಬಿಡಲು ಬಂದಿರುವನು.

೩೬. ಓ ದೇವೇಶ, ಮರೆಹೊಕ್ಕವರಲ್ಲಿ ವಾತ್ಸಲ್ಯವುಳ್ಳವನೇ, ಈ ಘೋರ ಪುರುಷನಿಂದ ನನ್ನನ್ನು ಕಾಪಾಡು. ಇವನು ನನ್ನನ್ನು ನುಂಗಿಬಿಡದಂತೆ ರಕ್ಷಿಸು. ನಿನಗೆ ಮತ್ತೆಮತ್ತೆ ನಮಸ್ಕಾರಮಾಡುವೆನು ಎಂದನು.

॥ ಸನತ್ಕುಮಾರ ಉವಾಚ ॥

ಮಹಾದೇವೋ ವಚಶ್ಶ್ರುತ್ವಾ ಬ್ರಾಹ್ಮಣಸ್ಯ ತದಾ ಮುನೇ ।
ಅಬ್ರವೀತ್ಸ್ವಗಣಂ ತಂ ವೈ ದೀನಾನಾಥಪ್ರಿಯಃ ಪ್ರಭುಃ ॥ ೩೭ ॥

॥ ಮಹಾದೇವ ಉವಾಚ ॥

ಪ್ರಭುಂ ಚ ಬ್ರಾಹ್ಮಣಂ ದೂತಂ ರಾಹ್ವಾಖ್ಯಂ ಶರಣಾಗತಂ ।
ಶರಣ್ಯಾ ರಕ್ಷಣೀಯಾ ಹಿ ನ ದಂಡ್ಯಾ ಗಣಸತ್ತಮ ॥ ೩೮ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತೋ ಗಿರಿಜೇಶೇನ ಸಗಣಃ ಕರುಣಾತ್ಮನಾ ।
ರಾಹುಂ ತತ್ಯಾಜ ಸಹಸಾ ಬ್ರಾಹ್ಮಣೇತಿ ಶ್ರುತಾಕ್ಷರಃ ॥ ೩೯ ॥

ರಾಹುಂ ತ್ಯಕ್ತ್ವಾಂಬರೇ ಸೋಽಥ ಪುರುಷೋ ದೀನಯಾ ಗಿರಾ ।
ಶಿವೋಪಕಂಠಮಾಗತ್ಯ ಮಹಾದೇವಂ ವ್ಯಜಿಜ್ಞಪತ್ ॥ ೪೦ ॥

---

೩೭. ಓ ವ್ಯಾಸಮುನೀಂದ್ರ, ಈರೀತಿ ಬ್ರಾಹ್ಮಣನಾದ ರಾಹುವು ತನಗೆ ಮೊರೆಯಿಟ್ಟುದುದನ್ನು ಕೇಳಿ ದೀನರಿಗೂ ಅನಾಥರಿಗೂ ಬಂಧುವಾದ ಆ ಪ್ರಭುವು ತನ್ನ ಗಣವನ್ನು ಕುರಿತು ಈರೀತಿ ನುಡಿದನು.

೩೮. ಈ ದೂತನಾದ ರಾಹುವು ಬ್ರಾಹ್ಮಣನು. ಮೇಲಾಗಿ ನನ್ನನ್ನು ಮೊರೆಹೊಕ್ಕಿರುವನು. ಇವನನ್ನು ಬಿಟ್ಟುಬಿಡು. ಎಲೈ ಗಣಶ್ರೇಷ್ಠನೇ, ಶರಣಾಗತರಾದವರನ್ನು ಎಂದಿಗೂ ದಂಡಿಸಬಾರದು. ಅವರನ್ನು ರಕ್ಷಿಸಲೇಬೇಕು ಎಂದನು.

೩೯. ಓ ವ್ಯಾಸ, ಈರೀತಿಯಾಗಿ ಕರುಣಾಶಾಲಿಯಾದ ಪಾರ್ವತೀಪ್ರಿಯನಾದ ಶಿವನು ನುಡಿಯಲು, ಆ ಗಣಪುರುಷನು ಬ್ರಾಹ್ಮಣನೆಂಬ ಹೆಸರು ಕಿವಿಗೆ ಬೀಳುತ್ತಲೇ ತಟ್ಟನೆ ರಾಹುವನ್ನು ಬಿಟ್ಟುಬಿಟ್ಟನು.

೪೦. ಆ ಪುರುಷನು ರಾಹುವನ್ನು ಬಿಟ್ಟುಬಿಟ್ಟಮೇಲೆ ಶಿವನ ಬಳಿಗೆ ಬಂದು ದೀನವಾದ ವಾಣಿಯಿಂದ ಮಹಾದೇವನಿಗೆ ಬಿನ್ನವಿಸಿದನು.

॥ ಪುರುಷ ಉವಾಚ ॥

ದೇವದೇವ ಮಹಾದೇವ ಕರುಣಾಕರ ಶಂಕರ ।
ತ್ವಾಜಿತಂ ಮಮ ಭಕ್ಷ್ಯಂ ತೇ ಶರಣಾಗತವತ್ಸಲ ॥ ೪೧ ॥

ಕ್ಷುಧಾ ಮಾಂ ಬಾಧತೇ ಸ್ವಾಮಿನ್ಕ್ಷುತ್ಕ್ಷಾಮಶ್ಚಾಸ್ಮಿ ಸರ್ವಥಾ ।
ಕಿಂ ಭಕ್ಷ್ಯಂ ಮಮ ದೇವೇಶ ತದಾಜ್ಞಾಪಯ ಮಾಂ ಪ್ರಭೋ ॥ ೪೨ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಪುರುಷಸ್ಯ ಮಹಾಪ್ರಭುಃ ।
ಪ್ರತ್ಯುವಾಚಾದ್ಭುತೋತಿಃ ಸ ಕೌತುಕೀ ಸ್ವಹಿತಂಕರಃ ॥ ೪೩ ॥

॥ ಮಹೇಶ್ವರ ಉವಾಚ ॥

ಬುಭುಕ್ಷಾ ಯದಿ ತೇಽತೀವ ಕ್ಷುಧಾ ತ್ವಾಂ ಬಾಧತೇ ಯದಿ ।
ಸಂಭಕ್ಷಯಾತ್ಮನಶ್ಶೀಘ್ರಂ ಮಾಂಸಂ ತ್ವಂ ಹಸ್ತಪಾದಯೋಃ ॥ ೪೪ ॥

---

೪೧. ಓ ದೇವದೇವ, ಮಹಾದೇವ, ನೀನು ಕೃಪಾಸಾಗರನು. ಲೋಕಕಲ್ಯಾಣಕಾರಕನು. ಶರಣಾಗತವತ್ಸಲನಾದ ನೀನು ನನ್ನ ಆಹಾರವನ್ನು ತಪ್ಪಿಸಿಬಿಟ್ಟೆ.

೪೨. ಓ ಪ್ರಭೂ, ಹಸಿವು ನನ್ನನ್ನು ಬಹಳವಾಗಿ ಪೀಡಿಸುತ್ತಿದೆ. ಈ ಹಸಿವಿನಿಂದಲೇ ಕಂಗೆಟ್ಟು ಸಂಪೂರ್ಣವಾಗಿ ಒಣಗಿಹೋಗಿದ್ದೇನೆ. ನಾನು ಏನನ್ನು ತಿನ್ನಲಿ? ಓ ದೇವೇಶ, ನನಗೆ ಅಪ್ಪಣೆಕೊಡು ಎಂದನು.

೪೩. ಓ ವ್ಯಾಸ, ಈರೀತಿ ಆ ಗಣವು ಹೇಳಿದ ಮಾತನ್ನು ಕೇಳಿ ಅತ್ಯಾಶ್ಚರ್ಯಕರವಾದ ಚರಿತ್ರವುಳ್ಳವನೂ, ಸ್ವಜನರ ಹಿತವನ್ನುಂಟುಮಾಡುವವನೂ ಆದ ಆ ಪ್ರಭುವು ವಿನೋದದಿಂದ ಆತನನ್ನು ಕುರಿತು,

೪೪. ನಿನಗೆ ಹಸಿವು ವಿಪರೀತವಾಗಿ ನಿನ್ನನ್ನು ಬಹುವಾಗಿ ಪೀಡಿಸುತ್ತಿದ್ದರೆ ಸ್ವಲ್ಪವೂ ತಡೆಮಾಡದೆ ನಿನ್ನ ಕೈಕಾಲುಗಳಲ್ಲಿರುವ ಮಾಂಸವನ್ನೇ ತಿಂದುಬಿಡು ಎಂದು ನುಡಿದನು.

॥ ಸನತ್ಕುಮಾರ ಉವಾಚ ॥

ಮಹಾದೇವೋ ವಚಃಶ್ರುತ್ವಾ ಬ್ರಾಹ್ಮಣಸ್ಯ ತದಾ ಮುನೇ ।
ಅಬ್ರವೀತ್ಸ್ವಗಣಂ ತಂ ವೈ ದೀನಾನಾಥಪ್ರಿಯಃ ಪ್ರಭುಃ ॥ ೩೭ ॥

॥ ಮಹಾದೇವ ಉವಾಚ ॥

ಪ್ರಭುಂ ಚ ಬ್ರಾಹ್ಮಣಂ ದೂತಂ ರಾಹ್ವಾಖ್ಯಂ ಶರಣಾಗತಂ ।
ಶರಣ್ಯಾ ರಕ್ಷಣೀಯಾ ಹಿ ನ ದಂಡ್ಯಾ ಗಣಸತ್ತಮ ॥ ೩೮ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತೋ ಗಿರಿಜೇಶೇನ ಸಗಣಃ ಕರುಣಾತ್ಮನಾ ।
ರಾಹುಂ ತತ್ಯಾಜ ಸಹಸಾ ಬ್ರಾಹ್ಮಣೇತಿ ಶ್ರುತಾಕ್ಷರಃ ॥ ೩೯ ॥

ರಾಹುಂ ತ್ಯಕ್ತ್ವಾಂಬರೇ ಸೋಽಥ ಪುರುಷೋ ದೀನಯಾ ಗಿರಾ ।
ಶಿವೋಪಕಂಠಮಾಗತ್ಯ ಮಹಾದೇವಂ ವ್ಯಜಿಜ್ಞಪತ್ ॥ ೪೦ ॥

---

೩೭. ಓ ವ್ಯಾಸಮುನೀಂದ್ರ, ಈರೀತಿ ಬ್ರಾಹ್ಮಣನಾದ ರಾಹುವು ತನಗೆ ಮೊರೆಯಿಟ್ಟದುದನ್ನು ಕೇಳಿ ದೀನರಿಗೂ ಅನಾಥರಿಗೂ ಬಂಧುವಾದ ಆ ಪ್ರಭುವು ತನ್ನ ಗಣವನ್ನು ಕುರಿತು ಈರೀತಿ ನುಡಿದನು.

೩೮. ಈ ದೂತನಾದ ರಾಹುವು ಬ್ರಾಹ್ಮಣನು. ಮೇಲಾಗಿ ನನ್ನನ್ನು ಮೊರೆಹೊಕ್ಕಿರುವನು. ಇವನನ್ನು ಬಿಟ್ಟುಬಿಡು. ಎಲೈ ಗಣಶ್ರೇಷ್ಠನೇ, ಶರಣಾಗತರಾದವರನ್ನು ಎಂದಿಗೂ ದಂಡಿಸಬಾರದು. ಅವರನ್ನು ರಕ್ಷಿಸಲೇಬೇಕು ಎಂದನು.

೩೯. ಓ ವ್ಯಾಸ, ಈರೀತಿಯಾಗಿ ಕರುಣಾಶಾಲಿಯಾದ ಪಾರ್ವತೀಪ್ರಿಯನಾದ ಶಿವನು ನುಡಿಯಲು, ಆ ಗಣಪುರುಷನು ಬ್ರಾಹ್ಮಣನೆಂಬ ಹೆಸರು ಕಿವಿಗೆ ಬೀಳುತ್ತಲೇ ತಟ್ಟನೆ ರಾಹುವನ್ನು ಬಿಟ್ಟುಬಿಟ್ಟನು.

೪೦. ಆ ಪುರುಷನು ರಾಹುವನ್ನು ಬಿಟ್ಟುಬಿಟ್ಟಮೇಲೆ ಶಿವನ ಬಳಿಗೆ ಬಂದು ದೀನವಾದ ವಾಣಿಯಿಂದ ಮಹಾದೇವನಿಗೆ ಬಿನ್ನವಿಸಿದನು.

॥ ಪುರುಷ ಉವಾಚ ॥

ದೇವದೇವ ಮಹಾದೇವ ಕರುಣಾಕರ ಶಂಕರ ।
ತ್ಯಾಜಿತಂ ಮಮ ಭಕ್ಷ್ಯಂ ತೇ ಶರಣಾಗತವತ್ಸಲ ॥ ೪೧ ॥

ಕ್ಷುಧಾ ಮಾಂ ಬಾಧತೇ ಸ್ವಾಮಿನ್ಕ್ಷುತ್ಕ್ಷಾಮಶ್ಚಾಸ್ಮಿ ಸರ್ವಥಾ ।
ಕಿಂ ಭಕ್ಷ್ಯಂ ಮಮ ದೇವೇಶ ತದಾಜ್ಞಾಪಯ ಮಾಂ ಪ್ರಭೋ ॥ ೪೨ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಪುರುಷಸ್ಯ ಮಹಾಪ್ರಭುಃ ।
ಪ್ರತ್ಯುವಾಚಾದ್ಭುತೋತಿಃ ಸ ಕೌತುಕೀ ಸ್ವಹಿತಂಕರಃ ॥ ೪೩ ॥

॥ ಮಹೇಶ್ವರ ಉವಾಚ ॥

ಬುಭುಕ್ಷಾ ಯದಿ ತೇಽತೀವ ಕ್ಷುಧಾ ತ್ವಾಂ ಬಾಧತೇ ಯದಿ ।
ಸಂಭಕ್ಷಯಾತ್ಮನಶ್ಶೀಘ್ರಂ ಮಾಂಸಂ ತ್ವಂ ಹಸ್ತಪಾದಯೋಃ ॥ ೪೪ ॥

---

೪೧. ಓ ದೇವದೇವ, ಮಹಾದೇವ, ನೀನು ಕೃಪಾಸಾಗರನು. ಲೋಕಕಲ್ಯಾಣಕಾರಕನು. ಶರಣಾಗತವತ್ಸಲನಾದ ನೀನು ನನ್ನ ಆಹಾರವನ್ನು ತಪ್ಪಿಸಿಬಿಟ್ಟೆ.

೪೨. ಓ ಪ್ರಭೂ, ಹಸಿವು ನನ್ನನ್ನು ಬಹಳವಾಗಿ ಪೀಡಿಸುತ್ತಿದೆ. ಈ ಹಸಿವಿನಿಂದಲೇ ಕಂಗೆಟ್ಟು ಸಂಪೂರ್ಣವಾಗಿ ಒಣಗಿಹೋಗಿದ್ದೇನೆ. ನಾನು ಏನನ್ನು ತಿನ್ನಲಿ? ಓ ದೇವೇಶ, ನನಗೆ ಅಪ್ಪಣೆಕೊಡು ಎಂದನು.

೪೩. ಓ ವ್ಯಾಸ, ಈರೀತಿ ಆ ಗಣವು ಹೇಳಿದ ಮಾತನ್ನು ಕೇಳಿ ಅತ್ಯಾಶ್ಚರ್ಯಕರವಾದ ಚರಿತ್ರವುಳ್ಳವನೂ, ಸ್ವಜನರ ಹಿತವನ್ನುಂಟುಮಾಡುವವನೂ ಆದ ಆ ಪ್ರಭುವು ವಿನೋದದಿಂದ ಆತನನ್ನು ಕುರಿತು,

೪೪. ನಿನಗೆ ಹಸಿವು ವಿಪರೀತವಾಗಿ ನಿನ್ನನ್ನು ಬಹುವಾಗಿ ಪೀಡಿಸುತ್ತಿದ್ದರೆ ಸ್ವಲ್ಪವೂ ತಡೆಮಾಡದೆ ನಿನ್ನ ಕೈಕಾಲುಗಳಲ್ಲಿರುವ ಮಾಂಸವನ್ನೇ ತಿಂದುಬಿಡು ಎಂದು ನುಡಿದನು.

॥ ಸನತ್ಕುಮಾರ ಉವಾಚ ॥

ಸ ಶಿವೇನೈವಮಾಜ್ಞಪ್ತಶ್ಚಖಾದ ಪುರುಷಸ್ಸ್ವಕಂ ।
ಹಸ್ತಪಾದೋದ್ಭವಂ ಮಾಂಸಂ ಶಿರಶ್ಶೇಷೋಽಭವದ್ಯಥಾ ॥ ೪೫ ॥

ದೃಷ್ಟ್ವಾ ಶಿರೋಽವಶೇಷಂ ತು ಸುಪ್ರಸನ್ನಸ್ಸದಾಶಿವಃ ।
ಪುರುಷಂ ಭೀಮಕರ್ಮಾಣಂ ಸಮುವಾಚ ಸುವಿಸ್ಮಿತಃ ॥ ೪೬ ॥

॥ ಶಿವ ಉವಾಚ ॥

ಹೇ ಮಹಾಗಣ ಧನ್ಯಸ್ತ್ವಂ ಮದಾಜ್ಞಾಪ್ರತಿಪಾಲಕಃ ।
ಸಂತುಷ್ಟಶ್ಚಾಸ್ಮಿ ತೇಽತೀವ ಕರ್ಮಣಾನೇನ ಸತ್ತಮ ॥ ೪೭ ॥

ತ್ವಂ ಕೀರ್ತಿಮುಖಸಂಜ್ಞೋ ಹಿ ಭವ ಮದ್ದ್ವಾರಕಸ್ಸದಾ ।
ಮಹಾಗಣೋ ಮಹಾವೀರಸ್ಸರ್ವದುಷ್ಟಭಯಂಕರಃ ॥ ೪೮ ॥

ಮತ್ಪ್ರಿಯಸ್ತ್ವಂ ಮದರ್ಚಾಯಾಂ ಸದಾ ಪೂಜ್ಯೋ ಹಿ ಮಜ್ಜನೈಃ ।
ತ್ವದರ್ಚಾಂ ಯೇ ನ ಕುರ್ವಂತಿ ನೈವ ತೇ ಮತ್ಪ್ರಿಯಂಕರಾಃ ॥ ೪೯ ॥

---

೪೫. ಈರೀತಿ ಶಿವನು ಅಪ್ಪಣೆಯನ್ನು ಈಯುತ್ತಲೇ ಆ ಪುರುಷನು ತನ್ನ ತಲೆಯೊಂದು ಹೊರತು ಉಳಿದ ಕೈಕಾಲು ಮುಂತಾದ ಶರೀರಭಾಗಗಳಲ್ಲಿರುವ ಮಾಂಸವೆಲ್ಲವನ್ನೂ ತಿಂದುಹಾಕಿಬಿಟ್ಟನು.

೪೬. ಈರೀತಿ ಭಯಂಕರವಾದ ಕೆಲಸವನ್ನೆಸಗಿ ತಲೆಯು ಮಾತ್ರ ನಿಂತ ಆ ಪುರುಷನನ್ನು ಕುರಿತು ಶಿವನು ಬಹುವಾಗಿ ಮೆಚ್ಚಿದವನಾಗಿ ಆಶ್ಚರ್ಯದಿಂದ ಅವನನ್ನು ಕುರಿತು,

೪೭. ಎಲೈ ಗಣಶ್ರೇಷ್ಠನೇ, ನನ್ನ ಅಪ್ಪಣೆಯನ್ನು ನೆರವೇರಿಸಿದ ನೀನೇ ಧನ್ಯನು. ನಿನ್ನ ಈ ಕೆಲಸದಿಂದ ನಾನು ಬಹಳವಾಗಿ ಸಂತುಷ್ಟನಾಗಿರುವೆನು.

೪೮. ನೀನು ಇನ್ನುಮೇಲೆ ಕೀರ್ತಿಮುಖನೆಂದು ಹೆಸರುಪಡೆದು ನನ್ನ ದ್ವಾರಪಾಲಕನಾಗಿರು. ಎಲ್ಲ ದುಷ್ಟರಿಗೂ ಭಯಂಕರನೂ ಮಹಾಪರಾಕ್ರಮಶಾಲಿಯೂ ಆದ ನೀನು ಗಣಾಧಿಪತಿಯಾಗಿರು.

೪೯. ನೀನು ನನಗೆ ಪ್ರಿಯನಾದವನು. ನನ್ನನ್ನು ಪೂಜಿಸುವಾಗ ನನ್ನ ಭಕ್ತರೆಲ್ಲರೂ ನಿನ್ನನ್ನೂ ಅತ್ಯವಶ್ಯವಾಗಿ ಪೂಜಿಸಬೇಕು. ಯಾರು ನಿನ್ನನ್ನು ಪೂಜಿಸುವದಿಲ್ಲವೋ ಅವರು ಖಂಡಿತವಾಗಿಯೂ ನನ್ನ ಪ್ರೀತಿಗೆ ಪಾತ್ರರಾಗುವುದಿಲ್ಲ ಎಂದನು.

॥ ಸನತ್ಕುಮಾರ ಉವಾಚ ॥

ಇತಿ ಶಂಭೋರ್ವರಂ ಪ್ರಾಪ್ಯ ಪುರುಷಃ ಪ್ರಜಹರ್ಷ ಸಃ ।
ತದಾಪ್ರಭೃತಿ ದೇವೇಶದ್ವಾರೇ ಕೀರ್ತಿಮುಖಃ ಸ್ಥಿತಃ ॥ ೫೦ ॥

ಪೂಜನೀಯೋ ವಿಶೇಷೇಣ ಸ ಗಣಶ್ಶಿವಪೂಜನೇ ।
ನಾರ್ಚಯಂತೀಹ ಯೇ ಪೂರ್ವಂ ತೇಷಾಮರ್ಚಾ ವೃಥಾ ಭವೇತ್ ॥೫೧॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರವಧೋಪಾಖ್ಯಾನೇ
ದೂತಸಂವಾದೋ ನಾಮ ಏಕೋನವಿಂಶೋಽಧ್ಯಾಯಃ

---

೫೦. ಓ ವ್ಯಾಸ, ಈರೀತಿ ಶಿವನಿಂದ ವರವನ್ನು ಪಡೆದು ಆ ಪುರುಷನು ಬಹಳ ಸಂತೋಷವನ್ನು ಹೊಂದಿದನು. ಅದು ಮೊದಲುಗೊಂಡು ಕೀರ್ತಿಮುಖನು ಶಿವನ ಬಾಗಿಲಿನಲ್ಲಿಯೇ ದ್ವಾರಪಾಲಕನಾಗಿ ನಿಂತಿರುವನು.

೫೧. ಆದುದರಿಂದ ಶಿವನನ್ನು ಪೂಜಿಸುವಾಗ ಆ ಗಣಪುರುಷನನ್ನು ವಿಶೇಷವಾಗಿ ಪೂಜಿಸಬೇಕು. ಯಾರು ಆತನನ್ನು ಮೊದಲು ಪೂಜಿಸುವುದಿಲ್ಲವೋ ಅವರ ಪೂಜೆಯಲ್ಲವೂ ವ್ಯರ್ಥವಾಗುವುದು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಐದನೆಯ ಯುದ್ಧಖಂಡದಲ್ಲಿ
ದೂತಸಂವಾದವೆಂಬ ಹತ್ತೊಂಭತ್ತನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ವಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ಕಥಾ ತೇ ಶ್ರಾವಿತಾದ್ಭುತಾ ।
ಮಹಾಪ್ರಭೋಶ್ಶಂಕರಸ್ಯ ಯತ್ರ ಲೀಲಾ ಚ ಪಾವನೀ ॥ ೧ ॥

ಇದಾನೀಂ ಬ್ರೂಹಿ ಸುಪ್ರೀತ್ಯಾ ಕೃಪಾಂ ಕೃತ್ವಾ ಮಮೋಪರಿ ।
ರಾಹುರ್ಮುಕ್ತಃ ಕುತ್ರ ಗತಃ ಪುರುಷೇಣ ಮಹಾಮುನೇ ॥ ೨ ॥

---

### ಇಪ್ಪತ್ತನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯು ಸನತ್ಕುಮಾರನನ್ನು ಕುರಿತು ಎಲೈ ಸರ್ವಜ್ಞನೇ, ಮಹಾಪ್ರಭುವಾದ ಶಂಕರನ ಪವಿತ್ರವಾದ ಲೀಲೆಗಳನ್ನು ಒಳಗೊಂಡ ಅದ್ಭುತವಾದ ಚರಿತ್ರವನ್ನು ಶ್ರವಣಮಾಡಿಸಿದೆ.

೨. ನೀನೀಗ ನನ್ನಲ್ಲಿ ಕೃಪೆಯಿಟ್ಟು ಆದರದಿಂದ ಆ ಕ್ರೂರಪುರುಷನು ರಾಹುವನ್ನು ಬಿಟ್ಟುಬಿಟ್ಟಮೇಲೆ, ಆ ರಾಹುವು ಎಲ್ಲಿಗೆ ಹೋದನೆಂಬುದನ್ನು ತಿಳಿಸು ಎಂದನು.

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ವ್ಯಾಸಸ್ಯಾಮಿತಮೇಧಸಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಬ್ರಹ್ಮಪುತ್ರೋ ಮಹಾಮುನಿಃ ॥ ೩ ॥

॥ ಸನತ್ಕುಮಾರ ಉವಾಚ ॥

ರಾಹುರ್ವಿಮುಕ್ತೋ ಯಸ್ತೇನ ಸೋಽಪಿ ತದ್ವರ್ಬರಸ್ಥಲೇ ।
ಅತಸ್ಸ ವರ್ಬರೋ ಭೂತ ಇತಿ ಭೂಮೌ ಪ್ರಥಾಂ ಗತಃ ॥ ೪ ॥

ತತಃ ಸ ಮನ್ಯಮಾನಸ್ತ್ವಂ ಪುನರ್ಜನಿಮತಾನತಃ ।
ಗತಗರ್ವೋ ಜಗಾಮಾಥ ಜಲಂಧರಪುರಂ ಶನೈಃ ॥ ೫ ॥

ಜಲಂಧರಾಯ ಸೋಽಭ್ಯೇತ್ಯ ಸರ್ವಮೀಶವಿಚೇಷ್ಟಿತಂ ।
ಕಥಯಾಮಾಸ ತದ್ವ್ಯಾಸಾದ್ವ್ಯಾಸ ದೈತ್ಯೇಶ್ವರಾಯ ವೈ ॥ ೬ ॥

---

೩. ಈರೀತಿ ಮಹಾಕುಶಲಮತಿಯಾದ ವ್ಯಾಸಮಹರ್ಷಿಯು ನುಡಿದುದನ್ನು ಕೇಳಿ ಮುನಿಶ್ರೇಷ್ಠನೂ ಬ್ರಹ್ಮಪುತ್ರನೂ ಆದ ಸನತ್ಕುಮಾರನು ಸಂತೋಷದಿಂದ ಇಂತು ನುಡಿದನು.

೪. ಎಲೈ ವ್ಯಾಸನೇ ಕೇಳು. ಆ ರಾಹುವು ಭಯಂಕರಾಕೃತಿಯ ಆ ಪುರುಷನಿಂದ ಬರ್ಬರಸ್ಥಳದಲ್ಲಿ ಬಿಡಲ್ಪಟ್ಟುದರಿಂದ ಅವನಿಗೆ ಬರ್ಬರನೆಂಬುದಾಗಿಯೇ ಭೂಮಿಯಲ್ಲಿ ಪ್ರಸಿದ್ಧಿಯುಂಟಾಯಿತು.

೫ ತನ್ನ ಅಹಂಕಾರವೆಲ್ಲವೂ ಅಡಗಿಹೋಗಲು, ರಾಹುವು ತಾನು ಮರಳಿ ಹುಟ್ಟಿದೆನೆಂದು ಭಾವಿಸಿ, ತಲೆತಗ್ಗಿಸಿಕೊಂಡು ಜಲಂಧರನ ನಗರವನ್ನು ಕುರಿತು ಮೆಲ್ಲಗೆ ಹೊರಟನು.

೬. ಜಲಂಧರನ ಬಳಿಗೆ ಬಂದಮೇಲೆ ಆ ದೈತ್ಯರಾಜನಿಗೆ ಶಿವನು ಮಾಡಿದುದೆಲ್ಲವನ್ನೂ ಸಂಗ್ರಹದಿಂದ ಅರಿಕೆಮಾಡಿದನು.

॥ ಸನತ್ಕುಮಾರ ಉವಾಚ ॥

ಜಲಂಧರಸ್ತು ತಚ್ಛ್ರುತ್ವಾ ಕೋಪಾಕುಲಿತವಿಗ್ರಹಃ ।
ಬಭೂವ ಬಲವಾನ್ಸಿಂಧುಪುತ್ರೋ ದೈತ್ಯೇಂದ್ರಸತ್ತಮಃ ॥ ೭ ॥

ತತಃ ಕೋಪಪರಾಧೀನಮಾನಸೋ ದೈತ್ಯಸತ್ತಮಃ ।
ಉದ್ಯೋಗೇ ಸರ್ವಸೈನ್ಯಾನಾಂ ದೈತ್ಯಾನಾಮಾದಿದೇಶ ಹ ॥ ೮ ॥

॥ ಜಲಂಧರ ಉವಾಚ ॥

ನಿರ್ಗಚ್ಛಂತ್ವಖಿಲಾ ದೈತ್ಯಾಃ ಕಾಲನೇಮಿಮುಖಾಃ ಖಲು ।
ತಥಾ ಶಂಭುನಿಶುಂಭಾದ್ಯಾ ವೀರಾಸ್ಸ್ವಬಲಸಂಯುತಾಃ ॥ ೯ ॥

ಕೋಟಿರ್ವೀರಕುಲೋತ್ಪನ್ನಾಃ ಕಂಬುವಂಶ್ಯಾಶ್ಚ ದೌರ್ಹೃದಾಃ ।
ಕಾಲಕಾಃ ಕಾಲಕೇಯಾಶ್ಚ ಮೌರ್ಯಾ ಧೌಮ್ರಾಸ್ತಥೈವ ಚ ॥ ೧೦ ॥

ಇತ್ಯಾಜ್ಞಾಪ್ಯಾಸುರಪತಿಸ್ಸಿಂಧುಪುತ್ರಃ ಪ್ರತಾಪವಾನ್ ।
ನಿರ್ಜಗಾಮಾಶು ದೈತ್ಯಾನಾಂ ಕೋಟಿಭಿಃ ಪರಿವಾರಿತಃ ॥ ೧೧ ॥

---

೭-೮. ಓ ವ್ಯಾಸ, ಆ ಮಾತನ್ನು ಕೇಳಿದೊಡನೆಯೇ, ಮಹಾಬಲಾಢ್ಯನೂ, ದೈತ್ಯಾಧಿಪತಿಯೂ ಆದ ಆ ಜಲಂಧರನು ಬಹುವಾಗಿ ಕೋಪಗೊಂಡು ತನ್ನ ಎಲ್ಲ ದೈತ್ಯಸೈನ್ಯಗಳಿಗೂ ಯುದ್ಧಸಿದ್ಧತೆಗಾಗಿ ಮಾಡಬೇಕಾದ ಕೆಲಸವನ್ನು ಅಪ್ಪಣೆ ಮಾಡಿದನು.

೯. ಕಾಲನೇಮಿಯೇ ಮೊದಲಾದ ಎಲ್ಲಾ ದೈತ್ಯರೂ ಈಗಲೇ ಹೊರಡಿರಿ. ಹಾಗೆಯೇ ಶುಂಭನಿಶುಂಭನೇ ಮೊದಲಾದ ವೀರರೆಲ್ಲರೂ ತಮ್ಮ ತಮ್ಮ ಸೇನಾಸಮೇತರಾಗಿ ಯುದ್ಧಸನ್ನದ್ಧರಾಗಿ.

೧೦. ಮಹಾವೀರರ ವಂಶದಲ್ಲಿ ಹುಟ್ಟಿರುವ, ಕಂಬುವಂಶ್ಯರೂ, ದೌರ್ಹೃದರೂ, ಕಾಲಕರೂ, ಕಾಲಕೇಯರೂ ಮೌರ್ಯರೂ, ಧೌಮ್ರರೂ ಎಲ್ಲರೂ ಕೋಟಿ ಸಂಖ್ಯಾತರಾಗಿ ಯುದ್ಧಮಾಡಲು ಹೊರಡಿ.

೧೧. ಈರೀತಿ ಅಪ್ಪಣೆಯಿತ್ತು ಸಾಗರಸುತನಾದ ಆ ಅಸುರಚಕ್ರವರ್ತಿಯು, ದೈತ್ಯರು ಕೋಟಿಗಟ್ಟಲೆ ತನ್ನ ಸುತ್ತಲೂ ಬಳಸಿ ಬರುತ್ತಿರಲು ಪ್ರಯಾಣಮಾಡಿದನು.

ತತಸ್ತಸ್ಯಾಗ್ರತಶ್ಶುಕ್ರೋ ರಾಹುಶ್ಛಿನ್ನಶಿರೋಽಭವತ್ ।
ಮುಕುಟಶ್ಚಾಪತದ್ಭೂವೌ ವೇಗಾತ್ಪ್ರಸ್ಖಲಿತಸ್ತದಾ　　　॥ ೧೨ ॥

ವ್ಯರಾಜತ ನಭಃ ಪೂರ್ಣಂ ಪ್ರಾವೃಷೀವ ಯಥಾ ಘನೈಃ ।
ಜಾತಾ ಅಶಕುನಾ ಭೂರಿ ಮಹಾನಿದ್ರಾವಿಸೂಚಕಾಃ　　　॥ ೧೩ ॥

ತಸ್ಯೋದ್ಯೋಗಂ ತಥಾ ದೃಷ್ಟ್ವಾ ಗೀರ್ವಾಣಾಸ್ತೇ ಸವಾಸವಾಃ ।
ಅಲಕ್ಷಿತಾಸ್ತದಾ ಜಗ್ಮುಃ ಕೈಲಾಸಂ ಶಂಕರಾಲಯಂ　　　॥ ೧೪ ॥

ತತ್ರ ಗತ್ವಾ ಶಿವಂ ದೃಷ್ಟ್ವಾ ಸುಪ್ರಣಮ್ಯ ಸವಾಸವಾಃ ।
ದೇವಾಸ್ಸರ್ವೇ ನತಸ್ಕಂಧಾಃ ಕರೌ ಬಧ್ವಾ ಚ ತುಷ್ಟುವುಃ　　　॥ ೧೫ ॥

॥ ದೇವಾ ಊಚುಃ ॥

ದೇವದೇವ ಮಹಾದೇವ ಕರುಣಾಕರ ಶಂಕರ ।
ನಮಸ್ತೇಽಸ್ತು ಮಹೇಶಾನ ಪಾಹಿ ನಶ್ಶರಣಾಗತಾನ್　　　॥ ೧೬ ॥

---

೧೨. ಅವನು ಹೊರಡಲು ಅವನ ಎದುರಿಗೆ ಶುಕ್ರನು ಬಂದನು. ರಾಹುವಿನ ಮುಂಡವಿಲ್ಲದ ರುಂಡವು ಕಾಣಬಂದಿತು. ಆ ಜಲಂಧರನ ತಲೆಯ ಕಿರೀಟವು ಬೇಗನೆ ಜಾರಿಹೋಗಿ ಕೆಳಗೆ ನೆಲದಮೇಲೆ ಬಿದ್ದುಹೋಯಿತು.

೧೩. ಮಳೆಗಾಲದಂತೆ ಆಕಾಶದಲ್ಲಿ ಮೋಡಗಳು ಕವಿದು ಕತ್ತಲಾಯಿತು. ಈರೀತಿ ಸಾವನ್ನು ಸೂಚಿಸುವ ಅಪಶಕುನಗಳು ಅನೇಕವಾಗಿ ಕಂಡುಬಂದುವು.

೧೪-೧೫. ಸಮರಸನ್ನದ್ಧನಾಗಿ ಜಲಂಧರನು ಹೊರಟಿರುವುದನ್ನು ಕಂಡು, ಇಂದ್ರಾದಿದೇವತೆಗಳು ಯಾರಿಗೂ ಕಾಣದಂತೆ ಶಿವನ ನಿವಾಸವಾದ ಕೈಲಾಸ ಪರ್ವತಕ್ಕೆ ಹೋಗಿ ಅಲ್ಲಿ ಶಿವನಿಗೆ ನಮಸ್ಕಾರಮಾಡಿ ವಿನಯದಿಂದ ಕೈಗಳನ್ನು ಮುಗಿದುಕೊಂಡು ಸ್ತೋತ್ರಮಾಡತೊಡಗಿದರು.

೧೬. ಓ ದೇವದೇವ, ಮಹಾದೇವ, ನೀನು ದಯಾನಿಧಿಯು, ಸರ್ವ ಮಂಗಳಕರನು, ದೇವತೆಗಳಿಗೆಲ್ಲಾ ಅಧಿಪತಿಯು. ಶರಣಾಗತರಾದ ನಮ್ಮನ್ನು ಕಾಪಾಡು.

ವಿಹ್ವಲಾ ವಯಮತ್ಯುಗ್ರಂ ಜಲಂಧರಕೃತಾತ್ಪ್ರಭೋ ।
ಉಪದ್ರವಾತ್ಸದೇವೇಂದ್ರಾಃ ಸ್ಥಾನಭ್ರಷ್ಟಾಃ ಕ್ಷಿತಿಸ್ಥಿತಾಃ ॥ ೧೭ ॥

ನ ಜಾನಾಸಿ ಕಥಂ ಸ್ವಾಮಿನ್ದೇವಾಪತ್ತಿಮಿಮಾಂ ಪ್ರಭೋ ।
ತಸ್ಮಾನ್ನೋ ರಕ್ಷಣಾರ್ಥಾಯ ಜಹಿ ಸಾಗರನಂದನಂ ॥ ೧೮ ॥

ಅಸ್ಮಾಕಂ ರಕ್ಷಣಾರ್ಥಾಯ ಯತಸ್ತ್ವಪೂರ್ವಂ ಗರುಡಧ್ವಜಃ ।
ನಿಯೋಜಿತಸ್ತ್ವಯಾ ನಾಥ ನ ಕ್ಷಮಸ್ಸೋಽದ್ಯ ರಕ್ಷಿತುಂ ॥ ೧೯ ॥

ತದಾಧೀನೋ ಗೃಹೇ ತಸ್ಯ ತಿಷ್ಠತ್ಯದ್ಯ ಮಯಾ ಸಹ ।
ವಯಂ ಚ ತತ್ರ ತಿಷ್ಠಾಮಸ್ತದಾಜ್ಞಾವಶಗಾಸ್ಸುರಾಃ ॥ ೨೦ ॥

ಅಲಕ್ಷಿತಾ ವಯಂ ಚಾತ್ರಾಗತಾಶ್ಶಂಭೋ ತ್ವದಂತಿಕಂ ।
ಸ ಆಯಾತಿ ತ್ವಯಾ ಕರ್ತುಂ ರಣಂ ಸಿಂಧುಸುತೋ ಬಲೀ ॥ ೨೧ ॥

---

೧೭. ದೇವೇಂದ್ರನೇ ಮೊದಲಾಗಿ ನಾವೆಲ್ಲರೂ ಜಲಂಧರನು ಮಾಡಿದ ನಾನಾಕೋಟಲೆಗಳಿಗೆ ಸಿಲುಕಿ ನಮ್ಮ ನಮ್ಮ ಸ್ಥಾನಗಳಿಂದ ಕದಲಿಸಲ್ಪಟ್ಟು ಭೂಮಿಯಲ್ಲಿ ವಾಸಮಾಡುತ್ತಿದ್ದೇವೆ.

೧೮. ಓ ಪ್ರಭೂ, ದೇವತೆಗಳಿಗೆ ಒದಗಿರುವ ಈ ಆಪತ್ತನ್ನು ನೀನು ತಿಳಿದಿಲ್ಲವೇ? ಆದುದರಿಂದ ನಮ್ಮನ್ನು ಕಾಪಾಡಬೇಕುಗ ಸಾಗರಪುತ್ರನಾದ ಆ ಜಲಂಧರನನ್ನು ಸಂಹರಿಸು.

೧೯-೨೦. ನೀನು ಮೊದಲು ನಮ್ಮನ್ನು ಸಂರಕ್ಷಿಸಲೆಂದು ಶ್ರೀಹರಿಯನ್ನು ನೇಮಿಸಿದೆಯಷ್ಟೆ? ಈಗ ಆತನು ನಮ್ಮನ್ನು ಕಾಪಾಡಲು ಸಾಧ್ಯವಿಲ್ಲವಾಗಿದೆ. ಈಗ ಆ ವಿಷ್ಣುವು ಆ ಜಲಂಧರನಿಗೆ ವಶನಾಗಿ ಲಕ್ಷ್ಮಿಯೊಡನೆ ಆತನ ಅರಮನೆಯಲ್ಲೇ ಇದ್ದುಬಿಟ್ಟಿರುವನು. ಆತನ ಅಪ್ಪಣೆಯಂತೆಯೇ ನಾವೆಲ್ಲರೂ ಅಲ್ಲಿಯೇ ಇರುವೆವು.

೨೧. ನಾವು ಅವನಿಗೆ ಕಾಣದಂತೆ ನಿನ್ನ ಬಳಿಗೆ ಬಂದಿರುವೆವು. ಆ ಬಲಾಢ್ಯನಾದ ಸಾಗರಸೂನುವು ನಿನ್ನೊಡನೆ ಯುದ್ಧಮಾಡುವುದಕ್ಕೆ ಬರುತ್ತಿರುವನು.

ಅತಸ್ಸ್ವಾಮಿನ್ರಣೇ ತ್ವಂ ತಮವಿಲಂಬ ಜಲಂಧರಂ ।
ಹಂತುಮರ್ಹಸಿ ಸರ್ವಜ್ಞ ಪಾಹಿ ನಶ್ಶರಣಾಗತಾನ್ ॥ ೨೨ ॥

॥ ಸನತ್ಕುಮಾರ ಉವಾಚ ॥
ಇತ್ಯುಕ್ತ್ವಾ ತೇ ಸುರಾಸ್ಸರ್ವೇ ಪ್ರಭುಂ ನತ್ವಾ ಸವಾಸವಾಃ ।
ಪಾದೌ ನಿರೀಕ್ಷ್ಯ ಸಂತಸ್ಥುರ್ಮಹೇಶಸ್ಯ ವಿನಮ್ರಕಾಃ ॥ ೨೩ ॥

॥ ಸನತ್ಕುಮಾರ ಉವಾಚ ॥
ಇತಿ ದೇವವಚಃ ಶ್ರುತ್ವಾ ಪ್ರಹಸ್ಯ ವೃಷಭಧ್ವಜಃ ।
ದ್ರುತಂ ವಿಷ್ಣುಂ ಸಮಾಹೂಯ ವಚನಂ ಚೇದಮಬ್ರವೀತ್ ॥ ೨೪ ॥

॥ ಈಶ್ವರ ಉವಾಚ ॥
ಹೃಷೀಕೇಶ ಮಹಾವಿಷ್ಣೋ ದೇವಾಶ್ಚಾತ್ರ ಸಮಾಗತಾಃ ।
ಜಲಂಧರಕೃತಾಪೀಡಾಶ್ಶರಣಂ ಮೇಽತಿವಿಹ್ವಲಾಃ ॥ ೨೫ ॥

ಜಲಂಧರಃ ಕಥಂ ವಿಷ್ಣೋ ಸಂಗರೇ ನ ಹತಸ್ತ್ವಯಾ ।
ತದ್ಗೃಹಂ ಚಾಪಿ ಯಾತೋಽಸಿ ತ್ಯಕ್ತ್ವಾ ವೈಕುಂಠಮಾತ್ಮನಃ ॥ ೨೬ ॥

---

೨೨. ಆದುದರಿಂದ ಎಲೈ ಸ್ವಾಮಿಯೇ, ಆ ಜಲಂಧರನನ್ನು ಯುದ್ಧದಲ್ಲಿ ಸ್ವಲ್ಪವೂ ತಡಮಾಡದೆ ಸಂಹರಿಸು. ಎಲೈ ಸರ್ವಜ್ಞನೆ, ನಿನ್ನನ್ನು ಮರೆಹೊಕ್ಕಿರುವ ನಮ್ಮನ್ನು ಕಾಪಾಡು ಎಂದು ಪ್ರಾರ್ಥಿಸಿದರು.

೨೩. ಓ ವ್ಯಾಸ, ಈರೀತಿ ಇಂದ್ರಾದಿದೇವತೆಗಳು ನುಡಿದು ಪ್ರಭುವಾದ ಆ ಮಹೇಶ್ವರನನ್ನು ನಮಸ್ಕರಿಸಿ ಆತನ ಪಾದಗಳಲ್ಲೇ ನೆಟ್ಟದೃಷ್ಟಿಯುಳ್ಳವರಾಗಿ ನಮ್ರತೆಯಿಂದ ನಿಂತಿದ್ದರು.

೨೪-೨೫. ದೇವತೆಗಳಾಡಿದ ಮಾತನ್ನು ಕೇಳಿ ವೃಷಭಧ್ವಜನಾದ ಶಿವನು ನಕ್ಕನು. ಬೇಗನೆ ವಿಷ್ಣುವನ್ನು ಕರೆದು ಎಲೈ ವಿಷ್ಣುವೇ, ಜಲಂಧರನಿಂದ ಬಹುವಾಗಿ ಪೀಡಿಸಲ್ಪಟ್ಟ ಈ ದೇವತೆಗಳು ಬಹಳ ಕಾತರರಾಗಿ, ನನ್ನನ್ನು ಮರೆಹೊಕ್ಕಿರುವರು.

೨೬. ಯುದ್ಧದಲ್ಲಿ ನೀನೇಕೆ ಜಲಂಧರನನ್ನು ವಧಿಸಲಿಲ್ಲ? ಅಷ್ಟೇ ಅಲ್ಲದೆ ಉತ್ತಮವಾದ ವೈಕುಂಠವನ್ನೂ ಬಿಟ್ಟು ಅವನ ಮನೆಯಲ್ಲಿಯೇ ನೆಲಸಿಬಿಟ್ಟಿರುವೆಯಲ್ಲಾ.

ಮಯಾ ನಿಯೋಜಿತಸ್ತ್ವಂ ಹಿ ಸಾಧುಸಂರಕ್ಷಣಾಯ ಚ ।
ನಿಗ್ರಹಾಯ ಖಲಾನಾಂ ಚ ಸ್ವತಂತ್ರೇಣ ವಿಹಾರಿಣಾ ॥ ೨೭ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ಮಹೇಶಸ್ಯ ವಚನಂ ಗರುಡಧ್ವಜಃ ।
ಪ್ರತ್ಯುವಾಚ ವಿನೀತಾತ್ಮಾ ನತಕಸ್ಸಾಂಜಲಿರ್ಹರಿಃ ॥ ೨೮ ॥

॥ ವಿಷ್ಣುರುವಾಚ ॥

ತವಾಂಶಸಂಭವತ್ವಾಚ್ಚ ಭ್ರಾತೃತ್ವಾಚ್ಚ ತಥಾ ಶ್ರಿಯಃ ।
ಮಯಾ ನ ನಿಹತಃ ಸಂಖ್ಯೇ ತ್ವಮೇನಂ ಜಹಿ ದಾನವಂ ॥ ೨೯ ॥

ಮಹಾಬಲೋ ಮಹಾವೀರೋ ಜೇಯಸ್ಸರ್ವದಿವೌಕಸಾಂ ।
ಅನ್ಯೇಷಾಂ ಚಾಪಿ ದೇವೇಶ ಸತ್ಯಮೇತದ್ಬ್ರವೀಮ್ಯಹಂ ॥ ೩೦ ॥

ಮಯಾ ಕೃತೋ ರಣಸ್ತೇನ ಚಿರಂ ದೇವಾನ್ವಿತೇನ ವೈ ।
ಮದುಪಾಯೋ ನ ಪ್ರವೃತ್ತಸ್ತಸ್ಮಿನ್ದಾನವಪುಂಗವೇ ॥ ೩೧ ॥

---

೨೭. ಸ್ವೇಚ್ಛಾವಿಹಾರಿಯಾದ ನಾನು, ನಿನ್ನನ್ನು ಸಾಧುಗಳನ್ನು ಸಂರಕ್ಷಿಸಲೆಂದೂ, ದುಷ್ಟರನ್ನು ನಿಗ್ರಹಿಸಲೆಂದೂ ನಿಯಮಿಸಿರಲಿಲ್ಲವೇ ಎಂದನು.

೨೮. ಓ ವ್ಯಾಸ, ಈರೀತಿ ಮಹೇಶ್ವರನು ನುಡಿದ ಮಾತನ್ನು ಕೇಳಿ ವಿಷ್ಣುವು ವಿನಯದಿಂದ ಕೈಗಳನ್ನು ಮುಗಿದುಕೊಂಡು ಇಂತೆಂದನು.

೨೯. ಆ ಜಲಂಧರನು ನಿನ್ನ ಅಂಶಸಂಭೂತನಾದುದರಿಂದಲೂ, ಲಕ್ಷ್ಮಿಗೆ ಒಡಹುಟ್ಟಿದವನಾದುದರಿಂದಲೂ, ಯುದ್ಧದಲ್ಲಿ ನಾನವನನ್ನು ಕೊಲ್ಲಲಿಲ್ಲ. ನೀನೇ ಈ ದಾನವನನ್ನು ನಿಗ್ರಹಿಸು.

೩೦. ಆ ಜಲಂಧರನು, ಮಹಾಶೂರನು, ಮಹಾಬಲಾಢ್ಯನು. ದೇವತೆಗಳಾಗಲಿ, ಇತರರಾಗಲಿ ಅವನನ್ನು ಜಯಿಸಲು ಸಾಧ್ಯವಿಲ್ಲ. ಇದು ಸತ್ಯವಾದುದು.

೩೧. ನಾನು ದೇವತೆಗಳೊಡನೆ ಸೇರಿ, ಬಹಳ ಕಾಲ ಅವನೊಡನೆ ಯುದ್ಧ ಮಾಡಿದೆನು. ಆ ದಾನವಶ್ರೇಷ್ಠನಲ್ಲಿ ನನ್ನ ಉಪಾಯವಾವುದೂ ನಡೆಯಲಿಲ್ಲ.

ತ್ವತ್ಪರಾಕ್ರಮತಸ್ತುಷ್ಟೋ ವರಂ ಬ್ರೂಹೀತ್ಯಹಂ ಖಲು ।
ಇತಿ ಮದ್ವಚನಂ ಶ್ರುತ್ವಾ ಸ ವವ್ರೇ ವರಮುತ್ತಮಂ ॥ ೩೨ ॥

ಮದ್ಭಗಿನ್ಯಾ ಮಯಾ ಸಾರ್ಧಂ ಮದ್ಗೇಹೇ ಸಸುರೋ ವಸ ।
ಮದಧೀನೋ ಮಹಾವಿಷ್ಣೋ ಇತ್ಯಹಂ ತದ್ಗೃಹಂ ಗತಃ ॥ ೩೩ ॥

॥ ಸನತ್ಕುಮಾರ ಉವಾಚ ॥
ಇತಿ ವಿಷ್ಣೋರ್ವಚಶ್ಶ್ರುತ್ವಾ ಶಂಕರಸ್ಸ ಮಹೇಶ್ವರಃ ।
ವಿಹಸ್ಯೋವಾಚ ಸುಪ್ರೀತಸ್ಸದಯೋ ಭಕ್ತವತ್ಸಲಃ ॥ ೩೪ ॥

॥ ಮಹೇಶ್ವರ ಉವಾಚ ॥
ಹೇ ವಿಷ್ಣೋ ಸುರವರ್ಯಾ ತ್ವಂ ಶೃಣು ಮದ್ವಾಕ್ಯಮಾದರಾತ್ ।
ಜಲಂಧರಂ ಮಹಾದೈತ್ಯಂ ಹನಿಷ್ಯಾಮಿ ನ ಸಂಶಯಃ ॥ ೩೫ ॥

ಸ್ವಸ್ಥಾನಂ ಗಚ್ಛ ನಿರ್ಭೀತೋ ದೇವಾ ಗಚ್ಛಂತ್ವಪಿ ಧ್ರುವಂ ।
ನಿರ್ಭಯಾ ವೀತಸಂದೇಹಾ ಹತಂ ಮತ್ವಾ ಸುರಾಧಿಪಂ ॥ ೩೬ ॥

---

೩೨. ಆಗ ನಿನ್ನ ಪರಾಕ್ರಮಕ್ಕೆ ನಾನು ಬಹಳ ಸಂತೋಷವನ್ನು ಪಟ್ಟಿರುವೆನು. ಆದುದರಿಂದ ಬೇಕಾದ ವರವನ್ನು ಕೇಳು ಎನಲು, ಅವನು ಶ್ರೇಷ್ಠವಾದ ವರವನ್ನೇ ಬೇಡಿದನು.

೩೩. ನನ್ನ ಸಹೋದರಿಯಾದ ಲಕ್ಷ್ಮಿಯೊಡನೆಯೂ ದೇವತೆಗಳೊಡನೆಯೂ ನನ್ನ ಮನೆಯಲ್ಲಿಯೇ, ನನ್ನ ಅಧೀನನಾಗಿ ಇದ್ದುಬಿಡು ಎಂದು ವರವನ್ನು ಬೇಡಿದುದರಿಂದ ನಾನು ಅವನ ಮನೆಯಲ್ಲಿರಬೇಕಾಯಿತು ಎಂದನು.

೩೪. ಓ ವ್ಯಾಸ, ಹೀಗೆ ವಿಷ್ಣುವು ಹೇಳಿದುದನ್ನು ಕೇಳಿ ಭಕ್ತವತ್ಸಲನೂ, ದಯಾನಿಧಿಯೂ, ಆದ ಶಂಕರನು ನಕ್ಕು ಈರೀತಿ ನುಡಿದನು.

೩೫. ಎಲೈ ಸುರಶ್ರೇಷ್ಠನಾದ ಶ್ರೀಹರಿಯೇ, ನನ್ನ ಮಾತನ್ನು ಆದರದಿಂದ ಕೇಳು ದೈತ್ಯಶ್ರೇಷ್ಠನಾದ ಆ ಜಲಂಧರನನ್ನು ನಾನೇ ಕೊಲ್ಲುವೆನು. ಸಂಶಯ ಪಡಬೇಡ.

೩೬. ಆ ಅಸುರಾಧಿಪತಿಯಾದ ಜಲಂಧರನು ಹತನಾದನೆಂದೇ ತಿಳಿದು ನೀನೂ ದೇವತೆಗಳೂ ಸ್ವಲ್ಪವೂ ಸಂಶಯಪಡದೆ ನಿರ್ಭಯರಾಗಿ ನಿಮ್ಮನಿಮ್ಮ ಜಾಗಕ್ಕೆ ತೆರಳಿರಿ ಎಂದನು.

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ಮಹೇಶಸ್ಯ ವಚನಂ ಸ ರಮಾಪತಿಃ ।
ಸನಿರ್ಜರೋ ಜಗಾಮಾಶು ಸ್ವಸ್ಥಾನಂ ಗತಸಂಶಯಃ ॥ ೩೭ ॥

ಏತಸ್ಮಿನ್ನಂತರೇ ವ್ಯಾಸ ಸ ದೈತ್ಯೇಂದ್ರೋಽತಿವಿಕ್ರಮಃ ।
ಸನ್ನದ್ಧೈರಸುರೈಸ್ಸಾರ್ಧಂ ಶೈಲಪ್ರಾಂತಂ ಯಯೌ ಬಲೀ ॥ ೩೮ ॥

ಕೈಲಾಸಮವರುಧ್ಯಾಥ ಮಹತ್ಯಾ ಸೇನಯಾ ಯುತಃ ।
ಸಂತಸ್ಥೌ ಕಾಲಸಂಕಾಶಃ ಕುರ್ವನ್ಸಿಂಹರವಂ ಮಹಾನ್ ॥ ೩೯ ॥

ಅಥ ಕೋಲಾಹಲಂ ಶ್ರುತ್ವಾ ದೈತ್ಯನಾದಸಮುದ್ಭವಂ ।
ಚುಕ್ರೋಧಾತಿಮಹೇಶಾನೋ ಮಹಾಲೀಲಃ ಖಲಾಂತಕಃ ॥ ೪೦ ॥

ಸಮಾದಿದೇಶ ಸಂಖ್ಯಾಯ ಸ್ವಗಣಾನ್ಸ ಮಹಾಬಲಾನ್ ।
ನಂದ್ಯಾದಿಕಾನ್ಮಹಾದೇವೋ ಮಹೋತಿಃ ಕೌತುಕೀ ಹರಃ ॥ ೪೧ ॥

---

೩೭. ಓ ವ್ಯಾಸ, ಈರೀತಿ ಮಹೇಶ್ವರನು ನುಡಿದ ಮಾತನ್ನು ಕೇಳಿ ಆ ಶ್ರೀಹರಿಯು ಸಂಶಯವೆಲ್ಲವನ್ನೂ ತೊರೆದು ದೇವತೆಗಳೆಲ್ಲರೊಡನೆ ತನ್ನ ಜಾಗಕ್ಕೆ ಹಿಂದಿರುಗಿದನು.

೩೮. ಇಷ್ಟರಲ್ಲಿ ಮಹಾಪರಾಕ್ರಮಶಾಲಿಯಾದ ಆ ದೈತ್ಯರಾಜನು ಯುದ್ಧಕ್ಕೆ ಸಿದ್ಧರಾಗಿರುವ ದೈತ್ಯರೊಡನೆ ಕೈಲಾಸಪರ್ವತದ ಬಳಿಗೆ ಬಂದನು.

೩೯. ಯಮನಿಗೆ ಸಮಾನನಾದ ಆ ಮಹಾಬಲಾಢ್ಯನು ಪ್ರಬಲವಾದ ತನ್ನ ಸೇನೆಯೊಡನೆ ಕೈಲಾಸಪರ್ವತವನ್ನು ಮುತ್ತಿ ಸಿಂಹನಾದವನ್ನು ಮಾಡುತ್ತಾ ನಿಂತನು.

೪೦. ಈ ದೈತ್ಯನ ಅಬ್ಬರದಿಂದ ಉಂಟಾದ ಗಲಭೆಯನ್ನು ಕೇಳಿ ದುಷ್ಟರಿಗೆ ಕಾಲಾಂತಕಸ್ವರೂಪನೂ ಅತಿಶಯವಾದ ಲೀಲೆಗಳುಳ್ಳವನೂ ಆದ ಆ ಮಹೇಶ್ವರನು ಮಹತ್ತಾದ ಕ್ರೋಧವನ್ನು ತಾಳಿದನು.

೪೧. ಅದ್ಭುತಚರಿತ್ರನೂ ವಿನೋದಪ್ರಿಯನೂ ಆದ ಆ ಶಿವನು ಮಹಾಬಲಾಢ್ಯರಾದ ನಂದಿ ಮೊದಲಾದ ತನ್ನ ಗಣಗಳನ್ನು ಯುದ್ಧಕ್ಕೆ ಹೊರಡುವಂತೆ ಅಪ್ಪಣೆಮಾಡಿದನು.

ನಂದೀಭಮುಖಸೇನಾನೀಮುಖಾಸ್ಸರ್ವೇ ಶಿವಾಜ್ಞಯಾ ।
ಗಣಾಶ್ಚ ಸಮನಹ್ಯಂತ ಯುದ್ಧಾಯಾತಿತ್ವರಾನ್ವಿತಾಃ ॥ ೪೨ ॥

ಅವತೇರುರ್ಗಣಾಸ್ಸರ್ವೇ ಕೈಲಾಸಾತ್ಕ್ರೋಧದುರ್ಮದಾಃ ।
ವಲ್ಗಂತೋ ರಣಶಬ್ದಾಂಶ್ಚ ಮಹಾವೀರಾ ರಣಾಯ ಹಿ ॥ ೪೩ ॥

ತತಸ್ಸಮಭವದ್ಯುದ್ಧಂ ಕೈಲಾಸೋಪತ್ಯಕಾಸು ವೈ
ಪ್ರಮಥಾಧಿಪದೈತ್ಯಾನಾಂ ಘೋರಂ ಶಸ್ತ್ರಾಸ್ತ್ರಸಂಕುಲಂ ॥ ೪೪ ॥

ಭೇರೀಮೃದಂಗಶಂಖೌಘೈರ್ನಿಸ್ಸ್ವಾನೈರ್ವೀರಹರ್ಷಣೈಃ ।
ಗಜಾಶ್ವರಥಶಬ್ದೈಶ್ಚ ನಾದಿತಾ ಭೂರ್ವ್ಯಕಂಪತ ॥ ೪೫ ॥

ಶಕ್ತಿತೋಮರಬಾಣೌಘೈರ್ಮುಸಲೈಃ ಪಾಶಪಟ್ಟಿಶೈಃ ।
ವ್ಯರಾಜತ ನಭಃ ಪೂರ್ಣಂ ಮುಕ್ತಾಭಿರಿವ ಸಂವೃತಂ ॥ ೪೬ ॥

---

೪೨. ನಂದಿ, ಗಣಪತಿ, ಷಣ್ಮುಖ ಮೊದಲಾದ ಗಣಗಳೆಲ್ಲರೂ ಶಿವನ ಅಪ್ಪಣೆಯಂತೆ ಬೇಗಬೇಗನೆ ಯುದ್ಧಕ್ಕೆ ತೆರಳಲು ಸಿದ್ಧವಾದರು.

೪೩. ಮಹಾಶೂರರಾದ ಆ ಗಣಗಳೆಲ್ಲರೂ ಕೋಪದಿಂದ ಕೆರಳಿದವರಾಗಿ ಉತ್ಸಾಹಜನಕವಾದ ವೀರಾಲಾಪಗಳನ್ನು ಮಾಡುತ್ತಾ ಕೈಲಾಸದಿಂದ ಕೆಳಗೆ ಇಳಿದು ಬಂದರು.

೪೪. ಅನಂತರ ಕೈಲಾಸಪರ್ವತದ ತಪ್ಪಲಿನಲ್ಲಿ ಪ್ರಮಥಾಧಿಪತಿಗಳಿಗೂ ದೈತ್ಯರಿಗೂ ಮಹಾಭಯಂಕರವಾದ ಯುದ್ಧವು ಜರುಗಿತು. ಆ ಯುದ್ಧದಲ್ಲಿ ಉಭಯ ಸೈನ್ಯದವರೂ ಅಸ್ತ್ರಶಸ್ತ್ರಗಳನ್ನು ಬಹುವಾಗಿ ಉಪಯೋಗಿಸಿದರು.

೪೫. ಭೇರಿ, ಮೃದಂಗ, ಶಂಖಗಳ ಶಬ್ದಗಳಿಂದಲೂ ವೀರರ ಉತ್ಸಾಹ ನಾದಗಳಿಂದಲೂ ಆನೆಗಳ ಬೃಂಹಿತದಿಂದಲೂ ಕುದುರೆಗಳ ಕೆನೆತಗಳಿಂದಲೂ ರಥಗಳ ಚೀತ್ಕಾರಗಳಿಂದಲೂ ಆ ರಣರಂಗವು ತುಂಬಿಹೋಗಿ ಭೂಮಿಯು ನಡುಗಿ ಹೋಯಿತು.

೪೬. ಶಕ್ತಿ, ತೋಮರ, ಬಾಣಗಳು, ಮುಸಲಗಳು, ಪಾಶಗಳು, ಪಟ್ಟಿಸಗಳು ಇವುಗಳಿಂದ ಅಂತರಿಕ್ಷವು ತುಂಬಿಹೋಯಿತು. ಮುತ್ತುಗಳು ತುಂಬಿದ್ದರೆ ಹೇಗೋ ಹಾಗೆ ಅಂತರಿಕ್ಷವು ಶೋಭಿಸಿತು.

ನಿಹತೈರಿವ ನಾಗಾಶ್ವೈಃ ಪತ್ತಿಭಿರ್ಭೂರ್ವ್ಯರಾಜತ ।
ವಜ್ರಾಹತೈಃ ಪರ್ವತೇಂದ್ರೈಃ ಪೂರ್ವಮಾಸೀತ್ಸುಸಂವೃತಾ ॥ ೪೭ ॥

ಪ್ರಮಥಾಹತದೈತ್ಯೌಘೈರ್ದೈತ್ಯಾಹತಗಣೈಸ್ತಥಾ ।
ವಸಾಸೃಙ್ಮಾಂಸಪಂಕಾಢ್ಯಾ ಭೂರಗಮ್ಯಾಭವತ್ತದಾ ॥ ೪೮ ॥

ಪ್ರಮಥಾಹತದೈತ್ಯೌಘಾನ್ಭಾರ್ಗವಸ್ಸಮಜೀವಯತ್ ।
ಯುದ್ಧೇ ಪುನಃ ಪುನಶ್ಚೈವ ಮೃತಸಂಜೀವಿನೀಬಲಾತ್ ॥ ೪೯ ॥

ದೃಷ್ಟ್ವಾ ವ್ಯಾಕುಲಿತಾಂಸ್ತಾಂಸ್ತು ಗಣಾಸ್ಸರ್ವೇ ಭಯಾರ್ದಿತಾಃ ।
ಶಶಂಸುರ್ದೇವದೇವಾಯ ಸರ್ವೇ ಶುಕ್ರವಿಚೇಷ್ಟಿತಂ ॥ ೫೦ ॥

ತಚ್ಛ್ರುತ್ವಾ ಭಗವಾನ್ರುದ್ರಶ್ಚಕಾರ ಕ್ರೋಧಮುಲ್ಬಣಂ ।
ಭಯಂಕರೋऽತಿರೌದ್ರಶ್ಚ ಬಭೂವ ಪ್ರಜ್ವಲನ್ದಿಶಃ ॥ ೫೧ ॥

---

೪೭. ಆನೆಗಳೂ, ಕುದುರೆಗಳೂ ಕಾಲಾಳುಗಳೂ ಹತರಾಗಿ ಬಿದ್ದಿರಲು ಹಿಂದೆ ಪರ್ವತಗಳು ಇಂದ್ರನ ವಜ್ರಾಯುಧದಿಂದ ಕತ್ತರಿಸಿ ಕೆಡವಲ್ಪಟ್ಟಾಗ ಶೋಭಿಸಿದಂತೆ ಭೂಮಿಯು ಕಂಗೊಳಿಸಿತು.

೪೮. ಆಗ ಪ್ರಮಥರು ಕೊಂದ ದೈತ್ಯರಿಂದಲೂ ದೈತ್ಯರಿಂದ ಹತರಾದ ಪ್ರಮಥರಿಂದಲೂ ರಣರಂಗವು ತುಂಬಿಹೋಗಿ ಅವರ ವಸ್ತ್ರಾ, ರಕ್ತ, ಮಾಂಸ ಇವುಗಳು ಕೆಸರುಗಟ್ಟಿಹೋಗಿ ಭೂಮಿಯು ಕಾಲಿಡದಂತಾಯಿತು.

೪೯. ಪ್ರಮಥರಿಂದ ಕೊಲ್ಲಲ್ಪಟ್ಟ ದೈತ್ಯರನ್ನೆಲ್ಲಾ ಶುಕ್ರಾಚಾರ್ಯನು ಮೃತಸಂಜೀವಿನೀ ವಿದ್ಯೆಯ ಮಹಿಮೆಯಿಂದ ಮತ್ತೆಮತ್ತೆ ಬದುಕಿಸುತ್ತಿದ್ದನು.

೫೦. ಈರೀತಿ ಸ್ವಲ್ಪವೂ ಕಳವಳವಿಲ್ಲದೆ ದೈತ್ಯರು ಮತ್ತೆಮತ್ತೆ ಬರುತ್ತಿರುವುದನ್ನು ಕಂಡು ಪ್ರಮಥರೆಲ್ಲರೂ ಭಯಪಟ್ಟು ಇದೆಲ್ಲಾ ಶುಕ್ರಾಚಾರ್ಯನು ಮಾಡುತ್ತಿರುವ ಕೆಲಸವೆಂದರಿತು, ದೇವದೇವನಾದ ಶಿವನಿಗೆ ತಿಳಿಸಿದರು.

೫೧. ಅದನ್ನು ಕೇಳುತ್ತಲೇ ಭಗವಂತನಾದ ಶಿವನು ವಿಪರೀತವಾದ ಕೋಪವನ್ನು ತಾಳಿದನು. ಆಗ ದಿಕ್ಕುಗಳನ್ನೆಲ್ಲವನ್ನೂ ತನ್ನ ತೇಜಸ್ಸಿನಿಂದ ಬೆಳಗುತ್ತಾ ಮಹಾಭಯಂಕರವಾದ ಘೋರಾಕಾರವನ್ನು ಕೈಗೊಂಡನು.

ಅಥ ರುದ್ರಮುಖಾತ್ಕೃತ್ಯಾ ಬಭೂವಾತೀವಭೀಷಣಾ ।
ತಾಲಜಂಘಾ ದರೀವಕ್ತ್ರಾ ಸ್ತನಾಪೀಡಿತಭೂರುಹಾ ॥ ೩೨ ॥

ಸಾ ಯುದ್ಧಭೂಮಿಂ ತರಸಾ ಸಸಾದ ಮುನಿಸತ್ತಮ ।
ವಿಚಚಾರ ಮಹಾಭೀಮಾ ಭಕ್ಷಯಂತೀ ಮಹಾಸುರಾನ್ ॥ ೩೩ ॥

ಅಥ ಸಾ ರಣಮಧ್ಯೇ ಹಿ ಜಗಾಮ ಗತಭೀರ್ದ್ರುತಂ ।
ಯತ್ರಾಸ್ತೇ ಸಂವೃತೋ ದೈತ್ಯವರೇಂದ್ರೈಸ್ಸ ಹಿ ಭಾರ್ಗವಃ ॥ ೩೪ ॥

ಸ್ವತೇಜಸಾ ನಭೋ ವ್ಯಾಪ್ಯ ಭೂಮಿಂ ಕೃತ್ವಾ ಚ ಸಾ ಮುನೇ ।
ಭಾರ್ಗವಂ ಸ್ವಭಗೇ ಧೃತ್ವಾ ಜಗಾಮಾಂತರ್ಹಿತಾ ನಭಃ ॥ ೩೫ ॥

ವಿಧೃತಂ ಭಾರ್ಗವಂ ದೃಷ್ಟ್ವಾ ದೈತ್ಯಸೈನ್ಯಗಣಾಸ್ತಥಾ ।
ಪ್ರಮ್ಲಾನವದನಾ ಯುದ್ಧಾನ್ನಿರ್ಜಗ್ಮುರ್ಯುದ್ಧದುರ್ಮದಾಃ ॥ ೩೬ ॥

---

೩೨. ಆಮೇಲೆ ಆ ರುದ್ರನ ಮುಖದಿಂದ ಮಹಾಘೋರವಾದ ಆಕೃತಿಯುಳ್ಳ ಕೃತ್ಯಾ (ಮಾಟದ ದೇವತೆ) ಎಂಬುವಳು ಜನಿಸಿದಳು. ಅವಳ ಮೊಳಕಾಲುಗಳು ತಾಳೇಮರದಷ್ಟು ಎತ್ತರವಿದ್ದುವು. ಬಾಯಿ ಗುಹೆಯನ್ನು ಹೋಲುತ್ತಿತ್ತು. ಅವಳ ಸ್ತನಗಳು ಪರ್ವತಗಳನ್ನೂ ನಾಚಿಸುತ್ತಿದ್ದುವು.

೩೩. ಓ ವ್ಯಾಸ, ಆ ಕ್ರೂರಾಕೃತಿಯ ಕೃತ್ಯೆಯು ಬೇಗಬೇಗನೆ ಯುದ್ಧಭೂಮಿಗೆ ತೆರಳಿ ದುಷ್ಟ ದೈತ್ಯರನ್ನೆಲ್ಲಾ ಭಕ್ಷಿಸುತ್ತ ಆ ಯುದ್ಧಭೂಮಿಯಲ್ಲಿ ಸುತ್ತಾಡುತ್ತಿದ್ದಳು.

೩೪. ಬಳಿಕ ಆ ಕನ್ಯೆಯು ಯುದ್ಧಮಧ್ಯದಲ್ಲಿಯೇ ಸ್ವಲ್ಪವೂ ಹೆದರಿಕೆಯಿಲ್ಲದೆಯೇ ಮಹಾವೀರರಾದ ದೈತ್ಯರ ಕಾಲಿನೊಳಗೆ ಗುಟ್ಟಾಗಿ ಅಡಗಿದ್ದ ಶುಕ್ರಾಚಾರ್ಯನ ಬಳಿಗೆ ಸರಸರನೆ ಬಂದಳು.

೩೫. ಎಲೈ ಮುನೀಂದ್ರನೇ, ಕೇಳು. ಅವಳು ತನ್ನ ತೇಜಸ್ಸಿನಿಂದ ಭೂಮಿಯಿಂದ ಆಕಾಶದವರೆಗೆ ಬೆಳೆದು ನಿಂತು ಆ ಶುಕ್ರನನ್ನು ತನ್ನ ಗುಹ್ಯಪ್ರದೇಶದಲ್ಲಿ ಮುಚ್ಚಿಟ್ಟುಕೊಂಡು ಆಕಾಶದಲ್ಲಿ ಕಣ್ಮರೆಯಾದಳು.

೩೬. ಯುದ್ಧದಲ್ಲಿ ಮಹಾ ಉತ್ಸಾಹದಿಂದ ಮುನ್ನುಗ್ಗುತ್ತಿದ್ದ ಆ ದೈತ್ಯ ಸೈನ್ಯಗಳೆಲ್ಲವೂ ಆರೀತಿ ಶುಕ್ರಾಚಾರ್ಯನು ಹಿಡಿಯಲ್ಪಟ್ಟಿದ್ದನ್ನು ಕಂಡು ಬಾಡಿದ ಮುಖವುಳ್ಳವರಾಗಿ ಯುದ್ಧದಿಂದ ಹಿಮ್ಮೆಟ್ಟಿದರು.

ಅಥೋಽಭಜ್ಯತ ದೈತ್ಯಾನಾಂ ಸೇನಾ ಗಣಭಯಾರ್ದಿತಾ ।
ವಾಯುವೇಗಹತಾ ಯುದ್ಧಪ್ರಕೀರ್ಣಾ ತೃಣಸಂಹತಿಃ ॥ ೫೭ ॥

ಭಗ್ನಾಂ ಗಣಭಯಾದ್ದೈತ್ಯಸೇನಾಂ ದೃಷ್ಟ್ವಾತಿಮೂರ್ಛಿತಾಃ ।
ನಿಶುಂಭಶುಂಭೌ ಸೇನಾನ್ಯೌ ಕಾಲನೇಮಿಶ್ಚ ಚುಕ್ರುಧುಃ ॥ ೫೮ ॥

ತ್ರಯಸ್ತೇ ವಾರಯಾಮಾಸುರ್ಗಣಸೇನಾಂ ಮಹಾಬಲಾಃ ।
ಮುಂಚತಶ್ಶರವರ್ಷಾಣಿ ಪ್ರಾವೃಷೀವ ಬಲಾಹಕಾಃ ॥ ೫೯ ॥

ತತೋ ದೈತ್ಯಶಿರೌಘಾಸ್ತೇ ಶಲಭಾನಾಮಿವ ವ್ರಜಾಃ ।
ರುರುಧುಃ ಖಂ ದಿಶಸ್ಸರ್ವಾ ಗಣಸೇನಾಮಕಂಪಯನ್ ॥ ೬೦ ॥

ಗಣಾಶ್ಶರಶತೈರ್ಭಿನ್ನಾ ರುಧಿರಾಸಾರವರ್ಷಿಣಃ ।
ವಸಂತಕಿಂಶುಕಾಭಾಸಾ ನ ಪ್ರಜಾಸನ್ನಿ ಕಿಂಚನ ॥ ೬೧ ॥

---

೫೭. ಬಿರುಗಾಳಿಗೆ ಸಿಕ್ಕಿ ಚೆದರಿಹೋದ ಹುಲ್ಲಿನರಾಶಿಯಂತೆ ಪ್ರಮಥರ ಭಯದಿಂದ ಪೀಡಿತವಾದ ದೈತ್ಯಸೈನ್ಯವೆಲ್ಲವೂ ಚೆಲ್ಲಾಪಿಲ್ಲಿಯಾಯಿತು.

೫೮. ಈರೀತಿ ಗಣಗಳ ಹೆದರಿಕೆಯಿಂದ ಧೈರ್ಯಗೆಟ್ಟು ಚೆದುರಿಹೋದ ದೈತ್ಯಸೇನೆಯನ್ನು ನೋಡಿ ಸೇನಾಪತಿಗಳಾದ ಶುಂಭನಿಶುಂಭರೂ ಕಾಲನೇಮಿಯೂ ಬಹುವಾಗಿ ಕೆರಳಿ ಕೋಪವನ್ನು ತಾಳಿದರು.

೫೯. ಮಹಾಬಲಾಢ್ಯರಾದ ಆ ಮೂವರು ದೈತ್ಯರೂ ವರ್ಷಋತುವಿನಲ್ಲಿ ಮೋಡಗಳು ಮಳೆಗರೆದಂತೆ ಬಾಣವನ್ನು ಸುರಿಸುತ್ತಾ ಪ್ರಮಥರ ಸೇನೆಯನ್ನು ತಡೆದು ನಿಲ್ಲಿಸಿದರು.

೬೦. ಆ ದೈತ್ಯರು ಸುರಿಸಿದ ಬಾಣಗಳು ಮಿಡಿತೆಗಳ ತಂಡಗಳಂತೆ ತಂಡತಂಡಗಳಾಗಿ ಆಕಾಶವನ್ನೂ ದಿಕ್ಕುಗಳೆಲ್ಲವನ್ನೂ ತುಂಬಿಬಿಟ್ಟವು. ಆಗ ಗಣಸೇನೆಯು ಭಯದಿಂದ ನಡುಗಿಹೋಯಿತು.

೬೧. ಆ ಪ್ರಮಥಗಣಗಳು ದೈತ್ಯರ ಬಾಣಗಳಿಂದ ಜರ್ಝರಿತರಾಗಿ ಧಾರಾಕಾರವಾಗಿ ರಕ್ತವನ್ನು ಸುರಿಸುತ್ತಾ ವಸಂತಋತುವಿನಲ್ಲಿ ಪುಷ್ಪಿತವಾದ ಮುತ್ತುಗದ ಮರಗಳನ್ನು ಹೋಲುತ್ತಾ ಇದ್ದರು. ಏನುಮಾಡಲೂ ತಿಳಿಯದೆ ಮಂಕಾಗಿ ಹೋದರು.

ತತಃ ಪ್ರಭಗ್ನಂ ಸ್ವಬಲಂ ವಿಲೋಕ್ಯ-
ನಂದ್ಯಾದಿಲಂಬೋದರಕಾರ್ತಿಕೇಯಾಃ ।
ತ್ವರಾನ್ವಿತಾ ದೈತ್ಯವರಾನ್ಪ್ರಸಹ್ಯ-
ನಿವಾರಯಾಮಾಸುರಮರ್ಷಣಾಸ್ತೇ ॥ ೬೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೋ ಯುದ್ಧಖಂಡೇ ಜಲಂಧರವಧೋಪಾಖ್ಯಾನೇ
ಸಾಮಾನ್ಯಗಣಾಸುರಯುದ್ಧವರ್ಣನಂ ನಾಮ
ವಿಂಶೋಽಧ್ಯಾಯಃ.

---

೬೨. ಬಳಿಕ ತಮ್ಮ ಸೈನ್ಯವು ಒಡೆದುಹೋದುದನ್ನು ಕಂಡು ನಂದೀಶ್ವರನೂ ಗಣಪತಿಯೂ ಕುಮಾರಸ್ವಾಮಿಯೂ ಬಹುವಾಗಿ ಕೋಪವನ್ನು ತಾಳಿ ಬೇಗಬೇಗನೆ ಮುಂದೆ ನುಗ್ಗುತ್ತಿದ್ದ ಆ ದೈತ್ಯರನ್ನು ಬಲವಾಗಿ ಎದುರಿಸಿ ತಡೆದು ನಿಲ್ಲಿಸಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಪ್ರಮಥಗಣ, ದೈತ್ಯರ ಸಾಮಾನ್ಯಯುದ್ಧವೆಂಬ ಇಪ್ಪತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕವಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ತೇ ಗಣಾಧಿಪತೀನ್ದೃಷ್ಟ್ವಾ ನಂದೀಭಮುಖಷಣ್ಮುಖಾನ್ ।
ಅಮರ್ಷಾದಭ್ಯಧಾವಂತ ದ್ವಂದ್ವಯುದ್ಧಾಯ ದಾನವಾಃ ॥ ೧ ॥

ನಂದಿನಂ ಕಾಲನೇಮಿಶ್ಚ ಶುಂಭೋ ಲಂಬೋಧರಂ ತಥಾ ।
ನಿಶುಂಭಃ ಷಣ್ಮುಖಂ ದೇವಮಭ್ಯಧಾವತ ಶಂಕಿತಃ ॥ ೨ ॥

---

## ಇಪ್ಪತ್ತೊಂದನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :—ಎಲೈ ವ್ಯಾಸನೇ, ಕೇಳು. ಪ್ರಮಥ ಸೇನಾಪತಿಗಳಾದ ನಂದಿ, ಗಣಪತಿ, ಕುಮಾರಸ್ವಾಮಿಗಳನ್ನು ಕಂಡು ಕಾಲನೇಮಿಯೇ ಮೊದಲಾದ ಅಸುರರು ಮಹಾಕೋಪದಿಂದ ದ್ವಂದ್ವಯುದ್ಧವನ್ನು ಮಾಡೋಣವೆಂದು ಮುಂದೆ ನುಗ್ಗಿ ಬಂದರು.

೨. ನಂದಿಯೊಡನೆ ಕಾಲನೇಮಿಯೂ, ಗಣೇಶನೊಡನೆ ಶುಂಭನೂ, ಸ್ಕಂದ ನೊಡನೆ ನಿಶುಂಭನೂ ದ್ವಂದ್ವಯುದ್ಧದಲ್ಲಿ ತೊಡಗಿದರು.

ನಿಶುಂಭಃ ಕಾರ್ತಿಕೇಯಸ್ಯ ಮಯೂರಂ ಪಂಚಭಿಶ್ಶರೈಃ ।
ಹೃದಿ ವಿವ್ಯಾಧ ವೇಗೇನ ಮೂರ್ಛಿತಸ್ಸ ಪಪಾತ ಹ ॥ ೩ ॥

ತತಃ ಶಕ್ತಿಧರಃ ಕ್ರುದ್ಧೋ ಬಾಣೈಃ ಪಂಚಭಿರೇವ ಚ ।
ವಿವ್ಯಾಧ ಸ್ಯಂದನೇ ತಸ್ಯ ಹಯಾನ್ಯಂತಾರಮೇವ ಚ ॥ ೪ ॥

ಶರೇಣಾನ್ಯೇನ ತೀಕ್ಷ್ಣೇನ ನಿಶುಂಭಂ ದೇವವೈರಿಣಂ ।
ಜಘಾನ ತರಸಾ ವೀರೋ ಜಗರ್ಜ ರಣದುರ್ಮದಃ ॥ ೫ ॥

ಅಸುರೋಽಪಿ ನಿಶುಂಭಾಖ್ಯೋ ಮಹಾವೀರೋಽತಿವೀರ್ಯವಾನ್ ।
ಜಘಾನ ಕಾರ್ತಿಕೇಯಂ ತಂ ಗರ್ಜಂತಂ ಸ್ವೇಷುಣಾ ರಣೇ ॥ ೬ ॥

ತತಶ್ಶಕ್ತಿಂ ಕಾರ್ತಿಕೇಯೋ ಯಾವಜ್ಜಗ್ರಾಹ ರೋಷತಃ ।
ತಾವನ್ನಿಶುಂಭೋ ವೇಗೇನ ಸ್ವಶಕ್ತ್ಯಾ ತಮಪಾತಯತ್ ॥ ೭ ॥

---

೩. ನಿಶುಂಭನು ಕುಮಾರಸ್ವಾಮಿಯ ವಾಹನವಾದ ನವಿಲನ್ನು ಐದು ಬಾಣಗಳಿಂದ ಜೋರಾಗಿ ಎದೆಯಮೇಲೆ ಹೊಡೆದನು. ಪಾಪ, ಆ ಮಯೂರವು ಮೂರ್ಛೆಹೋಗಿ ನೆಲಕ್ಕೆ ಬಿದ್ದುಬಿಟ್ಟಿತು.

೪. ಆಮೇಲೆ ಸ್ಕಂದನೂ ಸಹ ಮಹಾಕುಪಿತನಾಗಿ ಐದು ಬಾಣಗಳನ್ನು ತೆಗೆದುಕೊಂಡು ಅವನ ರಥದ ಕುದುರೆಗಳನ್ನೂ ಸಾರಥಿಯನ್ನೂ ಪ್ರಹರಿಸಿದನು.

೫. ಯುದ್ಧದಲ್ಲಿ ಮಹಾ ಉತ್ಸಾಹಶಾಲಿಯಾದ ಸ್ಕಂದನು ಮತ್ತೊಂದು ಚೂಪಾದ ಅಲುಗುಳ್ಳ ಬಾಣದಿಂದ ದೇವವೈರಿಯಾದ ನಿಶುಂಭನನ್ನು ಬಲವಾಗಿ ಪ್ರಹರಿಸಿ ಸಿಂಹನಾದ ಮಾಡಿದನು.

೬. ಮಹಾಸಾಹಸಿಯಾದ ಆ ನಿಶುಂಭನೂ ಸಹ ಈರೀತಿ ಅಟ್ಟಹಾಸಮಾಡುತ್ತಿರುವ ಷಣ್ಮುಖನನ್ನು ತನ್ನ ಬಾಣದಿಂದ ಪೀಡಿಸಿದನು.

೭. ಅನಂತರ ಸ್ಕಂದನು ಕುಪಿತನಾಗಿ ತನ್ನ ಶಕ್ತ್ಯಾಯುಧವನ್ನು ಕೈಗೆ ತೆಗೆದುಕೊಳ್ಳುವಷ್ಟರಲ್ಲಿಯೇ, ನಿಶುಂಭನು ತನ್ನ ಶಕ್ತಿಯಿಂದ ಸ್ಕಂದನನ್ನು ವೇಗವಾಗಿ ಪ್ರಹರಿಸಿ ನೆಲಕ್ಕೆ ಬೀಳಿಸಿದನು.

ಏವಂ ಬಭೂವ ತತ್ರೈವ ಕಾರ್ತಿಕೇಯನಿಶುಂಭಯೋಃ ।
ಆಹವೋ ಹಿ ಮಹಾನ್ನ್ಯಾಸ ವೀರಶಬ್ದಂ ಪ್ರಗರ್ಜತೋಃ ॥ ೮ ॥

ತತೋ ನಂದೀಶ್ವರೋ ಬಾಣೈಃ ಕಾಲನೇಮಿಮವಿಧ್ಯತ ।
ಸಪ್ತಭಿಶ್ಚ ಹಯಾನ್ಕೇತುಂ ರಥಂ ಸಾರಥಿಮಾಚ್ಛಿನತ್ ॥ ೯ ॥

ಕಾಲನೇಮಿಶ್ಚ ಸಂಕ್ರುದ್ಧೋ ಧನುಶ್ಚಿಚ್ಛೇದ ನಂದಿನಃ ।
ಸ್ವಶರಾಸನನಿರ್ಮುಕ್ತೈರ್ಮಹಾತೀಕ್ಷ್ಣೈಶ್ಶಿಲೀಮುಖೈಃ ॥ ೧೦ ॥

ಅಥ ನಂದೀಶ್ವರೋ ವೀರಃ ಕಾಲನೇಮಿಂ ಮಹಾಸುರಂ ।
ತಮುಪಾಸ್ಯ ಚ ಶೂಲೇನ ವಕ್ಷಸ್ಯಭ್ಯಹನದ್ದೃಢಂ ॥ ೧೧ ॥

ಸ ಶೂಲಭಿನ್ನಹೃದಯೋ ಹತಾಶ್ವೋ ಹತಸಾರಥಿಃ ।
ಅದ್ರೇಃ ಶಿಖರಮುತ್ಪಾಟ್ಯ ನಂದಿನಂ ಸಮತಾಡಯತ್ ॥ ೧೨ ॥

---

೮. ಈರೀತಿ ವೀರನಾದವನ್ನು ಮಾಡುತ್ತಾ ಪರಸ್ಪರ ಸೆಣಸುತ್ತಿರುವ ಸ್ಕಂದ ನಿಶುಂಭರಿಗೆ ಭಾರಿ ಕಾಳಗವು ಬೆಳೆಯಿತು.

೯. ಅತ್ತಲಾಗಿ ನಂದಿಕೇಶ್ವರನು, ಬಾಣಗಳಿಂದ ಕಾಲನೇಮಿಯನ್ನು ಪ್ರಹರಿಸಿ, ಪುನಃ ಏಳು ಬಾಣಗಳಿಂದ ಅವನ ರಥವನ್ನೂ, ಧ್ವಜವನ್ನೂ, ಕುದುರೆಗಳನ್ನೂ, ಸಾರಥಿಯನ್ನು ಕತ್ತರಿಸಿಬಿಟ್ಟನು.

೧೦. ಆದರಿಂದ ಕಾಲನೇಮಿಯು ಬಹಳ ಕುಪಿತನಾಗಿ ಅತಿ ಮೊನಚಾದ ಬಾಣಗಳನ್ನು ಪ್ರಯೋಗಿಸಿ, ನಂದಿಯ ಬಿಲ್ಲನ್ನು ಕತ್ತರಿಸಿಬಿಟ್ಟನು

೧೧. ಬಳಿಕ ಶೂರನಾದ ನಂದಿಯು, ಆ ಬಿಲ್ಲನ್ನು ಒಂದೆಡೆ ಬಿಸುಟು, ಶೂಲವನ್ನು ತೆಗೆದುಕೊಂಡು ಆ ಕಾಲನೇಮಿಯ ಎದೆಗೆ ಗುರಿಯಿಟ್ಟು ಬಲವಾಗಿ ಬೀಸಿದನು.

೧೨. ಆ ಕಾಲನೇಮಿಯು ಹೃದಯದಲ್ಲಿ ಗಾಯಹೊಂದಲು, ಕುದುರೆಗಳನ್ನೂ, ಸಾರಥಿಯನ್ನೂ ಕಳೆದುಕೊಂಡು ಕೋಪದಿಂದ ಪರ್ವತದ ಶಿಖರವನ್ನು ಕಿತ್ತುಕೊಂಡು, ನಂದಿಯನ್ನು ಅಪ್ಪಳಿಸಿದನು.

ಅಥ ಶುಂಭೋ ಗಣೇಶಶ್ಚ ರಥಮೂಷಕವಾಹನೌ ।
ಯುಧ್ಯಮಾನೌ ಶರವ್ರಾತೈಃ ಪರಸ್ಪರಮವಿಧ್ಯತಾಂ ॥ ೧೩ ॥

ಗಣೇಶಸ್ತು ತದಾ ಶುಂಭಂ ಹೃದಿ ವಿವ್ಯಾಧ ಪತ್ರಿಣಾ ।
ಸಾರಥಿಂ ಚ ತ್ರಿಭಿರ್ಬಾಣೈಃ ಪಾತಯಾಮಾಸ ಭೂತಲೇ ॥ ೧೪ ॥

ತತೋಽತಿಕ್ರುದ್ಧಶ್ಶುಂಭೋಽಪಿ ಬಾಣವೃಷ್ಟ್ಯಾ ಗಣಾಧಿಪಂ ।
ಮೂಷಕಂ ಚ ತ್ರಿಭಿರ್ವಿದ್ಧ್ವಾ ನನಾದ ಜಲದಸ್ವನಃ ॥ ೧೫ ॥

ಮೂಷಕಶ್ಶರಭಿನ್ನಾಂಗಶ್ಚಚಾಲ ಪೃಥವೇಪನಃ ।
ಲಂಬೋದರಶ್ಚಾಪತಿತಃ ಪದಾತಿರಭವತ್ಸ ಹಿ ॥ ೧೬ ॥

ತತೋ ಲಂಬೋದರಶ್ಶುಂಭಂ ಹತ್ವಾ ಪರಶುನಾ ಹೃದಿ ।
ಅಪಾತಯತ್ತದಾ ಭೂಮೌ ಮೂಷಕಂ ಚಾರುರೋಹ ಸಃ ॥ ೧೭ ॥

---

೧೩. ಇತ್ತಲಾಗಿ ಶುಂಭನೂ, ಗಣೇಶನೂ, ತೇರನ್ನೂ, ಮೂಷಕವನ್ನು ಏರಿ ಯುದ್ಧಮಾಡುತ್ತಾ ಪರಸ್ಪರವಾಗಿ ಅಸಂಖ್ಯಾತವಾದ ಬಾಣಗಳಿಂದ ಹೊಡೆದಾಡಿದರು,

೧೪. ಆಗ ಗಣಪತಿಯು ಶುಂಭನನ್ನು ಎದೆಯಲ್ಲಿ ಬಾಣದಿಂದ ಗಾಯಗೊಳಿಸಿದನು. ಅವನ ಸಾರಥಿಯನ್ನು ಮೂರು ಬಾಣಗಳಿಂದ ನೆಲಕ್ಕೆ ಕೆಡವಿದನು.

೧೫. ಅನಂತರ ಬಹಳ ಕೋಪಾಕುಲನಾದ ಶುಂಭನೂ ಗಣಪತಿಯಮೇಲೆ ಬಾಣಗಳ ಮಳೆಯನ್ನು ಸುರಿಸಿ ಮೂರು ಬಾಣಗಳಿಂದ ಅವನ ಮೂಷಕವನ್ನು ಪ್ರಹರಿಸಿ ಮೇಘದಂತ ಒಮ್ಮೆ ಗರ್ಜಿಸಿದನು.

೧೬. ಆ ಮೂಷಕವು ಬಾಣದ ಏಟುಬಿದ್ದುದರಿಂದ ಬಹುವಾಗಿ ನೊಂದು ಅಲ್ಲಾಡಿಹೋಯಿತು. ಗಣಪತಿಯು ಕೆಳಕ್ಕೆ ಧುಮುಕಿ ಬರಿಯ ನೆಲದಮೇಲೆಯೇ ಕಾಲಾಳಿನಂತೆ ನಿಂತು ಯುದ್ಧಮಾಡತೊಡಗಿದನು.

೧೭. ಬಳಿಕ ಗಣಪತಿಯು ತನ್ನ ಪರಶುವಿನಿಂದ ಆ ಶುಂಭನ ಎದೆಯಮೇಲೆ ಬಲವಾಗಿ ಅಪ್ಪಳಿಸಿ ಅವನನ್ನು ನೆಲದಮೇಲೆ ಕೆಡವಿದನು. ಅನಂತರ ತನ್ನ ವಾಹನವಾದ ಇಲಿಯನ್ನೇರಿದನು.

ಏವಂ ಬಭೂವ ತತ್ರೈವ ಕಾರ್ತಿಕೇಯನಿಶುಂಭಯೋಃ ।
ಆಹವೋ ಹಿ ಮಹಾನ್ವ್ಯಾಸ ವೀರಶಬ್ದಂ ಪ್ರಗರ್ಜತೋಃ ॥ ೮ ॥

ತತೋ ನಂದೀಶ್ವರೋ ಬಾಣೈಃ ಕಾಲನೇಮಿಮವಿಧ್ಯತ ।
ಸಪ್ತಭಿಶ್ಚ ಹಯಾನ್ಕೇತುಂ ರಥಂ ಸಾರಥಿಮಾಚ್ಛಿನತ್ ॥ ೯ ॥

ಕಾಲನೇಮಿಶ್ಚ ಸಂಕ್ರುದ್ಧೋ ಧನುಶ್ಚಿಚ್ಛೇದ ನಂದಿನಃ ।
ಸ್ವಶರಾಸನನಿರ್ಮುಕ್ತೈರ್ಮಹಾತೀಕ್ಷ್ಣೈಶ್ಶಿಲೀಮುಖೈಃ ॥ ೧೦ ॥

ಅಥ ನಂದೀಶ್ವರೋ ವೀರಃ ಕಾಲನೇಮಿಂ ಮಹಾಸುರಂ ।
ತಮುಪಾಸ್ಯ ಚ ಶೂಲೇನ ವಕ್ಷಸ್ಯಭ್ಯಹನದ್ದೃಢಂ ॥ ೧೧ ॥

ಸ ಶೂಲಭಿನ್ನಹೃದಯೋ ಹತಾಶ್ವೋ ಹತಸಾರಥಿಃ ।
ಅದ್ರೇಃ ಶಿಖರಮುತ್ಪಾಟ್ಯ ನಂದಿನಂ ಸಮತಾಡಯತ್ ॥ ೧೨ ॥

---

೮. ಈರೀತಿ ವೀರನಾದವನ್ನು ಮಾಡುತ್ತಾ ಪರಸ್ಪರ ಸೆಣಸುತ್ತಿರುವ ಸ್ಕಂದ ನಿಶುಂಭರಿಗೆ ಭಾರಿ ಕಾಳಗವು ಬೆಳೆಯಿತು.

೯. ಅತ್ತಲಾಗಿ ನಂದಿಕೇಶ್ವರನು, ಬಾಣಗಳಿಂದ ಕಾಲನೇಮಿಯನ್ನು ಪ್ರಹರಿಸಿ, ಪುನಃ ಏಳು ಬಾಣಗಳಿಂದ ಅವನ ರಥವನ್ನೂ, ಧ್ವಜವನ್ನೂ, ಕುದುರೆಗಳನ್ನೂ, ಸಾರಥಿಯನ್ನು ಕತ್ತರಿಸಿಬಿಟ್ಟನು.

೧೦. ಅದರಿಂದ ಕಾಲನೇಮಿಯು ಬಹಳ ಕುಪಿತನಾಗಿ ಅತಿ ಮೊನಚಾದ ಬಾಣಗಳನ್ನು ಪ್ರಯೋಗಿಸಿ, ನಂದಿಯ ಬಿಲ್ಲನ್ನು ಕತ್ತರಿಸಿಬಿಟ್ಟನು

೧೧. ಬಳಿಕ ಶೂರನಾದ ನಂದಿಯು, ಆ ಬಿಲ್ಲನ್ನು ಒಂದೆಡೆ ಬಿಸುಟು, ಶೂಲವನ್ನು ತೆಗೆದುಕೊಂಡು ಆ ಕಾಲನೇಮಿಯ ಎದೆಗೆ ಗುರಿಯಿಟ್ಟು ಬಲವಾಗಿ ಬೀಸಿದನು.

೧೨. ಆ ಕಾಲನೇಮಿಯು ಹೃದಯದಲ್ಲಿ ಗಾಯಹೊಂದಲು, ಕುದುರೆಗಳನ್ನೂ, ಸಾರಥಿಯನ್ನೂ ಕಳೆದುಕೊಂಡು ಕೋಪದಿಂದ ಪರ್ವತದ ಶಿಖರವನ್ನು ಕಿತ್ತುಕೊಂಡು, ನಂದಿಯನ್ನು ಅಪ್ಪಳಿಸಿದನು.

ಅಥ ಶುಂಭೋ ಗಣೇಶಶ್ಚ ರಥಮೂಷಕವಾಹನೌ ।
ಯುಧ್ಯಮಾನೌ ಶರಪ್ರಾತ್ಯೈಃ ಪರಸ್ಪರಮವಿಧ್ಯತಾಂ　　　॥ ೧೩ ॥

ಗಣೇಶಸ್ತು ತದಾ ಶುಂಭಂ ಹೃದಿ ವಿವ್ಯಾಧ ಪತ್ರಿಣಾ ।
ಸಾರಥಿಂ ಚ ತ್ರಿಭಿರ್ಬಾಣೈಃ ಪಾತಯಾಮಾಸ ಭೂತಲೇ　　　॥ ೧೪ ॥

ತತೋऽತಿಕ್ರುದ್ಧಃಶ್ಶುಂಭೋऽಪಿ ಬಾಣವೃಷ್ಟ್ಯಾ ಗಣಾಧಿಪಂ ।
ಮೂಷಕಂ ಚ ತ್ರಿಭಿರ್ವಿದ್ಧ್ವಾ ನನಾದ ಜಲದಸ್ವನಃ　　　॥ ೧೫ ॥

ಮೂಷಕಶ್ಶರಭಿನ್ನಾಂಗಶ್ಚಚಾಲ ದೃಢವೇದನಃ ।
ಲಂಬೋದರಶ್ಚಾಪತಿತಃ ಪದಾತಿರಭವತ್ಸ ಹಿ　　　॥ ೧೬ ॥

ತತೋ ಲಂಬೋದರಶ್ಶುಂಭಂ ಹತ್ವಾ ಪರಶುನಾ ಹೃದಿ ।
ಅಪಾತಯತ್ತದಾ ಭೂಮೌ ಮೂಷಕಂ ಚಾರುರೋಹ ಸಃ　　　॥ ೧೭ ॥

---

೧೩. ಇತ್ತಲಾಗಿ ಶುಂಭನೂ, ಗಣೇಶನೂ, ತೇರನ್ನೂ, ಮೂಷಕವನ್ನು ಏರಿ ಯುದ್ಧಮಾಡುತ್ತಾ ಪರಸ್ಪರವಾಗಿ ಅಸಂಖ್ಯಾತವಾದ ಬಾಣಗಳಿಂದ ಹೊಡೆದಾಡಿದರು,

೧೪. ಆಗ ಗಣಪತಿಯು ಶುಂಭನನ್ನು ಎದೆಯಲ್ಲಿ ಬಾಣದಿಂದ ಗಾಯಗೊಳಿಸಿದನು. ಅವನ ಸಾರಥಿಯನ್ನು ಮೂರು ಬಾಣಗಳಿಂದ ನೆಲಕ್ಕೆ ಕೆಡವಿದನು.

೧೫. ಅನಂತರ ಬಹಳ ಕೋಪಾಕುಲನಾದ ಶುಂಭನೂ ಗಣಪತಿಯಮೇಲೆ ಬಾಣಗಳ ಮಳೆಯನ್ನು ಸುರಿಸಿ ಮೂರು ಬಾಣಗಳಿಂದ ಅವನ ಮೂಷಕವನ್ನು ಪ್ರಹರಿಸಿ ಮೇಘದಂತ ಒಮ್ಮೆ ಗರ್ಜಿಸಿದನು.

೧೬. ಆ ಮೂಷಕವು ಬಾಣದ ಏಟುಬಿದ್ದುದರಿಂದ ಬಹುವಾಗಿ ನೊಂದು ಅಲ್ಲಾಡಿಹೋಯಿತು. ಗಣಪತಿಯೂ ಕೆಳಕ್ಕೆ ಧುಮುಕಿ ಬರಿಯ ನೆಲದಮೇಲೆಯೇ ಕಾಲಾಳಿನಂತೆ ನಿಂತು ಯುದ್ಧಮಾಡತೊಡಗಿದನು.

೧೭. ಬಳಿಕ ಗಣಪತಿಯೂ ತನ್ನ ಪರಶುವಿನಿಂದ ಆ ಶುಂಭನ ಎದೆಯಮೇಲೆ ಬಲವಾಗಿ ಅಪ್ಪಳಿಸಿ ಅವನನ್ನು ನೆಲದಮೇಲೆ ಕೆಡವಿದನು. ಅನಂತರ ತನ್ನ ವಾಹನವಾದ ಇಲಿಯನ್ನೇರಿದನು.

ಸಮರಾಯೋದ್ಯತಶ್ಚಾಭೂತ್ಸುಸರ್ಗಜಮುಖೋ ವಿಭುಃ ।
ಪ್ರಹಸ್ಯಾಜಘ್ನತುಃ ಕ್ರೋಧಾತ್ತ್ರೋತ್ರೇಣೈವ ಮಹಾದ್ವಿಪಂ ॥ ೧೮ ॥

ಕಾಲನೇಮಿನಿಶುಂಭಶ್ಚ ಹ್ಯುಭೌ ಲಂಬೋದರಂ ಶರೈಃ ।
ಯುಗಪಜ್ಜಘ್ನತುಃ ಕ್ರೋಧಾದಾಶೀವಿಷಸಮೈರ್ದೃತಂ ॥ ೧೯ ॥

ತಂ ಪೀಡ್ಯಮಾನಮಾಲೋಕ್ಯ ವೀರಭದ್ರೋ ಮಹಾಬಲಃ ।
ಅಭ್ಯಧಾವತ ವೇಗೇನ ಕೋಟಿಭೂತಯುತಸ್ತಥಾ ॥ ೨೦ ॥

ಕೂಷ್ಮಾಂಡಾ ಭೈರವಾಶ್ಚಾಪಿ ವೇತಾಲಾ ಯೋಗಿನೀಗಣಾಃ ।
ಪಿಶಾಚಾ ಡಾಕಿನೀಸಂಘಾ ಗಣಾಶ್ಚಾಪಿ ಸಮಂ ಯಯುಃ ॥ ೨೧ ॥

ತತಃ ಕಿಲಕಿಲಾಶಬ್ದೈಸ್ಸಿಂಹನಾದೈಸ್ಸಘರ್ಘರೈಃ ।
ವಿನಾದಿತಾ ಡಮರುಕೈಃ ಪೃಥಿವೀ ಸಮಕಂಪತ ॥ ೨೨ ॥

---

೧೮-೧೯. ಆ ಗಜಮುಖನು ಮರಳಿ ಯುದ್ಧಕ್ಕೆ ತೊಡಗಲು ಕಾಲನೇಮಿಯೂ, ನಿಶುಂಭನೂ ಒಟ್ಟಿಗೆ ಸೇರಿ, ತಮ್ಮ ಶಕ್ತಿಯನ್ನೆಲ್ಲಾ ಬಿಟ್ಟು, ಮದಿಸಿದ ಆನೆಯನ್ನು ಅಂಕುಶದಿಂದ ಚುಚ್ಚುವಂತೆ ಪ್ರಹರಿಸುತ್ತಾ, ವಿಷಸರ್ಪಗಳಿಗೆ ಸಮನಾದ ಬಾಣ ಗಳನ್ನು ಅವನ ದೇಹದಲ್ಲಿ ನೆಟ್ಟುಬಿಟ್ಟರು.

೨೦. ಆ ಇಬ್ಬರು ದೈತ್ಯರು ಸೇರಿ ಗಣೇಶನನ್ನು ಬಹುವಾಗಿ ಪೀಡಿಸುವುದನ್ನು ಕಂಡು, ಮಹಾಬಲಶಾಲಿಯಾದ ವೀರಭದ್ರನು ಕೋಟಿ ಭೂತಗಳೊಡನೆ ಬೇಗಬೇಗನೆ ಅವನ ಸಹಾಯಕ್ಕಾಗಿ ಓಡಿಬಂದನು.

೨೧. ಆಗ ಅವನೊಡನೆ ಕೂಶ್ಮಾಂಡರೆಂಬುವರೂ, ಭೈರವರೂ, ಭೇತಾಲ ಗಳೂ, ಯೋಗಿನಿಗಳೂ, ಪಿಶಾಚಗಳೂ, ಡಾಕಿನಿಗಳೂ, ಗಣಗಳೂ ಒಟ್ಟಿಗೆ ಹೊರಟರು.

೨೨. ಅವರ ಕಿಲಕಿಲಶಬ್ದಗಳಿಂದಲೂ, ಗಡುಸಾದ ಸಿಂಹನಾದಗಳಿಂದಲೂ, ಡಮರುಗಧ್ವನಿಗಳಿಂದಲೂ ಪ್ರತಿಶಬ್ದಿತವಾಗಿ ಭೂಮಿಯು ನಡುಗಿಹೋಯಿತು.

ತತೋ ಭೂತಾಃ ಪ್ರಧಾವಂತೋ ಭಕ್ಷಯಂತಿ ಸ್ಮ ದಾನವಾನ್ ।
ಉತ್ಪತ್ಯ ಪಾತಯಂತಿ ಸ್ಮ ನನೃತುಶ್ಚ ರಣಾಂಗಣೇ　　॥ ೨೩ ॥

ಏತಸ್ಮಿನ್ನಂತರೇ ವ್ಯಾಸಾಭೂತಾಂ ನಂದೀ ಗುಹಶ್ಚ ತೌ ।
ಉತ್ಥಿತಾವಾಪ್ತಸಂಜ್ಞೌ ಹಿ ಜಗರ್ಜತುರಲಂ ರಣೇ　　॥ ೨೪ ॥

ಸ ನಂದೀ ಕಾರ್ತಿಕೇಯಶ್ಚ ಸಮಾಯಾತೌ ತ್ವರಾನ್ವಿತೌ ।
ಜಘ್ನತುಶ್ಚ ರಣೇ ದೈತ್ಯಾನ್ನಿರಂತರಶರವ್ರಜೈಃ　　॥ ೨೫ ॥

ಛಿನ್ನೈರ್ಭಿನ್ನೈರ್ಹತೈರ್ದೈತ್ಯಪಾತಿತೈರ್ಭಕ್ಷಿತೈಸ್ತಥಾ ।
ವ್ಯಾಕುಲಾ ಸಾಭವತ್ಸೇನಾ ವಿಷಣ್ಣವದನಾ ತದಾ　　॥ ೨೬ ॥

ಏವಂ ನಂದೀ ಕಾರ್ತಿಕೇಯೋ ವಿಕಟಶ್ಚ ಪ್ರತಾಪವಾನ್ ।
ವೀರಭದ್ರೋ ಗಣಾಶ್ಚಾನ್ಯೇ ಜಗರ್ಜುಸ್ಸಮರೇಽಧಿಕಂ　　॥ ೨೭ ॥

---

೨೩. ಆ ಭೂತಗಳು ಓಡೋಡುತ್ತಾ ಬಂದು ಆ ದಾನವರನ್ನು ನುಂಗಿ ಬಿಡುತ್ತಿದ್ದುವು. ಮತ್ತೆ ಕೆಲವು ಭೂತಗಳು ಅವರನ್ನು ಮೇಲಕ್ಕೆತ್ತಿ ಕೆಳಕ್ಕೆ ಬಿಸುಟುತ್ತಿದ್ದುವು. ಅಲ್ಲದೆ ಆ ಯುದ್ಧರಂಗದಲ್ಲಿ ನರ್ತನಗೈಯ್ಯುತ್ತಿದ್ದವು.

೨೪. ಈ ನಡುವೆ ನಂದಿಯೂ, ಸ್ಕಂದನೂ, ಎಚ್ಚರವನ್ನು ಹೊಂದಿ ಮೇಲಕ್ಕೆದ್ದು ನಿಂತು ಯುದ್ಧರಂಗದಲ್ಲಿ ಗಟ್ಟಿಯಾಗಿ ಗರ್ಜಿಸಿದರು.

೨೫. ಆ ನಂದಿಯೂ, ಷಣ್ಮುಖನೂ, ಬೇಗಬೇಗನೆ ಬಂದು ಎಡೆಬಿಡದಂತೆ ಬಾಣಗಳನ್ನು ಬಿಡುತ್ತಾ ಆ ದೈತ್ಯರನ್ನು ಯುದ್ಧದಲ್ಲಿ ಪ್ರಹರಿಸಿದರು.

೨೬. ಈರೀತಿಯಾಗಿ ಆ ಗಣಗಳು ದೈತ್ಯರಲ್ಲಿ ಕೆಲವರನ್ನು ಇರಿದರು. ಕೆಲವರನ್ನು ಕತ್ತರಿಸಿದರು. ಮತ್ತೆ ಕೆಲವರು ಪ್ರಾಣವನ್ನು ತೊರೆದರು. ಇನ್ನೂ ಕೆಲವರು ಕೆಳಕ್ಕೆ ಬಿದ್ದರು. ಬೇರೆ ಕೆಲವರು ನುಂಗಿಹಾಕಲ್ಪಟ್ಟರು. ಆಗ ಅವರ ಸೇನೆಯು ಬಾಡಿದ ಮುಖದಿಂದ ಗಾಬರಿಗೊಂಡಿತು.

೨೭. ಇತ್ತ ನಂದಿಯೂ, ಕುಮಾರನೂ, ಪ್ರತಾಪಶಾಲಿಯಾದ ವಿಕಟನೂ, ವೀರಭದ್ರನೂ, ಇನ್ನೂ ಇತರ ಗಣಗಳೂ ಯುದ್ಧದಲ್ಲಿ ವಿಜಯೋನ್ಮಾದದಿಂದ ಉಬ್ಬಿ ಮತ್ತಷ್ಟು ಹೆಚ್ಚಾಗಿ ಸಿಂಹನಾದವನ್ನು ಮಾಡಿದರು.

ನಿಶುಂಭಶುಂಭೌ ಸೇನಾನ್ಯೌ ಸಿಂಧುಪುತ್ರಸ್ಯ ತೌ ತಥಾ ।
ಕಾಲನೇಮಿರ್ಮಹಾದ್ಯೈತ್ಯೋಽಸುರಾಶ್ಚಾನ್ಯೇ ಪರಾಜಿತಾಃ ॥ ೨೮ ॥

ಪ್ರವಿಧ್ವಸ್ತಾಂ ತತಸ್ಸೇನಾಂ ದೃಷ್ಟ್ವಾ ಸಾಗರನಂದನಃ ।
ರಥೇನಾತಿಪತಾಕೇನ ಗಣಾನಭಿಯಯೌ ಬಲೀ ॥ ೨೯ ॥

ತತಃ ಪರಾಜಿತಾ ದೈತ್ಯಾ ಅಪ್ಯಭೂವನ್ಮಹೋತ್ಸವಾಃ ।
ಜಗರ್ಜುರಧಿಕಂ ವ್ಯಾಸ ಸಮರಾಯೋದ್ಯತಾಸ್ತದಾ ॥ ೩೦ ॥

ಸರ್ವೇ ರುದ್ರಗಣಾಶ್ಚಾಪಿ ಜಗರ್ಜುರ್ಜಯಶಾಲಿನಃ ।
ನಂದಿಕಾರ್ತಿಕೇದಂತ್ಯಾಸ್ಯವೀರಭದ್ರಾದಿಕಾ ಮುನೇ ॥ ೩೧ ॥

ಹಸ್ತ್ಯಶ್ವರಥಸಂಹ್ರಾದಶ್ಶಂಖಭೇರೀರವಸ್ತಥಾ ।
ಅಭವತ್ಸಿಂಹನಾದಶ್ಚ ಸೇನಯೋರುಭಯೋಸ್ತಥಾ ॥ ೩೨ ॥

---

೨೮. ಸಾಗರಸುತನಾದ ಜಲಂಧರನ ಸೇನಾಪತಿಗಳಾದ ಶುಂಭನಿಶುಂಭರೂ, ಕಾಲನೇಮಿಯೂ, ಇತರ ದಾನವರೂ ಸೋತುಹೋದರು.

೨೯. ಅನಂತರ, ಮಹಾಬಲಾಢ್ಯನಾದ ಜಲಂಧರನು, ಈರೀತಿ ತನ್ನ ಸೇನೆಯೆಲ್ಲವೂ, ಹರಿದು ಹಂಚಿಹೋದುದನ್ನು ಕಂಡು, ಎತ್ತರವಾದ ಧ್ವಜವುಳ್ಳ ರಥವನ್ನೇರಿ ಕುಳಿತು, ಗಣಗಳ ಮೇಲೆ ನುಗ್ಗಿಬಂದನು.

೩೦. ಜಲಂಧರನು ಗಣಗಳ ಮೇಲೇರಿ ಹೋದುದನ್ನು ಕಂಡೊಡನೆಯೇ ಸೋತು ಹಿಮ್ಮೆಟ್ಟುತ್ತಿದ್ದ ದೈತ್ಯರು ಮರಳಿ ಹಿಂದಿರುಗಿ, ಮಹಾಸಂತೋಷದಿಂದ ಯುದ್ಧಕ್ಕೆ ಸಿದ್ಧರಾಗಿ ಹೆಚ್ಚಾಗಿ ಸಿಂಹನಾದವನ್ನು ಮಾಡಿದರು.

೩೧. ಓ ವ್ಯಾಸ, ಇತ್ತ ವಿಜಯಶಾಲಿಗಳಾದ ನಂದಿ, ಷಣ್ಮುಖ, ಗಣೇಶ, ವೀರಭದ್ರ ಮುಂತಾದ ಶಿವಗಣಗಳೆಲ್ಲರೂ ಸಹ ಸಂತೋಷದಿಂದ ಗರ್ಜನೆಯನ್ನು ಮಾಡಿದರು.

೩೨. ಹೀಗೆಯೇ ಎರಡು ಸೇನೆಗಳಲ್ಲಿಯೂ, ಆನೆಗಳ ಘೀಟ್ಕಾರವೂ, ಕುದುರೆಗಳ ಹೇಷಾರವವೂ, ರಥಗಳ ಚೀತ್ಕಾರವೂ, ಶಂಖಗಳ ಭೊಂಭೋಂ ಎಂಬ ಶಬ್ದವೂ, ಭೇರಿಯ ಭಾಂಕಾರವೂ, ವೀರರ ಸಿಂಹನಾದಗಳೂ ತಾನೇ ತಾನಾದವು.

ಜಲಂಧರಶರವ್ರಾತೈರ್ನೀಹಾರಪಟಲೈರಿವ ।
ದ್ಯಾವಾಪೃಥಿವ್ಯೋರಾಚ್ಛನ್ನಮಂತರಂ ಸಮಪದ್ಯತ ॥ ೩೩ ॥

ಶೈಲಾದಿಂ ಪಂಚಭಿರ್ವಿದ್ಧ್ವಾ ಗಣೇಶಂ ಪಂಚಭಿಶ್ಶರೈಃ ।
ವೀರಭದ್ರಂ ಚ ವಿಂಶತ್ಯಾ ನನಾದ ಜಲದಸ್ವನಃ ॥ ೩೪ ॥

ಕಾರ್ತಿಕೇಯಸ್ತತೋ ದೈತ್ಯಂ ಶಕ್ತ್ಯಾ ವಿವ್ಯಾಧ ಸತ್ವರಂ ।
ಜಲಂಧರಂ ಮಹಾವೀರೋ ರುದ್ರಪುತ್ರೋ ನನಾದ ಚ ॥ ೩೫ ॥

ಸ ಘೂರ್ಣನಯನೋ ದೈತ್ಯಶ್ಶಕ್ತಿನಿರ್ಭಿನ್ನದೇಹಕಃ ।
ಪಪಾತ ಭೂಮೌ ತ್ವರಿತಮುದತಿಷ್ಠನ್ಮಹಾಬಲಃ ॥ ೩೬ ॥

ತತಃ ಕ್ರೋಧಪರೀತಾತ್ಮಾ ಕಾರ್ತಿಕೇಯಂ ಜಲಂಧರಃ ।
ಗದಯಾ ತಾಡಯಾಮಾಸ ಹೃದಯೇ ದೈತ್ಯಪುಂಗವಃ ॥ ೩೭ ॥

---

೩೩. ಮಂಜುಬೀಳುವಂತೆ ಬೀಳುತ್ತಿರುವ ಜಲಂಧರನ ಬಾಣಸಮೂಹಗಳಿಂದ ಭೂಮ್ಯಂತರಿಕ್ಷಗಳ ಮಧ್ಯಭಾಗವೆಲ್ಲವೂ ಮುಚ್ಚಿಹೋದಂತಾಯಿತು.

೩೪. ಜಲಂಧರನು ನಂದಿಯನ್ನು ಐದು ಬಾಣಗಳಿಂದಲೂ, ಗಣಪತಿಯನ್ನು ಐದು ಬಾಣಗಳಿಂದಲೂ, ವೀರಭದ್ರನನ್ನು ಇಪ್ಪತ್ತು ಬಾಣಗಳಿಂದಲೂ ಹೊಡೆದು ಮೇಘ ಗರ್ಜನೆಯಂತೆ ತುಂಬಿದ ಧ್ವನಿಯಿಂದ ಸಿಂಹನಾದವಮಾಡಿದನು.

೩೫. ಬಳಿಕ ಶಿವನ ಪುತ್ರನಾದ ಸ್ಕಂದನು ಜಲಂಧರನನ್ನು ಬೇಗನೆ ತನ್ನ ಶಕ್ತ್ಯಾಯುಧದಿಂದ ಪ್ರಹರಿಸಿ ಗಟ್ಟಿಯಾಗಿ ಸಿಂಹನಾದವಮಾಡಿದನು.

೩೬. ಶಕ್ತಿಯ ಏಟಿನಿಂದ ಶರೀರವು ಕತ್ತರಿಸಲು, ಕಣ್ಣುಗಳು ಗರಗರನೆ ತಿರುಗಿ ನೆಲದಮೇಲೆ ಬಿದ್ದರೂ ಆ ದೈತ್ಯನು ಮಹಾಬಲಾಢ್ಯನಾದುದರಿಂದ ಥಟ್ಟನೆ ಮೇಲಕ್ಕೆದ್ದು ನಿಂತನು.

೩೭. ಬಳಿಕ ಆ ದೈತ್ಯಶ್ರೇಷ್ಠನು ಕೋಪದಿಂದ ಉರಿಯುತ್ತಾ ಗದೆಯನ್ನು ತೆಗೆದುಕೊಂಡು ಸ್ಕಂದನ ಹೃದಯದಲ್ಲಿ ಬಲವಾಗಿ ಬೀಸಿ ಹೊಡೆದನು.

ಗದಾಪ್ರಭಾವಂ ಸಫಲಂ ದರ್ಶಯಞ್ಛಂಕರಾತ್ಮಜಃ ।
ವಿಧಿದತ್ತವರಾದ್ವ್ಯಾಸ ಸ ತೂರ್ಣಂ ಭೂತಲೇಽಪತತ್ ॥ ೩೮ ॥

ತಥೈವ ನಂದೀ ಹ್ಯಪತದ್ಭೂತಲೇ ಗದಯಾ ಹತಃ ।
ಮಹಾವೀರೋಽಪಿ ರಿಪುಹಾ ಕಿಂಚಿದ್ವ್ಯಾಕುಲಮಾನಸಃ ॥ ೩೯ ॥

ತತೋ ಗಣೇಶ್ವರಃ ಕ್ರುದ್ಧಃ ಸ್ಮೃತ್ವಾ ಶಿವಪದಾಂಬುಜಂ ।
ಸಂಪ್ರಾಪ್ಯಾತಿಬಲೋ ದೈತ್ಯಗದಾಂ ಪರಶುನಾಚ್ಛಿನತ್ ॥ ೪೦ ॥

ವೀರಭದ್ರಸ್ತ್ರಿಭಿರ್ಬಾಣೈರ್ಹೃದಿ ವಿವ್ಯಾಧ ದಾನವಂ ।
ಸಪ್ತಭಿಶ್ಚ ಹಯಾನ್ಕೇತುಂ ಧನುಶ್ಛತ್ರಂ ಚ ಚಿಚ್ಛಿದೇ ॥ ೪೧ ॥

ತತೋಽತಿಕ್ರುದ್ಧೋ ದೈತ್ಯೇಂದ್ರಶ್ಶಕ್ತಿಮುದ್ಯಮ್ಯ ದಾರುಣಾಂ ।
ಗಣೇಶಂ ಪಾತಯಾಮಾಸ ರಥಮನ್ಯಂ ಸಮಾರುಹತ್ ॥ ೪೨ ॥

---

೩೮. ಓ ವ್ಯಾಸ, ಆ ಶಿವಸುತನಾದ ಸ್ಕಂದನು ಬ್ರಹ್ಮನ ವರವನ್ನು ಗೌರವಿಸಿ, ಆ ಗದೆಯ ಏಟು ಸಫಲವಾಗುವಂತೆ ಮಾಡಲು ತಟಕ್ಕನೆ ನೆಲದಮೇಲೆ ಬಿದ್ದು ಬಿಟ್ಟನು.

೩೯. ಅದೇ ರೀತಿಯಾಗಿ ಶತ್ರುಮರ್ದನನೂ ಮಹಾಶೂರನೂ ಆದ ನಂದಿಯು ಆ ಗದೆಯ ಏಟಿಗೆ ಸಿಲುಕಿ, ಮನಸ್ಸಿನಲ್ಲಿ ಖಿನ್ನನಾಗಿ ನೆಲದಲ್ಲಿ ಬಿದ್ದುಬಿಟ್ಟನು.

೪೦. ಇದನ್ನು ಕಂಡು ಮಹಾಪರಾಕ್ರಮಶಾಲಿಯಾದ ಗಣಪತಿಯು ಬಹಳ ಕ್ರೋಧಾನ್ವಿತನಾಗಿ, ಶಿವನ ಪದಯುಗಳವನ್ನು ನೆನೆದು, ತನ್ನ ಪರಶುವಿನಿಂದ ಆ ಗದೆಯನ್ನು ತುಂಡು ತುಂಡುಮಾಡಿದನು.

೪೧. ವೀರಭದ್ರನು ಮೂರು ಬಾಣಗಳಿಂದ ಆ ಜಲಂಧರನ ಎದೆಗೆ ಗುರಿಯಿಟ್ಟು ಹೊಡೆದು, ಏಳು ಬಾಣಗಳಿಂದ ಅವನ ಕುದುರೆಗಳನ್ನೂ, ಧ್ವಜಪಟವನ್ನೂ, ಧನುಸ್ಸನ್ನೂ ಛತ್ರಿಯನ್ನೂ ಕತ್ತರಿಸಿಬಿಟ್ಟನು.

೪೨. ಬಳಿಕ ಆ ದೈತ್ಯೇಂದ್ರನು ಬಹಳ ಕ್ರೋಧಾಂಧನಾಗಿ, ಬೇರೊಂದು ರಥವೇರಿ ಕುಳಿತು ತನ್ನ ಶಕ್ತಿಯನ್ನು ಬೀಸಿ ಹೊಡೆದು ಗಣಪತಿಯನ್ನು ನೆಲಕ್ಕೆ ಡವಿದನು.

ಅಭ್ಯಗಾದಥ ವೇಗೇನ ಸ ದೈತ್ಯೇಂದ್ರೋ ಮಹಾಬಲಃ ।
ವಿಗಣಯ್ಯ ಹೃದಾ ತಂ ವೈ ವೀರಭದ್ರಂ ರುಷಾನ್ವಿತಃ ॥ ೪೩ ॥

ವೀರಭದ್ರಂ ಜಘಾನಾಶು ತೀಕ್ಷ್ಣೇನಾಶೀವಿಷೇಣ ತಂ ।
ನನಾದ ಚ ಮಹಾವೀರೋ ದೈತ್ಯರಾಜೋ ಜಲಂಧರಃ ॥ ೪೪ ॥

ವೀರಭದ್ರೋಽಪಿ ಸಂಕ್ರುದ್ಧಸ್ಸಿತಧಾರೇಣ ಚೇಷುಣಾ ।
ಚಿಚ್ಛೇದ ತಚ್ಛರಂ ಚೈವ ತಂ ವಿವ್ಯಾಧ ಮಹೇಷುಣಾ ॥ ೪೫ ॥

ತತಸ್ತೌ ಸೂರ್ಯಸಂಕಾಶೌ ಯುಯುಧಾತೇ ಪರಸ್ಪರಂ ।
ನಾನಾಶಸ್ತ್ರೈಸ್ತಥಾಸ್ತ್ರೈಶ್ಚ ಚಿರಂ ವೀರವರೋತ್ತಮೌ ॥ ೪೬ ॥

ವೀರಭದ್ರಸ್ತತಸ್ತಸ್ಯ ಹಯಾನ್ಬಾಣೈರಪಾತಯತ್ ।
ಧನುಶ್ಚಿಚ್ಛೇದ ರಥಿನಃ ಪತಾಕಾಂ ಚಾಪಿ ವೇಗತಃ ॥ ೪೭ ॥

ಅಥೋ ಸ ದೈತ್ಯರಾಜೋ ಹಿ ಪುಪ್ಲುವೇ ಪರಿಘಾಯುಧಃ ।
ವೀರಭದ್ರೋಪಕಂಠಂ ಸ ದ್ರುತಮಾಪ ಮಹಾಬಲಃ ॥ ೪೮ ॥

---

೪೩-೪೪. ಆಮೇಲೆ, ಮಹಾಬಲಿಷ್ಠನಾದ ಆ ಜಲಂಧರನು, ವೀರಭದ್ರನನ್ನು ಜ್ಞಾಪಿಸಿಕೊಂಡು, ಅವನನ್ನು ಗಣನೆಗೆ ತಾರದೆ ಮಹಾಕೋಪದಿಂದ ಅವನಿರುವ ಕಡೆಗೆ ಬೇಗನೆ ನುಗ್ಗಿ ಬಹಳ ಚೂಪಾದ ಬಾಣವೊಂದನ್ನು ತೆಗೆದು ವೀರಭದ್ರನಿಗೆ ಗುರಿಯಿಟ್ಟು ಹೊಡೆದನು.

೪೫. ವೀರಭದ್ರನೂ ಮಹಾಕೋಪಾನ್ವಿತನಾಗಿ ಕೂರಾದ ಅಲುಗುಳ್ಳ ಬಾಣವೊಂದರಿಂದ ಆ ಬಾಣವನ್ನು ಕತ್ತರಿಸಿದುದಲ್ಲದೆ ಬೇರೊಂದು ದೊಡ್ಡ ಬಾಣದಿಂದ ಆ ದೈತ್ಯನನ್ನು ಪ್ರಹರಿಸಿದನು.

೪೬. ಬಳಿಕ ಸೂರ್ಯನಂತೆ ತೇಜಸ್ವಿಗಳಾದ ಮಹಾವೀರಾಗ್ರೇಸರರಾದ ಅವರೀರ್ವರೂ ನಾನಾವಿಧವಾದ ಆಯುಧಗಳಿಂದಲೂ ಅಸ್ತ್ರಗಳಿಂದಲೂ ಬಹುಕಾಲ ಹೊಡೆದಾಡಿದರು.

೪೭. ಆಮೇಲೆ ವೀರಭದ್ರನು ಮಹಾವೇಗದಿಂದ ಆ ಜಲಂಧರನ ಕುದುರೆಗಳನ್ನು ಬಾಣದಿಂದ ಹೊಡೆದು ನೆಲಕ್ಕೆ ಕೆಡವಿದನು. ಬಿಲ್ಲನ್ನು ಕತ್ತರಿಸಿದನು. ಧ್ವಜದಂಡವನ್ನು ತುಂಡರಿಸಿದನು

೪೮. ಮಹಾಬಲಾಢ್ಯನಾದ ಜಲಂಧರನು ಆ ರಥವನ್ನು ಬಿಟ್ಟು ನೆಗೆದು ಈಚೆಗೆ ಬಂದು ಪರಿಘವನ್ನು ಕೈಲಿ ಹಿಡಿದು ವೀರಭದ್ರನ ಬಳಿಗೆ ಸರ್‍ರನೆ ನುಗ್ಗಿದನು.

ಪರಿಘೇನಾತಿಮಹತಾ ವೀರಭದ್ರಂ ಜಘಾನ ಹ ।
ಮಹಾಬಲೋಽಬ್ಧಿತನಯೋ ಮೂರ್ಧ್ನಿ ವೀರೋ ಜಗರ್ಜ ಚ ॥ ೪೯ ॥

ಪರಿಘೇನಾತಿಮಹತಾ ಭಿನ್ನಮೂರ್ದ್ಧಾ ಗಣಾಧಿಪಃ ।
ವೀರಭದ್ರಃ ಪಪಾತೋರ್ವ್ಯಾಂ ಮುಮೋಚ ರುಧಿರಂ ಬಹು ॥ ೫೦ ॥

ಪತಿತಂ ವೀರಭದ್ರಂ ತು ದೃಷ್ಟ್ವಾ ರುದ್ರಗಣಾ ಭಯಾತ್ ।
ಆಪಾಗಚ್ಛನ್ರಣಂ ಹಿತ್ವಾ ಕ್ರೋಶಮಾನಾ ಮಹೇಶ್ವರಂ ॥ ೫೧ ॥

ಅಥ ಕೋಲಾಹಲಂ ಶ್ರುತ್ವಾ ಗಣಾನಾಂ ಚಂದ್ರಶೇಖರಃ ।
ನಿಜಪಾರ್ಶ್ವಸ್ಥಿತಾನ್ ವೀರಾನಪೃಚ್ಛದ್ಗಣಸತ್ತಮಾನ್ ॥ ೫೨ ॥

॥ ಶಂಕರ ಉವಾಚ ॥

ಕಿಮರ್ಥಂ ಮದ್ಗಣಾನಾಂ ಹಿ ಮಹಾಕೋಲಾಹಲೋಽಭವತ್ ।
ವಿಚಾರ್ಯತಾಂ ಮಹಾವೀರಾಶ್ಯಾಂತಿಃ ಕಾರ್ಯಾ ಮಯಾ ಧ್ರುವಂ ॥ ೫೩ ॥

---

೪೯. ಕಡುಬಲಶಾಲಿಯಾದ ಆ ಸಾಗರಪುತ್ರನು ಆ ಭಾರಿ ಪರಿಘಾಯುಧ ದಿಂದ ವೀರಭದ್ರನ ತಲೆಯಮೇಲೆ ಬಲವಾಗಿ ಹೊಡೆದಪ್ಪಳಿಸಿ ಸಿಂಹನಾದಮಾಡಿದನು.

೫೦. ಮಹಾಭಾರಿಯಾದ ಆ ಪರಿಘಾಯುಧದ ಏಟಿನಿಂದ ತಲೆಯು ಒಡೆದು ಹೋಗಲು ಹೆಚ್ಚಾಗಿ ರಕ್ತವನ್ನು ಸುರಿಸುತ್ತಾ ಆಗ ವೀರಭದ್ರನು ನೆಲದಮೇಲೆ ಬಿದ್ದುಬಿಟ್ಟನು.

೫೧. ವೀರಭದ್ರನು ಬಿದ್ದುಹೋದುದನ್ನು ಕಂಡು ಶಿವನ ಗಣಗಳು ಭಯ ದಿಂದ ತತ್ತಳಿಸುತ್ತಾ, ಶಿವನನ್ನು ಕೂಗಿಕೊಳ್ಳುತ್ತಾ ಯುದ್ಧವನ್ನು ಬಿಟ್ಟು ಹಿಂದೋಡಿದರು.

೫೨. ಗಣಗಳ ಕಿರಿಚಾಟವನ್ನು ಕೇಳಿ, ಶಿವನು ತನ್ನ ಪಕ್ಕದಲ್ಲಿದ್ದ ಗಣಾಧಿ ಪತಿಗಳನ್ನು ನೋಡಿ ಇದೇನೆಂದು ಕೇಳಿದನು.

೫೩. ಎಲೈ ವೀರಾಗ್ರಣಿಗಳೇ, ನನ್ನ ಗಣಗಳಲ್ಲಿ ಗಲಭೆಯೇತಕ್ಕೆ ಉಂಟಾ ಯಿತು ? ವಿಚಾರಿಸಿರಿ. ಮೊದಲು ಇದನ್ನು ನಾನು ಖಂಡಿತವಾಗಿಯೂ ಅಡ ಗಿಸಬೇಕು.

ಇತಿ ಯಾವತ್ಸ ದೇವೇಶೋ ಗಣಾನ್ಸಪ್ರಚ್ಛ ಸಾದರಂ ।
ತಾವದ್ಗಣವರಾಸ್ತೇ ಹಿ ಸಮಾಯಾತಾಃ ಪ್ರಭುಂ ಪ್ರತಿ ॥ ೫೪ ॥

ತಾನ್ದೃಷ್ಟ್ವಾ ವಿಕಲಾನ್ರುದ್ರಃ ಪಪ್ರಚ್ಛ ಕುಶಲಂ ಪ್ರಭುಃ ।
ಯಥಾವತ್ತೇ ಗಣಾ ವೃತ್ತಂ ಸಮಾಚಖ್ಯುಶ್ಚ ವಿಸ್ತರಾತ್ ॥ ೫೫ ॥

ತಚ್ಛ್ರುತ್ವಾ ಭಗವಾನ್ರುದ್ರೋ ಮಹಾಲೀಲಾಕರಃ ಪ್ರಭುಃ ।
ಅಭಯಂ ದತ್ತವಾಂಸ್ತೇಭ್ಯೋ ಮಹೋತ್ಸಾಹಂ ಪ್ರವರ್ಧಯನ್ ॥ ೫೬ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರೋಪಾಖ್ಯಾನೇ ವಿಶೇಷ
ಯುದ್ಧವರ್ಣನಂ ನಾಮ ಏಕವಿಂಶೋಽಧ್ಯಾಯಃ

---

೫೪. ಹೀಗೆಂದು ದೇವದೇವನಾದ ಶಿವನು ತನ್ನ ಬಳಿಯಿರುವ ಗಣಗಳನ್ನು ಕೇಳುತ್ತಿರುವಷ್ಟರಲ್ಲಿಯೇ, ಯುದ್ಧದಿಂದ ಹಿಂದಿರುಗಿ ಓಡಿಬಂದು ಗಣಗಳು ಶಿವನ ಬಳಿಗೆ ಬರಲು,

೫೫. ದೀನರಾದ ಅವರನ್ನು ಕಂಡು, ಪ್ರಭುವಾದ ಶಿವನು ಅವರ ಕ್ಷೇಮ ವನ್ನು ವಿಚಾರಿಸಿದನು. ಆ ಗಣಗಳು ನಡೆದ ಸಂಗತಿಯೆಲ್ಲವನ್ನೂ ವಿವರವಾಗಿ ಶಿವನಿಗೆ ಬಿನ್ನವಿಸಿದರು.

೫೬. ಅದನ್ನು ಕೇಳಿ ನಾನಾಲೀಲಾವಿಶಾರದನಾದ ಭಗವಂತನಾದ ಶಿವನು ಅವರಿಗೆ ಉತ್ಸಾಹವನ್ನು ಹುಟ್ಟಿಸುತ್ತಾ ಹೆದರಬೇಡಿರೆಂದು ಅಭಯವನ್ನಿತ್ತನು.

ಇಲ್ಲಿಗೆ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ ವಿಶೇಷ
ಯುದ್ಧವರ್ಣನವೆಂಬ ಇಪ್ಪತ್ತೊಂದನೆಯ ಅಧ್ಯಾಯವು
ಮುಗಿದುದು.

---

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ದ್ವಾವಿಂಶೋಽಧ್ಯಾಯಃ

---

॥ ಸನತ್ಕುಮಾರ ಉವಾಚ ॥

ಅಥ ವೀರಗಣೈ ರುದ್ರೋ ರೌದ್ರರೂಪೋ ಮಹಾಪ್ರಭುಃ ।
ಅಭ್ಯಗಾದ್ವೃಷಮಾರೂಢಸ್ಸಂಗ್ರಾಮಂ ಪ್ರಹಸನ್ನಿವ ॥ ೧ ॥

ರುದ್ರಮಾಯಾಂತಮಾಲೋಕ್ಯ ಸಿಂಹನಾದೈರ್ಗಣಾಃ ಪುನಃ ।
ನಿವೃತ್ತಾಸ್ಸಂಗರೇ ರೌದ್ರಾ ಯೇ ಹಿ ಪೂರ್ವಪರಾಜಿತಾಃ ॥ ೨ ॥

---

### ಇಪ್ಪತ್ತೆರಡನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು.—ಓ ವ್ಯಾಸಮುನಿ, ಅನಂತರ ಶಿವನು ಪ್ರಮಥವೀರರೊಡನೆ ಘೋರರೂಪವನ್ನು ತಾಳಿ, ವೃಷಭವನ್ನೇರಿ ಕುಳಿತು, ಮಂದ ಹಾಸದಿಂದ ಯುದ್ಧರಂಗಕ್ಕೆಭಿಮುಖನಾದನು.

೨. ಶಿವನು ಬರುತ್ತಿರುವುದನ್ನು ಕಂಡು ಹಿಂದೆ ಯುದ್ಧದಲ್ಲಿ ಸೋತು ಹಿಮ್ಮೆಟ್ಟಿ ಓಡಿಹೋಗಿದ್ದ ಗಣಗಳೆಲ್ಲರೂ ಸಿಂಹನಾದಗಳನ್ನು ಮಾಡುತ್ತಾ ಯುದ್ಧಕ್ಕೆ ಮರಳಿ ಹಿಂದಿರುಗಿದರು.

ವೀರಶಬ್ದಂ ಚ ಕುರ್ವಂತಸ್ತೇಽಪ್ಯನ್ಯೇ ಶಾಂಕರಾ ಗಣಾಃ ।
ಸೋತ್ಸವಾಸ್ಸಾಯುಧಾ ದೈತ್ಯಾನ್ನಿಜಘ್ನುಶ್ಶರವೃಷ್ಟಿಭಿಃ ॥ ೩ ॥

ದೈತ್ಯಾ ಹಿ ಭೀಷಣಂ ರುದ್ರಂ ಸರ್ವೇ ದೃಷ್ಟ್ವಾ ವಿದುದ್ರುವುಃ ।
ಶಾಂಕರಂ ಪುರುಷಂ ದೃಷ್ಟ್ವಾ ಪಾತಕಾನೀವ ತದ್ಭಯಾತ್ ॥ ೪ ॥

ಅಥೋ ಜಲಂಧರೋ ದೈತ್ಯಾನ್ನಿವೃತ್ತಾನ್ಪ್ರೇಕ್ಷ್ಯ ಸಂಗರೇ ।
ಅಭ್ಯಧಾವತ್ಸ ಚಂಡೀಶಂ ಮುಂಚನ್ಬಾಣಾನ್ಸಹಸ್ರಶಃ ॥ ೫ ॥

ನಿಶುಂಭಶುಂಭಪ್ರಮುಖಾ ದೈತ್ಯೇಂದ್ರಾಶ್ಚ ಸಹಸ್ರಶಃ ।
ಅಭಿಜಗ್ಮುಶ್ಶಿವಂ ವೇಗಾದ್ರೋಷಾತ್ಸಂದಷ್ಟದಚ್ಛದಾಃ ॥ ೬ ॥

ಕಾಲನೇಮಿಸ್ತಥಾ ವೀರಃ ಖಡ್ಗರೋಮಾ ಬಲಾಹಕಃ ।
ಘಸ್ಮರಶ್ಚ ಪ್ರಚಂಡಶ್ಚಾಪರೇ ಚಾಪಿ ಶಿವಂ ಯಯುಃ ॥ ೭ ॥

---

೩. ಮತ್ತೂ ಇತರ ಶಿವಗಣಗಳೂ, ವೀರನಾದವನ್ನು ಮಾಡುತ್ತಾ ಮಹಾ ಉತ್ಸಾಹದಿಂದ ಕೈದುಗಳನ್ನು ಪಿಡಿದು ಬಾಣವರ್ಷಗಳಿಂದ ದೈತ್ಯರನ್ನು ಹೊಡೆಯ ತೊಡಗಿದರು.

೪. ಮಹಾಭಯಂಕರವಾದ ಆಕೃತಿಯಿಂದ ಬರುತ್ತಿರುವ ಶಿವನನ್ನು ಕಂಡೊಡನೆ, ಶಿವಭಕ್ತನಾದ ಪುರುಷನನ್ನು ಕಂಡ ಪಾತಕಗಳಂತೆ ಆ ದೈತ್ಯರೆಲ್ಲರೂ ಹೆದರಿಕೆಯಿಂದ ಓಡಿಹೋದರು.

೫. ಜಲಂಧರನು ಯುದ್ಧದಿಂದ ದೈತ್ಯರೆಲ್ಲರೂ ಹಿಂದಿರುಗಿದುದನ್ನು ಕಂಡು, ಸಾವಿರಾರು ಬಾಣಗಳನ್ನು ಬಿಡುತ್ತಾ ಶಿವನ ಬಳಿಗೆ ಓಡುತ್ತಾ ನುಗ್ಗಿ ಬಂದನು.

೬. ಶುಂಭನಿಶುಂಭ ಮೊದಲಾದ ದೈತ್ಯವೀರರು, ಸಾವಿರಗಟ್ಟಲೆಯಾಗಿ ಶಿವನಿಗೆದುರಾಗಿ ಕೋಪದಿಂದ ತುಟಿಗಳನ್ನು ಕಚ್ಚುತ್ತಾ ವೇಗದಿಂದ ಮುನ್ನುಗ್ಗಿದರು.

೭. ವೀರನಾದ ಕಾಲನೇಮಿಯೂ, ಖಡ್ಗರೋಮನೂ, ಬಲಾಹಕನೂ, ಘಸ್ಮರಪ್ರಚಂಡರೂ ಮತ್ತು ಇತರ ಕೆಲವರೂ ಶಿವನ ಮೇಲೆ ನುಗ್ಗಿದರು.

ಬಾಣೈಸ್ಸಂಛಾದಯಾಮಾಸುರ್ದ್ರುತಂ ರುದ್ರಗಣಾಂಶ್ಚ ತೇ ।
ಅಂಗಾನಿ ಚಿಚ್ಛಿದುರ್ವೀರಾಶ್ಶುಂಭಾದ್ಯಾ ನಿಖಿಲಾ ಮುನೇ ॥ ೮ ॥

ಬಾಣಾಂಧಕಾರಸಂಛನ್ನಂ ದೃಷ್ಟ್ವಾ ಗಣಬಲಂ ಹರಃ ।
ತದ್ಬಾಣಜಾಲಮಾಚ್ಛಿದ್ಯ ಬಾಣೈರಾವವೃತೇ ನಭಃ ॥ ೯ ॥

ದೈತ್ಯಾಂಶ್ಚ ಬಾಣವಾತ್ಯಾಭಿಃ ಪೀಡಿತಾನಕರೋತ್ತದಾ ।
ಪ್ರಚಂಡಬಾಣಜಾಲೌಘೈರಪಾತಯತ ಭೂತಲೇ ॥ ೧೦ ॥

ಖಡ್ಗರೋಮಶಿರಃ ಕಾಯಾತ್ತಥಾ ಪರಶುನಾಚ್ಛಿನತ್ ।
ಬಲಾಹಕಸ್ಯ ಚ ಶಿರಃ ಖಟ್ವಾಂಗೇನಾಕರೋದ್ದ್ವಿಧಾ ॥ ೧೧ ॥

ಸ ಬದ್ಧ್ವಾ ಘಸ್ಮರಂ ದೈತ್ಯಂ ಪಾಶೇನಾಭ್ಯಹನದ್ಭುವಿ ।
ಮಹಾವೀರಂ ಪ್ರಚಂಡಂ ಚ ಚಕರ್ತ ತ್ರಿಶಿಖೇನ ಹ ॥ ೧೨ ॥

---

೮. ಆ ಶುಂಭನೇ ಮೊದಲಾದ ದೈತ್ಯವೀರರು ಬೇಗಬೇಗನೆ ರುದ್ರನ ಪ್ರಮಥ ಗಣಗಳ ಮೇಲೆ ಬಾಣಗಳ ಮಳೆ ಸುರಿಸಿ, ಅವರನ್ನು ಮುಚ್ಚಿಬಿಟ್ಟುದಲ್ಲದೆ ಅವರ ಅವಯವಗಳನ್ನು ಕತ್ತರಿಸಿಬಿಟ್ಟರು.

೯. ತನ್ನ ಗಣಸೈನ್ಯವೆಲ್ಲವೂ, ಬಾಣಗಳ ಕತ್ತಲೆಯಲ್ಲಿ ಮುಚ್ಚಿಹೋದುದನ್ನು ಕಂಡು, ಶಿವನು ಆ ಬಾಣಗಳ ಸಮೂಹವನ್ನೆಲ್ಲಾ ಕತ್ತರಿಸಿ ತನ್ನ ಬಾಣಗಳಿಂದ ಆಕಾಶವನ್ನೇ ಮುಚ್ಚಿಬಿಟ್ಟನು.

೧೦. ಆಗ ಆ ದೈತ್ಯರನ್ನು ತನ್ನ ಬಾಣಗಳೆಂಬ ಬಿರುಗಾಳಿಯಿಂದ ಪೀಡಿತ ರನ್ನಾಗಿಮಾಡಿದುದಲ್ಲದೆ, ಅತ್ಯುಗ್ರವಾದ ಆ ಬಾಣಗಳ ಪರಂಪರೆಯಿಂದ ಅವರನ್ನೆಲ್ಲ ರನ್ನೂ ನೆಲಕ್ಕೆ ಕೆಡವಿದನು.

೧೧. ತನ್ನ ಪರಶುವಿನಿಂದ ಖಡ್ಗರೋಮನ ತಲೆಯನ್ನು ಶರೀರದಿಂದ ಬೇರ್ಪಡಿಸಿದನು. ಖಡ್ವಾಂಗವೆಂಬ ತನ್ನ ಆಯುಧದಿಂದ ಬಲಾಹಕನೆಂಬ ದೈತ್ಯನ ಶಿರಸ್ಸನ್ನು ಎರಡು ತುಂಡುಮಾಡಿದನು.

೧೨. ಘಸ್ಮರನೆಂಬುವವನ್ನು ಪಾಶದಿಂದ ಕಟ್ಟಿ ಕೆಳಕ್ಕೆ ಕೆಡಹಿದನು. ಮಹಾ ವೀರನಾದ ಪ್ರಚಂಡನೆಂಬ ಅಸುರನನ್ನು ತ್ರಿಶೂಲದಿಂದ ಕತ್ತರಿಸಿದನು.

ವೃಷಭೇಣ ಹತಾಃ ಕೇಚಿತ್ಕೇಚಿದ್ಬಾಣೈರ್ನಿಪಾತಿತಾಃ ।
ನ ಶೇಕುರಸುರಾಃ ಸ್ಥಾತುಂ ಗಜಾಸ್ಸಿಂಹಾರ್ದಿತಾ ಇವ ॥ ೧೩ ॥

ತತಃ ಕ್ರೋಧಪರೀತಾತ್ಮಾ ದೈತ್ಯಾನ್ಧಿಕ್ಕೃತವಾನ್ರಣೇ ।
ಶುಂಭಾದಿಕಾನ್ಮಹಾದೈತ್ಯಃ ಪ್ರಹಸನ್ಪ್ರಾಹ ಧೈರ್ಯವಾನ್ ॥ ೧೪ ॥

॥ ಜಲಂಧರ ಉವಾಚ ॥

ಕಿಂ ವ ಉಚ್ಚರಿತೈರ್ಮಾತುರ್ಧಾವದ್ಭಿಃ ಪೃಷ್ಠತೋ ಹತೈಃ ।
ನ ಹಿ ಭೀತವಧಃ ಶ್ಲಾಘ್ಯಃ ಸ್ವರ್ಗದಃ ಶೂರಮಾನಿನಾಂ ॥ ೧೫ ॥

ಯದಿ ವಃ ಪ್ರಧನೇ ಶ್ರದ್ಧಾ ಸಾರೋ ವಾ ಕ್ಷುಲ್ಲಕಾ ಹೃದಿ ।
ಅಗ್ರೇ ತಿಷ್ಠತ ಮಾತ್ರಂ ಮೇ ನ ಚೇದ್ಗ್ರಾಮ್ಯಸುಖೇ ಸ್ಪೃಹಾ ॥ ೧೬ ॥

---

೧೩. ಕೆಲವರು ಶಿವನ ವಾಹನವಾದ ವೃಷಭದಿಂದ ಹತರಾದರು. ಮತ್ತೆ ಕೆಲವರು ಬಾಣಗಳಿಂದ ಕತ್ತರಿಸಲ್ಪಟ್ಟರು. ಈರೀತಿ ಆ ಅಸುರರು ಸಿಂಹದಿಂದ ಪೀಡಿಸಲ್ಪಟ್ಟ ಆನೆಗಳಂತೆ ಎದುರಿಗೆ ನಿಲ್ಲಲಾರದೆ ಹೋದರು.

೧೪. ಈರೀತಿ ಅಧೀರರಾದ ಶುಂಭಾದಿದೈತ್ಯರನ್ನು ಕಂಡು ಆ ಧೀರನಾದ ಜಲಂಧರನು ಮಹಾಕ್ರೋಧಾಂಧನಾಗಿ, ಅವರೆಲ್ಲರನ್ನೂ ಧಿಕ್ಕರಿಸಿ, ನಗುತ್ತಾ ಅವರನ್ನಿಂತೆಂದನು.

೧೫. ಹೇಡಿತನದಿಂದ ಯುದ್ಧಮಾಡಲು ಸಾಗದೆ ಹಿಂದೆ ಹಿಂದೆ ಓಡಿಹೋಗುತ್ತಿರುವ ನೀವು ಇದ್ದರೇನು ? ಸತ್ತರೇನು ? ನಿಮ್ಮಂತಹರನ್ನು ತಾಯಿಯ ದೇಹದಿಂದ ಹೊರಬಿದ್ದ ಕೊಳೆಯೆಂದೇ ಭಾವಿಸಬೇಕು. ಶೂರರಾದವರು ಎಂದಿಗೂ ಹೇಡಿಗಳಂತೆ ಸಾಯಬಾರದು. ಹಾಗೆ ಮಡಿದರೂ, ಅವರು ಎಂದಿಗೂ ಸ್ವರ್ಗಕ್ಕೆ ಹೋಗಲಾರರು.

೧೬. ಎಲೈ ಹೇಡಿಗಳೇ, ನಿಮಗೆ ಯುದ್ಧದಲ್ಲಿ ನಂಬಿಕೆಯಿದ್ದರೆ, ಗ್ರಾಮ್ಯವಾದ ಅತಿತುಚ್ಛವಾದ ವಿಷಯಸುಖಗಳಲ್ಲಿ ಆಸೆಯನ್ನು ತೊರೆದು ಯುದ್ಧಮಾಡಲು ಶಕ್ತಿಯಿದ್ದರೆ ಆಗ ಮಾತ್ರ ನನ್ನೆದುರಿಗೆ ನಿಲ್ಲಿರಿ.

ರಣೇ ಮೃತ್ಯುರ್ವರಶ್ಚಾಸ್ತಿ ಸರ್ವಕಾಮಫಲಪ್ರದಃ ।
ಯಶಃಪ್ರದೋ ವಿಶೇಷೇಣ ಮೋಕ್ಷದೋಽಪಿ ಪ್ರಕೀರ್ತಿತಃ ॥ ೧೭ ॥

ಸೂರ್ಯಸ್ಯ ಮಂಡಲಂ ಭಿತ್ತ್ವಾ ಯಾಯಾದ್ವೈ ಪರಮಂ ಪದಂ ।
ಪರಿವ್ರಾಟ್ಪರಮಜ್ಞಾನೀ ರಣೇ ಯಸ್ಸಂಮುಖೇ ಹತಃ ॥ ೧೮ ॥

ಮೃತ್ಯೋರ್ಭಯಂ ನ ಕರ್ತವ್ಯಂ ಕದಾಚಿತ್ಕುತ್ರಚಿದ್ಬುಧೈಃ ।
ಅನಿವಾರ್ಯೋ ಯತೋ ಹ್ಯೇಷ ಉಪಾಯೈರ್ನಿಖಿಲೈರಪಿ ॥ ೧೯ ॥

ಮೃತ್ಯುರ್ಜನ್ಮವತಾಂ ವೀರಾ ದೇಹೇನ ಸಹ ಜಾಯತೇ ।
ಅದ್ಯ ವಾಬ್ದಶತಾಂತೇ ವಾ ಮೃತ್ಯುರ್ವೈ ಪ್ರಾಣಿನಾಂ ಧ್ರುವಃ ॥ ೨೦ ॥

---

೧೭. ಯುದ್ಧದಲ್ಲಿ ವೀರನಂತೆ ಮಡಿಯುವುದು, ಬಹು ಶ್ರೇಷ್ಠವಾದದು. ಅದು ಎಲ್ಲ ಮನೋರಥಗಳನ್ನೂ ಈಡೇರಿಸುವುದು. ಅಲ್ಲದೆ ವಿಶೇಷವಾಗಿ ಕೀರ್ತಿಯನ್ನು ಉಂಟುಮಾಡುವುದು ಕೊನೆಗೆ ಮೋಕ್ಷವನ್ನೂ ಕೊಡುವಂತಹುದು ಎಂದು ಹೇಳಲ್ಪಟ್ಟಿರುವುದು.

೧೮. ಮಹಾಜ್ಞಾನಿಯಾದ ಸನ್ಯಾಸಿಯೂ ಯುದ್ಧದಲ್ಲಿ ಎದುರಿಗೆ ನಿಂತು ಹೋರಾಡುತ್ತಲೇ ಮಡಿದವನೂ, ಸೂರ್ಯಮಂಡಲವನ್ನು ಭೇದಿಸಿಕೊಂಡು ಶ್ರೇಷ್ಠವಾದ ಗತಿಯನ್ನು ಪಡೆಯುವರು.

೧೯. ವಿವೇಕಶಾಲಿಗಳಾದವರು ಎಂದಿಗೂ ಎಲ್ಲೂ ಸಾವಿಗೆ ಹೆದರಬಾರದು. ಎಷ್ಟು ಉಪಾಯಗಳನ್ನು ಮಾಡಿದರೂ ಆ ಸಾವನ್ನು ತಡೆಯಲು ಯಾರಿಗೂ ಸಾಧ್ಯವಿಲ್ಲ.

೨೦. ಎಲೈ ವೀರರೇ, ಜನ್ಮತಾಳಿದವರೆಲ್ಲರಿಗೂ ಅವರ ಶರೀರದೊಡನೆಯೇ ಸಾವೂ ಹುಟ್ಟಿರುತ್ತದೆ. ಇಂದಲ್ಲ, ನೂರುವರ್ಷಗಳು ತುಂಬಿದಮೇಲೆಯಾದರೂ ಆ ಸಾವು ಪ್ರಾಣಿಗಳಿಗೆ ತಪ್ಪಿದ್ದಲ್ಲ.

ತನ್ಮೃತ್ಯುಭಯಮುತ್ಸಾರ್ಯ ಯುಧ್ಯಧ್ವಂ ಸಮರೇ ಮುದಾ ।
ಸರ್ವಥಾ ಪರಮಾನಂದ ಇಹಾಮುತ್ರಾಪ್ಯಸಂಶಯಃ ॥ ೨೧ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಬೋಧಯಾಮಾಸ ಸ್ವವೀರಾನ್ಬಹುಶಸ್ಸ ಹಿ ।
ಧೈರ್ಯಂ ದಧುರ್ನ ತೇ ಭೀತಾ ಅಪಲಾಯಂತ ರಣಾದ್ದ್ರುತಂ ॥ ೨೨ ॥

ಅಥ ದೃಷ್ಟ್ವಾ ಸ್ವಸೈನ್ಯಂ ತತ್ಪಲಾಯನಪರಾಯಣಂ ।
ಚುಕ್ರೋಧಾತಿ ಮಹಾವೀರಸ್ಸಿಂಧುಪುತ್ರೋ ಜಲಂಧರಃ ॥ ೨೩ ॥

ತತಃ ಕ್ರೋಧಪರೀತಾತ್ಮಾ ಕ್ರೋಧಾದ್ರುದ್ರಂ ಜಲಂಧರಃ ।
ಆಹ್ವಾಪಯಾಮಾಸ ರಣೇ ತೀವ್ರಾಶನಿಸಮಸ್ವನಃ ॥ ೨೪ ॥

---

೨೧. ಆದುದರಿಂದ ಸಾವಿನ ಅಂಜಿಕೆಯನ್ನು ತೊರೆದು ಸಂತೋಷದಿಂದ ಯುದ್ಧಕ್ಕೆ ತೊಡಗಿರಿ. ಹಾಗೆ ಮಾಡಿದಲ್ಲಿ ಇಹದಲ್ಲಿಯೂ ಪರದಲ್ಲಿಯೂ ಸರ್ವ ಪ್ರಕಾರದಿಂದಲೂ ಅತಿಶಯವಾಗಿ ಆನಂದವೇ ದೊರೆಯುವುದು. ಇದರಲ್ಲಿ ಸಂಶಯ ವಿಲ್ಲ ಎಂದನು.

೨೨. ಸನತ್ಕುಮಾರನಿಂತೆಂದನು ;—ಓ ವ್ಯಾಸ, ಈರೀತಿಯಾಗಿ ಆ ಜಲಂಧರನು ತನ್ನಕಡೆಯ ವೀರರಿಗೆ ಬಹುವಿಧವಾಗಿ ಬುದ್ಧಿಹೇಳಿ ಹುರಿದುಂಬಿಸಿದರೂ ಅವರು ಧೈರ್ಯವನ್ನು ಅವಲಂಬಿಸದೆ ಹೆದರಿಕೆಯಿಂದ ನಡುಗುತ್ತಾ ಯುದ್ಧದಿಂದ ಸರ್‍ರನೆ ಓಡಿಹೋದರು.

೨೩. ತನ್ನ ಮಾತನ್ನು ಕೇಳದೆ ಯುದ್ಧ ಬಿಟ್ಟು ಓಡಿಹೋದ ತನ್ನ ಸೈನಿಕ ರನ್ನು ಕಂಡು ಜಲಂಧರನು ಕಡುಕೋಪವನ್ನು ತಾಳಿದನು.

೨೪. ಜಲಂಧರನು ಕ್ರೋಧದಿಂದ ಉರಿಯುತ್ತಾ ಸಿಡಿಲಿನಂತೆ ಕರ್ಣಕಠೋರ ವಾದ ಧ್ವನಿಯಿಂದ ಶಿವನನ್ನು ಯುದ್ಧಕ್ಕೆ ಕರೆಯುತ್ತಾ ಇಂತೆಂದನು.

॥ ಜಲಂಧರ ಉವಾಚ ॥

ಯುದ್ಧಸ್ವಾದ್ಯ ಮಯಾ ಸಾರ್ಧಂ ಕಿಮೇಭಿರ್ನಿಹತೈಸ್ತವ ।
ಯಚ್ಚ ಕಿಂಚಿದ್ಬಲಂ ತೇಽಸ್ತಿ ತದ್ದರ್ಶಯ ಜಟಾಧರ ॥ ೨೫ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಬಾಣಸಪ್ತತ್ಯಾ ಜಘಾನ ವೃಷಭಧ್ವಜಂ ।
ಜಲಂಧರೋ ಮಹಾದೈತ್ಯಶ್ಶಂಭುಮಕ್ಲಿಷ್ಟಕಾರಿಣಂ ॥ ೨೬ ॥

ತಾನಪ್ರಾಪ್ತಾನ್ಮಹಾದೇವೋ ಜಲಂಧರಶರಾನ್ದ್ರುತಂ ।
ನಿಜೈರ್ಹಿ ನಿಶಿತೈರ್ಬಾಣೈಶ್ಚಿಚ್ಛೇದ ಪ್ರಹಸನ್ನಿವ ॥ ೨೭ ॥

ತತೋ ಹಯಾನ್ಧ್ವಜಂ ಛತ್ರಂ ಧನುಶ್ಚಿಚ್ಛೇದ ಸಪ್ತಭಿಃ ।
ಜಲಂಧರಸ್ಯ ದೈತ್ಯಸ್ಯ ನ ತಚ್ಚಿತ್ರಂ ಹರೇ ಮುನೇ ॥ ೨೮ ॥

---

೨೫. ವೆಲೈ ಜಟಾಧಾರಿಯೇ, ನನ್ನೊಡನೆ ಈಗ ಯುದ್ಧಕ್ಕೆ ಬಾ. ಸತ್ತು ಹೋದ ಈ ಬಡಪಾಯಿಗಳಮೇಲೇಕೆ ನಿನ್ನ ಪೌರುಷವನ್ನು ತೋರಿಸುವೆ? ನಿನ್ನ ಬಲವೇನಿರುವುದೋ ಅದನ್ನು ನನ್ನಲ್ಲಿ ತೋರಿಸು ಎಂದನು.

೨೬. ಓ ವ್ಯಾಸ, ಹೀಗೆ ನುಡಿದು ಆ ದೈತ್ಯಶ್ರೇಷ್ಠನಾದ ಜಲಂಧರನು ಲೀಲಾ ಪುರುಷನಾದ ಆ ಪರಶಿವನನ್ನು ಎಪ್ಪತ್ತು ಬಾಣಗಳಿಂದ ಹೊಡೆದನು.

೨೭. ಆ ದೈತ್ಯನ ಬಾಣಗಳು ತನ್ನ ಬಳಿಗೆ ಬರುವಷ್ಟರಲ್ಲಿಯೇ ಅವುಗಳನ್ನು ತನ್ನ ತೀಕ್ಷ್ಣವಾದ ಬಾಣಗಳಿಂದ ನಗುತ್ತಲೇ ಸರ್ರನೆ ಕತ್ತರಿಸಿಬಿಟ್ಟನು.

೨೮. ಆ ಜಲಂಧರ ದೈತ್ಯದ ಕುದುರೆಗಳನ್ನೂ ಧ್ವಜದಂಡವನ್ನೂ ಛತ್ರವನ್ನೂ ಧನುಸ್ಸನ್ನೂ ಏಳು ಬಾಣಗಳಿಂದ ಕತ್ತರಿಸಿದನು. ಓ ಮುನೀಂದ್ರ, ಶಿವನಲ್ಲಿ ಇದೊಂದು ಆಶ್ಚರ್ಯಕರವಾದುದೇ ?

ಸ ಛಿನ್ನಧನ್ವಾ ವಿರಥಃ ಪಾಥೋಽಧಿತನಯೋಽಸುರಃ ।
ಅಭ್ಯಧಾವಚ್ಛಿವಂ ಕ್ರುದ್ಧೋ ಗದಾಮುದ್ಯಮ್ಯ ವೇಗವಾನ್ ॥ ೨೯ ॥

ಪ್ರಭುರ್ಗದಾಂ ಚ ತತ್ಕ್ಷಿಪ್ತಾಂ ಸಹಸೈವ ಮಹೇಶ್ವರಃ ।
ಪಾರಾಶರ್ಯ ಮಹಾಲೀಲೋ ದ್ರುತಂ ಬಾಣೈರ್ದ್ವಿಧಾಕರೋತ್ ॥ ೩೦ ॥

ತಥಾಪಿ ಮುಷ್ಟಿಮುದ್ಯಮ್ಯ ಮಹಾಕ್ರುದ್ಧೋ ಮಹಾಸುರಃ ।
ಅಭ್ಯುದ್ಯಯೌ ಮಹಾವೇಗಾದ್ರುದ್ರಂ ತಂ ತಜ್ಜಿಘಾಂಸಯಾ ॥ ೩೧ ॥

ತಾವದೇವೇಶ್ವರೇಣಾಶು ಬಾಣೌಘೈಸ್ಸ ಜಲಂಧರಃ ।
ಅಕ್ಲಿಷ್ಟಕರ್ಮಕಾರೇಣ ಕ್ರೋಶಮಾತ್ರಮಪಾಕೃತಃ ॥ ೩೨ ॥

ತತೋ ಜಲಂಧರೋ ದೈತ್ಯೋ ರುದ್ರಂ ಮತ್ವಾ ಬಲಾಧಿಕಂ ।
ಸಸರ್ಜ ಮಾಯಾಂ ಗಾಂಧರ್ವೀಮದ್ಭುತಾಂ ರುದ್ರಮೋಹಿನೀಂ ॥ ೩೩ ॥

---

೨೯. ಹೀಗೆ ಬಿಲ್ಲು ಮುರಿದು ರಥವೂ ಛಿದ್ರವಾಗಿ ಹೋಗಲು ಆ ಜಲಂಧರನು ಕ್ರೋಧಾಂಧನಾಗಿ ಗದೆಯನ್ನೆತ್ತಿಕೊಂಡು ವೇಗದಿಂದ ಶಿವನಮೇಲೆ ನುಗ್ಗಿಬಂದನು.

೩೦. ಲೀಲಾವಿಹಾರಿಯಾದ ಆ ಮಹೇಶ್ವರನು ಆ ಜಲಂಧರನು ಬೀಸಿ ಬಿಟ್ಟ ಗದೆಯನ್ನು ಬಹು ಕ್ಷಿಪ್ರದಲ್ಲಿಯೇ ಬಾಣಗಳಿಂದ ಎರಡಾಗಿ ತುಂಡರಿಸಿಬಿಟ್ಟನು.

೩೧. ಅಷ್ಟಕ್ಕೆ ಬಿಡದೆ ಮಹಾಕೋಪಾನ್ವಿತನಾದ ಆ ಅಸುರಾಧಿಪತಿಯು ಕೈಯ್ಯನ್ನು ಮುಷ್ಟಿಹಿಡಿದು ಆ ಶಿವನನ್ನು ಕೊಲ್ಲಲೆಂದು ಮಹಾವೇಗದಿಂದ ಮುಂಬರಿದನು.

೩೨. ಅಷ್ಟರೊಳಗಾಗಿಯೇ ಲೀಲಾಮಾತ್ರದಿಂದಲೇ ಎಲ್ಲವನ್ನೂ ನಡೆಸಿಬಿಡುವ ಆ ಶಿವನು ಬಿಟ್ಟ ಬಾಣಪರಂಪರೆಗಳು ಆ ಜಲಂಧರನನ್ನು ಕ್ಷಣಮಾತ್ರದಲ್ಲಿ ಒಂದು ಹರಿದಾರಿಯಷ್ಟು ದೂರ ಹಿಂದಕ್ಕೆ ಎಸೆದವು.

೩೩. ಆಮೇಲೆ ಆ ದೈತ್ಯಚಕ್ರವರ್ತಿಯಾದ ಜಲಂಧರನು ತನಗಿಂತಲೂ ಶಿವನು ಹೆಚ್ಚು ಬಲಶಾಲಿಯೆಂದು ತಿಳಿದು ಶಿವನಿಗೂ ಮಂಕುಕವಿಯುವಂತಹ ಅದ್ಭುತವಾದ ಗಂಧರ್ವಮಾಯೆಯನ್ನು ಪ್ರಯೋಗಿಸಿದನು.

ತಸ್ಯ ಮಾಯಾಪ್ರಭಾವಾತ್ತು ಗಂಧರ್ವಾಪ್ಸರಸಾಂ ಗಣಾಃ ।
ಆವಿರ್ಭೂತಾ ಅನೇಕೇ ಚ ರುದ್ರಮೋಹನಹೇತವೇ ॥ ೩೪ ॥

ತತೋ ಜಗುಶ್ಚ ನನೃತುರ್ಗಂಧರ್ವಾಪ್ಸರಸಾಂ ಗಣಾಃ ।
ತಾಲವೇಣುಮೃದಂಗಾಂಶ್ಚ ವಾದಯಂತಿ ಸ್ಮ ಚಾಪರೇ ॥ ೩೫ ॥

ತದ್ದೃಷ್ಟ್ವಾ ಮಹದಾಶ್ಚರ್ಯಂ ಗಣೈ ರುದ್ರೋ ವಿಮೋಹಿತಃ ।
ಪತಿತಾನ್ಯಪಿ ಶಸ್ತ್ರಾಣಿ ಕರೇಭ್ಯೋ ನ ವಿವೇದ ಸಃ ॥ ೩೬ ॥

ಏಕಾಗ್ರೀಭೂತಮಾಲೋಕ್ಯ ರುದ್ರಂ ದೈತ್ಯೋ ಜಲಂಧರಃ ।
ಕಾಮತಸ್ಸ ಜಗಾಮಾಶು ಯತ್ರ ಗೌರೀ ಸ್ಥಿತಾಭವತ್ ॥ ೩೭ ॥

ಯುದ್ಧೇ ಶಂಭುನಿಶುಂಭಾಖ್ಯೌ ಸ್ಥಾಪಯಿತ್ವಾ ಮಹಾಬಲೌ ।
ದಶದೋರ್ದಂಡಪಂಚಾಸ್ಯಸ್ತ್ರಿನೇತ್ರಶ್ಚ ಜಟಾಧರಃ ॥ ೩೮ ॥

---

೩೪. ಆ ದೈತ್ಯನ ಮಾಯಾಪ್ರಭಾವದಿಂದ ಶಿವನನ್ನು ಮರುಳುಗೊಳಿಸ ಲೋಸುಗ ಅನೇಕಮಂದಿ ಗಂಧರ್ವರೂ ಅಪ್ಸರರೂ ಅಪ್ಸರಸ್ತ್ರೀಯರೂ ಗುಂಪುಗುಂಪಾಗಿ ಆವಿರ್ಭವಿಸಿದರು.

೩೫. ಆ ಗಂಧರ್ವರ ಮತ್ತು ಅಪ್ಸರಸ್ತ್ರೀಯರಲ್ಲಿ ಕೆಲವರು ಹಾಡತೊಡ ಗಿದರು. ಮತ್ತೆ ಕೆಲವರು ಆ ಗಾನಕ್ಕೆ ಅನುಸಾರವಾಗಿ ನರ್ತನಮಾಡಿದರು. ಇನ್ನು ಕೆಲವರು ತಾಳ, ಕೊಳಲು, ಮೃದಂಗಗಳನ್ನು ಬಾರಿಸಿದರು.

೩೬. ಈ ವಿಚಿತ್ರವನ್ನು ಕಂಡು ತನ್ನ ಪ್ರಮಥರೊಡನೆ ಶಿವನು ಮೋಹ ವನ್ನು ಹೊಂದಿದನು. ತನ್ನ ಕೈಗಳಿಂದ ಆಯುಧಗಳು ಕಳಚಿಬೀಳುತ್ತಿದ್ದುದೂ ಆತನಿಗೆ ತಿಳಿಯಲೇ ಇಲ್ಲ.

೩೭. ಈರೀತಿ ತನ್ನ ಮಾಯೆಗೊಳಗಾಗಿ ಗೀತನೃತ್ಯಗಳಲ್ಲಿ ಶಿವನು ತನ್ಮಯನಾದುದನ್ನು ಜಲಂಧರನು ಕಂಡು ಮಹಾಬಲಾಢ್ಯರಾದ ಶಂಭುನಿಶುಂಭರೆಂಬ ದಾನವರನ್ನು ಯುದ್ಧಮಾಡುವಂತೆ ನೇಮಿಸಿ ಮದನಬಾಧೆಯಿಂದ ವಿವಶನಾಗಿ ಪಾರ್ವತಿಯಿರುವಲ್ಲಿಗೆ ಬೇಗಬೇಗನೆ ಹೊರಟನು.

೩೮-೩೯. ಓ ವ್ಯಾಸನೇ, ಕೇಳು ;—ಆ ಜಲಂಧರನು ತನ್ನ ಆಸುರೀಮಾಯೆ ಯಿಂದ ಹತ್ತು ಕೈಗಳು, ಐದು ಮುಖ, ಮೂರು ಕಣ್ಣುಗಳನ್ನು ಧರಿಸಿ ತಲೆಯಲ್ಲಿ

ಮಹಾವೃಷಭಮಾರೂಢಸ್ಸರ್ವಥಾ ರುದ್ರಸಂನಿಭಃ ।
ಅಸುರ್ಯಾ ಮಾಯಯಾ ವ್ಯಾಸ ಸ ಬಭೂವ ಜಲಂಧರಃ ॥ ೩೯ ॥

ಅಥ ರುದ್ರಸಮಾಯಾಂತಮಾಲೋಕ್ಯ ಭವವಲ್ಲಭಾ ।
ಅಭ್ಯಾಯಯೌ ಸಖೀಮಧ್ಯಾತ್ತದ್ದರ್ಶನಪಥೇಽಭವತ್ ॥ ೪೦ ॥

ಯಾವದ್ದದರ್ಶ ಚಾರ್ವಂಗೀಂ ಪಾರ್ವತೀಂ ದನುಜೇಶ್ವರಃ ।
ತಾವತ್ಸ ವೀರ್ಯಂ ಮುಮುಚೇ ಜಡಾಂಗಶ್ಚಾಭವತ್ತದಾ ॥ ೪೧ ॥

ಅಥ ಜ್ಞಾತ್ವಾ ತದಾ ಗೌರೀ ದಾನವಂ ಭಯವಿಹ್ವಲಾ ।
ಜಗಾಮಾಂತರ್ಹಿತಾ ವೇಗಾತ್ಸ ತದೋತ್ತರಮಾನಸಂ ॥ ೪೨ ॥

ತಾಮದೃಷ್ಟ್ವಾ ತತೋ ದೈತ್ಯಃ ಕ್ಷಣಾದ್ವಿದ್ಯುಲ್ಲತಾಮಿವ ।
ಜವೇನಾಗಾತ್ಪುನರ್ಯೋದ್ಧುಂ ಯತ್ರ ದೇವೋ ಮಹೇಶ್ವರಃ ॥ ೪೩ ॥

---

ಜಟೆಯನ್ನು ಬೆಳೆಸಿ ದೊಡ್ಡದಾದ ವೃಷಭವನ್ನೇರಿ ಸಂಪೂರ್ಣವಾಗಿ ಶಿವನಂತಾಗಿ ಬಿಟ್ಟನು.

೪೦. ಅನಂತರ ಸಖಿಯರ ಮಧ್ಯದಲ್ಲಿದ್ದ ಪರಶಿವನ ಮೋಹದ ಮಡದಿಯಾದ ಪಾರ್ವತಿಯು ಮಾಯಾಶಿವನು ಬರುತ್ತಿರುವುದನ್ನು ಕಂಡು ಅವನು ಬರುವ ಮಾರ್ಗ ದಲ್ಲಿ ಬಂದು ಕಾಣುವಂತೆ ನಿಂತುಕೊಂಡಳು.

೪೧. ಆ ದಾನವಾಧಿಪತಿಯು ಸರ್ವಾಂಗಸೌಂದರ್ಯದಿಂದ ಒಪ್ಪುತ್ತಿರುವ ಆ ಶಿವನ ಕಾಂತೆಯನ್ನು ಕಂಡನೋ ಇಲ್ಲವೋ ಅಷ್ಟರಲ್ಲಿಯೇ ಅವನಿಗೆ ವೀರ್ಯಸ್ಖಲನ ವಾಯಿತು. ವೀರ್ಯಚ್ಯುತಿಯಾದೊಡನೆಯೇ ಅವನ ಅಂಗಗಳೆಲ್ಲವೂ ಜಡವಾಗಿ ಬಿಟ್ಟವು.

೪೨. ಆಗ ಪಾರ್ವತಿಯು, ಇವನು ಶಿವನಲ್ಲ, ದಾನವನೆಂದು ಅರಿತು ಭಯ ದಿಂದ ತತ್ತಳಿಸುತ್ತಾ ಅಕ್ಷಣವೇ ಅಲ್ಲಿಂದ ಅಂತರ್ಧಾನವನ್ನು ಹೊಂದಿ ಬೇಗನೆ ಉತ್ತರ ಮಾನಸಕ್ಕೆ ಹೊರಟುಹೋದಳು.

೪೩. ಅನಂತರ ಆ ಜಲಂಧರನು ಕುಡಿಮಿಂಚಿನಂತೆ ಕ್ಷಣಮಾತ್ರದಲ್ಲಿ ಕಣ್ಮರೆ ಯಾದ ಕಾತ್ಯಾಯನಿಯನ್ನು ಕಾಣದೆ ಮತ್ತೆ ಶಿವನೊಡನೆ ಯುದ್ಧಮಾಡೋಣವೆಂದು ಅವನಿರುವೆಡೆಗೆ ಬೇಗನೆ ಹಿಂತಿರುಗಿ ಬಂದನು.

ಪಾರ್ವತ್ಯಪಿ ಮಹಾವಿಷ್ಣುಂ ಸಸ್ಮಾರ ಮನಸಾ ತದಾ ।
ತಾವದ್ದದರ್ಶ ತಂ ದೇವಂ ಸೋಪವಿಷ್ಟಂ ಸಮೀಪಗಂ ॥ ೪೪ ॥

ತಂ ದೃಷ್ಟ್ವಾ ಪಾರ್ವತೀ ವಿಷ್ಣುಂ ಜಗನ್ಮಾತಾ ಶಿವಪ್ರಿಯಾ ।
ಪ್ರಸನ್ನಮನಸೋವಾಚ ಪ್ರಣಮಂತಂ ಕೃತಾಂಜಲಿಂ ॥ ೪೫ ॥

॥ ಪಾರ್ವತ್ಯುವಾಚ ॥

ವಿಷ್ಣೋ ಜಲಂಧರೋ ದೈತ್ಯಃ ಕೃತವಾನ್ಪರಮಾದ್ಭುತಂ ।
ತತ್ಕಿಂ ನ ವಿದಿತಂ ತೇಽಸ್ತಿ ಚೇಷ್ಟಿತಂ ತಸ್ಯ ದುರ್ಮತೇಃ ॥ ೪೬ ॥

ತಚ್ಛ್ರುತ್ವಾ ಜಗದಂಬಾಯಾ ವಚನಂ ಗರುಡಧ್ವಜಃ ।
ಪ್ರತ್ಯುವಾಚ ಶಿವಾಂ ನತ್ವಾ ಸಾಂಜಲಿರ್ನಮ್ರಕಂಧರಃ ॥ ೪೭ ॥

---

೪೪. ಪಾರ್ವತಿಯು ಮಹಾವಿಷ್ಣುವನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡಳು. ಸ್ಮರಿಸಿದೊಡನೆಯೇ ತನ್ನ ಸಮೀಪದಲ್ಲಿ ಆ ವಿಷ್ಣುವು ಕುಳಿತಿರುವುದನ್ನು ಆಕೆಯು ನೋಡಿ,

೪೫. ಜಗಜ್ಜನನಿಯೂ ಶಿವನ ಮೋಹದ ಮಡದಿಯೂ ಆದ ಆ ಪಾರ್ವತಿಯು ನಮಸ್ಕಾರಮಾಡಿ ಕೈಮುಗಿದುಕೊಂಡಿರುವ ವಿಷ್ಣುವನ್ನು ನೋಡಿ ಹರ್ಷಚಿತ್ತಳಾಗಿ ಇಂತೆಂದಳು.

೪೬. ಪಾರ್ವತಿಯು ಹೇಳಿದಳು:—ಎಲೈ ಶ್ರೀಹರಿಯೇ, ಆ ಜಲಂಧರನೆಂಬ ದೈತ್ಯನು ಎಂತಹ ಆಶ್ಚರ್ಯಕರವಾದ ಕೆಲಸವನ್ನು ಮಾಡಿದನು? ಆ ದುಷ್ಟಬುದ್ಧಿಯ ದುಶ್ಚೇಷ್ಟೆಯು ನಿನಗೆ ತಿಳಿಯಲೇ ಇಲ್ಲವೇ ಎನ್ನಲು,

೪೭. ಜಗನ್ಮಾತೆಯಾದ ಶಿವಕಾಂತೆಯು ನುಡಿದುದನ್ನು ಕೇಳಿ ಶ್ರೀಹರಿಯು ಆಕೆಗೆ ಶಿರಸ್ಸನ್ನು ಬಗ್ಗಿಸಿ ನಮಸ್ಕರಿಸಿ ಕೈಮುಗಿದುಕೊಂಡು ಈರೀತಿ ಉತ್ತರ ವಿತ್ತನು.

॥ ಶ್ರೀಭಗವಾನುವಾಚ ॥

ಭವತ್ಯಾ ಕೃಪಯಾ ದೇವಿ ತದ್ವೃತ್ತಂ ವಿದಿತಂ ಮಯಾ ।
ಯದಾಜ್ಞಾಪಯ ಮಾಂ ಮಾತಸ್ತತ್ಕುರ್ಯಾಂ ತ್ವದನುಜ್ಞಯಾ ॥ ೪೮ ॥

॥ ಸನತ್ಕುಮಾರ ಉವಾಚ ॥

ತಚ್ಛ್ರುತ್ವಾ ವಿಷ್ಣುವಚನಂ ಪುನರಪ್ಯಾಹ ಪಾರ್ವತೀ ।
ಹೃಷೀಕೇಶಂ ಜಗನ್ಮಾತಾ ಧರ್ಮನೀತಿಂ ಸುಶಿಕ್ಷಯನ್ ॥ ೪೯ ॥

॥ ಪಾರ್ವತ್ಯುವಾಚ ॥

ತೇನೈವ ದರ್ಶಿತಃ ಪಂಥಾ ಬುಧ್ಯಸ್ವ ತಂ ತಥೈವ ಹಿ ।
ತತ್ಸ್ತ್ರೀಪಾತಿವ್ರತಂ ಧರ್ಮಂ ಭ್ರಷ್ಟಂ ಕುರು ಮದಾಜ್ಞಯಾ ॥ ೫೦ ॥

ನಾನ್ಯಥಾ ಸ ಮಹಾದೈತ್ಯೋ ಭವೇದ್ವಧ್ಯೋ ರಮೇಶ್ವರ ।
ಪಾತಿವ್ರತಸಮೋ ನಾನ್ಯೋ ಧರ್ಮೋಽಸ್ತಿ ಪೃಥಿವೀತಲೇ ॥ ೫೧ ॥

---

೪೮. ಭಗವಂತನು ಹೇಳಿದನು:—ಎಲೌ ಮಾತೆ, ನೀನು ಕೃಪೆಯಿಂದ ತಿಳಿಸಿದಮೇಲೆ ಆ ವಿಷಯುವೇ ನನಗೆ ತಿಳಿಯಿತು. ಅಮ್ಮಾ, ನೀನೇನು ಅಪ್ಪಣೆ ಮಾಡುವಿಯೋ ಅದನ್ನು ನಿನ್ನ ಅನುಜ್ಞೆಯಿಂದ ನೆರವೇರಿಸುವೆನು ಎಂದನು.

೪೯. ಸನತ್ಕುಮಾರನಿಂತೆಂದನು:—ವಿಷ್ಣುವು ಹೇಳಿದುದನ್ನು ಕೇಳಿ ಜಗನ್ಮಾತೆಯಾದ ಪಾರ್ವತಿಯು ಧರ್ಮದ ನೀತಿಯನ್ನು ತಿಳಿಸುತ್ತಾ ಆತನನ್ನು ಕುರಿತು ಮರಳಿ ಇಂತೆಂದಳು.

೫೦. ಪಾರ್ವತಿಯು ಹೇಳಿದಳು:—ಆ ದುಷ್ಟನೇ ಈಗ ನಮಗೆ ದಾರಿಯನ್ನು ತೋರಿಸಿಕೊಟ್ಟಿರುವನು. ನೀನೂ ಆ ದಾರಿಯನ್ನೇ ಚೆನ್ನಾಗಿ ತಿಳಿದು ನನ್ನ ಅಪ್ಪಣೆಯಂತೆ ಆ ದುಷ್ಟನ ಸ್ತ್ರೀಯ ಪತಿವ್ರತಾಧರ್ಮವನ್ನು ಭ್ರಷ್ಟಗೊಳಿಸು.

೫೧. ಎಲೈ ಲಕ್ಷ್ಮೀಕಾಂತನೇ, ಹೀಗಲ್ಲದೆ ಇದ್ದರೆ ಇನ್ನಾವ ರೀತಿಯಿಂದಲೂ ಆ ದುಷ್ಟ ದೈತ್ಯನನ್ನು ಕೊಲ್ಲಲು ಸಾಧ್ಯವಿಲ್ಲ. ಈ ಭೂಮಿಯಲ್ಲಿ ಪಾತಿವ್ರತ್ಯಕ್ಕೆ ಸಮಾನವಾದ ಬೇರೊಂದು ಧರ್ಮವಿಲ್ಲ ಎಂದಳು.

॥ ಸನತ್ಕುಮಾರ ಉವಾಚ ॥

ಇತ್ಯನುಜ್ಞಾಂ ಸಮಾಕರ್ಣ್ಯ ಶಿರಸಾಧಾಯ ತಾಂ ಹರಿಃ ।
ಛಲಂ ಕರ್ತುಂ ಜಗಾಮಾಶು ಪುನರ್ಜಾಲಂಧರಂ ಪುರಂ ॥ ೫೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರವಧೋಪಾಖ್ಯಾನೇ
ಜಲಂಧರಯುದ್ಧವರ್ಣನಂ ನಾಮ
ದ್ವಾವಿಂಶೋಽಧ್ಯಾಯಃ.

---

೫೨. ಸನತ್ಕುಮಾರನಿಂತೆಂದನು :—ಓ ವ್ಯಾಸನೇ, ಕೇಳು. ಬಳಿಕ ವಿಷ್ಣುವು ಈರೀತಿ ಜಗಜ್ಜನನಿಯ ಒಪ್ಪಿಗೆಯನ್ನು ಪಡೆದು ಆಕೆಯ ಅಪ್ಪಣೆಯನ್ನು ಶಿರಸಾವಹಿಸಿ ಈ ಮೋಸಕೃತ್ಯವನ್ನೆಸಗಲು ಮರಳಿ ಜಲಂಧರನ ನಗರಿಗೆ ಬೇಗನೆ ಹಿಂದಿರುಗಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಜಲಂಧರಯುದ್ಧವರ್ಣನವೆಂಬ ಇಪ್ಪತ್ತೆರಡನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ತ್ರಯೋವಿಂಶೋಽಧ್ಯಾಯಃ

---

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ವದ ತ್ವಂ ವದತಾಂ ವರ ।
ಕಿಮಕಾರ್ಷೀದ್ಧರಿಸ್ತತ್ರ ಧರ್ಮಂ ತತ್ಯಾಜ ಸಾ ಕಥಂ ॥ ೧ ॥

॥ ಸನತ್ಕುಮಾರ ಉವಾಚ ॥

ವಿಷ್ಣುರ್ಜಾಲಂಧರಂ ಗತ್ವಾ ದೈತ್ಯಸ್ಯ ಪುಟಭೇದನಂ ।
ಪಾತಿವ್ರತ್ಯಸ್ಯ ಭಂಗಾಯ ವೃಂದಾಯಾಶ್ಚಾಕರೋನ್ಮತಿಂ ॥ ೨ ॥

---

### ಇಪ್ಪತ್ತಮೂರನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯು ಸರ್ವಜ್ಞನಾದ ಸನತ್ಕುಮಾರನನ್ನು ಕುರಿತು.— ಓ ವಾಗ್ಮಿಶ್ರೇಷ್ಠ, ಅನಂತರ ಹರಿಯು ಅಲ್ಲಿ ಏನು ಮಾಡಿದನು? ಆ ಜಲಂಧರನ ಪತ್ನಿಯು ತನ್ನ ಧರ್ಮವನ್ನು ಎಂತು ಕೆಡಿಸಿಕೊಂಡಳು? ಎಂದು ಪ್ರಶ್ನಿಸಿದನು.

೨. ಆಗ ಸನತ್ಕುಮಾರನು ವ್ಯಾಸನನ್ನು ಕುರಿತು ಹೇಳತೊಡಗಿದನು ;— ಓ ವ್ಯಾಸ, ವಿಷ್ಣುವು ಆ ದೈತ್ಯನ ನಗರವಾದ ಜಾಲಂಧರ ಪಟ್ಟಣಕ್ಕೆ ತೆರಳಿ, ಅವನ ಪತ್ನಿಯಾದ ವೃಂದೆಯ ಪಾತಿವ್ರತ್ಯವನ್ನು ಕೆಡಿಸಲು ಮನಸ್ಸನ್ನು ಮಾಡಿದನು.

ವೃಂದಾಂ ಸ ದರ್ಶಯಾಮಾಸ ಸ್ವಪ್ನಂ ಮಾಯಾವಿನಾಂ ವರಃ ।
ಸ್ವಯಂ ತನ್ನಗರೋದ್ಯಾನಮಾಸ್ಥಿತೋಽದ್ಭುತವಿಗ್ರಹಃ ॥ ೩ ॥

ಅಥ ವೃಂದಾ ತದಾ ದೇವೀ ತತ್ಪತ್ನೀ ನಿಶಿ ಸುವ್ರತಾ ।
ಹರೇರ್ಮಾಯಾಪ್ರಭಾವಾತ್ತು ದುಃಸ್ವಪ್ನಂ ಸಾ ದದರ್ಶ ಹ ॥ ೪ ॥

ಸ್ವಪ್ನಮಧ್ಯೇ ಹಿ ಸಾ ವಿಷ್ಣುಮಾಯಯಾ ಪ್ರದದರ್ಶ ಹ ।
ಭರ್ತಾರಂ ಮಹಿಷಾರೂಢಂ ತೈಲಾಭ್ಯಕ್ತಂ ದಿಗಂಬರಂ ॥ ೫ ॥

ಕೃಷ್ಣಪ್ರಸೂನಭೂಷಾಢ್ಯಂ ಕ್ರವ್ಯಾದಗಣಸೇವಿತಂ ।
ದಕ್ಷಿಣಾಶಾಂ ಗತಂ ಮುಂಡಂ ತಮಸಾ ಚ ವೃತಂ ತದಾ ॥ ೬ ॥

ಸ್ವಪುರಂ ಸಾಗರೇ ಮಗ್ನಂ ಸಹಸೈವಾತ್ಮನಾ ಇವ ।
ಇತ್ಯಾದಿ ಬಹುದುಸ್ಸ್ವಪ್ನಾನ್ನಿಶಾಂತೇ ಸಾ ದದರ್ಶ ಹ ॥ ೭ ॥

---

೩. ಮಾಯಾವಿಗಳಲ್ಲಿ ಮೊದಲನೆಯವನೂ ಅತಿ ಮನೋಹರವಾದ ಆಕಾರವುಳ್ಳವನೂ ಆದ ಆ ವಿಷ್ಣುವು ಆ ಜಲಂಧರ ಪಟ್ಟಣದ ಉದ್ಯಾನದಲ್ಲಿದ್ದುಕೊಂಡು, ವೃಂಧೆಗೆ ಈರೀತಿ ಸ್ವಪ್ನವುಂಟಾಗುವಂತೆ ಮಾಡಿದನು.

೪. ಆ ಜಲಂಧರನ ಪತ್ನಿಯಾದ ವೃಂದಾದೇವಿಯು ಮಹಾಶೀಲವತಿಯು, ಅವಳು ಅರ್ಧರಾತ್ರಿಯಲ್ಲಿ ಮಲಗಿರುವಾಗ ವಿಷ್ಣುವಿನ ಮಾಯೆಯ ಮಹಿಮೆಯಿಂದ ಬಹು ಕೆಟ್ಟ ಸ್ವಪ್ನವನ್ನು ಕಂಡಳು.

೫-೬. ಆ ವೃಂದೆಯು ವಿಷ್ಣುವಿನ ಮಾಯೆಯಿಂದ, ಆ ಸ್ವಪ್ನದ ನಡುವೆ, ತನ್ನ ಗಂಡನಾದ ಜಲಂಧರನು ಕೋಣನ ಮೇಲೆ ಕುಳಿತು, ಎಣ್ಣೆಯನ್ನೊತ್ತಿಕೊಂಡು ಮೈಮೇಲೆ ಬಟ್ಟೆಯಿಲ್ಲದೆ ನಗ್ನನಾಗಿ ಕಪ್ಪುಹೂಗಳ ಹಾರವನ್ನು ಧರಿಸಿ, ಕಪ್ಪಾದ ಒಡವೆಗಳನ್ನು ತೊಟ್ಟು, ಪಿಶಾಚಗಳ ಗುಂಪಿನ ನಡುವೆ, ಅವರಿಂದ ಸೇವೆಯನ್ನು ಪಡೆಯುತ್ತಾ, ಬೋಳು ತಲೆಯಲ್ಲಿ ದಕ್ಷಿಣ ದಿಕ್ಕಿಗಭಿಮುಖನಾಗಿ ಹೋಗುತ್ತಾ ಕೊನೆಗೆ ಕತ್ತಲೆಯಲ್ಲಿ ಸೇರಿಹೋದುದನ್ನು ಕಂಡಳು.

೭. ಇದ್ದಕ್ಕಿದ್ದಂತೆಯೇ ತನ್ನ ಪಟ್ಟಣವು ತನ್ನೊಡನೆ ಸಮುದ್ರದಲ್ಲಿ ಮುಳುಗಿ ಹೋದಂತೆಯೂ, ಇದೇ ಮೊದಲಾಗಿ ಇನ್ನೂ ಅನೇಕ ಕೆಟ್ಟ ಸ್ವಪ್ನಗಳನ್ನೂ ಬೆಳಗಿನ ಜಾವದ ಸಮಯದಲ್ಲಿ ಆ ವೃಂದೆಯು ಕಂಡಳು.

ತತಃ ಪ್ರಬುಧ್ಯ ಸಾ ಬಾಲಾ ತಂ ಸ್ವಪ್ನಂ ಸ್ವಂ ವಿಚಿನ್ವತೀ ।
ದದರ್ಶೋದಿತಮಾದಿತ್ಯಂ ಸಚ್ಛಿದ್ರಂ ನಿಷ್ಪ್ರಭಂ ಮುಹುಃ ॥ ೮ ॥

ತದನಿಷ್ಟಮಿದಂ ಜ್ಞಾತ್ವಾ ರುದಂತೀ ಭಯವಿಹ್ವಲಾ ।
ಕುತ್ರಚಿನ್ನಾಪ ಸಾ ಶರ್ಮ ಗೋಪುರಾಟ್ಟಾಲಭೂಮಿಷು ॥ ೯ ॥

ತತಸ್ಸಖೀದ್ವಯಯುತಾ ನಗರೋದ್ಯಾನಮಾಗಮತ್ ।
ತತ್ರಾಪಿ ಸಾ ಗತಾ ಬಾಲಾ ನ ಪ್ರಾಪ ಕುತ್ರಚಿತ್ಸುಖಂ ॥ ೧೦ ॥

ತತೋ ಜಲಂಧರಸ್ತ್ರೀ ಸಾ ನಿರ್ವಿಣ್ಣೋದ್ವಿಗ್ನಮಾನಸಾ ।
ವನಾದ್ವನಾಂತರಂ ಯಾತಾ ನೈವ ವೇದಾತ್ಮನಾ ತದಾ ॥ ೧೧ ॥

ಭ್ರಮತೀ ಸಾ ತತೋ ಬಾಲಾ ದದರ್ಶಾತೀವ ಭೀಷಣೌ ।
ರಾಕ್ಷಸೌ ಸಿಂಹವದನೌ ದೃಷ್ಟ್ವಾ ದಶನಭಾಸುರೌ ॥ ೧೨ ॥

---

೮. ಬಳಿಕ ಆ ಬಾಲೆಯು ಎಚ್ಚೆತ್ತು ತನಗಾದ ಕನಸ್ಸನ್ನೇ ಮನಸ್ಸಿನಲ್ಲಿ ಯೋಚಿಸುತ್ತಾ, ಮಧ್ಯದಲ್ಲಿ ತೂತುಬಿದ್ದು, ಸ್ವಲ್ಪವೂ ಕಾಂತಿಯಿಲ್ಲದೆ ಬಹುವಾಗಿ ಕಳೆಗುಂದಿ ಉದಯಿಸಿದ ಸೂರ್ಯಬಿಂಬವನ್ನು ನೋಡಿದಳು.

೯. ಈರೀತಿ ತನಗೆ ಕನಸಾದುದು ಮಹಾ ಅನಿಷ್ಟಕರವೆಂದು ಎಣಿಸಿ ಹೆದರಿಕೆಯಿಂದ ತಲ್ಲಣಿಸುತ್ತಾ, ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಸುತ್ತಾ ದುಃಖಿಸುತ್ತಿದ್ದಳು. ಆ ಬಾಲೆಯು ಅರಮನೆಯ ಮೇಲ್ಮಹಡಿಯಲ್ಲೂ, ಚಂದ್ರಶಾಲೆಯಲ್ಲೂ ಎಲ್ಲೂ ನೆಮ್ಮದಿಯನ್ನು ಹೊಂದಲಿಲ್ಲ.

೧೦. ಅನಂತರ ತನ್ನಿಬ್ಬರು ಸಖಿಯರೊಡನೆ ಪಟ್ಟಣದ ಉದ್ಯಾನಕ್ಕೆ ಬಂದಳು. ಅಲ್ಲಿಯೂ ಕೂಡ, ಅವಳಿಗೆ ಮನಸ್ಸಮಾಧಾನವಾಗಲಿಲ್ಲ.

೧೧. ಬಳಿಕ ಆ ವೃಂದೆಯು ಬೇಸರದಿಂದ ಮನಸ್ಸಿನಲ್ಲಿ ಕಳವಳಗೊಳ್ಳುತ್ತಾ, ಈ ಉದ್ಯಾನದಿಂದ ಮತ್ತೊಂದಕ್ಕೆ, ಮತ್ತೊಂದರಿಂದ ಬೇರೊಂದಕ್ಕೆ, ಈರೀತಿಯಾಗಿ ಬಹುದೂರ ಹೊರಟಳು. ಆದರೂ ತಾನು ಎಲ್ಲಿರುವೆನೆಂಬ ಅರಿವೇ ಅವಳಿಗಾಗಲಿಲ್ಲ.

೧೨. ಈರೀತಿ ಉದ್ಯಾನದಿಂದ ಉದ್ಯಾನಕ್ಕೆ ಸುತ್ತಾಡುತ್ತಿರುವಾಗ ವೃಂದೆಯು ಸಿಂಹದಂತೆ ಮುಖವೂ, ಉದ್ದವಾದ ಕೋರೆದಾಡೆಗಳೂ ಉಳ್ಳ ಭಯಂಕರಾಕಾರದ ರಾಕ್ಷಸರಿಬ್ಬರನ್ನು ಕಂಡಳು.

ತೌ ದೃಷ್ಟ್ವಾ ವಿಹ್ವಲಾತೀವ ಪಲಾಯನಪರಾ ತದಾ ।
ದದರ್ಶ ತಾಪಸಂ ಶಾಂತಂ ಸಶಿಷ್ಯಂ ಮೌನಮಾಸ್ಥಿತಂ ॥ ೧೩ ॥

ತತಸ್ತತ್ಕಂಠಮಾಸಾದ್ಯ ನಿಜಾಂ ಬಾಹುಲತಾಂ ಭಯಾತ್ ।
ಮುನೇ ಮಾಂ ರಕ್ಷ ಶರಣಮಾಗತಾಸೀತ್ಯಭಾಷತ ॥ ೧೪ ॥

ಮುನಿಸ್ತಾಂ ವಿಹ್ವಲಾಂ ದೃಷ್ಟ್ವಾ ರಾಕ್ಷಸಾನುಗತಾಂ ತದಾ ।
ಹುಂಕಾರೇಣೈವ ತೌ ಘೋರೌ ಚಕಾರ ವಿಮುಖೌ ದ್ರುತಂ ॥ ೧೫ ॥

ತದ್ಧುಂಕಾರಭಯತ್ರಸ್ತೌ ದೃಷ್ಟ್ವಾ ತೌ ವಿಮುಖೌ ಗತೌ ।
ವಿಸ್ಮಿತಾತೀವ ದೈತ್ಯೇಂದ್ರಪತ್ನೀ ಸಾಭೂನ್ಮುನೇ ಹೃದಿ ॥ ೧೬ ॥

ತತಸ್ಸಾ ಮುನಿನಾಥಂ ತಂ ಭಯಾನ್ಮುಕ್ತಾ ಕೃತಾಂಜಲಿಃ ।
ಪ್ರಣಮ್ಯ ದಂಡವದ್ಭೂಮೌ ವೃಂದಾ ವಚನಮಬ್ರವೀತ್ ॥ ೧೭ ॥

---

೧೩. ಅವರೀರ್ವರನ್ನೂ ಕಂಡು ಬಹುವಾಗಿ ಭಯಪಟ್ಟು ಓಡಿಹೋಗುತ್ತಿರಲು, ಶಾಂತನಾದ ತಪಸ್ವಿಯೋರ್ವನು ಶಿಷ್ಯನೊಡನೆ ಮೌನವಹಿಸಿ ಕುಳಿತಿರುವುದನ್ನು ಕಂಡಳು.

೧೪. ಆಮೇಲೆ, ಆ ಬಾಲೆಯು ಹೆದರಿಕೆಯಿಂದ ತನ್ನೆರಡು ತೋಳುಗಳಿಂದಲೂ ಆ ಮುನಿಯ ಕುತ್ತಿಗೆಯನ್ನು ಅಪ್ಪಿಕೊಂಡು, ಎಲೈ ಮುನಿಯೇ, ನನ್ನನ್ನು ಕಾಪಾಡು, ನಿನ್ನನ್ನು ಮರೆಹೊಕ್ಕಿರುವೆನು ಎಂದು ಹೇಳಿದಳು.

೧೫. ಆ ಮುನಿಯು, ರಾಕ್ಷಸರಿಂದ ಹಿಂಬಾಲಿಸಲ್ಪಟ್ಟು, ಹೆದರಿಕೆಯಿಂದ ನಡುಗುತ್ತಿರುವ ಆ ವೃಂದೆಯನ್ನು ಕಂಡು, ಆ ಘೋರರಾದ ರಾಕ್ಷಸರೀರ್ವರನ್ನೂ ಹುಂಕಾರದಿಂದಲೇ ಕ್ಷಣಮಾತ್ರದಲ್ಲಿ ವಿಮುಖರನ್ನಾಗಿಮಾಡಿದನು.

೧೬. ಆ ಮುನಿಯ ಹುಂಕಾರಮಾತ್ರದಿಂದ ಹೆದರಿ ಆ ರಾಕ್ಷಸರಿಬ್ಬರೂ, ಹಿಂದಕ್ಕೆ ಹೊರಟುಹೋದುದನ್ನು ಕಂಡು ಆ ಜಲಂಧರನ ಪತ್ನಿಯು ಮನಸ್ಸಿನಲ್ಲಿ ಬಹಳ ಆಶ್ಚರ್ಯವನ್ನು ಹೊಂದಿದಳು.

೧೭. ಆಮೇಲೆ, ಆವೃಂದೆಯು ಭಯವನ್ನು ಬಿಟ್ಟು, ನೆಲದಮೇಲೆ ದಂಡಾಕಾರವಾಗಿ ನಮಸ್ಕಾರಮಾಡಿ, ಕೈಮುಗಿದುಕೊಂಡು ಆ ಮುನಿಯನ್ನು ಕುರಿತು ಇಂತೆಂದಳು.

॥ ವೃಂದೋವಾಚ ॥
ಮುನಿನಾಥ ದಯಾಸಿಂಧೋ ಪರಪೀಡಾನಿವಾರಕ ।
ರಕ್ಷಿತಾಹಂ ತ್ವಯಾ ಘೋರಾದ್ಭಯಾದಸ್ಮಾತ್ಖಲೋದ್ಭವಾತ್ ॥ ೧೮ ॥

ಸಮರ್ಥಸ್ಸರ್ವಥಾ ತ್ವಂ ಹಿ ಸರ್ವಜ್ಞೋಽಪಿ ಕೃಪಾನಿಧೇ ।
ಕಿಂಚಿದ್ವಿಜ್ಞಪ್ತುಮಿಚ್ಛಾಮಿ ಕೃಪಯಾ ತನ್ನಿಶಾಮಯ ॥ ೧೯ ॥

ಜಲಂಧರೋ ಹಿ ಮದ್ಭರ್ತಾ ರುದ್ರಂ ಯೋದ್ಧುಂ ಗತಃ ಪ್ರಭೋ ।
ಸ ತತ್ರಾಸ್ತೇ ಕಥಂ ಯುದ್ಧೇ ತನ್ಮೇ ಕಥಯ ಸುವ್ರತ ॥ ೨೦ ॥

॥ ಸನತ್ಕುಮಾರ ಉವಾಚ ॥
ಮುನಿಸ್ತದ್ವಾಕ್ಯಮಾಕರ್ಣ್ಯ ಮೌನಂ ಕಪಟಮಾಸ್ಥಿತಃ ।
ಕರ್ತುಂ ಸ್ವಾರ್ಥಂ ವಿಧಾನಜ್ಞಃ ಕೃಪಯೋರ್ಧ್ವಮುವೈಕ್ಷತ ॥ ೨೧ ॥

---

೧೮. ಎಲೈ ಮುನೀಂದ್ರನೇ, ನೀನು ಕರುಣಾನಿಧಿಯು, ಮತ್ತೊಬ್ಬರ ಕಷ್ಟಗಳನ್ನು ನಿವಾರಿಸುವವನು. ಈ ದುಷ್ಟರಿಂದ ಉಂಟಾದ ಘೋರವಾದ ಹೆದರಿಕೆಯಿಂದ ನೀನು ನನ್ನನ್ನು ಬಿಡಿಸಿದೆ.

೧೯. ಎಲೈ ದಯಾಳುವೇ, ನೀನು ಸರ್ವಾಂಶದಲ್ಲಿಯೂ ಸಮರ್ಥನಾಗಿರುವೆ. ನೀನು ಎಲ್ಲವನ್ನೂ ಬಲ್ಲವನಾಗಿದ್ದರೂ ನಾನು ಸ್ವಲ್ಪ ವಿಜ್ಞಾಪನೆಯನ್ನು ಮಾಡಿಕೊಳ್ಳುವೆನು ದಯವಿಟ್ಟು ಅದನ್ನು ಲಾಲಿಸು.

೨೦. ತಪೋಧನನೇ, ನನ್ನ ಪತಿಯಾದ ಜಲಂಧರನು ಶಿವನೊಡನೆ ಯುದ್ಧ ಮಾಡಲು ಹೋಗಿರುವನು. ಎಲೈ ಪ್ರಭುವೇ, ಆತನು ಯುದ್ಧದಲ್ಲಿ ಹೇಗಿರುವನು ? ಅದನ್ನು ನನಗೆ ತಿಳಿಸು ಎಂದಳು.

೨೧. ಆ ಮುನಿಯು ಅವಳಾಡಿದ ಮಾತನ್ನು ಕೇಳಿ, ಕುಶಲತೆಯಿಂದ ತನ್ನ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳಲೋಸುಗ ಕೃತ್ರಿಮವಾದ ಮೌನವನ್ನು ವಹಿಸಿ, ದಯೆಯುಳ್ಳವನಂತೆ, ಮೇಲೆ ನೋಡಿದನು.

ತಾವತ್ಕಪೀಶಾವಾಯಾತೌ ತಂ ಪ್ರಣಮ್ಯಾಗ್ರತಃ ಸ್ಥಿತೌ ।
ತತಸ್ತದ್ಭ್ರೂಲತಾಸಂಜ್ಞಾನಿಯುಕ್ತೌ ಗಗನಂ ಗತೌ ॥ ೨೨ ॥

ನೀತ್ವಾ ಕ್ಷಣಾರ್ಧಮಾಗತ್ಯ ಪುನಸ್ತಸ್ಯಾಗ್ರತಃ ಸ್ಥಿತೌ ।
ತಸ್ಯೈವ ಕಂ ಕಬಂಧಂ ಚ ಹಸ್ತಾವಾಸ್ತಾಂ ಮುನೀಶ್ವರ ॥ ೨೩ ॥

ಶಿರಃ ಕಬಂಧಂ ಹಸ್ತೌ ತೌ ದೃಷ್ಟ್ವಾಬ್ಧಿತನಯಸ್ಯ ಸಾ ।
ಪಪಾತ ಮೂರ್ಚ್ಛಿತಾ ಭೂಮೌ ಭರ್ತೃವ್ಯಸನದುಃಖಿತಾ ॥ ೨೪ ॥

॥ ವೃಂದೋವಾಚ ॥

ಯಃ ಪುರಾ ಸುಖಸಂವಾದೈರ್ವಿನೋದಯಸಿ ಮಾಂ ಪ್ರಭೋ ।
ಸ ಕಥಂ ನ ವದಸ್ಯದ್ಯ ವಲ್ಲಭಾಂ ಮಾಮನಾಗಸಂ ॥ ೨೫ ॥

---

೨೨. ಅಷ್ಟರಲ್ಲಿ ಇಬ್ಬರು ಕಪೀಶ್ವರರು ಬಂದು ಆತನಿಗೆ ನಮಸ್ಕರಿಸಿ ಮುಂದೆ ನಿಂತುಕೊಂಡರು. ಆಮೇಲೆ, ಆತನ ಹುಬ್ಬಿನ ಸಂಜ್ಞೆಯಿಂದ ಅಪ್ಪಣೆಯನ್ನು ಪಡೆದು ಆಕಾಶಕ್ಕೆ ನೆಗೆದು ಹೊರಟುಹೋದರು

೨೩. ಅದೇ ಕ್ಷಣಕಾಲ ಮಾತ್ರ ಬಿಟ್ಟು ಅವರೀರ್ವರೂ, ಆ ಜಲಂಧರನ ಶಿರಸ್ಸನ್ನೂ, ರುಂಡವಿಲ್ಲದ ಮುಂಡವನ್ನೂ, ಕೈಗಳನ್ನೂ ತೆಗೆದುಕೊಂಡು, ಆ ಮುನೀಂದ್ರನ ಮುಂದೆ ನಿಂತುಕೊಂಡರು.

೨೪. ಆ ವೃಂದೆಯು ಜಲಂಧರನ ಶಿರಸ್ಸನ್ನೂ, ಮುಂಡವನ್ನೂ, ಕೈಗಳನ್ನೂ ನೋಡಿ ಪತಿವಿಯೋಗದುಃಖದಿಂದ ಮೂರ್ಛಿತಳಾಗಿ ನೆಲದಮೇಲೆ ಬಿದ್ದುಬಿಟ್ಟಳು.

೨೫. ಬಳಿಕ ವೃಂದೆಯು ಎಚ್ಚೆತ್ತು ಈರೀತಿ ಪ್ರಲಾಪಿಸತೊಡಗಿಳು. ಓ ನಾಥ, ಹಿಂದೆ ನೀನು ಸುಖಕರವಾದ ಸಂಭಾಷಣೆಗಳಿಂದ ನನ್ನನ್ನು ಸಂತೋಷಪಡಿಸುತ್ತಿದ್ದೆಯಲ್ಲವೇ? ಅಂತಹ ನೀನು, ನಿನಗೆ ಅತಿ ಪ್ರೇಮಪಾತ್ರಳಾದ, ಏನೊಂದು ತಪ್ಪನ್ನೂ ಮಾಡದ ನನ್ನೊಡನೆ ಏಕೆ ಮಾತನಾಡದೆ ಇರುವೆ ?

ಯೇನ ದೇವಾಸ್ಸಗಂಧರ್ವಾ ನಿರ್ಜಿತಾ ವಿಷ್ಣುನಾ ಸಹ ।
ಸ ಕಥಂ ತಾಪಸೇನಾದ್ಯ ತ್ರೈಲೋಕ್ಯವಿಜಯೀ ಹತಃ ॥ ೨೬ ॥

ನಾಂಗೀಕೃತಂ ಹಿ ಮೇ ವಾಕ್ಯಂ ರುದ್ರತತ್ತ್ವಮಜಾನತಾ ।
ಪರಂ ಬ್ರಹ್ಮ ಶಿವಶ್ಚೇತಿ ವದಂತ್ಯಾ ದೈತ್ಯಸತ್ತಮ ॥ ೨೭ ॥

ತತಸ್ತ್ವಂ ಹಿ ಮಯಾ ಜ್ಞಾತಸ್ತವ ಸೇವಾಪ್ರಭಾವತಃ ।
ಗರ್ವಿತೇನ ತ್ವಯಾ ನೈವ ಕುಸಂಗವಶಗೇನ ಹಿ ॥ ೨೮ ॥

ಇತ್ಥಂ ಪ್ರಭಾಷ್ಯ ಬಹುಧಾ ಸ್ವಧರ್ಮಸ್ಥಾ ಚ ತತ್ಪ್ರಿಯಾ ।
ವಿಲಲಾಪ ವಿಚಿತ್ರಂ ಸಾ ಹೃದಯೇನ ವಿದೂಯತಾ ॥ ೨೯ ॥

ತತಸ್ಸಾ ಧೈರ್ಯಮಾಲಂಬ್ಯ ದುಃಖೋಚ್ಛ್ವಾಸಾನ್ವಿಮುಂಚತೀ ।
ಉವಾಚ ಮುನಿವರ್ಯಂ ತಂ ಸುಪ್ರಣಮ್ಯ ಕೃತಾಂಜಲಿಃ ॥ ೩೦ ॥

---

೨೬. ಹಿಂದೆ ದೇವತೆಗಳೂ, ಗಂಧರ್ವರೂ, ಶ್ರೀಹರಿಯೂ, ಯಾರಿಂದ ಪರಾಜಿತರಾದರೋ ಅಂತಹ ತ್ರಿಲೋಕವಿಜಯಿಯಾದ ನೀನು ಇಂದು ಬರಿಯ ತಾಪಸನೊಬ್ಬನಿಂದ ಹೇಗೆ ಮರಣಕ್ಕೆ ಈಡಾದೆ?

೨೭. ಓ ದೈತ್ಯಾಗ್ರಣೀ, ಆ ಶಿವನ ಸಾಮರ್ಥ್ಯವನ್ನು ಅರಿಯದ ನೀನು ಆ ಶಿವನೇ ಪರಬ್ರಹ್ಮವೆಂದು ತಿಳಿ ಎಂದು ನಾನೆಷ್ಟು ಬಗೆಯಾಗಿ ಹೇಳಿದರೂ ಆ ಮಾತನ್ನು ಒಪ್ಪದೆಹೋದೆಯಲ್ಲವೇ ?

೨೮. ನಿನ್ನನ್ನು ಸೇವಿಸಿದುದರಿಂದ ಉಂಟಾದ ಮಹಿಮೆಯಿಂದಲೇ ನಿನ್ನನ್ನು ನಾನು ಚೆನ್ನಾಗಿ ಅರಿತೆನು. ಕೆಟ್ಟವರ ಸಹವಾಸಮಾಡಿ ಗರ್ವದಿಂದ ಮೆರೆದ ನೀನು ಮಾತ್ರ ನನ್ನನ್ನೇ ಅರಿತುಕೊಳ್ಳಲಿಲ್ಲ.

೨೯. ಈರೀತಿಯಾಗಿ ಶೀಲವತಿಯಾದ ವೃಂದೆಯು ಪರಿಪರಿಯಾಗಿ ಮಾತನಾಡಿಸುತ್ತಾ ಕುದಿಯುತ್ತಿರುವ ಹೃದಯದಿಂದ ಬಹುವಾಗಿ ರೋದಿಸಿದಳು.

೩೦. ಬಳಿಕ ಆ ವೃಂದೆಯು ಸ್ವಲ್ಪಮಟ್ಟಿಗೆ ಧೈರ್ಯವನ್ನು ತಳೆದು, ದುಃಖದಿಂದ ನಿಟ್ಟುಸುರು ಬಿಡುತ್ತಾ, ಆ ಮುನೀಂದ್ರನಿಗೆ ನಮಸ್ಕರಿಸಿ ಕೈಮುಗಿದುಕೊಂಡು,

॥ ವೃದೋವಾಚ ॥

ಕೃಪಾನಿಧೇ ಮುನಿಶ್ರೇಷ್ಠ ಪರೋಪಕರಣಾದರರ ।
ಮಯಿ ಕೃತ್ವಾ ಕೃಪಾಂ ಸಾಧೋ ಜೀವಯೈನಂ ಮಮ ಪ್ರಭುಂ ॥ ೩೧ ॥

ಯತ್ತ್ವಮಸ್ಯ ಪುನಶ್ಶಕ್ತೋ ಜೀವನಾಯ ಮತೋ ಮಮ ।
ಅತಸ್ಸಂಜೀವಯೈನಂ ಮೇ ಪ್ರಾಣನಾಥಂ ಮುನೀಶ್ವರ ॥ ೩೨ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ದೈತ್ಯಪತ್ನೀ ಸಾ ಪಾತಿವ್ರತ್ಯಪರಾಯಣಾ ।
ಪಾದಯೋಃ ಪತಿತಾ ತಸ್ಯ ದುಃಖಶ್ವಾಸಾನ್ವಿಮುಂಚತೀ ॥ ೩೩ ॥

॥ ಮುನಿರುವಾಚ ॥

ನಾಯಂ ಜೀವಯಿತುಂ ಶಕ್ಯೋ ರುದ್ರೇಣ ನಿಹತೋ ಯುಧಿ ।
ರುದ್ರೇಣ ನಿಹತಾ ಯುದ್ಧೇ ನ ಜೀವಂತಿ ಕದಾಚನ ॥ ೩೪ ॥

---

೩೧. ಎಲೈ ಕೃಪಾಳುವಾದ ಮುನೀಂದ್ರನೇ, ನೀನು ಇತರರಿಗೆ ಉಪಕಾರ ಮಾಡುವುದರಲ್ಲೇ ಆಸಕ್ತನಾಗಿರುವವನು, ಓ ಸತ್ಪುರುಷ, ನನ್ನಲ್ಲಿ ಕೃಪೆಯಿಟ್ಟು, ನನ್ನ ಸ್ವಾಮಿಯಾದ ಈತನನ್ನು ಬದುಕಿಸು.

೩೨. ನೀನು ಈತನನ್ನು ಬದುಕಿಸುವ ಸಾಮರ್ಥ್ಯವನ್ನು ಪಡೆದಿರುವೆಯೆಂದು ನನಗೆ ದೃಢವಾದ ನಂಬುಗೆಯಿದೆ. ಆದುದರಿಂದ ಓ ಮುನೀಂದ್ರ, ನನ್ನೀ ಪ್ರಾಣ ನಾಥನನ್ನು ಬದುಕಿಸು ಎಂದು ಪ್ರಾರ್ಥಿಸಿದಳು.

೩೩. ಓ ವ್ಯಾಸ, ಹೀಗೆಂಬುದಾಗಿ ಪತಿಯೇ ದೈವವೆಂದು ನಂಬಿದ್ದ ಆ ಜಲಂಧರನ ಪತ್ನಿಯು, ದುಃಖದಿಂದ ನಿಟ್ಟುಸಿರನ್ನು ಬಿಡುತ್ತಾ ಆ ಮುನಿಯ ಕಾಲ್ಗಳಿಗೆರಗಿದಳು.

೩೪. ಮುನಿಯಿಂತೆಂದನು :—ಯುದ್ಧದಲ್ಲಿ ಶಿವನಿಂದ ಕೊಲ್ಲಲ್ಪಟ್ಟ ಈ ನಿನ್ನ ಪತಿಯನ್ನು ಬದುಕಿಸಲು ಸಾಧ್ಯವಿಲ್ಲ. ಶಿವನಿಂದ ಹತರಾದವರು ಎಂದೆಂದಿಗೂ ಬದುಕಲಾರರು.

ತಥಾಪಿ ಕೃಪಯಾವಿಷ್ಟ ಏನಂ ಸಂಜೀವಯಾಮ್ಯಹಂ ।
ರಕ್ಷ್ಯಾಶ್ಶರಣಗಾಶ್ಚೇತಿ ಜಾನನ್ಧರ್ಮಂ ಸನಾತನಂ ॥ ೩೫ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಸ ಮುನಿಸ್ತಸ್ಯ ಜೀವಯಿತ್ವಾ ಪತಿಂ ಮುನೇ ।
ಅಂತರ್ದಧೇ ತತೋ ವಿಷ್ಣುಸ್ಸರ್ವಮಾಯಾವಿನಾಂ ವರಃ ॥ ೩೬ ॥

ಮೃತಂ ಸ ಜೀವಿತಸ್ತೇನೋತ್ಥಿತಃ ಸಾಗರನಂದನಃ ।
ವೃಂದಾಮಾಲಿಂಗ್ಯ ತದ್ವಕ್ತ್ರಂ ಚುಚುಂಬ ಪ್ರೀತಮಾನಸಃ ॥ ೩೭ ॥

ಅಥ ವೃಂದಾಪಿ ಭರ್ತಾರಂ ದೃಷ್ಟ್ವಾ ಹರ್ಷಿತಮಾನಸಾ ।
ಜಹೌ ಶೋಕಂ ಚ ನಿಖಿಲಂ ಸ್ವಪ್ನವದ್ಧೃದ್ಯಮನ್ಯತ ॥ ೩೮ ॥

ಅಥ ಪ್ರಸನ್ನಹೃದಯಾ ಸಾ ಹಿ ಸಂಜಾತಹೃಚ್ಛಯಾ ।
ರೇಮೇ ತದ್ವನಮಧ್ಯಸ್ಥಾ ತದ್ಯುಕ್ತಾ ಬಹುವಾಸರಾನ್ ॥ ೩೯ ॥

---

೩೫. ಆದರೂ ನಿನ್ನಲ್ಲಿ ಕನಿಕರವುಂಟಾಗುತ್ತಿರುವುದರಿಂದಲೂ, ಶರಣಾಗತರಾದವರನ್ನು ರಕ್ಷಿಸಬೇಕೆಂಬ ಸನಾತನವಾದ ಧರ್ಮವನ್ನು ಅರಿತಿರುವುದರಿಂದಲೂ ಇವನನ್ನು ಬದುಕಿಸುವೆನು.

೩೬. ಈರೀತಿ ನಾನಾವಿಧವಾದ ಮಾಯೆಗಳಲ್ಲಿ ನಿಷ್ಣಾತನಾದ ಆ ಮುನಿವೇಷದ ವಿಷ್ಣುವು ಆ ವೃಂದೆಗೆ ತಿಳಿಸಿ ಅವಳ ಪತಿಯನ್ನು ಬುದುಕಿಸಿ ಕಣ್ಮರೆಯಾದನು.

೩೭. ಒಡನೆಯೇ ಜಲಂಧರನು ಬದುಕಿ ಮೇಲಕ್ಕೆದ್ದು ಆ ವೃಂದೆಯನ್ನು ಬರಸೆಳೆದು ಅಪ್ಪಿಕೊಂಡು, ಬಹಳ ಸಂತೋಷದಿಂದ ಅವಳ ಮುಖವನ್ನು ಮುದ್ದಿಸಿದನು.

೩೮. ಬಳಿಕ ವೃಂದೆಯೂ ಸಹ ತನ್ನ ಪ್ರಿಯನನ್ನು ಕಂಡು ಬಹಳ ಸುಪ್ರೀತಳಾಗಿ ತನ್ನ ದುಃಖವನ್ನು ತೊರೆದುಬಿಟ್ಟಳಲ್ಲದೆ ಅದೆಲ್ಲವನ್ನೂ ಸ್ವಪ್ನದಂತೆ ಭಾವಿಸಿದಳು.

೩೯. ಬಳಿಕ ಆ ವೃಂದೆಯು ಮದನವಿಕಾರಗಳಿಗೆ ಸಿಲುಕಿ ಬಹು ಸಂತೋಷದಿಂದ ಆ ಕಪಟ ಜಲಂಧರನೊಡನೆ ಆ ಉದ್ಯಾನದಲ್ಲಿ ಬಹುದಿವಸಗಳಕಾಲ ವಿಹರಿಸುತ್ತಿದ್ದಳು.

ಕದಾಚಿತ್ಸ್ವರಸಸ್ಯಾಂತೇ ದೃಷ್ಟ್ವಾ ವಿಷ್ಣುಂ ಕಪೋನ ಹಿ ।
ನಿರ್ಭರ್ತ್ಸ್ಯ ಕ್ರೋಧಸಂಯುಕ್ತಾ ವೃಂದಾ ವಚನಮಬ್ರವೀತ್ ॥ ೪೦ ॥

॥ ವೃಂದೋವಾಚ ॥

ಧಿಕ್ ತದೇವಂ ಹರೇಃ ಶೀಲಂ ಪರದಾರಾಭಿಗಾಮಿನಃ ।
ಜ್ಞಾತೋಽಸಿ ತ್ವಂ ಮಯಾ ಸಮ್ಯಗ್ಮಾಯಿಪ್ರತ್ಯಕ್ಷತಾಪಸಃ ॥ ೪೧ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಕ್ರೋಧಮಾಪನ್ನಾ ದರ್ಶಯಂತೀ ಸ್ವತೇಜಸಂ ।
ಶಶಾಪ ಕೇಶವಂ ವ್ಯಾಸ ಪಾತಿವ್ರತ್ಯರತಾ ಚ ಸಾ ॥ ೪೨ ॥

ರೇ ಮಹಾಧಮ ದೈತ್ಯಾರೇ ಪರಧರ್ಮವಿದೂಷಕ ।
ಗೃಹ್ಣೀಷ್ವ ಶಠ ಮದ್ದತ್ತಂ ಶಾಪಂ ಸರ್ವವಿಷೋಲ್ಬಣಂ ॥ ೪೩ ॥

ಯೌ ತ್ವಯಾ ಮಾಯಯಾ ಖ್ಯಾತೌ ಸ್ವಕೀಯೌ ದರ್ಶಿತೌ ಮಮ ।
ತಾವೈವ ರಾಕ್ಷಸೌ ಭೂತ್ವಾ ಭಾರ್ಯಾಂ ತವ ಹರಿಷ್ಯತಃ ॥ ೪೪ ॥

---

೪೦. ಒಂದಾನೊಂದುದಿನ ವೃಂದೆಯು ಆತನೊಡನೆ ವಿಲಾಸದಲ್ಲಿದ್ದು ಕೊನೆಯಲ್ಲಿ ಆ ಕಪಟ ಜಲಂಧರನು ವಿಷ್ಣುವೆಂದು ಅರಿತು ಪರಮಕ್ರೋಧಾನ್ವಿತಳಾಗಿ ಅವನನ್ನು ನಿಂದಿಸುತ್ತಾ ಇಂತು ನುಡಿದಳು.

೪೧. ಎಲೈ ವಿಷ್ಣುವೇ, ಮತ್ತೊಬ್ಬರ ಮಡದಿಯನ್ನು ಕೆಡಿಸುವ ನಿನ್ನ ಕೆಟ್ಟ ಚಾಳಿಯನ್ನು ಎಷ್ಟು ಧಿಕ್ಕರಿಸಿದರೂ ಸಾಲದು. ನಿನ್ನನ್ನು ನಾನು ಚೆನ್ನಾಗಿ ಅರಿತೆನು. ನೀನೇ ಮೋಸಗಾರನಾದ ಕಪಟತಪಸ್ವಿಯಲ್ಲವೇ ಎಂದಳು.

೪೨. ಓ ವ್ಯಾಸ, ಈರೀತಿಯಾಗಿ ಮಹಾಪತಿವ್ರತೆಯಾದ ಆ ವೃಂದೆಯು ಬಹು ಕೋಪವನ್ನು ತಾಳಿ ತನ್ನ ಮಹಿಮೆಯನ್ನು ತೋರ್ಪಡಿಸುತ್ತಾ ಶ್ರೀಹರಿಯನ್ನು ಶಪಿಸಿದಳು.

೪೩. ಎಲೈ ದೈತ್ಯವೈರಿಯೇ, ನೀನು ಮತ್ತೊಬ್ಬರ ಧರ್ಮವನ್ನು ಕೆಡಿಸುವುದೇ ಸ್ವಭಾವವಾಗಿ ಉಳ್ಳ ಮಹಾನೀಚನು. ನಿನಗೆ ನಾಚಿಕೆಯಿಲ್ಲ. ಈಗ ನಾನು ವಿಷಗಳಿಗಿಂತಲೂ ಅತಿ ಕ್ರೂರವಾದ ಶಾಪವನ್ನು ಕೊಡುವೆನು.

೪೪. ನೀನು ಮಾಯೆಯಿಂದ ಯಾವ ಇಬ್ಬರನ್ನು ನಿರ್ಮಿಸಿ ನನಗೆ ತೋರಿಸಿದೆಯೋ ಅವರೀರ್ವರೇ ರಾಕ್ಷಸರಾಗಿ ಹುಟ್ಟಿ ನಿನ್ನ ಹೆಂಡತಿಯನ್ನು ಅಪಹರಿಸಲಿ.

ತ್ವಂ ಚಾಪಿ ಭಾರ್ಯಾದುಃಖಾರ್ತೋ ವನೇ ಕಪಿಸಹಾಯವಾನ್ ।
ಭ್ರಮ ಸರ್ಪೇಶ್ವರೇಣಾಯಂ ಯಸ್ತೇ ಶಿಷ್ಯತ್ವಮಾಗತಃ ॥ ೪೫ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಸಾ ತದಾ ವೃಂದಾ ಪ್ರಾವಿಶದ್ಧವ್ಯವಾಹನಂ ।
ವಿಷ್ಣುನಾ ವಾರ್ಯಮಾಣಾಪಿ ತಸ್ಮಿನ್ಮತಾಸಕ್ತಚೇತಸಾ ॥ ೪೬ ॥

ತಸ್ಮಿನ್ನವಸರೇ ದೇವಾ ಬ್ರಹ್ಮಾದ್ಯಾ ನಿಖಿಲಾ ಮುನೇ ।
ಆಗತಾಃ ಖೇ ಸಮಂ ದಾರೈಃ ಸದ್ಗತಿಂ ವೈ ದಿದೃಕ್ಷವಃ ॥ ೪೭ ॥

ಅಥ ದೈತ್ಯೇಂದ್ರಪತ್ನ್ಯಾಸ್ತು ತಜ್ಜ್ಯೋತಿಃ ಪರಮಂ ಮಹತ್ ।
ಪಶ್ಯತಾಂ ಸರ್ವದೇವಾನಾಮಲೋಕಮಗಮದ್ದ್ರುತಂ ॥ ೪೮ ॥

ಶಿವಾತನೌ ವಿಲೀನಂ ತದ್ವೃಂದಾತೇಜೋ ಬಭೂವ ಹ ।
ಆಸೀಜ್ಜಯಜಯಾರಾವಃ ಸ್ವಸ್ಥಿತಾಮರಪಂಕ್ತಿಷು । ॥ ೪೯ ॥

---

೪೫. ನೀನೂ ಸಹ ಹೆಂಡತಿಯನ್ನು ಕಳೆದುಕೊಂಡು ಅದೇ ದುಃಖದಿಂದಲೇ ಈಗ ವೇಸಗಾರನಾದ ನಿನ್ನ ಶಿಷ್ಯತ್ವವನ್ನು ಪಡೆದಿದ್ದ ಈ ಆದಿಶೇಷನೊಡನೆಯೇ ಕಪಿಗಳ ಜೊತೆಯಲ್ಲಿ ಕಾಡಿನೊಳಗೆ ಅಲೆಯುತ್ತಿರು.

೪೬. ಸನತ್ಕುಮಾರನಿಂತೆಂದನು :—ಈರೀತಿಯಾಗಿ ಆ ವೃಂದೆಯು ಶಾಪವನ್ನಿತ್ತು ತನ್ನ ನಗುವಿಗೆ ಮನಸೋತ ಆ ಶ್ರೀಹರಿಯು ಬೇಡಬೇಡವೆಂದು ತಡೆಯುತ್ತಿದ್ದರೂ ಗಮನಿಸದೆ ಬೆಂಕಿಯಲ್ಲಿ ಧುಮುಕಿಬಿಟ್ಟಳು.

೪೭. ಆ ಸಮಯದಲ್ಲಿ ಆ ವೃಂದೆಯು ಉತ್ತಮವಾದ ಗತಿಯನ್ನು ಹೊಂದುವುದನ್ನು ಕಾಣಲು ಬ್ರಹ್ಮಾದಿ ದೇವತೆಗಳು ತಮ್ಮತಮ್ಮ ಪತ್ನಿಯರೊಡಗೂಡಿ ಆಕಾಶದಲ್ಲಿ ಬಂದು ಸೇರಿದರು.

೪೮. ಬಳಿಕ ಎಲ್ಲ ದೇವತೆಗಳೂ ನೋಡುತ್ತಿರುವಂತೆಯೇ ಆ ದೈತ್ಯೇಶ್ವರನ ಪತ್ನಿಯಾದ ವೃಂದೆಯ ಶರೀರದಿಂದ ಪವಿತ್ರವಾದ ಮಹಾಜ್ಯೋತಿಯೊಂದು ಹೊರಹೊರಟು ಬೇಗನೆ ಶಿವಲೋಕವನ್ನೈದಿತು.

೪೯. ಆ ವೃಂದೆಯ ತೇಜಸ್ಸು ಸರ್ವಮಂಗಳೆಯಾದ ಪಾರ್ವತಿಯ ಶರೀರದಲ್ಲಿ ಐಕ್ಯವನ್ನು ಹೊಂದಿತು. ಆಗ ಆಕಾಶದಲ್ಲಿ ನೆರೆದಿದ್ದ ದೇವತೆಗಳೆಲ್ಲರೂ ಜಯಜಯ ಎಂಬುದಾಗಿ ಧ್ವನಿಮಾಡಿದರು.

ಏವಂ ವೃಂದಾ ಮಹಾರಾಜ್ಞೀ ಕಾಲನೇಮಿಸುತೋತ್ತಮಾ ।
ಪಾತಿವ್ರತ್ಯಪ್ರಭಾವಾಚ್ಚ ಮುಕ್ತಿಂ ಪ್ರಾಪ ಪರಾಂ ಮುನೇ ॥ ೫೦ ॥

ತತೋ ಹರಿಸ್ತಾಮನುಸಂಸ್ಮರನ್ಮುಹು-
ರ್ವೃಂದಾಚಿತಾಭಸ್ಮರಜೋವಗುಂಠಿತಃ ।
ತತ್ರೈವ ತಸ್ಥೌ ಸುರಸಿದ್ಧಸಂಘಕೈಃ
ಪ್ರಬೋಧ್ಯಮಾನೋಽಪಿ ಯಯೌ ನ ಶಾಂತಿಂ ॥ ೫೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರೋಪಾಖ್ಯಾನೇ
ವೃಂದಾಪತಿವ್ರತಭಂಗದೇಹತ್ಯಾಗವರ್ಣನಂ ನಾಮ
ತ್ರಯೋವಿಂಶೋಽಧ್ಯಾಯಃ.

---

೫೦. ಈರೀತಿಯಾಗಿ ಕಾಲನೇಮಿಯ ಮಗಳೂ ಮಹಾರಾಣಿಯೂ ಆದ ವೃಂದೆಯು ತನ್ನ ಪಾತಿವ್ರತ್ಯದ ಮಹಿಮೆಯಿಂದ ಶ್ರೇಷ್ಠವಾದ ಮುಕ್ತಿಯನ್ನು ಹೊಂದಿದಳು.

೫೧. ಬಳಿಕ ಶ್ರೀಹರಿಯು ಆ ವೃಂದೆಯನ್ನೇ ಸ್ಮರಿಸುತ್ತಾ ಅವಳ ಚಿತೆಯ ಭಸ್ಮವನ್ನು ಮೈಗೆಲ್ಲಾ ಬಳಿದುಕೊಂಡು ಅಲ್ಲೇ ಇದ್ದುಬಿಟ್ಟನು. ದೇವತೆಗಳೂ ಸಿದ್ಧರೂ ಎಷ್ಟೆಷ್ಟು ಆತನಿಗೆ ಉಪದೇಶಿಸಿದರೂ ಆತನ ದುಃಖವು ಬೇರೆ ಶಮನವಾಗಲಿಲ್ಲ.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ವೃಂದಾಪಾತಿವ್ರತ್ಯಭಂಗ, ದೇಹತ್ಯಾಗವರ್ಣನವೆಂಬ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಚತುರ್ವಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ವಿಧೇಃ ಶ್ರೇಷ್ಠಸುತ ಪ್ರಾಜ್ಞ ಕಥೇಯಂ ಶ್ರಾವಿತಾದ್ಭುತಾ ।
ತತಶ್ಚ ಕಿಮಭೂದಾಜೌ ಕಥಂ ದೈತ್ಯೋ ಹತೋ ವದ ॥ ೧ ॥

॥ ಸನತ್ಕುಮಾರ ಉವಾಚ ॥

ಅದೃಶ್ಯ ಗಿರಿಜಾಂ ತತ್ರ ದೈತ್ಯೇಂದ್ರೇ ರಣಮಾಗತೇ ।
ಗಾಂಧರ್ವೇ ಚ ವಿಲೀನೇ ಹಿ ಚೈತನ್ಯೋಽಭೂದ್ವೃಷಧ್ವಜಃ ॥ ೨ ॥

---

### ಇಪ್ಪತ್ತನಾಲ್ಕನೆಯ ಅಧ್ಯಾಯವು.

೧. ಬಳಿಕ ವ್ಯಾಸಮಹರ್ಷಿಯು ಬ್ರಹ್ಮಮಾನಸಪುತ್ರನಾದ ಸನತ್ಕುಮಾರನನ್ನು ಕುರಿತು, ಎಲೈ ಸರ್ವಜ್ಞನೇ, ಅದ್ಭುತವಾದ ಈ ಕಥೆಯನ್ನು ಕೇಳಿಯಾಯಿತು. ಅನಂತರ ಯುದ್ಧದಲ್ಲೇನು ನಡೆಯಿತು ? ಆ ದೈತ್ಯನು ಎಂತು ಮಡಿದನು ? ಎಂದು ಪ್ರಶ್ನಿಸಲು, ಸನತ್ಕುಮಾರನಿಂತೆಂದನು.

೨. ಓ ವ್ಯಾಸ, ಆ ದೈತ್ಯರಾಜನಾದ ಜಲಂಧರನು ಗೌರಿಯನ್ನು ಕಾಣದೆ, ಮರಳಿ ಯುದ್ಧಕ್ಕೆ ಹಿಂದಿರುಗಿದನು. ಅಷ್ಟರಲ್ಲಿ ಗಾಂಧರ್ವಾಸ್ತ್ರದ ಪ್ರಭಾವವು ಅಡಗುತ್ತಾ ಬರಲು ಆಗ ಶಿವನಿಗೆ ಎಚ್ಚರವಾಗುತ್ತ ಬಂದಿತು.

ಅಂತರ್ಧಾನಗತಾಂ ಮಾಯಾಂ ದೃಷ್ಟ್ವಾ ಬುದ್ಧೋ ಹಿ ಶಂಕರಃ ।
ಚುಕ್ರೋಧಾತೀವ ಸಂಹಾರೀ ಲೌಕಿಕೀಂ ಗತಿಮಾಶ್ರಿತಃ ॥ ೩ ॥

ತತಃ ಶಿವೋ ವಿಸ್ಮಿತಮಾನಸಃ ಪುನ-
ರ್ಜಗಾಮ ಯುದ್ಧಾಯ ಜಲಂಧರಂ ರುಷಾ ।
ಸ ಚಾಪಿ ದೈತ್ಯಃ ಪುನರಾಗತಂ ಶಿವಂ
ದೃಷ್ಟ್ವಾ ಶರೌಘೈಸ್ಸಮವಾಕಿರದ್ರಣೇ ॥ ೪ ॥

ಕ್ಷಿಪ್ತಂ ಪ್ರಭುಸ್ತಂ ಶರಜಾಲಮುಗ್ರಂ
ಜಲಂಧರೇಣಾತಿಬಲೀಯಸಾ ಹರಃ ।
ದ್ರುತಂ ಪ್ರಚಿಚ್ಛೇದ ಶರೈರ್ವರೈರ್ನಿಜೈ-
ರ್ನ ಚಿತ್ರಮತ್ರ ತ್ರಿಭವಪ್ರಹಂತುಃ ॥ ೫ ॥

ತತೋ ಜಲಂಧರೋ ದೃಷ್ಟ್ವಾ ರುದ್ರಮದ್ಭುತವಿಕ್ರಮಂ ।
ಚಕಾರ ಮಾಯಯಾ ಗೌರೀಂ ತ್ರ್ಯಂಬಕಂ ಮೋಹಯನ್ನಿವ ॥ ೬ ॥

---

೩. ಆ ಮಾಯೆಯು ಕಣ್ಮರೆಯಾಗಿ ಹೋದುದನ್ನು ಕಂಡು, ಸಂಹಾರ ಮೂರ್ತಿಯಾದ ಶಿವನು, ಸಂಪೂರ್ಣವಾಗಿ ಎಚ್ಚೆತ್ತು ಸಾಧಾರಣ ಮನುಜರಂತೆ ಬಹು ಕೋಪವನ್ನು ತಾಳಿದನು.

೪. ಬಳಿಕ ಶಿವನು ಮನಸ್ಸಿನಲ್ಲಿ ಆಶ್ಚರ್ಯಪಡುತ್ತಾ ಕೋಪದಿಂದ ಜಲಂಧರನ ಮೇಲೆ ಯುದ್ಧಕ್ಕೆ ಹೊರಟನು. ಆ ದೈತ್ಯನೂ ಶಿವನು ಮರಳಿ ಯುದ್ಧಕ್ಕೆ ಬಂದು ದನ್ನು ಕಂಡು, ಬಾಣಗಳ ಮಳೆಯನ್ನು ಸುರಿಸಿದನು.

೫. ಮಹಾಬಲಾಢ್ಯನಾದ ಜಲಂಧರನು ಬಿಟ್ಟ ಆ ಬಾಣಸಮೂಹಗಳನ್ನು, ಶ್ರೇಷ್ಠವಾದ ತನ್ನ ಬಾಣಗಳಿಂದ ಶಿವನು ಜಾಗ್ರತೆಯಾಗಿ ಕತ್ತರಿಸಿಬಿಟ್ಟನು. ತ್ರಿಪುರ ಸಂಹಾರಿಯಾದ ಶಿವನಿಗೆ ಇದೊಂದು ಲೆಕ್ಕವೇ? ಆತನಿಗೆ ಇದೆಂದಿಗೂ ಆಶ್ಚರ್ಯವಲ್ಲ.

೬. ಬಳಿಕ ಶಿವನು ಅತ್ಯದ್ಭುತ ಪರಾಕ್ರಮಶಾಲಿಯೆಂದು ಜಲಂಧರನು ಮನಗಂಡು, ಆ ಮುಕ್ಕಣ್ಣನನ್ನು ಮಂಕುಹಿಡಿಸಲು ತನ್ನ ಮಾಯೆಯಿಂದ ಪಾರ್ವತಿ ಯನ್ನು ಸೃಷ್ಟಿಸಿದನು.

ರಥೋಪರಿ ಗತಾಂ ಬದ್ಧಾಂ ರುದಂತೀಂ ಪಾರ್ವತೀಂ ಶಿವಃ ।
ನಿಶುಂಭಶುಂಭದೈತ್ಯೈಶ್ಚ ವಧ್ಯಮಾನಾಂ ದದರ್ಶ ಸಃ ॥ ೭ ॥

ಗೌರೀಂ ತಥಾವಿಧಾಂ ದೃಷ್ಟ್ವಾ ಲೌಕಿಕೀಂ ದರ್ಶಯನ್ಗತಿಂ ।
ಬಭೂವ ಪ್ರಾಕೃತ ಇವ ಶಿವೋಽಪ್ಯುದ್ವಿಗ್ನಮಾನಸಃ ॥ ೮ ॥

ಅವಾಙ್ಮುಖಃ ಸ್ಥಿತಸ್ತೂಷ್ಣೀಂ ನಾನಾಲೀಲಾವಿಶಾರದಃ ।
ಶಿಥಿಲಾಂಗೋ ವಿಷಣ್ಣಾತ್ಮಾ ವಿಸೃಜ್ಯ ಸ್ವಪರಾಕ್ರಮಂ ॥ ೯ ॥

ತತೋ ಜಲಂಧರೋ ವೇಗಾತ್ತ್ರಿಭಿರ್ನಿರ್ವ್ಯಾಧ ಸಾಯಕೈಃ ।
ಆಪುಂಖಮಗ್ನೈಸ್ತಂ ರುದ್ರಂ ಶಿರಸ್ಯುರಸಿ ಚೋದರೇ ॥ ೧೦ ॥

ತತೋ ರುದ್ರೋ ಮಹಾಲೀಲೋ ಜ್ಞಾನತತ್ತ್ವಃ ಕ್ಷಣಾತ್ಪ್ರಭುಃ ।
ರೌದ್ರರೂಪಧರೋ ಜಾತೋ ಜ್ವಾಲಾಮಾಲಾತಿಭೀಷಣಃ ॥ ೧೧ ॥

---

೭. ಆ ಮಾಯಾಪಾರ್ವತಿಯನ್ನು ರಥದ ಮೇಲಕ್ಕೆ ಸೆಳೆತಂದು, (ಕಂಭಕ್ಕೆ) ಕಟ್ಟಿಹಾಕಿ ಅವಳು ರೋದಿಸುತ್ತಿದ್ದರೂ ಬಿಡದೆ, ನಿಶುಂಭಶುಂಭ ದೈತ್ಯರು ಕೊಲ್ಲುತ್ತಿರುವುದನ್ನು ಶಿವನು ಕಂಡನು.

೮. ಈರೀತಿ ತನ್ನ ಪ್ರೀತಿಯ ಮಡದಿಯಾದ ಗೌರಿಯು ಸಾವಿಗೀಡಾಗುತ್ತಿರುವುದನ್ನು ಕಂಡು, ಆ ಜ್ಞಾನಿಯಾದ ಶಿವನೂ ಕೂಡ, ಜನಸಾಮಾನ್ಯರ ಸ್ಥಿತಿಯನ್ನು ವ್ಯಕ್ತಪಡಿಸುತ್ತಾ, ಪ್ರಾಕೃತಮನುಷ್ಯನಂತೆ ಬಹು ಉದ್ವೇಗದಿಂದ ವ್ಯಾಕುಲಗೊಂಡನು.

೯. ನಾನಾವಿಧವಾದ ಲೀಲೆಗಳನ್ನು ತೋರುವುದರಲ್ಲಿ ಮಹಾನಿಪುಣನಾದ ಆ ಶಿವನು, ವಿಷಾದವು ಮನಸ್ಸನ್ನಾವರಿಸಲು, ಕೈಕಾಲುಗಳು ಕುಸಿದುಹೋದಂತಾಗಿ, ತನ್ನ ಪರಾಕ್ರಮವನ್ನು ಮರೆತು, ತಲೆತಗ್ಗಿಸಿ ಸುಮ್ಮನೆ ನಿಂತುಬಿಟ್ಟನು.

೧೦. ಬಳಿಕ ಜಲಂಧರನು ಮೂರು ಬಾಣಗಳನ್ನು ತೆಗೆದುಕೊಂಡು, ಅವು ಗರಿಯವರೆಗೂ ನೆಡುವಂತೆ, ಶಿವನ ಶಿರಸ್ಸಿನಲ್ಲೂ, ಎದೆಯಲ್ಲೂ, ಹೊಟ್ಟೆಯಲ್ಲೂ ಮಹಾವೇಗದಿಂದ ಪ್ರಹರಿಸಿದನು.

೧೧. ಜ್ಞಾನಸ್ವರೂಪನಾದ ಆ ರುದ್ರನು ಕ್ಷಣಮಾತ್ರದಲ್ಲೇ ತನ್ನ ಮೈಯಿಂದ ಜ್ವಾಲೆಗಳು ಸಾಲಾಗಿ ಏಳುತ್ತಿರಲು, ಮಹಾಭಯಂಕರವಾದ ವಿಕಾರರೂಪವನ್ನು ಧರಿಸಿನಿಂತನು.

ತಸ್ಯಾತೀವ ಮಹಾರೌದ್ರರೂಪಂ ದೃಷ್ಟ್ವಾ ಮಹಾಸುರಾಃ ।
ನ ಶೇಕುಃ ಪ್ರಮುಖೇ ಸ್ಥಾತುಂ ಭೇಜಿರೇ ತೇ ದಿಶೋ ದಶ ॥ ೧೨ ॥

ನಿಶುಂಭಶುಂಭಾವಪಿ ಯೌ ವಿಖ್ಯಾತೌ ವೀರಸತ್ತಮೌ ।
ಅಪಿ ತೌ ಶೇಕತುರ್ನೈವ ರಣೇ ಸ್ಥಾತುಂ ಮುನೀಶ್ವರ ॥ ೧೩ ॥

ಜಲಂಧರಕೃತಾ ಮಾಯಾಂತರ್ಹಿತಾಭೂಚ್ಚ ತತ್ಕ್ಷಣಂ ।
ಹಾಹಾಕಾರೋ ಮಹಾನಾಸೀತ್ಸಂಗ್ರಾಮೇ ಸರ್ವತೋಮುಖೇ ॥ ೧೪ ॥

ತತಶ್ಶಾಪಂ ದದೌ ರುದ್ರಸ್ತಯೋಃ ಶುಂಭನಿಶುಂಭಯೋಃ ।
ಪಲಾಯನಮಾನೌ ತೌ ದೃಷ್ಟ್ವಾ ಧಿಕ್ಕೃತ್ಯ ಕ್ರೋಧಸಂಯುತಃ ॥ ೧೫ ॥

॥ ರುದ್ರ ಉವಾಚ ॥

ಯುವಾಂ ದುಷ್ಟಾವತಿಖಲಾವಪರಾಧಕರೌ ಮಮ ।
ಪಾರ್ವತೀದಂಡದಾತಾರೌ ರಣಾದಸ್ಮಾತ್ಪರಾಙ್ಮುಖೌ ॥ ೧೬ ॥

---

೧೨. ಆ ಶಿವನು ತಾಳಿದ ಘೋರಸ್ವರೂಪವನ್ನು ನೋಡಿದೊಡನೆಯೇ ಆ ದೈತ್ಯರೆಲ್ಲರೂ, ಅವನೆದುರಿಗೆ ನಿಲ್ಲಲಾರದೆ ದಿಕ್ಕುದಿಕ್ಕಿಗೆ ಓಡಿಹೋದರು.

೧೩. ಓ ಮುನೀಂದ್ರ, ಮಹಾವೀರರೆಂದು ಹೆಸರಾಂತ ಶುಂಭನಿಶುಂಭರೆಂಬ ಆ ಈರ್ವರು ದೈತ್ಯರೂ ಸಹ ಅವನೆದುರು ಯುದ್ಧದಲ್ಲಿ ನಿಲ್ಲಲಾರದೆ ಹೋದರು.

೧೪. ಕ್ಷಣಮಾತ್ರದಲ್ಲಿಯೇ, ಜಲಂಧರನು ಬೀಸಿದ್ದ ಮಾಯಾಜಾಲವೂ ಕಣ್ಮರೆಯಾಗಿಹೋಯಿತು. ಆಗ ಯುದ್ಧದಲ್ಲಿ ಎಲ್ಲೆಲ್ಲಿ ನೋಡಿದರೂ ಹಾಹಾಕಾರವು ಮೊದಲಾಯಿತು.

೧೫. ಬಳಿಕ ಶುಂಭ ನಿಶುಂಭ ದೈತ್ಯರು ಓಡಿಹೋಗುತ್ತಿರುವುದನ್ನು ಕಂಡು ಕೋಪೋದ್ದೀಪಿತನಾದ ಶಿವನು ಅವರನ್ನು ಧಿಕ್ಕರಿಸಿ ಈರೀತಿ ಶಾಪವನ್ನಿತ್ತನು.

೧೬. ನೀವೀರ್ವರೂ ಬಹುದುಷ್ಟರು, ಮಹಾನೀಚರು, ನನಗೆ ಅಪರಾಧವನ್ನು ಮಾಡಿರುವಿರಿ. ಕಪಟ ಪಾರ್ವತಿಯನ್ನು ಹಿಂಸಿಸಿದುದಲ್ಲದೆ ಯುದ್ಧವನ್ನು ಬಿಟ್ಟು ಹೇಡಿಗಳಂತೆ ಓಡುತ್ತಿರುವಿರಿ.

ಪರಾಙ್ಮುಖೋ ನ ಹಂತವ್ಯ ಇತಿ ವಧ್ಯೌ ನ ಮೇ ಯುವಾಂ ।
ಮಮ ಯುದ್ಧಾದತಿಕ್ರಾಂತೌ ಗೌರ್ಯಾ ವಧ್ಯೌ ಭವಿಷ್ಯತಃ ॥ ೧೭ ॥

ಏವಂ ವದತಿ ಗೌರೀಶೇ ಸಿಂಧುಪುತ್ರೋ ಜಲಂಧರಃ ।
ಚುಕ್ರೋಧಾತೀವ ರುದ್ರಾಯ ಜ್ವಲಜ್ಜ್ವಲನಸನ್ನಿಭಃ ॥ ೧೮ ॥

ರುದ್ರೇ ರಣೇ ಮಹಾವೇಗಾದ್ವವರ್ಷ ನಿಶಿತಾಂಚ್ಛರಾ ।
ಬಾಣಾಂಧಕಾರಸಂಛನ್ನಂ ತಥಾ ಭೂಮಿತಲಂ ಹ್ಯಭೂತ್ ॥ ೧೯ ॥

ಯಾವದ್ರುದ್ರಃ ಪ್ರಚಿಚ್ಛೇದ ತಸ್ಯ ಬಾಣಗಣಾನ್ದ್ರುತಂ ।
ತಾವತ್ಸ ಪರಿಘೇಣಾಶು ಜಘಾನ ವೃಷಭಂ ಬಲೀ ॥ ೨೦ ॥

ವೃಷಸ್ತೇನ ಪ್ರಹಾರೇಣ ಪರಾವೃತ್ತೋ ರಣಾಂಗಣಾತ್ ।
ರುದ್ರೇಣ ಕೃಷ್ಯಮಾಣೋಽಪಿ ನ ತಸ್ಥೌ ರಣಭೂಮಿಷು ॥ ೨೧ ॥

---

೧೭. ಬೆನ್ನು ತೋರಿಸಿದವರನ್ನು ಕೊಲ್ಲಬಾರದು, ಎಂಬುದಾಗಿ ನೀತಿ ಇರುವುದರಿಂದ ನಾನು ನಿಮ್ಮನ್ನು ಕೊಲ್ಲಲಾರೆನು. ನನ್ನೊಡನೆ ಸೆಣಸದೆ ಓಡಿದರೇನಂತೆ? ಪಾರ್ವತಿಯು ನಿಮ್ಮನ್ನು ಸಂಹರಿಸುವಳು.

೧೮. ಈರೀತಿ ಶಿವನು ಅವರೀರ್ವರಿಗೆ ಶಾಪವನ್ನೀಯಲು ಸಾಗರಸುತನಾದ ಜಲಂಧರನು ಜ್ವಲಿಸುತ್ತಿರುವ ಬೆಂಕಿಯಂತೆ ಕೋಪದಿಂದ ಉರಿಯುತ್ತಾ ಶಿವನ ಮೇಲೆ ಮಹತ್ತಾದ ಕೋಪವನ್ನು ತಳೆದನು.

೧೯. ಅತಿ ಚೂಪಾದ ಅಲುಗುಗಳುಳ್ಳ ಅಸಂಖ್ಯಾತ ಬಾಣಗಳನ್ನು ತೆಗೆದು ಶಿವನ ಮೇಲೆ ಸುರಿಸಿಬಿಟ್ಟನು. ಅದರಿಂದ ಭೂಮಿಯೆಲ್ಲವೂ ಕತ್ತಲೆಯಿಂದ ಮುಚ್ಚಿ ಹೋಯಿತು.

೨೦. ಆ ಬಲಿಷ್ಠನಾದ ಜಲಂಧರನು, ತಾನು ಬಿಟ್ಟ ಬಾಣಗಳನ್ನು ಶಿವನು ಜಾಗ್ರತೆ ಕತ್ತರಿಸುವುದರೊಳಗಾಗಿಯೇ ಪರಿಘಾಯುಧದಿಂದ ಆತನ ವಾಹನವಾದ ವೃಷಭವನ್ನು ಹೊಡೆದಪ್ಪಳಿಸಿದನು.

೨೧. ಆ ಏಟು ಬಿದ್ದೊಡನೆಯೇ ಆ ವೃಷಭವು ಯುದ್ಧರಂಗದಿಂದ ಹಿಮ್ಮೆಟ್ಟಿದುದಲ್ಲದೆ, ಶಿವನು ಎಷ್ಟು ಸೆಳೆದರೂ ಆ ಯುದ್ಧಭೂಮಿಯಲ್ಲಿ ನಿಲ್ಲಲೇ ಇಲ್ಲ.

ಅಥ ಲೋಕೇ ಮಹಾರುದ್ರಸ್ಸ್ವೀಯಂ ತೇಜೋಽತಿದುಸ್ಸಹಂ ।
ದರ್ಶಯಾಮಾಸ ಸರ್ವಸ್ಮೈ ಸತ್ಯಮೇತನ್ಮುನೀಶ್ವರ ॥ ೨೨ ॥

ತತಃ ಪರಮಸಂಕ್ರುದ್ಧೋ ರುದ್ರೋ ರೌದ್ರವಪುರ್ಧರಃ ।
ಪ್ರಲಯಾನಲವದ್ಘೋರೋ ಬಭೂವ ಸಹಸಾ ಪ್ರಭುಃ ॥ ೨೩ ॥

ದೃಷ್ಟ್ವಾ ಪುರಃ ಸ್ಥಿತಂ ದೈತ್ಯಂ ಮೇರುಕೂಟಮಿವ ಸ್ಥಿತಂ ।
ಅವಧ್ಯತ್ವಮಪಿ ಶ್ರುತ್ವಾಪ್ಯನ್ಯೈರಭ್ಯುದ್ಯತೋಽಭವತ್ ॥ ೨೪ ॥

ಬ್ರಹ್ಮಣೋ ವಚನಂ ರಕ್ಷನ್ರಕ್ಷಕೋ ಜಗತಾಂ ಪ್ರಭುಃ ।
ಹೃದಾನುಗ್ರಹಮಾತನ್ವಂಸ್ತದ್ವಧಾಯ ಮನೋ ದಧತ್ ॥ ೨೫ ॥

ಕೋಪಂ ಕೃತ್ವಾ ಪರಂ ಶೂಲೀ ಪಾದಾಂಗುಷ್ಠೇನ ಲೀಲಯಾ ।
ಮಹಾಂಭಸಿ ಚಕಾರಾಶು ರಥಾಂಗಂ ರೌದ್ರಮದ್ಭುತಂ ॥ ೨೬ ॥

---

೨೨. ಎಲೈ ಮುನೀಂದ್ರ, ಬಳಿಕ ಆ ಮಹಾರುದ್ರನು, ಲೋಕದಲ್ಲಿ ಯಾರೂ ಸಹಿಸಲಾರದಂತಹ ತನ್ನ ತೇಜಸ್ಸನ್ನು ತೋರಲಾರಂಭಿಸಿದನು. ಇದು ಸತ್ಯವು.

೨೩. ಮಿತಿಮೀರಿದ ಕೋಪವನ್ನು ತಾಳಿ, ಅತಿ ಭಯಂಕರವಾದ ಆಕಾರವನ್ನು ಧರಿಸಿದ ಪ್ರಭುವಾದ ಆ ರುದ್ರನು ಕ್ಷಣಮಾತ್ರದಲ್ಲಿ ಪ್ರಳಯಕಾಲದ ವಹ್ನಿಯಂತೆ ಜ್ವಲಿಸತೊಡಗಿದನು.

೨೪. ತನ್ನೆದುರಾಗಿ ಆ ಜಲಂಧರನು ಮೇರುಪರ್ವತದ ಕೋಡುಗಲ್ಲಿನಂತೆ ನಿಂತಿರುವುದನ್ನು ಕಂಡು, ಅವನನ್ನು ಮತ್ತೊಬ್ಬರು ಕೊಲ್ಲಲು ಆಗಲಾರದೆಂಬುದನ್ನೂ ಕೇಳಿ ತಾನೇ ಅವನನ್ನು ಕೊಲ್ಲಲೆಳಸಿದನು.

೨೫. ಮೂರು ಲೋಕಗಳಿಗೂ ಸಂರಕ್ಷಕನಾದ ಆ ಪ್ರಭುವು, ಬ್ರಹ್ಮನ ಮಾತಿಗೆ ಗೌರವವನ್ನು ಕೊಟ್ಟು ಜಗದನುಗ್ರಹಕ್ಕಾಗಿ ಆ ಜಲಂಧರನನ್ನು ಕೊಲ್ಲಲು ಮನಸ್ಸುಮಾಡಿದನು.

೨೬. ಬಳಿಕ ಆ ರುದ್ರನು ಮಹಾಕೋಪವನ್ನು ತಾಳಿ, ಲೀಲಾಮಾತ್ರದಿಂದಲೇ, ತನ್ನ ಕಾಲಿನ ಹೆಬ್ಬೆರಳಿನಿಂದ ಆ ಸಾಗರದ ನೀರಿನಲ್ಲಿ ಪರಮಾಶ್ಚರ್ಯಕರವೂ ಘೋರವೂ ಆದ ಒಂದು ಚಕ್ರವನ್ನು ಕ್ಷಣಮಾತ್ರದಲ್ಲಿ ನಿರ್ಮಿಸಿದನು.

ಕೃತ್ವಾರ್ಣವಾಂಭಸಿ ಶಿತಂ ಭಗವಾನ್ರಥಾಂಗಂ
ಸ್ಮೃತ್ವಾ ಜಗತ್ರ್ರಯಮನೇನ ಹತಂ ಪುರಾರಿಃ ।
ದಕ್ಷಾಂಧಕಾಂತಕಪುರತ್ರಯಯಜ್ಞಹಂತಾ-
ಲೋಕತ್ರಯಾಂತಕಕರಃ ಪ್ರಹಸನ್ನುವಾಚ ॥ ೨೭ ॥

॥ ಮಹಾರುದ್ರ ಉವಾಚ ॥

ಪಾದೇನ ನಿರ್ಮಿತಂ ಚಕ್ರಂ ಜಲಂಧರ ಮಹಾಂಭಸಿ ।
ಬಲವಾನ್ಯದಿ ಚೋದ್ಧರ್ತುಂ ತಿಷ್ಠ ಯೋದ್ಧುಂ ನ ಚಾನ್ಯಥಾ ॥ ೨೮ ॥

॥ ಸನತ್ಕುಮಾರ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ಕ್ರೋಧೇನಾದೀಪ್ತಲೋಚನಃ ।
ಪದಹನ್ನಿವ ಚಕ್ಷುರ್ಭ್ಯಾಂ ಪ್ರಾಹಾಲೋಕ್ಯ ಸ ಶಂಕರಂ ॥ ೨೯ ॥

॥ ಜಲಂಧರ ಉವಾಚ ॥

ರೇಖಾಮುದ್ಧೃತ್ಯ ಹತ್ವಾ ಚ ಸಗಣಂ ತ್ವಾಂ ಹಿ ಶಂಕರ ।
ಹತ್ವಾ ಲೋಕಾನ್ಸುರೈಸ್ಸಾರ್ಧಂ ಸ್ವಭಾಗಂ ಗರುಡೋ ಯಥಾ ॥ ೩೦ ॥

---

೨೭-೨೮. ಬಳಿಕ ದಕ್ಷವೈರಿಯೂ, ಅಂಧಕಾಸುರ ಸಂಹಾರಿಯೂ ಮೃತ್ಯುಂಜಯನೂ, ಪುರತ್ರಯವಿನಾಶಕನೂ, ಯಜ್ಞಹಂತೃವೂ ಆದ ಆ ಶಿವನು ಅತಿ ತೀಕ್ಷ್ಣವಾದ ಅಲಗುಳ್ಳ ಚಕ್ರವನ್ನು ಸಾಗರಜಲದಲ್ಲಿ ನಿರ್ಮಿಸಿ, ಮೂರು ಲೋಕಗಳೂ ಇವನ ಕೋಟಲೆಗೆ ಈಡಾಗಿರುವುದನ್ನು ನೆನೆದು, ನಗುನಗುತ್ತಾ ಜಲಂಧರನನ್ನು ಕುರಿತು ಎಲೈ ಜಲಂಧರನೇ, ಈ ಸಾಗರದಲ್ಲಿ, ನಾನು ಕಾಲಿನಿಂದ ನಿರ್ಮಿಸಿದ ಚಕ್ರವನ್ನು ಎತ್ತಲು ನಿನಗೆ ಶಕ್ತಿಯಿದ್ದಲ್ಲಿ ನನ್ನೊಡನೆ ಯುದ್ಧಕ್ಕೆ ನಿಲ್ಲು ಇಲ್ಲದಿದ್ದರೆ ಹಿಂದಿರುಗು ಎಂದನು.

೨೯. ಓ ವ್ಯಾಸ, ಆ ಜಲಂಧರನು ಶಿವನು ನುಡಿದ ಮಾತುಗಳನ್ನು ಕೇಳಿ, ಕೋಪದಿಂದ ಕಣ್ಣುಗಳು ಕೆಂಪೇರಲು, ನೋಟದಿಂದಲೇ ಅವನನ್ನು ಸುಟ್ಟುಬಿಡುವಂತೆ ನೋಡುತ್ತಾ ಇಂತೆಂದನು.

೩೦-೩೧. ಓ ಶಂಕರ, ನೀರಿನಲ್ಲಿ ನೀನು ಬರೆದ ಈ ಗೆರೆಯನ್ನು ಮೇಲಕ್ಕೆತ್ತಿ ಬಿಸುಟು, ನಿನ್ನ ಪ್ರಮಥಗಣಗಳೊಡನೆ ನಿನ್ನನ್ನು ಕೊಂದು, ದೇವತೆಗಳೊಡನೆ ಲೋಕ

ಹಂತುಂ ಚರಾಚರಂ ಸರ್ವಂ ಸಮರ್ಥೋಽಹಂ ಸವಾಸವಂ ।
ಕೋ ಮಹೇಶ್ವರ ಮದ್ಬಾಣೈರಭೇದ್ಯೋ ಭುವನತ್ರಯೇ ॥ ೩೧ ॥

ಬಾಲಭಾವೇನ ಭಗವಾಂಸ್ತಪಸ್ಯೈವ ವಿನಿರ್ಜಿತಃ ।
ಬ್ರಹ್ಮಾ ಬಲಿಷ್ಠಃ ಸ್ಥಾನೇ ಮೇ ಮುನಿಭಿಸ್ಸುರಪುಂಗವೈಃ ॥ ೩೨ ॥

ದಗ್ಧಂ ಕ್ಷಣೇನ ಸಕಲಂ ತ್ರೈಲೋಕ್ಯಂ ಸಚರಾಚರಂ ।
ತಪಸಾ ಕಿಂ ತ್ವಯಾ ರುದ್ರ ನಿರ್ಜಿತಾ ಭಗವಾನಪಿ ॥ ೩೩ ॥

ಇಂದ್ರಾಗ್ನಿಯಮವಿತ್ತೇಶವಾಯುವಾರೀಶ್ವರಾದಯಃ ।
ನ ಸೇಹಿರೇ ಯಥಾ ನಾಗಾ ಗಂಧಂ ಪಕ್ಷಿಪತೇರಿವ ॥ ೩೪ ॥

ನ ಲಬ್ಧಂ ದಿವಿ ಭೂಮೌ ಚ ವಾಹನಂ ಮಮ ಶಂಕರ ।
ಸಮಸ್ತಾನ್ಪರ್ವತಾನ್ಪ್ರಾಪ್ಯ ಧರ್ಷಿತಾಶ್ಚ ಗಣೇಶ್ವರಾಃ ॥ ೩೫ ॥

---

ಗಳನ್ನು ಧ್ವಂಸಮಾಡಿ, ಗರುಡನು ತನ್ನ ಆಹಾರವಾದ ಸರ್ಪಗಳನ್ನು ಕೊಲ್ಲುವಂತೆ, ದೇವೇಂದ್ರನೊಡಗೂಡಿದ ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವನ್ನೂ ಅಳಿಸಿ ಬಿಡಲು ನನಗೆ ಶಕ್ತಿಯಿರುವುದು. ಈ ಮೂರುಲೋಕದಲ್ಲಿಯೂ ನನ್ನ ಬಾಣಗಳಿಗೆ ಅಭೇದ್ಯನಾಗಿರುವವನು ಯಾವನಿರುವನು ?

೩೨. ಮುನಿಗಳೂ, ದೇವತೆಗಳೂ, ಬಹು ಕಾಲ ತಪಸ್ಸುಮಾಡಿ, ಯಾರನ್ನು ವಶಪಡಿಸಿಕೊಳ್ಳುವರೋ ಅಂತಹ ಬಲಶಾಲಿಯಾದ ಬ್ರಹ್ಮನನ್ನೂ ಬಾಲ್ಯದಲ್ಲಿಯೇ ಗೆದ್ದುಬಿಟ್ಟಿರುವೆನು.

೩೩. ಚರಾಚರಾತ್ಮಕವಾದ ಈ ಮೂರು ಲೋಕವೆಲ್ಲವನ್ನೂ ಕ್ಷಣಮಾತ್ರ ದಲ್ಲಿಯೇ ಸುಟ್ಟಿರುವೆನು. ಎಲೈ ರುದ್ರನೇ ನೀನು ಭಗವಂತನಾದರೇನು ? ನೀನು ತಪಸ್ಸಿನಿಂದ ಏನನ್ನು ಜಯಿಸಿರುವೆ ?

೩೪. ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರ ಮೊದಲಾದ ದಿಕ್ಪಾಲಕರೂ ಸಹ, ಸರ್ಪಗಳು ಗರುಡನ ವಾಸನೆಯನ್ನು ಕಂಡರೆ ಹೇಗೋ ಹಾಗೆ ನನ್ನ ಪರಾಕ್ರಮವನ್ನು ಸಹಿಸದಾದರು.

೩೫. ಎಲೈ ಶಂಕರನೇ, ಸ್ವರ್ಗದಲ್ಲಿಯೂ, ಭೂಮಿಯಲ್ಲಿಯೂ, ನನಗೆ ಸರಿ ಯಾದ ವಾಹನವು ದೊರೆಯಲಿಲ್ಲ. ಎಲ್ಲ ಪರ್ವತಗಳಿಗೂ ನುಗ್ಗಿ ಅಲ್ಲಿರುವ ಗಣಾಧಿ ಪತಿಗಳನ್ನು ಎದುರಿಸಿರುವೆನು.

ಗಿರೀಂದ್ರೋ ಮಂದರಃ ಶ್ರೀಮಾನ್ನೀಲೋ ಮೇರುಸ್ಸುಶೋಭನಃ ।
ಧರ್ಷಿತೋ ಬಾಹುದಂಡೇನ ಕೆಂಡ್ವಾ ಉತ್ಸರ್ಪಣಾಯ ಮೇ ॥ ೩೬ ॥

ಗಂಗಾ ನಿರುದ್ಧಾ ಬಾಹುಭ್ಯಾಂ ಲೀಲಾರ್ಥ ಹಿಮವದ್ಗಿರೌ ।
ಅರೀಣಾಂ ಮಮ ಭೃತ್ಯೈಶ್ಚ ಜಯೋ ಲಬ್ಧೋ ದಿವೌಕಸಾಂ ॥ ೩೭ ॥

ವಡವಾಯಾ ಮುಖಂ ಬದ್ಧಂ ಗೃಹೀತ್ವಾ ತಾಂ ಕರೇಣ ತು ।
ತತ್ಕ್ಷಣಾದೇವ ಸಕಲಮೇಕಾರ್ಣವಮಭೂತ್ತದಾ ॥ ೩೮ ॥

ಐರಾವತಾದಯೋ ನಾಗಾಃ ಕ್ಷಿಪ್ತಾಃ ಸಿಂಧುಜಲೋಪರಿ ।
ಸರಥೋ ಭಗವಾನಿಂದ್ರಃ ಕ್ಷಿಪ್ತಶ್ಚ ಶತಯೋಜನಂ ॥ ೩೯ ॥

ಗರುಡೋಽಪಿ ಮಯಾ ಬದ್ಧೋ ನಾಗಪಾಶೇನ ವಿಷ್ಣುನಾ ।
ಉರ್ವಶ್ಯಾದ್ಯಾ ಮಯಾ ನೀತಾ ನಾರ್ಯಃ ಕಾರಾಗೃಹಾಂತರಂ ॥ ೪೦ ॥

---

೩೬. ನನ್ನ ತೋಳಿನ ತೀಟೆಯನ್ನು ಹೋಗಲಾಡಿಸಿಕೊಳ್ಳಲು, ಹಿಮಾಚಲ, ಮಂದರ, ನೀಲಗಿರಿ ಸುಂದರವಾದ ಮೇರು ಮೊದಲಾದ ಪರ್ವತಗಳನ್ನು ನನ್ನ ಬಾಹು ದಂಡದಿಂದ ಕೆಣಕಿ ಕಾದಾಡಿಬಿಟ್ಟಿದ್ದೇನೆ.

೩೭. ಹಿಮವತ್ಪರ್ವತದಲ್ಲಿ ಗಂಗಾನದಿಯನ್ನು ಆಟವಾಡುವಂತೆ ಈ ಎರಡು ತೋಳುಗಳಿಂದ ತಡೆದು ನಿಲ್ಲಿಸಿಬಿಟ್ಟೆನು. ನನ್ನ ಆಳುಗಳೇ, ಶತ್ರುಗಳಾದ ದೇವತೆ ಗಳನ್ನು ಲೀಲಾಮಾತ್ರದಿಂದ ಜಯಿಸಿಬಂದಿರುವರು.

೩೮. ಸಮುದ್ರದ ನೀರೆಲ್ಲವನ್ನೂ ನುಂಗುವ ವಡಬಾಗ್ನಿಯನ್ನು ಕೈಲಿಹಿಡಿದು ಕೊಂಡು, ಅದರ ಮುಖವನ್ನು ಕಟ್ಟಿಬಿಟ್ಟೆನು. ಆಗ ಎಲ್ಲಿ ನೋಡಿದರೂ ಸಮುದ್ರವು ತಾನೇತಾನಾಗಿ ಆಗಿಹೋಯಿತು.

೩೯. ಐರಾವತ ಮೊದಲಾದ ದಿಗ್ಗಜಗಳೆಲ್ಲವನ್ನೂ ಸಮುದ್ರದ ನೀರಿನಲ್ಲಿ ಎಸೆದುಬಿಟ್ಟೆನು. ತನ್ನ ರಥದ ಸಮೇತ, ಇಂದ್ರನನ್ನು ನೂರು ಯೋಜನ ದೂರ ದೂಡಿಬಿಟ್ಟೆನು.

೪೦. ವಿಷ್ಣುವಿನೊಡನೆ ಗರುಡನನ್ನೂ ನಾಗಪಾಶದಿಂದ ಕಟ್ಟಿಬಿಟ್ಟೆನು. ಊರ್ವಶೀ ಮೊದಲಾದ ಅಪ್ಸರ ಸ್ತ್ರೀಯರನ್ನು ಸೆಳೆದು ತಂದು, ಸೆರೆಮನೆಯಲ್ಲಿ ಹಾಕಿರುವೆನು.

ಮಾಂ ನ ಜಾನಾಸಿ ರುದ್ರ ತ್ವಂ ತ್ರೈಲೋಕ್ಯಜಯಕಾರಿಣಂ ।
ಜಲಂಧರಂ ಮಹಾದೈತ್ಯಂ ಸಿಂಧುಪುತ್ರಂ ಮಹಾಬಲಂ ॥ ೪೧ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾಥ ಮಹಾದೇವಂ ತದಾ ವಾರಿಧಿನಂದನಃ ।
ನ ಚಚಾಲ ನ ಸಸ್ಮಾರ ನಿಹತಾನ್ದಾನವಾನ್ಮೃಧಿ ॥ ೪೨ ॥

ದುರ್ಮದೇನಾವಿನೀತೇನ ದೋರ್ಭ್ಯಾಮಾಸ್ಫೋಟ್ಯ ದೋರ್ಬಲಾತ್ ।
ತಿರಸ್ಕೃತೋ ಮಹಾದೇವೋ ವಚನೈಃ ಕಟುಕಾಕ್ಷರೈಃ ॥ ೪೩ ॥

ತಚ್ಛ್ರುತ್ವಾ ದೈತ್ಯವಚನಮಮಂಗಲಮುದೀರಿತಂ ।
ವಿಜಹಾಸ ಮಹಾದೇವಃ ಪರಮಂ ಕ್ರೋಧಮಾದಧೇ ॥ ೪೪ ॥

ಸುದರ್ಶನಾಖ್ಯಂ ಯಚ್ಚಕ್ರಂ ಪಾದಾಂಗುಷ್ಠವಿನಿರ್ಮಿತಂ ।
ಜಗ್ರಾಹ ತತ್ಕರೇ ರುದ್ರಸ್ತೇನ ಹಂತುಂ ಸಮುದ್ಯತಃ ॥ ೪೫ ॥

---

೪೧. ಎಲೈ ರುದ್ರನೇ, ಈರೀತಿ ಮೂರು ಲೋಕಗಳನ್ನೂ ಜಯಿಸಿರುವ ಮಹಾಬಲಾಢ್ಯನೂ ಸಿಂಧುಪುತ್ರನೂ ಆದ ಈ ಜಲಂಧರನನ್ನು ನೀನಿನ್ನೂ ತಿಳಿಯದಿರುವೆ ಎಂದನು.

೪೨. ಎಲೈ ವ್ಯಾಸಮಹರ್ಷಿಯೇ, ಕೇಳು:—ಈರೀತಿ ಆ ಸಾಗರಪುತ್ರನು ಶಿವನನ್ನು ನುಡಿದು ಒಂದು ಗೆರೆಯಷ್ಟೂ ಅಲುಗಲಿಲ್ಲ. ಯುದ್ಧದಲ್ಲಿ ತನ್ನ ಕಡೆಯ ದಾನವರು ಮಾಡಿದುದನ್ನೂ ನೆನೆಯಲಿಲ್ಲ.

೪೩. ಸ್ವಲ್ಪವೂ ವಿನಯವಿಲ್ಲದೆ ಮಹಾಮದಾಂಧನಾಗಿ ತೋಳುಗಳನ್ನು ತಟ್ಟುತ್ತಾ ಶಿವನನ್ನು ಕೆಟ್ಟಮಾತುಗಳಿಂದ ತಿರಸ್ಕರಿಸಿದನು.

೪೪. ಈರೀತಿಯಾಗಿ ಆ ದೈತ್ಯನಾಡಿದ ಅಮಂಗಲವಾದ ಮಾತುಗಳನ್ನು ಕೇಳಿ ಶಿವನು ನಕ್ಕನು. ಬಳಿಕ ಮಹಾಕೋಪವನ್ನು ತಾಳಿದನು.

೪೫. ತನ್ನ ಹೆಬ್ಬೆಟ್ಟಿನಿಂದ ಸಾಗರಜಲದಲ್ಲಿ ನಿರ್ಮಿಸಿದ ಸುದರ್ಶನವೆಂಬ ಚಕ್ರವನ್ನು ಕೈಗೆ ತೆಗೆದುಕೊಂಡು ಅದರಿಂದ ಅವನನ್ನು ಕೊಲ್ಲಲು ಹವಣಿಸಿದನು.

ಸುದರ್ಶನಾಖ್ಯಂ ತಚ್ಚಕ್ರಂ ಚಿಕ್ಷೇಪ ಭಗವಾನ್ಹರಃ ।
ಕೋಟಿಸೂರ್ಯಪ್ರತೀಕಾಶಂ ಪ್ರಲಯಾನಲಸನ್ನಿಭಂ ॥ ೪೬ ॥

ಪ್ರದಹದ್ರೋದಸೀ ವೇಗಾತ್ತದಾಸಾದ್ಯ ಜಲಂಧರಂ ।
ಜಹಾರ ತಚ್ಛಿರೋ ವೇಗಾನ್ಮಹದಾಯತಲೋಚನಂ ॥ ೪೭ ॥

ರಥಾತ್ಕಾಯಃ ಪಪಾತೋರ್ವ್ಯಾಂ ನಾದಯನ್ವಸುಧಾತಲಂ ।
ಶಿರಶ್ಚಾಪ್ಯಬ್ಧಿಪುತ್ರಸ್ಯ ಹಾಹಾಕಾರೋ ಮಹಾನಭೂತ್ ॥ ೪೮ ॥

ದ್ವಿಧಾ ಪಪಾತ ತದ್ದೇಹೋ ಹ್ಯಂಜನಾದ್ರಿರಿವಾಚಲಃ ।
ಕುಲಿಶೇನ ಯಥಾಂ ವಾರಾಂನಿಧೌ ಗಿರಿವರೋ ದ್ವಿಧಾ ॥ ೪೯ ॥

ತಸ್ಯ ರೌದ್ರೇಣ ರಕ್ತೇನ ಸಂಪೂರ್ಣಮಭವಜ್ಜಗತ್ ।
ತತಸ್ಸಮಸ್ತಾ ಪೃಥಿವೀ ವಿಕೃತಾಭೂನ್ಮುನೀಶ್ವರ ॥ ೫೦ ॥

---

೪೬. ಭಗವಂತನಾದ ಆ ಶಿವನು ಕಾಂತಿಯಿಂದ ಕೋಟಿಸೂರ್ಯರನ್ನು ಹೋಲುತ್ತಾ ಪ್ರಳಯಕಾಲದ ಅಗ್ನಿಯಂತೆ ಜ್ವಲಿಸುತ್ತಿರುವ ಆ ಸುದರ್ಶನಚಕ್ರವನ್ನು ಜಲಂಧರನಮೇಲೆ ಪ್ರಯೋಗಿಸಿದನು.

೪೭. ಆ ಸುದರ್ಶನ ಚಕ್ರವು ಶಿವನ ಕೈಯ್ಯಿಂದ ಹೊರಬಿದ್ದುದೇ ತಡ, ಭೂಮ್ಯಂತರಿಕ್ಷಗಳನ್ನೂ ಸುಡುತ್ತಾ ಮಹಾವೇಗದಿಂದ ಆ ಜಲಂಧರನಿಗೆ ತಗುಲಿ ಅಗಲವಾದ ದೊಡ್ಡದೊಡ್ಡ ಕಣ್ಣುಗಳಿಂದ ಕೂಡಿದ ಅವನ ತಲೆಯನ್ನು ಕತ್ತರಿಸಿ ಬಿಟ್ಟಿತು.

೪೮. ಬಳಿಕ ಅವನು ಕುಳಿತಿದ್ದ ರಥದಿಂದ ಆ ಸಾಗರಸುತನ ತಲೆಯೂ ಶರೀರವೂ ಭೂಮಿಯು ಗುಡುಗಿಹೋಗುವಂತೆ ಶಬ್ದಮಾಡುತ್ತಾ ನೆಲದಮೇಲೆ ಉರುಳಿದುವು. ಆಗ ದೊಡ್ಡದಾದ ಹಾಹಾಕಾರವುಂಟಾಯಿತು.

೪೯. ದೇವೇಂದ್ರನ ವಜ್ರಾಯುಧದಿಂದ ಸೀಳಲ್ಪಟ್ಟ ನೀಲಾಂಜನಪರ್ವತವು ಎರಡಾಗಿ ಸಮುದ್ರದೊಳಗೆ ಬಿದ್ದಂತೆ ಆಗ ಆ ಜಲಂಧರನ ದೇಹವು ಎರಡುಪಾಲಾಗಿ ಬಿದ್ದುಹೋಯಿತು.

೫೦. ಓ ಮುನೀಂದ್ರ, ಅವನ ದೇಹದಿಂದ ಹೊರಬಿದ್ದ ಭಯಂಕರವಾದ ರಕ್ತದಿಂದ ಪ್ರಪಂಚವೆಲ್ಲವೂ ತುಂಬಿಹೋಯಿತು. ಆಗ ಭೂಮಿಯೆಲ್ಲವೂ ವಿಕಾರವಾಗಿ ಆಗಿಹೋಯಿತು.

ತದ್ರಕ್ತಮಖಿಲಂ ರುದ್ರನಿಯೋಗಾನ್ಮಾಂಸಮೇವ ಚ ।
ಮಹಾರೌರವಮಾಸಾದ್ಯ ರಕ್ತಕುಂಡಮಭೂದಿಹ ॥ ೫೧ ॥

ತತ್ತೇಜೋ ನಿರ್ಗತಂ ದೇಹಾದ್ರುದ್ರೇ ಚ ಲಯಮಾಗಮತ್ ।
ವೃಂದಾದೇಹೋದ್ಭವಂ ಯದ್ವದ್ಗೌರ್ಯಾಂ ಹಿ ವಿಲಯಂ ಗತಂ ॥ ೫೨ ॥

ಜಲಂಧರಂ ಹತಂ ದೃಷ್ಟ್ವಾ ದೇವಗಂಧರ್ವಪನ್ನಗಾಃ ।
ಅಭವನ್ಸುಪ್ರಸನ್ನಾಶ್ಚ ಸಾಧುದೇವೇತಿ ಚಾಬ್ರುವನ್ ॥ ೫೩ ॥

ಸರ್ವೇ ಪ್ರಸನ್ನತಾಂ ಯಾತಾ ದೇವಸಿದ್ಧಮುನೀಶ್ವರಾಃ ।
ಪುಷ್ಪವೃಷ್ಟಿಂ ಪ್ರಕುರ್ವಾಣಾಸ್ತದ್ಯಶೋ ಜಗುರುಚ್ಚಕೈಃ ॥ ೫೪ ॥

ದೇವಾಂಗನಾ ಮಹಾನೋದಾನ್ನನೃತುಃ ಪ್ರೇಮವಿಹ್ವಲಾಃ ।
ಕಲಸ್ವರಾಃ ಕಲಪದಂ ಕಿನ್ನರೈಸ್ಸಹ ಸಂಜಗುಃ ॥ ೫೫ ॥

---

೫೧. ಶಿವನ ಅಪ್ಪಣೆಯಂತೆ ಆ ರಕ್ತಮಾಂಸಗಳೆಲ್ಲವೂ ಮಹಾರೌರವನರಕದಲ್ಲಿ ಸೇರಿ ರಕ್ತಕುಂಡವೆನಿಸಿತು.

೫೨. ವೃಂದೆಯ ದೇಹದಿಂದ ಹೊರಬಿದ್ದ ತೇಜಸ್ಸು ಪಾರ್ವತಿಯಲ್ಲಿ ಸೇರಿಹೋದಂತೆ ಆ ಜಲಂಧರನ ದೇಹದಿಂದ ಹೊರಬಿದ್ದ ತೇಜಸ್ಸೂ ಸಹ ಶಿವನಲ್ಲಿ ಲೀನವಾಯಿತು.

೫೩. ಜಲಂಧರನು ಹತನಾದುದನ್ನು ಕಂಡು ದೇವತೆಗಳು, ಗಂಧರ್ವರು, ಪನ್ನಗರು, ಎಲ್ಲರೂ ಮಹಾಸಂತೋಷದಿಂದ ಸಾಧು ಸಾಧು ಎಂಬುದಾಗಿ ಶಿವನನ್ನು ಹೊಗಳಿದರು.

೫೪. ದೇವತೆಗಳು, ಸಿದ್ಧರು, ಮುನಿಗಳು, ಎಲ್ಲರೂ ಬಹು ಪ್ರಸನ್ನರಾಗಿ ಹೂವಿನಮಳೆಯನ್ನು ಸುರಿಸುತ್ತಾ ಶಿವನ ಕೀರ್ತಿಯನ್ನು ಗಟ್ಟಿಯಾಗಿ ಹೊಗಳಿದರು.

೫೫. ಅಪ್ಸರಸ್ತ್ರೀಯರು ಪ್ರೇಮದಿಂದ ವಿಹ್ವಲರಾಗಿ ಸಂತೋಷಾತಿಶಯದಿಂದ ಇಂಪಾದ ದನಿಯಿಂದ ಸೊಗಸಾದ ಹಾಡುಗಳನ್ನು ಕಿನ್ನರರೊಡನೆ ಸೇರಿ ಹಾಡಿದರು.

ದಿಶಃ ಪ್ರಸೇದುಸ್ಸರ್ವಾಶ್ಚ ಹತೇ ವೃಂದಾಪತೌ ಮುನೇ ।
ವವುಃ ಪುಣ್ಯಾಸ್ಸುಖಸ್ಪರ್ಶಾ ವಾಯವಸ್ತ್ರಿವಿಧಾ ಅಪಿ ॥ ೫೬ ॥

ಚಂದ್ರಮಾಃ ಶೀತತಾಂ ಯಾತೋ ರವಿಸ್ತೇಪೇ ಸುತೇಜಸಾ ।
ಅಗ್ನಯೋ ಜಜ್ವಲುಶ್ಶಾಂತಾ ಬಭೂವಾವಿಕೃತಂ ನಭಃ ॥ ೫೭ ॥

ಏವಂ ತ್ರೈಲೋಕ್ಯಮಖಿಲಂ ಸ್ವಾಸ್ಥ್ಯಮಾಪಾಧಿಕಂ ಮುನೇ ।
ಹತೇಬ್ಧಿತನಯೇ ತಸ್ಮಿನ್ಹರೇಣಾನಂತಮೂರ್ತಿನಾ ॥ ೫೮ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರವಧವರ್ಣನಂ ನಾಮ
ಚತುರ್ವಿಂಶೋಽಧ್ಯಾಯಃ

---

೫೬. ಓ ಮುನೀಂದ್ರ, ವೃಂದೆಯ ಪತಿಯಾದ ಆ ಜಲಂಧರನು ಮಡಿದೊಡನೆ ದಿಕ್ಕುಗಳೆಲ್ಲವೂ ಪ್ರಸನ್ನವಾದುವು. ಹಿತವಾದ ಸ್ಪರ್ಶವುಳ್ಳ ಗಾಳಿಯು ತಂಪಾಗಿಯೂ ಸುಗಂಧಯುಕ್ತವಾಗಿಯೂ ಮೆಲ್ಲನೆ ಬೀಸತೊಡಗಿತು.

೫೭. ಚಂದ್ರನು ತಂಪಾಗಿ ಬೆಳಗಿದನು. ಸೂರ್ಯನು ಮೊದಲಿಗಿಂತಲೂ ಹೆಚ್ಚಾಗಿ ಕಾಂತಿಯಿಂದ ಪ್ರಕಾಶಿಸಿದನು. ಬೆಂಕಿಯು ಪ್ರಶಾಂತವಾಗಿ ಹೊಗೆಯಿಲ್ಲದೆ ಉರಿಯತೊಡಗಿತು. ಆಕಾಶವು ಯಾವೊಂದು ವಿಕಾರವೂ ಇಲ್ಲದೆ ನಿರ್ಮಲವಾಯಿತು.

೫೮. ಓ ಮುನೀಂದ್ರ, ಈರೀತಿಯಾಗಿ ನಾನಾರೂಪಧರನಾದ ಶಿವನಿಂದ ಆ ಜಲಂಧರನು ಹತನಾಗಲು ಮೂರು ಲೋಕಗಳಿಗೂ ಅತಿಶಯವಾಗಿ ನೆಮ್ಮದಿಯುಂಟಾಯಿತು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಜಲಂಧರವಧವರ್ಣನವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಪಂಚವಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಅಥ ಬ್ರಹ್ಮಾದಯೋ ದೇವಾ ಮುನಯಶ್ಚಾಖಿಲಾಸ್ತಥಾ ।
ತುಷ್ಟುವುರ್ದೇವದೇವೇಶಂ ವಾಗ್ಭಿರಿಷ್ಟಭಿರಾನತಾಃ ॥ ೧ ॥

॥ ದೇವಾ ಊಚುಃ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ಸಾಧುಸೌಖ್ಯಪ್ರದಸ್ತ್ವಂ ಹಿ ಸರ್ವದಾ ಭಕ್ತದುಃಖಹಾ ॥ ೨ ॥

---

### ಇಪ್ಪತ್ತೈದನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು ;—ಓ ವ್ಯಾಸ, ಬಳಿಕ ಬ್ರಹ್ಮಾದಿದೇವತೆಗಳೂ, ಮುನಿಗಳೂ ಎಲ್ಲರೂ ಸೇರಿ, ದೇವದೇವನಾದ ಶಿವನನ್ನು ನಮಸ್ಕರಿಸಿ ಪ್ರಿಯವಾದ ವಾಕ್ಯಗಳಿಂದ ಆತನನ್ನು ಸ್ತುತಿಸತೊಡಗಿದರು.

೨. ಓ ದೇವದೇವ, ಮಹಾದೇವ, ನೀನು ಮರೆಹೊಕ್ಕವರಲ್ಲಿ ಮಮತೆಯುಳ್ಳವನು. ಸರ್ವಕಾಲದಲ್ಲಿಯೂ, ಭಕ್ತರ ದುಃಖಗಳನ್ನು ಪರಿಹರಿಸುತ್ತಾ ಸಾಧುಗಳಿಗೆ ಸೌಖ್ಯವನ್ನುಂಟುಮಾಡುತ್ತಿರುವೆ.

ತ್ವಂ ಮಹಾದ್ಭುತಸಲ್ಲೀಲೋ ಭಕ್ತಿಗಮ್ಯೋ ದುರಾಸದಃ ।
ದುರಾರಾಧ್ಯೋಽಸತಾಂ ನಾಥ ಪ್ರಸನ್ನಸ್ಸರ್ವದಾ ಭವ ॥ ೩ ॥

ವೇದೋಽಪಿ ಮಹಿಮಾನಂ ತೇ ನ ಜಾನಾತಿ ಹಿ ತತ್ತ್ವತಃ ।
ಯಥಾಮತಿ ಮಹಾತ್ಮಾನಸ್ಸರ್ವೇ ಗಾಯಂತಿ ಸದ್ಯಶಃ ॥ ೪ ॥

ಮಾಹಾತ್ಮ್ಯಮತಿಗೂಢಂ ತೇ ಸಹಸ್ರವದನಾದಯಃ ।
ಸದಾ ಗಾಯಂತಿ ಸುಪ್ರೀತ್ಯಾ ಪುನಂತಿ ಸ್ವಗಿರಂ ಹಿ ತೇ ॥ ೫ ॥

ಕೃಪಯಾ ತವ ದೇವೇಶ ಬ್ರಹ್ಮಜ್ಞಾನೀ ಭವೇಜ್ಜಡಃ ।
ಭಕ್ತಿಗಮ್ಯಸ್ಸದಾ ತ್ವಂ ವಾ ಇತಿ ವೇದಾ ಬ್ರುವಂತಿ ಹಿ ॥ ೬ ॥

ತ್ವಂ ವೈ ದೀನದಯಾಲುಶ್ಚ ಸರ್ವತ್ರ ವ್ಯಾಪಕಸ್ಸದಾ ।
ಆವಿರ್ಭವಸಿ ಸದ್ಭಕ್ತ್ಯಾ ನಿರ್ವಿಕಾರಸ್ಸತಾಂ ಗತಿಃ ॥ ೭ ॥

---

೩. ನೀನು ಅತ್ಯಾಶ್ಚರ್ಯಕರವಾದ ನಾನಾಲೀಲೆಗಳನ್ನು ತೋರ್ಪಡಿಸುವೆ. ಭಕ್ತಿಗೆ ಒಲಿಯುವೆ. ನಿನ್ನನ್ನು ಹೊಂದಲು ಮತ್ತಾವ ಬಗೆಯಿಂದಲೂ ಸಾಧ್ಯವಿಲ್ಲ. ನೀನು ದುಷ್ಟರಿಗೆ ಎಂದಿಗೂ ಒಲಿಯುವವನಲ್ಲ. ಓ ಪ್ರಭೂ, ನಮ್ಮಲ್ಲಿ ನೀನು ಎಂದೆಂದಿಗೂ ಪ್ರಸನ್ನನಾಗಿರು.

೪. ವೇದವೂ ಸಹ ನಿನ್ನ ಮಹಿಮೆಯನ್ನು ಯಥಾವತ್ತಾಗಿ ತಿಳಿಯದು. ಎಲ್ಲಾ ಮಹಾಪುರುಷರೂ, ತಮ್ಮ ತಮ್ಮ ಬುದ್ಧಿಶಕ್ತಿಯಿದ್ದಷ್ಟು, ನಿನ್ನ ಪವಿತ್ರವಾದ ಕೀರ್ತಿಯನ್ನು ಗಾನಮಾಡುವರು.

೫. ಅತಿ ರಹಸ್ಯವಾಗಿರುವ ನಿನ್ನ ಮಹಿಮೆಯನ್ನು ಸಹಸ್ರ ಮುಖಗಳುಳ್ಳ ಆದಿಶೇಷನೇ ಮೊದಲಾದವರು, ಸರ್ವಕಾಲದಲ್ಲಿಯೂ ಪ್ರೀತಿಯಿಂದ ಗಾನಮಾಡುತ್ತಾ ತಮ್ಮ ಮಾತುಗಳನ್ನು ಪಾವನಗೊಳಿಸಿಕೊಳ್ಳುತ್ತಿರುವರು.

೬. ಓ ದೇವೇಶ, ನಿನ್ನ ಕೃಪೆಯಿಂದ ಜಡನೂ ಬ್ರಹ್ಮಜ್ಞಾನಿಯಾಗುವನು. ಸರ್ವದಾ ನೀನು ಭಕ್ತಿಗೆ ಒಲಿಯುವೆಯೆಂದು, ವೇದಗಳು ಸಾರಿಸಾರಿ ಹೇಳುತ್ತಿವೆ.

೭. ದೀನದಯಾಲುವೂ, ಎಲ್ಲ ಕಡೆಯಲ್ಲಿಯೂ ವ್ಯಾಪಿಸಿರುವವನೂ, ವಿಕಾರ ರಹಿತನೂ, ಸತ್ಪುರುಷರಿಗೆ ಏಕಮಾತ್ರಗಮ್ಯನೂ ಆದ ನೀನು ಒಳ್ಳೆಯ ಭಕ್ತಿಗೆ ಒಲಿದು, ಯಾವ ಸಮಯದಲ್ಲಿಯಾದರೂ, ಎಲ್ಲಿಯಾದರೂ ಆವಿರ್ಭವಿಸುವೆ.

ಭಕ್ತ್ಯೈವ ತೇ ಮಹೇಶಾನ ಬಹವಸ್ಸಿದ್ಧಿಮಾಗತಾಃ ।
ಇಹ ಸರ್ವಸುಖಂ ಭುಕ್ತ್ವಾ ದುಃಖಿತಾ ನಿರ್ವಿಕಾರತಃ ॥ ೮ ॥

ಪುರಾ ಯದುಪತಿರ್ಭಕ್ತ್ತೋ ದಾಶಾರ್ಹಸ್ಸಿದ್ಧಿಮಾಗತಃ ।
ಕಲಾವತೀ ಚ ತತ್ಪತ್ನೀ ಭಕ್ತ್ಯೈವ ಪರಮಾಂ ಪ್ರಭೋ ॥ ೯ ॥

ತಥಾ ಮಿತ್ರಸಹೋ ರಾಜಾ ಮದಯಂತೀ ಚ ತತ್ಪ್ರಿಯಾ ।
ಭಕ್ತ್ಯೈವ ತವ ದೇವೇಶ ಕೈವಲ್ಯಂ ಪರಮಂ ಯಯೌ ॥ ೧೦ ॥

ಸೌಮಿನೀ ನಾಮ ತನಯಾ ಕೈಕೇಯಾಗ್ರಭುವಸ್ತಥಾ ।
ತವ ಭಕ್ತ್ಯಾ ಸುಖಂ ಪ್ರಾಪ ಪರಂ ಸದ್ಯೋಗಿದುರ್ಲಭಂ ॥ ೧೧ ॥

ವಿಮರ್ಷಣೋ ನೃಪವರಸ್ಸಪ್ತಜನ್ಮಾವಧಿ ಪ್ರಭೋ ।
ಭುಕ್ತ್ವಾ ಭೋಗಾಂಶ್ಚ ವಿವಿಧಾಂಸ್ತ್ವದ್ಭಕ್ತ್ಯಾ ಪ್ರಾಪ ಸದ್ಗತಿಂ ॥ ೧೨ ॥

---

೮. ಎಲೈ ಮಹೇಶ್ವರ, ದುಃಖಿತರಾದ ಬಹುಮಂದಿ ನಿನ್ನ ಭಕ್ತಿಯೊಂದರಿಂದಲೇ ತಮ್ಮ ದುಃಖಗಳೆಲ್ಲವನ್ನೂ ತೊರೆದು ಯಾವೊಂದು ವಿಕಾರವೂ ಇಲ್ಲದೆ, ಈ ಲೋಕದಲ್ಲಿ ಎಲ್ಲ ಸುಖಗಳನ್ನೂ ಅನುಭವಿಸಿ, ಕಡೆಯಲ್ಲಿ ಸಿದ್ಧಿಯನ್ನು ಪಡೆದಿರುವರು.

೯. ಹೇ ಪ್ರಭೂ, ಹಿಂದೆ ನಿನ್ನ ಭಕ್ತನಾದ ದಾಶಾರ್ಹನೆಂಬ ಯಾದವ ಕುಲೋತ್ಪನ್ನನೂ, ಕಲಾವತಿಯೆಂಬ ಅವನ ಮಡದಿಯೂ, ನಿನ್ನಲ್ಲಿ ಭಕ್ತಿಯಿಂದಲೇ ಶ್ರೇಷ್ಠವಾದ ಸಿದ್ಧಿಯನ್ನು ಪಡೆದರು.

೧೦. ಅದೇ ರೀತಿಯಾಗಿ ಮಿತ್ರಸಹನೆಂಬ ದೊರೆಯೂ, ಅವನ ಪ್ರಿಯೆಯಾದ ಮದಯಂತಿಯೆಂಬುವಳೂ, ನಿನ್ನಲ್ಲಿ ಭಕ್ತಿಯಿಂದಲೇ ಉತ್ತಮವಾದ ಮುಕ್ತಿಯನ್ನು ಹೊಂದಿದರು.

೧೧. ಅದರಂತೆಯೇ ಕೈಕೇಯನೆಂಬ ಬ್ರಾಹ್ಮಣನ ಮಗಳಾದ ಸೌಮಿನಿಯೆಂಬುವಳು ಶ್ರೇಷ್ಠರಾದ ಯೋಗಿಗಳಿಗೂ ಸಿಗಲಾರದಂತಹ ಪರಮಸೌಖ್ಯವನ್ನು ನಿನ್ನಲ್ಲಿ ಭಕ್ತಿಯಿಂದಲೇ ಪಡೆದಳು.

೧೨. ಓ ಪ್ರಭೂ, ವಿಮರ್ಷಣನೆಂಬ ರಾಜಾಗ್ರಣಿಯು ಏಳು ಜನ್ಮಗಳವರೆಗೆ ನಾನಾವಿಧವಾದ ಸುಖಗಳನ್ನು ಅನುಭವಿಸಿ ಕೊನೆಗೆ ನಿನ್ನಲ್ಲಿ ಭಕ್ತಿಯಿಂದಲೇ ಸದ್ಗತಿಯನ್ನು ಪಡೆದನು.

ಚಂದ್ರಸೇನೋ ನೃಪವರಸ್ತ್ವದ್ಭಕ್ತ್ಯಾ ಸರ್ವಭೋಗಭುಕ್ ।
ದುಃಖಮುಕ್ತಃ ಸುಖಂ ಪ್ರಾಪ ಪರಮತ್ರ ಪರತ್ರ ಚ ॥ ೧೩ ॥

ಗೋಪೀಪುತ್ರಃ ಶ್ರೀಕರಸ್ತೇ ಭಕ್ತ್ಯಾ ಭುಕ್ತ್ವೇಹ ಸದ್ಗತಿಂ ।
ಪರಂ ಸುಖಂ ಮಹಾವೀರಶಿಷ್ಯಃ ಪ್ರಾಪ ಪರತ್ರ ವೈ ॥ ೧೪ ॥

ತ್ವಂ ಸತ್ಯರಥಭೂಜಾನೇರ್ದುಃಖಹರ್ತಾ ಗತಿಪ್ರದಃ ।
ಧರ್ಮಗುಪ್ತಂ ರಾಜಪುತ್ರಮತಾರ್ಷೀಸ್ಸುಖಿನಂ ತ್ವಿಹ ॥ ೧೫ ॥

ತಥಾ ಶುಚಿವ್ರತಂ ವಿಪ್ರಮದರಿದ್ರಂ ಮಹಾಪ್ರಭೋ ।
ತ್ವದ್ಭಕ್ತಿವರ್ತಿನಂ ಮಾತ್ರಾ ಜ್ಞಾನಿನಂ ಕೃಪಯಾಕರೋಃ ॥ ೧೬ ॥

ಚಿತ್ರವರ್ಮಾ ನೃಪವರಸ್ತ್ವದ್ಭಕ್ತ್ಯಾ ಪ್ರಾಪ ಸದ್ಗತಿಂ ।
ಇಹ ಲೋಕೇ ಸದಾ ಭುಕ್ತ್ವಾ ಭೋಗಾನಮರದುರ್ಲಭಾನ್ ॥ ೧೭ ॥

---

೧೩. ನಿನ್ನ ಭಕ್ತಿಯಿಂದಲೇ, ನೃಪಶ್ರೇಷ್ಠನಾದ ಚಂದ್ರಸೇನನು, ಎಲ್ಲ ಭೋಗಗಳನ್ನೂ ಅನುಭವಿಸಿ, ದುಃಖಗಳನ್ನು ಕಳೆದು ಇಹದಲ್ಲಿಯೂ ಪರದಲ್ಲಿಯೂ ಶ್ರೇಷ್ಠವಾದ ಸುಖವನ್ನು ಪಡೆದನು.

೧೪. ಗೊಲ್ಲರವಳ ಮಗನೂ, ಮಹಾವೀರನ ಶಿಷ್ಯನೂ, ಆದ ಶ್ರೀಕರನೆಂಬುವನು, ನಿನ್ನ ಭಕ್ತಿಯಿಂದಲೇ ಇಲ್ಲಿ ಎಲ್ಲ ಭೋಗಭಾಗ್ಯಗಳನ್ನೂ ಅನುಭವಿಸಿ ಪರದಲ್ಲಿಯೂ ಶಾಶ್ವತವಾದ ಸುಖವನ್ನು ಪಡೆದನು.

೧೫. ನೀನು ಸತ್ಯರಥನೆಂಬ ದೊರೆಯ ಕಷ್ಟವನ್ನು ಪರಿಹರಿಸಿ ಆತನಿಗೆ ಸದ್ಗತಿಯನ್ನು ಇತ್ತುದಲ್ಲದೆ ಆತನ ಮಗನಾದ ಧರ್ಮಗುಪ್ತನೆಂಬುವವನನ್ನೂ ಸುಖಿಯನ್ನಾಗಿ ಮಾಡಿದೆ.

೧೬. ಹೇ ಮಹಾಪ್ರಭೂ, ಅದರಂತೆಯೇ ಶುಚಿವ್ರತನೆಂಬ ಧನಿಕನಾದ ಬ್ರಾಹ್ಮಣನು ತನ್ನ ತಾಯಿಯುಪ್ಪಣೆಯಂತೆ, ನಿನ್ನಲ್ಲಿ ಭಕ್ತಿಯನ್ನು ಅವಲಂಬಿಸಿದುದರಿಂದ ನೀನು ಅವನಲ್ಲಿ ಕೃಪೆಯಿಟ್ಟು, ಆತನನ್ನು ಜ್ಞಾನಿಯನ್ನಾಗಿಮಾಡಿದೆ.

೧೭. ಚಿತ್ರವರ್ಮನೆಂಬ ರಾಜೇಂದ್ರನು ನಿನ್ನಲ್ಲಿ ಭಕ್ತಿಯಿಂದಲೇ ಇಹದಲ್ಲಿ ದೇವತೆಗಳಿಗೂ ಸಿಗಲಾರದಂತಹ ಅನೇಕ ಭೋಗಭಾಗ್ಯಗಳನ್ನು ಅನುಭವಿಸಿ ಕೊನೆಯಲ್ಲಿ ಸದ್ಗತಿಯನ್ನು ಪಡೆದನು.

ಚಂದ್ರಾಂಗದೋ ರಾಜಪುತ್ರಸ್ಸೀಮಂತಿನ್ಯಾ ಸ್ತ್ರಿಯಾ ಸಹ ।
ವಿಹಾಯ ಸಕಲಂ ದುಃಖಂ ಸುಖೀ ಪ್ರಾಪ ಮಹಾಗತಿಂ ॥ ೧೮ ॥

ದ್ವಿಜೋ ಮದರನಾಮಾಪಿ ವೇಶ್ಯಾಗಾಮೀ ಖಲೋಽಧಮಃ ।
ತ್ವದ್ಭಕ್ತಾಂ ಶಿವ ಸಂಪೂಜ್ಯ ತಯಾ ಸಹ ಗತಿಂ ಗತಃ ॥ ೧೯ ॥

ಭದ್ರಾಯುಸ್ತೇ ನೃಪಸುತಸ್ಸುಖಮಾಪ ಗತವ್ಯಥಃ ।
ತ್ವದ್ಭಕ್ತಕೃಪಯಾ ಮಾತ್ರಾ ಗತಿಂ ಚ ಪರಮಾಂ ಪ್ರಭೋ ॥ ೨೦ ॥

ಸರ್ವಸ್ತ್ರೀಭೋಗನಿರತೋ ದುರ್ಜನಸ್ತ್ವ ಸೇವಯಾ ।
ವಿಮುಕ್ತೋಽಭೂದಪಿ ಸದಾಭಕ್ಷ್ಯಭೋಜೀ ಮಹೇಶ್ವರ ॥ ೨೧ ॥

ಶಂವರಶ್ಶಂಕರೋ ಭಕ್ತಶ್ಚಿತಾಭಸ್ಮಧರಸ್ಸದಾ ।
ನಿಯಮಾದ್ಭಸ್ಮನಶ್ಶಂಭೋ ಸ್ವಸ್ತ್ರಿಯಾ ತೇ ಪುರಂ ಗತಃ ॥ ೨೨ ॥

---

೧೮. ಚಂದ್ರಾಂಗದನೆಂಬ ರಾಜಕುಮಾರನು ಸೀಮಂತಿನಿಯೆಂಬ ತನ್ನ ಪ್ರಿಯೆಯೊಡನೆ, ಎಲ್ಲ ದುಃಖಗಳನ್ನೂ ತೊರೆದು, ಸುಖವಾಗಿರುತ್ತಾ, ಉತ್ತಮವಾದ ಗತಿಯನ್ನು ಹೊಂದಿದನು.

೧೯. ಅತಿನೀಚನೂ, ಪರಮಪಾಪಿಯೂ, ಸದಾ ಸೂಳೆಯರ ಸಹವಾಸದಲ್ಲೇ ಇರುವವನೂ ಆದ ಮದರನೆಂಬ ಬ್ರಾಹ್ಮಣನು ನಿನ್ನ ಭಕ್ತಳಾದ ವೇಶ್ಯೆಯೋರ್ವಳನ್ನು ಸೇವಿಸುತ್ತಾ, ಆ ಮಹಿಮೆಯಿಂದಲೇ ಅವಳೊಡನೆ ದಿವ್ಯವಾದ ಗತಿಯನ್ನು ಹೊಂದಿದನು.

೨೦. ಹೇ ಪ್ರಭೂ, ಭದ್ರಾಯುವೆಂಬ ರಾಜಕುಮಾರನು, ನಿನ್ನ ಭಕ್ತನ ಅನುಗ್ರಹದಿಂದ ಇಹಲೋಕದಲ್ಲಿ ಒದಗಿದ್ದ ತೊಂದರೆಗಳೆಲ್ಲವನ್ನೂ ತೊರೆದು ಸುಖವಾಗಿದ್ದು ಕೊನೆಗೆ ತನ್ನ ತಾಯಿಯೊಡನೆ ಶಾಶ್ವತವಾದ ಗತಿಯನ್ನೂ ಪಡೆದನು.

೨೧. ಓ ಮಹೇಶ್ವರ, ಸರ್ವದಾ ಅಭಕ್ಷ್ಯಭಕ್ಷಣ, ಅಗಮ್ಯಾಗಮನ, ಮೊದಲಾದ ವಿಹೀನ ಕರ್ಮಗಳಲ್ಲೇ ತೊಡಗಿದ್ದ ದುರ್ಜನನೆಂಬುವವನು, ನಿನ್ನ ಸೇವೆಯಿಂದ ಮುಕ್ತಿಯನ್ನು ಪಡೆದನು.

೨೨. ಸರ್ವದಾ ಸತ್ಕಾರ್ಯಗಳನ್ನು ಮಾಡುತ್ತಾ, ಚಿತಾಭಸ್ಮವನ್ನು ಧಾರಣೆ ಮಾಡುತ್ತಿದ್ದ ಶಂವರನೆಂಬುವನು, ಆ ಭಸ್ಮ ನಿಯಮದಿಂದಲೇ, ತನ್ನ ಮಡದಿಯೊಡನೆ ನಿನ್ನ ಲೋಕವನ್ನು ಸೇರಿದನು.

ಭದ್ರಸೇನಸ್ಯ ತನಯಸ್ತಥಾ ಮಂತ್ರಿಸುತಃ ಪ್ರಭೋ ।
ಸುಧರ್ಮಶುಭಕರ್ಮಾಣೌ ಸದಾ ರುದ್ರಾಕ್ಷಧಾರಿಣೌ ॥ ೨೩ ॥

ತ್ವತ್ಕೃಪಾತಶ್ಚ ತೌ ಮುಕ್ತಾವಾಸ್ತಾಂ ಭುಕ್ತ್ವೇಹ ಸತ್ಸುಖಂ ।
ಪೂರ್ವಜನ್ಮನಿ ಯೌ ಕೀಶಕುಕ್ಕುಟೌ ರುದ್ರಭೂಷಣೌ ॥ ೨೪ ॥

ಪಿಂಗಲಾ ಚ ಮಹಾನಂದಾ ವೇಶ್ಯೇ ದ್ವೇ ತವ ಭಕ್ತಿತಃ ।
ಸದ್ಗತಿಂ ಪ್ರಾಪತುರ್ನಾಥ ಭಕ್ತೋದ್ಧಾರಪರಾಯಣ ॥ ೨೫ ॥

ಶಾರದಾ ವಿಪ್ರತನಯಾ ಬಾಲವೈಧವ್ಯಮಾಗತಾ ।
ತವಭಕ್ತೇ ಪ್ರಭಾವಾತ್ತು ಪುತ್ರಸೌಭಾಗ್ಯವತ್ಯಭೂತ್ ॥ ೨೬ ॥

ಬಿಂದುಗೋ ದ್ವಿಜಮಾತ್ರೋ ಹಿ ವೇಶ್ಯಾಭೋಗೀ ಚ ತತ್ಪ್ರಿಯಾ ।
ವಂಚುಕಾ ತ್ವದ್ಯಶಃ ಶ್ರುತ್ವಾ ಪರಮಾಂ ಗತಿಮಾಯಯೌ ॥ ೨೭ ॥

---

೨೩-೨೪. ಹೇ ಪ್ರಭೂ, ಹಿಂದಿನ ಜನ್ಮದಲ್ಲಿ ಭಯಂಕರವಾದ ರೂಪವುಳ್ಳ ಕೋತಿ, ಕೋಳಿಗಳಾಗಿದ್ದು, ಈ ಜನ್ಮದಲ್ಲಿ ಭದ್ರಸೇನನೆಂಬ ರಾಜನ ಮತ್ತು ಆತನ ಮಂತ್ರಿಯ ಮಕ್ಕಳಾಗಿ ಹುಟ್ಟಿದ ಸುಧರ್ಮ, ಶುಭಕರ್ಮ, ಎಂಬುವರಿಬ್ಬರು, ಸರ್ವದಾ ರುದ್ರಾಕ್ಷಿಗಳನ್ನು ಧರಿಸುತ್ತಾ ಇದ್ದು ನಿನ್ನ ಕೃಪೆಯಿಂದ ಇಹಲೋಕದಲ್ಲಿ ಸರ್ವಸುಖ ಗಳನ್ನೂ ಪಡೆದು, ಕೊನೆಗೆ ಮುಕ್ತಿಯನ್ನು ಹೊಂದಿದರು.

೨೫. ಭಕ್ತರನ್ನು ಉದ್ಧರಿಸುವುದರಲ್ಲೇ ಆಸಕ್ತನಾದ ಸ್ವಾಮಿಯೇ, ಪಿಂಗಳೆ, ಮಹಾನಂದೆಯೆಂಬ ವೇಶ್ಯೆಯರಿಬ್ಬರು ನಿನ್ನ ಭಕ್ತಿಯಿಂದಲೇ ಸದ್ಗತಿಯನ್ನು ಪಡೆದರು.

೨೬. ಬಾಲ್ಯದಲ್ಲಿಯೇ ಗಂಡನನ್ನು ಕಳೆದುಕೊಂಡ ಶಾರದೆಯೆಂಬ ಬ್ರಾಹ್ಮಣನ ಮಗಳೊಬ್ಬಳು ನಿನ್ನ ಭಕ್ತಿಯ ಮಹಿಮೆಯಿಂದ ಪುತ್ರಸೌಭಾಗ್ಯವನ್ನು ಹೊಂದಿದಳು.

೨೭. ಸರ್ವದಾ ವೇಶ್ಯಾಸಕ್ತನಾಗಿ, ಹೆಸರಿಗೆ ಮಾತ್ರ ಬ್ರಾಹ್ಮಣನಾದ ಬಿಂದುಗನೆಂಬುವವನೂ, ಆತನ ಹೆಂಡತಿಯಾದ ವಂಚುಕೆಯೆಂಬುವಳೂ ನಿನ್ನ ಪುಣ್ಯವಾದ ಚರಿತ್ರವನ್ನು ಕೇಳಿ ಶ್ರೇಷ್ಠವಾದ ಗತಿಯನ್ನು ಪಡೆದರು.

ಇತ್ಯಾದಿ ಬಹವಸ್ಸಿದ್ಧಿಂ ಗತಾ ಜೀವಾಸ್ತವ ಪ್ರಭೋ ।
ಭಕ್ತಿಭಾವಾನ್ಮಹೇಶಾನ ದೀನಬಂಧೋ ಕೃಪಾಲಯ ॥ ೨೮ ॥

ತ್ವಂ ಪರಃ ಪ್ರಕೃತೇರ್ಬ್ರಹ್ಮ ಪುರುಷಾತ್ಪರಮೇಶ್ವರ ।
ನಿರ್ಗುಣಸ್ತ್ರಿಗುಣಾಧಾರೋ ಬ್ರಹ್ಮವಿಷ್ಣುಹರಾತ್ಮಕಃ ॥ ೨೯ ॥

ನಾನಾಕರ್ಮಕರೋ ನಿತ್ಯಂ ನಿರ್ವಿಕಾರೋಽಖಿಲೇಶ್ವರಃ ।
ವಯಂ ಬ್ರಹ್ಮಾದಯಸ್ಸರ್ವೇ ತವ ದಾಸಾ ಮಹೇಶ್ವರ ॥ ೩೦ ॥

ಪ್ರಸನ್ನೋ ಭವ ದೇವೇಶ ರಕ್ಷಾಸ್ಮಾನ್ಸರ್ವದಾ ಶಿವ ।
ತ್ವತ್ಪ್ರಜಾಶ್ಚ ವಯಂ ನಾಥ ಸದಾ ತ್ವಚ್ಛರಣಂ ಗತಾಃ ॥ ೩೧ ॥

॥ ಸನತ್ಕುಮಾರ ಉವಾಚ ॥

ಇತಿ ಸ್ತುತ್ವಾ ಚ ತೇ ದೇವಾ ಬ್ರಹ್ಮಾದ್ಯಾಸ್ಸಮುನೀಶ್ವರಾಃ ।
ತೂಷ್ಣೀಂ ಬಭೂವುರ್ಹಿ ತದಾ ಶಿವಾಂಘ್ರಿದ್ವಂದ್ವಚೇತಸಃ ॥ ೩೨ ॥

---

೨೮. ಹೇ ಪ್ರಭೂ, ದೀನದಯಾಳೂ, ಕೃಪಾಕರಾ, ಓ ಮಹೇಶಾ, ಈ ರೀತಿಯಾಗಿ ಅನೇಕಮಂದಿ ಜೀವರು, ನಿನ್ನ ಭಕ್ತಿಯಿಂದಲೇ ಸಿದ್ಧಿಯನ್ನು ಪಡೆದಿರುವರು.

೨೯. ಓ ಪರಮೇಶ್ವರ, ನೀನು ಪ್ರಕೃತಿಗೂ, ಪುರುಷನಿಗೂ ಮೇಲಾದ ಪರಬ್ರಹ್ಮನಾಗಿರುವೆ. ನೀನು ನಿರ್ಗುಣನಾದರೂ ಸತ್ತ್ವರಜಸ್ತಮೋಗುಣಗಳಿಗೆ ಆಶ್ರಯನಾಗಿ ಬ್ರಹ್ಮ, ವಿಷ್ಣು, ಹರರೆಂಬುದಾಗಿ ಹೆಸರುಪಡೆದಿರುವೆ.

೩೦. ನೀನು ಸರ್ವದಾ, ಎಲ್ಲ ಕರ್ಮಗಳನ್ನೂ ನಡೆಸುತ್ತಾ, ನಿರ್ವಿಕಾರನೂ, ಸರ್ವೇಶ್ವರನೂ ಆಗಿರುವೆ. ಓ ಮಹೇಶ್ವರ, ಬ್ರಹ್ಮನೇ ಮೊದಲಾದ ನಾವೆಲ್ಲರೂ ನಿನ್ನ ಸೇವಕರಾಗಿರುವೆವು.

೩೧. ಓ ದೇವೇಶ, ನೀನು ನಮ್ಮಲ್ಲಿ ಪ್ರಸನ್ನನಾಗು. ನಮ್ಮನ್ನು ಎಂದೆಂದಿಗೂ ಕೈಬಿಡದೆ ಕಾಪಾಡು. ಓ ಮಂಗಳಸ್ವರೂಪ, ನಾವೆಲ್ಲರೂ ನಿನ್ನ ಮಕ್ಕಳು. ನಿನ್ನನ್ನು ಯಾವಾಗಲೂ ಮರೆಹೊಕ್ಕಿರುವೆವು ಎಂದು ಪ್ರಾರ್ಥಿಸಿದರು.

೩೨. ಓ ವ್ಯಾಸ, ಈರೀತಿಯಾಗಿ ಆ ಬ್ರಹ್ಮಾದಿದೇವತೆಗಳೆಲ್ಲರೂ ಆ ಮುನಿಗಳೊಂದಿಗೆ ಶಿವನನ್ನು ಸ್ತೋತ್ರಮಾಡಿ, ಆತನ ಪದಯುಗವನ್ನೇ ಧ್ಯಾನಿಸುತ್ತಾ ಸುಮ್ಮನೆ ನಿಂತುಕೊಂಡರು.

ಅಥ ಶಂಭುರ್ಮಹೇಶಾನಃ ಶ್ರುತ್ವಾ ದೇವಸ್ತುತಿಂ ಶುಭಾಂ ।
ದತ್ವಾ ವರಾನ್ಸ್ವರಾನ್ಸದ್ಯಸ್ತತ್ರೈವಾಂತರ್ದಧೇ ಪ್ರಭುಃ　　॥ ೩೩ ॥

ದೇವಾಸ್ಸರ್ವೇಽಪಿ ಮುದಿತಾ ಬ್ರಹ್ಮಾದ್ಯಾ ಹತಶತ್ರವಃ ।
ಸ್ವಂ ಸ್ವಂ ಧಾಮ ಯಯುಃ ಪ್ರೀತಾ ಗಾಯಂತಃ ಶಿವಸದ್ಯಶಃ　　॥ ೩೪ ॥

ಇದಂ ಪರಮಮಾಖ್ಯಾನಂ ಜಲಂಧರವಿಮರ್ದನಂ ।
ಮಹೇಶಚರಿತಂ ಪುಣ್ಯಂ ಮಹಾಘೌಘವಿನಾಶನಂ　　॥ ೩೫ ॥

ದೇವಸ್ತುತಿರಿಯಂ ಪುಣ್ಯಾ ಸರ್ವಪಾಪಪ್ರಣಾಶಿನೀ ।
ಸರ್ವಸೌಖ್ಯಪ್ರದಾ ನಿತ್ಯಂ ಮಹೇಶಾನಂದದಾಯಿನೀ　　॥ ೩೬ ॥

---

೩೩. ಬಳಿಕ ಶಿವನು ಮಂಗಳಕರವಾದ ಆ ದೇವತೆಗಳ ಸ್ತೋತ್ರವನ್ನು ಕೇಳಿ, ಅವರೆಲ್ಲರಿಗೂ ಶ್ರೇಷ್ಠವಾದ ವರಗಳನ್ನು ಅನುಗ್ರಹಿಸಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೩೪. ಹೀಗೆ ಶತ್ರುವು ಹತನಾಗಲು, ಬ್ರಹ್ಮಾದಿದೇವತೆಗಳೆಲ್ಲರೂ ಬಹಳ ಹರ್ಷದಿಂದ ಶಿವನ ಪವಿತ್ರವಾದ ಕೀರ್ತಿಯನ್ನು ಗಾನಮಾಡುತ್ತಾ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

೩೫. ಈ ಜಲಂಧರ ಸಂಹಾರವನ್ನು ಒಳಗೊಂಡ ಈ ಆಖ್ಯಾನವು ಉತ್ತಮವಾದುದು. ಈ ಶಿವನ ಚರಿತ್ರವು ಪರಮಪಾವನವಾದುದು. ಅತಿ ಘೋರವಾದ ಮಹಾಪಾಪಗಳನ್ನೂ ಹೋಗಲಾಡಿಸುವದು.

೩೬. ದೇವತೆಗಳು ಮಾಡಿದ ಈ ಸ್ತೋತ್ರವು ಮಹಾ ಪುಣ್ಯಕರವಾದುದು ಎಲ್ಲ ಪಾಪಗಳನ್ನೂ ಪರಿಹರಿಸುವುದು. ಸಮಸ್ತ ಸೌಖ್ಯಗಳನ್ನೂ ಕೊಡುವುದು ನಿತ್ಯವೂ ಶಿವನಿಗೆ ಆನಂದವನ್ನುಂಟುಮಾಡುವುದು.

ಯಃ ಪಠೇತ್ಪಾಠಯೇದ್ವಾಪಿ ಸಮಾಖ್ಯಾನಮಿದಂ ದ್ವಯಂ ।
ಸ ಭುಕ್ತ್ವೇಹ ಪರಂ ಸೌಖ್ಯಂ ಗಾಣಪತ್ಯಮವಾಪ್ನುಯಾತ್ ॥ ೩೭ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರವಧೋಪಾಖ್ಯಾನೇ
ದೇವಸ್ತುತಿವರ್ಣನಂ ನಾಮ ಪಂಚವಿಂಶೋಽಧ್ಯಾಯಃ

---

೩೭. ಈ ಎರಡು ಉಪಾಖ್ಯಾನಗಳನ್ನೂ ಯಾರು ಓದುವರೋ, ಯಾರು ಓದಿಸಿ ಕೇಳುವರೋ, ಅವರು ಇಹಲೋಕದಲ್ಲಿ ಉತ್ತಮವಾದ ಸೌಖ್ಯಗಳನ್ನು ಅನುಭವಿಸಿ, ಕೊನೆಗೆ ಗಣಾಧಿಪತ್ಯವನ್ನು ಹೊಂದುವರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ದೇವಸ್ತುತಿವರ್ಣನವೆಂಬ ಇಪ್ಪತ್ತೈದನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಷಡ್ವಿಂಶೋऽಧ್ಯಾಯಃ

॥ ವ್ಯಾಸ ಉವಾಚ ॥

ಬ್ರಹ್ಮಪುತ್ರ ನಮಸ್ತೇऽಸ್ತು ಧನ್ಯಸ್ತ್ವಂ ಶೈವಸತ್ತಮ ।
ಯಚ್ಛ್ರಾವಿತಾ ಮಹಾದಿವ್ಯಾ ಕಥೇಯಂ ಶಾಂಕರೀ ಶುಭಾ ॥ ೧ ॥

ಇದಾನೀಂ ಬ್ರೂಹಿ ಸುಪ್ರೀತ್ಯಾ ಚರಿತಂ ವೈಷ್ಣವಂ ಮುನೇ ।
ಸ ವೃಂದಾಂ ಮೋಹಯಿತ್ವಾ ತು ಕಿಮಕಾರ್ಷೀತ್ಕುತೋ ಗತಃ ॥ ೨ ॥

---

### ಇಪ್ಪತ್ತಾರನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯು ಬ್ರಹ್ಮಪುತ್ರನಾದ ಸನತ್ಕುಮಾರನನ್ನು ಕುರಿತು:— ಓ ಶೈವಶ್ರೇಷ್ಠ, ಪರಮಪಾವನವಾದ ಅತ್ಯದ್ಭುತವಾದ ಶಿವನ ಚರಿತ್ರವನ್ನು ನನಗೆ ತಿಳಿಸಿದೆ. ನೀನು ಧನ್ಯನು.

೨. ಓ ಮುನೀಂದ್ರ, ಈಗ ನೀನು ನನ್ನಲ್ಲಿ ವಿಶ್ವಾಸವನ್ನಿಟ್ಟು ವಿಷ್ಣುವಿನ ಚರಿತ್ರವನ್ನು ತಿಳಿಸು. ಆ ವಿಷ್ಣುವು ವೃಂದೆಯನ್ನು ಮೋಹಗೊಳಿಸಿದಮೇಲೆ ಏನು ಮಾಡಿದನು ? ಎಲ್ಲಿಗೆ ಹೋದನು ? ಎಂದನು.

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಮಹಾಪ್ರಾಜ್ಞ ಶೈವಪ್ರವರ ಸತ್ತಮ ।
ವೈಷ್ಣವಂ ಚರಿತಂ ಶಂಭುಚರಿತಾಢ್ಯಂ ಸುನಿರ್ಮಲಂ ॥ ೩ ॥

ಮೌನೀಭೂತೇಷು ದೇವೇಷು ಬ್ರಹ್ಮಾದಿಷು ಮಹೇಶ್ವರಃ ।
ಸುಪ್ರಸನ್ನೋಽವದಚ್ಛಂಭುಶ್ಶರಣಾಗತವತ್ಸಲಃ ॥ ೪ ॥

॥ ಶಂಭುರುವಾಚ ॥

ಬ್ರಹ್ಮನ್ದೇವವರಾಸ್ಸರ್ವೇ ಭವದರ್ಥೇ ಮಯಾ ಹತಃ ।
ಜಲಂಧರೋ ಮದಂಶೋಽಪಿ ಸತ್ಯಂ ಸತ್ಯಂ ವದಾಮ್ಯಹಂ ॥ ೫ ॥

ಸುಖಮಾಪುರ್ನ ವಾ ತಾತಾಸ್ಸತ್ಯಂ ಬ್ರೂತಾಮರಾಃ ಖಲು ।
ಭವತ್ಕೃತೇ ಹಿ ಮೇ ಲೀಲಾ ನಿರ್ವಿಕಾರಸ್ಯ ಸರ್ವದಾ ॥ ೬ ॥

॥ ಸನತ್ಕುಮಾರ ಉವಾಚ ॥

ಅಥ ಬ್ರಹ್ಮಾದಯೋ ದೇವಾ ಹರ್ಷಾದುತ್ಫುಲ್ಲಲೋಚನಾಃ ।
ಪ್ರಣಮ್ಯ ಶಿರಸಾ ರುದ್ರಂ ಶಶಂಸುರ್ವಿಷ್ಣುಚೇಷ್ಟಿತಂ ॥ ೭ ॥

---

೩. ಆಗ ಸನತ್ಕುಮಾರನು ವ್ಯಾಸನನ್ನು ಕುರಿತು ಇಂತೆಂದನು ;—ಓ ಮಹಾಪ್ರಾಜ್ಞ, ನೀನು ಶಿವಭಕ್ತನು, ಶಿವನಚರಿತ್ರೆಯನ್ನೊಳಗೊಂಡ ಪಾವನವಾದ ವಿಷ್ಣುವಿನ ಚರಿತ್ರವನ್ನು ಹೇಳುವೆನು ಕೇಳು.

೪-೫. ಬ್ರಹ್ಮಾದಿದೇವತೆಗಳು ತನ್ನನ್ನು ಸ್ತುತಿಸಿ ಸುಮ್ಮನೆ ನಿಂತುಕೊಂಡ ಮೇಲೆ ಶರಣಾಗತವತ್ಸಲನಾದ ಶಿವನು ಅವರಲ್ಲಿ ಪ್ರಸನ್ನನಾಗಿ ಎಲೈ ಬ್ರಹ್ಮಾದಿದೇವತೆಗಳಿರಾ, ಆ ಜಲಂಧರನು ನನ್ನ ಅಂಶದಿಂದ ಉತ್ಪನ್ನನಾಗಿದ್ದರೂ ನಿಮ್ಮ ಕ್ಷೇಮಕ್ಕಾಗಿ ನಾನೇ ಅವನನ್ನು ಕೊಂದೆನು. ಇದು ಸತ್ಯವು.

೬. ಎಲೈ ದೇವತೆಗಳಿರಾ, ನಿಜವನ್ನು ಹೇಳಿರಿ. ನಿಮಗೆ ಸುಖವುಂಟಾಯಿತೋ ಇಲ್ಲವೋ ? ನಿಮಗೋಸ್ಕರವಾಗಿಯೇ ಯಾವ ವಿಕಾರವೂ ಇಲ್ಲದ ನಾನು ಈರೀತಿ ಯಾವಾಗಲೂ ಲೀಲೆಗಳನ್ನು ವಹಿಸುತ್ತಿರುವೆನು ಎಂದನು.

೭. ಬಳಿಕ ಬ್ರಹ್ಮಾದಿದೇವತೆಗಳು ಹರ್ಷದಿಂದ ಆ ಶಿವನಿಗೆ ತಲೆಬಾಗಿ ನಮಸ್ಕರಿಸಿ ವಿಷ್ಣುವು ನಡೆಸಿದ ಕಾರ್ಯಗಳನ್ನು ವಿವರಿಸಿದರು.

॥ ದೇವಾ ಊಚುಃ ॥

ಮಹಾದೇವ ತ್ವಯಾ ದೇವ ರಕ್ಷಿತಾಶ್ಯತ್ರುಜಾದ್ಭಯಾತ್ ।
ಕಿಂಚಿದನ್ಯತ್ಸಮುದ್ಭೂತಂ ತತ್ರ ಕಿಂ ಕರವಾಮಹೈ ॥ ೮ ॥

ವೃಂದಾ ವಿಮೋಹಿತಾ ನಾಥ ವಿಷ್ಣುನಾ ಹಿ ಪ್ರಯತ್ನತಃ ।
ಭಸ್ಮೀಭೂತಾ ದ್ರುತಂ ವಹ್ನೌ ಪರಮಾಂ ಗತಿಮಾಗತಾ ॥ ೯ ॥

ವೃಂದಾಲಾವಣ್ಯಸಂಭ್ರಾಂತೋ ವಿಷ್ಣುಸ್ತಿಷ್ಠತಿ ಮೋಹಿತಃ ।
ತಚ್ಚಿತಾಭಸ್ಮಸಂಧಾರೀ ತವ ಮಾಯಾ ವಿಮೋಹಿತಃ ॥ ೧೦ ॥

ಸ ಸಿದ್ಧಮುನಿಸಂಘೈಶ್ಚ ಬೋಧಿತೋಽಸ್ಮಾಭಿರಾದರಾತ್ ।
ನ ಬುಧ್ಯತೇ ಹರಿಸ್ಸೋಽಥ ತವ ಮಾಯಾವಿಮೋಹಿತಃ ॥ ೧೧ ॥

ಕೃಪಾಂ ಕುರು ಮಹೇಶಾನ ವಿಷ್ಣುಂ ಬೋಧಯ ಬೋಧಯ ।
ತ್ವದಧೀನಮಿದಂ ಸರ್ವಂ ಪ್ರಾಕೃತಂ ಸಚರಾಚರಂ ॥ ೧೨ ॥

---

೮. ಓ ಮಹಾದೇವ, ಶತ್ರುವಿನಿಂದ ಒದಗಿದ್ದ ಭಯವೇನೋ ಸ್ವಾಮಿಯಿಂದ ನಿವಾರಿಸಲ್ಪಟ್ಟು ನಾವು ಕಾಪಾಡಲ್ಪಟ್ಟೆವು. ಆದರೆ ಈಗ ನಮಗೆ ಬೇರೊಂದು ಆಪತ್ತು ಸಂಘಟಿಸಿರುವುದು, ಅದಕ್ಕೇನುಮಾಡುವುದು ?

೯. ಎಲೈ ಪ್ರಭುವೇ, ವಿಷ್ಣುವು ಬಹುಸಾಹಸಪಟ್ಟು ವೃಂದೆಯನ್ನು ಮೋಹ ಗೊಳಿಸಿ ಅವಳನ್ನು ಭ್ರಷ್ಟಚರಿತ್ರಳನ್ನಾಗಿ ಮಾಡಲು, ಆಕೆಯು ಒಡನೆಯೇ ಬೆಂಕಿ ಯಲ್ಲಿ ತನ್ನ ದೇಹವನ್ನು ನೀಗಿ ಉತ್ತಮವಾದ ಗತಿಯನ್ನು ಹೊಂದಿದಳಷ್ಟೆ ?

೧೦. ನಿನ್ನ ಮಾಯೆಗೆ ಒಳಪಟ್ಟು ಮೋಹಿತನಾದ ಆ ವಿಷ್ಣುವು ವೃಂದೆಯ ಲಾವಣ್ಯದಿಂದ ಉನ್ಮತ್ತನಾದಂತಾಗಿ ಅವಳ ಚಿತಾಭಸ್ಮವನ್ನೇ ಮೈಗೆ ಬಳಿದುಕೊಂಡು ಅಲ್ಲೇ ಇದ್ದುಬಿಟ್ಟಿರುವನು.

೧೧. ಸಿದ್ಧರೂ ಮುನಿಗಳೂ ನಾವೂ ಎಷ್ಟುಪರಿಯಾಗಿ ವಿಶ್ವಾಸದಿಂದ ತಿಳಿಯ ಹೇಳಿದರೂ ಕೇಳದೆ ಆ ಹರಿಯು ನಿನ್ನ ಮಾಯೆಯಿಂದ ವಿಮೋಹಿತನಾಗಿ ಆ ಭ್ರಾಂತಿ ಯನ್ನು ತೊರೆಯಲಿಲ್ಲ.

೧೨. ಓ ಮಹೇಶ್ವರ, ನಮ್ಮಲ್ಲಿ ಕೃಪೆಯನ್ನಿಡು. ವಿಷ್ಣುವನ್ನು ಎಚ್ಚರ ಗೊಳಿಸು. ಚರಾಚರವಸ್ತುಗಳಿಂದ ತುಂಬಿದ ಈ ಪ್ರಪಂಚವೆಲ್ಲವೂ ನಿನ್ನ ಅಧೀನ ವಾಗಿಯೇ ಇರುವುದು ಎಂದರು.

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ಮಹೇಶೋ ಹಿ ವಚನಂ ತ್ರಿದಿವೌಕಸಾಂ ।
ಪ್ರತ್ಯುವಾಚ ಮಹಾಲೀಲಸ್ಸ್ವಚ್ಛಂದಸ್ತಾನ್ಕೃತಾಂಜಲೀನ್ ॥ ೧೩ ॥

॥ ಮಹೇಶ್ವರ ಉವಾಚ ॥

ಹೇ ಬ್ರಹ್ಮನ್ಹೇ ಸುರಾಸ್ಸರ್ವೇ ಮದ್ವಾಕ್ಯಂ ಶೃಣುತಾದರಾತ್ ।
ಮೋಹಿನೀ ಸರ್ವಲೋಕಾನಾಂ ಮಮ ಮಾಯಾ ದುರತ್ಯಯಾ ॥ ೧೪ ॥

ತದಧೀನಂ ಜಗತ್ಸರ್ವಂ ಯದ್ದೇವಾಸುರಮಾನುಷಂ ।
ತಯೈವ ಮೋಹಿತೋ ವಿಷ್ಣುಃ ಕಾಮಾಧೀನೋಽಭವದ್ಧರಿಃ ॥ ೧೫ ॥

ಉಮಾಖ್ಯಾ ಸಾ ಮಹಾದೇವೀ ತ್ರಿದೇವಜನನೀ ಪರಾ ।
ಮೂಲಪ್ರಕೃತಿರಾಖ್ಯಾತಾ ಸುರಾಮಾ ಗಿರಿಜಾತ್ಮಿಕಾ ॥ ೧೬ ॥

---

೧೩. ಸನತ್ಕುಮಾರನಿಂತೆಂದನು :—ಹೀಗೆ ದೇವತೆಗಳು ನುಡಿದುದನ್ನು ಕೇಳಿ ಲೀಲಾವಿಹಾರಿಯಾದ ಆ ಶಿವನು ಕೈಮುಗಿದುಕೊಂಡು ನಿಂತಿರುವ ಅವರನ್ನು ಕುರಿತು,

೧೪. ಎಲೈ ಬ್ರಹ್ಮಾದಿದೇವತೆಗಳಿರಾ, ನನ್ನ ಮಾತನ್ನು ಆದರದೊಡನೆ ಕೇಳಿರಿ. ನನ್ನ ಮಾಯೆಯು ಎಲ್ಲರನ್ನೂ ಮೋಹಗೊಳಿಸುವುದು. ಅದನ್ನು ಮೀರಲು ಯಾರಿಗೂ ಸಾಧ್ಯವಿಲ್ಲ.

೧೫. ದೇವತೆಗಳೂ ರಾಕ್ಷಸರೂ ಮನುಷ್ಯರೂ ಇವರಿಂದ ಪರಿಪೂರ್ಣವಾದ ಈ ಜಗತ್ತೆಲ್ಲವೂ ಆ ಮಾಯೆಗೆ ಅಧೀನವಾಗಿರುವುದು. ಆ ಮಾಯೆಯಿಂದಲೇ ವಿಷ್ಣುವೂ ಮೋಹಗೊಳಿಸಲ್ಪಟ್ಟು ಮದನಪರವಶನಾಗಿರುವನು.

೧೬. ಆ ಮಾಯೆಯೇ ಉಮಾ ಎಂಬ ಹೆಸರಿನಿಂದ ನನ್ನ ರಾಣಿಯಾಗಿರುವಳು. ಅವಳೇ ಕಾರಣಪುರುಷರಾದ ಬ್ರಹ್ಮ, ವಿಷ್ಣು, ರುದ್ರರ ಜನನಿಯಾಗಿರುವಳು. ಸೊಬಗಿನಕಣಿಯಾದ ಆ ಗಿರಿಜೆಯೇ ಮೂಲಪ್ರಕೃತಿಯಾಗಿರುವಳು.

ಗಚ್ಛಧ್ವಂ ಶರಣಾ ದೇವಾ ವಿಷ್ಣುಮೋಹಾಪನುತ್ತಯೇ ।
ಶರಣ್ಯಾಂ ಮೋಹಿನೀಂ ಮಾಯಾಂ ಶಿವಾಖ್ಯಾಂ ಸರ್ವಕಾಮದಾಂ ॥ ೧೭ ॥

ಸ್ತುತಿಂ ಕುರುತ ತಸ್ಯಾಶ್ಚ ಮಚ್ಛಕ್ತೇಸ್ತೋಷಕಾರಿಣೀಂ ।
ಸುಪ್ರಸನ್ನಾ ಯದಿ ಚ ಸಾ ಸರ್ವಂ ಕಾರ್ಯಂ ಕರಿಷ್ಯತಿ ॥ ೧೮ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ತಾನ್ಸುರಾನ್ಶಂಭುಃ ಪಂಚಾಸ್ಯೋ ಭಗವಾನ್ಹರಃ ।
ಅಂತರ್ದಧೇ ದ್ರುತಂ ವ್ಯಾಸ ಸರ್ವೈಶ್ಚ ಸ್ವಗಣೈಸ್ಸಹ ॥ ೧೯ ॥

ದೇವಾಶ್ಚ ಶಾಸನಾಚ್ಛಂಭೋರ್ಬ್ರಹ್ಮಾದ್ಯಾ ಹಿ ಸವಾಸವಾಃ ।
ಮನಸಾ ತುಷ್ಟುವುರ್ಮೂಲಪ್ರಕೃತಿಂ ಭಕ್ತವತ್ಸಲಾಂ ॥ ೨೦ ॥

---

೧೭. ಎಲೈ ದೇವತೆಗಳಿರಾ, ನೀವೆಲ್ಲರೂ ವಿಷ್ಣುವಿಗೆ ಕವಿದಿರುವ ಆ ಮೋಹವು ಪರಿಹಾರವಾಗುವುದಕ್ಕಾಗಿ ಎಲ್ಲರನ್ನೂ ಮೋಹಗೊಳಿಸುವವಳೂ, ಎಲ್ಲ ಇಷ್ಟಾರ್ಥಗಳನ್ನೂ ಈಯುವವಳೂ ಆದ ಶಿವೆಯೆಂಬ ಆ ಶರಣಾಗತವತ್ಸಲೆಯಾದ ಮಾಯೆಯನ್ನು ಮರೆಹೊಗಿರಿ.

೧೮. ನನ್ನ ಶಕ್ತಿಸ್ವರೂಪಳಾದ ಆಕೆಗೆ ಸಂತೋಷವುಂಟಾಗುವಂತೆ ಆ ಮಾಯೆಯನ್ನು ಸ್ತೋತ್ರಮಾಡಿರಿ. ಅವಳು ಒಲಿದುದೇ ಆದರೆ ನಿಮ್ಮ ಕೆಲಸವೆಲ್ಲವನ್ನೂ ನೆರವೇರಿಸಿಕೊಡುವಳು ಎಂದನು.

೧೯. ಓ ವ್ಯಾಸ, ಈರೀತಿಯಾಗಿ ಸದ್ಯೋಜಾತಾದಿ ಪಂಚಮುಖಗಳಿಂದ ಕಂಗೊಳಿಸುತ್ತಿರುವ ಭಗವಂತನಾದ ಶಿವನು ದೇವತೆಗಳಿಗೆ ತಿಳಿಸಿ ತನ್ನ ಪ್ರಮಥಗಣಗಳೊಡನೆ ತಟ್ಟನೆ ಅಲ್ಲಿಂದ ಅಂತರ್ಹಿತನಾದನು.

೨೦. ಬಳಿಕ ಬ್ರಹ್ಮ, ಇಂದ್ರ ಮೊದಲಾದ ದೇವತೆಗಳು ಶಿವನ ಅಪ್ಪಣೆಯಂತೆ ಭಕ್ತರಲ್ಲಿ ವಾತ್ಸಲ್ಯವುಳ್ಳ ಆ ಮೂಲಪ್ರಕೃತಿಯನ್ನು ಮನಸ್ಸಿನಲ್ಲಿಯೇ ಸ್ತೋತ್ರ ಮಾಡಿದರು.

॥ ದೇವಾ ಊಚುಃ ॥

ಯದುದ್ಭವಾಸ್ಸತ್ತ್ವರಜಸ್ತಮೋಗುಣಾಃ
ಸರ್ಗಸ್ಥಿತಿಧ್ವಂಸವಿಧಾನಕಾರಕಾಃ ।
ಯದಿಚ್ಛಯಾ ವಿಶ್ವಮಿದಂ ಭವಾಭವೋ
ತನೋತಿ ಮೂಲಪ್ರಕೃತಿಂ ನತಾಃ ಸ್ಮ ತಾಂ ॥ ೨೧ ॥

ಸಾಹಿ ತ್ರಯೋವಿಂಶಗುಣಾನ್ಸುಶಬ್ದಿತಾನ್
ಜಗತ್ಯಶೇಷೇ ಸಮಧಿಷ್ಠಿತಾ ಪರಾ ।
ಯದ್ರೂಪಕರ್ಮಾಣಿ ಜಗತ್ತ್ರಯೋಽಪಿ ತೇ
ವಿದುರ್ನ ಮೂಲಪ್ರಕೃತಿಂ ನತಾಃ ಸ್ಮ ತಾಂ ॥ ೨೨ ॥

ಯದ್ಭಕ್ತಿಯುಕ್ತಾಃ ಪುರುಷಾಸ್ತು ನಿತ್ಯಂ
ದಾರಿದ್ರ್ಯಮೋಹಾತ್ಯಯಸಂಭವಾದೀನ್ ।
ನ ಪ್ರಾಪ್ನುವಂತ್ಯೇವ ಹಿ ಭಕ್ತವತ್ಸಲಾ
ಸದೈವ ಮೂಲಪ್ರಕೃತಿಂ ನತಾಃ ಸ್ಮ ತಾಂ ॥ ೨೩ ॥

---

೨೧. ರಜೋಗುಣಪ್ರಧಾನನಾಗಿ ಜಗತ್ತಿನ ಸೃಷ್ಟಿಕರ್ತನಾದ ಬ್ರಹ್ಮನೂ, ಸತ್ತ್ವ ಗುಣಪ್ರಚುರನಾಗಿ ಆ ಜಗತ್ತನ್ನು ಪರಿಪಾಲಿಸುವ ವಿಷ್ಣುವೂ ತಮೋಗುಣ ಪ್ರಾಬಲ್ಯ ದಿಂದ ಆ ಜಗತ್ತನ್ನು ಧ್ವಂಸಗೊಳಿಸುವ ರುದ್ರನೂ ಯಾವಾಕೆಯಿಂದ ಉದ್ಭವಿಸಿದರೋ ಯಾವಾಕೆಯ ಇಚ್ಛಾಮಾತ್ರದಿಂದ ಈ ಜಗತ್ತಿನ ಉತ್ಪತ್ತಿಸಂಹಾರಗಳು ಉಂಟಾಗು ವುವೋ ಆ ಮೂಲಪ್ರಕೃತಿಯನ್ನು ನಮಸ್ಕರಿಸುವೆವು.

೨೨. ಯಾವಾಕೆಯು ಸಮಗ್ರವಾದ ಜಗತ್ತಿನಲ್ಲಿ ಪ್ರಖ್ಯಾತವಾದ ಇಪ್ಪತ್ತು ಮೂರು ಗುಣಗಳಿಗೆ ಅಧಿಷ್ಠಾತ್ರಿಯಾಗಿರುವಳೋ, ಯಾವಳ ನಾಮ, ರೂಪ, ಕ್ರಿಯೆ ಗಳನ್ನು ಮೂರು ಲೋಕಗಳೂ ಅರಿಯವೋ ಅಂತಹ ಮೂಲಪ್ರಕೃತಿಯನ್ನು ವಂದಿಸುವೆವು.

೨೩. ಯಾವಾಕೆಯಲ್ಲಿ ಅವಿಚಲವಾದ ಭಕ್ತಿಯನ್ನಿಟ್ಟಿರುವವರು ಬಡತನ, ಭ್ರಾಂತಿ, ಹುಟ್ಟು, ಸಾವು ಮೊದಲಾದುವನ್ನು ಎಂದೆಂದಿಗೂ ಹೊಂದಲಾರರೋ ಆ ಮೂಲಪ್ರಕೃತಿಯನ್ನು ನಮಸ್ಕಾರಮಾಡುವೆವು.

ಕುರು ಕಾರ್ಯಂ ಮಹಾದೇವಿ ದೇವಾನಾಂ ನಃ ಪರೇಶ್ವರಿ ।
ವಿಷ್ಣುಮೋಹಂ ಹರ ಶಿವೇ ದುರ್ಗೇ ದೇವಿ ನಮೋಽಸ್ತು ತೇ　　॥ ೨೪ ॥

ಜಲಂಧರಸ್ಯ ಶಂಭೋಶ್ಚ ರಣೇ ಕೈಲಾಸವಾಸಿನಃ ।
ಪ್ರವೃತ್ತೇ ತದ್ವಧಾರ್ಥಾಯ ಗೌರೀಶಾಸನತಶ್ಶಿವೇ　　॥ ೨೫ ॥

ವೃಂದಾ ವಿಮೋಹಿತಾ ದೇವೀ ವಿಷ್ಣುನಾ ಹಿ ಪ್ರಯತ್ನತಃ ।
ಸ್ವವೃಷಾತ್ತ್ಯಜಿತಾ ವಹ್ನೌ ಭಸ್ಮೀಭೂತಾ ಗತಿಂ ಗತಾ　　॥ ೨೬ ॥

ಜಲಂಧರೋ ಹತೋ ಯುದ್ಧೇ ತದ್ಭಯಾನ್ಮೋಚಿತಾ ವಯಂ ।
ಗಿರಿಶೇನ ಕೃಪಾಂ ಕೃತ್ವಾ ಭಕ್ತಾನುಗ್ರಹಕಾರಿಣಾ　　॥ ೨೭ ॥

ತದಾಜ್ಞಯಾ ವಯಂ ಸರ್ವೇ ಶರಣಂ ತೇ ಸಮಾಗತಾಃ ।
ತ್ವಂ ಹಿ ಶಂಭುರ್ಯುವಾಂ ದೇವಿ ಭಕ್ತೋದ್ಧಾರಪರಾಯಣೌ　　॥ ೨೮ ॥

---

೨೪. ಎಲೈ ಮಹಾದೇವಿಯೇ, ದೇವತೆಗಳಾದ ನಮ್ಮ ಕೆಲಸವನ್ನು ಮಾಡಿಕೊಡು. ಎಲೌ ಸರ್ವಮಂಗಳೇ, ವಿಷ್ಣುವಿಗೆ ಕವಿದಿರುವ ಮೋಹವನ್ನು ಪರಿಹರಿಸು. ಎಲೈ ದುರ್ಗೆ, ನಿನಗೆ ನಮಸ್ಕಾರವು.

೨೫-೨೬. ಎಲೌ ಮಂಗಳಸ್ವರೂಪಿಣಿ, ಕೈಲಾಸನಿವಾಸಿನಿಯಾದ ಶಿವನು ಜಲಂಧರನನ್ನು ಸಂಹರಿಸಲು ಅವನೊಡನೆ ಯುದ್ಧಕ್ಕೆ ತೊಡಗಿದನಷ್ಟೆ? ಆಗ ಶಿವನ ಮಡದಿಯಾದ ಪಾರ್ವತಿಯು ಅಪ್ಪಣೆಯಂತೆ ವಿಷ್ಣುವು ಬಹುಸಾಹಸದಿಂದ ಜಲಂಧರನ ಪತ್ನಿಯಾದ ವೃಂದೆಯನ್ನು ಮೋಹಿತಳನ್ನಾಗಿ ಮಾಡಿ ಅವಳ ಪಾತಿವ್ರತ್ಯಧರ್ಮವನ್ನು ಕೆಡಿಸಿಬಿಟ್ಟನು. ಆಗ ಆಕೆಯು ತನ್ನ ದೇಹವನ್ನು ಅಗ್ನಿಯಲ್ಲಿ ನೀಗಿಬಿಟ್ಟು ಉತ್ತಮವಾದ ಗತಿಯನ್ನು ಹೊಂದಿದಳು.

೨೭. ಭಕ್ತರಲ್ಲಿ ಕರುಣೆಯುಳ್ಳ ಆ ಶಿವನು ನಮ್ಮಲ್ಲಿ ಕೃಪೆಯಿಟ್ಟು ಯುದ್ಧದಲ್ಲಿ ಆ ಜಲಂಧರನನ್ನು ಕೊಂದು ಅವನ ಭಯದಿಂದ ನಮ್ಮೆಲ್ಲರನ್ನೂ ಬಿಡಿಸಿದನು.

೨೮. ಓ ದೇವಿ, ಆ ಶಿವನ ಅಪ್ಪಣೆಯಂತೆ ನಾವೆಲ್ಲರೂ ನಿನ್ನನ್ನು ಮರೆಹೊಕ್ಕಿರುವೆವು. ನೀನೂ ಆ ಶಿವನೂ ಇಬ್ಬರೂ ಭಕ್ತರ ಸಂಕಷ್ಟಗಳನ್ನು ಪರಿಹರಿಸುವುದರಲ್ಲಿಯೇ ನಿರತರಾಗಿರುವಿರಲ್ಲವೇ.?

ವೃಂದಾಲಾವಣ್ಯಸಂಭ್ರಾಂತೋ ವಿಷ್ಣುಸ್ತಿಷ್ಠತಿ ತತ್ರ ವೈ ।
ತಚ್ಚಿತಾಭಸ್ಮಸಂಧಾರೀ ಜ್ಞಾನಭ್ರಷ್ಟೋ ವಿಮೋಹಿತಃ ॥ ೨೯ ॥

ಸಂಸಿದ್ಧಸುರಸಂಘೈಶ್ಚ ಬೋಧಿತೋಽಪಿ ಮಹೇಶ್ವರಿ ।
ನ ಬುಧ್ಯತೇ ಹರಿಸ್ಸೋಽಥ ತವ ಮಾಯಾವಿಮೋಹಿತಃ ॥ ೩೦ ॥

ಕೃಪಾಂ ಕುರು ಮಹಾದೇವಿ ಹರಿಂ ಬೋಧಯ ಬೋಧಯ ।
ಯಥಾ ಸ್ವಲೋಕಂ ಪಾಯಾತ್ಸ ಸುಚಿತ್ತಸ್ಸುರಕಾರ್ಯಕೃತ್ ॥ ೩೧ ॥

ಇತಿ ಸ್ತುವಂತಸ್ತೇ ದೇವಾಸ್ತೇಜೋಮಂಡಲಮಾಸ್ಥಿತಂ ।
ದದೃಶುರ್ಗಗನೇ ತತ್ರ ಜ್ವಾಲಾವ್ಯಾಪ್ತದಿಗಂತರಂ ॥ ೩೨ ॥

ತನ್ಮಧ್ಯಾದ್ಭಾರತೀಂ ಸರ್ವೇ ಬ್ರಹ್ಮಾದ್ಯಾಶ್ಚ ಸವಾಸವಾಃ ।
ಅಮರಾಶ್ಶುಶ್ರುವುರ್ವ್ಯಾಸ ಕಾಮದಾಂ ವ್ಯೋಮಚಾರಿಣೀಂ ॥ ೩೩ ॥

---

೨೯. ಆ ವೃಂದೆಯ ಲಾವಣ್ಯಕ್ಕೆ ಮನಸೋತು, ವಿಷ್ಣುವು ವಿವೇಕವನ್ನು ತೊರೆದು ಭ್ರಮೆಯಿಂದ ಅವಳ ಚಿತಾಭಸ್ಮವನ್ನೇ ಮೈಗೆ ತೊಡೆದುಕೊಂಡು ಅಲ್ಲಿಯೇ ಇದ್ದುಬಿಟ್ಟಿರುವನು..

೩೦. ಎಲೌ ಮಹೇಶ್ವರಿ, ಸಿದ್ಧರೂ ದೇವತೆಗಳೂ ಎಷ್ಟುವಿಧವಾಗಿ ಬೋಧಿಸಿದರೂ ಆ ವಿಷ್ಣುವು ನಿನ್ನ ಮಾಯೆಯಿಂದ ವಿಮೋಹಿತನಾಗಿ ಎಚ್ಚರವನ್ನು ಹೊಂದದೇ ಇರುವನು.

೩೧. ಓ ಮಹಾದೇವಿಯೇ, ನಮ್ಮಲ್ಲಿ ಕೃಪೆಯಿಡು. ವಿಷ್ಣುವನ್ನು ಎಚ್ಚರಗೊಳಿಸು. ದೇವತೆಗಳ ಕೆಲಸವನ್ನು ಸಾಧಿಸುವ ಆತನು ಒಳ್ಳೆಯ ಮನಸ್ಸಿನಿಂದ ಈ ಜಗತ್ತನ್ನು ಪರಿಪಾಲಿಸುವಂತೆ ಎಚ್ಚರಗೊಳಿಸು.

೩೨. ಈರೀತಿ ಆ ದೇವತೆಗಳು ಸ್ತೋತ್ರಮಾಡುತ್ತಿರಲು ತನ್ನ ಜ್ವಾಲೆಗಳಿಂದ ದಿಕ್ಕುಗಳೆಲ್ಲವನ್ನೂ ತುಂಬುತ್ತಿರುವಂತಹ ತೇಜೋಮಂಡಲವೊಂದು ಆಕಾಶದಲ್ಲಿ ಗೋಚರಿಸಿದುದನ್ನು ಕಂಡರು.

೩೩. ಓ ವ್ಯಾಸ, ಆಗ ಬ್ರಹ್ಮ, ದೇವೇಂದ್ರ ಮೊದಲಾದ ದೇವತೆಗಳೆಲ್ಲರೂ ಆ ತೇಜೋಮಂಡಲದ ಮಧ್ಯದಿಂದ ತಮ್ಮ ಇಷ್ಟಾರ್ಥಗಳನ್ನು ಪೂರೈಸುವುದಕ್ಕಾಗಿ ಹೊರಬರುತ್ತಿರುವ ಅಶರೀರವಾಣಿಯನ್ನು ಆಲಿಸಿದರು.

॥ ಆಕಾಶವಾಣ್ಯುವಾಚ ॥

ಅಹಮೇವ ತ್ರಿಧಾ ಭಿನ್ನಾ ತಿಷ್ಠಾಮಿ ತ್ರಿವಿಧೈರ್ಗುಣೈಃ ।
ಗೌರೀ ಲಕ್ಷ್ಮೀಃ ಸುರಾ ಜ್ಯೋತೀ ರಜಸ್ಸತ್ತ್ವತಮೋಗುಣೈಃ ॥ ೩೪ ॥

ತತ್ರ ಗಚ್ಛತ ಯೂಯಂ ವೈ ತಾಸಾಮಂತಿಕ ಆದರಾತ್ ।
ಮದಾಜ್ಞಯಾ ಪ್ರಸನ್ನಾಸ್ತಾ ವಿಧಾಸ್ಯಂತೇ ತದೀಪ್ಸಿತಂ ॥ ೩೫ ॥

॥ ಸನತ್ಕುಮಾರ ಉವಾಚ ॥

ಶೃಣ್ವತಾಮಿತಿ ತಾಂ ವಾಚಮಂತರ್ಧಾನಮಗಾನ್ಮಹಃ ।
ದೇವಾನಾಂ ವಿಸ್ಮಯೋತ್ಫುಲ್ಲನೇತ್ರಾಣಾಂ ತತ್ತದಾ ಮುನೇ ॥ ೩೬ ॥

ತತಸ್ಸರ್ವೇऽಪಿ ತೇ ದೇವಾಃ ಶ್ರುತ್ವಾ ತದ್ವಾಕ್ಯಮಾದರಾತ್ ।
ಗೌರೀಂ ಲಕ್ಷ್ಮೀಂ ಸುರಾಂ ಚೈವ ನೇಮುಸ್ತದ್ವಾಕ್ಯಚೋದಿತಾಃ ॥ ೩೭ ॥

ತುಷ್ಟುವುಶ್ಚ ಮಹಾಭಕ್ತ್ಯಾ ದೇವೀಸ್ತಾಸ್ಸಕಲಾಸ್ಸುರಾಃ ।
ನಾನಾವಿಧಾಭಿರ್ವಾಗ್ಭಿಸ್ತೇ ಬ್ರಹ್ಮಾದ್ಯಾ ನತಮಸ್ತಕಾಃ ॥ ೩೮ ॥

---

೩೪. ಎಲೈ ದೇವತೆಗಳಿರಾ, ಜ್ಯೋತಿಸ್ಸ್ವರೂಪಿಣಿಯಾದ ನಾನೇ ಸತ್ತ್ವ, ರಜ, ಸ್ತಮೋಗುಣಗಳನ್ನವಲಂಬಿಸಿ ಗೌರಿ, ಲಕ್ಷ್ಮೀ, ಸರಸ್ವತೀ ಎಂಬುದಾಗಿ ಹೆಸರು ಪಡೆದು ಮೂರು ರೂಪಗಳನ್ನು ತೋರುತ್ತಿರುವೆನು.

೩೫. ನೀವೆಲ್ಲರೂ ಅವರಬಳಿಗೆ ತೆರಳಿರಿ. ನನ್ನ ಅಪ್ಪಣೆಯಂತೆ ಅವರು ನಿಮ್ಮಲ್ಲಿ ಪ್ರಸನ್ನರಾಗಿ ನಿಮ್ಮ ಅಭೀಷ್ಟವನ್ನು ನೆರವೇರಿಸಿಕೊಡುವರು ಎನ್ನಲು,

೩೬. ಆ ದೇವತೆಗಳು ಇದೇನಚ್ಚರಿಯೆಂದು ಅರಳಿದ ಕಣ್ಣುಗಳುಳ್ಳವರಾಗಿ ಆ ಅಶರೀರವಾಣಿಯನ್ನು ಆಲಿಸುತ್ತಿರುವಂತೆಯೇ ಆ ತೇಜೋಮಂಡಲವು ಕಣ್ಮರೆಯಾಯಿತು.

೩೭-೩೮. ಬಳಿಕ ಆ ದೇವತೆಗಳೆಲ್ಲರೂ ಪ್ರೀತಿಯಿಂದ ಆ ಮಾತನ್ನು ಆಲಿಸಿ ಅದರಂತೆಯೇ ಗೌರಿಯನ್ನೂ ಲಕ್ಷ್ಮಿಯನ್ನೂ ವಾಗ್ದೇವಿಯನ್ನೂ ನಮಸ್ಕಾರಮಾಡಿ ಅತಿಶಯವಾದ ಭಕ್ತಿಯಿಂದ ಆ ಮೂವರು ದೇವಿಯರನ್ನೂ ನಾನಾವಿಧವಾದ ಸ್ತೋತ್ರಗಳಿಂದ ತಲೆಬಗ್ಗಿಸಿ ಕೀರ್ತಿಸತೊಡಗಿದರು.

ತತೋಽನ್ತರಂ ವ್ಯಾಸ ದೇವಾಸ್ತಾ ಆವಿರ್ಭೂತಾಶ್ಚ ತತ್ಪುರಃ ।
ಮಹಾದ್ಭುತೈಸ್ಸ್ವತೇಜೋಭಿರ್ಭಾಸಯಂತ್ಯೋ ದಿಗಂತರಂ ॥ ೩೯ ॥

ಅಥ ತಾ ಅಮರಾ ದೃಷ್ಟ್ವಾ ಸುಪ್ರಸನ್ನೇನ ಚೇತಸಾ ।
ಪ್ರಣಮ್ಯ ತುಷ್ಟುವುರ್ಭಕ್ತ್ಯಾ ಸ್ವಕಾರ್ಯಂ ಚ ನ್ಯವೇದಯತ್ ॥ ೪೦ ॥

ತತಶ್ಚೈತಾಸ್ಸುರಾನ್ದೃಷ್ಟ್ವಾ ಪ್ರಣತಾ ಭಕ್ತವತ್ಸಲಾಃ ।
ಬೀಜಾನಿ ಪ್ರದದುಸ್ತೇಭ್ಯೋ ವಾಕ್ಯಮೂಚುಶ್ಚ ಸಾದರಂ ॥ ೪೧ ॥

॥ ದೇವ್ಯ ಊಚುಃ ॥

ಇಮಾನಿ ತತ್ರ ಬೀಜಾನಿ ವಿಷ್ಣುರ್ಯತ್ರಾವತಿಷ್ಠತಿ ।
ನಿರ್ವಪಧ್ವಂ ತತಃ ಕಾರ್ಯಂ ಭವತಾಂ ಸಿದ್ಧಿಮೇಷ್ಯತಿ ॥ ೪೨ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ತಾಸ್ತತೋ ದೇವ್ಯೋಽನ್ತರ್ಹಿತಾ ಅಭವನ್ಮುನೇ ।
ರುದ್ರವಿಷ್ಣುವಿಧೀನಾಂ ಹಿ ಶಕ್ತಯಸ್ತ್ರಿಗುಣಾತ್ಮಿಕಾಃ ॥ ೪೩ ॥

---

೩೯. ಎಲೈ ವ್ಯಾಸಮಹರ್ಷಿಯೇ ಕೇಳು ;—ಬಳಿಕ ತಮ್ಮ ತೇಜಸ್ಸಿನಿಂದ ದಿಕ್ಕುಗಳನ್ನು ಬೆಳಗುತ್ತಾ ಆ ಮೂವರು ದೇವಿಯರೂ ಅವರಮುಂದೆ ಕೂಡಲೇ ಪ್ರತ್ಯಕ್ಷರಾದರು.

೪೦. ಬಳಿಕ ಆ ದೇವತೆಗಳು ತಮ್ಮ ಮುಂದೆ ಪ್ರತ್ಯಕ್ಷರಾದ ಆ ದೇವಿಯರನ್ನು ಕಂಡು ಬಹುಸಂತೋಷವನ್ನು ಹೊಂದಿ ಭಕ್ತಿಯಿಂದ ಅವರಿಗೆ ಪ್ರಣಾಮ ಮಾಡಿ ತಮ್ಮ ಕೆಲಸವನ್ನು ಬಿನ್ನವಿಸಿಕೊಂಡರು.

೪೧. ಭಕ್ತರಲ್ಲಿ ವಾತ್ಸಲ್ಯವುಳ್ಳ ಆ ದೇವಿಯರು ತಮಗೆ ನಮಸ್ಕಾರಮಾಡಿದ ಆ ದೇವತೆಗಳನ್ನು ಕಂಡು ಅವರಿಗೆ ಕೆಲವು ಬೀಜಗಳನ್ನು ಇತ್ತು ಆದರದಿಂದ ಇಂತು ನುಡಿದರು.

೪೨. ಈ ಮೂರು ಬೀಜಗಳನ್ನು ತೆಗೆದುಕೊಂಡುಹೋಗಿ ವಿಷ್ಣುವು ಎಲ್ಲಿರುವನೋ ಅಲ್ಲಿ ಬಿತ್ತುಬಿಡಿ. ಆಗ ನಿಮ್ಮ ಕೆಲಸವು ನೆರವೇರುವುದು ಎಂದರು.

೪೩. ಈರೀತಿ ನುಡಿದು ಸತ್ತ್ವ, ರಜ, ಸ್ತಮೋಗುಣಾತ್ಮಕರೂ ತ್ರಿಮೂರ್ತಿಗಳ ಶಕ್ತಿಸ್ವರೂಪರೂ ಆದ ದೇವಿಯರು ಕಣ್ಮರೆಯಾದರು.

ತತಸ್ತುಷ್ಟಾಃ ಸುರಾಸ್ಸರ್ವೇ ಬ್ರಹ್ಮಾದ್ಯಾಶ್ಚ ಸವಾಸವಾಃ ।
ತಾನಿ ಬೀಜಾನಿ ಸಂಗೃಹ್ಯ ಯಯುರ್ಯತ್ರ ಹರಿಃ ಸ್ಥಿತಃ ॥ ೪೪ ॥

ವೃಂದಾಚಿತಾಭೂಮಿತಲೇ ಚಿಕ್ಷಿಪುಸ್ತಾನಿ ತೇ ಸುರಾಃ ।
ಸ್ಮೃತ್ವಾ ತಾಸ್ಸಂಸ್ಥಿತಾಸ್ತತ್ರ ಶಿವಶಕ್ತ್ಯಂಶಕಾ ಮುನೇ ॥ ೪೫ ॥

ನಿಕ್ಷಿಪ್ತೇಭ್ಯಶ್ಚ ಬೀಜೇಭ್ಯೋ ವನಸ್ಪತ್ಯಸ್ತ್ರಯೋಽಭವನ್ ।
ಧಾತ್ರೀ ಚ ಮಾಲತೀ ಚೈವ ತುಲಸೀ ಚ ಮುನೀಶ್ವರ ॥ ೪೬ ॥

ಧಾತ್ರ್ಯುದ್ಭವಾ ಸ್ಮೃತಾ ಧಾತ್ರೀ ಮಾಭವಾ ಮಾಲತೀ ಸ್ಮೃತಾ ।
ಗೌರೀಭವಾ ಚ ತುಲಸೀ ತಮಸ್ಸತ್ತ್ವರಜೋಗುಣಾಃ ॥ ೪೭ ॥

ವಿಷ್ಣುರ್ವನಸ್ಪತೀರ್ದೃಷ್ಟ್ವಾ ತದಾ ಸ್ತ್ರೀರೂಪಿಣೀರ್ಮುನೇ ।
ಉದತಿಷ್ಠತ್ತದಾ ತಾಸು ರಾಗಾತಿಶಯವಿಭ್ರಮಃ ॥ ೪೮ ॥

---

೪೪-೪೫. ಬಳಿಕ ಸಂತೋಷಶಾಲಿಗಳಾದ ಆ ಬ್ರಹ್ಮೇಂದ್ರಾದಿ ದೇವತೆಗಳು ಆ ಮೂರು ಬೀಜಗಳನ್ನು ತೆಗೆದುಕೊಂಡು ವಿಷ್ಣುವಿರುವಲ್ಲಿಗೆ ಬಂದು ವೃಂದೆಯ ಚಿತಿಯು ಇದ್ದ ಜಾಗದಲ್ಲಿ ಶಿವಶಕ್ತಿಸ್ವರೂಪಿಣಿಯರಾದ ಆ ದೇವಿಯರನ್ನು ಸ್ಮರಿಸುತ್ತಾ ಚೆಲ್ಲಿ ಬಿಟ್ಟರು.

೪೬. ಆ ಬೀಜಗಳನ್ನು ಚೆಲ್ಲುತ್ತಲೇ ಅವುಗಳಿಂದ ನೆಲ್ಲಿ, ಜಾಜೀ, ತುಲಸಿ ಎಂಬ ಮೂರು ಗಿಡಗಳು ಹುಟ್ಟಿದುವು.

೪೭. ಆ ಮೂರು ಗಿಡಗಳೂ ಸತ್ತ್ವ, ರಜಸ್ತಮೋಗುಣಗಳನ್ನು ಆಶ್ರಯಿಸಿ ಹುಟ್ಟಿದುವು. ಅವುಗಳಲ್ಲಿ ಬ್ರಹ್ಮನ ಮಡದಿಯು ಇತ್ತಬಿತ್ತದಿಂದ ಹುಟ್ಟಿದ ಗಿಡವು ಧಾತ್ರಿಯೆನಿಸಿತು. ಲಕ್ಷ್ಮಿಯು ಇತ್ತಬಿತ್ತದಿಂದ ಹುಟ್ಟಿದ ಗಿಡವು, ಮಾಲತಿಯೆಂಬ ಹೆಸರು ಪಡೆಯಿತು. ಗೌರಿಯು ಇತ್ತಬಿತ್ತದಿಂದ ಹುಟ್ಟಿದಗಿಡವು ತುಲಸಿಯೆಂದು ಪ್ರಖ್ಯಾತವಾಯಿತು.

೪೮. ಓ ಮುನೀಂದ್ರ, ಆಗ ಸ್ತ್ರೀರೂಪದಿಂದ ಕಂಗೊಳಿಸುತ್ತಿರುವ ಆ ಮೂರು ಗಿಡಗಳನ್ನು ಕಂಡೊಡನೆಯೇ ವಿಷ್ಣುವು ಅವರಲ್ಲಿ ಅತಿಶಯವಾದ ಅಭಿಲಾಷೆಯನ್ನು ತೋರುತ್ತಾ ಮೇಲಕ್ಕೆದ್ದನು.

ದೃಷ್ಟ್ವಾ ಸ ಯಾಚತೇ ಮೋಹಾತ್ಕಾಮಾಸಕ್ತೇನ ಚೇತಸಾ ।
ತಂ ಚಾಪಿ ತುಲಸೀ ಧಾತ್ರೀ ರಾಗೇಣೈವಾವಲೋಕತಾಂ ॥ ೪೯ ॥

ಯಚ್ಚ ಬೀಜಂ ಪುರಾ ಲಕ್ಷ್ಮ್ಯಾ ಮಾಯಯೈವ ಸಮರ್ಪಿತಂ ।
ತಸ್ಮಾತ್ತದುದ್ಭವಾ ನಾರೀ ತಸ್ಮಿನ್ನೀರ್ಷ್ಯಾಪರಾಭವತ್ ॥ ೫೦ ॥

ಅತಸ್ಸಾ ವರ್ವರೀತ್ಯಾಖ್ಯಾಮವಾಪಾತೀವ ಗರ್ಹಿತಾಂ ।
ಧಾತ್ರೀತುಲಸ್ಯೌ ತದ್ರಾಗಾತ್ತಸ್ಯ ಪ್ರೀತಿಪ್ರದೇ ಸದಾ ॥ ೫೧ ॥

ತತೋ ವಿಸ್ಮೃತದುಃಖೋಽಸೌ ವಿಷ್ಣುಸ್ತಾಭ್ಯಾಂ ಸಹೈವ ತು ।
ವೈಕುಂಠಮಗಮತ್ತುಷ್ಟಸ್ಸರ್ವದೇವೈರ್ನಮಸ್ಕೃತಃ ॥ ೫೨ ॥

ಕಾರ್ತಿಕೇ ಮಾಸಿ ವಿಪ್ರೇಂದ್ರ ಧಾತ್ರೀ ಚ ತುಲಸೀ ಸದಾ ।
ಸರ್ವದೇವಪ್ರಿಯಾ ಜ್ಞೇಯಾ ವಿಷ್ಣೋರ್ವಿಶೇಷತಃ ॥ ೫೩ ॥

---

೪೯. ಅವರನ್ನು ನೋಡಿನೊಡನೆಯೇ ಮೋಹಾವಿಷ್ಟನಾದ ವಿಷ್ಣುವು, ಮನ್ಮಥವಿಕಾರಕ್ಕೆ ಸಿಲುಕಿದ ಮನಸ್ಸುಳ್ಳವನಾಗಿ ಅವರನ್ನು ಯಾಚಿಸತೊಡಗಿದನು. ಆಧಾತ್ರಿಯೂ, ತುಲಸಿಯೂ ಅವನನ್ನು ಅನುರಾಗದಿಂದಲೇ ನೋಡಿದರು.

೫೦. ಹಿಂದೆ ಲಕ್ಷ್ಮಿಯು ಬಿತ್ತವನ್ನು ಇತ್ತಿರಲಿಲ್ಲವೇ ? ಅದನ್ನು ಮಾಯೆಯಿಂದಲೇ ಇತ್ತಿದ್ದಳು. ಆದುದರಿಂದಲೇ ಆ ಮಾಯಾ ಬೀಜದಿಂದ ಹುಟ್ಟಿದ ನಾರಿಯು ವಿಷ್ಣುವಿನಲ್ಲಿ ಅಸೂಯೆಯನ್ನು ತೋರ್ಪಡಿಸಿದಳು.

೫೧. ಆದುದರಿಂದಲೇ ಆ ಮಾಲತಿಯು ವರ್ವರಿ ಎಂಬುದಾಗಿ ಅತಿ ನಿಂದ್ಯವಾದ ಹೆಸರನ್ನು ಪಡೆದಳು. ಧಾತ್ರೀ ಮತ್ತು ತುಲಸೀಗಿಡಗಳು ಅವನಲ್ಲಿ ಪ್ರೀತಿಯನ್ನು ತೋರಿದುದರಿಂದ ಅವು ಅವನಿಗೆ ಯಾವಾಗಲೂ ಪ್ರಿಯವಾದುವು.

೫೨. ಬಳಿಕ ವಿಷ್ಣುವು, ವೃಂದಾವಿಯೋಗ ದುಃಖವನ್ನು ಮರೆತು ಎಲ್ಲ ದೇವತೆಗಳಿಂದಲೂ ನಮಸ್ಕಾರಗಳನ್ನು ಸ್ವೀಕರಿಸುತ್ತಾ ಆ ಧಾತ್ರೀ ತುಲಸಿಗಳೊಡನೆ ಸಂತೋಷಚಿತ್ತನಾಗಿ ತನ್ನ ನಿವಾಸವಾದ ವೈಕುಂಠಕ್ಕೆ ತೆರಳಿದನು.

೫೩. ಓ ಬ್ರಾಹ್ಮಣೋತ್ತಮ, ಆ ಧಾತ್ರೀ ಮತ್ತು ತುಲಸೀವೃಕ್ಷಗಳು ಕಾರ್ತಿಕಮಾಸದಲ್ಲಿ ಎಲ್ಲ ದೇವತೆಗಳಿಗೂ ಪ್ರೀತಿಕರವಾದುವು. ವಿಷ್ಣುವಿಗಂತೂ, ಮತ್ತಷ್ಟು ಪ್ರೀತಿಯನ್ನುಂಟುಮಾಡುವುವು.

ತತ್ರಾಪಿ ತುಲಸೀ ಧನ್ಯಾತೀವ ಶ್ರೇಷ್ಠಾ ಮಹಾಮುನೇ ।
ತ್ಯಕ್ತ್ವಾ ಗಣೇಶಂ ಸರ್ವೇಷಾಂ ಪ್ರೀತಿದಾ ಸರ್ವಕಾಮದಾ ॥ ೫೪ ॥

ವೈಕುಂಠಸ್ಥಂ ಹರಿಂ ದೃಷ್ಟ್ವಾ ಬ್ರಹ್ಮೇಂದ್ರಾದ್ಯಾಶ್ಚ ತೇಽಮರಾಃ ।
ನತ್ವಾ ಸ್ತುತ್ವಾ ಮಹಾವಿಷ್ಣುಂ ಸ್ವಸ್ವಧಾಮಾನಿ ವೈ ಯಯುಃ ॥ ೫೫ ॥

ವೈಕುಂಠೋಽಪಿ ಸ್ವಲೋಕಸ್ಥೋ ಭ್ರಷ್ಟಮೋಹಸ್ಸುಬೋಧವಾನ್ ।
ಸುಖೀ ಚಾಭೂನ್ಮುನಿಶ್ರೇಷ್ಠ ಪೂರ್ವವತ್ಸಂಸ್ಮರಂಛಿವಂ ॥ ೫೬ ॥

ಇತ್ಯಾಖ್ಯಾನಮಘೌಘಘ್ನಂ ಸರ್ವಕಾಮಪ್ರದಂ ನೃಣಾಂ ।
ಸರ್ವಕಾಮವಿಕಾರಘ್ನಂ ಸರ್ವವಿಜ್ಞಾನವರ್ಧನಂ ॥ ೫೭ ॥

ಯ ಇದಂ ಹಿ ಪಠೇನ್ನಿತ್ಯಂ ಪಾಠಯೇದ್ವಾಪಿ ಭಕ್ತಿಮಾನ್ ।
ಶೃಣುಯಾಚ್ಛ್ರಾವಯೇದ್ವಾಪಿ ಸ ಯಾತಿ ಪರಮಾಂ ಗತಿಂ ॥ ೫೮ ॥

---

೫೪. ಅದರಲ್ಲಿಯೂ ತುಲಸಿಯು, ಬಹು ಧನ್ಯವಾದುದು. ಬಹಳ ಶ್ರೇಷ್ಠವಾದುದು. ಆ ತುಲಸಿಯು ಗಣೇಶನೊಬ್ಬನನ್ನು ಬಿಟ್ಟು ಉಳಿದೆಲ್ಲ ದೇವತೆಗಳಿಗೂ ಪ್ರಿಯವಾದುದು. ಎಲ್ಲ ಇಷ್ಟಾರ್ಥಗಳನ್ನು ಕೊಡುವಂಥದು.

೫೫. ಬಳಿಕ ವಿಷ್ಣುವು ವೈಕುಂಠದಲ್ಲಿ ಸಂತೋಷದಿಂದ ಇರುವುದನ್ನು ಕಂಡು ಬ್ರಹ್ಮೇಂದ್ರಾದಿ ದೇವತೆಗಳು ಆತನಿಗೆ ನಮಸ್ಕರಿಸಿ, ಅವನನ್ನು ಸ್ತುತಿಸಿ, ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

೫೬. ಶ್ರೀಹರಿಯೂ ಸಹ ತನ್ನ ಲೋಕವನ್ನು ಸೇರಿದ ಬಳಿಕ, ತನ್ನ ಭ್ರಾಂತಿಯೆಲ್ಲವನ್ನೂ ಬಿಟ್ಟು, ಜ್ಞಾನಶೀಲನಾಗಿ ಹಿಂದಿನಂತೆ, ಶಿವನನ್ನು ನೆನೆಯುತ್ತಾ ಸುಖವಾಗಿದ್ದನು.

೫೭. ಈ ಚರಿತ್ರವು ಪಾಪರಾಶಿಯನ್ನು ಪರಿಹರಿಸುವುದು. ಮನುಷ್ಯರ ಸಕಲ ಅಭೀಷ್ಟಗಳನ್ನೂ ನೆರವೇರಿಸುವುದು. ಎಂತಹ ಮನ್ಮಥವಿಕಾರಗಳನ್ನೂ ಅಡಗಿಸಿಬಿಡುವುದು. ಶುದ್ಧವಾದ ಜ್ಞಾನವನ್ನು ಹೆಚ್ಚಿಸುವುದು.

೫೮. ಭಕ್ತಿಯುತನಾಗಿ, ನಿತ್ಯವೂ ಈ ಉಪಾಖ್ಯಾನವನ್ನು ಓದುವವನೂ, ಓದಿಸಿ ಕೇಳುವವನೂ, ಶ್ರವಣಮಾಡುವವನೂ, ಇತರರಿಗೆ ಶ್ರವಣಮಾಡಿಸುವವನೂ ಸಹ ಉತ್ತಮವಾದ ಗತಿಯನ್ನು ಪಡೆಯುವರು.

ಪಠಿತ್ವಾ ಯ ಇದಂ ಧೀಮಾನಾಖ್ಯಾನಂ ಪರಮೋತ್ತಮಂ ।
ಸಂಗ್ರಾಮಂ ಪ್ರವಿಶೇದ್ವೀರೋ ವಿಜಯೀ ಸ್ಯಾನ್ನ ಸಂಶಯಃ ॥ ೫೯ ॥

ವಿಪ್ರಾಣಾಂ ಬ್ರಹ್ಮವಿದ್ಯಾದಂ ಕ್ಷತ್ರಿಯಾಣಾಂ ಜಯಪ್ರದಂ ।
ವೈಶ್ಯಾನಾಂ ಸರ್ವಧನದಂ ಶೂದ್ರಾಣಾಂ ಸುಖದಂ ತ್ವಿದಂ ॥ ೬೦ ॥

ಶಂಭುಭಕ್ತಿಪ್ರದಂ ವ್ಯಾಸ ಸರ್ವೇಷಾಂ ಪಾಪನಾಶನಂ ।
ಇಹ ಲೋಕೇ ಪರತ್ರಾಪಿ ಸದಾ ಸದ್ಗತಿದಾಯಕಂ ॥ ೬೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಜಲಂಧರವಧಾನಂತರ ದೇವೀ
ಸ್ತುತಿವಿಷ್ಣುಮೋಹವಿಧ್ವಂಸವರ್ಣನಂ ನಾಮ
ಷಡ್ವಿಂಶೋಽಧ್ಯಾಯಃ.

---

೫೯. ಬುದ್ಧಿಶಾಲಿಯಾದ ವೀರನು ಅತಿಶ್ರೇಷ್ಠವಾದ ಈ ಜಲಂಧರ ವಧೋಪಾಖ್ಯಾನವನ್ನು ಪಠನಮಾಡಿ, ಬಳಿಕ ಯುದ್ಧರಂಗಕ್ಕೆ ತೆರಳಿದಲ್ಲಿ ಆ ವೀರನು ಖಂಡಿತವಾಗಿಯೂ ವಿಜಯಶಾಲಿಯಾಗುವನು.

೬೦. ಇದು ಬ್ರಾಹ್ಮಣರಿಗೆ ಬ್ರಹ್ಮಜ್ಞಾನವನ್ನುಂಟುಮಾಡುವುದು. ಕ್ಷತ್ರಿಯರಿಗೆ ಜಯವನ್ನು ಕೊಡುವುದು. ವೈಶ್ಯರಿಗೆ ಧನಸಮೃದ್ಧಿಯನ್ನೀಯುವುದು. ಶೂದ್ರರಿಗೆ ಸುಖವನ್ನು ಉಂಟುಮಾಡುವುದು.

೬೧. ಈ ಚರಿತ್ರವು ಶಿವನಲ್ಲಿ ಭಕ್ತಿಯನ್ನು ಬೆಳೆಸುವುದು. ಎಲ್ಲರ ಪಾಪಗಳನ್ನೂ ಪರಿಹರಿಸುವುದು. ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸರ್ವದಾ ಸದ್ಗತಿಯನ್ನುಂಟುಮಾಡುವುದು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಜಲಂಧರವಧಾನಂತರ ದೇವೀಸ್ತುತಿ, ವಿಷ್ಣುಮೋಹವಿಧ್ವಂಸ
ವರ್ಣನವೆಂಬ ಇಪ್ಪತ್ತಾರನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಸಪ್ತವಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಅಥಾನ್ಯಚ್ಛಂಭುಚರಿತಂ ಪ್ರೇಮತಃ ಶೃಣು ವೈ ಮುನೇ ।
ಯಸ್ಯ ಶ್ರವಣಮಾತ್ರೇಣ ಶಿವಭಕ್ತಿರ್ದೃಢಾ ಭವೇತ್ ॥ ೧ ॥

ಶಂಖಚೂಡಾಭಿಧೋ ವೀರೋ ದಾನವೋ ದೇವಕಂಟಕಃ ।
ಯಥಾ ಶಿವೇನ ನಿಹತೋ ರಣಮೂರ್ಧ್ನಿ ತ್ರಿಶೂಲತಃ ॥ ೨ ॥

---

### ಇಪ್ಪತ್ತೇಳನೆಯ ಅಧ್ಯಾಯವು.

೧. ಸನತ್ಕುಮಾರನು, ವ್ಯಾಸಮಹರ್ಷಿಯನ್ನು ಕುರಿತು, ಓ ಮುನೀಂದ್ರ, ಯಾವುದನ್ನು ಕೇಳಿದ ಮಾತ್ರದಿಂದಲೇ ಶಿವನಲ್ಲಿ ಭಕ್ತಿಯು ದೃಢವಾಗಿ ನೆಲೆಸುವುದೋ, ಅಂತಹ ಮತ್ತೊಂದು ಶಿವನ ಚರಿತ್ರವನ್ನು ಹೇಳುವೆನು. ಆದರದಿಂದ ಅದನ್ನು ಕೇಳು.

೨. ದೇವತೆಗಳಿಗೆ ಕಂಟಕಪ್ರಾಯನಾದ ಮಹಾವೀರನಾದ ಶಂಖಚೂಡನೆಂಬ ದಾನವನನ್ನು, ಶಿವನ ತ್ರಿಶೂಲದಿಂದ ಯುದ್ಧದಲ್ಲಿ ಹೇಗೆ ಹತನಾದನೆಂಬುದನ್ನು ವಿವರಿಸುವೆನು.

ತಚ್ಛಂಭುಚರಿತಂ ದಿವ್ಯಂ ಪವಿತ್ರಂ ಪಾಪನಾಶನಂ ।
ಶೃಣು ವ್ಯಾಸ ಸುಸಂಪ್ರೀತ್ಯಾ ವಚ್ಮಿ ಸುಸ್ನೇಹತಸ್ತವ ॥ ೩ ॥

ಮರೀಚೇಸ್ತನಯೋ ಧಾತುಃ ಪುತ್ರೋ ಯಃ ಕಶ್ಯಪೋ ಮುನಿಃ ।
ಸ ಧರ್ಮಿಷ್ಠಸ್ಸೃಷ್ಟಿಕರ್ತಾ ವಿದ್ಯಾಜ್ಞಪ್ತಃ ಪ್ರಜಾಪತಿಃ ॥ ೪ ॥

ದಕ್ಷಃ ಪ್ರೀತ್ಯಾ ದದೌ ತಸ್ಮೈ ನಿಜಕನ್ಯಾಸ್ತ್ರಯೋದಶ ।
ತಾಸಾಂ ಪ್ರಸೂತಿಃ ಪ್ರಸಭಂ ನ ಕಥ್ಯಾ ಬಹುವಿಸ್ತೃತಾಃ ॥ ೫ ॥

ಯತ್ರ ದೇವಾದಿನಿಖಿಲಂ ಚರಾಚರಮಭೂಜ್ಜಗತ್ ।
ವಿಸ್ತರಾತ್ತತ್ಪ್ರವಕ್ತುಂ ಚ ಕಃ ಕ್ಷಮೋಽಸ್ತಿ ತ್ರಿಲೋಕಕೇ ॥ ೬ ॥

ಪ್ರಸ್ತುತಂ ಶೃಣು ವೃತ್ತಾಂತಂ ಶಂಭುಲೀಲಾನ್ವಿತಂ ಚ ಯತ್ ।
ತದೇವ ಕಥಯಾಮ್ಯದ್ಯ ಶೃಣು ಭಕ್ತಿಪ್ರವರ್ಧನಂ ॥ ೭ ॥

---

೩. ಅತ್ಯಾಶ್ಚರ್ಯಕರವೂ, ಪಾವನವೂ, ಪಾಪನಿವಾರಕವೂ ಆದ ಆ ಶಿವನ ಚರಿತವನ್ನು ನಿನ್ನಲ್ಲಿ ನನಗೆ ಇರುವ ಸ್ನೇಹದಿಂದ ತಿಳಿಸುವೆನು. ಪ್ರೀತಿಯಿಟ್ಟು ಅದನ್ನು ಕೇಳು ಎಂದು ಹೇಳತೊಡಗಿದನು.

೪. ಬ್ರಹ್ಮಮಾನಸಪುತ್ರನಾದ ಮರೀಚಿಮಹರ್ಷಿಗೆ, ಕಶ್ಯಪ ಪ್ರಜಾಪತಿಯು ಮಗನಾಗಿದ್ದನು. ಆ ಕಶ್ಯಪನು ಧರ್ಮನಿರತನಾಗಿದ್ದನು. ಪ್ರಜಾಸೃಷ್ಟಿಯನ್ನು ನೆರವೇರಿಸುತ್ತಿದ್ದನು. ಅಲ್ಲದೆ ತತ್ತ್ವವನ್ನೂ ಚೆನ್ನಾಗಿ ತಿಳಿದಿದ್ದನು.

೫. ಆತನಿಗೆ ದಕ್ಷಪ್ರಜಾಪತಿಯು ತನ್ನ ಹದಿಮೂರು ಮಂದಿ ಪುತ್ರಿಯರನ್ನು ಪ್ರೀತಿಯಿಂದ ಇತ್ತು ವಿವಾಹಮಾಡಿದನು. ಬಹು ವಿಸ್ತಾರವಾಗಿ ಹರಡಿದ ಅವರ ಸಂತತಿಯನ್ನು ನಿಧಾನವಾಗಿ ಹೇಳಬೇಕಲ್ಲದೆ ತಟಕ್ಕನೆ ತಿಳಿಸಲು ಸಾಧ್ಯವಿಲ್ಲ.

೬. ದೇವತೆಗಳೇ ಮೊದಲಾದ ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ಅವರ ಸಂತತಿಯೇ ಆಗಿರುವುದು. ಅವರ ಸಂತಾನವನ್ನು ವಿವರಿಸಿ ಹೇಳಲು, ಮೂರು ಲೋಕದಲ್ಲಿ ಯಾವನು ತಾನೇ ಸಮರ್ಥನಾಗಿರುವನು ?

೭. ಶಿವನ ಲೀಲೆಯನ್ನೊಳಗೊಂಡ ಈ ಪ್ರಕೃತವೃತ್ತಾಂತವನ್ನು ಕೇಳು. ಭಕ್ತಿಯನ್ನು ಹೆಚ್ಚಿಸುವಂತಹ ಆ ವೃತ್ತಾಂತವನ್ನೇ ನಿನಗೆ ಹೇಳುವೆನು.

ತಾಸು ಕಶ್ಯಪಪತ್ನೀಸು ದನುಸ್ತ್ವೇಕಾ ವರಾಂಗನಾ ।
ಮಹಾರೂಪವತೀ ಸಾಧ್ವೀ ಪತಿಸೌಭಾಗ್ಯವರ್ಧಿತಾ ॥ ೮ ॥

ಆಸಂಸ್ತಸ್ಯಾ ದನೋಃ ಪುತ್ರಾ ಬಹವೋ ಬಲವತ್ತರಾಃ ।
ತೇಷಾಂ ನಾಮಾನಿ ನೋಚ್ಯಂತೇ ವಿಸ್ತಾರಭಯತೋ ಮುನೇ ॥ ೯ ॥

ತೇಷ್ವೇಕೋ ವಿಪ್ರಚಿತ್ತಿಸ್ತು ಮಹಾಬಲಪರಾಕ್ರಮಃ ।
ತತ್ಪುತ್ರೋ ಧಾರ್ಮಿಕೋ ದಂಭೋ ವಿಷ್ಣುಭಕ್ತೋ ಜಿತೇಂದ್ರಿಯಃ ॥
ನಾಸೀತ್ತತ್ತನಯೋ ವೀರಸ್ತತಶ್ಚಿಂತಾಪರೋಽಭವತ್ ।
ಶುಕ್ರಾಚಾರ್ಯಂ ಗುರುಂ ಕೃತ್ವಾ ಕೃಷ್ಣಮಂತ್ರಮವಾಪ್ಯ ಚ ॥ ೧೧ ॥

ತಪಶ್ಚಕಾರ ಪರಮಂ ಪುಷ್ಕರೇ ಲಕ್ಷವರ್ಷಕಂ ।
ಕೃಷ್ಣಮಂತ್ರಂ ಜಜಾಪೈವ ದೃಢಂ ಬದ್ಧ್ವಾಽಸನಂ ಚಿರಂ ॥ ೧೨ ॥

---

೮. ಆ ಹದಿಮೂರು ಮಂದಿ ಕಶ್ಯಪನ ಪತ್ನಿಯರಲ್ಲಿ ದನುವೆಂಬುವಳು ಶ್ರೇಷ್ಠಳಾಗಿದ್ದಳು. ಅವಳು ಕಡುಚೆಲುವೆಯೂ, ಮಹಾಸಾಧ್ವಿಯೂ, ಪತಿಯ ಅನುರಾಗದಿಂದ ವಿಶೇಷವಾದ ಸೌಭಾಗ್ಯಶಾಲಿನಿಯೂ ಆಗಿದ್ದಳು.

೯. ಓ ಮುನೀಂದ್ರ, ಆ ದನುವಿಗೆ ಮಹಾಬಲಾಢ್ಯರಾದ ಅನೇಕ ಮಂದಿ ಮಕ್ಕಳಿದ್ದರು. ಬಹಳ ವಿಸ್ತಾರವಾಗುವುದೆಂಬ ಭಯದಿಂದ ಅವರ ಹೆಸರುಗಳನ್ನು ಇಲ್ಲ ವಿವರಿಸಲಾಗುವುದಿಲ್ಲ.

೧೦. ಅಸಮಸಾಹಸಿಯೂ ಮಹಾಬಲಿಷ್ಠನೂ ಆದ ವಿಪ್ರಚಿತ್ತಿಯೆಂಬ ದಾನವನು, ಅವರಲ್ಲಿ ಒಬ್ಬನು. ಅವನಿಗೆ ದಂಭನೆಂಬ ಮಗನಿದ್ದನು. ಆ ದಂಭನು ವಿಷ್ಣುಭಕ್ತಿಯುಳ್ಳವನು, ಜಿತೇಂದ್ರಿಯನು.

೧೧-೧೨. ಆ ವೀರನಿಗೆ ಪುತ್ರನು ಉದಯಿಸಲಿಲ್ಲ. ಆದುದರಿಂದ ಅವನು ವ್ಯಥೆಗೀಡಾದನು. ಬಳಿಕ ತನ್ನ ಗುರುವಾದ ಶುಕ್ರಾಚಾರ್ಯನ ಬಳಿಗೆ ಹೋಗಿ, ಆತನಿಂದ ಶ್ರೀಕೃಷ್ಣಮಂತ್ರವನ್ನು ಉಪದೇಶ ತೆಗೆದುಕೊಂಡನು. ಆಮೇಲೆ ಪುಷ್ಕರ ಕ್ಷೇತ್ರಕ್ಕೆ ಹೊರಟು, ಅಲ್ಲಿ ಒಂದು ಲಕ್ಷ ವರ್ಷಗಳಕಾಲ, ದೃಢವಾದ ಆಸನದಲ್ಲಿ ಕುಳಿತು, ಶ್ರೀಕೃಷ್ಣಮಂತ್ರವನ್ನು ಜಪಿಸುತ್ತಾ, ಅತ್ಯುಗ್ರವಾದ ತಪಸ್ಸನ್ನು ಆಚರಿಸಿದನು.

ತಪಃ ಪ್ರಕುರ್ವತಸ್ತಸ್ಯ ಮೂರ್ಧ್ನೋರ್ನಿಸ್ಸೃತ್ಯ ಪ್ರಜ್ವಲಂ ।
ವಿಸಸಾರ ಚ ಸರ್ವತ್ರ ತತ್ತೇಜೋ ಹಿ ಸುದುಸ್ಸಹಂ ॥ ೧೩ ॥

ತೇನ ತಪ್ತಾಸ್ಸುರಾಸ್ಸರ್ವೇ ಮುನಯೋ ಮನವಸ್ತಥಾ ।
ಸುನಾಸೀರಂ ಪುರಸ್ಕೃತ್ಯ ಬ್ರಹ್ಮಾಣಂ ಶರಣಂ ಯಯುಃ ॥ ೧೪ ॥

ಪ್ರಣಮ್ಯ ಚ ವಿಧಾತಾರಂ ದಾತಾರಂ ಸರ್ವಸಂಪದಾಂ ।
ತುಷ್ಟುವುರ್ವಿಕಲಾಃ ಪ್ರೋಚುಃ ಸ್ವವೃತ್ತಾಂತಂ ವಿಶೇಷತಃ ॥ ೧೫ ॥

ತದಾಕರ್ಣ್ಯ ವಿಧಾತಾಪಿ ವೈಕುಂಠಂ ತೈರ್ಯಯೌ ಸಹ ।
ತದೇವ ವಿಜ್ಞಾಪಯಿತುಂ ನಿಖಿಲೇನ ಹಿ ವಿಷ್ಣವೇ ॥ ೧೬ ॥

ತತ್ರ ಗತ್ವಾ ತ್ರಿಲೋಕೇಶಂ ವಿಷ್ಣುಂ ರಕ್ಷಾಕರಂ ಪರಂ ।
ಪ್ರಣಮ್ಯ ತುಷ್ಟುವುಸ್ಸರ್ವೇ ಕರೌ ಬದ್ಧ್ವಾ ವಿನಮ್ರಕಾಃ ॥ ೧೭ ॥

---

೧೩. ಈರೀತಿ ಆ ದಂಭನು ತಪಸ್ಸುಮಾಡುತ್ತಿರಲು, ಅವನ ಶಿರಸ್ಸಿನಿಂದ ಅತಿ ದುಸ್ಸಹವಾದಂತಹ ತೇಜಸ್ಸು, ಪ್ರಜ್ವಲಿಸುತ್ತಾ ಈಚೆಗೆ ಹೊರಟು ಎಲ್ಲ ಕಡೆಗೂ ಪ್ರಸರಿಸಿತು.

೧೪-೧೫. ಆ ತೇಜಸ್ಸಿನ ಬೇಗೆಯನ್ನು ಸಹಿಸಲಾರದೆ, ದೇವತೆಗಳೂ, ಋಷಿಗಳೂ, ಮನುಗಳೂ, ಇಂದ್ರನನ್ನು ಮುಂದಿಟ್ಟುಕೊಂಡು, ಬ್ರಹ್ಮನನ್ನು ಮರೆಹೊಕ್ಕು ಸರ್ವ ಸಂಪತ್ತುಗಳನ್ನೂ ಕರುಣಿಸುವ ಆ ಚತುರ್ಮುಖನನ್ನು ನಮಸ್ಕರಿಸಿ, ಆತನನ್ನು ಸ್ತೋತ್ರಮಾಡಿ, ಬಳಿಕ ತಮ್ಮ ಕಷ್ಟವೆಲ್ಲವನ್ನೂ ವಿವರವಾಗಿ ಅರಿಕೆಮಾಡಿಕೊಂಡರು.

೧೬. ಅವರ ತೊಂದರೆಯೆಲ್ಲವನ್ನೂ ಕೇಳಿ ಆ ಚತುರ್ಮುಖಬ್ರಹ್ಮನೂ ಸಹ ಆ ದೇವತೆಗಳೆಲ್ಲರನ್ನು ತನ್ನ ಜತೆಯಲ್ಲಿ ಕರೆದುಕೊಂಡು ಆ ವೃತ್ತಾಂತವನ್ನು ವಿಷ್ಣುವಿಗೆ ಬಿನ್ನವಿಸಲು ವೈಕುಂಠಕ್ಕೆ ತೆರಳಿದನು.

೧೭. ಅಲ್ಲಿ ಸೇರಿದ ಮೇಲೆ, ಅವರೆಲ್ಲರೂ ಮೂರು ಲೋಕಗಳಿಗೂ ಒಡೆಯನೂ, ತಮ್ಮ ಸಂರಕ್ಷಕನೂ ಆದ ವಿಷ್ಣುವನ್ನು ನಮಸ್ಕರಿಸಿ, ವಿನಯದಿಂದ ಶಿರಸ್ಸನ್ನು ಬಗ್ಗಿಸಿ ಕೈಮುಗಿದುಕೊಂಡು ಆತನನ್ನು ಸ್ತೋತ್ರಮಾಡಿದರು.

॥ ದೇವಾ ಊಚುಃ ॥

ದೇವದೇವ ನ ಜಾನೀಮೋ ಜಾತಂ ಕಿಂ ಕಾರಣಂ ತ್ವಿಹ ।
ಸಂತಪ್ತಾಸ್ಸಕಲಾ ಜಾತಾಸ್ತೇಜಸಾ ಕೇನ ತದ್ವದ ॥ ೧೮ ॥

ತಪ್ತಾತ್ಮನಾಂ ತ್ವಮವಿತಾ ದೀನಬಂಧೋಽನುಜೀವಿನಾಂ ।
ರಕ್ಷ ರಕ್ಷ ರಮಾನಾಥ ಶರಣ್ಯಶ್ಶರಣಾಗತಾನ್ ॥ ೧೯ ॥

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ವಚೋ ವಿಷ್ಣುರ್ಬ್ರಹ್ಮಾದೀನಾಂ ದಿವೌಕಸಾಂ ।
ಉವಾಚ ವಿಹಸನ್ಪ್ರೇಮ್ಣಾ ಶರಣಾಗತವತ್ಸಲಃ ॥ ೨೦ ॥

॥ ವಿಷ್ಣುರುವಾಚ ॥

ಸುಸ್ವಸ್ಥಾ ಭವತಾವ್ಯಗ್ರಾ ನ ಭಯಂ ಕುರುತಾಮರಾಃ ।
ನೋಪಪ್ಲವಾ ಭವಿಷ್ಯಂತೇ ಲಯಕಾಲೋ ನ ವಿದ್ಯತೇ ॥ ೨೧ ॥

---

೧೮. ಎಲೈ ದೇವದೇವನೇ, ಅದೇನು ಕಾರಣವೋ? ನಾನರಿಯೆವು. ನಾವೆಲ್ಲರೂ ಈಗ ಸುಟ್ಟುಹೋಗುತ್ತಿದ್ದೇವೆ. ಯಾವ ತೇಜಸ್ಸಿನಿಂದ ಈರೀತಿಯಾಗುತ್ತಿದೆಯೆಂಬುದನ್ನು ನೀನೇ ತಿಳಿಸಬೇಕು.

೧೯. ಎಲೈ ಲಕ್ಷ್ಮೀಕಾಂತನೇ, ನೀನು ದೀನಬಂಧುವು. ಈರೀತಿ ಸಂಕಟಪಡುತ್ತಿರುವ ನಿನ್ನ ಉಪಾಶ್ರಿತರಿಗೆ ನೀನೇ ರಕ್ಷಕನಲ್ಲವೇ? ಶರಣಾಗತವತ್ಸಲನಾದ ನೀನು ಮರೆಹೊಕ್ಕಿರುವ ನಮ್ಮನ್ನು ಕೈಬಿಡದೆ ಕಾಪಾಡು ಎಂದರು.

೨೦. ಈರೀತಿ ಬ್ರಹ್ಮಾದಿದೇವತೆಗಳು ಮೊರೆಯಿಟ್ಟದನ್ನು ಕೇಳಿ, ಶರಣಾಗತವತ್ಸಲನಾದ ಆ ಶ್ರೀಹರಿಯು ನಗುತ್ತಾ ಪ್ರೀತಿಯಿಂದ ಅವರನ್ನಿಂತೆಂದನು.

೨೧. ಎಲೈ ದೇವತೆಗಳಿರ, ಹೆದರಬೇಡರಿ, ಶಾಂತರಾಗಿ ನೆಮ್ಮದಿಯಿಂದಿರಿ. ಗಾಬರಿ ಬೀಳಬೇಡಿ. ಯಾವ ಅನಾಹುತಗಳೂ ಈಗ ನಡೆಯುವುದಿಲ್ಲ. ಇದು ಪ್ರಳಯಕಾಲವೂ ಅಲ್ಲ.

ದಾನವೋ ದಂಭನಾಮಾ ಹಿ ಮದ್ಭಕ್ತಃ ಕುರುತೇ ತಪಃ ।
ಪುತ್ರಾರ್ಥೀ ಶಮಯಿಷ್ಯಾಮಿ ತಮಹಂ ವರದಾನತಃ ॥ ೨೨ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತಾಸ್ತೇ ಸುರಾಸ್ಸರ್ವೇ ಧೈರ್ಯಮಾಲಂಬ್ಯ ವೈ ಮುನೇ ।
ಯಯುರ್ಬ್ರಹ್ಮಾದಯಸ್ಸ್ವಸ್ವಾಸ್ಸ್ವಸ್ವಧಾಮಾನಿ ಸರ್ವಶಃ ॥ ೨೩ ॥

ಅಚ್ಯುತೋಽಪಿ ವರಂ ದಾತುಂ ಪುಷ್ಕರಂ ಸಂಜಗಾಮ ಹ ।
ತಪಶ್ಚರತಿ ಯತ್ರಾಸೌ ದಂಭನಾಮಾ ಹಿ ದಾನವಃ ॥ ೨೪ ॥

ತತ್ರ ಗತ್ವಾ ವರಂ ಬ್ರೂಹೀತ್ಯುವಾಚ ಪರಿಸಾಂತ್ವಯನ್ ।
ಗಿರಾ ಸೂನೃತಯಾ ಭಕ್ತಂ ಜಪಂತಂ ಸ್ವಮನುಂ ಹರಿಃ ॥ ೨೫ ॥

ತಚ್ಛ್ರುತ್ವಾ ವಚನಂ ವಿಷ್ಣೋರ್ದೃಷ್ಟ್ವಾ ತಂ ಚ ಪುರಃ ಸ್ಥಿತಂ ।
ಪ್ರಣನಾಮ ಮಹಾಭಕ್ತ್ಯಾ ತುಷ್ಟಾವ ಚ ಪುನಃ ಪುನಃ ॥ ೨೬ ॥

---

೨೨. ನನ್ನ ಭಕ್ತನಾದ ದಂಭನೆಂಬ ದಾನವನು, ತನಗೆ ಪುತ್ರಸಂತಾನವಾಗಲೆಂದು ಬಯಸಿ ತಪಸ್ಸನ್ನು ಮಾಡುತ್ತಿರುವನು. ನಾನು ಅವನಿಗೆ ವರವನ್ನಿತ್ತು ಅವನ ತಪಸ್ಸನ್ನು ನಿಲ್ಲಿಸುವೆನು.

೨೩. ಈರೀತಿ ವಿಷ್ಣುವು ಅವರಿಗೆ ಆಶ್ವಾಸನೆಯನ್ನು ಇತ್ತಮೇಲೆ, ಆ ದೇವತೆಗಳೆಲ್ಲರೂ ಧೈರ್ಯವನ್ನು ತಾಳಿ, ತಮ್ಮ ತಮ್ಮ ನಿವಾಸಗಳಿಗೆ ತೆರಳಿದರು.

೨೪. ಇತ್ತ ಶ್ರೀಹರಿಯೂ ಸಹ ತನ್ನ ಭಕ್ತನಾದ ಆ ದಂಭನೆಂಬ ದಾನವನಿಗೆ ವರವನ್ನೀಯಲು, ಅವನು ತಪಸ್ಸುಮಾಡುತ್ತಿದ್ದ ಪುಷ್ಕರಕ್ಷೇತ್ರಕ್ಕೆ ತೆರಳಿದನು.

೨೫. ಶ್ರೀಹರಿಯು ಆ ಪುಷ್ಕರವನ್ನು ಸೇರಿದ ಬಳಿಕ ತನ್ನ ಮಂತ್ರವನ್ನೇ ಪುರಶ್ಚರಣೆಮಾಡುತ್ತಿದ್ದ ತನ್ನ ಭಕ್ತನನ್ನು ಇಂಪಾದ ಮಾತುಗಳಿಂದ ಸಾಂತ್ವನೆಗೊಳಿಸುತ್ತಾ ನಿನಗಾವ ವರವುಬೇಕು ಕೇಳು ಎಂದನು.

೨೬. ವಿಷ್ಣುವಿನ ಆ ಮಾತು ಕಿವಿಗೆ ಬೀಳುತ್ತಲೇ, ಆ ದಂಭದಾನವನು, ತನ್ನೆದುರಿಗೆ ವಿಷ್ಣುವು ನಿಂತಿರುವುದನ್ನು ಕಂಡು, ಅತಿಶಯವಾದ ಭಕ್ತಿಯಿಂದ ಅವನಿಗೆ ನಮಸ್ಕಾರಮಾಡಿ, ಮತ್ತೆ ಮತ್ತೆ ಸ್ತೋತ್ರಮಾಡಿದನು.

॥ ದಂಭ ಉವಾಚ ॥

ದೇವದೇವ ನಮಸ್ತೇऽಸ್ತು ಪುಂಡರೀಕವಿಲೋಚನ ।
ರಮಾನಾಥ ತ್ರಿಲೋಕೇಶ ಕೃಪಾಂ ಕುರು ಮಮೋಪರಿ ॥ ೨೭ ॥

ಸ್ವಭಕ್ತಂ ತನಯಂ ದೇಹಿ ಮಹಾಬಲಪರಾಕ್ರಮಂ ।
ತ್ರಿಲೋಕಜಯಿನಂ ವೀರಮಜೇಯಂ ಚ ದಿವೌಕಸಾಂ ॥ ೨೮ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತೋ ದಾನವೇಂದ್ರೇಣ ತಂ ವರಂ ಪ್ರದದೌ ಹರಿಃ ।
ನಿವರ್ತ್ಯ ಚೋಗ್ರತಪಸಸ್ತತಸ್ತೋऽಂತರಧಾನ್ಮುನೇ ॥ ೨೯ ॥

ಗತೇ ಹರೌ ದಾನವೇಂದ್ರಃ ಕೃತ್ವಾ ತಸ್ಯೈ ದಿಶೇ ನಮಃ ।
ಜಗಾಮ ಸ್ವಗೃಹಂ ಸಿದ್ಧತಪಾಃ ಪೂರ್ಣಮನೋರಥಃ ॥ ೩೦ ॥

---

೨೭. ದೇವದೇವ, ಓ ಪುಂಡರೀಕಾಕ್ಷ, ರಮಾಕಾಂತ, ತ್ರಿಲೋಕಾಧಿಪತಿ, ನಿನಗೆ ನಮಸ್ಕಾರವು. ನನ್ನ ಮೇಲೆ ನಿನ್ನ ಕೃಪೆಯನ್ನು ಬೀರು.

೨೮. ಮಹಾಬಲಾಢ್ಯನೂ, ಅಸಮಸಾಹಸಿಯೂ, ಮೂರು ಲೋಕವನ್ನೂ ಜಯಿಸುವವನೂ, ದೇವತೆಗಳಿಗೆ ಜಯಿಸಲು ಅಸಾಧ್ಯನೂ, ನಿನ್ನಲ್ಲಿ ಭಕ್ತಿಯುಳ್ಳವನೂ ಆದ ಓರ್ವ ಪುತ್ರನನ್ನು ನನಗೆ ಕರುಣಿಸು ಎಂದು ಬೇಡಿದನು.

೨೯. ಓ ವ್ಯಾಸಮಹರ್ಷಿ, ಈರೀತಿ ಆ ದಂಭನು ಕೇಳಿಕೊಳ್ಳಲು, ಶ್ರೀಹರಿಯು ಅವನಿಗೆ ಆ ವರನ್ನನುಗ್ರಹಿಸಿ, ಅವನ ತಪಸ್ಸನ್ನು ನಿಲ್ಲಿಸುವಂತೆ ಹೇಳಿ ಅಂತರ್ಧಾನವನ್ನು ಹೊಂದಿದನು.

೩೦. ಶ್ರೀಹರಿಯು ಕಣ್ಮರೆಯಾಗಲು ಆ ದಾನವನು ಆ ದಿಕ್ಕಿಗೆ ನಮಸ್ಕಾರ ಮಾಡಿ, ತನ್ನ ತಪಸ್ಸು ಸಿದ್ಧಿಸಿದ್ದರಿಂದ ತನ್ನ ಅಭಿಲಾಷೆಯು ಈಡೇರಲು ಸಂತೋಷದಿಂದ ತನ್ನ ಮನೆಗೆ ಹಿಂದಿರುಗಿದನು.

ಕಾಲೇನಾಲ್ಪೇನ ತತ್ಪತ್ನೀ ಸಗರ್ಭಾ ಭಾಗ್ಯವತ್ಯಭೂತ್ ।
ರರಾಜ ತೇಜಸಾತ್ಯಂತಂ ರೋಚಯಂತೀ ಗೃಹಾಂತರಂ ॥ ೩೧ ॥

ಸುದಾಮಾ ನಾಮ ಗೋಪೋ ಯಃ ಕೃಷ್ಣಸ್ಯ ಪಾರ್ಷದಾಗ್ರಣೀಃ ।
ತಸ್ಯಾ ಗರ್ಭೇ ವಿವೇಶಾಸೌ ರಾಧಾಶಪ್ತಶ್ಚ ಯನ್ಮುನೇ ॥ ೩೨ ॥

ಅಸೂತ ಸಮಯೇ ಸಾಧ್ವೀ ಸುಪ್ರಭಂ ತನಯಂ ತತಃ ।
ಜಾತಕಂ ಸು ಚಕಾರಾಸೌ ಪಿತಾಹೂಯ ಮುನೀನ್ಬಹೂನ್ ॥ ೩೩ ॥

ಉತ್ಸವಸ್ಸುಮಹಾನಾಸೀತ್ತಸ್ಮಿನ್ಜಾತೇ ದ್ವಿಜೋತ್ತಮ ।
ನಾಮ ಚಕ್ರೇ ಪಿತಾ ತಸ್ಯ ಶಂಖಚೂಡೇತಿ ಸದ್ದಿನೇ ॥ ೩೪ ॥

ಪಿತುರ್ಗೇಹೇ ಸ ವವೃಧೇ ಶುಕ್ಲಪಕ್ಷೇ ಯಥಾ ಶಶೀ ।
ಶೈಶವೇಽಭ್ಯಸ್ತವಿದ್ಯಸ್ತು ಸ ಬಭೂವ ಸುದೀಪ್ತಿಮಾನ್ ॥ ೩೫ ॥

---

೩೧. ಸ್ವಲ್ಪ ಕಾಲದೊಳಗಾಗಿಯೇ ಭಾಗ್ಯಶಾಲಿಯಾದ ಅವನ ಹೆಂಡತಿಯು ಗರ್ಭವನ್ನು ಧರಿಸಿ ಅಪೂರ್ವವಾದ ತೇಜಸ್ಸಿಂದ ಮನೆಯನ್ನೆಲ್ಲಾ ಬೆಳಗುತ್ತಾ ಅತಿಶಯವಾಗಿ ಶೋಭಿಸಿದಳು.

೩೨. ಓ ವ್ಯಾಸ, ಹಿಂದೆ ಕೃಷ್ಣನ ಪರಿವಾರದಲ್ಲಿ ಮುಖಂಡನಾಗಿದ್ದ ಸುಧಾಮನೆಂಬ ಗೋಪಾಲಕನೊಬ್ಬನು ರಾಧೆಯಶಾಪಕ್ಕೆ ಈಡಾಗಿದ್ದನಷ್ಟೆ? ಅವನೀಗ ದಂಭಪತ್ನಿಯ ಗರ್ಭವನ್ನು ಪ್ರವೇಶಿಸಿದನು.

೩೩. ಬಳಿಕ ಹತ್ತು ತಿಂಗಳು ತುಂಬಲು ಆ ಸಾಧ್ವಿಯು ತೇಜಸ್ವಿಯಾದ ಮಗನನ್ನು ಹೆತ್ತಳು. ಆಗ ದಂಭದಾನವನು, ಅನೇಕ ಮಂದಿ ಮುನಿಗಳನ್ನು ಕರೆದು ಶಿಶುವಿಗೆ ಜಾತಕರ್ಮವನ್ನು ವೈಭವದಿಂದ ಮಾಡಿಸಿದನು.

೩೪. ಆ ಶಿಶುವು ಹುಟ್ಟುತ್ತಲೇ ಅತಿಶಯವಾಗಿ ಉತ್ಸವವನ್ನಾಚರಿಸಿ ಒಳ್ಳೆಯ ದಿನದಲ್ಲಿ ಆ ದಂಭನು ಆ ಶಿಶುವಿಗೆ ಶಂಖಚೂಡನೆಂದು ಹೆಸರಿಟ್ಟನು.

೩೫. ಆ ಶಂಖಚೂಡನು ಶುಕ್ಲಪಕ್ಷದ ಚಂದ್ರನಂತೆ ತನ್ನ ತಂದೆಯ ಮನೆಯಲ್ಲಿ ಬೆಳೆದನು. ಅವನು ಬಾಲ್ಯದಲ್ಲಿಯೇ ವಿದ್ಯೆಯೆಲ್ಲವನ್ನೂ ಕಲಿತು, ಅದ್ಭುತವಾದ ಕಾಂತಿಯಿಂದ ಬೆಳಗತೊಡಗಿದನು.

ಸ ಬಾಲಕ್ರೀಡಯಾ ನಿತ್ಯಂ ಪಿತ್ರೋರ್ಹರ್ಷಂ ತತಾನ ಹ ।
ಪ್ರಿಯೋ ಬಭೂವ ಸರ್ವೇಷಾಂ ಕುಲಜಾನಾಂ ವಿಶೇಷತಃ　　　॥ ೩೬ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡೋತ್ಪತ್ತಿವರ್ಣನಂ
ನಾಮ ಸಪ್ತವಿಂಶೋಽಧ್ಯಾಯಃ.

---

೩೬. ಆ ಶಂಖಚೂಡನು ತನ್ನ ಬಾಲಲೀಲೆಗಳಿಂದ ನಿತ್ಯವೂ ತನ್ನ ತಾಯಿ ತಂದೆಗಳಿಗೆ ಪ್ರೀತಿಯನ್ನುಂಟುಮಾಡುತ್ತಿದ್ದನು. ತನ್ನ ಬಂಧುಗಳಿಗೆಲ್ಲಾ ವಿಶೇಷವಾಗಿ ಪ್ರೀತಿಪಾತ್ರನಾದನು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯೊಳಗಣ
ಯುದ್ಧಖಂಡದಲ್ಲಿ ಶಂಖಚೂಡೋತ್ಪತ್ತಿವರ್ಣನವೆಂಬ ಇಪ್ಪತ್ತೇಳನೆಯ
ಅಧ್ಯಾಯವು ಮುಗಿದುದು.

|| ಶ್ರೀಃ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಅಷ್ಟಾವಿಂಶೋಽಧ್ಯಾಯಃ

|| ಸನತ್ಕುಮಾರ ಉವಾಚ ||

ತತಶ್ಚ ಶಂಖಚೂಡೋಽಸೌ ಜೈಗೀಷವ್ಯೋಪದೇಶತಃ ।
ತಪಶ್ಚಕಾರ ಸುಪ್ರೀತ್ಯಾ ಬ್ರಹ್ಮಣಃ ಪುಷ್ಕರೇ ಚಿರಂ || ೧ ||

ಗುರುದತ್ತಾಂ ಬ್ರಹ್ಮವಿದ್ಯಾಂ ಜಜಾಪ ನಿಯತೇಂದ್ರಿಯಃ ।
ಸ ಏಕಾಗ್ರಮನಾ ಭೂತ್ವಾ ಕರಣಾನಿ ನಿಗೃಹ್ಯ ಚ || ೨ ||

---

## ಇಪ್ಪತ್ತೆಂಟನೆಯ ಅಧ್ಯಾಯವು.

೧. ಸನತ್ಕುಮಾರನು ವ್ಯಾಸನನ್ನು ಕುರಿತು ಹೇಳತೊಡಗಿದನು.—ಬಳಿಕ ಆ ಶಂಖಚೂಡನು ಪುಷ್ಕರಕ್ಷೇತ್ರಕ್ಕೆ ತೆರಳಿ ಮಹಾಪ್ರೀತಿಯಿಂದ ಬ್ರಹ್ಮನನ್ನು ಕುರಿತು ತಪಸ್ಸುಮಾಡಿದನು.

೨. ಇಂದ್ರಿಯಗಳನ್ನು ನಿಗ್ರಹಿಸಿ, ತನ್ನ ಗುರುವು ಉಪದೇಶಿಸಿದ್ದ ಬ್ರಹ್ಮಮಂತ್ರವನ್ನು ತದೇಕಚಿತ್ತನಾಗಿ ಜಪಿಸತೊಡಗಿದನು.

ತಪಂತಂ ಪುಷ್ಕರೇ ತಂ ವೈ ಶಂಖಚೂಡಂ ಚ ದಾನವಂ ।
ವರಂ ದಾತುಂ ಜಗಾಮಾಶು ಬ್ರಹ್ಮಾ ಲೋಕಗುರುರ್ವಿಭುಃ ॥ ೩ ॥

ವರಂ ಬ್ರೂಹೀತಿ ಪ್ರೋವಾಚ ದಾನವೇಂದ್ರಂ ವಿಧಿಸ್ತದಾ ।
ಸ ದೃಷ್ಟ್ವಾ ತಂ ನನಾಮಾತಿನಮ್ರಸ್ತುಷ್ಟಾವ ಸದ್ಗಿರಾ ॥ ೪ ॥

ವರಂ ಯಯಾಚೇ ಬ್ರಹ್ಮಾಣಮಜೇಯತ್ವಂ ದಿವೌಕಸಾಂ ।
ತಥೇತ್ಯಾಹ ವಿಧಿಸ್ತಂ ವೈ ಸುಪ್ರಸನ್ನೇನ ಚೇತಸಾ ॥ ೫ ॥

ಶ್ರೀಕೃಷ್ಣಕವಚಂ ದಿವ್ಯಂ ಜಗನ್ಮಂಗಲಮಂಗಲಂ ।
ದತ್ತವಾಂಛಂಖಚೂಡಾಯ ಸರ್ವತ್ರ ವಿಜಯಪ್ರದಂ ॥ ೬ ॥

ಬದರೀಂ ಸಂಪ್ರಯಾಹಿ ತ್ವಂ ತುಲಸ್ಯಾ ಸಹ ತತ್ರ ವೈ ।
ವಿವಾಹಂ ಕುರು ತತ್ರೈವ ಸಾ ತಪಸ್ಯತಿ ಕಾಮತಃ ॥ ೭ ॥

---

೩-೪. ಈರೀತಿ ಪುಷ್ಕರಕ್ಷೇತ್ರದಲ್ಲಿ ತಪಸ್ಸುಮಾಡುತ್ತಿರುವ ಆ ಶಂಖಚೂಡ ನೆಂಬ ದಾನವನ ಬಳಿಗೆ ಪ್ರಪಂಚಕ್ಕೆಲ್ಲಾ ಒಡೆಯನಾದ ಬ್ರಹ್ಮನು ವರವನ್ನು ಕೊಡ ಬೇಕೆಂದು ಬೇಗನೆ ಬಂದು ಆ ದಾನವೇಂದ್ರನನ್ನು ಕುರಿತು ನಿನಗೆ ಬೇಕಾದ ವರವನ್ನು ಕೇಳಿಕೋ ಎನಲು, ಅವನು ಬ್ರಹ್ಮನನ್ನು ಅತಿ ನಮ್ರತೆಯಿಂದ ನಮಸ್ಕರಿಸಿ, ಒಳ್ಳೆಯ ಮಾತುಗಳಿಂದ ಸ್ತೋತ್ರಮಾಡಿದನು.

೫. ಅನಂತರ ದೇವತೆಗಳಾರೂ ತನ್ನನ್ನು ಜಯಿಸಲು ಸಾಧ್ಯವಿಲ್ಲದಂತೆ ವರ ವನ್ನು ಕೊಡೆಂದು ಬ್ರಹ್ಮನನ್ನು ಬೇಡಿದನು. ಬ್ರಹ್ಮನು ಹಾಗೆಯೇ ಆಗಲೆಂದು, ಪ್ರಸನ್ನವಾದ ಹೃದಯದಿಂದ ಅವನನ್ನು ಅನುಗ್ರಹಿಸಿದನು.

೬. ಎಲ್ಲ ಕಡೆಯೂ, ವಿಜಯವನ್ನು ಕೊಡುವಂಥದೂ, ಜಗತ್ತಿನಲ್ಲಿರುವ ಮಂಗಳಗಳಲ್ಲೆಲ್ಲಾ ಮಂಗಳವಾದುದೂ, ದಿವ್ಯವೂ, ಆದ ಶ್ರೀಕೃಷ್ಣಕವಚವನ್ನು ಆ ಶಂಖಚೂಡನಿಗೆ ಇತ್ತನು.

೭-೮. ಬಳಿಕ, ನೀನು ಬದರಿಗೆ ಹೋಗಿ, ಅಲ್ಲಿ ತುಲಸಿಯೊಂದಿಗೆ ಮದುವೆ ಯಾಗು. ಆ ತುಲಸಿಯು ಅಲ್ಲಿಯೇ ಕಾಮನೆಯಿಂದ ತಪಸ್ಸನ್ನು ಮಾಡುತ್ತಾ ಇರು

ಧರ್ಮಧ್ವಜಸುತಾ ಸೇತಿ ಸಂದಿದೇಶ ಚ ತಂ ವಿಧಿಃ ।
ಅಂತರ್ಧಾನಂ ಜಗಾಮಾಶು ಪಶ್ಯತಸ್ತಸ್ಯ ತತ್ಕ್ಷಣಾತ್ ॥ ೮ ॥

ತತಸ್ಸ ಶಂಖಚೂಡೋ ಹಿ ತಪಃಸಿದ್ಧೋಽತಿ ಪುಷ್ಕರೇ ।
ಗಲೇ ಬಬಂಧ ಕವಚಂ ಜಗನ್ಮಂಗಲಮಂಗಲಂ ॥ ೯ ॥

ಆಜ್ಞಯಾ ಬ್ರಹ್ಮಣಸ್ಸೋಽಪಿ ತಪಃಸಿದ್ಧಮನೋರಥಃ ।
ಸಮಾಯಯೌ ಪ್ರಹೃಷ್ಟಾಸ್ಯಸ್ತೂರ್ಣಂ ಬದರಿಕಾಶ್ರಮಂ ॥ ೧೦ ॥

ಯದೃಚ್ಛಯಾ ಗತಸ್ತತ್ರ ಶಂಖಚೂಡಶ್ಚ ದಾನವಃ ।
ತಪಶ್ಚರಂತೀ ತುಲಸೀ ಯತ್ರ ಧರ್ಮಧ್ವಜಾತ್ಮಜಾ ॥ ೧೧ ॥

ಸುರೂಪಾ ಸುಸ್ಮಿತಾ ತನ್ವೀ ಶುಭಭೂಷಣಭೂಷಿತಾ ।
ಸಕಟಾಕ್ಷಂ ದದರ್ಶಾಸೌ ತಮೇವ ಪುರುಷಂ ಪರಂ ॥ ೧೨ ॥

---

ವಳು. ಅವಳು ಧರ್ಮಧ್ವಜನ ಮಗಳು ಎಂದು ತಿಳಿಸಿ, ಆ ಶಂಖಚೂಡನು ನೋಡು ತ್ತಿರುವಂತೆಯೇ ಬೇಗನೆ ಅದೃಶ್ಯನಾದನು.

೯. ಅನಂತರ ಶಂಖಚೂಡನು ಪುಷ್ಕರದಲ್ಲಿ ತಾನು ಮಾಡಿದ ತಪಸ್ಸು ಈರೀತಿ ಫಲಿಸಲು, ಜಗನ್ಮಂಗಲಕರವಾದ ಶ್ರೀಕೃಷ್ಣಕವಚವನ್ನು ಕಂಠವಲ್ಲಿ ಧರಿ ಸಿದನು.

೧೦-೧೧. ತಾನು ಮಾಡಿದ ತಪಸ್ಸಿನಿಂದ ತನ್ನ ಇಷ್ಟಾರ್ಥವು ನೆರವೇರಲು ಆ ಶಂಖಚೂಡನು ಸಂತೋಷಗೊಂಡು ಬ್ರಹ್ಮನ ಅಪ್ಪಣೆಯ ಮೇರೆಗೆ ಬದರಿಕಾ ಶ್ರಮಕ್ಕೆ ಬೇಗನೆ ತೆರಳಿ, ಧರ್ಮಧ್ವಜನ ಮಗಳಾದ ತುಲಸಿಯು ತಪಸ್ಸನ್ನು ಮಾಡು ತ್ತಿದ್ದ ಸ್ಥಳಕ್ಕೆ ಬಂದನು.

೧೨. ಒಳ್ಳೆಯ ರೂಪವತಿಯೂ, ನಾನಾವಿಧವಾದ ಶುಭಕರವಾದ ಆಭರಣ ಗಳಿಂದ ಅಲಂಕೃತಳೂ, ಮಂದಹಾಸಮುಖವುಳ್ಳವಳೂ ಆದ ಆ ತಪಸ್ವಿನಿಯು ಆ ಪುರುಷನನ್ನೆ ಕಡೆಗಣ್ಣಿನಿಂದ ಪ್ರೇಮಪುರಸ್ಸರವಾಗಿ ನೋಡಿದಳು.

ದೃಷ್ಟ್ವೈವ ತಾಂ ಲಲಿತಾಂ ರಮ್ಯಾಂ ಸುಶೀಲಾಂ ಸುಂದರೀಂ ಸತೀಂ ।
ಉವಾಚ ತತ್ಸನ್ನಿಧೌ ಷೇ ತು ಮಧುರಂ.ತಾಮುವಾಚ ಸಃ　　॥ ೧೩ ॥

॥ ಶಂಖಚೂಡ ಉವಾಚ ॥

ಕಾ ತ್ವಂ ಕಸ್ಯ ಸುತಾ ತ್ವಂ ಹಿ ಕಿಂ ಕರೋಷಿ ಸ್ಥಿತಾತ್ರ ಕಿಂ ।
ಮೌನೀಭೂತಾ ಕಿಂಕರಂ ಮಾಂ ಸಂಭಾವಿತುಮಿಹಾರ್ಹಸಿ　　॥ ೧೪ ॥

॥ ಸನತ್ಕುಮಾರ ಉವಾಚ ॥

ಇತ್ಯೇವಂ ವಚನಂ ಶ್ರುತ್ವಾ ಸಕಾಮಂ ತಮುವಾಚ ಸಾ　　॥ ೧೫ ॥

॥ ತುಲಸ್ಯುವಾಚ ॥

ಧರ್ಮಧ್ವಜಸುತಾಹಂ ಚ ತಪಸ್ಯಾಮಿ ತಪಸ್ವಿನೀ ।
ತಪೋವನೇ ಚ ತಿಷ್ಠಾಮಿ ಕಸ್ತ್ವಂ ಗಚ್ಛ ಯಥಾಸುಖಂ　　॥ ೧೬ ॥

ನಾರೀಜಾತಿರ್ಮೋಹಿನೀ ಚ ಬ್ರಹ್ಮಾದೀನಾಂ ವಿಷೋಪಮಾ ।
ನಿಂದ್ಯಾ ದೋಷಕರೀ ಮಾಯಾ ಶೃಂಖಲಾ ಹ್ಯನುಶಾಯಿನಾಂ　　॥ ೧೭ ॥

---

೧೩. ಆ ಶಂಖಚೂಡನು, ಸುಕುಮಾರಿಯೂ, ನೋಡಿದೊಡನೆಯೇ ಮನಸ್ಸನ್ನು ಸೆಳೆಯುವವಳೂ, ಒಳ್ಳೆಯ ನಡತೆಯುಳ್ಳವಳೂ, ಲಾವಣ್ಯವತಿಯೂ, ಸಾಧ್ವಿಯೂ ಆದ ಆಕೆಯನ್ನು ನೋಡಿ, ಅವಳ ಬಳಿಯಲ್ಲಿಯೇ ನಿಂತು ಪ್ರಿಯವಾದ ಮಾತುಗಳಿಂದ ಅವಳನ್ನು ಕುರಿತು ಇಂತೆಂದನು.

೧೪... ಎಲೌ ಸಾಧ್ವಿ, ನೀನಾರು ? ಯಾರ ಮಗಳು ? ಇಲ್ಲಿ ಮೌನವಾಗಿ ಕುಳಿತು ಏನು ಮಾಡುತ್ತಿರುವೆ ? ನಿನ್ನ ಸೇವಕನಾದ ನನ್ನೊಡನೆ ಆದರದಿಂದ ಮಾತನಾಡು ಎಂದನು.

೧೫. ಓ ವ್ಯಾಸ, ಹೀಗೆಂದು ಶಂಖಚೂಡನು ನುಡಿದುದನ್ನು ಕೇಳಿ ಆ ತರುಣಿಯು ಅವನನ್ನು ಕುರಿತು ಅನುರಾಗದಿಂದ ಇಂತೆಂದಳು.

೧೬-೧೭. ನಾನು ಧರ್ಮಧ್ವಜನ ಮಗಳು, ನಾನೊರ್ವ ತಪಸ್ವಿನಿಯು, ತಪಸ್ಸನ್ನು ಮಾಡುತ್ತಿರುವೆನು. ಆದುದರಿಂದ ತಪೋವನದಲ್ಲಿರುವೆನು. ನೀನಾರು ? /

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ತುಲಸೀ ತಂ ಚ ಸರಸಂ ವಿರರಾಮ ಹ ।
ದೃಷ್ಟ್ವಾ ತಾಂ ಸಸ್ಮಿತಾಂ ಸೋಽಪಿ ಪ್ರವಕ್ತುಮುಪಚಕ್ರಮೇ ॥ ೧೮ ॥

॥ ಶಂಖಚೂಡ ಉವಾಚ ॥

ತ್ವಯಾ ಯತ್ಕಥಿತಂ ದೇವಿ ನ ಚ ಸರ್ವಮಲೀಕಕಂ ।
ಕಿಂಚಿತ್ಸತ್ಯಮಲೀಕಂ ಚ ಕಿಂಚಿನ್ಮತ್ತೋ ನಿಶಾಮಯ ॥ ೧೯ ॥

ಪತಿವ್ರತಾಃ ಸ್ತ್ರಿಯೋ ಯಾಶ್ಚ ತಾಸಾಂ ಮಧ್ಯೇ ತ್ವಮಗ್ರಣೀಃ ।
ನ ಚಾಹ ಪಾಪದೃಕ್ಕಾಮೀ ತಥಾ ತ್ವಂ ನೇತಿ ಧೀರ್ಮಮ ॥ ೨೦ ॥

ಆಗಚ್ಛಾಮಿ ತ್ವತ್ಸಮೀಪಮಾಜ್ಞಯಾ ಬ್ರಹ್ಮಣೋಽಧುನಾ ।
ಗಾಂಧರ್ವೇಣ ವಿವಾಹೇನ ತ್ವಾಂ ಗ್ರಹೀಷ್ಯಾಮಿ ಶೋಭನೇ ॥ ೨೧ ॥

---

ನನ್ನೊಡನೆ ನಿನಗೇಕೆ? ನಿನ್ನ ಮನಬಂದೆಡೆ ಹೋಗಬಹುದು. ಈ ನಾರೀಜಾತಿಯು ಬ್ರಹ್ಮಾದಿಗಳನ್ನೂ ಮೋಹಿಸುವಂತಹುದು. ಆದುದರಿಂದ ಇದನ್ನು ವಿಷದಂತೆ ಎಣಿಸಬೇಕು. ಇದು ನಿಂದ್ಯವಾದುದು. ನಾನಾದೋಷಗಳಿಗೆ ನೆಲೆಯಾದುದು. ಅಸ್ಥಿರವಾದ ಮನಸ್ಸುಳ್ಳವರಿಗೆ ಇದು ಸಂಕೋಲೆಯೇ ಸರಿ.

೧೮-೧೯. ಈರೀತಿ ಆ ತುಲಸಿಯು, ಸರಸವಾಗಿ ನುಡಿದು ಸುಮ್ಮನಾದಳು. ಅವಳು ನಗುಮುಖದಿಂದ ಇರುವುದನ್ನು ಕಂಡು ಆ ಶಂಖಚೂಡನೂ, ಅವಳನ್ನು ಕುರಿತು ಎಲೌ ದೇವಿ, ನೀನು ಏನು ಹೇಳಿದೆಯೋ ಅದೆಲ್ಲವೂ ಸುಳ್ಳೆಂದಲ್ಲ. ಸ್ವಲ್ಪ ಮಟ್ಟಿಗೆ ನಿಜವೂ ಹೌದು. ಸ್ವಲ್ಪ ಸುಳ್ಳೂ ಹೌದು. ನಾನು ಹೇಳುವುದನ್ನು ಸ್ವಲ್ಪ ಕೇಳು.

೨೦. ಯಾವ ಯಾವ ಸ್ತ್ರೀಯರು ಪತಿವ್ರತೆಯರೆನಿಸಿರುವರೋ ಅವರೆಲ್ಲರಿಗೂ ನೀನು ಮುಂದಾಗಿರುವೆ. ನಾನು ಕಾಮಾತುರನಾಗಿ ಪಾಪದೃಷ್ಟಿಯಿಂದ ಹೀಗೆ ಹೇಳಿದೆನೆಂದು ತಿಳಿಯಬೇಡ. ನೀನಂತಹವಳಲ್ಲವೆಂದು ನನಗೆ ಗೊತ್ತು.

೨೧. ನಾನು ಈಗ ಬ್ರಹ್ಮನ ಅಪ್ಪಣೆಯಂತೆ ನಿನ್ನ ಬಳಿಗೆ ಬಂದಿರುವೆನು. ಎಲೌ ಮಂಗಳಾಂಗಿಯೇ, ನಿನ್ನನ್ನು ಗಾಂಧರ್ವವಿವಾಹದಿಂದ ಪರಿಗ್ರಹಿಸುವೆನು.

ಶಂಖಚೂಡೋऽಹಮೇವಾಸ್ಮಿ ದೇವವಿದ್ರಾವಕಾರಕಃ ।
ಮಾಂ ನ ಜಾನಾಸಿ ಕಿಂ ಭದ್ರೇ ನ ಶ್ರುತೋऽಹಂ ಕದಾಚನ ॥ ೨೨ ॥

ದನುವಂಶ್ಯೋ ವಿಶೇಷೇಣ ದಂಭಪುತ್ರಶ್ಚ ದಾನವಃ ।
ಸುದಾಮಾ ನಾಮ ಗೋಪೋऽಹಂ ಪಾರ್ಷದಶ್ಚ ಹರೇಃ ಪುರಾ ॥ ೨೩ ॥

ಅಧುನಾ ದಾನವೇಂದ್ರೋऽಹಂ ರಾಧಿಕಾಯಾಶ್ಚ ಶಾಪತಃ ।
ಜಾತಿಸ್ಮರೋऽಹಂ ಜಾನಾಮಿ ಸರ್ವಂ ಕೃಷ್ಣಪ್ರಭಾವತಃ ॥ ೨೪ ॥

॥ ಸನತ್ಕುಮಾರ ಉವಾಚ ॥

ಏವಮುಕ್ತ್ವಾ ಶಂಖಚೂಡೋ ವಿರರಾಮ ಚ ತತ್ಪುರಃ ।
ದಾನವೇಂದ್ರೇಣ ಸೇತ್ಯುಕ್ತಾ ವಚನಂ ಸತ್ಯಮಾದರಾತ್ ।
ಸಸ್ಮಿತಂ ತುಲಸೀ ತುಷ್ಟಾ ಪ್ರವಕ್ತುಮುಪಚಕ್ರಮೇ ॥ ೨೫ ॥

---

೨೨. ದೇವತೆಗಳನ್ನೆಲ್ಲಾ ಜಯಿಸಿ ಓಡಿಸಿಬಿಡುವ ಶಂಖಚೂಡನೆಂಬುವನು ನಾನೇ ಎಂದು ತಿಳಿ. ಎಲೌ ಭದ್ರೇ, ನನ್ನನ್ನು ನೀನು ಅರಿಯೆಯಾ? ಯಾವಾಗಲಾದರೂ ಕೇಳಿಯೂ ಇಲ್ಲವೇ ?

೨೩. ನಾನು ದನುವಿನ ವಂಶದಲ್ಲಿ ಹುಟ್ಟಿರುವೆನು. ಅದರಲ್ಲಿಯೂ ದಾನವನಾದ ದಂಭನಿಗೆ ಮಗನಾಗಿರುವೆನು. ಹಿಂದೆ ನಾನು, ಶ್ರೀಕೃಷ್ಣನ ಅನುಚರರಲ್ಲಿ ಒಬ್ಬನಾದ ಸುದಾಮನೆಂಬ ಗೊಲ್ಲನಾಗಿದ್ದೆನು.

೨೪. ರಾಧೆಯ ಶಾಪದಿಂದ ನಾನು ಈಗ ದಾನವಾಧಿಪತಿಯಾಗಿ ಹುಟ್ಟಿದೆನು. ಶ್ರೀಕೃಷ್ಣನ ಅನುಗ್ರಹದಿಂದ ಪೂರ್ವಜನ್ಮದ ವೃತ್ತಾಂತವೆಲ್ಲವನ್ನೂ ತಿಳಿದಿರುವೆನು.

೨೫. ಈರೀತಿಯಾಗಿ ನುಡಿದು ಶಂಖಚೂಡನು ಸುಮ್ಮನಾದನು. ಹೀಗೆ ಅವನು ನಿಜವನ್ನು ನುಡಿಯುತ್ತಲೇ ಆ ತುಲಸಿಯು ಸಂತೋಷವನ್ನು ತಾಳಿ, ನಗುಮುಖದಿಂದ ಅವನನ್ನು ಕುರಿತು,

॥ ತುಲಸ್ಯುವಾಚ ॥

ತ್ವಯಾಹಮಧುನಾ ಸತ್ತ್ವವಿಚಾರೇಣ ಪರಾಜಿತಾ ।
ಸ ಧನ್ಯಃ ಪುರುಷೋ ಲೋಕೇ ನ ಸ್ತ್ರಿಯಾ ಯಃ ಪರಾಜಿತಃ ॥ ೨೬ ॥

ಸತ್ಕ್ರಿಯೋಽಪ್ಯಶುಚಿರ್ನಿತ್ಯಂ ಸ ಪುಮಾನ್ಯಃ ಸ್ತ್ರಿಯಾ ಜಿತಃ ।
ನಿಂದಂತಿ ಪಿತರೋ ದೇವಾ ಮಾನವಾಸ್ಸಕಲಾಶ್ಚ ತಂ ॥ ೨೭ ॥

ಶುಧ್ಯೇದ್ವಿಪ್ರೋ ದಶಾಹೇನ ಜಾತಕೇ ಮೃತಸೂತಕೇ ।
ಕ್ಷತ್ರಿಯೋ ದ್ವಾದಶಾಹೇನ ವೈಶ್ಯಃ ಪಂಚದಶಾಹತಃ ॥ ೨೮ ॥

ಶೂದ್ರೋ ಮಾಸೇನ ಶುಧ್ಯೇತ್ತು ಹೀತಿ ವೇದಾನುಶಾಸನಂ ।
ನ ಶುಚಿಃ ಸ್ತ್ರೀಜಿತಃ ಕ್ವಾಪಿ ಚಿತಾದಾಹಂ ವಿನಾ ಪುಮಾನ್ ॥ ೨೯ ॥

ನ ಗೃಹ್ಣತೀಚ್ಛಯಾ ತಸ್ಮಾತ್ಪಿತರಃ ಪಿಂಡತರ್ಪಣಂ ।
ನ ಗೃಹ್ಯಂತಿ ಸುರಾಸ್ತೇನ ದತ್ತಂ ಪುಷ್ಪಫಲಾದಿಕಂ ॥ ೩೦ ॥

---

೨೬. ನಾನೀಗ ನಿನ್ನ ಸಾತ್ತ್ವಿಕವಾದ ವಿಚಾರಸರಣಿಯಿಂದ ಪರಾಜಿತಳಾದೆನು. ಲೋಕದಲ್ಲಿ ಯಾವ ಪುರುಷನು ಸ್ತ್ರೀಯರಿಗೆ ಸೋಲಲಾರನೋ ಆ ಪುರುಷನೇ ಧನ್ಯನು.

೨೭. ಯಾವ ಪುರುಷನು ಹೆಂಗಸಿಗೆ ಮನಸ್ಸನ್ನು ಇಳಿಯಬಿಡುವನೋ ಅವನು ಎಷ್ಟೇ ಸದಾಚಾರನಿರತನಾಗಲಿ, ಆ ಪುರುಷನನ್ನು ದೇವತೆಗಳೂ, ಪಿತೃಗಳೂ, ಎಲ್ಲ ಜನರೂ ನಿಂದಿಸುವರು.

೨೮. ಜಾತಾಶೌಚವಾಗಲಿ ಮೃತಾಶೌಚವಾಗಲಿ ಪ್ರಾಪ್ತವಾದರೆ, ಬ್ರಾಹ್ಮಣನು ಹತ್ತು ದಿನಗಳನಂತರ ಶುದ್ಧನಾಗುವನು. ಕ್ಷತ್ರಿಯನು ಹನ್ನೆರಡು ದಿನಗಳು ಕಳೆದಮೇಲೆಯೂ, ವೈಶ್ಯನು ಹದಿನೈದು ದಿನಗಳು ಕಳೆದ ಮೇಲೆಯೂ ಶುದ್ಧರಾಗುವರು.

೨೯. ಶೂದ್ರನು ಒಂದು ತಿಂಗಳಾದರೆ ಶುದ್ಧಿಯನ್ನು ಹೊಂದುವನು. ಹೀಗೆಂದು ಶ್ರುತಿಯಲ್ಲಿ ಹೇಳಿರುವುದು. ಸ್ತ್ರೀಯರಿಗೆ ವಶನಾದ ಪುರುಷನಿಗೆ ಚಿತೆಯಲ್ಲಿ ಭಸ್ಮವಾಗುವುದೊಂದೇ ಶುದ್ಧಿಯು. ಬೇರೆ ಯಾವ ಶುದ್ಧಿಯೂ ಅವನಿಗೆ ಇಲ್ಲ.

೩೦. ಅಂತಹ ಪುರುಷನು ಅರ್ಪಿಸಿದ ಪಿಂಡವನ್ನೂ, ಜಲಾಂಜಲಿಯನ್ನೂ ಪಿತೃಗಳು ಆದರದಿಂದ ಸ್ವೀಕರಿಸುವುದಿಲ್ಲ. ಅವನು ಕೊಟ್ಟ, ಹೂವು ಹಣ್ಣುಗಳನ್ನೂ ದೇವತೆಗಳು ಮುಟ್ಟಲಾರರು.

ತಸ್ಯ ಕಿಂ ಜ್ಞಾನಸುತಪೋಜಪಹೋಮಪ್ರಪೂಜನೈಃ ।
ವಿದ್ಯಯಾ ದಾನತಃ ಕಿಂ ವಾ ಸ್ತ್ರೀಭಿರ್ಯಸ್ಯ ಮನೋ ಹತಂ　　॥ ೩೧ ॥

ವಿದ್ಯಾಪ್ರಭಾವಜ್ಞಾನಾರ್ಥಂ ಮಯಾ ತ್ವಂ ಚ ಪರೀಕ್ಷಿತಃ ।
ಕೃತ್ವಾ ಕಾಂತಪರೀಕ್ಷಾಂ ವೈ ವೃಣುಯಾತ್ಕಾಮಿನೀ ವರಂ　　॥ ೩೨ ॥

॥ ಸನತ್ಕುಮಾರ ಉವಾಚ ॥

ಇತ್ಯೇವಂ ಪ್ರವದಂತ್ಯಾಂ ತು ತುಲಸ್ಯಾಂ ತತ್ಕ್ಷಣೇ ವಿಧಿಃ ।
ತತ್ರಾಜಗಾಮ ಸಂಸ್ರಷ್ಟಾ ಪ್ರೋವಾಚ ವಚನಂ ತತಃ　　॥ ೩೩ ॥

॥ ಬ್ರಹ್ಮೋವಾಚ ॥

ಕಿಂ ಕರೋಷಿ ಶಂಖಚೂಡ ಸಂವಾದಮನಯಾ ಸಹ ।
ಗಾಂಧರ್ವೇಣ ವಿವಾಹೇನ ತ್ವಮಸ್ಯಾ ಗ್ರಹಣಂ ಕುರು　　॥ ೩೪ ॥

---

೩೧. ಯಾವನ ಮನಸ್ಸು ಸ್ತ್ರೀಯರಿಗೆ ವಶವಾಗಿ ಕಲುಷಿತವಾಗುವುದೋ, ಅವನು ಎಷ್ಟೇ ಜ್ಞಾನಿಯಾಗಿರಲಿ, ಎಷ್ಟೇ ತಪಸ್ಸು ಮಾಡಲಿ ಎಷ್ಟೇ ಜಪ, ಹೋಮ, ಪೂಜೆಗಳನ್ನು ನಡೆಸಲಿ, ಎಷ್ಟೇ ವಿದ್ಯಾವಂತನಾಗಿರಲಿ, ಎಷ್ಟೇ ದಾನಿಯಾಗಿರಲಿ ಏನು ಪ್ರಯೋಜನ?

೩೨. ನಿನ್ನ ತಿಳುವಳಿಕೆಯನ್ನೂ ಮಹಿಮೆಯನ್ನೂ ಅರಿಯಲೆಂದೇ ನಾನೀ ರೀತಿ ನಿನ್ನನ್ನು ಪರೀಕ್ಷೆಮಾಡಿದೆನು. ಮದುವೆಮಾಡಿಕೊಳ್ಳಲೆಳಸುವ, ಕಾಮಿನಿಯರ ವರನಾಗಲಿರುವ ಪುರುಷನನ್ನು ಪರೀಕ್ಷಿಸಿಯೇ ಅತನನ್ನು ವರಿಸಬೇಕು.

೩೩-೩೪. ಓ ವ್ಯಾಸ, ಹೀಗೆಂಬುದಾಗಿ ಆ ತುಲಸಿಯು ಹೇಳುತ್ತಿರುವಷ್ಟ ರಲ್ಲಿಯೇ ಸೃಷ್ಟಿಕರ್ತನಾದ ಬ್ರಹ್ಮನು ಅಲ್ಲಿಗೆ ಬಂದು, ಎಲೈ ಶಂಖಚೂಡನೇ, ನೀನು ಈ ತುಲಸಿಯೊಂದಿಗೆ ಮಾತನಾಡುತ್ತಾ ಏಕೆ ನಿಂತೆ? ಗಾಂಧರ್ವವಿವಾಹದಿಂದ ಇವಳನ್ನು ಬೇಗನೆ ಪರಿಗ್ರಹಿಸು.

ತ್ವಂ ವೈ ಪುರುಷರತ್ನಂ ಚ ಸ್ತ್ರೀರತ್ನಂ ಚ ತ್ವಿಯಂ ಸತೀ ।
ವಿದಗ್ಧಾಯಾ ವಿದಗ್ಧೇನ ಸಂಗಮೋ ಗುಣವಾನ್ ಭವೇತ್ ॥ ೩೫ ॥

ನಿರ್ವಿರೋಧಂ ಸುಖಂ ರಾಜನ್ಕೋ ವಾ ತ್ಯಜತಿ ದುರ್ಲಭಂ ।
ಯೋಽವಿರೋಧಸುಖತ್ಯಾಗೀ ಸ ಪಶುರ್ನಾತ್ರ ಸಂಶಯಃ ॥ ೩೬ ॥

ಕಿಂ ತ್ವಂ ಪರೀಕ್ಷಸೇ ಕಾಂತಮೀದೃಶಂ ಗುಣಿನಂ ಸತಿ ।
ದೇವಾನಾಮಸುರಾಣಾಂ ಚ ದಾನವಾನಾಂ ವಿಮರ್ದಕಂ ॥ ೩೭ ॥

ಅನೇನ ಸಾರ್ಧಂ ಸುಚಿರಂ ವಿಹಾರಂ ಕುರು ಸರ್ವದಾ ।
ಸ್ಥಾನೇ ಸ್ಥಾನೇ ಯಥೇಚ್ಛಂ ಚ ಸರ್ವಲೋಕೇಷು ಸುಂದರಿ ॥ ೩೮ ॥

ಅಂತೇ ಪ್ರಾಪ್ಸ್ಯತಿ ಗೋಲೋಕೇ ಶ್ರೀಕೃಷ್ಣಂ ಪುನರೇವ ಸಃ ।
ಚತುರ್ಭುಜಂ ಚ ವೈಕುಂಠೇ ಮೃತೇ ತಸ್ಮಿನ್ತ್ವಮಾಪ್ಸ್ಯಸಿ ॥ ೩೯ ॥

---

೩೫. ನೀನು ಪುರುಷಶ್ರೇಷ್ಠನು, ಇವಳು ನಾರೀರತ್ನವೇ ಸರಿ. ರಸಿಕರಾದ ಸ್ತ್ರೀಪುರುಷರು ಸತಿಪತಿಗಳಾಗುವುದು ಮತ್ತಷ್ಟು ಉತ್ತಮವಾದುದು.

೩೬. ಓ ರಾಜೇಂದ್ರ, ಯಾರ ಅಡ್ಡಿಯೂ ಇಲ್ಲದಂತಹ ಸುಖವು ಸಿಗುವುದು ಬಹು ಕಷ್ಟ. ಅಂತಹ ಸುಖವು ಸಿಕ್ಕಿದರೆ ಯಾವನು ತಾನೇ ಬಿಡುವನು? ಯಾರ ವಿರೋಧವೂ ಇಲ್ಲದಂತಹ ಸುಖವು ದೊರೆತರೂ ಅನುಭವಿಸದವನು, ಪಶುವೇ ಸರಿ.

೩೭. ಎಲೌ ಸಾಧ್ವಿಯೇ, ಈ ಪುರುಷಶ್ರೇಷ್ಠನು ದೇವತೆಗಳನ್ನೂ, ಅಸುರರನ್ನೂ, ದಾನವರನ್ನೂ, ಜಯಿಸುವಂತಹ ಸಾಮರ್ಥ್ಯವುಳ್ಳವನು ಇಂತಹ ಕಾಂತನನ್ನು ಏತಕ್ಕೆ ಪರೀಕ್ಷಿಸುತ್ತಿರುವೆ ?

೩೮. ಎಲೌ ಸುಂದರಿ, ಈ ಶಂಖಚೂಡನೊಡನೆ, ಸಮಸ್ತ ಲೋಕಗಳಲ್ಲಿಯೂ ನಿನಗೆ ತೋರಿದ ಕಡೆಯಲ್ಲೆಲ್ಲಾ ಯಥೇಚ್ಛವಾಗಿ ಬಹುಕಾಲ ವಿಹರಿಸುತ್ತಿರು.

೩೯. ಈ ದೇಹಾಂತ್ಯದಲ್ಲಿ ಶಂಖಚೂಡನು ಗೋಲೋಕದಲ್ಲಿ ಮತ್ತೇ ಶ್ರೀ ಕೃಷ್ಣನನ್ನೇ ಸೇರುವನು. ಆ ಶಂಖಚೂಡನು ಸತ್ತಬಳಿಕ ನೀನು ವೈಕುಂಠದಲ್ಲಿ ಶ್ರೀಹರಿಯನ್ನು ಸೇರುವೆ ಎಂದನು.

॥ ಸನತ್ಕುಮಾರ ಉವಾಚ ॥

ಇತ್ಯೇವಮಾಶಿಷಂ ದತ್ವಾ ಸ್ವಾಲಯಂ ತು ಯಯೌ ವಿಧಿಃ ।
ಗಾಂಧರ್ವೇಣ ವಿವಾಹೇನ ಜಗೃಹೇ ತಾಂ ಚ ದಾನವಃ ॥ ೪೦ ॥

ಏವಂ ವಿವಾಹ್ಯ ತುಲಸೀಂ ಪಿತುಃ ಸ್ಥಾನಂ ಜಗಾಮ ಹ ।
ಸ ರೇಮೇ ರಮಯಾ ಸಾರ್ಧಂ ವಾಸಗೇಹೇ ಮನೋರಮೇ ॥ ೪೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡತಪಃಕರಣವಿವಾಹ
ವರ್ಣನಂ ನಾಮಾಷ್ಟಾವಿಂಶೋಽಧ್ಯಾಯಃ

---

೪೦. ಓ ವ್ಯಾಸ, ಈರೀತಿ ಅವರೀರ್ವರಿಗೂ, ಆಶೀರ್ವಾದವನ್ನು ಮಾಡಿ, ಬ್ರಹ್ಮನು ತನ್ನ ಲೋಕಕ್ಕೆ ತೆರಳಿದನು. ಇತ್ತಲಾಗಿ ಆ ಶಂಖಚೂಡನು ಗಾಂಧರ್ವ ವಿಧಿಯಿಂದ ಆ ತುಲಸಿಯನ್ನು ಪರಿಗ್ರಹಮಾಡಿದನು.

೪೧. ಹೀಗೆ ಆ ಶಂಖಚೂಡನು ತುಲಸಿಯನ್ನು ಮದುವೆಮಾಡಿಕೊಂಡು, ತನ್ನ ತಂದೆಯಿರುವಲ್ಲಿಗೆ ಹೋಗಿ ತನ್ನ ಪ್ರಿಯೆಯೊಂದಿಗೆ, ಸೊಗಸಾದ ಅಂತಃಪುರದಲ್ಲಿ ವಿಹರಿಸುತ್ತಿದ್ದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಶಂಖಚೂಡನ ತಪಸ್ಸು ಮತ್ತು ವಿವಾಹಗಳ ವರ್ಣನವೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕೋನತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಸ್ವಗೇಹಮಾಗತೇ ತಸ್ಮಿಂಶ್ಶಂಖಚೂಡೇ ವಿವಾಹಿತೇ ।
ತಪಃ ಕೃತ್ವಾ ವರಂ ಪ್ರಾಪ್ಯ ಮುಮುದುರ್ದಾನವಾದಯಃ ॥ ೧ ॥

ಸ್ವಲೋಕಾದಾಶು ನಿರ್ಗತ್ಯ ಗುರುಣಾ ಸ್ವೇನ ಸಂಯುತಾಃ ।
ಸರ್ವೇ ಸುರಾಸ್ಸಮಿಲಿತಾಸ್ಸಮಾಜಗ್ಮುಸ್ತದಂತಿಕಂ ॥ ೨ ॥

---

### ಇಪ್ಪತ್ತೊಂಭತ್ತನೆಯ ಅಧ್ಯಾಯವು.

೧-೨. ಸನತ್ಕುಮಾರನು ವ್ಯಾಸನನ್ನು ಕುರಿತು ಹೇಳತೊಡಗಿದನು :—ಹೀಗೆ ಶಂಖಚೂಡನು ತಪಸ್ಸುಮಾಡಿ ಬ್ರಹ್ಮನಿಂದ ವರವನ್ನು ಪಡೆದು ತುಲಸಿಯನ್ನು ಮದುವೆಯಾಗಿ ತನ್ನ ಮನೆಗೆ ಬಂದುದನ್ನು ಕೇಳಿ, ಹರ್ಷದಿಂದ ಆ ದಾನವಾದಿಗಳೆಲ್ಲರೂ ತಮ್ಮತಮ್ಮ ಊರುಗಳಿಂದ ಹೊರಟು ಒಟ್ಟಾಗಿ ಸೇರಿ ತಮ್ಮ ಗುರುವಾದ ಶುಕ್ರಾಚಾರ್ಯನೊಡನೆ ಅವನ ಬಳಿಗೆ ಬಂದರು.

ಪ್ರಣಮ್ಯ ತಂ ಸವಿನಯಂ ಸಂಸ್ತುತ್ಯ ವಿವಿಧಾದರಾತ್ ।
ಸ್ಥಿತಾಸ್ತತ್ರೈವ ಸುಪ್ರೀತ್ಯಾ ಮತ್ವಾ ತೇಜಸ್ವಿನಂ ವಿಭುಂ ॥ ೩ ॥

ಸೋಽಪಿ ದಂಭಾತ್ಮಜೋ ದೃಷ್ಟ್ವಾಽಗತಂ ಕುಲಗುರುಂ ಚ ತಂ ।
ಪ್ರಣನಾಮ ಮಹಾಭಕ್ತ್ಯಾ ಸಾಷ್ಟಾಂಗಂ ಪರಮಾದರಾತ್ ॥ ೪ ॥

ಅಥ ಶುಕ್ರಃ ಕುಲಾಚಾರ್ಯೋ ದೃಷ್ಟ್ವಾಽಶಿಷಮನುತ್ತಮಂ ।
ವೃತ್ತಾಂತಂ ಕಥಯಾಮಾಸ ದೇವದಾನವಯೋಸ್ತದಾ ॥ ೫ ॥

ಸ್ವಾಭಾವಿಕಂ ಚ ತದ್ವೈರಮಸುರಾಣಾಂ ಪರಾಭವಂ ।
ವಿಜಯಂ ನಿರ್ಜರಾಣಾಂ ಚ ಜೀವಸಾಹಾಯ್ಯಮೇವ ಚ ॥ ೬ ॥

ತತಸ್ಸ ಸಂಮತಂ ಕೃತ್ವಾ ಸುರೈಸ್ಸರ್ವೈಸ್ಸಮುತ್ಸವಂ ।
ದಾನವಾದ್ಯಸುರಾಣಾಂ ತಮಧಿಪಂ ವಿದಧೇ ಗುರುಃ ॥ ೭ ॥

---

೩. ಆ ಶಂಖಚೂಡನಿಗೆ ನಮಸ್ಕಾರಮಾಡಿ ಬಹುಬಗೆಯಾಗಿ ಆದರವನ್ನು ತೋರುತ್ತಾ ವಿನಯಪೂರ್ವಕವಾಗಿ ಸ್ತೋತ್ರವನ್ನು ಮಾಡಿ, ಮಹಾಪ್ರತಾಪಶಾಲಿಯಾದ ಆತನೇ ತಮಗೆ ಪ್ರಭುವಾಗಲು ಅರ್ಹನೆಂದು ಭಾವಿಸಿ, ಪ್ರೀತಿಯಿಂದ ಅಲ್ಲಿಯೇ ನಿಂತುಬಿಟ್ಟರು.

೪. ಆ ದಂಭದಾನವನ ಮಗನಾದ ಶಂಖಚೂಡನೂ ಸಹ ತನ್ನ ಕುಲಗುರುವಾದ ಶುಕ್ರಾಚಾರ್ಯನು ಬಂದುದನ್ನು ಕಂಡು ಅತಿಶಯವಾದ ಭಕ್ತಿಯಿಂದ ಅತ್ಯಾದರದೊಡನೆ ಆತನಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿದನು.

೫. ಕುಲಗುರುವಾದ ಆ ಶುಕ್ರಾಚಾರ್ಯನು ಆ ಶಂಖಚೂಡನನ್ನು ಅತಿಶಯವಾಗಿ ಆಶೀರ್ವದಿಸಿ ದೇವದಾನವರ ವೃತ್ತಾಂತವನ್ನು ತಿಳಿಸಿದನು.

೬. ಅವರಿಗೆ ಸಹಜವಾಗಿಯೇ ವೈರವಿರುವುದನ್ನೂ, ದಾನವರು ಸೋಲುತ್ತಿದ್ದುದನ್ನೂ, ದೇವತೆಗಳು ಗುರುವಿನ ಸಾಹಾಯವನ್ನು ಪಡೆದು ಗೆಲ್ಲುತ್ತಿರುವುದನ್ನೂ ತಿಳಿಸಿದನು.

೭. ಬಳಿಕ ಶುಕ್ರಾಚಾರ್ಯನು ಆ ಅಸುರರೆಲ್ಲರೊಡನೆ ಪಟ್ಟಾಭಿಷೇಕ ಮಹೋತ್ಸವವನ್ನು ನಿಶ್ಚಯಿಸಿ ಆ ಶಂಖಚೂಡನನ್ನು ಅವರೆಲ್ಲರಿಗೂ ಅಧಿಪತಿಯನ್ನಾಗಿ ಮಾಡಿದನು.

ತದಾ ಸಮುತ್ಸವೋ ಜಾತೋಽಸುರಾಣಾಂ ಮುದಿತಾತ್ಮನಾಂ ।
ಉಪಾಯನಾನಿ ಸುಪ್ರೀತ್ಯಾ ದದುಸ್ತಸ್ಮೈ ಚ ತೇಽಖಿಲಾಃ ॥ ೮ ॥

ಅಥ ದಂಭಾತ್ಮಜೋ ವೀರಶ್ಶಂಖಚೂಡಃ ಪ್ರತಾಪವಾನ್ ।
ರಾಜ್ಯಾಭಿಷೇಕಮಾಸಾದ್ಯ ಸಂರೇಜೇ ಸುರರಾಟ್ತದಾ ॥ ೯ ॥

ಸ ಸೇನಾಂ ಮಹತೀಂ ಕರ್ಷನ್ದೈತ್ಯದಾನವರಕ್ಷಸಾಂ ।
ರಥಮಾಸ್ಥಾಯ ತರಸಾ ಜೇತುಂ ಶಕ್ರಪುರೀಂ ಯಯೌ ॥ ೧೦ ॥

ಗಚ್ಛನ್ಸ ದಾನವೇಂದ್ರಸ್ತು ತೇಷಾಂ ಸೇವನಕುರ್ವತಾಂ ।
ವಿರೇಜೇ ಶಶಿವದ್ಭಾನಾಂ ಗ್ರಹಾಣಾಂ ಗ್ರಹರಾಡಿವ ॥ ೧೧ ॥

ಆಗಚ್ಛಂತಂ ಶಂಖಚೂಡಮಾಕರ್ಣ್ಯಾಖಂಡಲಸ್ಸ್ವರಾಟ್ ।
ನಿಖಿಲೈರಮರೈಸ್ಸಾರ್ಧಂ ತೇನ ಯೋದ್ಧುಂ ಸಮುದ್ಯತಃ ॥ ೧೨ ॥

---

೮. ಆಗ ಸಂತೋಷವನ್ನು ತಳೆದ ಆ ಅಸುರರೆಲ್ಲರೂ ಬಹುವೈಭವದಿಂದ ಉತ್ಸವವನ್ನು ಆಚರಿಸಿದರು. ಆ ಶಂಖಚೂಡನಿಗೆ ಅವರೆಲ್ಲರೂ ಬಹು ಸಂತೋಷ ದಿಂದ ಬಗೆಬಗೆಯಾದ ಕಾಣಿಕೆಗಳನ್ನು ತಂದೊಪ್ಪಿಸಿದರು.

೯. ಮಹಾವೀರನೂ ಪ್ರತಾಪಶಾಲಿಯೂ ಆದ ಆ ದಂಭಪುತ್ರನಾದ ಶಂಖ ಚೂಡನು ಅಸುರರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ಅವರೆಲ್ಲರನ್ನೂ ಆಳುತ್ತಾ ಬಹುವಾಗಿ ಶೋಭಿಸುತ್ತಿದ್ದನು.

೧೦. ಕೆಲವು ಕಾಲಾನಂತರ ಆ ಶಂಖಚೂಡನು ದೈತ್ಯರು, ದಾನವರು ಮತ್ತು ರಾಕ್ಷಸರು ಇವರ ದೊಡ್ಡದಂಡನ್ನು ಸೇರಿಸಿ ಅವರೊಡನೆ ರಥವನ್ನೇರಿ ಕುಳಿತು, ಇಂದ್ರನ ನಗರಿಯಾದ ಅಮರಾವತಿಯನ್ನು ಗೆಲ್ಲಲು ಬೇಗನೆ ಹೊರಟನು.

೧೧. ಆ ದಾನವೇಂದ್ರನು ತನ್ನ ಸೇವಾತತ್ಪರರಾದ ಅಸುರರೆಲ್ಲರೂ ತನ್ನನ್ನು ಸುತ್ತಲೂ ಓಲೈಸುತ್ತಿರಲು, ಯುದ್ಧಸನ್ನದ್ಧನಾಗಿ ಹೊರಟು ನಕ್ಷತ್ರಗಳ ಮಧ್ಯದ ಚಂದ್ರನಂತೆಯೂ, ಗ್ರಹಗಳ ನಡುವಣ ಸೂರ್ಯನಂತೆಯೂ ಶೋಭಿಸಿದನು.

೧೨. ಆಗ ಶಂಖಚೂಡನು ತನ್ನ ಮೇಲೆ ದಂಡೆತ್ತಿಬರುತ್ತಿರುವುದನ್ನು ಕೇಳಿ ಇಂದ್ರನು ದೇವತೆಗಳೆಲ್ಲರೊಡನೆ ಅವನನ್ನು ಎದುರಿಸಲು ಸಿದ್ಧನಾದನು.

ತದಾಸುರೈಸ್ಸುರಾಣಾಂ ಚ ಸಂಗ್ರಾಮಸ್ತುಮುಲೋ ಹ್ಯಭೂತ್ ।
ವೀರಾನಂದಕರಃ ಕ್ಲೀಬಭಯದೋ ರೋಮಹರ್ಷಣಃ ॥ ೧೩ ॥

ಮಹಾನ್ಕೋಲಾಹಲೋ ಜಾತೋ ವೀರಾಣಾಂ ಗರ್ಜತಾಂ ರಣೇ ।
ವಾದ್ಯಧ್ವನಿಸ್ತಥಾ ಛ್ಯಾಸೀತ್ತತ್ರ ವೀರತ್ವವರ್ಧಿನೀ ॥ ೧೪ ॥

ದೇವಾಃ ಪ್ರಕುಪ್ಯ ಯುಯುಧುರಸುರೈರ್ಬಲವತ್ತರಾಃ ।
ಪರಾಜಯಂ ಚ ಸಂಪ್ರಾಪುರಸುರಾ ದುದ್ರುವುರ್ಭಯಾತ್ ॥ ೧೫ ॥

ಪಲಾಯಮಾನಾಂಸ್ತಾನ್ದೃಷ್ಟ್ವಾ ಶಂಖಚೂಡಃ ಸ್ವಯಂ ಪ್ರಭುಃ ।
ಯುಯುಧೇ ನಿರ್ಜರೈಸ್ಸಾಕಂ ಸಿಂಹನಾದಂ ಪ್ರಗರ್ಜ್ಯ ಚ ॥ ೧೬ ॥

ತರಸಾ ಸಹಸಾ ಚಕ್ರೇ ಕದನಂ ತ್ರಿದಿವೌಕಸಾಂ ।
ಪ್ರದುದ್ರುವುಸ್ಸುರಾಸ್ಸರ್ವೇ ತತ್ಸತೇಜೋ ನ ಸೇಹಿರೇ ॥ ೧೭ ॥

---

೧೩. ಆಗ ನೋಡುತ್ತಿರುವವರ ಮೈನವಿರೇಳುವಂತೆ ದೇವತೆಗಳಿಗೂ ಅಸುರರಿಗೂ ಕೈಕೈ ಸೇರಿ ಬಲು ಘೋರವಾದ ಯುದ್ಧವು ಜರುಗಿತು. ಅದನ್ನು ನೋಡಿದರೆ ವೀರರಿಗೆ ಆನಂದವು ಉಕ್ಕುತ್ತಿತ್ತು. ಹೇಡಿಗಳಿಗೆ ಹೆದರಿಕೆ ಹುಟ್ಟುತ್ತಿತ್ತು.

೧೪. ಯುದ್ಧದಲ್ಲಿ ವೀರರು ಸಿಂಹನಾದಗಳನ್ನು ಮಾಡುತ್ತಿರಲು ಬಹಳ ಗದ್ದಲವುಂಟಾಯಿತು. ಅವರ ಶೌರ್ಯವನ್ನು ಮತ್ತಷ್ಟು ಹೆಚ್ಚಿಸುವಂತೆ ರಣವಾದ್ಯಗಳು ಬೊಬ್ಬಿರಿಯುತ್ತಿದ್ದುವು.

೧೫. ಬಲಾಢ್ಯರಾದ ಆ ದೇವತೆಗಳು ಮಹಾಕೋಪದಿಂದ ಆ ಅಸುರರೊಡನೆ ಹೋರಾಡಿದರು. ಆಗ ಅಸುರರು ಸೋತುಹೋಗಿ ಹೆದರಿಕೆಯಿಂದ ಓಡಿಹೋದರು.

೧೬. ಬಳಿಕ ಅವರೆಲ್ಲರಿಗೂ ಅಧಿಪತಿಯಾದ ಶಂಖಚೂಡನು ಅವರು ಹಿಮ್ಮೆಟ್ಟಿ ಓಡಿಹೋಗುತ್ತಿರುವುದನ್ನು ಕಂಡು ತಾನೇ ಸಿಂಹದಂತೆ ಗರ್ಜಿಸುತ್ತಾ ದೇವತೆಗಳೊಡನೆ ಹೋರಾಡತೊಡಗಿದನು.

೧೭. ಆ ದಾನವೇಂದ್ರನು ಬಹುಪರಾಕ್ರಮದಿಂದ ಆ ದೇವತೆಗಳೊಡನೆ ಕಾದಾಡಿದನು. ಆಗ ಅವನ ಪರಾಕ್ರಮವನ್ನು ಸಹಿಸಲಾರದೆ ದೇವತೆಗಳೆಲ್ಲರೂ ಯುದ್ಧವನ್ನು ಬಿಟ್ಟು ಓಡಿಹೋದರು.

ಯತ್ರ ತತ್ರ ಸ್ಥಿತಾ ದೀನಾ ಗಿರೀಣಾಂ ಕಂದರಾಸು ಚ ।
ತದಧೀನಾ ನ ಸ್ವತಂತ್ರಾ ನಿಃಪ್ರಭಾಃ ಸಾಗರಾ ಯಥಾ ॥ ೧೮ ॥

ಸೋಽಪಿ ದಂಭಾತ್ಮಜಶ್ಶೂರೋ ದಾನವೇಂದ್ರಃ ಪ್ರತಾಪವಾನ್ ।
ಸುರಾಧಿಕಾರಾನ್ಸಂಜಹ್ರೇ ಸರ್ವಾಂಲ್ಲೋಕಾನ್ವಿಜಿತ್ಯ ಚ ॥ ೧೯ ॥

ತ್ರೈಲೋಕ್ಯಂ ಸ್ವವಶಂ ಚಕ್ರೇ ಯಜ್ಞಭಾಗಾಶ್ಚ ಕೃತ್ಸ್ನಶಃ ।
ಸ್ವಯಮಿಂದ್ರೋ ಬಭೂವಾಪಿ ಶಾಸಿತಂ ನಿಖಿಲಂ ಜಗತ್ ॥ ೨೦ ॥

ಕೌಬೇರಮೈಂದವಂ ಸೌರ್ಯಮಾಗ್ನೇಯಂ ಯಾಮ್ಯಮೇವ ಚ ।
ಕಾರಯಾಮಾಸ ವಾಯವ್ಯಮಧಿಕಾರಂ ಸ್ವಶಕ್ತಿತಃ ॥ ೨೧ ॥

ದೇವಾನಾಮಸುರಾಣಾಂ ಚ ದಾನವಾನಾಂ ಚ ರಕ್ಷಸಾಂ ।
ಗಂಧರ್ವಾಣಾಂ ಚ ನಾಗಾನಾಂ ಕಿನ್ನರಾಣಾಂ ರಸೌಕಸಾಂ ॥ ೨೨ ॥

---

೧೮. ಬಳಿಕ ಆ ದೇವತೆಗಳೆಲ್ಲರೂ ಆ ಶಂಖಚೂಡನಿಗೆ ಅಧೀನರಾಗಿ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಕಳೆಗುಂದಿದವರಾಗಿ, ಪರ್ವತಗಳ ಗುಹೆಗಳನ್ನು ಸೇರಿ ಸಾಗರಗಳಂತೆ ಎಲ್ಲೆಂದರೆ ಅಲ್ಲಿ ಇದ್ದುಬಿಟ್ಟರು.

೧೯-೨೦. ಮಹಾಪರಾಕ್ರಮಶಾಲಿಯಾದ ಆ ದಂಭಪುತ್ರನಾದ ದಾನವೇಂದ್ರನು ಎಲ್ಲಾ ಲೋಕಗಳನ್ನೂ ಜಯಿಸಿ, ದೇವತೆಗಳ ಅಧಿಕಾರಗಳೆಲ್ಲವನ್ನೂ ಕಸಿದುಕೊಂಡು ಮೂರು ಲೋಕವನ್ನೂ ಸ್ವಾಧೀನವನ್ನಾಗಿಮಾಡಿಕೊಂಡನು. ಯಜ್ಞಗಳಲ್ಲಿ ಹವಿರ್ಭಾಗವೆಲ್ಲವನ್ನೂ ತಾನೇ ಸ್ವೀಕರಿಸಿದನು. ತಾನೇ ಇಂದ್ರನೂ ಆಗಿ ಸಮಸ್ತ ಜಗತ್ತನ್ನೂ ಪಾಲಿಸತೊಡಗಿದನು.

೨೧. ಕುಬೇರ, ಚಂದ್ರ, ಸೂರ್ಯ, ಅಗ್ನಿ, ಯಮ, ವಾಯು, ಇವರುಗಳ ಅಧಿಕಾರವೆಲ್ಲವನ್ನೂ ತನ್ನ ಶಕ್ತಿಯಿಂದಲೇ ನಡೆಸುತ್ತಾ ಬಂದನು.

೨೨-೨೩. ಮಹಾಬಲಾಢ್ಯನೂ ವೀರಾಗ್ರೇಸರನೂ ಆದ ಆ ಶಂಖಚೂಡನು ದೇವತೆಗಳು, ರಾಕ್ಷಸರು, ಅಸುರರು, ದಾನವರು, ಗಂಧರ್ವರು, ನಾಗರು, ಕಿನ್ನರರು,

ತ್ರಿಲೋಕಸ್ಯ ಪರೇಷಾಂ ಚ ಸಕಲಾನಾಮಧೀಶ್ವರಃ ।
ಸ ಬಭೂವ ಮಹಾವೀರಶ್ಶಂಖಚೂಡೋ ಮಹಾಬಲೀ ॥ ೨೩ ॥

ಏವಂ ಸ ಬುಭುಜೇ ರಾಜ್ಯಂ ರಾಜರಾಜೇಶ್ವರೋ ಮಹಾನ್ ।
ಸರ್ವೇಷಾಂ ಭುವನಾನಾಂ ಚ ಶಂಖಚೂಡಶ್ಚಿರಂ ಸಮಾಃ ॥ ೨೪ ॥

ತಸ್ಯ ರಾಜ್ಯೇ ನ ದುರ್ಭಿಕ್ಷಂ ನ ಮಾರೀ ನಾಶುಭಗ್ರಹಾಃ ।
ಆಧಯೋ ವ್ಯಾಧಯೋ ನೈವ ಸುಖಿನ್ಯಶ್ಚ ಪ್ರಜಾಃ ಸದಾ ॥ ೨೫ ॥

ಅಕೃಷ್ಟಪಚ್ಯಾ ಪೃಥಿವೀ ದದೌ ಸಸ್ಯಾನ್ಯನೇಕಶಃ ।
ಓಷಧ್ಯೋ ವಿವಿಧಾಶ್ಚಾಸನ್ಸಫಲಾಸ್ಸರಸಾಃ ಸದಾ ॥ ೨೬ ॥

ಮಣ್ಯಾಕರಾಶ್ಚ ನಿತರಾಂ ರತ್ನಖನ್ಯಶ್ಚ ಸಾಗರಾಃ ।
ಸದಾ ಪುಷ್ಪಫಲಾ ವೃಕ್ಷಾ ನದ್ಯಸ್ಸುಸಲಿಲಾವಹಾಃ ॥ ೨೭ ॥

---

ಮನುಷ್ಯರು, ಇನ್ನೂ ಇತರರು, ಇವರೆಲ್ಲರಿಗೂ ಹೆಚ್ಚೇನು ? ಒಟ್ಟಿನಲ್ಲಿ ಮೂರು ಲೋಕಕ್ಕೂ ತಾನೇ ಚಕ್ರಾಧಿಪತಿಯಾದನು.

೨೪. ಈರೀತಿ ಶಂಖಚೂಡನು ರಾಜರಿಗೂ ರಾಜನಾಗಿ ಬಹುವರ್ಷಗಳಕಾಲ ಎಲ್ಲ ಲೋಕಗಳನ್ನೂ ಆಳಿದನು.

೨೫. ಅವನ ರಾಜ್ಯದಲ್ಲಿ ಎಲ್ಲಿಯೂ ದುರ್ಭಿಕ್ಷವೆಂಬುದು ಇರಲಿಲ್ಲ. ಮಾರಿಯ ಉಪದ್ರವವಾಗಲಿ, ಅಶುಭಕರವಾದ ಗ್ರಹಗಳ ಕಾಟವಾಗಲಿ, ಮಾನಸಿಕ ಅಥವಾ ಶಾರೀರಕವಾದ ತೊಂದರೆಗಳಾಗಲಿ, ಯಾವುವೂ ಇರಲಿಲ್ಲ. ಪ್ರಜೆಗಳು ಸರ್ವದಾ ಸುಖದಿಂದ ಇರುತ್ತಿದ್ದರು.

೨೬. ಭೂಮಿಯುನ್ನು ಉಳದೇ ಇದ್ದರೂ ಅದು ಬಹುಮುಖವಾಗಿ ಬೆಳೆಯನ್ನು ಕೊಡುತ್ತಿದ್ದಿತು. ಬಗೆಬಗೆಯಾದ ವೃಕ್ಷಗಳೂ ಲತೆಗಳೂ ಮುಂತಾದ ಔಷಧಿ ವಿಶೇಷಗಳೆಲ್ಲವೂ ಸರ್ವದಾ ಸೊಂಪಾಗಿ ಫಲಭರಿತವಾಗಿರುತ್ತಿದ್ದುವು.

೨೭. ರತ್ನದ ಗಣಿಗಳೂ ಸಮುದ್ರಗಳೂ ಹೇರಳವಾಗಿ ವಜ್ರವೈಢೂರ್ಯಾದಿ ಮಣಿಗಳನ್ನು ಒದಗಿಸುತ್ತಿದ್ದುವು. ವೃಕ್ಷಗಳೆಲ್ಲವೂ ಹೂವುಹಣ್ಣುಗಳನ್ನು ಸರ್ವಕಾಲದಲ್ಲಿಯೂ ಬಿಡುತ್ತಿದ್ದುವು. ನದಿಗಳು ತಿಳಿಯಾದ ನೀರಿನಿಂದ ತುಂಬಿ ಹರಿಯುತ್ತಿದ್ದುವು.

ದೇವಾನ್ವಿನಾಖಿಲಾ ಜೀವಾಸ್ಸುಖಿನೋ ನಿರ್ವಿಕಾರಕಾಃ ।
ಸ್ವಸ್ವಧರ್ಮಾಸ್ಥಿತಾಸ್ಸರ್ವೇ ಚತುರ್ವರ್ಣಾಶ್ರಮಾಃ ಪರೇ ॥ ೨೮ ॥

ತಸ್ಮಿಂಛಾಸತಿ ತ್ರೈಲೋಕ್ಯೇ ನ ಕಶ್ಚಿದ್ದುಃಖಿತೋಽಭವತ್ ।
ಭ್ರಾತೃವೈರತ್ವಮಾಶ್ರಿತ್ಯ ಕೇವಲಂ ದುಃಖಿನೋಽಮರಾಃ ॥ ೨೯ ॥

ಸ ಶಂಖಚೂಡಃ ಪ್ರಬಲಃ ಕೃಷ್ಣಸ್ಯ ಪರಮಸ್ಸಖಾ ।
ಕೃಷ್ಣಭಕ್ತಿರತಸ್ಸಾಧುಸ್ಸದಾ ಗೋಲೋಕವಾಸಿನಃ ॥ ೩೦ ॥

ಪೂರ್ವಶಾಪಪ್ರಭಾವೇಣ ದಾನವೀಂ ಯೋನಿಮಾಶ್ರಿತಃ ।
ನ ದಾನವಮತಿಸ್ಸೋಽಭೂದ್ದಾನವತ್ವೇಽಪಿ ವೈ ಮುನೇ ॥ ೩೧ ॥

ತತಸ್ಸುರಗಣಾಸ್ಸರ್ವೇ ಹೃತರಾಜ್ಯಾಃ ಪರಾಜಿತಾಃ ।
ಸಂಮಂತ್ರ್ಯ ಸರ್ಷಯಸ್ತಾತ ಪ್ರಯಯುರ್ಬ್ರಹ್ಮಣಸ್ಸಭಾಂ ॥ ೩೨ ॥

---

೨೮. ದೇವತೆಗಳು ಒಬ್ಬರು ಹೊರತು ಇತರ ಜೀವಿಗಳೆಲ್ಲರೂ ತಮ್ಮತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಧರ್ಮಗಳನ್ನು ಆಚರಿಸುತ್ತಾ ಯಾವೊಂದು ತೊಂದರೆಯೂ ವ್ಯಥೆಯೂ ಇಲ್ಲದೆ ಸುಖವಾಗಿ ಇರುತ್ತಿದ್ದರು.

೨೯. ಅವನ ಆಳ್ವಿಕೆಯಲ್ಲಿ ಮೂರು ಲೋಕದಲ್ಲಿಯೂ ಯಾವನೂ ದುಃಖಿಯಾಗಿರಲಿಲ್ಲ. ದೇವತೆಗಳೊಬ್ಬರು ಮಾತ್ರ ದಾಯಾದಮಾತ್ಸರ್ಯದಿಂದ ಅವನ ಏಳಿಗೆಯನ್ನು ಸಹಿಸಲಾರದೆ ಒಳಗೊಳಗೇ ಕೊರಗುತ್ತಿದ್ದರು.

೩೦-೩೧. ಓ ಮುನೀಂದ್ರ, ಆ ಶಂಖಚೂಡನು ಪೂರ್ವಜನ್ಮದಲ್ಲಿ ಸರ್ವದಾ ಕೃಷ್ಣನಲ್ಲಿ ಭಕ್ತಿಯುಳ್ಳವನೂ, ಸಾತ್ತ್ವಿಕವಾದ ನಡತೆಯುಳ್ಳವನೂ, ಗೋಲೋಕನಿವಾಸಿಯಾದ ಶ್ರೀಕೃಷ್ಣನ ಪರಮಸ್ನೇಹಿತನೂ ಆದ ಸುದಾಮನೆಂಬ ಗೊಲ್ಲನಲ್ಲವೇ? ಅವನು ರಾಧೆಯ ಶಾಪದಿಂದ ದಾನವಜಾತಿಯಲ್ಲಿ ಜನ್ಮವೆತ್ತಿದ್ದರೂ ದಾನವಸ್ವಭಾವವನ್ನು ಮಾತ್ರ ಹೊಂದಿರಲಿಲ್ಲ.

೩೨. ಬಳಿಕ ರಾಜ್ಯವನ್ನು ಕಳೆದುಕೊಂಡ ಆ ದೇವತೆಗಳೆಲ್ಲರೂ ಋಷಿಗಳೊಡನೆ ಆಲೋಚಿಸಿ ಬ್ರಹ್ಮನಸಭೆಗೆ ನಡೆದರು.

ತತ್ರ ದೃಷ್ಟ್ವಾ ವಿಧಾತಾರಂ ನತ್ವಾ ಸ್ತುತ್ವಾ ವಿಶೇಷತಃ ।
ಬ್ರಹ್ಮಣೇ ಕಥಯಾಮಾಸುಸ್ಸರ್ವಂ ವೃತ್ತಾಂತಮಾಕುಲಾಃ ॥ ೩೩ ॥

ಬ್ರಹ್ಮಾ ತದಾ ಸಮಾಶ್ವಾಸ್ಯ ಸುರಾನ್ಸರ್ವಾನ್ಮುನೀನಪಿ ।
ತೈಶ್ಚ ಸಾರ್ಧಂ ಯಯೌ ಲೋಕೇ ವೈಕುಂಠಂ ಸುಖದಂ ಸತಾಂ ॥ ೩೪ ॥

ದದರ್ಶ ತತ್ರ ಲಕ್ಷ್ಮೀಶಂ ಬ್ರಹ್ಮಾ ದೇವಗಣೈಸ್ಸಹ ।
ಕಿರೀಟಿನಂ ಕುಂಡಲಿನಂ ವನಮಾಲಾವಿಭೂಷಿತಂ ॥ ೩೫ ॥

ಶಂಖಚಕ್ರಗದಾಪದ್ಮಧರಂ ದೇವಂ ಚತುರ್ಭುಜಂ ।
ಸನಂದನಾದ್ಯೈಃ ಸಿದ್ಧೈಶ್ಚ ಸೇವಿತಂ ಪೀತವಾಸಸಂ ॥ ೩೬ ॥

ದೃಷ್ಟ್ವಾ ವಿಷ್ಣುಂ ಸುರಾಸ್ಸರ್ವೇ ಬ್ರಹ್ಮಾದ್ಯಾಸ್ಸಮುನೀಶ್ವರಾಃ ।
ಪ್ರಣಮ್ಯ ತುಷ್ಟುವುರ್ಭಕ್ತ್ಯಾ ಬದ್ಧಾಂಜಲಿಕರಾ ವಿಭುಂ ॥ ೩೭ ॥

---

೩೩. ಅನಂತರ ದುಃಖಿತರಾದ ಆ ದೇವತೆಗಳೆಲ್ಲರೂ ಆ ಸಭೆಯ ನಡುವೆ ಕುಳಿತಿರುವ ಬ್ರಹ್ಮನನ್ನು ಕಂಡು ಆತನನ್ನು ವಿಶೇಷವಾಗಿ ನಮಸ್ಕರಿಸಿ ಸ್ತೋತ್ರಮಾಡಿ ಎಲ್ಲ ವೃತ್ತಾಂತವನ್ನೂ ತಿಳಿಸಿದರು.

೩೪. ಆಗ ಬ್ರಹ್ಮನು ಆ ದೇವತೆಗಳನ್ನೂ ಋಷಿಗಳನ್ನೂ ಎಲ್ಲರನ್ನೂ ಸಂತೈಸಿ ಅವರೊಡನೆ ಸತ್ಪುರುಷರಿಗೆ ಸುಖವನ್ನು ಉಂಟುಮಾಡತಕ್ಕ ಶ್ರೀಹರಿಯನ್ನು ನೋಡಲು ಆತನಬಳಿಗೆ ತೆರಳಿದನು.

೩೫-೩೬. ಆ ಚತುರ್ಮುಖನು ದೇವತೆಗಳೊಡನೆ ವೈಕುಂಠವನ್ನು ಸೇರಿ ಅಲ್ಲಿ ಕಿರೀಟಧಾರಿಯೂ, ಕುಂಡಲಾಲಂಕೃತನೂ, ವನಮಾಲೆಯೆಂಬ ಹಾರವನ್ನು ಧರಿಸಿರುವವನೂ, ನಾಲ್ಕು ಕೈಗಳಿಂದ ಶಂಖ, ಚಕ್ರ, ಗದೆ, ಪದ್ಮಗಳನ್ನು ಹಿಡಿದಿರುವವನೂ, ಸನಂದನ ಮೊದಲಾದ ಸಿದ್ಧರಿಂದ ಸೇವಿಸಲ್ಪಡುತ್ತಿರುವವನೂ, ಪೀತಾಂಬರಧಾರಿಯೂ ಆದ ಲಕ್ಷ್ಮೀಕಾಂತನನ್ನು ಕಂಡನು.

೩೭. ಆ ಬ್ರಹ್ಮಾದಿದೇವತೆಗಳೂ ಋಷಿಗಳೂ ವಿಷ್ಣುವನ್ನು ಕಂಡೊಡನೆಯೇ ಬಹುಭಕ್ತಿಯಿಂದ ಆತನಿಗೆ ನಮಸ್ಕರಿಸಿ ಕೈಗಳನ್ನು ಮುಗಿದುಕೊಂಡು ಸ್ತೋತ್ರವನ್ನು ಮಾಡತೊಡಗಿದರು.

॥ ದೇವಾ ಊಚುಃ ॥

ದೇವದೇವ ಜಗನ್ನಾಥ ವೈಕುಂಠಾಧಿಪತೇ ಪ್ರಭೋ ।
ರಕ್ಷಾಸ್ಮಾಂಚ್ಛರಣಾಪನ್ನಾಚ್ಛ್ರೀಹರೇ ತ್ರಿಜಗದ್ಗುರೋ ॥ ೩೮ ॥

ತ್ವಮೇವ ಜಗತಾಂ ಪಾತಾ ತ್ರಿಲೋಕೇಶಾಚ್ಯುತ ಪ್ರಭೋ ।
ಲಕ್ಷ್ಮೀನಿವಾಸ ಗೋವಿಂದ ಭಕ್ತಪ್ರಾಣ ನಮೋಽಸ್ತು ತೇ ॥ ೩೯ ॥

ಇತಿ ಸ್ತುತ್ವಾ ಸುರಾಸ್ಸರ್ವೇ ರುರುದುಃ ಪುರತೋ ಹರೇಃ ।
ತಚ್ಛ್ರುತ್ವಾ ಭಗವಾನ್ವಿಷ್ಣುರ್ಬ್ರಹ್ಮಾಣಮಿದಮಬ್ರವೀತ್ ॥ ೪೦ ॥

॥ ವಿಷ್ಣುರುವಾಚ ॥

ಕಿಮರ್ಥಮಾಗತೋಽಸಿ ತ್ವಂ ವೈಕುಂಠಂ ಯೋಗಿದುರ್ಲಭಂ ।
ಕಿಂ ಕಷ್ಟಂ ತೇ ಸಮುದ್ಭೂತಂ ತತ್ತ್ವಂ ವದ ಮಮಾಗ್ರತಃ ॥ ೪೧ ॥

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ಹರೇರ್ವಾಕ್ಯಂ ಪ್ರಣಮ್ಯ ಚ ಮುಹುರ್ಮುಹುಃ ।
ಬದ್ಧಾಂಜಲಿಪುಟೋ ಭೂತ್ವಾ ವಿನಯಾನತಕಂಧರಃ ॥ ೪೨ ॥

---

೩೮. ಹೇ ದೇವದೇವ, ಜಗನ್ನಾಥ, ವೈಕುಂಠಾಧಿಪತೇ, ಶ್ರೀಹರಿ, ನಿನ್ನನ್ನು ಮರೆಹೊಕ್ಕಿರುವ ನಮ್ಮನ್ನು ಕಾಪಾಡು.

೩೯. ಓ ತ್ರಿಲೋಕೇಶ, ಅಚ್ಯುತ, ನೀನೇ ಈ ಪ್ರಪಂಚಕ್ಕೆಲ್ಲಾ ರಕ್ಷಕನು. ಓ ಲಕ್ಷ್ಮೀನಿವಾಸ, ಗೋವಿಂದ, ಭಕ್ತವತ್ಸಲ, ನಿನಗೆ ನಮಸ್ಕಾರವು.

೪೦. ಹೀಗೆ ಆ ದೇವತೆಗಳೆಲ್ಲರೂ ಸ್ತೋತ್ರಮಾಡಿ ವಿಷ್ಣುವಿನಮುಂದೆ ಗೋಳಿಟ್ಟರು. ಅದನ್ನು ಕೇಳಿ ಭಗವಂತನಾದ ಶ್ರೀಹರಿಯು ಬ್ರಹ್ಮನನ್ನು ಕುರಿತು ಇಂತೆಂದನು.

೪೧. ಯೋಗಿಗಳಿಗೂ ದುರ್ಲಭವಾದ ಈ ವೈಕುಂಠಲೋಕಕ್ಕೆ ಈಗ ನೀನು ಬಂದ ಕಾರಣವೇನು ? ನಿನಗೆ ಅಂತಹ ಕಷ್ಟವೇನು ಉಂಟಾಯಿತು ? ನಿಜವಾದ ಸಂಗತಿಯನ್ನು ತಿಳಿಸು ಎಂದನು.

೪೨-೪೩. ಓ ವ್ಯಾಸ, ಈರೀತಿ ಶ್ರೀಹರಿಯು ನುಡಿಯಲು, ಬ್ರಹ್ಮನು ಪರಮಾತ್ಮನಾದ ಆ ವಿಷ್ಣುವನ್ನು ಮತ್ತೆಮತ್ತೆ ನಮಸ್ಕರಿಸಿ ಕೈಗಳನ್ನು ಮುಗಿದು

ವೃತ್ತಾಂತಂ ಕಥಯಾಮಾಸ ಶಂಖಚೂಡಕೃತಂ ತದಾ ।
ದೇವಕಷ್ಟಸಮಾಖ್ಯಾನಂ ಪುರೋ ವಿಷ್ಣೋಃ ಪರಾತ್ಮನಃ ॥ ೪೩ ॥

ಹರಿಸ್ತದ್ವಚನಂ ಶ್ರುತ್ವಾ ಸರ್ವತಸ್ಸರ್ವಭಾವವಿತ್ ।
ಪ್ರಹಸ್ಯೋವಾಚ ಭಗವಾಂಸ್ತದ್ರಹಸ್ಯಂ ವಿಧಿಂ ಪ್ರತಿ ॥ ೪೪ ॥

॥ ಶ್ರೀಭಗವಾನುವಾಚ ॥

ಶಂಖಚೂಡಸ್ಯ ವೃತ್ತಾಂತಂ ಸರ್ವಂ ಜಾನಾಮಿ ಪದ್ಮಜ ।
ಮದ್ಭಕ್ತಸ್ಯ ಚ ಗೋಪಸ್ಯ ಮಹಾತೇಜಸ್ವಿನಃ ಪುರಾ ॥ ೪೫ ॥

ಶೃಣು ತತ್ಸರ್ವವೃತ್ತಾಂತಮಿತಿಹಾಸಂ ಪುರಾತನಂ ।
ಸಂದೇಹೋ ನೈವ ಕರ್ತವ್ಯಶ್ಯಂ ಕರಿಷ್ಯತಿ ಶಂಕರಃ ॥ ೪೬ ॥

ಸರ್ವೋಪರಿ ಚ ಯಸ್ಯಾಸ್ತಿ ಶಿವಲೋಕಃ ಪರಾತ್ಪರಃ ।
ಯತ್ರ ಸಂರಾಜತೇ ಶಂಭುಃ ಪರಬ್ರಹ್ಮ ಪರೇಶ್ವರಃ ॥ ೪೭ ॥

---

ಕೊಂಡು ವಿನಯದಿಂದ ತಲೆಯನ್ನು ಬಾಗಿಸಿ, ಶಂಖಚೂಡನಿಂದ ದೇವತೆಗಳಿಗೆ ಒದಗಿರುವ ಕಷ್ಟವೆಲ್ಲವನ್ನೂ ವಿವರಿಸಿದನು.

೪೪-೪೫. ಎಲ್ಲರ ಹೃದಯದಲ್ಲಿರುವ ಭಾವವೆಲ್ಲವನ್ನೂ ಅರಿತಿರುವ ಭಗವಂತನಾದ ಶ್ರೀಹರಿಯು ಆ ಮಾತನ್ನು ಕೇಳಿ ನಕ್ಕು ಬ್ರಹ್ಮನನ್ನು ಕುರಿತು, ಎಲೈ ಪದ್ಮಸಂಭವನೇ, ಶಂಖಚೂಡನ ಸಂಗತಿಯೆಲ್ಲವನ್ನೂ ನಾನು ತಿಳಿದಿರುವೆನು. ಪೂರ್ವಜನ್ಮದಲ್ಲಿ ಅವನು ನನ್ನಲ್ಲಿ ಅತಿಶಯವಾದ ಭಕ್ತಿಯನ್ನಿಟ್ಟಿದ್ದ ಮಹಾತೇಜಸ್ವಿಯಾದ ಗೊಲ್ಲನಲ್ಲವೇ ?

೪೬. ಹಿಂದೆ ನಡೆದ ಆ ವೃತ್ತಾಂತವೆಲ್ಲವನ್ನೂ ತಿಳಿಸುವೆನು ಕೇಳು. ಸಂದೇಹಪಡಬೇಡ. ಶಿವನು ಒಳ್ಳೆಯದನ್ನೇ ಮಾಡುವನು.

೪೭. ಯಾವ ಲೋಕವು ಎಲ್ಲ ಲೋಕಗಳಿಗಿಂತಲೂ ಮೇಲೆ ಇರುವುದೋ ಆ ಪರಮಶ್ರೇಷ್ಠವಾದ ಶಿವಲೋಕದಲ್ಲಿ ಪರಬ್ರಹ್ಮಸ್ವರೂಪನೂ ಎಲ್ಲರಿಗೂ ಒಡೆಯನೂ ಆದ ಶಿವನು ವಿರಾಜಿಸುತ್ತಿರುವನು.

ಪ್ರಕೃತೇಃ ಪುರುಷಸ್ಯಾಪಿ ಯೋಽಧಿಷ್ಠಾತಾ ತ್ರಿಶಕ್ತಿಧೃಕ್ ।
ನಿರ್ಗುಣಸ್ಸಗುಣಸ್ಸೋಽಪಿ ಪರಂ ಜ್ಯೋತಿಃ ಸ್ವರೂಪವಾನ್ ॥ ೪೮ ॥

ಯಸ್ಯಾಂಗಜಾಸ್ತು ವೈ ಬ್ರಹ್ಮಂಸ್ತ್ರಯಸ್ಸೃಷ್ಟ್ಯಾದಿಕಾರಕಾಃ ।
ಸತ್ತ್ವಾದಿಗುಣಸಂಪನ್ನಾ ವಿಷ್ಣುಬ್ರಹ್ಮಹರಾಭಿಧಾಃ ॥ ೪೯ ॥

ಸ ಏವ ಪರಮಾತ್ಮಾ ಹಿ ವಿಹರತ್ಯುಮಯಾ ಸಹ ।
ಯತ್ರ ಮಾಯಾವಿನಿರ್ಮುಕ್ತೋ ನಿತ್ಯಾನಿತ್ಯಪ್ರಕಲ್ಪಕಃ ॥ ೫೦ ॥

ತತ್ಸಮೀಪೇ ಚ ಗೋಲೋಕೋ ಗೋಶಾಲಾ ಶಂಕರಸ್ಯ ವೈ ।
ತಸ್ಯೇಚ್ಛಯಾ ಚ ಮದ್ರೂಪಃ ಕೃಷ್ಣೋ ವಸತಿ ತತ್ರ ಹ ॥ ೫೧ ॥

ತದ್ಗವಾಂ ರಕ್ಷಣಾರ್ಥಾಯ ತೇನಾಜ್ಞಪ್ತಸ್ಸದಾ ಸುಖೀ ।
ತತ್ಸಂಪ್ರಾಪ್ತಸುಖಸ್ಸೋಽಪಿ ಸಂಕ್ರೀಡತಿ ವಿಹಾರವಿತ್ ॥ ೫೨ ॥

---

೪೮. ಆತನು ಪ್ರಕೃತಿಗೂ ಪುರುಷನಿಗೂ ಅಧಿಷ್ಠಾನಭೂತನು. ಅವನೇ ಸೃಷ್ಟಿ, ಸ್ಥಿತಿ, ಲಯ ಶಕ್ತಿಗಳನ್ನು ಹೊಂದಿರುವನು. ಆತನು ನಿರ್ಗುಣನೂ ಸಗುಣನೂ ಆಗಿರುವನು. ಅವನೇ ಪರಮಪ್ರಕಾಶಸ್ವರೂಪನು.

೪೯. ಓ ವಿಪ್ರೋತ್ತಮ, ಸತ್ತ್ವರಜಸ್ತಮೋಗುಣಗಳಿಂದ ಕೂಡಿ ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಕಾರ್ಯಗಳನ್ನು ಜರುಗಿಸುವ ಬ್ರಹ್ಮ, ವಿಷ್ಣು, ರುದ್ರರೆಂಬುವವರು ಆತನ ದೇಹದಿಂದಲೇ ಹುಟ್ಟಿದವರು.

೫೦. ಆ ಶಿವನೇ ಸಾಕ್ಷಾತ್ಪರಮಾತ್ಮನು. ಮಾಯೆಗೆ ಸಿಲುಕಲಾರದ ನಿತ್ಯಾನಿತ್ಯ ವಸ್ತುಗಳ ವಿಧಾಯಕನಾದ ಆ ಶಿವನು ಉಮೆಯೊಂದಿಗೆ ಆ ಕೈಲಾಸದಲ್ಲಿ ವಿಹರಿಸುತ್ತಿರುವನು.

೫೧. ಆ ಶಿವಲೋಕದ ಬಳಿಯಲ್ಲಿಯೇ ಶಿವನ ಗೋಶಾಲೆಯೆನಿಸಿದ ಗೋಲೋಕವಿರುವುದು. ಆ ಶಿವನ ಇಚ್ಛೆಯಂತೆಯೇ ನನ್ನ ಸ್ವರೂಪನಾದ ಶ್ರೀಕೃಷ್ಣನು ಅಲ್ಲಿ ವಾಸವಾಗಿರುವನು.

೫೨. ಆ ಗೋಧನವನ್ನು ಕಾಪಾಡಲು ಶಿವನಿಂದ ಆ ಶ್ರೀಕೃಷ್ಣನು ನಿಯಮಿಸಲ್ಪಟ್ಟಿರುವನು. ಆ ಅಧಿಕಾರಲಾಭದಿಂದ ಸರ್ವದಾ ಸುಖಿಯೂ ವಿಹಾರಶೀಲನೂ ಆದ ಶ್ರೀಕೃಷ್ಣನು ಮತ್ತಷ್ಟು ಸುಖಿಯಾಗಿ ಆ ಗೋಕುಲದಲ್ಲಿ ವಿಹರಿಸುತ್ತಿರುವನು.

ತಸ್ಯ ನಾರೀ ಸಮಾಖ್ಯಾತಾ ರಾಧೇತಿ ಜಗದಂಬಿಕಾ ।
ಪ್ರಕೃತೇಃ ಪರಮಾ ಮೂರ್ತಿಃ ಪಂಚಮೀ ಸುವಿಹಾರಿಣೀ ॥ ೫೩ ॥

ಬಹುಗೋಪಾಶ್ಚ ಗೋಪ್ಯಶ್ಚ ತತ್ರ ಸಂತಿ ತದಂಗಜಾಃ ।
ಸುವಿಹಾರಪರಾ ನಿತ್ಯಂ ರಾಧಾಕೃಷ್ಣಾನುವರ್ತಿನಃ ॥ ೫೪ ॥

ಸ ಏವ ಲೀಲಯಾ ಶಂಭೋರಿದಾನೀಂ ಮೋಹಿತೋಽನಯಾ ।
ಸಂಪ್ರಾಪ್ತೋ ದಾನವೀಂ ಯೋನಿಂ ಮುಧಾ ಶಾಪಾತ್ಸ್ವದುಃಖದಾಂ ॥೫೫॥

ರುದ್ರಶೂಲೇನ ತನ್ಮೃತ್ಯುಃ ಕೃಷ್ಣೇನ ವಿಹಿತಃ ಪುರಾ ।
ತತಸ್ಸ್ವದೇಹಮುತ್ಸೃಜ್ಯ ಪಾರ್ಷದಸ್ಸ ಭವಿಷ್ಯತಿ ॥ ೫೬ ॥

ಇತಿ ವಿಜ್ಞಾಯ ದೇವೇಶ ನ ಭಯಂ ಕರ್ತುಮರ್ಹಸಿ ।
ಶಂಕರಂ ಶರಣಂ ಯಾವಸ್ಸ ಸದ್ಯಶ್ಶಂ ವಿಧಾಸ್ಯತಿ ॥ ೫೭ ॥

---

೫೩. ಆತನಿಗೆ ಜಗನ್ಮಾತೆಯೂ ಪ್ರಕೃತಿಯ ಪರಮಸ್ವರೂಪಳೂ ಕೈವಲ್ಯ ರೂಪಿಣಿಯೂ ವಿಹಾರಶೀಲಳೂ ಆದ ರಾಧೆಯೆಂಬುವಳು ಮಡದಿಯಾಗಿರುವಳು.

೫೪. ಆ ರಾಧಾಕೃಷ್ಣರ ಅವಯವದಿಂದ ಹುಟ್ಟಿ ನಿತ್ಯವೂ ವಿಹಾರಾಸಕ್ತರಾದ ಅನೇಕಮಂದಿ ಗೋಪಿಯರೂ ಗೋಪಾಲಕರೂ ಆ ರಾಧಾಕೃಷ್ಣರ ಅನುಚರರಾಗಿ ಅಲ್ಲಿಯೇ ಇರುವರು.

೫೫. ಆ ಗೋಪಾಲಕರಲ್ಲಿ ಒಬ್ಬನಾದ ಸುದಾಮನು ಶಿವನ ಮಾಯೆಯಿಂದ ಮೋಹಿತನಾಗಿ ರಾಧೆಯ ಶಾಪಕ್ಕೆ ಗುರಿಯಾಗಿ ದುಃಖಕರವಾದ ಈ ದಾನವ ಜಾತಿ ಯಲ್ಲಿ ಹುಟ್ಟಿರುವನು.

೫೬. ಆವನಿಗೆ ಶಿವನ ಶೂಲದಿಂದ ಮರಣವುಂಟಾಗುವಂತೆ ಹಿಂದೆಯೇ ಶ್ರೀಕೃಷ್ಣನು ವಿಧಿಸಿರುವನು. ತನ್ನ ದೇಹವನ್ನು ಬಿಟ್ಟಬಳಿಕ ಹಿಂದಿನಂತೆಯೇ ಆ ಶ್ರೀಕೃಷ್ಣನ ಅನುಚರನಾಗುವನು.

೫೭. ಹೀಗೆ ಈ ಸಂದರ್ಭವಿರುವುದನ್ನು ತಿಳಿದು ಇನ್ನು ಭಯಪಡದೇ ಇರು. ಆ ಶಂಕರನನ್ನೇ ನಾವೀರ್ವರೂ ಮರೆಹೊಗೋಣ. ಅವನು ಒಡನೆಯೇ ನಮಗೆ ಒಳ್ಳೆಯದನ್ನು ಮಾಡುವನು.

ಅಹಂ ತ್ವಂ ಚಾಮರಾಸ್ಸರ್ವೇ ತಿಷ್ಠಂತೀಹ ವಿಸಾಧ್ವಸಾಃ ॥ ೫೮ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಸವಿಧಿರ್ವಿಷ್ಣುಃ ಶಿವಲೋಕಂ ಜಗಾಮ ಹ ।
ಸಂಸ್ಮರನ್ಮನಸಾ ಶಂಭುಂ ಸರ್ವೇಶಂ ಭಕ್ತವತ್ಸಲಂ ॥ ೫೯ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡವಧೋಪಾಖ್ಯಾನೇ
ಶಂಖಚೂಡರಾಜ್ಯಕರಣವರ್ಣನಪೂರ್ವಕತತ್ಪೂರ್ವ
ಭವವೃತ್ತಚರಿತ್ರವರ್ಣನಂ
ನಾಮೈಕೋನತ್ರಿಂಶೋಽಧ್ಯಾಯಃ

---

೫೮-೫೯. ಈ ದೇವತೆಗಳೆಲ್ಲರೂ ತಮ್ಮ ಹೆದರಿಕೆಯೆಲ್ಲವನ್ನೂ ತೊರೆದು ಇಲ್ಲಿಯೇ ಇರಲಿ. ನಾನೂ ನೀನೂ ಇಬ್ಬರೂ ಹೋಗೋಣ. ಹೀಗೆಂದು ಹೇಳಿ ವಿಷ್ಣುವು, ಸರ್ವೇಶ್ವರನೂ ಭಕ್ತವತ್ಸಲನೂ ಆದ ಶಂಕರನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಬ್ರಹ್ಮನೊಡನೆ ಶಿವಲೋಕಕ್ಕೆ ತೆರಳಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಶಂಖಚೂಡನ ರಾಜ್ಯಭಾರ, ಅವನ ಪೂರ್ವಜನ್ಮದ ವೃತ್ತಾಂತ,
ಇವುಗಳ ವರ್ಣನೆಯೆಂಬ ಇಪ್ಪತ್ತೊಂಭತ್ತನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಗತ್ವಾ ತದೈವ ಸ ವಿಧಿಸ್ತದಾ ವ್ಯಾಸ ರಮೇಶ್ವರಃ ।
ಶಿವಲೋಕಂ ಮಹಾದಿವ್ಯಂ ನಿರಾಧಾರಮಭೌತಿಕಂ ॥ ೧ ॥

ಸಾಹ್ಲಾದೋಽಭ್ಯಂತರಂ ವಿಷ್ಣುರ್ಜಗಾಮ ಮುದಿತಾನನಃ ।
ನಾನಾರತ್ನಪರಿಕ್ಷಿಪ್ತಂ ವಿಲಸಂತಂ ಮಹೋಜ್ಜ್ವಲಂ ॥ ೨ ॥

---

### ಮೂವತ್ತನೆಯ ಅಧ್ಯಾಯವು.

೧. ಸನತ್ಕುಮಾರನು ವ್ಯಾಸನನ್ನು ಕುರಿತು ಹೇಳತೊಡಗಿದನು.--ಓ ವ್ಯಾಸ, ಬಳಿಕ ವಿಷ್ಣುವು, ಬ್ರಹ್ಮನೊಡನೆ ಕೂಡಲೇ ಹೊರಟು ಅತ್ಯಾಶ್ಚರ್ಯಕರವೂ, ಆಧಾರವೇ ಇಲ್ಲದುದೂ, ಪೃಥಿವ್ಯಾದಿ ಪಂಚಭೂತಗಳ ಸಂಪರ್ಕವಿಲ್ಲದೆಯೇ ರಚಿತವೂ ಆದ ಶಿವಲೋಕವನ್ನು ಸೇರಿ, ಮುಖದಲ್ಲಿ ಸಂತೋಷವನ್ನು ತೋರುತ್ತಾ ಒಳಕ್ಕೆ ಪ್ರವೇಶಿಸಿದನು.

೨-೩. ಆಗ, ಬಗೆಬಗೆಯಾದ ರತ್ನಗಳು ಕೆತ್ತಲ್ಪಟ್ಟು, ಅತಿಪ್ರಕಾಶಮಾನವಾಗಿ ಬೆಳಗುತ್ತಿರುವ ಮೊದಲನೆಯ ಬಾಗಿಲಿನ ಬಳಿಗೆ ಬಂದನು. ಅದು ಸೇವಾತತ್ಪರ

ಸಂಪ್ರಾಪ್ಯ ಪ್ರಥಮಂ ದ್ವಾರಂ ವಿಚಿತ್ರಂ ಗಣಸೇವಿತಂ ।
ಶೋಭಿತಂ ಪರಯಾ ಲಕ್ಷ್ಮ್ಯಾ ಮಹೋಚ್ಚಮತಿಸುಂದರಂ ॥ ೩ ॥

ದದರ್ಶ ದ್ವಾರಪಾಲಾಂಶ್ಚ ರತ್ನಸಿಂಹಾಸನಸ್ಥಿತಾನ್ ।
ಶೋಭಿತಾನ್ ಶ್ವೇತವಸ್ತ್ರೈಶ್ಚ ರತ್ನಭೂಷಣಭೂಷಿತಾನ್ ॥ ೪ ॥

ಪಂಚವಕ್ತ್ರತ್ರಿನಯನಾನ್ಗೌರಸುಂದರವಿಗ್ರಹಾನ್ ।
ತ್ರಿಶೂಲಾದಿಧರಾನ್ವೀರಾನ್ಭಸ್ಮರುದ್ರಾಕ್ಷಶೋಭಿತಾನ್ ॥ ೫ ॥

ಸ ಬ್ರಹ್ಮಾಪಿ ರಮೇಶಶ್ಚ ತಾನ್ಪ್ರಣಮ್ಯ ವಿನಮ್ರಕಃ ।
ಕಥಯಾಮಾಸ ವೃತ್ತಾಂತಂ ಪ್ರಭುಸಂದರ್ಶನಾರ್ಥಕಂ ॥ ೬ ॥

ತದಾಜ್ಞಾಂ ಚ ದದುಸ್ತಸ್ಮೈ ಪ್ರವಿವೇಶ ತದಾಜ್ಞಯಾ ।
ಪರಂ ದ್ವಾರಂ ಮಹಾರಮ್ಯಂ ವಿಚಿತ್ರಂ ಪರಮಪ್ರಭಂ. ॥ ೭ ॥

---

ರಾದ ಗಣಗಳಿಂದ ನಿಬಿಡವಾಗಿಯೂ, ವಿಚಿತ್ರವಾಗಿಯೂ ಇದ್ದಿತು. ಅತಿಶಯವಾದ ಕಾಂತಿಯಿಂದ ಮೆರೆಯುತ್ತಾ, ಅತ್ಯುನ್ನತವೂ, ಅತಿ ರಮಣೀಯವೂ ಆಗಿ ಕಂಗೊಳಿಸುತ್ತಿತ್ತು.

೪-೫. ಅಲ್ಲಿ ರತ್ನಖಚಿತವಾದ ಸಿಂಹಾಸನಗಳಲ್ಲಿ ಕುಳಿತಿರುವ ದ್ವಾರಪಾಲಕರನ್ನು ಕಂಡನು. ಅವರು ಶುಭ್ರವಾದ ಬಿಳಿಯ ಬಟ್ಟೆಗಳನ್ನುಟ್ಟಿದ್ದರು. ರತ್ನಖಚಿತವಾದ ಒಡವೆಗಳನ್ನು ತೊಟ್ಟಿದ್ದರು.. ಅವರಿಗೆ ಐದು ಮುಖಗಳು. ಮೂರು ಕಣ್ಣುಗಳು. ಅವರ ಶರೀರವು ಗೌರವರ್ಣದಿಂದ ಕೂಡಿ ರಮಣೀಯವಾಗಿತ್ತು. ಅವರು ತ್ರಿಶೂಲ ಮೊದಲಾದ ಆಯುಧಗಳನ್ನು ಧರಿಸಿದ್ದರು. ಭಸ್ಮರುದ್ರಾಕ್ಷಗಳಿಂದ ಅಲಂಕೃತರಾಗಿದ್ದರು.

೬. ಆ ಬ್ರಹ್ಮನೂ, ಶ್ರೀಹರಿಯೂ, ಅವರಿಗೆ ವಿನಯದಿಂದ ನಮಸ್ಕರಿಸಿ, ತಾವು ಪ್ರಭುವಿನ ಸಂದರ್ಶನಕ್ಕಾಗಿ ಬಂದಿರುವ ಸಂಗತಿಯನ್ನು ತಿಳಿಸಿದರು.

೭. ಆಗ ಆ ದ್ವಾರಪಾಲಕರು ಅವರಿಗೆ ಅಪ್ಪಣೆಯನ್ನು ಇತ್ತರು. ಅವರ ಅಪ್ಪಣೆಯಂತೆ ಒಳಹೊಕ್ಕು ಅತಿ ವಿಚಿತ್ರವಾಗಿಯೂ, ಮಹಾಕಾಂತಿಯಿಂದ ಕೂಡಿದುದೂ, ರಮಣೀಯವೂ ಆದ ಮತ್ತೊಂದು ಬಾಗಿಲಿಗೆ ಹೋದರು.

ಪ್ರಭೂಪಕಂಠಗತ್ಯರ್ಥಂ ವೃತ್ತಾಂತಂ ಸಂನ್ಯವೇದಯತ್ ।
ತದ್ದ್ವಾರಪಾಯ ಚಾಜ್ಞಪ್ತಸ್ತೇನಾನ್ಯಂ ಪ್ರವಿವೇಶ ಹ ॥ ೮ ॥

ಏವಂ ಪಂಚದಶದ್ವಾರಾನ್ಪ್ರವಿಶ್ಯ ಕಮಲೋದ್ಭವಃ ।
ಮಹಾದ್ವಾರಂ ಗತಸ್ತತ್ರ ನಂದಿನಂ ಪ್ರದದರ್ಶ ಹ ॥ ೯ ॥

ಸಮ್ಯಜ್ಞಾತ್ವಾ ಚ ತಂ ಸ್ತುತ್ವಾ ಪೂರ್ವವೃತ್ತೇನ ನಂದಿನಾ ।
ಆಜ್ಞಪ್ತಶ್ಚ ಶನೈರ್ವಿಷ್ಣುರ್ವಿವೇಶಾಭ್ಯಂತರಂ ಮುದಾ ॥ ೧೦ ॥

ದದರ್ಶ ಗತ್ವಾ ತತ್ರೋಚ್ಚೈಸ್ಸಭಾಂ ಶಂಭೋಸ್ಸಮುತ್ಪ್ರಭಾಂ ।
ತಾಂ ಪಾರ್ಷದೈಃ ಪರಿವೃತಾಂ ಲಸದ್ದೇಹೈಸ್ಸುಭೂಷಿತಾಂ ॥ ೧೧ ॥

ಮಹೇಶ್ವರಸ್ಯ ರೂಪೈಶ್ಚ ದಿಗ್ಭುಜೈಶ್ಶುಭಕಾಂತಿಭಿಃ ।
ಪಂಚವಕ್ತ್ರೈಸ್ತ್ರಿನಯನೈಶ್ಶಿತಿಕಂಠೈರ್ಮಹೋಜ್ಜ್ವಲೈಃ ॥ ೧೨ ॥

---

೮. ಅಲ್ಲಿರುವ ದ್ವಾರಪಾಲಕನಿಗೂ ತಾವು ಪ್ರಭುವಿನ ಬಳಿಗೆ ಸಂದರ್ಶನಾರ್ಥವಾಗಿ ಬಂದಿರುವೆನೆಂಬುದನ್ನು ತಿಳಿಸಿ, ಅವನ ಅಪ್ಪಣೆಯನ್ನು ಪಡೆದು ಮತ್ತೊಂದು ಬಾಗಿಲಿನ ಬಳಿಗೆ ಹೋದರು.

೯. ಈರೀತಿಯಾಗಿ, ಬ್ರಹ್ಮನು, ಶ್ರೀಹರಿಯೊಡನೆ ಹದಿನೈದು ಬಾಗಿಲುಗಳನ್ನು ದಾಟಿ, ಕೊನೆಗೆ ಮಹಾದ್ವಾರವನ್ನು ಸೇರಿದನು. ಅಲ್ಲಿ ದ್ವಾರಪಾಲಕನಾಗಿರುವ ನಂದಿಯನ್ನು ಕಂಡನು.

೧೦. ಅಲ್ಲಿ ಆ ನಂದಿಕೇಶ್ವರನಿಗೆ ನಮಸ್ಕಾರಮಾಡಿ, ಆತನನ್ನು ಚೆನ್ನಾಗಿ ಸ್ತುತಿಸಿ, ಅವನ ಅಪ್ಪಣೆಯನ್ನು ಪಡೆದು, ಸಂತೋಷದಿಂದ ಆ ಶ್ರೀಹರಿಯೂ, ಚತುರ್ಮುಖನೂ, ಮೆಲ್ಲನೆ ಒಳಕ್ಕೆ ಪ್ರವೇಶಿಸಿದರು.

೧೧-೧೨. ಆ ದ್ವಾರವನ್ನು ಪ್ರವೇಶಿಸಿದ ಮೇಲೆ, ಮಹಾತೇಜಸ್ಸಿನಿಂದ ಶೋಭಿಸುತ್ತಿರುವ ದೊಡ್ಡದಾದ ಶಿವಸಭೆಯನ್ನು ನೋಡಿದರು. ಆ ಸಭೆಯು ಶಿವನ ಪಾರಿಷದರಿಂದ ತುಂಬಿಹೋಗಿತ್ತು. ಅವರೆಲ್ಲರೂ ಶಿವನನ್ನು ರೂಪದಲ್ಲಿಯೂ, ಆಕಾರದಲ್ಲಿಯೂ ಹೋಲುತ್ತಿದ್ದರು. ಅವರ ದೇಹಗಳು ಅತಿಶಯವಾದ ಕಾಂತಿಯಿಂದ ಬೆಳಗುತ್ತಿದ್ದವು. ಅವರಿಗೆ ಹತ್ತು ಕೈಗಳು, ಐದು ಮುಖಗಳು. ಮೂರು ಮೂರು ಕಣ್ಣುಗಳು. ಕತ್ತಿನಲ್ಲಿ ಕಪ್ಪಾದ ಗೆರೆ, ರುದ್ರಾಕ್ಷಿಗಳನ್ನೂ ವಿಧವಿಧವಾದ ರತ್ನಾಭರಣಗಳನ್ನು ಧರಿಸಿಕೊಂಡು ಭಸ್ಮದಿಂದ ಭೂಷಿತರಾಗಿದ್ದರು.

ಸದ್ರತ್ನಯುಕ್ತೈರುದ್ರಾಕ್ಷಭಸ್ಮಾಭರಣಭೂಷಿತೈಃ ।
ನವೇಂದುಮಂಡಲಾಕಾರಾಂ ಚತುರಸ್ರಾಂ ಮನೋಹರಾಂ ॥ ೧೩ ॥

ಮಣೀಂದ್ರಹಾರನಿರ್ಮಾಣಹೀರಸಾರಸುಶೋಭಿತಾಂ ।
ಅಮೂಲ್ಯರತ್ನರಚಿತಾಂ ಪದ್ಮಪತ್ರೈಶ್ಚ ಶೋಭಿತಾಂ ॥ ೧೪ ॥

ಮಾಣಿಕ್ಯಜಾಲಾಮಾಲಾಭಿರ್ನಾನಾಚಿತ್ರವಿಚಿತ್ರಿತಾಂ ।
ಪದ್ಮರಾಗೇಂದ್ರರಚಿತಾಮದ್ಭುತಾಂ ಶಂಕರೇಚ್ಛಯಾ ॥ ೧೫ ॥

ಸೋಪಾನಶತಕೈರ್ಯುಕ್ತಾಂ ಸ್ಯಮಂತಕವಿನಿರ್ಮಿತೈಃ ।
ಸ್ವರ್ಣಸೂತ್ರಗ್ರಂಥಿಯುಕ್ತೈಶ್ಚಾರುಚಂದನಪಲ್ಲವೈಃ ॥ ೧೬ ॥

ಇಂದ್ರನೀಲಮಣಿಸ್ತಂಭೈರ್ವೇಷ್ಟಿತಾಂ ಸುಮನೋಹರಾಂ ।
ಸುಸಂಸ್ಕೃತಾಂ ಚ ಸರ್ವತ್ರ ವಾಸಿತಾಂ ಗಂಧವಾಯುನಾ ॥ ೧೭ ॥

---

೧೩-೧೫. ಆ ಸಭೆಯು ಆಗ ತಾನೇ ಉದಯಿಸಿದ ಚಂದ್ರಮಂಡಲವನ್ನು ಹೋಲುತ್ತಿತ್ತು. ಅದು ಚಚ್ಚೌಕನಾಗಿ ಮನೋಹರವಾಗಿತ್ತು. ಅಲ್ಲಲ್ಲಿ ಶ್ರೇಷ್ಠವಾದ ವಜ್ರವೈಡೂರ್ಯಾದಿ ರತ್ನಗಳ ಹಾರಗಳನ್ನು ಸಾಲಾಗಿ ತೂಗುಬಿಟ್ಟಿದ್ದರು. ಕೆಲವು ಕಡೆ ಅನರ್ಘ್ಯವಾದ ರತ್ನಗಳಿಂದ ಕೆತ್ತಿ ಕಮಲದ ದಳಗಳಂತೆ ಬಿಡಿಸಿದ್ದರು. ಕೆಲವು ಕಡೆ ಕೆಂಪುಗಳ ಹಾರಗಳಿಂದ ಚಿತ್ರವಿಚಿತ್ರವಾಗಿ ಅಲಂಕರಿಸಿದ್ದರು. ಆ ಸಭೆಯು ಶಿವನ ಇಚ್ಛೆಯಂತೆ, ಪದ್ಮರಾಗಮಣಿಗಳಿಂದ ಅತ್ಯದ್ಭುತವಾಗಿ ರಚಿಸಲ್ಪಟ್ಟಿತ್ತು.

೧೬. ಅಲ್ಲಿ ಸ್ಯಮಂತಕಮಣಿಗಳಿಂದ ವಿರಚಿತವಾದ ನೂರಾರು ಮೆಟ್ಟಲುಗಳಿದ್ದುವು. ಅಲ್ಲಲ್ಲಿ ಚಿನ್ನದ ಎಳೆಗಳನ್ನು ತೆಗೆದುಕೊಂಡು, ಸುಂದರವಾದ ಚಂದನದ ಚಿಗುರೆಲೆಗಳನ್ನು ಪೋಣಿಸಿ, ಅಲಂಕರಿಸಿದ್ದರು.

೧೭-೧೮. ಆ ಸಭೆಯಲ್ಲಿ ಇಂದ್ರನೀಲಮಣಿಗಳಿಂದ ನಿರ್ಮಿತವಾದ ಕಂಭಗಳು ಸುತ್ತಲೂ ಕಂಗೊಳಿಸುತ್ತಿದ್ದುವು. ಆ ಸಭೆಯನ್ನು ಚೊಕ್ಕಟವಾಗಿ ಅಂದವಾಗಿ ಇಟ್ಟಿದ್ದರು. ಅಲ್ಲಿ ಎಲ್ಲೆಡೆಯಲ್ಲೂ ಸುವಾಸನೆಯನ್ನು ಬೀರುತ್ತಾ ಗಾಳಿಯು ಮೆಲ್ಲಗೆ ಬೀಸುತ್ತಿತ್ತು. ಆ ಸಭೆಯು ಒಂದು ಸಹಸ್ರ ಯೋಜನಗಳಷ್ಟು ವಿಶಾಲವಾಗಿತ್ತು. ಅಲ್ಲಿ

ಸಹಸ್ರಯೋಜನಾಯಾಮಾಂ ಸುಪೂರ್ಣಾಂ ಬಹುಕಿಂಕರೈಃ ।
ದದರ್ಶ ಶಂಕರಂ ಸಾಂಬಂ ತತ್ರ ವಿಷ್ಣುಸ್ಸುರೇಶ್ವರಃ ॥ ೧೮ ॥

ವಸಂತಂ ಮಧ್ಯದೇಶೇ ಚ ಯಥೇಂದುತಾರಕಾವೃತಂ ।
ಅಮೂಲ್ಯರತ್ನನಿರ್ಮಾಣಚಿತ್ರಸಿಂಹಾಸನಸ್ಥಿತಂ ॥ ೧೯ ॥

ಕಿರೀಟಿನಂ ಕುಂಡಲಿನಂ ರತ್ನಮಾಲಾವಿಭೂಷಿತಂ ।
ಭಸ್ಮೋದ್ಧೂಲಿತಸರ್ವಾಂಗಂ ಬಿಭ್ರತಂ ಕೇಲಿಪಂಕಜಂ ॥ ೨೦ ॥

ಪುರತೋ ಗೀತನೃತ್ಯಂ ಚ ಪಶ್ಯಂತಂ ಸಸ್ಮಿತಂ ಮುದಾ ॥ ೨೧ ॥

ಶಾಂತಂ ಪ್ರಸನ್ನಮನಸಮುಮಾಕಾಂತಂ ಮಹೋಲ್ಲಸಂ ।
ದೇವ್ಯಾ ಪ್ರದತ್ತತಾಂಬೂಲಂ ಭುಕ್ತವಂತಂ ಸುವಾಸಿತಂ ॥ ೨೨ ॥

---

ಶಿವನ ಸೇವಾತತ್ಪರರಾದ ಅನೇಕ ಮಂದಿ ಪಾರಿಷದರು ಕಿಕ್ಕಿರಿದು ನೆರೆದಿದ್ದರು. ಹೀಗೆ ಕಂಗೊಳಿಸುತ್ತಿದ್ದ ಆ ಸಭೆಯ ನಡುವೆ ಜಗನ್ಮಾತೆಯಾದ ಪಾರ್ವತಿಯೊಡನೆ ಕುಳಿತಿರುವ ಶಿವನನ್ನು ಶ್ರೀಹರಿಯೂ ಚತುರ್ಮುಖನೂ ಕಂಡರು.

೧೯. ಆ ಶಿವನು ಪಾರ್ವತಿಯೊಡನೆ, ಆ ಸಭೆಯ ನಡುವೆ, ಬಹಳ ಬೆಲೆ ಬಾಳುವ ರತ್ನಗಳಿಂದ ನಿರ್ಮಿಸಲ್ಪಟ್ಟು, ಅತ್ಯದ್ಭುತವಾಗಿ ಕಂಗೊಳಿಸುವ ಸಿಂಹಾಸನದಲ್ಲಿ ಮಂಡಿಸಿ, ನಕ್ಷತ್ರಗಳ ಮಧ್ಯೆ ಬೆಳಗುವ ಚಂದ್ರನಂತೆ ಮೆರೆಯುತ್ತಿದ್ದನು.

೨೦. ಆತನು ತಲೆಯಲ್ಲಿ ಕಿರೀಟವನ್ನೂ ಕಿವಿಗಳಲ್ಲಿ ಕುಂಡಲಗಳನ್ನೂ, ಕತ್ತಿನಲ್ಲಿ ರತ್ನದ ಹಾರಗಳನ್ನೂ ಧರಿಸಿದ್ದನು. ಮೈಗೆಲ್ಲಾ ಭಸ್ಮವನ್ನು ಹಚ್ಚಿಕೊಂಡಿದ್ದನು. ಕೈಲಿ ಲೀಲಾರ್ಥವಾಗಿ ಕಮಲವೊಂದನ್ನು ಹಿಡಿದಿದ್ದನು.

೨೧-೨೨. ತನ್ನೆದುರು ಕೆಲವರು ಹಾಡುತ್ತಲೂ, ಮತ್ತೆ ಕೆಲವರು ನರ್ತನವನ್ನು ಮಾಡುತ್ತಲೂ ಇರಲು, ಸಂತಸದಿಂದ ಮುಗುಳುನಗೆಯನ್ನು ಬೀರುತ್ತಿದ್ದನು. ಆ ಶಿವನು ಶಾಂತನಾಗಿಯೂ, ಪ್ರಸನ್ನವಾದ ಮನಸ್ಸುಳ್ಳವನಾಗಿಯೂ, ಇದ್ದನು. ಆ ಉಮಾಕಾಂತನು, ದೇವಿಯು ಇತ್ತ ಸುವಾಸನಾಯುಕ್ತವಾದ ಕರ್ಪೂರವೀಳೆಯವನ್ನು ಮೆಲ್ಲುತ್ತಾ ಇದ್ದನು.

ಗಣೈಶ್ಚ ಪರಯಾ ಭಕ್ತ್ಯಾ ಸೇವಿತಂ ಶ್ವೇತಚಾಮರೈಃ ।
ಸ್ತೂಯಮಾನಂ ಚ ಸಿದ್ಧೈಶ್ಚ ಭಕ್ತಿನಮ್ರಾತ್ಮಕಂಧರೈಃ ॥ ೨೩ ॥

ಗುಣಾತೀತಂ ಪರೇಶಾನಂ ತ್ರಿದೇವಜನಕಂ ವಿಭುಂ ।
ನಿರ್ವಿಕಲ್ಪಂ ನಿರಾಕಾರಂ ಸಾಕಾರಂ ಸ್ವೇಚ್ಛಯಾ ಶಿವಂ ॥ ೨೪ ॥

ಅಮಾಯಮಜಮಾದ್ಯಂ ಚ ಮಾಯಾಧೀಶಂ ಪರಾತ್ಪರಂ ।
ಪ್ರಕೃತೇಃ ಪುರುಷಸ್ಯಾಪಿ ಪರಮಂ ಸ್ವಪ್ರಭುಂ ಸದಾ ॥ ೨೫ ॥

ಏವಂ ವಿಶಿಷ್ಟಂ ತಂ ದೃಷ್ಟ್ವಾ ಪರಿಪೂರ್ಣತಮಂ ಸಮಂ ।
ವಿಷ್ಣುಬ್ರಹ್ಮಾ ತುಷ್ಟುವತುಃ ಪ್ರಣಮ್ಯ ಸುಕೃತಾಂಜಲೀ ॥ ೨೬ ॥

॥ ವಿಷ್ಣುವಿಧೀ ಊಚತುಃ ॥

ದೇವದೇವ ಮಹಾದೇವ ಪರಬ್ರಹ್ಮಾಖಿಲೇಶ್ವರ ।
ತ್ರಿಗುಣಾತೀತ ನಿರ್ವ್ಯಗ್ರ ತ್ರಿದೇವಜನಕ ಪ್ರಭೋ ॥ ೨೭ ॥

---

೨೩. ಪ್ರಮಥಗಣಗಳು ಬಹು ಭಕ್ತಿಯಿಂದ ಬಿಳಿದಾದ ಚಾಮರಗಳನ್ನು ಹಿಡಿದು, ಸೇವಿಸುತ್ತಿದ್ದರು. ಒಂದು ಕಡೆ ಸಿದ್ಧರು ಭಕ್ತಿಯಿಂದ ತಲೆಬಾಗಿ, ನಾನಾ ವಿಧವಾಗಿ ಸ್ತೋತ್ರಮಾಡುತ್ತಿದ್ದರು.

೨೪. ಆ ಶಿವನು ಗುಣಗಳನ್ನು ಮೀರಿದವನು. ಪರಾತ್ಪರನು, ಕಾರಣ ಪುರುಷರಾದ ತ್ರಿಮೂರ್ತಿಗಳಿಗೂ ಕಾರಣನಾದವನು. ಅವನಿಗೆ ಭ್ರಮೆಯೆಂಬುದೇ ಇಲ್ಲ. ಆತನು ಆಕಾರರಹಿತನು. ತನ್ನ ಇಚ್ಛೆಯಂತೆ ಯಾವ ಆಕಾರವನ್ನಾದರೂ ಪಡೆಯಬಲ್ಲನು. ಆತನು ಸರ್ವದಾ ಮಂಗಲಸ್ವರೂಪನು.

೨೫. ಆ ಶಿವನು ಮಾಯೆಗೆ ಸಿಲುಕದವನು, ಹುಟ್ಟು ಇಲ್ಲದವನು, ಎಲ್ಲರಿಗೂ ಆದಿಭೂತನು. ಮಾಯೆಯನ್ನು ತನ್ನ ಕೈಕೆಳಗೆ ಇಟ್ಟುಕೊಂಡಿರತಕ್ಕವನು. ಪ್ರಕೃತಿಗೂ, ಪುರುಷನಿಗೂ, ಮೇಲೆನಿಸಿದವನು. ತನಗೆ ತಾನೇ ಪ್ರಭುವು.

೨೬. ಈ ರೀತಿಯಾಗಿ ವಿಶಿಷ್ಟವಾದ ಗುಣಗಳಿಂದ ಕೂಡಿ, ಸರ್ವದಾ ಪರಿಪೂರ್ಣನಾದ ಆ ಶಿವನನ್ನು ಕಂಡು, ಶ್ರೀಹರಿಯೂ, ಚತುರ್ಮುಖನೂ, ಪ್ರಣಾಮವನ್ನು ಮಾಡಿ, ಬದ್ಧಾಂಜಲಿಪುಟರಾಗಿ, ಇಂತು ಸ್ತೋತ್ರಮಾಡಿದರು.

೨೭-೨೮. ಓ ದೇವದೇವ, ಮಹಾದೇವ, ನೀನು ಪರಬ್ರಹ್ಮಸ್ವರೂಪನು, ಸರ್ವೇಶ್ವರನು, ಸತ್ತ್ವರಜಸ್ತಮೋಗುಣಗಳಿಗೆ ಸಿಲುಕದೆ ಇರುವವನು, ಆತಂಕ

ವಯಂ ತೇ ಶರಣಾಪನ್ನಾ ರಕ್ಷಾಸ್ಮಾನ್ದುಃಖಿತಾನ್ವಿಭೋ ।
ಶಂಖಚೂಡಾರ್ದಿತಾನ್ನಿ ಲ್ಲಷ್ಟಾನ್ಸನ್ನಾಥಾನ್ಪರಮೇಶ್ವರ ॥ ೨೮ ॥

ಅಯಂ ಯೋಽಧಿಷ್ಠಿತೋ ಲೋಕೋ ಗೋಲೋಕ ಇತಿ ಸ ಸ್ಮೃತಃ ।
ಅಧಿಷ್ಠಾತಾ ತಸ್ಯ ವಿಭುಃ ಕೃಷ್ಣೋಽಯಂ ತ್ವದಧಿಷ್ಠಿತಃ ॥ ೨೯ ॥

ಪಾರ್ಷದಪ್ರವರಸ್ತಸ್ಯ ಸುದಾಮಾ ದೈವಯಂತ್ರಿತಃ ।
ರಾಧಾಶಪ್ತೋ ಬಭೂವಾಥ ಶಂಖಚೂಡಶ್ಚ ದಾನವಃ ॥ ೩೦ ॥

ತೇನ ನಿಸ್ಸಾರಿತಾಃ ಶಂಭೋ ಪೀಡ್ಯಮಾನಾಃ ಸಮಂತತಃ ।
ಹೃತಾಧಿಕಾರಾಸ್ತ್ರಿದಶಾ ವಿಚರಂತಿ ಮಹೀತಲೇ ॥ ೩೧ ॥

ತ್ವಾಂ ವಿನಾ ನ ಸ ವಧ್ಯಶ್ಚ ಸರ್ವೇಷಾಂ ತ್ರಿದಿವೌಕಸಾಂ ।
ತಂ ಘಾತಯ ಮಹೇಶಾನ ಲೋಕಾನಾಂ ಸುಖಮಾವಹ ॥ ೩೨ ॥

---

ರಹಿತನೂ, ಕಾರಣಪುರುಷರಾದ ತ್ರಿಮೂರ್ತಿಗಳಿಗೂ ಕಾರಣಭೂತನೂ, ಆಗಿರುವವನು. ಹೇ ಪ್ರಭೂ, ನಾವು ನಿನ್ನನ್ನು ಮರೆಹೊಕ್ಕಿರುವೆವು. ದುಃಖಿತರಾದ ನಮ್ಮನ್ನು ಕಾಪಾಡು. ಓ ಪರಮೇಶ್ವರ, ನಿನ್ನಂತಹ ಸತ್ಪ್ರಭುವಿದ್ದು, ಶಂಖಚೂಡನಿಂದ ಪೀಡಿಸಲ್ಪಟ್ಟು, ನಾನಾವಿಧವಾದ ತೊಂದರೆಗಳಿಗೆ ಈಡಾಗಿರುವೆವಲ್ಲಾ. ನಮ್ಮನ್ನು ಕಾಪಾಡು.

೨೯. ನಿನ್ನ ಈ ಲೋಕದ ಒಳಿಯಲ್ಲಿಯೇ ಗೋಲೋಕವೆಂಬುದು ಇರುವುದಷ್ಟೆ. ನಿನ್ನ ಅಂಶಭೂತನಾದ ಶ್ರೀಕೃಷ್ಣನೇ ಆ ಗೋಲೋಕಕ್ಕೆ ಅಧಿಪತಿಯಾಗಿರುವನು.

೩೦. ಆ ಕೃಷ್ಣನ ಅನುಚರರಲ್ಲಿ ಅಗ್ರಗಣ್ಯನಾದ ಸುದಾಮನೆಂಬುವನು, ವಿಧಿಯ ವಿಲಾಸಕ್ಕೆ ಸಿಲುಕಿ, ರಾಧೆಯ ಶಾಪಕ್ಕೆ ತುತ್ತಾಗಿ ಈಗ ದಾನವಜಾತಿಯಲ್ಲಿ ಶಂಖಚೂಡನಾಗಿ ಹುಟ್ಟಿರುವನು.

೩೧. ಎಲೈ ಶಂಭುವೇ, ಆ ಶಂಖಚೂಡನಿಂದ ಹೊರದೂಡಲ್ಪಟ್ಟು ಸುತ್ತಮುತ್ತಲೂ ಅವನ ಕಿರುಕುಳಗಳಿಗೆ ಒಳಗಾಗಿ ತಮ್ಮ ಅಧಿಕಾರಗಳನ್ನು ಕಳೆದುಕೊಂಡು ದೇವತೆಗಳು ಭೂಮಿಯಮೇಲೆ, ಅಲೆಯುತ್ತಿರುವರು.

೩೨. ನಿನ್ನನ್ನು ಬಿಟ್ಟರೆ, ದೇವತೆಗಳಲ್ಲಿ ಮತ್ತೆ ಯಾರೂ ಅವನನ್ನು ಕೊಲ್ಲಲಾರರು. ಓ ಮಹೇಶ್ವರ, ಆ ಶಂಖಚೂಡನನ್ನು ಸಂಹರಿಸಿ, ಮೂರು ಲೋಕಗಳಿಗೂ ಸುಖವನ್ನು ಮಾಡು.

ತ್ವಮೇವ ನಿರ್ಗುಣಸ್ಸತ್ಯೋಽನಂತೋಽನಂತಪರಾಕ್ರಮಃ ।
ಸಗುಣಶ್ಚ ಸನ್ನಿವೇಶಃ ಪ್ರಕೃತೇಃ ಪುರುಷಾತ್ಪರಃ ॥ ೩೩ ॥

ರಜಸಾ ಸೃಷ್ಟಿಸಮಯೇ ತ್ವಂ ಬ್ರಹ್ಮಾ ಸೃಷ್ಟಿಕೃತ್ಪ್ರಭೋ ।
ಸತ್ತ್ವೇನ ಪಾಲನೇ ವಿಷ್ಣುಸ್ತ್ರಿಭುವಾವನಕಾರಕ ॥ ೩೪ ॥

ತಮಸಾ ಪ್ರಲಯೇ ರುದ್ರೋ ಜಗತ್ಸಂಹಾರಕಾರಕಃ ।
ನಿಸ್ತ್ರೈಗುಣ್ಯೇ ಶಿವಾಖ್ಯಾತಸ್ತುರ್ಯೋ ಜ್ಯೋತಿಃಸ್ವರೂಪಕಃ ॥ ೩೫ ॥

ತ್ವಂ ದೀಕ್ಷಯಾ ಚ ಗೋಲೋಕೇ ತ್ವಂ ಗವಾಂ ಪರಿಪಾಲಕಃ ।
ತ್ವದ್ಗೋಶಾಲಾಮಧ್ಯಗಶ್ಚ ಕೃಷ್ಣಃ ಕ್ರೀಡತ್ಯಹರ್ನಿಶಂ ॥ ೩೬ ॥

ತ್ವಂ ಸರ್ವಕಾರಣಂ ಸ್ವಾಮಿ ವಿಧಿವಿಷ್ಣ್ವೀಶ್ವರಃ ಪರಂ ।
ನಿರ್ವಿಕಾರೀ ಸದಾ ಸಾಕ್ಷೀ ಪರಮಾತ್ಮಾ ಪರೇಶ್ವರಃ ॥ ೩೭ ॥

---

೩೩. ನೀನೇ ಗುಣತ್ರಯರಹಿತನು. ನೀನು ಗುಣಸಹಿತನೂ ಆಗಿರುವೆ. ನೀನು ಸತ್ಯಸ್ವರೂಪನು. ನಿನಗೆ ಎಲ್ಲೆಯೆನ್ನುವುದೇ ಇಲ್ಲ. ನಿನ್ನ ಪರಾಕ್ರಮವು ಕೊನೆಯೇ ಇಲ್ಲದುದು. ನೀನು ಸತ್ಪುರುಷರಿಗೆ ಆಶ್ರಯನು. ಪ್ರಕೃತಿಗೂ ಪುರುಷನಿಗೂ ಮೇಲಾಗಿ ಇರುವವನು ನೀನೇ.

೩೪-೩೫. ಓ ಪ್ರಭೂ. ನೀನು ಸೃಷ್ಟಿಕಾಲದಲ್ಲಿ ರಜೋಗುಣವನ್ನವಲಂಬಿಸಿ, ಬ್ರಹ್ಮನಾಗುವೆ. ಆರೀತಿ ಸೃಷ್ಟಿಸಲ್ಪಟ್ಟ, ಮೂರು ಲೋಕಗಳನ್ನೂ ಸತ್ತ್ವಗುಣಶಾಲಿಯಾಗಿ ಕಾಪಾಡುತ್ತಾ ವಿಷ್ಣುವೆನಿಸುವೆ. ಪ್ರಳಯಕಾಲದಲ್ಲಿ ಜಗತ್ತುಗಳನ್ನೆಲ್ಲಾ ದಹಿಸಿಬಿಡುತ್ತಾ, ತಮೋಗುಣ ಭೂಯಿಷ್ಠನಾಗಿ ರುದ್ರನೆಂಬ ಹೆಸರನ್ನು ಪಡೆಯುವೆ. ಈ ಮೂರು ಗುಣಗಳನ್ನೂ ಮೀರಿಬಿಟ್ಟನಂತರ ತುರೀಯಾವಸ್ಥೆಯಲ್ಲಿ ಪ್ರಕಾಶಸ್ವರೂಪನಾಗಿರುತ್ತಾ ಶಿವನೆನಿಸುವೆ.

೩೬. ನಿನ್ನ ದೀಕ್ಷೆಯನ್ನೇ ವಹಿಸಿ, ನಿನ್ನ ಗೋವುಗಳನ್ನೇ ಕಾಯುತ್ತಾ, ನಿನ್ನ ಗೋಶಾಲೆಯ ಮಧ್ಯದಲ್ಲಿಯೇ ಶ್ರೀಕೃಷ್ಣನು ಹಗಲೂ ರಾತ್ರಿಯೂ ವಿಹರಿಸುತ್ತಿರುವನು.

೩೭. ಎಲೈ ಸ್ವಾಮಿಯೇ, ಬ್ರಹ್ಮ, ವಿಷ್ಣು, ರುದ್ರಾತ್ಮಕನಾದ ನೀನು ಎಲ್ಲಕ್ಕೂ ಕಾರಣನಾಗಿರುವೆ. ನೀನು ವಿಕಾರರಹಿತನು. ನೀನು ಸರ್ವದಾ ಸಾಕ್ಷಿಸ್ವರೂಪನು. (ಜೀವನು) ನೀನೇ ಪರಮಾತ್ಮನು ನೀನೇ ಸರ್ವೇಶ್ವರನು.

ದೀನಾನಾಥಸಹಾಯೀ ಚ ದೀನಾನಾಂ ಪ್ರತಿಪಾಲಕಃ ।
ದೀನಬಂಧುಸ್ತ್ರಿಲೋಕೇಶಶ್ಶರಣಾಗತವತ್ಸಲಃ ॥ ೩೮ ॥

ಅಸ್ಮಾನುದ್ಧರ ಗೌರೀಶ ಪ್ರಸೀದ ಪರಮೇಶ್ವರ ।
ತ್ವದಧೀನಾ ವಯಂ ನಾಥ ಯದಿಚ್ಛಸಿ ತಥಾ ಕುರು ॥ ೩೯ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ತೌ ಸುರೌ ವ್ಯಾಸ ಹರಿರ್ಬ್ರಹ್ಮಾ ಚ ವೈ ತದಾ ।
ವಿರೇಮತುಃ ಶಿವಂ ನತ್ವಾ ಕರೌ ಬಧ್ವಾ ವಿನೀತಕೌ ॥ ೪೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡವಧೇ ದೇವದೇವ
ಸ್ತುತಿರ್ನಾಮ ತ್ರಿಂಶೋಽಧ್ಯಾಯಃ.

---

೩೮. ನೀನು ದೀನರಿಗೂ, ದಿಕ್ಕಿಲ್ಲದವರಿಗೂ ಸಹಾಯಕನು. ದೀನರನ್ನು ಕಾಪಾಡುವವನು. ದೀನರಿಗೆ ಬಂಧುವು. ನೀನು ಮೂರು ಲೋಕಗಳಿಗೂ ಅಧಿಪತಿಯು. ನೀನೇ ಶರಣಾಗತವತ್ಸಲನು.

೩೯. ಓ ಗೌರೀಪತೇ, ಹೇ ಪರಮೇಶ್ವರ, ನಮ್ಮನ್ನು ಉದ್ಧಾರಮಾಡು, ನಮ್ಮಲ್ಲಿ ಪ್ರಸನ್ನನಾಗು. ನಾವು ನಿನ್ನ ಅಧೀನಕ್ಕೆ ಒಳಪಟ್ಟಿರುವೆವು. ಓ ನಾಥ, ನಿನ್ನ ಇಷ್ಟಬಂದಂತೆ ಮಾಡು ಎಂದರು.

೪೦. ಸನತ್ಕುಮಾರನಿಂತೆಂದನು :—ಓ ವ್ಯಾಸ ಈ ರೀತಿಯಾಗಿ ಆ ಶ್ರೀ ಹರಿಯೂ, ಬ್ರಹ್ಮನೂ, ಬಿನ್ನವಿಸಿ, ಬಳಿಕ ಆ ಶಿವನಿಗೆ ನಮಸ್ಕಾರಮಾಡಿ ವಿನಯದಿಂದ ಕೈಗಳನ್ನು ಕಟ್ಟಿಕೊಂಡು ಸುಮ್ಮನೆ ನಿಂತರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ದೇವದೇವಸ್ತುತಿಯೆಂಬ ಮೂವತ್ತನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಅಥಾಕರ್ಣ್ಯ ವಚಶ್ಶಂಭುರ್ಹರಿವಿಧ್ಯೋಸ್ಸುದೀನಯೋಃ ।
ಉವಾಚ ವಿಹಸನ್ವಾಣ್ಯಾ ಮೇಘನಾದಗಭೀರಯಾ ॥ ೧ ॥

॥ ಶಿವ ಉವಾಚ ॥

ಹೇ ಹರೇ ವತ್ಸ ಹೇ ಬ್ರಹ್ಮಂಸ್ತ್ಯಜತಂ ಸರ್ವಶೋ ಭಯಂ ।
ಶಂಖಚೂಡೋದ್ಭವಂ ಭದ್ರಂ ಸಂಭವಿಷ್ಯತ್ಯಸಂಶಯಂ ॥ ೨ ॥

---

### ಮೂವತ್ತೊಂದನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :—ಓ ವ್ಯಾಸ, ಅನಂತರ ಖಿನ್ನರಾದ ಆ ಬ್ರಹ್ಮವಿಷ್ಣುಗಳ ಮಾತನ್ನು ಕೇಳಿ ಶಿವನು ನಸುನಗುತ್ತಾ ಮೇಘದಂತೆ ಗಂಭೀರವಾದ ಧ್ವನಿಯಿಂದ ಅವರನ್ನು ಕುರಿತು ಇಂತೆಂದನು.

೨. ಓ ಹರಿ, ಎಲೈ ವತ್ಸ ಬ್ರಹ್ಮನೇ, ಶಂಖಚೂಡನಿಂದ ನಿಮಗೆ ಉಂಟಾಗಿರುವ ಹೆದರಿಕೆಯನ್ನು ಸಂಪೂರ್ಣವಾಗಿ ತೊರೆದುಬಿಡಿ. ನಿಮಗೆ ಒಳ್ಳೆಯದಾಗುವುದು. ಸ್ವಲ್ಪವೂ ಸಂಶಯವಿಲ್ಲ.

ಶಂಖಚೂಡಸ್ಯ ವೃತ್ತಾಂತಂ ಸರ್ವಂ ಜಾನಾಮಿ ತತ್ತ್ವತಃ ।
ಕೃಷ್ಣಭಕ್ತಸ್ಯ ಗೋಪಸ್ಯ ಸುದಾಮ್ನಶ್ಚ ಪುರಾ ಪ್ರಭೋ ॥ ೩ ॥

ಮದಾಜ್ಞಯಾ ಹೃಷೀಕೇಶೋ ಕೃಷ್ಣರೂಪಂ ವಿಧಾಯ ಚ ।
ಗೋಶಾಲಾಯಾಂ ಸ್ಥಿತೋ ರಮ್ಯೇ ಗೋಲೋಕೇ ಮದಧಿಷ್ಠಿತೇ ॥ ೪ ॥

ಸ್ವತಂತ್ರೋಽಹಮಿತಿ ಸ್ವಂ ಸ ಮೋಹಂ ಮತ್ವಾ ಗತಃ ಪುರಾ ।
ಕ್ರೀಡಾಸ್ಸಮಕರೋದ್ಬಹ್ವೀಸ್ಸ್ವೈರವರ್ತೀವ ಮೋಹಿತಃ ॥ ೫ ॥

ತಂ ದೃಷ್ಟ್ವಾ ಮೋಹಯುತ್ಯುಗ್ರಂ ತಸ್ಯಾಹಂ ಮಾಯಯಾ ಸ್ವಯಾ ।
ತೇಷಾಂ ಸಂಹೃತ್ಯ ಸದ್ಬುದ್ಧಿಂ ಶಾಪಂ ದಾಪಿತವಾನ್ ಕಿಲ ॥ ೬ ॥

ಇತ್ಥಂ ಕೃತ್ವಾ ಸ್ವಲೀಲಾಂ ತಾಂ ಮಾಯಾಂ ಸಂಹೃತವಾನಹಂ ।
ಜ್ಞಾನಯುಕ್ತಾಸ್ತದಾ ತೇ ತು ಮುಕ್ತಮೋಹಾಸ್ಸುಬುದ್ಧಯಃ ॥ ೭ ॥

---

೩. ಶಂಖಚೂಡನ ವೃತ್ತಾಂತವೆಲ್ಲವನ್ನೂ ಆಮೂಲಾಗ್ರವಾಗಿ ಯಥಾರ್ಥವಾಗಿ ಅರಿತಿರುವೆನು. ಅವನು ಪೂರ್ವಜನ್ಮದಲ್ಲಿ ಶ್ರೀಕೃಷ್ಣಭಕ್ತನಾಗಿದ್ದ ಸುದಾಮನೆಂಬ ಗೊಲ್ಲನಾಗಿದ್ದನು.

೪. ನನ್ನ ಅಪ್ಪಣೆಯಂತೆ, ಹೃಷೀಕೇಶನು (ವಿಷ್ಣುವು) ಕೃಷ್ಣರೂಪವನ್ನು ಧರಿಸಿ, ನನ್ನ ನಿವಾಸವಾದ ರಮಣೀಯವಾದ ಗೋಲೋಕದಲ್ಲಿ ಗೋಶಾಲೆಯಲ್ಲಿ ನೆಲೆಸಿರುವನು.

೫. ಅವನು ತಾನೇ ಸ್ವತಂತ್ರನೆಂಬುದಾಗಿ ಮೋಹಕ್ಕೆ ಒಳಪಟ್ಟು, ಸ್ವೇಚ್ಛಾವಿಹಾರಿಯಂತೆ, ನಾನಾವಿಧವಾದ ವಿಹಾರಗಳನ್ನು ಮಾಡತೊಡಗಿದನು.

೬. ಆ ಕೃಷ್ಣನ ಮೋಹವು ಮಿತಿಮೀರುತ್ತಿರುವುದನ್ನು ಕಂಡು, ನಾನು ನನ್ನ ಮಾಯೆಯನ್ನು ಅವರ ಮೇಲೆ ಬೀರಿ, ಅವರ ಯುಕ್ತಾಯುಕ್ತ ಪರಿಜ್ಞಾನವನ್ನು ಹೋಗಲಾಡಿಸಿ ಅವರವರಿಗೆ ಶಾಪವನ್ನು ಕೊಡಿಸಿದೆನು.

೭. ಈರೀತಿಯಾಗಿ ನನ್ನ ಲೀಲೆಯನ್ನು ತೋರ್ಪಡಿಸಿ, ನಾನು ಬೀಸಿದ್ದ ಮಾಯೆಯನ್ನು ಹಿಂದಕ್ಕೆ ತೆಗೆದುಕೊಂಡೆನು. ಆಗ ಅವರೆಲ್ಲರೂ ತಮ್ಮ ಮೋಹವು ಕಳೆದುಹೋಗಲು ಜ್ಞಾನವನ್ನು ಹೊಂದಿ ವಿವೇಕಿಗಳಾದರು.

ಸಮೀಪಮಾಗತಾಸ್ತೇ ಮೇ ದೀನೀಭೂಯ ಪ್ರಣಮ್ಯ ಮಾಂ ।
ಅಕುರ್ವನ್ಸ್ತುತಿಂ ಭಕ್ತ್ಯಾ ಕರೌ ಬದ್ಧ್ವಾ ವಿನಮ್ರಕಾಃ ॥ ೮ ॥

ವೃತ್ತಾಂತಮವದನ್ಸರ್ವಂ ಲಜ್ಜಾಕುಲಿತಮಾನಸಾಃ ।
ಊಚುರ್ಮತ್ಪುರತೋ ದೀನಾ ರಕ್ಷ ರಕ್ಷೇತಿ ವೈ ಗಿರಃ ॥ ೯ ॥

ತದಾ ತ್ವಹಂ ಭವಸ್ತೇಷಾಂ ಸಂತುಷ್ಟಃ ಪ್ರೋಕ್ತವಾನ್ ವಚಃ ।
ಭಯಂ ತ್ಯಜತ ಹೇ ಕೃಷ್ಣ ಯೂಯಂ ಸರ್ವೇ ಮದಾಜ್ಞಯಾ ॥ ೧೦ ॥

ರಕ್ಷಕೋಽಹಂ ಸದಾ ಪ್ರೀತ್ಯಾ ಸುಭದ್ರಂ ವೋ ಭವಿಷ್ಯತಿ ।
ಮದಿಚ್ಛಯಾಽಖಿಲಂ ಜಾತಮಿದಂ ಸರ್ವಂ ನ ಸಂಶಯಃ ॥ ೧೧ ॥

ಸ್ವಸ್ಥಾನಂ ಗಚ್ಛ ತ್ವಂ ಸಾರ್ಧಂ ರಾಧಯಾ ಪಾರ್ಷದೇನ ಚ ।
ದಾನವಸ್ತು ಭವೇತ್ಸೋಽಯಂ ಭಾರತೇಽತ್ರ ನ ಸಂಶಯಃ ॥ ೧೨ ॥

---

೮. ಬಳಿಕ ಅವರೆಲ್ಲರೂ ದೈನ್ಯದಿಂದ ನನ್ನ ಬಳಿಗೆ ಬಂದು, ಭಕ್ತಿಯಿಂದ ನಮಸ್ಕರಿಸಿ ಬಹು ವಿನೀತರಾಗಿ ನನ್ನನ್ನು ಬಹಳವಾಗಿ ಸ್ತೋತ್ರಮಾಡಿದರು.

೯. ಅವರು ಮನಸ್ಸಿನಲ್ಲಿ ಬಹುವಾಗಿ ನಾಚಿಕೆಪಡುತ್ತಾ, ನಡೆದ ವೃತ್ತಾಂತ ವೆಲ್ಲವನ್ನೂ ಬಿನ್ನವಿಸಿ ಪುನಃ ದೀನತೆಯಿಂದ ನಮ್ಮನ್ನು ಕಾಪಾಡು, ಕಾಪಾಡು ಎಂಬು ದಾಗಿ ನನ್ನ ಮುಂದೆ ಹೇಳಿಕೊಂಡರು.

೧೦. ಆಗ ಅವರೆಲ್ಲರಿಗೂ ಕಾರಣಭೂತನಾದ ನಾನು ಸಂತೋಷದಿಂದ ಅವ ರನ್ನು ಕುರಿತು ಓ ಕೃಷ್ಣ, ನೀವೆಲ್ಲರೂ ಭಯವನ್ನು ತೊರೆದು ನನ್ನ ಅಪ್ಪಣೆಯಂತೆ ಸುಖವಾಗಿರಿ.

೧೧. ನಾನು ನಿಮ್ಮೆಲ್ಲರನ್ನೂ ಸರ್ವದಾ ಪ್ರೀತಿಯಿಂದ ಸಲಹುವೆನು. ನಿಮಗೆ ಮಂಗಳವುಂಟಾಗುವುದು. ಇದೆಲ್ಲವೂ ನನ್ನ ಇಚ್ಛೆಯಂತೆಯೇ ನಡೆಯಿತೆಂದು ಅರಿ ಯಿರಿ. ಸ್ವಲ್ಪವೂ ಸಂಶಯಪಡಬೇಡಿ.

೧೨. ನೀನು ಈ ರಾಧೆಯೊಡನೆಯೂ ಈ ಅನುಚರನೊಡನೆಯೂ ನಿನ್ನ ಜಾಗಕ್ಕೆ ತೆರಳು. ಈ ಪಾರಿಷದನು ಭಾರತಭೂಮಿಯಲ್ಲಿ ದಾನವನಾಗಿ ಹುಟ್ಟುವ ನೆಂಬುದರಲ್ಲಿ ಸಂಶಯವಿಲ್ಲ.

ಶಾಪೋದ್ಧಾರಂ ಕರಿಷ್ಯೇಽಹಂ ಯುವಯೋಸ್ಸಮಯೇ ಖಲು ।
ಮದುಕ್ತಮಿತಿ ಸಂಧಾರ್ಯ ಶಿರಸಾ ರಾಧಯಾ ಸಹ ॥ ೧೩ ॥

ಶ್ರೀಕೃಷ್ಣೋಽಮೋದದತ್ಯಂತಂ ಸ್ವಸ್ಥಾನಮಗಮತ್ಸುಧೀಃ ।
ನ್ಯಷ್ಠಾತಾಂ ಸಭಯಂ ತತ್ರ ಮದಾರಾಧನತತ್ಪರಾ ॥ ೧೪ ॥

ಮತ್ವಾಖಿಲಂ ಮದಧೀನಮಸ್ವತಂತ್ರಂ ನಿಜಂ ಚ ವೈ ।
ಸ ಸುದಾಮ್ಯಾಭವದ್ರಾಧಾಶಾಪತೋ ದಾನವೇಶ್ವರಃ ॥ ೧೫ ॥

ಶಂಖಚೂಡಾಭಿಧೋ ದೇವದ್ರೋಹೀ ಧರ್ಮವಿಚಕ್ಷಣಃ ।
ಕ್ಲಿಶ್ನಾತಿ ಸುಬಲಾನ್ಕೃತ್ಸ್ನಂ ಸದಾ ದೇವಗಣಂ ಕುಧೀಃ ॥ ೧೬ ॥

ಮನ್ಮಾಯಾಮೋಹಿತಸ್ಸೋಽತಿದುಷ್ಟಮಂತ್ರಿಸಹಾಯವಾನ್ ।
ತದ್ಭಯಂ ತ್ಯಜತಾಶ್ವೇವ ಮಯಿ ಶಾಸ್ತರಿ ವೈ ಸತಿ ॥ ೧೭ ॥

---

೧೩-೧೫. ನಾನು, ನಿಮ್ಮೀರ್ವರಿಗೂ ಸಮಯಬಂದಾಗ ಶಾಪವಿಮೋಚನೆಯನ್ನು ಮಾಡುವೆನು ಎಂದು ಹೇಳಲು, ಆ ಮಾತನ್ನು ಶ್ರೀಕೃಷ್ಣನು ರಾಧೆಯೊಡನೆ ಶಿರಸಾವಹಿಸಿ, ಬಹುವಾಗಿ ಸಂತೋಷವನ್ನು ತಳೆದು, ತನ್ನ ನೆಲೆಗೆ ತೆರಳಿದನು. ಬಳಿಕ ಈ ಚರಾಚರ ವಸ್ತುವೆಲ್ಲವೂ ನನ್ನ ಅಧೀನವೆಂದೂ, ತಾನು ಸಹ ಸ್ವತಂತ್ರನಲ್ಲವೆಂದೂ ತಿಳಿದು ಅವರೀರ್ವರೂ ನನ್ನನ್ನು ಆರಾಧಿಸುತ್ತಾ ಅಂದಿನಿಂದ ಭಯಭಕ್ತಿಯಿಂದ ನಡೆದುಕೊಳ್ಳುತ್ತಿರುವರು.

೧೬. ಆ ಕೃಷ್ಣಾನುಚರನು ರಾಧೆಯ ಶಾಪದಿಂದ ಶಂಖಚೂಡನೆಂಬ ಈ ದಾನವೇಂದ್ರನಾಗಿ ಹುಟ್ಟಿ ದೇವತೆಗಳ ದ್ರೋಹಿಯಾಗಿರುವನು. ಅವನು ಧರ್ಮಶೀಲನು. ತನ್ನ ಪರಾಕ್ರಮದಿಂದ ಆ ದುರ್ಮತಿಯು ದೇವತೆಗಳನ್ನೆಲ್ಲಾ ಪೀಡಿಸುತ್ತಿರುವನು.

೧೭. ಅವನು ನನ್ನ ಮಾಯೆಯಿಂದ ಮೋಹಿತನಾಗಿ ದುಷ್ಟರಾದ ಮಂತ್ರಿಗಳ ಸಹಾಯದಿಂದ ಕೊಬ್ಬಿರುವನು. ನಾನು ಪ್ರಭುವಾಗಿರುವಾಗ ನಿಮಗೇನು ಭಯ? ಅವನ ಹೆದರಿಕೆಯನ್ನು ಕೂಡಲೇ ಬಿಟ್ಟುಬಿಡಿರಿ ಎಂದನು.

॥ ಸನತ್ಕುಮಾರ ಉವಾಚ ॥

ಇತ್ಯುಚಿವಾಂಛಿವೋ ಯಾವದ್ಧರಿಬ್ರಹ್ಮಪುರಃ ಕಥಾಂ ।
ಅಭವತ್ತಾವದನ್ಯಚ್ಚ ಚರಿತಂ ತನ್ಮುನೇ ಶೃಣು ॥ ೧೮ ॥

ತಸ್ಮಿನ್ನೇವಾಂತರೇ ಕೃಷ್ಣೋ ರಾಧಯಾ ಪಾರ್ಷದೈಃ ಸಹ ।
ಸದ್ಗೋಪೈರಾಯಯೌ ಶಂಭುಮನುಕೂಲಯಿತುಂ ಪ್ರಭುಂ ॥ ೧೯ ॥

ಪ್ರಭುಂ ಪ್ರಣಮ್ಯ ಸದ್ಭಕ್ತ್ಯಾ ಮಿಲಿತ್ವಾ ಹರಿಮಾದರಾತ್ ।
ಸಂಮತೋ ವಿಧಿನಾ ಪ್ರೀತ್ಯಾ ಸಂತಸ್ಥೌ ಶಿವಶಾಸನಾತ್ ॥ ೨೦ ॥

ತತಃ ಶಂಭುಂ ಪುನರ್ನತ್ವಾ ತುಷ್ಟಾವ ವಿಹಿತಾಂಜಲಿಃ ।
ಶ್ರೀಕೃಷ್ಣೋ ಮೋಹನಿರ್ಮುಕ್ತೋ ಜ್ಞಾತ್ವಾ ತತ್ತ್ವಂ ಶಿವಸ್ಯ ಹಿ ॥ ೨೧ ॥

॥ ಶ್ರೀಕೃಷ್ಣ ಉವಾಚ ॥

ದೇವದೇವ ಮಹಾದೇವ ಪರಬ್ರಹ್ಮ ಸತಾಂ ಗತೇ।
ಕ್ಷಮಸ್ವ ಚಾಪರಾಧಂ ಮೇ ಪ್ರಸೀದ ಪರಮೇಶ್ವರ ॥ ೨೨ ॥

---

೧೮. ಓ ವ್ಯಾಸಮಹರ್ಷಿ, ಈರೀತಿಯಾಗಿ ಶಿವನು ಬ್ರಹ್ಮವಿಷ್ಣುಗಳೊಡನೆ ಮಾತಾಡುತ್ತಿರುವಷ್ಟರಲ್ಲಿ ಅತ್ತಲಾಗಿ ಏನು ನಡೆಯಿತೆಂಬುದನ್ನು ಹೇಳುವೆನು ಕೇಳು.

೧೯. ಆಸಮಯಕ್ಕೆ ಸರಿಯಾಗಿ ಗೋಲೋಕಾಧಿಪತಿಯಾದ ಶ್ರೀಕೃಷ್ಣನು ರಾಧೆಯೊಡನೆಯೂ, ತನ್ನ ಪಾರಿಷದರಾದ ಗೋಪಶ್ರೇಷ್ಠರೊಡನೆಯೂ ಪ್ರಭುವಾದ ಶಿವನ ಅನುಗ್ರಹವನ್ನು ಪಡೆಯಲೋಸುಗ ಅಲ್ಲಿಗೆ ಬಂದನು.

೨೦. ಆ ಕೃಷ್ಣನು ಪ್ರಭುವಾದ ಶಿವನನ್ನು ಬಹು ಭಕ್ತಿಯಿಂದ ನಮಸ್ಕರಿಸಿ, ಹರಿಯನ್ನು ಆದರದಿಂದ ಕಂಡು ಪ್ರೀತಿಯಿಂದ ಬ್ರಹ್ಮನ ಸಮ್ಮತಿಯನ್ನು ಕೈಗೊಂಡು, ಶಿವನ ಅಪ್ಪಣೆಯಂತೆ ಅಲ್ಲಿಯೇ ನಿಂತುಕೊಂಡನು.

೨೧. ಬಳಿಕ ತನ್ನ ಮೋಹವೆಲ್ಲಾ ನೀಗಿ, ಶಿವನ ಸ್ವರೂಪವನ್ನು ಯಥಾರ್ಥವಾಗಿ ಅರಿತ ಶ್ರೀಕೃಷ್ಣನು ಮತ್ತೊಮ್ಮೆ ಶಿವನಿಗೆ ನಮಸ್ಕಾರವನ್ನು ಮಾಡಿ, ಕೈಗಳನ್ನು ಮುಗಿದುಕೊಂಡು ಸ್ತೋತ್ರಮಾಡತೊಡಗಿದನು.

೨೨. ಸತ್ಪುರುಷರಿಗೆ ಏಕಮಾತ್ರ ಅವಲಂಬನನಾದ ಓ ದೇವದೇವ, ಓ ಮಹಾದೇವ, ನೀನು ಪರಬ್ರಹ್ಮಸ್ವರೂಪನು. ನನ್ನ ಅಪರಾಧವನ್ನು ಕ್ಷಮಿಸು, ಓ ಪರಮೇಶ್ವರ, ನನಗೆ ಪ್ರಸನ್ನನಾಗು.

ತ್ವತ್ತಃ ಶರ್ವ ಚ ಸರ್ವಂ ಚ ತ್ವಯಿ ಸರ್ವಂ ಮಹೇಶ್ವರ ।
ಸರ್ವಂ ತ್ವಂ ನಿಖಿಲಾಧೀಶ ಪ್ರಸೀದ ಪರಮೇಶ್ವರ ॥ ೨೩ ॥

ತ್ವಂ ಜ್ಯೋತಿಃ ಪರಮಂ ಸಾಕ್ಷಾತ್ಸರ್ವವ್ಯಾಪೀ ಸನಾತನಃ ।
ತ್ವಯಾ ನಾಥೇನ ಗೌರೀಶ ಸನಾಥಾಸ್ಸಕಲಾ ವಯಂ ॥ ೨೪ ॥

ಸರ್ವೋಪರಿ ನಿಜಂ ಮತ್ವಾ ವಿಹರನ್ಮೋಹಮಾಶ್ರಿತಃ ।
ತತ್ಫಲಂ ಪ್ರಾಪ್ತವಾನಸ್ಮಿ ಶಾಪಂ ಪ್ರಾಪ್ತಸ್ಸವಾಮಕಃ ॥ ೨೫ ॥

ಪಾರ್ಷದಪ್ರವರೋ ಯೋ ಮೇ ಸುದಾಮಾ ನಾಮ ಗೋಪಕಃ ।
ಸ ರಾಧಾಶಾಪತಃ ಸ್ವಾಮಿನ್ದಾನವೀಂ ಯೋನಿಮಾಶ್ರಿತಃ ॥ ೨೬ ॥

ಅಸ್ಮಾನುದ್ಧರ ದುರ್ಗೇಶ ಪ್ರಸೀದ ಪರಮೇಶ್ವರ ।
ಶಾಪೋದ್ಧಾರಂ ಕುರುಷ್ವಾದ್ಯ ಪಾಹಿ ನಶ್ಶರಣಾಗತಾನ್ ॥ ೨೭ ॥

---

೨೩. ಓ ಶರ್ವ, ಸಕಲ ವಸ್ತುವೂ ನಿನ್ನಿಂದಲೇ ಉಂಟಾಗಿರುವುದು. ಆ ವಸ್ತುವೆಲ್ಲವೂ ನಿನ್ನಲ್ಲಿಯೇ ಅಡಗಿರುವುದು. ಆ ವಸ್ತುವೆಲ್ಲವೂ ನೀನೇ ಎಂದು ತಿಳಿದಿರುವೆನು. ಪ್ರಸನ್ನನಾಗು.

೨೪. ಓ ಗೌರೀವಲ್ಲಭ, ನೀನೇ ಸಾಕ್ಷಾತ್ಪರಂಜ್ಯೋತಿಯು, ನೀನೇ ಸರ್ವವ್ಯಾಪಿಯು, ನೀನೇ ಸನಾತನನು. ನೀನು ನಮಗೆ ಒಡೆಯನಾಗಿರುವುದರಿಂದಲೇ ನಾವೆಲ್ಲರೂ ಸನಾಥರಾದೆವು.

೨೫. ನಾನು ಮೋಹಕ್ಕೆ ಒಳಗಾಗಿ, ಎಲ್ಲರಿಗಿಂತಲೂ ನಾನೇ ಮೇಲೆಂಬುದಾಗಿ ಭಾವಿಸಿ ವಿಹರಿಸುತ್ತಿದ್ದೆನು. ಈಗ ನಾನು ನನ್ನ ಮಡದಿಯೊಡನೆ ಶಾಪಕ್ಕೆ ಒಳಗಾಗಿ ಆ ಮೋಹದ ಫಲವನ್ನು ಅನುಭವಿಸಿದೆನು.

೨೬. ನನ್ನ ಪಾರಿಷದರಲ್ಲಿ ಅಗ್ರಗಣ್ಯನಾದ ಸುದಾಮನೆಂಬ ಗೋಪಾಲಕನು, ರಾಧೆಯ ಶಾಪಕ್ಕೆ ಸಿಲುಕಿ ದಾನವ ಜಾತಿಯಲ್ಲಿ ಜನಿಸಿರುವನು.

೨೭. ಎಲೈ ದುರ್ಗಾನಾಥನೇ, ನಮ್ಮನ್ನು ಉದ್ಧಾರಮಾಡು. ಓ ಪರಮೇಶ್ವರ, ನಮ್ಮಲ್ಲಿ ಪ್ರಸನ್ನನಾಗು. ನಮಗೆ ಒದಗಿರುವ ಈ ಶಾಪಕ್ಕೆ ಪರಿಹಾರವನ್ನು ತಿಳಿಸು, ನಿನ್ನನ್ನೇ ಮರೆಹೊಕ್ಕಿರುವ ನಮ್ಮನ್ನು ಕಾಪಾಡು ಎಂದನು.

ಇತ್ಯುಕ್ತ್ವಾ ವಿರರಾಮೈವ ಶ್ರೀಕೃಷ್ಣೋ ರಾಧಯಾ ಸಹ ।
ಪ್ರಸನ್ನೋಽಭೂಚ್ಛಿವಸ್ತತ್ರ ಶರಣಾಗತವತ್ಸಲಃ ॥ ೨೮ ॥

॥ ಶ್ರೀಶಿವ ಉವಾಚ ॥

ಹೇ ಕೃಷ್ಣ ಗೋಪಿಕಾನಾಥ ಭಯಂ ತ್ಯಜ ಸುಖೀ ಭವ ।
ಮಯಾನುಗೃಹ್ಣತಾ ತಾತ ಸರ್ವಮಾಚರಿತಂ ತ್ವಿದಂ ॥ ೨೯ ॥

ಸಂಭವಿಷ್ಯತಿ ತೇ ಭದ್ರಂ ಗಚ್ಛ ಸ್ವಸ್ಥಾನಮುತ್ತಮಂ ।
ಸ್ಥಾತವ್ಯಂ ಸ್ವಾಧಿಕಾರೇ ಚ ಸಾವಧಾನತಯಾ ಸದಾ ॥ ೩೦ ॥

ವಿಹರಸ್ವ ಯಥಾಕಾಮಂ ಮಾಂ ವಿಜ್ಞಾಯ ಪರಾತ್ಪರಂ ।
ಸ್ವಕಾರ್ಯಂ ಕುರು ನಿರ್ವ್ಯಗ್ರಂ ರಾಧಯಾ ಪಾರ್ಷದೈಃ ಖಲು ॥ ೩೧ ॥

ವಾರಾಹೇ ಪ್ರವರೇ ಕಲ್ಪೇ ತರುಣ್ಯಾ ರಾಧಯಾ ಸಹ ।
ಶಾಪಪ್ರಭಾವಂ ಭುಕ್ತ್ವಾ ವೈ ಪುನರಾಯಾಸ್ಯತಿ ಸ್ವಕಂ ॥ ೩೨ ॥

---

೨೮. ಈರೀತಿಯಾಗಿ ಶ್ರೀಕೃಷ್ಣನು ರಾಧೆಯೊಡನೆ ಬಿನ್ನವಿಸಿ ಸುಮ್ಮನಾಗಲು ಶರಣಾಗತರಲ್ಲಿ ವಾತ್ಸಲ್ಯವುಳ್ಳ ಆ ಶಂಕರನು ಪ್ರಸನ್ನನಾದನು.

೨೯. ಬಳಿಕ ಗೋಪಿಕಾವಲ್ಲಭನಾದ ಶ್ರೀಕೃಷ್ಣನನ್ನು ಕುರಿತು, ಅಪ್ಪಾ, ಹೆದರ ಬೇಡ, ಸುಖವಾಗಿರು. ನಿಮ್ಮ ವಿಷಯದಲ್ಲಿ ಅನುಗ್ರಹಬುದ್ಧಿಯಿಂದಲೇ ನಾನು ಇದೆಲ್ಲ ವನ್ನೂ ಮಾಡಿದೆನು.

೩೦. ನಿನಗೆ ಒಳ್ಳೆಯದಾಗುವುದು. ನಿನ್ನ ನಿವಾಸಕ್ಕೆ ಹಿಂದಿರುಗು. ನೀನು ನಿನ್ನ ಅಧಿಕಾರದಲ್ಲಿ ಯಾವಾಗಲೂ ಎಚ್ಚರಿಕೆಯಿಂದ ನಡೆದುಕೊಳ್ಳುತ್ತಿರು.

೩೧. ಶಿವನೇ ಎಲ್ಲರಿಗಿಂತಲೂ ಮೇಲಾದದನೆಂಬುದಾಗಿ ತಿಳಿದುಕೊಂಡು, ರಾಧೆಯೊಡನೆಯೂ ಅನುಚರರೊಡನೆಯೂ, ನಿನ್ನ ಇಷ್ಟಬಂದಂತೆ ವಿಹರಿಸುತ್ತಾ ನಿನ್ನ ಕೆಲಸವನ್ನು ಯಾವೊಂದು ಕೊರತೆಯೂ ಇಲ್ಲದಂತೆ ನೆರವೇರಿಸುತ್ತಿರು.

೩೨. ಶ್ರೇಷ್ಠವಾದ ಶ್ವೇತವರಾಹ ಕಲ್ಪದಲ್ಲಿ ನಿನ್ನ ಪ್ರಿಯೆಯಾದ ಈ ರಾಧೆಯೊಡನೆ ಶಾಪದ ಫಲವನ್ನು ಅನುಭವಿಸಿದ ಬಳಿಕ ಮರಳಿ ನಿನ್ನ ಲೋಕವನ್ನೇ ಹೊಂದುವೆ.

ಸುದಾಮಾ ಪಾರ್ಷದೋ ಯೋ ಹಿ ತವ ಕೃಷ್ಣ ಪ್ರಿಯಪ್ರಿಯಃ ।
ದಾನವೀಂ ಯೋನಿಮಾಶ್ರಿತ್ಯೇದಾನೀಂ ಕ್ಲಿಶ್ನಾತಿ ವೈ ಜಗತ್ ॥ ೩೩ ॥

ಶಾಪಪ್ರಭಾವಾದ್ರಾಧಾಯಾ ದೇವಶತ್ರುಶ್ಚ ದಾನವಃ ।
ಶಂಖಚೂಡಾಭಿಧಸ್ಸೋಽತಿ ದೈತ್ಯಪಕ್ಷೀ ಸುರದ್ರುಹಃ ॥ ೩೪ ॥

ತೇನ ನಿಸ್ಸಾರಿತಾ ದೇವಾಸ್ಸೇಂದ್ರಾ ನಿತ್ಯಂ ಪ್ರಪೀಡಿತಾಃ ।
ಹೃತಾಧಿಕಾರಾ ವಿಕೃತಾಸ್ಸರ್ವೇ ಯಾತಾ ದಿಶೋ ದಶ ॥ ೩೫ ॥

ಬ್ರಹ್ಮಾಚ್ಯುತೌ ತದರ್ಥೇ ಹೀಹಾಗತೌ ಶರಣಂ ಮಮ ।
ತೇಷಾಂ ಕ್ಲೇಶವಿನಿರ್ಮೋಕ್ಷಂ ಕರಿಷ್ಯೇ ನಾತ್ರ ಶಂಶಯಃ ॥ ೩೬ ॥

---

೩೩. ಎಲೈ ಕೃಷ್ಣನೇ, ನಿನ್ನ ಪಾರಿಷದರಲ್ಲಿ ನಿನಗೆ ಅತ್ಯಂತ ಆಪ್ತನಾಗಿದ್ದ ಸುದಾಮನೆಂಬ ಗೋಪಾಲಕನು ರಾಧೆಯ ಶಾಪಕ್ಕೆ ಈಡಾಗಿರಲಿಲ್ಲವೇ? ಅವನು ಈಗ ದಾನವನಾಗಿ ಹುಟ್ಟಿ ಪ್ರಪಂಚವನ್ನು ಪೀಡಿಸುತ್ತಿರುವವನು.

೩೪. ರಾಧೆಯ ಆ ಶಾಪಪ್ರಭಾವದಿಂದಲೇ, ಅವನು ಶಂಖಚೂಡನೆಂಬ ದಾನವನಾಗಿ ಹುಟ್ಟಿ, ದೈತ್ಯರಲ್ಲಿ ಅತ್ಯಧಿಕವಾದ ಪಕ್ಷಪಾತವನ್ನು ತೋರುತ್ತಾ, ದೇವತೆಗಳಲ್ಲಿ ದ್ವೇಷವನ್ನು ಸಾಧಿಸುತ್ತಿರುವವನು.

೩೫. ಆ ಶಂಖಚೂಡನು, ಇಂದ್ರಾದಿದೇವತೆಗಳ ಅಧಿಕಾರಗಳನ್ನೆಲ್ಲಾ ಕಸಿದುಕೊಂಡು, ಅವರ ಜಾಗದಿಂದ ಅವರನ್ನು ಓಡಿಸಿಬಿಟ್ಟಿರುವನು. ಹೀಗೆ ಅವರೆಲ್ಲರೂ ನಿತ್ಯವೂ ಅವನ ಕೋಟಲೆಗೆ ಒಳಪಟ್ಟು ದುಃಖಕ್ಕೆ ಈಡಾಗಿ ದಿಕ್ಕುದಿಕ್ಕಿಗೂ ಚೆದುರಿ ಹೋಗಿರುವರು.

೩೬. ಆದುದರಿಂದಲೇ, ಈ ಬ್ರಹ್ಮನೂ, ಹರಿಯೂ ಇಲ್ಲಿಗೆ ಬಂದು, ನನ್ನನ್ನು ಮರೆಹೊಕ್ಕಿರುವರು. ನಾನು ಅವರಿಗೆ ಒದಗಿರುವ ಈ ಸಂಕಟವನ್ನು ನಿಸ್ಸಂಶಯವಾಗಿ ಪರಿಹರಿಸುವೆನು ಎಂದು ನುಡಿದನು.

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಶಂಕರಃ ಕೃಷ್ಣಂ ಪುನಃ ಪ್ರೋವಾಚ ಸಾದರಂ ।
ಹರಿಂ ವಿಧಿಂ ಸಮಾಭಾಷ್ಯ ವಚನಂ ಕ್ಲೇಶನಾಶನಂ ॥ ೩೭ ॥

॥ ಶಿವ ಉವಾಚ ॥

ಹೇ ಹರೇ ಹೇ ವಿಧೇ ಪ್ರೀತ್ಯಾ ಮಮೇದಂ ವಚನಂ ಶೃಣು ।
ಗಚ್ಛತಂ ತ್ವರಿತಂ ತಾತೌ ದೇವಾನಂದಾಯ ನಿರ್ಭಯಂ ॥ ೩೮ ॥

ಕೈಲಾಸವಾಸಿನಂ ರುದ್ರಂ ಮದ್ರೂಪಂ ಪೂರ್ಣಮುತ್ತಮಂ ।
ದೇವಕಾರ್ಯಾರ್ಥಮುದ್ಭೂತಂ ಪೃಥಗಾಕೃತಿಧಾರಿಣಂ ॥ ೩೯ ॥

ಏತದರ್ಥೇ ಹಿ ಮದ್ರೂಪಃ ಪರಿಪೂರ್ಣತಮಃ ಪ್ರಭುಃ ।
ಕೈಲಾಸೇ ಭಕ್ತವಶತಸ್ಸಂತಿಷ್ಠತಿ ಗಿರೌ ಹರೇ ॥ ೪೦ ॥

ಮತ್ತಸ್ತ್ವತ್ತೋ ನ ಭೇದೋಽಸ್ತಿ ಯುವಯೋಸ್ಸೇವ್ಯ ಏವ ಸಃ ।
ಚರಾಚರಾಣಾಂ ಸರ್ವೇಷಾಂ ಸುರಾದೀನಾಂ ಚ ಸರ್ವದಾ ॥ ೪೧ ॥

---

೩೭. ಓ ವ್ಯಾಸ, ಈರೀತಿಯಾಗಿ ಶಿವನು ಕೃಷ್ಣನಿಗೆ ಹೇಳಿ, ಮತ್ತೆ ಆದರದಿಂದ ಬ್ರಹ್ಮನನ್ನು ವಿಷ್ಣುವನ್ನು ಕರೆದು ಮಾತನಾಡಿಸಿ, ಅವರ ಸಂಕಟವನ್ನು ಪರಿಹರಿಸುವಂತಹ ಈ ಮಾತನ್ನು ನುಡಿದನು.

೩೮-೩೯. ಎಲೈ ಹರಿವಿಧಿಗಳಿರ, ಪ್ರೀತಿಯಿಂದ ನನ್ನ ಮಾತನ್ನು ಆಲಿಸಿರಿ. ನೀವು ನಿಮ್ಮ ಭಯವನ್ನು ತೊರೆಯಿರಿ. ದೇವತೆಗಳಿಗೆ ಆನಂದವುಂಟಾಗಲು, ಇಲ್ಲಿಂದ ನೀವು ಕೈಲಾಸಕ್ಕೆ ತೆರಳಿರಿ. ಅಲ್ಲಿ ನನ್ನ ಪರಿಪೂರ್ಣಸ್ವರೂಪನಾದ ರುದ್ರನು ವಾಸಿಸುತ್ತಿರುವನು. ಆತನು ಬಹು ಶ್ರೇಷ್ಠನು. ದೇವತೆಗಳ ಕಾರ್ಯವನ್ನು ನೆರವೇರಿಸಲೋಸುಗವೇ ಬೇರೆಯಾದ ಆಕೃತಿಯನ್ನು ತಾಳಿ ಆತನು ಉದ್ಭವಿಸಿರುವನು.

೪೦. ಓ ಹರಿ, ಈ ದೇವಕಾರ್ಯದ ಸಲುವಾಗಿಯೇ ನನ್ನ ಪರಿಪೂರ್ಣಾಂಶನಾದ ಆ ಪ್ರಭುವು ಭಕ್ತಪರಾಧೀನನಾಗಿ ಆ ಕೈಲಾಸಪರ್ವತದಲ್ಲಿ ನೆಲಸಿರುವನು.

೪೧. ನನಗೂ ಆತನಿಗೂ ಭೇದವಿಲ್ಲ. ಅದರಂತೆಯೇ ನಿನಗೂ ಆತನಿಗೂ ಭೇದವಿಲ್ಲ. ಆತನು, ನಿನಗೂ ಬ್ರಹ್ಮನಿಗೂ ಸೇವ್ಯನಾಗಿರುವನು ಆತನನ್ನು ದೇವತೆಗಳೇ ಮೊದಲಾಗಿ, ಈ ಎಲ್ಲ ಚರಾಚರಾತ್ಮಕ ವಸ್ತುಗಳೂ ಸರ್ವದಾ ಸೇವಿಸುತ್ತಿರುವುವು.

ಆವಯೋರ್ಭೇದಕರ್ತಾ ಯಸ್ಸ ನರೋ ನರಕಂ ವ್ರಜೇತ್ ।
ಇಹಾಪಿ ಪ್ರಾಪ್ನುಯಾತ್ಕಷ್ಟಂ ಪುತ್ರಪೌತ್ರವಿವರ್ಜಿತಃ ॥ ೪೨ ॥

ಇತ್ಯುಕ್ತೇವಂತಂ ದುರ್ಗೇಶಂ ಪ್ರಣಮ್ಯ ಚ ಮುಹುರ್ಮುಹುಃ ।
ರಾಧಯಾ ಸಹಿತಃ ಕೃಷ್ಣಃ ಸ್ವಸ್ಥಾನಂ ಸಗಣೋ ಯಯೌ ॥ ೪೩ ॥

ಹರಿರ್ಬ್ರಹ್ಮಾ ಚ ತೌ ವ್ಯಾಸ ಸಾನಂದೌ ಗತಸಾಧ್ವಸೌ ।
ಮುಹುರ್ಮುಹುಃ ಪ್ರಣಮ್ಯೇಶಂ ವೈಕುಂಠಂ ಯಯತುರ್ದ್ರುತಂ ॥ ೪೪ ॥

ತತ್ರಾಗತ್ಯಾಖಿಲಾ ವೃತ್ತಂ ದೇವೇಭ್ಯೋ ವಿನಿವೇದ್ಯ ತೌ ।
ತಾನಾದಾಯ ಬ್ರಹ್ಮವಿಷ್ಣೂ ಕೈಲಾಸಂ ಯಯತುರ್ಗಿರಿಂ ॥ ೪೫ ॥

ತತ್ರ ದೃಷ್ಟ್ವಾ ಮಹೇಶಾನಂ ಪಾರ್ವತೀಂ ವಲ್ಲಭಂ ಪ್ರಭುಂ ।
ದೀನರಕ್ಷಾತ್ತದೇಹಂ ಚ ಸಗುಣಂ ದೇವನಾಯಕಂ ॥ ೪೬ ॥

---

೪೨. ನಮ್ಮೀರ್ವರಲ್ಲಿ ಯಾವ ಮನುಜನು ಭೇದವನ್ನು ಎಣಿಸುವನೋ, ಅವನು ನರಭಾಗಿಯಾಗುವುದಲ್ಲದೆ, ಈ ಜನ್ಮದಲ್ಲಿಯೂ ಮಕ್ಕಳು ಮೊಮ್ಮಕ್ಕಳು ಗಳನ್ನು ಕಳೆದುಕೊಂಡು ಬಹುವಾಗಿ ಕಷ್ಟವನ್ನು ಅನುಭವಿಸುವನು.

೪೩. ಈರೀತಿಯಾಗಿ, ದುರ್ಗೆಯ ವಲ್ಲಭನಾದ ಶ್ರೀಶಿವನು ನುಡಿಯಲು, ಶ್ರೀಕೃಷ್ಣನು ರಾಧೆಯೊಡನೆ, ಆತನನ್ನು ಮತ್ತೆ ಮತ್ತೆ ನಮಸ್ಕರಿಸಿ, ತನ್ನ ಪರಿವಾರ ಸಮೇತನಾಗಿ ತನ್ನ ನಿವಾಸಕ್ಕೆ ಹಿಂತಿರುಗಿದನು.

೪೪-೪೫. ಬಳಿಕ ಆ ಬ್ರಹ್ಮನೂ, ವಿಷ್ಣುವೂ, ತಮ್ಮ ಹೆದರಿಕೆಯನ್ನು ತೊರೆದು, ಮಹಾನಂದಭರಿತರಾಗಿ, ಆ ಸರ್ವೇಶನನ್ನು ಬಾರಿಬಾರಿಗೂ ನಮಸ್ಕರಿಸಿ, ಬೇಗನೆ ವೈಕುಂಠಕ್ಕೆ ಬಂದು, ಅಲ್ಲಿ ಇದ್ದ ದೇವತೆಗಳೆಲ್ಲರಿಗೂ, ಶಿವನ ಸನ್ನಿಧಿಯಲ್ಲಿ ನಡೆದ ಸಂಗತಿಯೆಲ್ಲವನ್ನೂ ತಿಳಿಯಪಡಿಸಿ, ಆ ದೇವತೆಗಳೆಲ್ಲರನ್ನೂ ಕರೆದುಕೊಂಡು ಬ್ರಹ್ಮವಿಷ್ಣುಗಳು ಕೈಲಾಸಪರ್ವತಕ್ಕೆ ಹೊರಟರು.

೪೬-೪೭. ಅಲ್ಲಿ ದೀನರನ್ನು ಸಲಹಲೋಸುಗವೇ, ಗುಣವಶನಾಗಿ, ದೇಹ ವನ್ನು ಧರಿಸಿರುವ, ಪ್ರಭುವೂ, ದೇವತೆಗಳ ಒಡೆಯನೂ, ಪಾರ್ವತೀಪತಿಯೂ ಆದ

ತುಷ್ಟುವುಃ ಪೂರ್ವವತ್ಸರ್ವೇ ಭಕ್ತ್ಯಾ ಗದ್ಗದಯಾ ಗಿರಾ ।
ಕರೌ ಬಧ್ವಾ ನತಸ್ಕಂಧಾ ವಿನಯೇನ ಸಮನ್ವಿತಾಃ ॥ ೪೭ ॥

॥ ದೇವಾ ಊಚುಃ ॥

ದೇವದೇವ ಮಹಾದೇವ ಗಿರಿಜಾನಾಥ ಶಂಕರ ।
ವಯಂ ತ್ವಾಂ ಶರಣಾಪನ್ನಾ ರಕ್ಷ ದೇವಾನ್ಭಯಾಕುಲಾನ್ ॥ ೪೮ ॥

ಶಂಖಚೂಡಂ ದಾನವೇಂದ್ರಂ ಜಹಿ ದೇವನಿಷೂದನಂ ।
ತೇನ ವಿಕ್ಲಾವಿತಾ ದೇವಾಃ ಸಂಗ್ರಾಮೇ ಚ ಪರಾಜಿತಾಃ ॥ ೪೯ ॥

ಹೃತಾಧಿಕಾರಾಃ ಕುತಲೇ ವಿಚರಂತಿ ಯಥಾ ನರಾಃ ।
ದೇವಲೋಕೋ ಹಿ ದುರ್ದೃಶ್ಯಸ್ತೇಷಾಮಾಸೀಚ್ಚ ತದ್ಭಯಾತ್ ॥ ೫೦ ॥

---

ಮಹೇಶ್ವರನನ್ನು ಕಂಡು, ಮೊದಲಿನಂತೆ, ಭಕ್ತಿಪರವಶರಾಗಿ, ಬಹು ವಿನಯದಿಂದ ಕೈಗಳನ್ನು ಕಟ್ಟಿಕೊಂಡು ತಲೆಬಾಗಿ ಗದ್ಗದ ವಾಣಿಯಿಂದ ಆತನನ್ನು ಸ್ತುತಿಸ ತೊಡಗಿದರು.

೪೮. ಎಲೈ ದೇವದೇವನೇ, ಮಹಾದೇವನೇ, ಗಿರಿಜಾನಾಥನೇ, ಶಂಕರನೇ, ನಾವು ನಿನ್ನನ್ನು ಮರೆಹೊಕ್ಕಿರುವೆವು. ಭಯದಿಂದ ತಲ್ಲಣಿಸುತ್ತಿರುವ ನಮ್ಮನ್ನು ಕಾಪಾಡು.

೪೯. ದೇವತೆಗಳ ಹುಟ್ಟನ್ನೇ ಅಡಗಿಸುತ್ತಿರುವ ದಾನವಾಧಿಪತಿಯಾದ ಶಂಖಚೂಡನನ್ನು ನಿಗ್ರಹಿಸು. ಅವನ ಭಯದಿಂದ ತತ್ತಳಿಸುತ್ತಾ ದೇವತೆಗಳು ಯುದ್ಧದಲ್ಲಿಯೂ ಸೋತೋಡಿ ಹೋಗಿರುವರು.

೫೦. ಆ ಶಂಖಚೂಡನು, ಅವರ ಅಧಿಕಾರಗಳೆಲ್ಲವನ್ನೂ ಅಪಹರಿಸಿಬಿಟ್ಟಿರುವುದರಿಂದ ಆ ದೇವತೆಗಳು, ಭೂಲೋಕದಲ್ಲಿ, ಮನುಷ್ಯರಂತೆ ಅಲೆಯುತ್ತಿರುವರು. ಅವನ ಹೆದರಿಕೆಯಿಂದಲೇ ತಮ್ಮ ನಿವಾಸವಾದ ದೇವಲೋಕವನ್ನು ಅವರು ಕಣ್ಣಿಂದಲೂ ನೋಡದಂತೆ ಆಗಿಬಿಟ್ಟಿರುವುದು.

ದೀನೋದ್ಧರ ಕೃಪಾಸಿಂಧೋ ದೇವಾನುದ್ಧರ ಸಂಕಟಾತ್ ।
ಶಕ್ರಂ ಭಯಾನ್ಮಹೇಶಾನ ಹತ್ವಾ ತಂ ದಾನವಾಧಿಪಂ ॥ ೫೧ ॥

ಇತಿ ಶ್ರುತ್ವಾ ವಚಶ್ಶಂಭುರ್ದೇವಾನಾಂ ಭಕ್ತವತ್ಸಲಃ ।
ಉವಾಚ ವಿಹಸನ್ವಾಣ್ಯಾ ಮೇಘನಾದಗಭೀರಯಾ ॥ ೫೨ ॥

॥ ಶ್ರೀಶಂಕರ ಉವಾಚ ॥

ಹೇ ಹರೇ ಹೇ ವಿಧೇ ದೇವಾಃ ಸ್ವಸ್ಥಾನಂ ಗಚ್ಛತ ಧ್ರುವಂ ।
ಶಂಖಚೂಡಂ ವಧಿಷ್ಯಾಮಿ ಸಗಣಂ ನಾತ್ರ ಸಂಶಯಃ ॥ ೫೩ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ಮಹೇಶಸ್ಯ ವಚಃ ಪೀಯೂಷಸನ್ನಿಭಂ ।
ತೇ ಸರ್ವೇ ಪ್ರಮುದಾ ಹ್ಯಾಸನ್ನಷ್ಟಂ ಮತ್ವಾ ಚ ದಾನವಂ ॥ ೫೪ ॥

---

೫೧. ಓ ದೀನರಕ್ಷಕ, ನೀನು ಕರುಣಾಸಾಗರನು, ಓ ಮಹೇಶ್ವರ, ಆ ದಾನವೇಶ್ವರನನ್ನು ಸಂಹರಿಸಿ, ನಮ್ಮನ್ನು ಈ ಕಷ್ಟದಿಂದ ಪಾರುಮಾಡು. ಈ ಇಂದ್ರನನ್ನು ಆತನ ಭಯದಿಂದ ದೂರಗೊಳಿಸು ಎಂದು ಪ್ರಾರ್ಥಿಸಿದರು.

೫೨. ಈರೀತಿಯಾಗಿ ದೇವತೆಗಳೆಲ್ಲರೂ ಆಡಿದುದನ್ನು ಕೇಳಿ, ಭಕ್ತರಲ್ಲಿ ವಾತ್ಸಲ್ಯವುಳ್ಳ ಆ ಶಂಭುವು ನಸುನಕ್ಕು ಮೇಘದಂತೆ ಗಂಭೀರವಾದ ಧ್ವನಿಯಿಂದ ಅವರನ್ನು ಕುರಿತು ಇಂತೆಂದನು.

೫೩. ಎಲೈ ಬ್ರಹ್ಮವಿಷ್ಣುಗಳಿರಾ, ಓ ದೇವತೆಗಳೇ, ನೀವು ನಿಮ್ಮ ನಿವಾಸಗಳಿಗೆ ಹಿಂದಿರುಗಿರಿ. ಖಂಡಿತವಾಗಿಯೂ ಆ ಶಂಖಚೂಡನನ್ನು ಅವನ ಪರಿವಾರದೊಡನೆ ಸಂಹರಿಸುವೆನು. ಸ್ವಲ್ಪವೂ ಸಂಶಯಪಡಬೇಡಿ ಎಂದನು.

೫೪. ಸನತ್ಕುಮಾರನಿಂತೆಂದನು :—ಓ ವ್ಯಾಸ, ಈರೀತಿ ಮಹೇಶ್ವರನು ನುಡಿದ ಅಮೃತದಂತೆ ಪ್ರಿಯವಾದ ಮಾತನ್ನು ಕೇಳಿ, ಆ ದೇವತೆಗಳೆಲ್ಲರೂ ಶಂಖಚೂಡನು ಸತ್ತನೆಂದೇ ತಿಳಿದು ಬಹಳ ಸಂತೋಷವನ್ನು ತಾಳಿದರು.

ಹರಿರ್ಜಗಾಮ ವೈಕುಂಠಂ ಸತ್ಯಲೋಕೇ ವಿಧಿಸ್ತದಾ ।
ಪ್ರಣಿಪತ್ಯ ಮಹೇಶಂ ಚ ಸುರಾದ್ಯಾಃ ಸ್ವಪದಂ ಯಯುಃ ॥ ೫೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡವಧೇ ಶಿವೋಪದೇಶೋ
ನಾಮ್ನೈಕತ್ರಿಂಶೋಽಧ್ಯಾಯಃ

---

೫೫. ಬಳಿಕ ಶಿವನನ್ನು ನಮಸ್ಕರಿಸಿ ವಿಷ್ಣುವು ವೈಕುಂಠಕ್ಕೆ ತೆರಳಿದನು. ಬ್ರಹ್ಮನು ಸತ್ಯಲೋಕಕ್ಕೆ ಹೊರಟನು. ದೇವತೆಗಳೆಲ್ಲರೂ ತಮ್ಮ ತಮ್ಮ ನೆಲೆಗಳಿಗೆ ಪಯಣಬೆಳಸಿದರು.

ಇಲ್ಲಿಗೆ ಶ್ರೀಶಿವಮಹಾಪುರಾಣದಲ್ಲಿ ಎರಡನೆಯದಾದ ರುದ್ರಸಂಹಿತೆಯೊಳಗಣ
ಐದನೆಯ ಯುದ್ಧಖಂಡದಲ್ಲಿ ಶಂಖಚೂಡವಧೋಪಾಖ್ಯಾನದಲ್ಲಿ
ಶಿವೋಪದೇಶ ವರ್ಣನವೆಂಬ ಮೂವತ್ತೊಂದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ದ್ವಾತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಅಥೇಶಾನೋ ಮಹಾರುದ್ರೋ ದುಷ್ಟಕಾಲಸ್ಸತಾಂ ಗತಿಃ ।
ಶಂಖಚೂಡವಧಂ ಚಿತ್ತೇ ನಿಶ್ಚಿಕಾಯ ಸುರೇಚ್ಛಯಾ ॥ ೧ ॥

ದೂತಂ ಕೃತ್ವಾ ಚಿತ್ರರಥಂ ಗಂಧರ್ವೇಶ್ವರಮೀಪ್ಸಿತಂ ।
ಶೀಘ್ರಂ ಪ್ರಸ್ಥಾಪಯಾಮಾಸ ಶಂಖಚೂಡಾಂತಿಕೇ ಮುದಾ ॥ ೨ ॥

ಸರ್ವೇಶ್ವರಾಜ್ಞಯಾ ದೂತೋ ಯಯೌ ತನ್ನಗರಂ ಚ ಸಃ ।
ಮಹೇಂದ್ರನಗರೋತ್ಕೃಷ್ಟಂ ಕುಬೇರಭವನಾಧಿಕಂ ॥ ೩ ॥

---

### ಮೂವತ್ತೆರಡನೆಯ ಅಧ್ಯಾಯವು.

೧-೨. ಸನತ್ಕುಮಾರನು ಹೇಳತೊಡಗಿದನು :—ಬಳಿಕ ದುಷ್ಟರಿಗೆ ಯಮ ಸ್ವರೂಪನೂ, ಶಿಷ್ಟರಿಗೆ ಆಶ್ರಯಭೂತನೂ, ಸರ್ವೇಶ್ವರನೂ ಆದ ಆ ಮಹಾರುದ್ರನು ದೇವತೆಗಳ ಅಪೇಕ್ಷೆಯಂತೆ ಶಂಖಚೂಡನನ್ನು ಕೊಲ್ಲಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿ ತನಗೆ ಆಪ್ತನಾದ ಚಿತ್ರರಥನೆಂಬ ಗಂಧರ್ವರಾಜನನ್ನು ಶಂಖಚೂಡನ ಬಳಿಗೆ ದೂತನಾಗಿ ಹೋಗುವಂತೆ ಬೇಗನೆ ಕಳುಹಿಸಿದನು.

೩. ಆಗ ಸರ್ವೇಶ್ವರನಾದ ಶಿವನ ಅಪ್ಪಣೆಯಂತೆ ದೌತ್ಯವನ್ನು ವಹಿಸಿ ಆ ಚಿತ್ರರಥನು ದೇವೇಂದ್ರನ ಅಮರಾವತಿಯನ್ನೂ ಕುಬೇರನ ಅಲಕಾನಗರಿಯನ್ನೂ ವೈಭವದಲ್ಲಿ ಮೀರಿಸಿರುವ ಆ ಶಂಖಚೂಡನ ಪಟ್ಟಣಕ್ಕೆ ಹೊರಟನು.

ಗತ್ವಾ ದದರ್ಶ ತನ್ಮಧ್ಯೇ ಶಂಖಚೂಡಾಲಯಂ ವರಂ ।
ರಾಜಿತಂ ದ್ವಾದಶೈರ್ದ್ವಾರೈರ್ದ್ವಾರಪಾಲಸಮನ್ವಿತಂ ॥ ೪ ॥

ಸ ದೃಷ್ಟ್ವಾ ಪುಷ್ಪದಂತಸ್ತು ವರಂ ದ್ವಾರಂ ದದರ್ಶ ಸಃ ।
ಕಥಯಾಮಾಸ ವೃತ್ತಾಂತಂ ದ್ವಾರಪಾಲಾಯ ನಿರ್ಭಯಃ ॥ ೫ ॥

ಅತಿಕ್ರಮ್ಯ ಚ ತದ್ದ್ವಾರಂ ಜಗಾಮಾಭ್ಯಂತರೇ ಮುದಾ ।
ಅತೀವ ಸುಂದರಂ ರಮ್ಯಂ ವಿಸ್ತೀರ್ಣಂ ಸಮಲಂಕೃತಂ ॥ ೬ ॥

ಸ ಗತ್ವಾ ಶಂಖಚೂಡಂ ತಂ ದದರ್ಶ ದನುಜಾಧಿಪಂ ।
ವೀರಮಂಡಲಮಧ್ಯಸ್ಥಂ ರತ್ನಸಿಂಹಾಸನಸ್ಥಿತಂ ॥ ೭ ॥

ದಾನವೇಂದ್ರೈಃ ಪರಿವೃತಂ ಸೇವಿತಂ ಚ ತ್ರಿಕೋಟಿಭಿಃ ।
ಶತಕೋಟಿಭಿರನ್ಯೈಶ್ಚ ಭ್ರಮದ್ಭಿಶ್ಶಸ್ತ್ರಪಾಣಿಭಿಃ ॥ ೮ ॥

---

೪. ಆ ಪಟ್ಟಣವನ್ನು ಸೇರಿದ ಬಳಿಕ ಅದರ ನಡುವೆ ಶೋಭಿಸುತ್ತಿರುವ ಶ್ರೇಷ್ಠವಾದ ಶಂಖಚೂಡನ ಅರಮನೆಯನ್ನು ಕಂಡನು. ಅದಕ್ಕೆ ಹನ್ನೆರಡು ಬಾಗಿಲುಗಳು ಇದ್ದುವು. ಒಂದೊಂದು ಬಾಗಿಲನ್ನೂ ದ್ವಾರಪಾಲಕರು ಎಚ್ಚರಿಕೆಯಿಂದ ಕಾಯುತ್ತಿದ್ದರು.

೫. ಪುಷ್ಪದಂತನೆಂಬುದಾಗಿಯೂ ಬೇರೊಂದು ಹೆಸರುಳ್ಳ ಆ ದೂತನು ಉತ್ತಮವಾದ ಆ ಬಾಗಿಲನ್ನು ಕಂಡು ಅಲ್ಲಿರುವ ದ್ವಾರಪಾಲಕನನ್ನು ಕುರಿತು ತಾನು ಬಂದಿರುವುದೇಕೆಂಬ ಸಂಗತಿಯನ್ನು ನಿರ್ಭಯವಾಗಿ ತಿಳಿಸಿದನು.

೬. ಬಳಿಕ ಆ ದೂತನು ಆ ಬಾಗಿಲನ್ನು ದಾಟಿ ಸಂತೋಷದಿಂದ ಒಳಕ್ಕೆ ನಡೆದನು. ಆ ಒಳಹಜಾರವು ಬಹುವಾಗಿ ಸೌಂದರ್ಯದಿಂದ ಕಂಗೊಳಿಸುತ್ತಾ ಮನೋಹರವಾಗಿತ್ತು. ಅದು ವಿಶಾಲವಾದುದಾಗಿಯೂ ಸೊಗಸಾಗಿ ಅಲಂಕರಿಸಲ್ಪಟ್ಟುದಾಗಿಯೂ ಇತ್ತು.

೭. ಆ ಒಳಹಜಾರವನ್ನು ಸೇರಿದೊಡನೆಯೇ ಆ ದೂತನು ಅಲ್ಲಿ ದೈತ್ಯವೀರರ ನಡುವೆ ರತ್ನಸಿಂಹಾಸನದಲ್ಲಿ ಮಂಡಿಸಿ ಮೆರೆಯುತ್ತಿರುವ ದಾನವೇಶ್ವರನಾದ ಶಂಖಚೂಡನನ್ನು ಕಂಡನು.

೮. ಆತನನ್ನು ಮೂರುಕೋಟಿ ಮಂದಿ ದನುಜಶ್ರೇಷ್ಠರು ಸುತ್ತಲೂ ಬಳಸಿ ನಿಂತು ಓಲೈಸುತ್ತಿದ್ದರು. ಇದಲ್ಲದೆ ಇನ್ನೂ ನೂರುಕೋಟಿ ಮಂದಿ ದೈತ್ಯರು ಕೈಗಳಲ್ಲಿ ಆಯುಧಗಳನ್ನು ಹಿಡಿದು ಸುತ್ತಲೂ ತಿರುಗುತ್ತಾ ಅವನನ್ನು ಸೇವಿಸುತ್ತಿದ್ದರು.

ಏವಂಭೂತಂ ಚ ತಂ ದೃಷ್ಟ್ವಾ ಪುಷ್ಪದಂತಸ್ಸವಿಸ್ಮಯಃ ।
ಉವಾಚ ರಣವೃತ್ತಾಂತಂ ಯದುಕ್ತಂ ಶಂಕರೇಣ ಚ　　॥ ೯ ॥

॥ ಪುಷ್ಪದಂತ ಉವಾಚ ॥

ರಾಜೇಂದ್ರ ಶಿವದೂತೋಽಹಂ ಪುಷ್ಪದಂತಾಭಿಧಃ ಪ್ರಭೋ ।
ಯದುಕ್ತಂ ಶಂಕರೇಣೈವ ತಚ್ಛೃಣು ತ್ವಂ ಬ್ರವೀಮಿ ತೇ　　॥ ೧೦ ॥

॥ ಶಿವ ಉವಾಚ ॥

ರಾಜ್ಯಂ ದೇಹಿ ಚ ದೇವಾನಾಮಧಿಕಾರಂ ಹಿ ಸಾಂಪ್ರತಂ ।
ನೋಚೇತ್ಕುರು ರಣಂ ಸಾರ್ಧಂ ಪರೇಣ ಚ ಮಯಾ ಸತಾಂ　　॥ ೧೧ ॥

ದೇವಾ ಮಾಂ ಶರಣಾಪನ್ನಾ ದೇವೇಶಂ ಶಂಕರಂ ಸತಾಂ ।
ಅಹಂ ಕ್ರುದ್ಧೋ ಮಹಾರುದ್ರಸ್ತ್ವಾಂ ವಧಿಷ್ಯಾಮ್ಯಸಂಶಯಂ -　　॥ ೧೨ ॥

---

೯. ಈರೀತಿ ಮಹಾವೈಭವದಿಂದ ಮೆರೆಯುತ್ತಿರುವ ಆ ಶಂಖಚೂಡನನ್ನು ಕಂಡು ಪುಷ್ಪದಂತನು ಬಹುವಾಗಿ ಅಚ್ಚರಿಗೊಂಡು ಶಿವನು ಹೇಳಿಕಳುಹಿಸಿದ್ದ ಯುದ್ಧದ ವಿಷಯವನ್ನು ಅವನಿಗೆ ಹೇಳತೊಡಗಿದನು.

೧೦. ಓ ರಾಜೇಂದ್ರ, ನಾನು ಶಿವನ ದೂತನಾಗಿ ಬಂದಿರುವೆನು. ನನ್ನನ್ನು ಪುಷ್ಪದಂತನೆನ್ನುವರು. ಶಿವನು ಏನು ಹೇಳಿಕಳುಹಿಸಿರುವನೋ ಅದನ್ನು ನಾನು ತಿಳಿಸುವೆನು, ನೀನು ಅದನ್ನು ಆಲಿಸು.

೧೧. ನೀನು ಅಪಹರಿಸಿರುವ ದೇವತೆಗಳ ರಾಜ್ಯವನ್ನು ಈಗ ಹಿಂದಕ್ಕೆ ಕೊಡುವುದಲ್ಲದೆ ಅವರವರ ಅಧಿಕಾರಗಳನ್ನೂ ಅವರಿಗೇ ಕೊಟ್ಟುಬಿಡು. ಇಲ್ಲದಿದ್ದರೆ ಸತ್ಪುರುಷರ ಪಕ್ಷಪಾತಿಯಾದ ನನ್ನೊಡನೆ ಯುದ್ಧಕ್ಕೆ ಸಿದ್ಧನಾಗು.

೧೨. ಸತ್ಪುರುಷರಿಗೆ ಸರ್ವದಾ ಶುಭವನ್ನೇ ಉಂಟುಮಾಡುವ ಪ್ರಭುವಾದ ನನ್ನನ್ನು ಆ ದೇವತೆಗಳು ಮರೆಹೊಕ್ಕಿರುವರು. ನಾನು ಮಹಾರುದ್ರನೆಂಬುದನ್ನು ಮರೆಯದಿರು ನಾನು ಕುಪಿತನಾದಲ್ಲಿ ನಿನ್ನನ್ನು ಖಂಡಿತವಾಗಿಯೂ ಕೊಲ್ಲದೆ ಬಿಡಲಾರೆನು.

ಹರೋऽಸ್ಮಿ ಸರ್ವದೇವೇಭ್ಯೋ ಹ್ಯಭಯಂ ದತ್ತವಾನಹಂ ।
ಖಲದಂಡಧರೋऽಹಂ ವೈ ಶರಣಾಗತವತ್ಸಲಃ ॥ ೧೩ ॥

ರಾಜ್ಯಂ ದಾಸ್ಯಸಿ ಕಿಂ ವಾ ತ್ವಂ ಕರಿಷ್ಯಸಿ ರಣಂ ಚ ಕಿಂ ।
ತತ್ತ್ವಂ ಬ್ರೂಹಿ ದ್ವಯೋರೇಕಂ ದಾನವೇಂದ್ರ ವಿಚಾರ್ಯ ವೈ ॥ ೧೪ ॥

॥ ಪುಷ್ಪದಂತ ಉವಾಚ ॥

ಇತ್ಯುಕ್ತಂ ಯನ್ಮಹೇಶೇನ ತುಭ್ಯಂ ತನ್ಮೇ ನಿವೇದಿತಂ ।
ವಿತಥಂ ಶಂಭುವಾಕ್ಯಂ ನ ಕದಾಪಿ ದನುಜಾಧಿಪ ॥ ೧೫ ॥

ಅಹಂ ಸ್ವಸ್ವಾಮಿನಂ ಗಂತುಮಿಚ್ಛಾಮಿ ತ್ವರಿತಂ ಹರಂ ।
ಗತ್ವಾ ವಕ್ಷ್ಯಾಮಿ ಕಿಂ ಶಂಭೋ ತಥಾ ತ್ವಂ ವದ ಮಾಮಿಹ ॥ ೧೬ ॥

---

೧೩. ಪ್ರಳಯಕಾಲದಲ್ಲಿ ಸರ್ವವನ್ನೂ ಸಂಹರಿಸುವ ಹರನೆಂಬುವನೇ ನಾನೆಂದು ಚೆನ್ನಾಗಿ ಅರಿ. ನಾನು ಈ ಎಲ್ಲಾ ದೇವತೆಗಳಿಗೂ ಅಭಯವನ್ನಿತ್ತಿರುವೆನು. ನಾನು ದುಷ್ಟರನ್ನು ಎಂದಿಗೂ ದಂಡಿಸದೆ ಬಿಡಲಾರೆನು. ನನ್ನನ್ನು ಮರೆಹೊಕ್ಕವರನ್ನು ಕೈಬಿಡದೆ ಕಾಪಾಡುವೆನು.

೧೪. ನೀನೇನು ದೇವತೆಗಳ ರಾಜ್ಯವನ್ನು ಹಿಂದಕ್ಕೆ ಒಪ್ಪಿಸುವೆಯಾ ? ಇಲ್ಲವೆ ಯುದ್ಧವನ್ನು ಮಾಡುವೆಯಾ ? ಎಲೈ ದಾನವೇಂದ್ರನೇ, ನೀನು ವಿಚಾರಮಾಡಿ ಇವೆರಡರಲ್ಲಿ ಒಂದನ್ನು ನಿರ್ಧರಿಸಿ ಹೇಳು.

೧೫. ಈರೀತಿಯಾಗಿ ಆ ಮಹೇಶ್ವರನು ನನ್ನ ಮುಖಾಂತರ ನಿನಗೆ ಹೇಳಿ ಕಳುಹಿಸಿರುವನು. ಅದನ್ನೇ ನಿನಗೆ ತಿಳಿಸಿರುವೆನು. ಓ ದನುಜೇಂದ್ರ, ಆ ಶಿವನ ಮಾತು ಎಂದಿಗೂ ವ್ಯರ್ಥವಾಗಲಾರದು.

೧೬. ನಾನು ನನ್ನ ಒಡೆಯನಾದ ಶಿವನಬಳಿಗೆ ಬೇಗನೆ ಹೋಗಬೇಕೆಂದು ಇಚ್ಛಿಸುವೆನು. ನಾನು ಅಲ್ಲಿಗೆ ಹೋದಬಳಿಕ ಶಿವನಿಗೆ ಏನನ್ನು ಅರಿಕೆಮಾಡಬೇಕೆಂಬುದನ್ನು ನೀನು ನನಗೆ ತಿಳಿಸು ಎಂದನು.

॥ ಸನತ್ಕುಮಾರ ಉವಾಚ ॥

ಇತ್ಥಂ ಚ ಪುಷ್ಪದಂತಸ್ಯ ಶಿವದೂತಸ್ಯ ಸತ್ಪತೇಃ ।
ಆಕರ್ಣ್ಯ ವಚನಂ ರಾಜಾ ಹಸಿತ್ವಾ ತಮುವಾಚ ಸಃ ॥ ೧೭ ॥

॥ ಶಂಖಚೂಡ ಉವಾಚ ॥

ರಾಜ್ಯಂ ದಾಸ್ಯೇ ನ ದೇವೇಭ್ಯೋ ವೀರಭೋಗ್ಯಾ ವಸುಂಧರಾ ।
ರಣಂ ದಾಸ್ಯಾಮಿ ತೇ ರುದ್ರ ದೇವಾನಾಂ ಪಕ್ಷಪಾತಿನೇ ॥ ೧೮ ॥

ಯಸ್ಯೋಪರಿ ಪ್ರಯಾಯೀ ಸ್ಯಾತ್ಸ ವೀರೋ ಭುವನೇಽಧಮಃ ।
ಅತಃ ಪೂರ್ವಮಹಂ ರುದ್ರ ತ್ವಾಂ ಗಮಿಷ್ಯಾಮ್ಯಸಂಶಯಂ ॥ ೧೯ ॥

ಪ್ರಭಾತೇ ಆಗಮಿಷ್ಯಾಮಿ ವೀರಯಾತ್ರಾವಿಚಾರತಃ ।
ತ್ವಂ ಗಚ್ಛಾಚಕ್ಷ್ವ ರುದ್ರಾಯ ಹೀದೃಶಂ ವಚನಂ ಮಮ ॥ ೨೦ ॥

---

೧೭. ಓ ವ್ಯಾಸ, ಹೀಗೆ ಸಾಧುಶ್ರೇಷ್ಠನಾದ ಪುಷ್ಪದಂತನೆಂಬ ಶಿವದೂತನು ನುಡಿದುದನ್ನು ಕೇಳಿ ಆ ದಾನವರಾಜನಾದ ಶಂಖಚೂಡನು ನಕ್ಕು ಅವನನ್ನು ಕುರಿತು,

೧೮. ನಾನು ದೇವತೆಗಳಿಗೆ ರಾಜ್ಯವನ್ನು ಹಿಂದಿರುಗಿ ಕೊಡಲಾರೆನು. ಈ ವಸುಂಧರೆಯನ್ನು ವೀರರು ಉಪಭೋಗಿಸಬೇಕಲ್ಲದೆ ಹೇಡಿಗಳಲ್ಲ. ಓ ರುದ್ರ, ಆ ದೇವತೆಗಳಲ್ಲಿ ಪಕ್ಷಪಾತವನ್ನು ವಹಿಸಿರುವ ನಿನ್ನೊಡನೆ ನಾನು ಯುದ್ಧವನ್ನು ಮಾಡುವೆನು.

೧೯. ಶತ್ರುವು ತನ್ನ ಮೇಲೆ ನುಗ್ಗಿಬಂದಬಳಿಕ ಯಾವ ವೀರನು ಯುದ್ಧಕ್ಕೆ ನಿಲ್ಲುವನೋ ಅವನನ್ನು ಈ ಲೋಕದಲ್ಲಿ ನೀಚನೆಂದು ಜನರು ಜರಿಯುವರು. ಆದುದರಿಂದ ಓ ರುದ್ರ, ನಾನೇ ಮೊದಲು ನಿನ್ನ ಮೇಲೆ ಖಂಡಿತವಾಗಿಯೂ ದಂಡೆತ್ತಿ ಬರುವೆನು.

೨೦. ನಾನು ವೀರಪುರುಷರಂತೆ ಬೆಳಗ್ಗೆ ದಂಡೆತ್ತಿಬರುವೆನು. ನೀನು ಹೋಗು. ನಾನು ಈರೀತಿ ತಿಳಿಸಿದೆನೆಂಬುದನ್ನು ಆ ರುದ್ರನಿಗೆ ತಿಳಿಸು ಎಂದನು.

ಇತಿ ಶ್ರುತ್ವಾ ಶಂಖಚೂಡವಚನಂ ಸುಪ್ರಹಸ್ಯ ಸಃ ।
ಉವಾಚ ದಾನವೇಂದ್ರಂ ಸ ಶಂಭುದೂತಸ್ತು ಗರ್ವಿತಂ ॥ ೨೧ ॥

ಅನ್ಯೇಷಾಮಪಿ ರಾಜೇಂದ್ರ ಗಣಾನಾಂ ಶಂಕರಸ್ಯ ಚ ।
ನ ಸ್ಥಾತುಂ ಸಂಮುಖೇ ಯೋಗ್ಯಃ ಕಿಂ ಪುನಸ್ತಸ್ಯ ಸಂಮುಖಂ ॥ ೨೨ ॥

ಸ ತ್ವಂ ದೇಹಿ ಚ ದೇವಾನಾಮಧಿಕಾರಾಣಿ ಸರ್ವಶಃ ।
ತ್ವಮರಂ ಗಚ್ಛ ಪಾತಾಲಂ ಯದಿ ಜೀವಿತುಮಿಚ್ಛಸಿ ॥ ೨೩ ॥

ಸಾಮಾನ್ಯಮಮರಂ ತಂ ನೋ ವಿದ್ಧಿ ದಾನವಸತ್ತಮ ।
ಶಂಕರಃ ಪರಮಾತ್ಮಾ ಹಿ ಸರ್ವೇಶಾಮೀಶ್ವರೇಶ್ವರಃ ॥ ೨೪ ॥

ಇಂದ್ರಾದ್ಯಾಸ್ಸಕಲಾ ದೇವಾ ಯಸ್ಯಾಜ್ಞಾವರ್ತಿನಸ್ಸದಾ ।
ಸಪ್ರಜಾಪತಯಸ್ಸಿದ್ಧಾ ಮುನಯಶ್ಚಾಪ್ಯಹೀಶ್ವರಾಃ ॥ ೨೫ ॥

---

೨೧. ಈರೀತಿಯಾಗಿ ಶಂಖಚೂಡನು ನುಡಿದ ಮಾತನ್ನು ಕೇಳಿ ಶಿವದೂತನಾದ ಆ ಪುಷ್ಪದಂತನು ಗಟ್ಟಿಯಾಗಿ ನಕ್ಕು, ಅಹಂಕಾರದಿಂದ ಮೆರೆಯುತ್ತಿರುವ ಆ ದಾನವಾಧಿಪತಿಯನ್ನು ಕುರಿತು ಮತ್ತಿಂತೆಂದನು.

೨೨. ಓ ದೈತ್ಯರಾಜ, ಆ ಶಂಕರನ ಕಿಂಕರರಾದ ಸಾಮಾನ್ಯಗಣಗಳ ಎದುರಿನಲ್ಲಿ ನಿಲ್ಲಲೂ ಸಹ ನಿನಗೆ ಯೋಗ್ಯತೆಯಿಲ್ಲ. ಹೀಗಿರುವಾಗ ಆ ಶಿವನ ಎದುರಿನಲ್ಲಿ ನೀನು ನಿಲ್ಲುವುದುಂಟೆ ?

೨೩. ನೀನು ಕಸಿದುಕೊಂಡಿರುವ ದೇವತೆಗಳ ಅಧಿಕಾರವೆಲ್ಲವನ್ನೂ ಸಂಪೂರ್ಣವಾಗಿ ಬಿಟ್ಟುಕೊಡು. ನಿನಗೆ ಬದುಕಬೇಕೆಂಬ ಆಸೆಯಿದ್ದಲ್ಲಿ ಜಾಗ್ರತೆಯಾಗಿ ಪಾತಾಳಲೋಕಕ್ಕೆ ಓಡಿಹೋಗು.

೨೪. ಎಲೈ ದಾನವಶ್ರೇಷ್ಠನೇ, ಆ ಶಿವನನ್ನು ಸಾಮಾನ್ಯವಾದ ದೇವತೆಯಂತೆ ಎಂದಿಗೂ ಭಾವಿಸದಿರು. ಆ ಶಂಕರನು ಪರಮಪುರುಷನು. ಈಶ್ವರರಾದವರಿಗೂ ಮೇಲ್ಪಟ್ಟ ಈಶ್ವರನು.

೨೫. ಇಂದ್ರನೇ ಮೊದಲಾದ ಎಲ್ಲಾ ದೇವತೆಗಳೂ, ಕಶ್ಯಪ ಮೊದಲಾದ ಪ್ರಜಾಪತಿಗಳೂ, ಸಿದ್ಧರೂ ಮುನಿಗಳೂ ಪನ್ನಗರೂ ಆತನ ಆಜ್ಞೆಗೆ ಒಳಪಟ್ಟು ಸರ್ವದಾ ನಡೆಯುತ್ತಿರುವರು.

ಹರೇರ್ವಿಧೇಶ್ಚ ಸ ಸ್ವಾಮೀ ನಿರ್ಗುಣಸ್ಸಗುಣಸ್ಸ ಹಿ ।
ಯಸ್ಯ ಭ್ರೂಭಂಗಮಾತ್ರೇಣ ಸರ್ವೇಷಾಂ ಪ್ರಲಯೋ ಭವೇತ್ ॥ ೨೬ ॥

ಶಿವಸ್ಯ ಪೂರ್ಣರೂಪಶ್ಚ ಲೋಕಸಂಹಾರಕಾರಕಃ ।
ಸತಾಂ ಗತಿರ್ದುಷ್ಟಹಂತಾ ನಿರ್ವಿಕಾರಃ ಪರಾತ್ಪರಃ ॥ ೨೭ ॥

ಬ್ರಹ್ಮಣೋಽಧಿಪತಿಸ್ಸೋಽಪಿ ಹರೇರಪಿ ಮಹೇಶ್ವರಃ ।
ಅವಮಾನ್ಯಂ ನ ವೈ ತಸ್ಯ ಶಾಸನಂ ದಾನವರ್ಷಭ ॥ ೨೮ ॥

ಕಿಂ ಬಹೂಕ್ತೇನ ರಾಜೇಂದ್ರ ಮನಸಾ ಸಂವಿಚಾರ್ಯ ಚ ।
ರುದ್ರಂ ವಿದ್ಧಿ ಮಹೇಶಾನಂ ಪರಂ ಬ್ರಹ್ಮ ಚಿದಾತ್ಮಕಂ ॥ ೨೯ ॥

ದೇಹಿ ರಾಜ್ಯಂ ಹಿ ದೇವಾನಾಮಧಿಕಾರಾಂಶ್ಚ ಸರ್ವಶಃ ।
ಏವಂ ತೇ ಕುಶಲಂ ತಾತ ಭವಿಷ್ಯತ್ಯನ್ಯಥಾ ಭಯಂ ॥ ೩೦ ॥

---

೨೬. ಯಾವಾತನ ಹುಬ್ಬು ಸ್ವಲ್ಪ ಕೊಂಕಾದರೆ ಸಾಕು, ಈ ಎಲ್ಲ ಜಗತ್ತುಗಳ ಪ್ರಳಯವಾಗಿ ಹೋಗುವುದೋ ಆ ಶಿವನು ಹರಿಗೂ ಬ್ರಹ್ಮನಿಗೂ ಸ್ವಾಮಿಯು. ಆತನು ನಿರ್ಗುಣನೂ ಸಗುಣನೂ ಆಗಿರುವನು.

೨೭. ಕಲ್ಪಾಂತದಲ್ಲಿ ಈ ಜಗತ್ತೆಲ್ಲವನ್ನೂ ಸಂಹರಿಸುವ ಆ ರುದ್ರನು ಶಿವನ ಪರಿಪೂರ್ಣಸ್ವರೂಪನೆಂದು ತಿಳಿ. ಆತನು ಸತ್ಪುರುಷರಿಗೆ ಆಶ್ರಯವನ್ನೀಯುವನು. ದುಷ್ಟರನ್ನು ದಮನಮಾಡುವನು. ಆತನು ವಿಕಾರವರ್ಜಿತನು. ಶ್ರೇಷ್ಠರಿಗಿಂತಲೂ ಶ್ರೇಷ್ಠನಾದವನು.

೨೮. ಆ ಮಹೇಶ್ವರನು ಬ್ರಹ್ಮನಿಗೆ ಅಧಿಪತಿಯು. ಹರಿಗೂ ಒಡೆಯನು. ಓ ದಾನವಶ್ರೇಷ್ಠ, ಆತನ ಅಪ್ಪಣೆಯನ್ನು ನೀನು ಅಲ್ಲಗಳೆಯಬೇಡ

೨೯. ಓ ರಾಜೇಂದ್ರ, ಇನ್ನು ಹೆಚ್ಚು ಹೇಳುವುದರಿಂದೇನು? ಮನಸ್ಸಿನಲ್ಲಿ ಚೆನ್ನಾಗಿ ಆಲೋಚಿಸಿ ಆ ರುದ್ರನು ಜ್ಞಾನಸ್ವರೂಪನೂ ಪರಬ್ರಹ್ಮಮೂರ್ತಿಯೂ ಆದ ಸಾಕ್ಷಾನ್ಮಹೇಶ್ವರನೆಂದು ತಿಳಿ.

೩೦. ಆ ದೇವತೆಗಳಿಗೆ ಅವರ ರಾಜ್ಯವನ್ನು ಕೊಟ್ಟುಬಿಡು. ಅವರ ಅಧಿಕಾರಗಳೆಲ್ಲವನ್ನೂ ಸಂಪೂರ್ಣವಾಗಿ ಬಿಟ್ಟುಕೊಡು. ಹೀಗಾದರೆ ನಿನಗೆ ಒಳ್ಳೆಯದಾಗುವುದು. ಇಲ್ಲದಿದ್ದರೆ ಭಯವೊದಗಿದಂತೆಯೇ ಸರಿ ಎಂದನು.

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ದಾನವೇಂದ್ರಃ ಶಂಖಚೂಡಃ ಪ್ರತಾಪವಾನ್ ।
ಉವಾಚ ಶಿವದೂತಂ ತಂ ಭವಿತವ್ಯವಿಮೋಹಿತಃ ॥ ೩೧ ॥

॥ ಶಂಖಚೂಡ ಉವಾಚ ॥

ಸ್ವತೋ ರಾಜ್ಯಂ ನ ದಾಸ್ಯಾಮಿ ನಾಧಿಕಾರಾನ್ವಿನಿಶ್ಚಯಾತ್ ।
ವಿನಾ ಯುದ್ಧಂ ಮಹೇಶೇನ ಸತ್ಯಮೇತದ್ಬ್ರವೀಮ್ಯಹಂ ॥ ೩೨ ॥

ಕಾಲಾಧೀನಂ ಜಗತ್ಸರ್ವಂ ವಿಜ್ಞೇಯಂ ಸಚರಾಚರಂ ।
ಕಾಲಾದ್ಭವತಿ ಸರ್ವಂ ಹಿ ವಿನಶ್ಯತಿ ಚ ಕಾಲತಃ ॥ ೩೩ ॥

ತ್ವಂ ಗಚ್ಛ ಶಂಕರಂ ರುದ್ರಂ ಮಯೋಕ್ತಂ ವದ ತತ್ತ್ವತಃ ।
ಸ ಚ ಯುಕ್ತಂ ಕರೋತ್ವೇವಂ ಬಹುವಾರ್ತಾಂ ಕುರುಷ್ವ ನೋ ॥ ೩೪ ॥

---

೩೧. ಹೀಗೆ ಶಿವದೂತನಾಡಿದ ಮಾತನ್ನು ಕೇಳಿ ಪ್ರತಾಪಶಾಲಿಯೂ ದಾನವ ರಾಜನೂ ಆದ ಆ ಶಂಖಚೂಡನು ಮುಂದೆ ಆರೀತಿ ನಡೆಯಬೇಕಾದುದರಿಂದಲೇ ಮೋಹಕ್ಕೆ ಒಳಗಾಗಿ ಅವನನ್ನು ಕುರಿತು,

೩೨. ಎಲೈ ದೂತನೇ, ಆ ಮಹೇಶ್ವರನೊಡನೆ ಯುದ್ಧಮಾಡುವುದನ್ನು ಬಿಟ್ಟು, ನಾನು ಕಸಿದುಕೊಂಡಿರುವ ಆ ರಾಜ್ಯವನ್ನೂ ಆಧಿಕಾರಗಳನ್ನೂ ನಾನಾಗಿಯೇ ಎಂದೆಂದಿಗೂ ಬಿಟ್ಟುಕೊಡಲಾರೆನು. ಇದನ್ನು ನಿರ್ಧರಿಸಿ ನಾನು ನಿನಗೆ ನಿಜವಾಗಿ ಹೇಳುತ್ತಿರುವೆನು.

೩೩. ಈ ಚರಾಚರಾತ್ಮಕವಾದ ಜಗತ್ತೆಲ್ಲವೂ ಕಾಲಕ್ಕೆ ಅಧೀನವಾಗಿರುವುದು. ಇದೆಲ್ಲವೂ ಕಾಲದಿಂದಲೇ ಹುಟ್ಟುವುದು. ಕಾಲದಿಂದಲೇ ಅಳಿಯುವುದು.

೩೪. ನೀನು ಈಗ ಇಲ್ಲಿಂದ ಆ ಶಂಕರನ ಬಳಿಗೆ ಹೋಗಿ ನಾನು ಹೇಳಿದ ವಿಷಯವೆಲ್ಲವನ್ನೂ ಇದ್ದುದಿದ್ದಂತೆ ಅವನಿಗೆ ತಿಳಿಸು. ಅನಂತರ ಆತನು ತನಗೆ ಉಚಿತವೆಂದು ತೋರಿದುದನ್ನು ಮಾಡಲಿ. ನೀನು ಇಲ್ಲಿ ಹೆಚ್ಚು ಹರಟೆ ಹೊಡೆಯಬೇಡ ಎಂದನು.

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಶಿವದೂತೋಽಸೌ ಜಗಾಮ ಸ್ವಾಮಿನಂ ನಿಜಂ ।
ಯಥಾರ್ಥಂ ಕಥಯಾಮಾಸ ಪುಷ್ಪದಂತಶ್ಚ ಸನ್ಮನೇ　　॥ ೩೫ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡವಧೇ ದೂತಗಮನಂ
ನಾಮ ದ್ವಾತ್ರಿಂಶೋಽಧ್ಯಾಯಃ.

---

೩೫. ಸನತ್ಕುಮಾರನಿಂತೆಂದನು ;—ಓ ವ್ಯಾಸಮಹರ್ಷಿ, ಈರೀತಿಯಾಗಿ ದೌತ್ಯವನ್ನು ವಹಿಸಿಬಂದಿದ್ದ ಆ ಪುಷ್ಪದಂತನು ಶಿವನು ಹೇಳಿಕಳುಹಿಸಿದ್ದ ಮಾತನ್ನು ಆ ದಾನವೇಂದ್ರನಿಗೆ ತಿಳಿಸಿ, ಮರಳಿ ತನ್ನ ಸ್ವಾಮಿಯಾದ ಶಿವನ ಬಳಿಗೆ ತೆರಳಿದನು. ಆ ದಾನವರಾಜನ ಬಳಿ ನಡೆದ ಸಂಗತಿಯೆಲ್ಲವನ್ನೂ ಇದುದಿದ್ದಂತೆ ತನ್ನ ಒಡೆಯನಿಗೆ ಬಿನ್ನವಿಸಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ದೂತಗಮನವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ತ್ರಯಸ್ತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ತಸ್ಯ ದೂತಸ್ಯ ತದ್ವಾಕ್ಯಮಾಕರ್ಣ್ಯ ಸುರರಾಟ್ತ್ರತಃ ।
ಸಕ್ರೋಧಃ ಪ್ರಾಹ ಗಿರಿಶೋ ವೀರಭದ್ರಾದಿಕಾನ್ಗಣಾನ್ ॥ ೧ ॥

॥ ರುದ್ರ ಉವಾಚ ॥

ಹೇ ವೀರಭದ್ರ ಹೇ ನಂದಿನ್ಕ್ಷೇತ್ರಪಾಲಾಷ್ಟಭೈರವಾಃ ।
ಸರ್ವೇ ಗಣಾಶ್ಚ ಸನ್ನದ್ಧಾಸ್ಸಾಯುಧಾ ಬಲಶಾಲಿನಃ ॥ ೨ ॥

---

### ಮೂವತ್ತಮೂರನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು ;—ಓ ವ್ಯಾಸ, ಬಳಿಕ ದೇವತೆಗಳೆಲ್ಲರಿಗೂ ಅಧಿಪತಿಯಾದ ಆ ಶಿವನು ಆ ದೂತನು ನುಡಿದ ಮಾತನ್ನು ಕೇಳಿ ಕೋಪಗೊಂಡು ವೀರಭದ್ರ ಮೊದಲಾದ ತನ್ನ ಗಣಪುರುಷರನ್ನು ಕರೆದು ಇಂತೆಂದನು

೨-೩. ಓ ವೀರಭದ್ರ, ನಂದಿ, ಕ್ಷೇತ್ರಪಾಲ, ಅಸಿತಾಂಗ ಮೊದಲಾದ ಅಷ್ಟ ಭೈರವರಿರಾ, ಬಲಾಢ್ಯರಾದ ನೀವೆಲ್ಲರೂ ಆಯುಧಗಳನ್ನು ಪಿಡಿದು ಸಿದ್ಧರಾಗಿ ನನ್ನ ಅಪ್ಪಣೆಯಂತೆ ಈಗಲೇ ಗಣಪತಿಯೊಡನೆಯೂ ಷಣ್ಮುಖನೊಡನೆಯೂ ಯುದ್ಧಕ್ಕೆ

ಕುಮಾರಾಭ್ಯಾಂ ಸಹೈವಾದ್ಯ ನಿರ್ಗಚ್ಛಂತು ಮಮಾಜ್ಞಯಾ ।
ಸ್ವಸೇನಯಾ ಭದ್ರಕಾಲೀ ನಿರ್ಗಚ್ಛತು ರಣಾಯ ಚ ।
ಶಂಖಚೂಡವಧಾರ್ಥಾಯ ನಿರ್ಗಚ್ಛಾಮ್ಯದ್ಯ ಸತ್ವರಂ ॥ ೩ ॥

॥ ಸನತ್ಕುಮಾರ ಉವಾಚ ॥

ಇತ್ಯಾಜ್ಞಾಪ್ಯ ಮಹೇಶಾನೋ ನಿರ್ಯಯೌ ಸೈನ್ಯಸಂಯುತಃ ।
ಸರ್ವೇ ವೀರಗಣಾಸ್ತಸ್ಯಾನುಯಯುಸ್ಸಂಪ್ರಹರ್ಷಿತಾಃ ॥ ೪ ॥

ಏತಸ್ಮಿನ್ನಂತರೇ ಸ್ಕಂದಗಣೇಶೌ ಸರ್ವಸೈನ್ಯಪೌ ।
ಯಯತುರ್ಮುದಿತೌ ನದ್ಧಾ ಸಾಯುಧೌ ಚ ಶಿವಾಂತಿಕೇ ॥ ೫ ॥

ವೀರಭದ್ರಶ್ಚ ನಂದೀ ಚ ಮಹಾಕಾಲಾಸ್ಸುಭದ್ರಕಃ ।
ವಿಶಾಲಾಕ್ಷಶ್ಚ ಬಾಣಶ್ಚ ಪಿಂಗಲಾಕ್ಷೋ ವಿಕಂಪನಃ ॥ ೬ ॥

ವಿರೂಪೋ ವಿಕೃತಿಶ್ಚೈವ ಮಣಿಭದ್ರಶ್ಚ ಬಾಷ್ಕಲಃ ।
ಕಪಿಲಾಖ್ಯೋ ದೀರ್ಘದಂಷ್ಟ್ರೋ ವಿಕರಸ್ತಾಮ್ರಲೋಚನಃ ॥ ೭ ॥

ಕಾಲಂಕರೋ ಬಲೀಭದ್ರಃ ಕಾಲಜಿಹ್ವಃ ಕುಟೀಚರಃ ।
ಬಲೋನ್ಮತ್ತೋ ರಣಶ್ಲಾಘ್ಯೋ ದುರ್ಜಯೋ ದುರ್ಗಮಸ್ತಥಾ ॥ ೮ ॥

---

ತೆರಳಿರಿ. ಭದ್ರಕಾಳಿಯೂ ಸಹ ತನ್ನ ಸೇನೆಯೊಡನೆ ಯುದ್ಧಕ್ಕೆ ಹೊರಡಲಿ. ನಾನೀಗ ಶಂಖಚೂಡನನ್ನು ಸಂಹರಿಸಲು ಬೇಗನೆ ಹೊರಡಲಿರುವೆನು ಎಂದನು.

೪. ಓ ವ್ಯಾಸ, ಈರೀತಿಯಾಗಿ ಮಹೇಶ್ವರನು ಅಪ್ಪಣೆಮಾಡಿ ತನ್ನ ಸೇನೆಯೊಡನೆ ಯುದ್ಧಕ್ಕೆ ಹೊರಟನು. ಆಗ ಆತನನ್ನು ಮಹಾಬಲಾಢ್ಯರಾದ ಗಣಗಳೆಲ್ಲರೂ ಬಹು ಸಂತೋಷದಿಂದ ಹಿಂಬಾಲಿಸಿದರು.

೫. ಇಷ್ಟರಲ್ಲಿ ಸಕಲ ಸೈನ್ಯಗಳಿಗೂ ಅಧಿಪತಿಗಳಾದ ಷಣ್ಮುಖನೂ ಗಣಪತಿಯೂ ಮಹಾಸಂತೋಷಭರಿತರಾಗಿ ಯುದ್ಧಕ್ಕೆ ಬೇಕಾದ ಸಲಕರಣೆಗಳಿಂದ ಸಜ್ಜುಗೊಂಡು ಆಯುಧಗಳನ್ನು ಧರಿಸಿ ಶಿವನ ಬಳಿಗೆ ಬಂದರು.

೬-೯. ಇವರಲ್ಲದೆ ವೀರಭದ್ರ, ನಂದಿ, ಮಹಾಕಾಲ, ಸುಭದ್ರಕ, ವಿಶಾಲಾಕ್ಷ, ಬಾಣ, ಪಿಂಗಲಾಕ್ಷ, ವಿಕಂಪನ, ವಿರೂಪ, ವಿಕೃತಿ, ಮಣಿಭದ್ರ, ಬಾಷ್ಕಲ, ಕಪಿಲ, ದೀರ್ಘದಂಷ್ಟ್ರ, ವಿಕಾರ, ತಾಮ್ರಲೋಚನ, ಕಾಲಂಕರ, ಬಲೀಭದ್ರ, ಕಾಲಜಿಹ್ವ,

ಇತ್ಯಾದಯೋ ಗಣೇಶಾನಾಸ್ಸೈನ್ಯಾನಾಂ ಪತಯೋ ವರಾಃ ।
ತೇಷಾಂ ಚ ಗಣನಾಂ ವಚ್ಮಿ ಸಾವಧಾನತಯಾ ಶೃಣು ॥ ೯ ॥

ಶಂಖಕರ್ಣಃ ಕೋಟಿಗಣೈರ್ಯುತಃ ಪರವಿಮರ್ದಕಃ ।
ದಶಭಿಃ ಕೇಕರಾಕ್ಷಶ್ಚ ವಿಕೃತೋऽಷ್ಟಾಭಿರೇವ ಚ ॥ ೧೦ ॥

ಚತುಷ್ಷಷ್ಟ್ಯಾ ವಿಶಾಖಶ್ಚ ನವಭಿಃ ಪಾರಿಯಾತ್ರಿಕಃ ।
ಷಡ್ಭಿಸ್ಸರ್ವಾಂತಕಃ ಶ್ರೀಮಾಂಸ್ತಥೈವ ವಿಕೃತಾನನಃ ॥ ೧೧ ॥

ಜಾಲಕೋ ಹಿ ದ್ವಾದಶಭಿಃ ಕೋಟಿಭಿರ್ಗಣಪುಂಗವಃ ।
ಸಪ್ತಭಿಸ್ಸಮದಃ ಶ್ರೀಮಾನ್ದುಂದುಭೋऽಷ್ಟಾಭಿರೇವ ಚ ॥ ೧೨ ॥

ಪಂಚಭಿಶ್ಚ ಕರಾಲಾಕ್ಷಃ ಷಡ್ಭಿಸ್ಸಂದಾರಕೋ ವರಃ ।
ಕೋಟಿಕೋಟಿಭಿರೇವೇಹ ಕಂದುಕಃ ಕುಂಡಕಸ್ತಥಾ ॥ ೧೩ ॥

---

ಕುಟೀಚರ, ಬಲೋನ್ಮತ್ತ, ರಣಶ್ಲಾಘ್ಯ, ದುರ್ಜಯ, ದುರ್ಗಮ, ಮುಂತಾದ ಶ್ರೇಷ್ಠರಾದ ಪ್ರಮಥಸೇನಾಪತಿಗಳು ಶಿವನ ಜೊತೆಯಲ್ಲಿ ಬಂದರು. ಅವರ ಸಂಖ್ಯೆಯನ್ನು ತಿಳಿಸುವೆನು ಗಮನಿಸಿ ಕೇಳು.

೧೦. ಶತ್ರುಸಂಹಾರಿಯಾದ ಶಂಖಕರ್ಣನು ಕೋಟಿ ಸಂಖ್ಯಾತರಾದ ಗಣಗಳೊಂದಿಗೆ ಬಂದನು. ಕೇಕರಾಕ್ಷನು ಹತ್ತುಕೋಟಿ ಗಣಗಳೊಡನೆಯೂ, ವಿಕೃತನು ಎಂಟು ಕೋಟಿ ಗಣಗಳೊಡನೆಯೂ ಬಂದು ಸೇರಿದರು.

೧೧. ವಿಶಾಖನು ಅರವತ್ತುನಾಲ್ಕು ಕೋಟಿ ಗಣಗಳೊಡನೆಯೂ, ಪಾರಿಯಾತ್ರಿಕನು ಒಂಭತ್ತುಕೋಟಿ ಗಣಗಳೊಡನೆಯೂ, ಸರ್ವಾಂತಕ ಮತ್ತು ವಿಕೃತಾನನರು ಆರು ಕೋಟಿ ಗಣಗಳೊಡನೆಯೂ ಬಂದು ಸೇರಿದರು.

೧೨. ಗಣಾಗ್ರಣಿಯಾದ ಜಾಲಕನು ಹನ್ನೆರಡು ಕೋಟಿ ಗಣಗಳೊಡನೆ ಬಂದು ಕೂಡಿದನು. ಸಮುಧನು ಏಳುಕೋಟಿ ಗಣಗಳೊಂದಿಗೆ ಜೊತೆಯಾದನು, ದುಂದುಭನು ಎಂಟುಕೋಟಿ ಮಂದಿ ಗಣಗಳೊಂದಿಗೆ ಬಂದನು.

೧೩. ಕರಾಲಾಕ್ಷನು ಐದುಕೋಟಿ, ಸಂದಾರಕನು ಆರುಕೋಟಿ, ಕಂದುಕನು ಕೋಟಿಕೋಟಿ, ಕುಂಡಕನು ಕೋಟಿಕೋಟಿ ಗಣಗಳೊಡನೆ ಕೂಡಿ ನಡೆದರು.

ವಿಷ್ಟಂಭೋಽಷ್ಟಾಭಿರೇವೇಹ ಗಣಪಸ್ಸರ್ವಸತ್ತಮಃ ।
ಪಿಪ್ಪಲಶ್ಚ ಸಹಸ್ರೇಣ ಸಂನಾದಶ್ಚ ತಥಾವಿಧಃ ॥ ೧೪ ॥

ಆವೇಶನಸ್ತಥಾಷ್ಟಾಭಿಸ್ತ್ವಷ್ಟಾಭಿಶ್ಚಂದ್ರತಾಪನಃ ।
ಮಹಾಕೇಶಃ ಸಹಸ್ರೇಣ ಕೋಟೀನಾಂ ಗಣಪೋ ವೃತಃ ॥ ೧೫ ॥

ಕುಂಡೀ ದ್ವಾದಶಭಿರ್ವೀರಸ್ತಥಾ ಪರ್ವತಕಶ್ಶುಭಃ ।
ಕಾಲಶ್ಚ ಕಾಲಕಶ್ಚೈವ ಮಹಾಕಾಲಶ್ಶತೇನ ವೈ ॥ ೧೬ ॥

ಅಗ್ನಿಕಶ್ಶತಕೋಟ್ಯಾ ಚ ಕೋಟ್ಯಾಗ್ನಿಮುಖ ಏವ ಚ ।
ಆದಿತ್ಯೋ ಹ್ಯರ್ಧಕೋಟ್ಯಾ ಚ ತಥಾ ಚೈವಂ ಘನಾವಹಃ ॥ ೧೭ ॥

ಸನಾಹಶ್ಚ ಶತೇನೈವ ಕುಮುದಃ ಕೋಟಿಭಿಸ್ತಥಾ ।
ಅಮೋಘಃ ಕೋಕಿಲಶ್ಚೈವ ಶತಕೋಟ್ಯಾ ಸಮಂತ್ರಕಃ ॥ ೧೮ ॥

---

೧೪. ಸರ್ವಶ್ರೇಷ್ಠನಾದ ವಿಷ್ಟಂಭನೆಂಬುವನು ಎಂಟುಕೋಟಿ ಗಣಗಳೊಡನೆಯೂ, ಪಿಪ್ಪಲನೂ, ಸನ್ನಾದನೂ ಸಾವಿರ ಕೋಟಿ ಗಣಗಳೊಡನೆಯೂ ಬಂದರು.

೧೫. ಆವೇಶನನೂ, ಚಂದ್ರತಾಪನನೂ ಎಂಟೆಂಟುಕೋಟಿ ಗಣಗಳೊನೆಯೂ, ಮಹಾಕೇಶನು ಸಾವಿರಕೋಟಿ ಗಣಗಳೊಡನೆಯೂ ಜೊತೆಗೂಡಿ ಬಂದರು.

೧೬. ಹಾಗೆಯೇ, ವೀರನಾದ ಕುಂಡಿಯೂ, ಪರ್ವತನೂ, ಒಬ್ಬೊಬ್ಬರೂ ಹನ್ನೆರಡು ಕೋಟಿ ಗಣಗಳೊಡನೆಯೂ, ಕಾಲ, ಕಾಲಕ, ಮಹಾಕಾಲನೆಂಬುವರು, ಪ್ರತಿಯೊಬ್ಬರೂ ನೂರುಕೋಟಿ ಗಣಗಳೊಂದಿಗೂ ಬಂದುಗೂಡಿದರು.

೧೭. ಅಗ್ನಿಕನು ನೂರುಕೋಟಿ, ಅಗ್ನಿಮುಖನು, ಒಂದುಕೋಟಿ, ಆದಿತ್ಯನು ಅರ್ಧಕೋಟಿ, ಘನಾವಹನು ಅರ್ಧಕೋಟಿ ಗಣಗಳೊಡನೆ ಸೇರಿ, ನಡೆದುಬಂದರು.

೧೮. ಅದರಂತೆ ಸನಾಹ, ಕುಮುದ, ಅಮೋಘ, ಕೋಕಿಲ, ಸುಮಂತ್ರಕ ಎಂಬ ಸೇನಾನಿಗಳು ಒಬ್ಬೊಬ್ಬರೂ ನೂರುಕೋಟಿ ಗಣಗಳೊಡನೆ ಕೂಡಿ ಹಿಂಬಾಲಿಸಿದರು.

ಕಾಕಪಾದಃ ಕೋಟಿಷಷ್ಟ್ಯಾ ಷಷ್ಟ್ಯಾ ಸಂನಾತಕಸ್ತಥಾ ।
ಮಹಾಬಲಶ್ಚ ನವಭಿಃ ಪಂಚಭಿರ್ಮಧುಪಿಂಗಲಃ ॥ ೧೯ ॥

ನೀಲೋ ನವತ್ಯಾ ದೇವೇಶಃ ಪೂರ್ಣಭದ್ರಸ್ತಥೈವ ಚ ।
ಕೋಟೀನಾಂ ಚೈವ ಸಪ್ತಾನಾಂ ಚತುರ್ವಕ್ತ್ರೋ ಮಹಾಬಲಃ ॥ ೨೦ ॥

ಕೋಟಿಕೋಟಿಸಹಸ್ರಾಣಾಂ ಶತೈರ್ವಿಂಶತಿಭಿಸ್ತಥಾ ।
ತತ್ರಾಜಗ್ಮುಸ್ತಥಾ ವೀರಾಸ್ತೇ ಸರ್ವೇ ಸಂಗರೋತ್ಸವೇ ॥ ೨೧ ॥

ಭೂತಕೋಟಿಸಹಸ್ರೇಣ ಪ್ರಮಥೈಃ ಕೋಟಿಭಿಸ್ತ್ರಿಭಿಃ ।
ವೀರಭದ್ರಶ್ಚತುಃಷಷ್ಟ್ಯಾ ಲೋಮಜಾನಾಂ ತ್ರಿಕೋಟಿಭಿಃ ॥ ೨೨ ॥

ಕಾಷ್ಠಾರೂಢಶ್ಚತುಃಷಷ್ಟ್ಯಾ ಸುಕೇಶೋ ವೃಷಭಸ್ತಥಾ ।
ವಿರೂಪಾಕ್ಷಶ್ಚ ಭಗವಾಂಶ್ಚತುಃಷಷ್ಟ್ಯಾ ಸನಾತನಃ ॥ ೨೩ ॥

---

೧೯. ಕಾಕಪಾದನು ಅರವತ್ತುಕೋಟಿ ಮಂದಿ ಗಣಗಳೊಂದಿಗೂ. ಸಂತಾನಕನು ಅರವತ್ತುಕೋಟಿ ಗಣಗಳೊಡನೆಯೂ, ಮಹಾಬಲನು ಒಂಭತ್ತುಕೋಟಿ, ಮಧುಪಿಂಗಲನು ಐದುಕೋಟಿ ಗಣಗಳೊಡನೆಯೂ ಬಂದರು.

೨೦. ಅದರಂತೆ ದೇವೇಶ್ವರನಾದ ನೀಲನು ತೊಂಭತ್ತುಕೋಟಿ ಗಣಗಳೊಡನೆ ಸೇರಿಬಂದನು. ಅವನಂತೆಯೇ ಪೂರ್ಣಭದ್ರನೆಂಬುವನೂ, ಅಷ್ಟು ಗಣಸೇನೆಯೊಡನೆ ಜೊತೆಯಾದನು. ಮಹಾಬಲಶಾಲಿಯಾದ ಚತುರ್ವಕ್ತ್ರನು ಏಳುಕೋಟಿ ಗಣಗಳೊಡನೆ ಸುತ್ತುವರಿದು ಬಂದನು.

೨೧. ಯುದ್ಧವೆಂಬ ಆ ಉತ್ಸವದಲ್ಲಿ ಭಾಗಿಯಾಗಲು ವೀರರಾದ ಅವರೆಲ್ಲರೂ ನೂರು ಕೋಟಿ, ಇಪ್ಪತ್ತುಕೋಟಿ, ಸಾವಿರಕೋಟಿ, ಕೋಟಿಕೋಟಿ, ಕೋಟಿಸಾವಿರ ಕೋಟಿ ಸಂಖ್ಯೆಯ ಗಣಗಳೊಡಗೂಡಿ ತುಂಬಿ ಬಂದರು.

೨೨. ವೀರಭದ್ರನು ಸಹಸ್ರಕೋಟಿ ಭೂತಗಳೊಡನೆಯೂ, ಮೂರುಕೋಟಿ ಪ್ರಮಥರೊಂದಿಗೂ, ರೋಮಜಾತರಾದ ಅರವತ್ತುನಾಲ್ಕುಕೋಟಿ ಗಣಗಳೊಡನೆಯೂ ಇನ್ನೂ ಇತರ ಮೂರುಕೋಟಿ ಗಣಗಳೊಡನೆಯೂ ಬಂದನು.

೨೩. ಅದರಂತೆ ಕಾಷ್ಠಾರೂಢ, ಸುಕೇಶ, ವೃಷಭ, ವಿರೂಪಾಕ್ಷ, ಸನಾತನ ಎಂಬವರು ಒಬ್ಬೊಬ್ಬರೂ ಅರವತ್ತುನಾಲ್ಕುಕೋಟಿ ಗಣಗಳೊಡನೆ ಕೂಡಿ ಬಂದರು.

ತಾಲಕೇತುಃ ಷಡಾಸ್ಯಶ್ಚ ಪಂಚಾಸ್ಯಶ್ಚ ಪ್ರತಾಪವಾ೯ ।
ಸರ್ವರ್ತಕಸ್ತಥಾ ಚೈತ್ರೋ ಲಂಕುಲೀಶಸ್ಸ್ವಯಂ ಪ್ರಭುಃ ॥ ೨೪ ॥

ಲೋಕಾಂತಕಶ್ಚ ದೀಪ್ತಾತ್ಮಾ ತಥಾ ದೈತ್ಯಾಂತಕಃ ಪ್ರಭುಃ ।
ದೇವೋ ಭೃಂಗೀ ರಿಟಿಃ ಶ್ರೀಮಾನ್ದೇವದೇವಪ್ರಿಯಸ್ತಥಾ ॥ ೨೫ ॥

ಅಶನಿರ್ಭಾನುಕಶ್ಚೈವ ಚತುಃಷಷ್ಟ್ಯಾ ಸಹಸ್ರಶಃ ।
ಕಂಕಾಲಃ ಕಾಲಕಃ ಕಾಲೋ ನಂದೀ ಸರ್ವಾಂತಕಸ್ತಥಾ ॥ ೨೬ ॥

ಏತೇ ಚಾನ್ಯೇ ಚ ಗಣಪಾ ಅಸಂಖ್ಯಾತಾ ಮಹಾಬಲಾಃ ।
ಯುದ್ಧಾರ್ಥಂ ನಿರ್ಯಯುಃ ಪ್ರೀತ್ಯಾ ಶಂಖಚೂಡೇನ ನಿರ್ಭಯಾಃ ॥

ಸರ್ವೇ ಸಹಸ್ರಹಸ್ತಾಶ್ಚ ಜಟಾಮುಕುಟಧಾರಿಣಃ ।
ಚಂದ್ರರೇಖಾವತಂಸಾಶ್ಚ ನೀಲಕಂಠಾಸ್ತ್ರಿಲೋಚನಾಃ ॥ ೨೮ ॥

---

೨೪-೨೭. ಹಾಗೆಯೇ ಕಾಲಕೇತು, ಷಡಾಸ್ಯ, ಪಂಚಾಸ್ಯ, ಸಂವರ್ತಕ, ಚೈತ್ರ, ಲಂಕುಲೀಶ, ಲೋಕಾಂತಕ, ದೈತ್ಯಾಂತಕ, ಭೃಂಗಿ, ಅಶನಿ, ಭಾನುಕ, ಕಂಕಾಲ, ಕಾಲಕ, ಕಾಲ, ನಂದಿ, ಸರ್ವಾಂತಕ ಇವರಲ್ಲದೆ ಇನ್ನೂ ಅನೇಕ ಮಂದಿ ಮಹಾ ಬಲಾಢ್ಯರೂ, ಸಂಖ್ಯಾತೀತರೂ ಆದ ಗಣಾಧಿಪತಿಗಳು ಅರವತ್ತುನಾಲ್ಕುಕೋಟಿ ಗಣ ಗಳೊಡನೆಯೂ, ಸಾವಿರಗಟ್ಟಲೆಯಷ್ಟು ಕೋಟಿ ಗಣಗಳೊಡನೆಯೂ ಸೇರಿ ಸ್ವಲ್ಪವೂ ಹೆದರಿಕೆಯೆಂಬುದೇ ಇಲ್ಲದೆ ಆ ಶಂಖಚೂಡನೊಡನೆ ಯುದ್ಧವನ್ನು ಮಾಡಬೇಕೆಂಬ ಕುತೂಹಲದಿಂದ ಮುಂದೆ ನುಗ್ಗಿ ಬಂದರು.

೨೮. ಅವರೆಲ್ಲರಿಗೂ ಸಾವಿರ ಕೈಗಳು, ಒಬ್ಬೊಬ್ಬರೂ ಜಡೆಯನ್ನು ಬಿಟ್ಟಿದ್ದರು. ಪ್ರತಿಯೊಬ್ಬರೂ ಕಿರೀಟವನ್ನು ಧರಿಸಿದ್ದರು. ಎಲ್ಲರೂ ಶಿರಸ್ಸಿನಲ್ಲಿ ಚಂದ್ರರೇಖೆ ಯನ್ನು ತಳೆದಿದ್ದರು. ಎಲ್ಲರ ಕುತ್ತಿಗೆಯೂ ಕಪ್ಪಾಗತ್ತು. ಎಲ್ಲರಿಗೂ ಮೂರು ಕಣ್ಣು ಗಳು ಇದ್ದುವು.

ರುದ್ರಾಕ್ಷಾಭರಣಾಸ್ಸರ್ವೇ ತಥಾ ಸದ್ಭಸ್ಮಧಾರಿಣಃ ।
ಹಾರಕುಂಡಲಕೇಯೂರಮುಕುಟಾದ್ಯೈರಲಂಕೃತಾಃ ॥ ೨೯ ॥

ಬ್ರಹ್ಮೇಂದ್ರವಿಷ್ಣುಸಂಕಾಶಾ ಅಣಿಮಾದಿಗುಣೈರ್ವೃತಾಃ ।
ಸೂರ್ಯಕೋಟಿಪ್ರತೀಕಾಶಾಃ ಪ್ರವೀಣಾ ಯುದ್ಧಕರ್ಮಣಿ ॥ ೩೦ ॥

ಪೃಥಿವೀಚಾರಿಣಃ ಕೇಚಿತ್ಕೇಚಿತ್ಪಾತಾಲಚಾರಿಣಃ ।
ಕೇಚಿದ್ವ್ಯೋಮಚರಾಃ ಕೇಚಿತ್ಸಪ್ತಸ್ವರ್ಗಚರಾ ಮುನೇ ॥ ೩೧ ॥

ಕಿಂ ಬಹೂಕ್ತೇನ ದೇವರ್ಷೇ ಸರ್ವಲೋಕನಿವಾಸಿನಃ ।
ಯುಯುಃಶ್ಶಿವಗಣಾಸ್ಸರ್ವೇ ಯುದ್ಧಾರ್ಥಂ ದಾನವೈಸ್ಸಹ ॥ ೩೨ ॥

ಅಷ್ಟೌ ಚ ಭೈರವಾ ರೌದ್ರಾ ರುದ್ರಾಶ್ಚೈಕಾದಶಾಶು ಯೇ ।
ವಸವೋಽಷ್ಟೌ ವಾಸವಶ್ಚಾದಿತ್ಯಾ ದ್ವಾದಶ ತೇ ದ್ರುತಂ ॥ ೩೩ ॥

---

೨೯. ಅವರೆಲ್ಲರೂ ರುದ್ರಾಕ್ಷಿಯ ಆಭರಣಗಳನ್ನು ತೊಟ್ಟಿದ್ದರು. ಆದರಂತೆ ಸೊಗಸಾಗಿ ಭಸ್ಮವನ್ನು ಧರಿಸಿದ್ದರು. ಒಬ್ಬೊಬ್ಬರೂ ಕತ್ತಿನಲ್ಲಿ ಹಾರ, ಕಿವಿಯಲ್ಲಿ ಕುಂಡಲ, ತೋಳುಗಳಲ್ಲಿ ತೋಳ್ಬಳೆ, ತಲೆಯಲ್ಲಿ ಕಿರೀಟಗಳನ್ನು ಧರಿಸಿ ಭೂಷಿತ ರಾಗಿದ್ದರು.

೩೦. ಅವರಲ್ಲಿ ಒಬ್ಬೊಬ್ಬರೂ ಬ್ರಹ್ಮನಿಗೂ ಇಂದ್ರನಿಗೂ ವಿಷ್ಣುವಿಗೂ ಸಮ ನಾಗಿದ್ದರು. ಒಬ್ಬೊಬ್ಬರೂ ಅಣಿಮಾದಿ ಅಷ್ಟಸಿದ್ಧಿಗಳನ್ನು ಪಡೆದಿದ್ದರು. ಒಬ್ಬೊ ಬ್ಬರೂ ಕೋಟಿಸೂರ್ಯರಂತೆ ಪ್ರಕಾಶಮಾನರಾಗಿದ್ದರು. ಒಬ್ಬೊಬ್ಬರೂ ಯುದ್ಧದ ಕೃತ್ಯದಲ್ಲಿ ನುರಿತವರಾಗಿದ್ದರು.

೩೧. ಅವರಲ್ಲಿ ಕೆಲವರು ಭೂಲೋಕದಲ್ಲಿದ್ದವರು. ಮತ್ತೆ ಕೆಲವರು ಪಾತಾಲ ಲೋಕವಾಸಿಗಳು. ಬೇರೆ ಕೆಲವರು ಅಂತರಿಕ್ಷಸಂಚಾರಿಗಳು. ಇನ್ನೂ ಕೆಲವರು ಮೇಲಿನ ಏಳು ಲೋಕಗಳಲ್ಲಿಯೂ ಇರುವಂಥವರು.

೩೨. ಓ ದೇವಮುನೀಂದ್ರ, ಹೆಚ್ಚು ಹೇಳುವುದೇಕೆ? ಸಕಲ ಲೋಕ ಗಳಲ್ಲಿಯೂ ನೆಲಸಿದ್ದ ಶಿವಗಣಗಳೆಲ್ಲರೂ ಆ ದಾನವರೊಡನೆ ಯುದ್ಧಮಾಡಲು ಹೊರಟುಬಂದರು.

೩೩. ಎಂಟುಮಂದಿ ಭೈರವರೂ, ಏಕಾದಶರುದ್ರರೂ, ಅಷ್ಟವಸುಗಳೂ, ಇಂದ್ರನೂ, ದ್ವಾದಶಾದಿತ್ಯರೂ, ಬೇಗಬೇಗ ಬಂದರು.

ಹುತಾಶನಶ್ಚ ಚಂದ್ರಶ್ಚ ವಿಶ್ವಕರ್ಮಾಶ್ವಿನೌ ಚ ತೌ ।
ಕುಬೇರಶ್ಚ ಯಮಶ್ಚೈವ ನಿರ್ಋತಿರ್ನಲಕೂಬರಃ ॥ ೩೪ ॥

ವಾಯುಶ್ಚ ವರುಣಶ್ಚೈವ ಬುಧಶ್ಚ ಮಂಗಲಶ್ಚ ವೈ ।
ಗ್ರಹಾಶ್ಚಾನ್ಯೇ ಮಹೇಶೇನ ಕಾಮದೇವಶ್ಚ ವೀರ್ಯವಾನ್ ॥ ೩೫ ॥

ಉಗ್ರದಂಷ್ಟ್ರಶ್ಚೋಗ್ರದಂಡಃ ಕೋರಟಃ ಕೋಟಭಸ್ತಥಾ ।
ಸ್ವಯಂ ಶತಭುಜಾ ದೇವೀ ಭದ್ರಕಾಲೀ ಮಹೇಶ್ವರೀ ॥ ೩೬ ॥

ರತ್ನೇಂದ್ರಸಾರನಿರ್ಮಾಣವಿಮಾನೋಪರಿ ಸಂಸ್ಥಿತಾ ।
ರತ್ನವಸ್ತ್ರಪರೀಧಾನಾ ರಕ್ತಮಾಲ್ಯಾನುಲೇಪನಾ ॥ ೩೭ ॥

ನೃತ್ಯಂತೀ ಚ ಹಸಂತೀ ಚ ಗಾಯಂತೀ ಸುಸ್ವರಂ ಮುದಾ ।
ಅಭಯಂ ದದತೀ ಸ್ವೇಭ್ಯೋ ಭಯಂ ಚಾರಿಭ್ಯ ಏವ ಸಾ ॥ ೩೮ ॥

---

೩೪. ಆದರಂತೆ ಅಗ್ನಿಯೂ, ಚಂದ್ರನೂ, ವಿಶ್ವಕರ್ಮನೂ, ಅಶ್ವಿನೀದೇವತೆಗಳೂ, ಕುಬೇರನೂ, ಯಮನೂ, ನಿರ್ ಋತಿಯೂ, ನಲಕೂಬರನೂ ಬಂದು ಸೇರಿದರು.

೩೫. ಹಾಗೆಯೇ ವಾಯುವೂ, ವರುಣನೂ, ಬುಧನೂ, ಅಂಗಾರಕನೂ, ಇನ್ನೂ ಉಳಿದ ಗ್ರಹಗಳೂ, ವೀರ್ಯಶಾಲಿಯಾದ ಮನ್ಮಥನೂ, ಶಿವನೊಡನೆ ಸೇರಿಕೊಂಡರು.

೩೬. ಹಾಗೆಯೇ ಉಗ್ರದಂಷ್ಟ್ರನೂ, ಉಗ್ರದಂಡನೂ, ಕೋರಟನೂ, ಕೋಟಭನೂ, ಬೆಂಬಲವಾಗಿ ಬಂದರು. ಇವರಲ್ಲದೆ ಮಹೇಶ್ವರನ ಮಡದಿಯಾದ ಸಾಕ್ಷಾತ್ ಭದ್ರಕಾಲಿಯು, ನೂರು ಬಾಹುಗಳನ್ನು ಧರಿಸಿ ಅಲ್ಲಿಗೆ ಬಂದಳು.

೩೭. ಆ ಭದ್ರಕಾಳಿಯು, ಉತ್ತಮೋತ್ತಮವಾದ ರತ್ನಗಳ ಸಾರಾಂಶವನ್ನೇ ತೆಗೆದು ನಿರ್ಮಿಸಿದ್ದ ವಿಮಾನಶ್ರೇಷ್ಠವನ್ನೇರಿ ಕುಳಿತಿದ್ದಳು. ಕೆಂಪು ವಸ್ತ್ರವನ್ನು ಉಟ್ಟು ಕೆಂಪುಹೂವಿನ ಮಾಲೆಗಳನ್ನು ಧರಿಸಿದ್ದಳು. ಕೆಂಪು ಗಂಧವನ್ನು ಮೈಗೆ ತೊಡೆದುಕೊಂಡಿದ್ದಳು.

೩೮. ಆಕೆಯು ಸಂತೋಷದಿಂದ ಒಮ್ಮೆ ನರ್ತಿಸುವಳು. ಒಮ್ಮೆ ನಗುವಳು. ಒಮ್ಮೆ ಇಂಪಾದ ಕಂಠದಿಂದ ಹಾಡುವಳು. ಅವಳು ತನ್ನ ಅನುಯಾಯಿಗಳಿಗೆ ಅಭಯವನ್ನೂ ಶತ್ರುಗಳಿಗೆ ಭಯವನ್ನೂ ಹುಟ್ಟಿಸುತ್ತಿದ್ದಳು.

ಬಿಭ್ರತೀ ವಿಕಟಾಂ ಜಿಹ್ವಾಂ ಸುಲೀಲಾಂ ಯೋಜನಾಯುತಾಂ ।
ಶಂಖಚಕ್ರಗದಾಪದ್ಮಖಡ್ಗಚರ್ಮಧನುಶ್ಶರಾನ್ ॥ ೩೯ ॥

ಖರ್ಪರಂ ವರ್ತುಲಾಕಾರಂ ಗಂಭೀರಂ ಯೋಜನಾಯುತಂ ।
ತ್ರಿಶೂಲಂ ಗಗನಸ್ಪರ್ಶಿ ಶಕ್ತಿಂ ಚ ಯೋಜನಾಯತಾಂ ॥ ೪೦ ॥

ಮುದ್ಗರಂ ಮುಸಲಂ ವಜ್ರಂ ಖಡ್ಗಂ ಫಲಕಮುಲ್ಬಣಂ ।
ವೈಷ್ಣವಾಸ್ತ್ರಂ ವಾರುಣಾಸ್ತ್ರಂ ವಾಯವ್ಯಂ ನಾಗಪಾಶಕಂ ॥ ೪೧ ॥

ನಾರಾಯಣಾಸ್ತ್ರಂ ಗಾಂಧರ್ವಂ ಬ್ರಹ್ಮಾಸ್ತ್ರಂ ಗಾರುಡಂ ತಥಾ ।
ಪಾರ್ಜನ್ಯಂ ಚ ಪಾಶುಪತಂ ಜೃಂಭಣಾಸ್ತ್ರಂ ಚ ಪಾರ್ವತಂ ॥ ೪೨ ॥

ಮಹಾವೀರಂ ಚ ಸೌರಂ ಚ ಕಾಲಕಾಲಂ ಮಹಾನಲಂ ।
ಮಹೇಶ್ವರಾಸ್ತ್ರಂ ಯಾಮ್ಯಂ ಚ ದಂಡಂ ಸಂಮೋಹನಂ ತಥಾ ॥ ೪೩ ॥

---

೩೯-೪೦. ಆಕೆಯ ನಾಲಿಗೆಯು, ಒಂದು ಯೋಜನದಷ್ಟು ಉದ್ದವಾಗಿ ಇತ್ತಲಿಂದ ಅತ್ತ ಹೊರಳುತ್ತಾ ಬಹಳ ಭಯವನ್ನು ಹುಟ್ಟಿಸುತ್ತಿದ್ದಿತು. ಅವಳು ತನ್ನ ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ, ಕತ್ತಿ, ಗುರಾಣಿ, ಬಿಲ್ಲುಬಾಣಗಳನ್ನು ಧರಿಸಿದ್ದಳು. ಒಂದು ಕೈಯಲ್ಲಿ ಒಂದು ಯೋಜನದಷ್ಟು ವಿಸ್ತಾರವಾಗಿಯೂ, ಬಹಳ ಆಳವಾಗಿಯೂ ಗುಂಡಾಗಿಯೂ ಇರುವ ತಲೆಚಿಪ್ಪನ್ನು ಹಿಡಿದಿದ್ದಳು. ಒಂದು ಕೈಲಿ ಆಕಾಶವನ್ನು ಮುಟ್ಟುತ್ತಿದ್ದ ತ್ರಿಶೂಲವನ್ನೂ ಮತ್ತೊಂದು ಕೈಲಿ ಯೋಜನದಷ್ಟು ಉದ್ದವಾಗಿದ್ದ ಶಕ್ತಿಯೆಂಬ ಆಯುಧವನ್ನೂ ಧರಿಸಿದ್ದಳು.

೪೧-೪೪. ಇಷ್ಟೇ ಅಲ್ಲದೆ ಆಕೆಯ ಕೈಗಳಲ್ಲಿ ಇನ್ನೂ ಅನೇಕ ಆಯುಧಗಳು ಕಂಗೊಳಿಸುತ್ತಿದ್ದುವು. ಒಂದು ಕೈಲಿ ಮುದ್ಗರ, ಇನ್ನೊಂದು ಕೈಲಿ ಮುಸಲಿ, ಬೇರೊಂದು ಕೈಲಿ ವಜ್ರಾಯುಧ, ಮತ್ತೊಂದು ಕೈಲಿ ಕತ್ತಿ, ಮಗದೊಂದು ಕೈಲಿ ದೊಡ್ಡ ಗುರಾಣಿ ಇಂತು ಶೋಭಿಸುತ್ತಿದ್ದುವು. ಆಯುಧಗಳಲ್ಲದೆ ವೈಷ್ಣವಾಸ್ತ್ರ, ವಾರುಣಾಸ್ತ್ರ, ವಾಯವ್ಯಾಸ್ತ್ರ, ನಾಗಪಾಶ, ನಾರಾಯಣಾಸ್ತ್ರ, ಗಂಧರ್ವಾಸ್ತ್ರ, ಬ್ರಹ್ಮಾಸ್ತ್ರ, ಗರುಡಾಸ್ತ್ರ, ಪರ್ಜನ್ಯಾಸ್ತ್ರ, ಪಾಶುಪತಾಸ್ತ್ರ, ಜೃಂಭಣಾಸ್ತ್ರ, ಪರ್ವತಾಸ್ತ್ರ,

ಸಮರ್ಥನುಸ್ತ್ರಕಂ ದಿವ್ಯಂ ದಿವ್ಯಾಸ್ತ್ರಶತಕಂ ಪರಂ ।
ಬಿಭ್ರತೀ ಚ ಕರೈಸ್ಸರ್ವೈರನ್ಯಾನ್ಯಪಿ ಚ ಸಾ ತದಾ ॥ ೪೪ ॥

ಆಗತ್ಯ ತಸ್ಥೌ ಸಾ ತತ್ರ ಯೋಗಿನೀನಾಂ ತ್ರಿಕೋಟಿಭಿಃ ।
ಸಾರ್ಧಂ ಚ ಡಾಕಿನೀನಾಂ ವೈ ವಿಕಟಾನಾಂ ತ್ರಿಕೋಟಿಭಿಃ ॥ ೪೫ ॥

ಭೂತಪ್ರೇತಪಿಶಾಚಾಶ್ಚ ಕೂಷ್ಮಾಂಡಾ ಬ್ರಹ್ಮರಾಕ್ಷಸಾಃ ।
ವೇತಾಲಾ ರಾಕ್ಷಸಾಶ್ಚೈವ ಯಕ್ಷಾಶ್ಚೈವ ಸಕಿನ್ನರಾಃ ॥ ೪೬ ॥

ತೈಶ್ಚೈವಾಭಿವೃತಃ ಸ್ಕಂದಃ ಪ್ರಣಮ್ಯ ಚಂದ್ರಶೇಖರಂ ।
ಪಿತುಃ ಪಾರ್ಶ್ವೇ ಸಹಾಯೋ ಯಃ ಸಮುವಾಸ ತದಾಜ್ಞಯಾ ॥ ೪೭ ॥

ಅಥ ಶಂಭುಸ್ಸಮಾನೀಯ ಸ್ವಸೈನ್ಯಂ ಸಕಲಂ ತದಾ ।
ಯುದ್ಧಾರ್ಥಮಗಮದ್ರುದ್ರಶ್ಶಂಖಚೂಡೇನ ನಿರ್ಭಯಃ ॥ ೪೮ ॥

---

ಮಹಾವೀರಾಸ್ತ್ರ, ಸೂರ್ಯಾಸ್ತ್ರ, ಕಾಲಕಾಲಾಸ್ತ್ರ, ಆಗ್ನೇಯಾಸ್ತ್ರ, ಮಹೇಶ್ವರಾಸ್ತ್ರ, ಯಾಮ್ಯಾಸ್ತ್ರ. ಯಮದಂಡಾಸ್ತ್ರ, ಸಂಮೋಹನಾಸ್ತ್ರ, ಸಮರ್ಥಾಸ್ತ್ರ, ಮೊದಲಾದ ದಿವ್ಯಾಸ್ತ್ರಗಳನ್ನು ಧರಿಸಿದ್ದಳು. ಇವಲ್ಲದೆ ಇನ್ನೂ ಬೇರೆಯ ನೂರು ದಿವ್ಯಾಸ್ತ್ರಗಳನ್ನೂ ಹಿಡಿದಿದ್ದಳು. ಹೀಗೆ ಆಕೆಯು ತನ್ನ ಕೈಗಳಿಂದ ಬಗೆಬಗೆಯಾದ ಇನ್ನೂ ಅನೇಕ ಆಯುಧಗಳನ್ನು ಧರಿಸಿದ್ದಳು.

೪೫. ಆ ಭದ್ರಕಾಳಿಯು ಮೂರು ಕೋಟಿ ಯೋಗಿನಿಯರೊಡನೆಯೂ, ಭಯಂಕರವಾದ ಆಕಾರವುಳ್ಳ ಮೂರುಕೋಟಿ ಡಾಕಿನಿಯರೊಂದಿಗೆ ಕೂಡಿ ಶಿವನ ಬಳಿಗೆ ಬಂದು ನಿಂತುಕೊಂಡಳು.

೪೬-೪೭. ಬಳಿಕ ಭೂತಗಳು, ಪ್ರೇತಗಳು, ಪಿಶಾಚಗಳು, ಕೂಶ್ಮಾಂಡರು, ಬ್ರಹ್ಮರಾಕ್ಷಸರು, ಭೇತಾಳಗಳು, ರಾಕ್ಷಸರು, ಯಕ್ಷರು, ಕಿನ್ನರರು, ಗುಂಪುಗುಂಪಾಗಿ ತನ್ನನ್ನು ಬಳಸಿಬರುತ್ತಿರಲು, ಶಿವಕುಮಾರನಾದ ಸ್ಕಂದನು, ಆ ಚಂದ್ರಶೇಖರನನ್ನು ನಮಸ್ಕರಿಸಿ ಆತನ ಅಪ್ಪಣೆಯಂತೆ ಅಂಗರಕ್ಷಕನ ಹಾಗೆ ತನ್ನ ತಂದೆಯಾದ ಆ ಶಿವನ ಪಾರ್ಶ್ವದಲ್ಲಿ ಸಹಾಯಕನಾಗಿ ನಿಂತುಕೊಂಡನು.

೪೮. ಬಳಿಕ ಭಯವೆಂಬುದನ್ನೇ ಕಂಡರಿಯದ ಆ ಶಿವನು ತನ್ನ ಎಲ್ಲ ಸೈನ್ಯವನ್ನೂ ಒಟ್ಟುಗೂಡಿಸಿ, ಆ ಶಂಖಚೂಡನೊಡನೆ ಯುದ್ಧಮಾಡಲೋಸುಗ ದಂಡೆತ್ತಿ ನಡೆದನು.

ಚಂದ್ರಭಾಗಾನದೀತೀರೇ ವಟಮೂಲೇ ಮನೋಹರೇ ।
ತತ್ರ ತಸ್ಥೌ ಮಹಾದೇವೋ ದೇವನಿಸ್ತಾರಹೇತವೇ ॥ ೪೯ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡವಧೇ ಮಹಾದೇವ
ಯುದ್ಧಯಾತ್ರಾವರ್ಣನಂ ನಾಮ
ತ್ರಯಸ್ತ್ರಿಂಶೋಽಧ್ಯಾಯಃ.

---

೪೯. ದೇವತೆಗಳ ಕಷ್ಟವನ್ನು ನಿವಾರಣೆಮಾಡಲೋಸುಗ, ಆ ಮಹಾದೇವನು ಈರೀತಿ ದಂಡೆತ್ತಿಹೊರಟು ಚಂದ್ರಭಾಗಾನದಿಯ ತೀರದಲ್ಲಿ ಮನೋಹರವಾದ ಒಂದಾನೊಂದು ಆಲದಬುಡದಲ್ಲಿ ಬೀಡುಬಿಟ್ಟನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಮಹಾದೇವ ಯುದ್ಧಯಾತ್ರಾ ವರ್ಣನವೆಂಬ ಮೂವತ್ತಮೂರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅ ಥ ಶ್ರೀ ಶಿ ವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಚತುಸ್ತ್ರಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ವಿಧಿತಾತ ಮಹಾಬುದ್ಧೇ ಮುನೇ ಜೀವ ಚಿರಂ ಸಮಾಃ ।
ಕಥಿತಂ ಸುಮಹಚ್ಚಿತ್ರಂ ಚರಿತಂ ಚಂದ್ರಮೌಲಿನಃ ॥ ೧ ॥

ಶಿವದೂತೇ ಗತೇ ತತ್ರ ಶಂಖಚೂಡಶ್ಚ ದಾನವಃ ।
ಕಿಂ ಚಕಾರ ಪ್ರತಾಪೀ ಸ ತತ್ತ್ವಂ ವದ ಸುವಿಸ್ತರಂ ॥ ೨ ॥

---

### ಮೂವತ್ತನಾಲ್ಕನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯು ಸನತ್ಕುಮಾರನನ್ನು ಕುರಿತು, ಬ್ರಹ್ಮಮಾನಸ ಪುತ್ರನೂ, ಮಹಾಪ್ರಾಜ್ಞನೂ ಆದ ಓಮುನಿಯೇ ಅತ್ಯದ್ಭುತವಾದ ಶ್ರೀಶಂಕರನಚರಿತ್ರ ವನ್ನು ನನಗೆ ತಿಳಿಸಿರುವೆ. ನೀನು ಬಹುಕಾಲ ಬಾಳು.

೨. ಶಿವನ ದೂತನು ಹೊರಟುಹೋದ ಬಳಿಕ, ಆ ಪ್ರತಾಪಶಾಲಿಯಾದ ಶಂಖಚೂಡನು ಏನು ಮಾಡಿದನು ?. ಅದೆಲ್ಲವನ್ನೂ ವಿವರವಾಗಿ ನನಗೆ ತಿಳಿಸು ಎಂದು ಪ್ರಶ್ನೆಮಾಡಲು,

॥ ಸನತ್ಕುಮಾರ ಉವಾಚ ॥

ಅಥ ದೂತೇ ಗತೇ ತತ್ರ ಶಂಖಚೂಡಃ ಪ್ರತಾಪವಾನ್ ।
ಉವಾಚ ತುಲಸೀಂ ವಾರ್ತಾಂ ಗತ್ವಾಭ್ಯಂತರಮೇವ ತಾಂ ॥ ೩ ॥

॥ ಶಂಖಚೂಡ ಉವಾಚ ॥

ಶಂಭುದೂತಮುಖಾದ್ದೇವೀ ಯುದ್ಧಾಯಾಹಂ ಸಮುದ್ಯತಃ ।
ತೇನ ಗಚ್ಛಾಮ್ಯಹಂ ಯೋದ್ಧುಂ ಶಾಸನಂ ಕುರು ಮೇ ಧ್ರುವಂ ॥ ೪ ॥

ಇತ್ಯೇವಮುಕ್ತ್ವಾ ಸ ಜ್ಞಾನೀ ನಾನಾಬೋಧನತಃ ಪ್ರಿಯಾಂ ।
ಕ್ರೀಡಾಂ ಚಕಾರ ಹರ್ಷೇಣ ತಮನಾದೃತ್ಯ ಶಂಕರಂ ॥ ೫ ॥

ತೌ ದಂಪತೀ ಚಿಕ್ರೀಡಾತೇ ನಿಮಗ್ನೌ ಸುಖಸಾಗರೇ ।
ನಾನಾಕಾಮುಕಲಾಭಿಶ್ಚ ನಿಶಿ ಚಾಟುಶತೈರಪಿ ॥ ೬ ॥

---

೩. ಆಗ ಸನತ್ಕುಮಾರನು ವ್ಯಾಸನನ್ನು ಕುರಿತು ಇಂತು ಹೇಳತೊಡಗಿದನು. ಆ ಶಿವದೂತನು ಹೊರಟುಹೋದಮೇಲೆ, ಆ ಸಾಹಸಿಗನಾದ ಶಂಖಚೂಡನು ಸೆಟ್ಟಗೆ ಅಂತಃಪುರವನ್ನು ಹೊಕ್ಕು ತನ್ನ ಪ್ರಿಯೆಯಾದ ತುಲಸಿಗೆ ಈ ವಿಷಯವನ್ನು ತಿಳಿಸಿದನು.

೪. ಓ ದೇವಿ, ಶಿವನ ದೂತನಿಂದ ಸಮಾಚಾರವನ್ನು ಕೇಳಿ ನಾನೀಗ ಯುದ್ಧಕ್ಕೆ ಸಿದ್ಧನಾಗಿರುವೆನು. ಆದುದರಿಂದ ಈಗ ಯುದ್ಧಕ್ಕೆ ಹೊರಡುವೆನು. ನಾನು ಹೇಳಿದಂತೆ ಕೇಳು.

೫. ಆ ಜ್ಞಾನಿಯಾದ ಶಂಖಚೂಡನು ಹೀಗೆ ನುಡಿದು ತನ್ನ ಪ್ರಿಯೆಯನ್ನು ನಾನಾವಿಧವಾಗಿ ಸಂತೈಸಿ, ಶಿವನನ್ನು ಗಣನೆಗೆ ತಾರದೆ, ಬಹು ಸಂತೋಷದಿಂದ ಆಕೆ ಯೊಡನೆ ವಿಹರಿಸತೊಡಗಿದನು.

೬. ಆ ಸತಿಪತಿಗಳು ರಾತ್ರಿಯಲ್ಲಿ ಬಗೆಬಗೆಯಾದ ಸಲ್ಲಾಪಾದಿಗಳಿಂದಲೂ, ವಿನೋದಗಳಿಂದಲೂ ಮದನಕಲಾಕೌಶಲದಿಂದಲೂ ಸುಖಸಾಗರದಲ್ಲಿ ಮುಳುಗಿ ತೇಲಾಡುತ್ತಾ ಬಹುವಾಗಿ ವಿಹರಿಸಿದರು.

ಬ್ರಾಹ್ಮೇ ಮುಹೂರ್ತೇ ಉತ್ಥಾಯ ಪ್ರಾತಃಕೃತ್ಯಂ ವಿಧಾಯ ಚ ।
ನಿತ್ಯಕಾರ್ಯಂ ಚ ಕೃತ್ವಾದೌ ದದೌ ದಾನಮಂತಕಂ ॥ ೭ ॥

ಪುತ್ರಂ ಕೃತ್ವಾ ಚ ರಾಜೇಂದ್ರಂ ಸರ್ವೇಷು ದಾನವೇಷು ಚ ।
ಪುತ್ರೇ ಸಮರ್ಪ್ಯ ಭಾರ್ಯಾಂ ಚ ಸ ರಾಜ್ಯಂ ಸರ್ವಸಂಪದಂ ॥ ೮ ॥

ಪ್ರಿಯಾಮಾಶ್ವಾಸಯಾಮಾಸ ಸ ರಾಜಾ ರುದತೀಂ ಪುನಃ ।
ನಿಷೇಧತೀಂ ಚ ಗಮನಂ ನಾನಾವಾರ್ತಾಂ ಪ್ರಕಥ್ಯ ಚ ॥ ೯ ॥

ನಿಜಸೇನಾಪತಿಂ ವೀರಂ ಸಮಾಹೂಯ ಸಮಾದೃತಃ ।
ಆದಿದೇಶ ಸ ಸಂನದ್ಧಸಂಗ್ರಾಮಂ ಕರ್ತುಮುದ್ಯತಃ ॥ ೧೦ ॥

॥ ಶಂಖಚೂಡ ಉವಾಚ ॥

ಅದ್ಯ ಸೇನಾಪತೇ ವೀರಾಸ್ಸರ್ವೇ ಸಮರಶಾಲಿನಃ ।
ಸಂನದ್ಧಾಖಿಲಕರ್ಮಾಣೋ ನಿರ್ಗಚ್ಛಂತು ರಣಾಯ ಚ ॥ ೧೧ ॥

---

೭. ಶಂಖಚೂಡನು, ಬೆಳಗಾಗಲು ಐದು ಗಳಿಗೆ ಮುಂಚಿತವಾಗಿವಾಗಿಯೇ ಎದ್ದು ಪ್ರಾತಃಕಾಲದ ಶೌಚಾದಿವಿಧಿಗಳನ್ನು ತೀರಿಸಿಕೊಂಡು ಸ್ನಾನಾದಿ ನಿತ್ಯಕರ್ಮಗಳನ್ನು ನೆರವೇರಿಸಿ ಬಹಳವಾಗಿ ದಾನಗಳನ್ನು ಮಾಡಿದನು.

೮. ಬಳಿಕ ತನ್ನ ಮಗನನ್ನು ಎಲ್ಲ ದಾನವರಿಗೂ ರಾಜೇಂದ್ರನನ್ನಾಗಿಮಾಡಿ ತನ್ನ ಹೆಂಡತಿಯನ್ನೂ, ರಾಜ್ಯವನ್ನೂ ಎಲ್ಲ ಸಂಪತ್ತುಗಳನ್ನೂ ನೋಡಿಕೊಳ್ಳುವಂತೆ ಮಗನಿಗೆ ಒಪ್ಪಿಸಿದನು.

೯. ಆ ದಾನವರಾಜನಾದ ಶಂಖಚೂಡನು ಯುದ್ಧಕ್ಕೆ ಹೊರಡಲು, ಅವನ ಪತ್ನಿಯು ಅಳುತ್ತಾ, ಮತ್ತೆ ಮತ್ತೆ ಯುದ್ಧಕ್ಕೆ ಹೋಗಬೇಡವೆಂದು ತಡೆಯುತ್ತಿದ್ದಳು. ಆದರೂ ತನ್ನ ಪ್ರಿಯೆಯನ್ನು ಬಗೆಬಗೆಯಾದ ಸಮಾಧಾನೋಕ್ತಿಗಳನ್ನು ಹೇಳಿ, ಸಂತೈಸಿದನು.

೧೦. ಅನಂತರ ಸಮರೋನ್ಮುಖನಾಗಿ ಸಿದ್ಧನಾಗಿ ನಿಂತಿದ್ದ ಆ ಶಂಖಚೂಡನು ಪರಾಕ್ರಮಶಾಲಿಯಾದ ತನ್ನ ಸೇನಾಪತಿಯನ್ನು ಆದರದಿಂದ ಬರಮಾಡಿಕೊಂಡು ಈ ರೀತಿ ಅಪ್ಪಣೆಮಾಡಿದನು.

೧೧. ಎಲೈ ಸೇನಾಪತಿಯೇ, ಇಂದು ಸಮರೋತ್ಸುಕರಾದ ನಮ್ಮ ದಾನವ ವೀರರೆಲ್ಲರೂ ಎಲ್ಲ ಬಗೆಯಿಂದಲೂ ಸಜ್ಜಾಗಿ ಯುದ್ಧಕ್ಕೆ ಹೊರಡಲಿ.

ದೈತ್ಯಾಶ್ಚ ದಾನವಾಃ ಶೂರಾಃ ಷಡಶೀತಿರುದಾಯುಧಾಃ ।
ಕಂಕಾನಾಂ ಬಲಿನಾಂ ಶೀಘ್ರಂ ಸೇನಾ ನಿರ್ಯಾಂತು ನಿರ್ಭಯಾಃ ॥ ೧೨ ॥

ಪಂಚಾಶದಸುರಾಣಾಂ ಹಿ ನಿರ್ಗಚ್ಛಂತು ಕುಲಾನಿ ವೈ ।
ಕೋಟಿವೀರ್ಯಾಣಿ ಯುದ್ಧಾರ್ಥಂ ಶಂಭುನಾ ದೇವಪಕ್ಷಿಣಾ ॥ ೧೩ ॥

ಸಂನದ್ಧಾನಿ ಚ ಧೌಮ್ರಾಣಾಂ ಕುಲಾನಿ ಚ ಶತಂ ದ್ರುತಂ ।
ನಿರ್ಗಚ್ಛಂತು ರಣಾರ್ಥಂ ಹಿ ಶಂಭುನಾ ಮಮ ಶಾಸನಾತ್ ॥ ೧೪ ॥

ಕಾಲಕೇಯಾಶ್ಚ ಮೌರ್ಯಾಶ್ಚ ದೌರ್ಹೃದಾಃ ಕಾಲಕಾಸ್ತಥಾ ।
ಸಜ್ಜಾ ನಿರ್ಯಾಂತು ಯುದ್ಧಾಯ ರುದ್ರೇಣ ಮಮ ಶಾಸನಾತ್ ॥ ೧೫ ॥

॥ ಸನತ್ಕುಮಾರ ಉವಾಚ ॥

ಇತ್ಯಾಜ್ಞಾಸ್ಯಾಸುರಪತಿರ್ದಾನವೇಂದ್ರೋ ಮಹಾಬಲಃ ।
ನಿರ್ಜಗಾಮ ಮಹಾಸೈನ್ಯಃ ಸಹಸ್ರೈರ್ಬಹುಭಿರ್ವೃತಃ ॥ ೧೬ ॥

---

೧೨. ಮಹಾಶೂರರಾದ ಎಂಭತ್ತಾರು ಬಗೆಯ ದೈತ್ಯರೂ, ದಾನವರೂ ತಮ್ಮ ತಮ್ಮ ಆಯುಧಗಳನ್ನು ಹಿಡಿದು ಯುದ್ಧಕ್ಕೆ ಹೊರಡಲಿ. ಹಾಗೆಯೇ ಬಲಾಢ್ಯರಾದ ಕಂಕರದಳಗಳೂ ನಿರ್ಭಯವಾಗಿ ತೆರಳಲಿ.

೧೩. ಕೋಟಿ ವೀರರಿಗೆಣೆಯಾದಂತಹ ವೀರ್ಯಶಾಲಿಗಳಾದ ಒಬ್ಬೊಬ್ಬ ದೈತ್ಯನನ್ನೂ ಒಳಗೊಂಡಿರುವ ಇಪ್ಪತ್ತು ಅಸುರರ ಕುಲಗಳು ದೇವಪಕ್ಷಪಾತಿಯಾದ ಆ ಶಂಭುವಿನೊಡನೆ ಸೆಣಸಲು ಹೊರಡಲಿ.

೧೪. ಆ ರುದ್ರನೊಡನೆ ಹೋರಾಡಲು ಎಲ್ಲ ಬಗೆಯ ಪರಿಕರಗಳನ್ನೂ ತೊಟ್ಟು ಸಿದ್ಧರಾಗಿರುವ ಧೌಮ್ರರ ನೂರುಮನೆತನಗಳವರು ನನ್ನ ಅಪ್ಪಣೆಯಂತೆ ನಡೆಯಲಿ.

೧೫. ನನ್ನ ಅಪ್ಪಣೆಯಂತೆ ಆ ರುದ್ರನೊಡನೆ ಕಾಳಗವಾಗಲು ಕಾಲಕೇಯರೂ ಮೌರ್ಯರೂ, ದೌರ್ಹೃದರೂ, ಕಾಲಕರೂ ಸಿದ್ಧರಾಗಿ ಕವಚ ಮೊದಲಾದುವುಗಳನ್ನು ತೊಟ್ಟು ಹೊರಹೊರಡಲಿ.

೧೬. ಓ ವ್ಯಾಸ, ಈರೀತಿಯಾಗಿ ದಾನವರಿಗೂ, ಅಸುರರಿಗೂ ಅಧಿಪತಿಯೂ ಮಹಾಬಲಾಢ್ಯನೂ ಆದ ಶಂಖಚೂಡನು ತನ್ನ ಸೇನಾಪತಿಗೆ ಅಪ್ಪಣೆಮಾಡಿ, ಸಾವಿರಾರು ಮಂದಿಯನ್ನು ಕೂಡಿಕೊಂಡು, ದೊಡ್ಡಸೇನೆಯೊಡನೆ ಹೊರಟುಬಂದನು.

ತಸ್ಯ ಸೇನಾಪತಿಶ್ಚೈವ ಯುದ್ಧಶಾಸ್ತ್ರವಿಶಾರದಃ ।
ಮಹಾರಥೋ ಮಹಾವೀರೋ ರಥಿನಾಂ ಪ್ರವರೋ ರಣೇ ॥ ೧೭ ॥

ತ್ರಿಲಕ್ಷಾಕ್ಷೋಹಿಣೀಯುಕ್ತೋ ಮಂಡಲ್ಯಂ ಚ ಚಕಾರ ಹ ।
ಬಹಿರ್ಬಭೂವ ಶಿಬಿರಾದ್ರಣೇ ವೀರಭಯಂಕರಃ ॥ ೧೮ ॥

ರತ್ನೇಂದ್ರಂ ಸಾರನಿರ್ಮಾಣಂ ವಿಮಾನಮಭಿರುಹ್ಯ ಸಃ ।
ಗುರುವರ್ಗಂ ಪುರಸ್ಕೃತ್ಯ ರಣಾರ್ಥಂ ಪ್ರಯಯೌ ಕಿಲ ॥ ೧೯ ॥

ಪುಷ್ಪಭದ್ರಾನದೀತೀರೇ ಯತ್ರಾಕ್ಷಯವಟಃ ಶುಭಃ ।
ಸಿದ್ಧಾಶ್ರಮೇ ಚ ಸಿದ್ಧಾನಾಂ ಸಿದ್ಧಿಕ್ಷೇತ್ರಂ ಸುಸಿದ್ಧಿದಂ ॥ ೨೦ ॥

---

೧೭. ಆತನ ಸೇನಾಪತಿಯು ಯುದ್ಧಗಳನ್ನು ನಡೆಸುವುದರಲ್ಲಿ ಬಹಳ ಕೌಶಲವನ್ನು ಪಡೆದವನು. ಮಹಾಸಾಹಸವುಳ್ಳವನು. ರಥಿಕರಲ್ಲೆಲ್ಲಾ ಹೆಸರಾಂತ ಮಹಾರಥನಾಗಿದ್ದನು.

೧೮. ಯುದ್ಧದಲ್ಲಿ ಶತ್ರುವೀರರನ್ನು ಭಯದಿಂದ ತಲ್ಲಣಿಸುವಂತೆ ಮಾಡುತ್ತಿದ್ದ ಆ ಸೇನಾಪತಿಯು ಮೂರು ಲಕ್ಷ ಅಕ್ಷೋಹಿಣಿಗಳಷ್ಟು ಸೇನೆಯೊಡನೆ ಪ್ರದಕ್ಷಿಣವಾಗಿ ಸುತ್ತುಬಂದು ಶಿಬರದಿಂದ ಈಚೆಗೆ ಹೊರಟನು.

೧೯. ಆ ಶಂಖಚೂಡನು ಅತ್ಯುತ್ತಮವಾದ ವಸ್ತುಗಳಿಂದ ನಿರ್ಮಿಸಲ್ಪಟ್ಟಿದ್ದ ರತ್ನೇಂದ್ರವೆಂಬ ವಿಮಾನವನ್ನೇರಿ ಕುಳಿತು ಹಿರಿಯರನ್ನು ಮುಂದೆ ಇಟ್ಟುಕೊಂಡು ಯುದ್ಧಕ್ಕೆ ಹೊರಟನು.

೨೦. ಅನಂತರ ಶುಭಕರವಾದ ಅಕ್ಷಯವಟವಿದ್ದ ಪುಷ್ಪಭದ್ರಾನದಿಯ ತೀರವನ್ನು ಸೇರಿದನು. ಹಿಂದೆ ಅಲ್ಲಿ ಸಿದ್ಧರೆಂಬುವರು, ತಪಸ್ಸಿನಿಂದ ಸಿದ್ಧಿಯನ್ನು ಪಡೆದು, ಸಿದ್ಧರೆಂಬುದಾಗಿ ಹೆಸರು ಪಡೆದರು. ಆ ಕ್ಷೇತ್ರವೂ ಸಿದ್ಧಾಶ್ರಮವೆನಿಸಿತು.

ಕಪಿಲಸ್ಯ ತಪಃಸ್ಥಾನಂ ಪುಣ್ಯಕ್ಷೇತ್ರೇ ಚ ಭಾರತೇ ।
ಪಶ್ಚಿಮೋದಧಿಪೂರ್ವೇ ಚ ಮಲಯಸ್ಯ ಹಿ ಪಶ್ಚಿಮೇ ॥ ೨೧ ॥

ಶ್ರೀಶೈಲೋತ್ತರಭಾಗೇ ಚ ಗಂಧಮಾದನದಕ್ಷಿಣೇ ।
ಪಂಚಯೋಜನವಿಸ್ತೀರ್ಣೇ ದೈರ್ಘ್ಯೇ ಶತಗುಣಸ್ತಥಾ ॥ ೨೨ ॥

ಶುದ್ಧಸ್ಫಟಿಕಸಂಕಾಶಾ ಭಾರತೇ ಚ ಸುಪುಣ್ಯದಾ ।
ಪುಷ್ಪಭದ್ರಾ ನದೀ ರಮ್ಯಾ ಜಲಪೂರ್ಣಾ ಸರಸ್ವತೀ ॥ ೨೩ ॥

ಲವಣೋದಧಿಪ್ರಿಯಾ ಭಾರ್ಯಾ ಶಶ್ವತ್ಸೌಭಾಗ್ಯಸಂಯುತಾ ।
ಸರಸ್ವತೀಸಂಶ್ರಿತಾ ಚ ನಿರ್ಗತಾ ಸಾ ಹಿಮಾಲಯಾತ್ ॥ ೨೪ ॥

---

೨೧. ಪುಣ್ಯಕ್ಷೇತ್ರವಾದ ಈ ಭಾರತಭೂಮಿಯಲ್ಲಿ ಕಪಿಲಮಹರ್ಷಿಯು, ಈ ಸ್ಥಳವನ್ನೇ ಆರಿಸಿ ಇಲ್ಲಿಯೇ ತಪಸ್ಸುಮಾಡಿದನು. ಈ ಪ್ರದೇಶವು ಪಶ್ಚಿಮ ಸಮುದ್ರಕ್ಕೆ ಪೂರ್ವದಲ್ಲಿಯೂ ಮಲಯಪರ್ವತಕ್ಕೆ ಪಶ್ಚಿಮದಲ್ಲಿಯೂ ಇದ್ದಿತು.

೨೨. ಹಾಗೆಯೇ ಶ್ರೀಶೈಲಕ್ಕೆ ಉತ್ತರದಲ್ಲಿಯೂ, ಗಂಧಮಾದನ ಪರ್ವತಕ್ಕೆ ದಕ್ಷಿಣದಲ್ಲಿಯೂ ಆ ಸ್ಥಾನವು ಇದ್ದಿತು. ಅಲ್ಲದೆ ಐದು ಯೋಜನಗಳು ಅಗಲ ವಾಗಿಯೂ ಐನೂರು ಯೋಜನಗಳು ಉದ್ದವಾಗಿಯೂ ಇತ್ತು.

೨೩-೨೪. ಆ ಕ್ಷೇತ್ರದಲ್ಲಿ ರಮ್ಯವಾದ ಪುಷ್ಪಭದ್ರಾನದಿಯು ಹರಿಯುತ್ತಿತ್ತು. ಈ ನದಿಯು ಭಾರತವರ್ಷದಲ್ಲೆಲ್ಲಾ ಪುಣ್ಯಪ್ರದವಾದುದು. ಯಾವಾಗಲೂ ನೀರು ತುಂಬಿ ಹರಿಯುತ್ತಿರುವುದು. ನದಿಗಳಿಗೆಲ್ಲಾ ಪತಿಯಾದ ಲವಣಸಮುದ್ರದ ವಿಶೇಷ ವಾದ ಪ್ರೀತಿಗೆ ಪಾತ್ರವಾಗಿ ಸರ್ವದಾ ಸೌಭಾಗ್ಯದಿಂದ ಮೆರೆಯುತ್ತಿರುವುದು. ಈ ಪುಷ್ಪಭದ್ರೆಯು ಹಿಮವತ್ಪರ್ವತದಲ್ಲಿ ಹುಟ್ಟಿ ಅಲ್ಲಿಂದ ಹರಿದುಬರುತ್ತಾ ಸರಸ್ವತೀನದಿ ಯನ್ನು ಜೊತೆಗೂಡಿ, ಗೋಮಂತವನ್ನು (ಕೊಂಕಣ) ಎಡಗಡೆಗೆ ಬಿಟ್ಟು ಮುಂದೆ ಪಶ್ಚಿಮಸಮುದ್ರವನ್ನು ಸೇರುವುದು.

ಗೋಮಂತಂ ವಾಮತಃ ಕೃತ್ವಾ ಪ್ರವಿಷ್ಟಾ ಪಶ್ಚಿಮೋದಧೌ ।
ತತ್ರ ಗತ್ವಾ ಶಂಖಚೂಡಃ ಶಿವಸೇನಾಂ ದದರ್ಶ ಹ　　　　॥ ೨೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡಯಾತ್ರಾವರ್ಣನಂ
ನಾಮ ಚತುಸ್ತ್ರಿಂಶೋಽಧ್ಯಾಯಃ

---

೨೫. ಆ ಪುಷ್ಪಭದ್ರಾತೀರವನ್ನು ಸೇರಿದಮೇಲೆ ಶಂಖಚೂಡನು ಅಲ್ಲಿದ್ದ ಆಲದಮರದ ಬಳಿ ಬೀಡುಬಿಟ್ಟಿದ್ದ ಶಿವನ ಸೇನೆಯನ್ನು ಕಂಡನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಶಂಖಚೂಡಯಾತ್ರಾ ವರ್ಣನವೆಂಬ ಮೂವತ್ತನಾಲ್ಕನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಪಂಚತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ತತ್ರ ಸ್ಥಿತ್ವಾ ದಾನವೇಂದ್ರೋ ಮಹಾಂತಂ ದಾನವೇಶ್ವರಂ ।
ದೂತಂ ಕೃತ್ವಾ ಮಹಾವಿಜ್ಞಂ ಪ್ರೇಷಯಾಮಾಸ ಶಂಕರಂ ॥ ೧ ॥

ಸ ತತ್ರ ಗತ್ವಾ ದೂತಶ್ಚ ಚಂದ್ರಭಾಲಂ ದದರ್ಶ ಹ ।
ವಟಮೂಲೇ ಸಮಾಸೀನಂ ಸೂರ್ಯಕೋಟಿಸಮಪ್ರಭಂ ॥ ೨ ॥

---

## ಮೂವತ್ತೈದನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು:—ಓ ವ್ಯಾಸ, ಆ ಶಂಖಚೂಡನು ಆ ಪುಷ್ಪಭದ್ರಾನದಿಯ ದಡದಲ್ಲಿ ತಳವೂರಿದ ಬಳಿಕ, ಬಹಳ ಬುದ್ಧಿವಂತನೂ ಗೌರವಶಾಲಿಯೂ ಆದ ಓರ್ವ ದಾನವಶ್ರೇಷ್ಠನನ್ನು ಕರೆದು ಆತನನ್ನು ಶಿವನ ಬಳಿಗೆ ದೂತನನ್ನಾಗಿ ಕಳುಹಿಸಿದನು.

೨. ಆ ದೂತನು ಅಲ್ಲಿಗೆ ತೆರಳಿ ಆಲದಮರದ ಬುಡದಲ್ಲಿ ಬೀಡುಬಿಟ್ಟು ಕುಳಿತಿದ್ದ ಚಂದ್ರಮೌಲಿಯನ್ನು ಕಂಡನು. ಆ ಶಿವನ ಕಾಂತಿಯು ಕೋಟಿಸೂರ್ಯರಿಗೆ ಸಮಾನವಾಗಿತ್ತು.

ಕೃತ್ವಾ ಯೋಗಾಸನಂ ದೃಷ್ಟ್ಯಾ ಮುದ್ರಾಯುಕ್ತಂ ಚ ಸಸ್ಮಿತಂ ।
ಶುದ್ಧಸ್ಫಟಿಕಸಂಕಾಶಂ ಜ್ವಲಂತಂ ಬ್ರಹ್ಮತೇಜಸಾ ॥ ೩ ॥

ತ್ರಿಶೂಲಪಟ್ಟಿಶಧರಂ ವ್ಯಾಘ್ರಚರ್ಮಾಂಬರಾವೃತಂ
ಭಕ್ತಮೃತ್ಯುಹರಂ ಶಾಂತಂ ಗೌರೀಕಾಂತಂ ತ್ರಿಲೋಚನಂ ॥ ೪ ॥

ತಪಸಾಂ ಫಲದಾತಾರಂ ಕರ್ತಾರಂ ಸರ್ವಸಂಪದಾಂ ।
ಆಶುತೋಷಂ ಪ್ರಸನ್ನಾಸ್ಯಂ ಭಕ್ತಾನುಗ್ರಹಕಾತರಂ ॥ ೫ ॥

ವಿಶ್ವನಾಥಂ ವಿಶ್ವಭೀಜಂ ವಿಶ್ವರೂಪಂ ಚ ವಿಶ್ವಜಂ ।
ವಿಶ್ವೇಶ್ವರಂ ವಿಶ್ವಕರಂ ವಿಶ್ವಸಂಹಾರಕಾರಣಂ ॥ ೬ ॥

---

೩. ಆತನು ಯೋಗಾಸನವನ್ನು ಹಾಕಿ ಕುಳಿತುಕೊಂಡು ಅರೆಗಣ್ಣು ಮುಚ್ಚಿ ಮಂದಹಾಸವನ್ನು ಬೀರುತ್ತಿದ್ದನು. ಶುಭ್ರವಾದ ಸ್ಫಟಿಕದಂತೆ ಅವನ ಮೈಬಣ್ಣ ವಿದ್ದಿತು. ಆ ಶಿವನು ಬ್ರಹ್ಮತೇಜಸ್ಸಿನಿಂದ ಬೆಳಗುತ್ತಿದ್ದನು.

೪. ಅವನ ಕೈಗಳಲ್ಲಿ ತ್ರಿಶೂಲ ಮತ್ತು ಪಟ್ಟಿಶಗಳು ವಿರಾಜಿಸುತ್ತಿದ್ದುವು. ಹುಲಿಯಚರ್ಮವು ಆತನ ಮೈಯನ್ನು ಮುಚ್ಚಿದ್ದಿತು. ಭಕ್ತರ ಮೃತ್ಯುವನ್ನು ಪರಿಹರಿಸುವವನೂ ಶಾಂತನೂ ಆದ ಆ ಗೌರೀಕಾಂತನು ಮೂರು ಕಂಗಳಿಂದ ವಿರಾಜಿ ಸುತ್ತಿದ್ದನು.

೫. ಆ ಶಿವನು ತಪಸ್ಸುಗಳಿಗೆ ಫಲವನ್ನು ಕರುಣಿಸುತ್ತಿದ್ದನು. ಸಕಲವಿಧವಾದ ಸಂಪತ್ತನ್ನೂ ಕೊಡುತ್ತಿದ್ದನು. ಆತನು ಬೇಗನೆ ಸಂತೋಷವನ್ನು ತೋರುತ್ತಿದ್ದನು. ಆತನ ಮುಖವು ಸರ್ವದಾ ಪ್ರಸನ್ನವಾಗಿದ್ದಿತು. ಆ ಕರುಣಾಳುವು ಭಕ್ತರನ್ನು ಅನುಗ್ರಹಿಸಲು ತವಕಪಡುತ್ತಿದ್ದನು.

೬. ಆತನು ಈ ಪ್ರಪಂಚಕ್ಕೆ ಒಡೆಯನು. ಇದಕ್ಕೆ ಮೂಲಕಾರಣನೂ ಆತನೆ. ಕಣ್ಣಿಗೆ ಕಾಣುವ ಈ ಜಗತ್ತೆಲ್ಲವೂ ಆ ಶಿವನಸ್ವರೂಪವೇ ಆಗಿರುವುದು. ಆ ಪ್ರಭುವು ಸಕಲ ವಸ್ತುಗಳಿಗೂ ಒಡೆಯನು. ಅವೆಲ್ಲಕ್ಕೂ ಕರ್ತೃವು. ಅವುಗಳನ್ನು ಕೊನೆಗೆ ನಾಶಮಾಡುವವನೂ ಅವನೇ.

ಕಾರಣಂ ಕಾರಣಾನಾಂ ಚ ನರಕಾರ್ಣವತಾರಣಂ ।
ಜ್ಞಾನಪ್ರದಂ ಜ್ಞಾನಬೀಜಂ ಜ್ಞಾನಾನಂದಂ ಸನಾತನಂ ॥ ೭ ॥

ಅವರುಹ್ಯ ರಥಾದ್ದೂತಸ್ತಂ ದೃಷ್ಟ್ವಾ ದಾನವೇಶ್ವರಃ ।
ಶಂಕರಂ ಸಕುಮಾರಂ ಚ ಶಿರಸಾ ಪ್ರಣನಾಮ ಸಃ ॥ ೮ ॥

ವಾಮತೋ ಭದ್ರಕಾಲೀಂ ಚ ಸ್ಕಂದಂ ತತ್ಪುರತಃ ಸ್ಥಿತಂ ।
ಲೋಕಾಶಿಷಂ ದದೌ ತಸ್ಮೈ ಕಾಲೀ ಸ್ಕಂದಶ್ಚ ಶಂಕರಃ ॥ ೯ ॥

ಅಥಾಸೌ ಶಂಖಚೂಡಸ್ಯ ದೂತಃ ಪರಮಶಾಸ್ತ್ರವಿತ್ ।
ಉವಾಚ ಶಂಕರಂ ನತ್ವಾ ಕರೌ ಬದ್ಧ್ವಾ ಶುಭಂ ವಚಃ ॥ ೧೦ ॥

॥ ದೂತ ಉವಾಚ ॥

ಶಂಖಚೂಡಸ್ಯ ದೂತೋಽಹಂ ತ್ವತ್ಸಕಾಶಮಿಹಾಗತಃ ।
ವರ್ತತೇ ತೇ ಕಿಮಿಚ್ಛಾದ್ಯ ತತ್ತ್ವಂ ಬ್ರೂಹಿ ಮಹೇಶ್ವರ ॥ ೧೧ ॥

---

೭. ಆ ಶಿವನು ಕಾರಣವಸ್ತುಗಳಿಗೂ ಕಾರಣನು. ನರಕವೆಂಬ ಸಮುದ್ರವನ್ನು ದಾಟಿಸುವವನೂ ಆತನೇ. ಆತನೇ ಎಲ್ಲರಿಗೂ ಜ್ಞಾನವನ್ನು ನೀಡುವವನು. ಆತನೇ ಆ ಜ್ಞಾನಕ್ಕೆ ಕಾರಣನು. ಆತನು ಜ್ಞಾನಾನಂದಸ್ವರೂಪನೂ ಆದಿಮಧ್ಯಾಂತ ರಹಿತನೂ ಆಗಿರುವನು.

೮. ತನ್ನ ಕುಮಾರನೊಡನೆ ಕುಳಿತಿದ್ದ ಇಂತಹ ಶಿವನನ್ನು ಆ ದೂತನು ಕಂಡು ರಥದಿಂದ ಇಳಿದು ತಲೆಬಾಗಿ ನಮಸ್ಕಾರಮಾಡಿದನು.

೯. ಬಳಿಕ ಶಿವನ ಎಡಗಡೆಯಿದ್ದ ಭದ್ರಕಾಲಿಯನ್ನೂ ಮುಂದುಗಡೆ ಇದ್ದ ಕುಮಾರನನ್ನೂ ವಂದಿಸಿದನು. ಆ ಭದ್ರಕಾಲಿಯೂ ಸ್ಕಂದನೂ ಶಿವನೂ ಆ ದೂತನಿಗೆ ಲೋಕರೀತಿಯಂತೆ ಆಶೀರ್ವಾದಮಾಡಿದರು.

೧೦. ಅನಂತರ ಶಾಸ್ತ್ರಾರ್ಥಗಳನ್ನು ಚೆನ್ನಾಗಿಬಲ್ಲ ಆ ಶಂಖಚೂಡನ ದೂತನು ಶಿವನನ್ನು ವಂದಿಸಿ ಕೈಗಳನ್ನು ಮುಗಿದುಕೊಂಡು ಶುಭಕರವಾದ ಈ ಮಾತನ್ನು ಹೇಳಿದನು.

೧೧. ನಾನು ಶಂಖಚೂಡನ ದೂತನು. ನಿನ್ನನ್ನು ನೋಡಬೇಕೆಂದೇ ಇಲ್ಲಿಗೆ ಬಂದಿರುವೆನು. ಎಲೈ ಮಹೇಶ್ವರನೇ, ಈಗ ನಿನ್ನ ಅಭಿಲಾಷೆಯೇನು? ಅದನ್ನು ನನಗೆ ಯಥಾರ್ಥವಾಗಿ ತಿಳಿಸು ಎಂದನು.

॥ ಸನತ್ಕುಮಾರ ಉವಾಚ ॥

ಇತಿ ಶ್ರುತ್ವಾ ಚ ವಚನಂ ಶಂಖಚೂಡಸ್ಯ ಶಂಕರಃ ।
ಪ್ರಸನ್ನಾತ್ಮಾ ಮಹಾದೇವೋ ಭಗವಾಂಸ್ತಮುವಾಚ ಹ ॥ ೧೨ ॥

॥ ಮಹಾದೇವ ಉವಾಚ ॥

ಶೃಣು ದೂತ ಮಹಾಪ್ರಾಜ್ಞ ವಚೋ ಮಮ ಸುಖಾವಹಂ ।
ಕಥನೀಯಮಿದಂ ತಸ್ಮೈ ನಿರ್ವಿವಾದಂ ವಿಚಾರ್ಯ ಚ ॥ ೧೩ ॥

ವಿಧಾತಾ ಜಗತಾಂ ಬ್ರಹ್ಮಾ ಪಿತಾ ಧರ್ಮಸ್ಯ ಧರ್ಮವಿತ್ ।
ಮರೀಚಿಸ್ತಸ್ಯ ಪುತ್ರಸ್ಯ ಕಶ್ಯಪಸ್ತತ್ಸುತಃ ಸ್ಮೃತಃ ॥ ೧೪ ॥

ದಕ್ಷಃ ಪ್ರೀತ್ಯಾ ದದೌ ತಸ್ಮೈ ನಿಜಕನ್ಯಾಸ್ತ್ರಯೋದಶ ।
ತಾಸ್ವೇವ ಚ ದನುಸ್ಸಾಧ್ವೀ ತತ್ಸೌಭಾಗ್ಯವಿವರ್ಧಿನೀ ॥ ೧೫ ॥

---

೧೨. ಓ ವ್ಯಾಸ, ಈರೀತಿಯಾಗಿ ಶಂಖಚೂಡನು ದೂತನ ಮುಖಾಂತರ ಹೇಳಿಕಳುಹಿಸಿದ್ದ ಮಾತನ್ನು ಕೇಳಿ ಭಗವಂತನಾದ ಆ ಮಹಾದೇವನು ಪ್ರಸನ್ನ ಮನಸ್ಕನಾಗಿ ಅವನನ್ನು ಕುರಿತು,

೧೩. ಎಲೈ ಪ್ರಾಜ್ಞನಾದ ದೂತನೇ, ಹಿತವಾದ ನನ್ನೀಮಾತನ್ನು ಕೇಳು. ಚೆನ್ನಾಗಿ ವಿಮರ್ಶೆಮಾಡಿ ಈ ಮಾತನ್ನು ವಿವಾದಕ್ಕೆ ಆಸ್ಪದವಿಲ್ಲದಂತೆ ಅವನಿಗೆ ತಿಳಿಸು.

೧೪. ಈ ಜಗತ್ತುಗಳೆಲ್ಲವೂ ನಿರ್ಮಿಸಿದವನು ಬ್ರಹ್ಮನು. ಅವನು ಧರ್ಮಜ್ಞನು. ಧರ್ಮಕ್ಕೆ ತಂದೆಯಂತಿರುವನು. ಆತನ ಮಗನು ಮರೀಚಿಯು. ಆ ಮರೀಚಿಯ ಮಗನೇ ಕಶ್ಯಪನು.

೧೫. ಆತನಿಗೆ ದಕ್ಷಪ್ರಜಾಪತಿಯು ತನ್ನ ಹದಿಮೂರು ಮಂದಿ ಹೆಣ್ಣು ಮಕ್ಕಳನ್ನು ಕೊಟ್ಟು ಮದುವೆಮಾಡಿದನು. ಅವರಲ್ಲಿ ಪರಮಸಾಧ್ವಿಯಾದ ದನು ವೆಂಬುವಳು ಪತಿಯ ಪ್ರೀತಿಗೆ ಪಾತ್ರಳಾಗಿ ಸೌಭಾಗ್ಯದಿಂದ ಮೆರೆಯುತ್ತಿದ್ದಳು.

ಚತ್ವಾರಸ್ತೇ ದನೋಃ ಪುತ್ರಾ ದಾನವಾಸ್ತೇಜಸೋಽಲ್ಪಣಾಃ ।
ತೇಷ್ವೇಕೋ ವಿಪ್ರಚಿತ್ತಿಸ್ತು ಮಹಾಬಲಪರಾಕ್ರಮಃ ॥ ೧೬ ॥

ತತ್ಪುತ್ರೋ ಧಾರ್ಮಿಕೋ ದಂಭೋ ದಾನವೇಂದ್ರೋ ಮಹಾಮತಿಃ ।
ತಸ್ಯ ತ್ವಂ ತನಯಃ ಶ್ರೇಷ್ಠೋ ಧರ್ಮಾತ್ಮಾ ದಾನವೇಶ್ವರಃ ॥ ೧೭ ॥

ಪುರಾ ತ್ವಂ ಪಾರ್ಷದೋ ಗೋಪೋ ಗೋಪೇಷ್ವೇವ ಚ ಧಾರ್ಮಿಕಃ ।
ಅಧುನಾ ರಾಧಿಕಾಶಾಪಾಜ್ಜಾತಸ್ತ್ವಂ ದಾನವೇಶ್ವರಃ ॥ ೧೮ ॥

ದಾನವೀಂ ಯೋನಿಮಾಯಾತಸ್ತತ್ತ್ವತೋ ನ ಹಿ ದಾನವಃ ।
ನಿಜವೃತ್ತಂ ಪುರಾ ಜ್ಞಾತ್ವಾ ದೇವವೈರಂ ತ್ಯಜಾಧುನಾ ॥ ೧೯ ॥

ದ್ರೋಹಂ ನ ಕುರು ತೈಸ್ಸಾರ್ಧಂ ಸ್ವಪದಂ ಭುಂಕ್ಷ್ವ ಸಾದರಂ ।
ನಾಧಿಕಂ ಸವಿಕಾರಂ ಚ ಕುರು ರಾಜ್ಯಂ ವಿಚಾರ್ಯ ಚ ॥ ೨೦ ॥

---

೧೬. ಆ ದನುವಿಗೆ ಮಹಾಪರಾಕ್ರಮಶಾಲಿಗಳಾದ ನಾಲ್ಕುಮಂದಿ ಮಕ್ಕಳು ಹುಟ್ಟಿದರು. ಅವರಲ್ಲಿ ಮಹಾಬಲಾಢ್ಯನೂ ಸಾಹಸಿಯೂ ಆದ ವಿಪ್ರಚಿತ್ತಿಯೆಂಬುವನು ಒಬ್ಬನಾಗಿದ್ದನು.

೧೭. ಆತನಿಗೆ ಮಹಾಬುದ್ಧಿಶಾಲಿಯೂ ಧರ್ಮನಿರತನೂ ಆಗಿದ್ದ ದಂಭನೆಂಬ ದಾನವೇಶ್ವರನು ಮಗನಾಗಿ ಹುಟ್ಟಿದನು. ಧರ್ಮಾತ್ಮನೂ ದಾನವಾಧಿಪತಿಯೂ ಆದ ನೀನೇ ಆ ದಂಭನ ಮಗನಾಗಿರುವೆ.

೧೮. ನೀನು ಹಿಂದೆ ಕೃಷ್ಣನ ಅನುಚರನಾದ ಗೋಪಾಲಕನಾಗಿದ್ದೆ. ಗೋಪಾಲಕರಲ್ಲೆಲ್ಲಾ ನೀನು ಪರಮಧಾರ್ಮಿಕನಾಗಿದ್ದೆ. ರಾಧೆಯ ಶಾಪಕ್ಕೆ ಗುರಿಯಾಗಿ ಈಗ ನೀನು ದಾನವಾಧಿಪತಿಯಾಗಿ ಹುಟ್ಟಿರುವೆ.

೧೯. ನೀನು ದಾನವರ ಸಂತತಿಯಲ್ಲಿ ಹುಟ್ಟಿದೆ, ಅಷ್ಟೇ. ಆದರೆ ಯಥಾರ್ಥವಾಗಿ ನೀನು ದಾನವನಲ್ಲ. ಹಿಂದಿನ ನಿನ್ನ ವೃತ್ತಾಂತವನ್ನು ಸರಿಯಾಗಿ ತಿಳಿದುಕೊಂಡು ನೀನು ದೇವತೆಗಳೊಡನೆ ಈಗ ವಹಿಸಿರುವ ಶತೃತ್ವವನ್ನು ಬಿಟ್ಟುಬಿಡು.

೨೦. ಅವರೊಡನೆ ದ್ರೋಹವನ್ನೆಣಿಸಬೇಡ. ಸಂತೋಷದಿಂದ ನಿನ್ನ ಪದವಿಯನ್ನು ಅನುಭವಿಸು. ಚೆನ್ನಾಗಿ ವಿಚಾರಮಾಡು. ನಿನ್ನ ರಾಜ್ಯವನ್ನು ಹೆಚ್ಚಿಗೆ ಬೆಳೆಸಿ ವಿಕಾರಕ್ಕೆ ಎಡೆಗೊಡಬೇಡ.

ದೇಹಿ ರಾಜ್ಯಂ ಚ ದೇವಾನಾಂ ಮತ್ಪ್ರೀತಿಂ ರಕ್ಷ ದಾನವ ।
ನಿಜರಾಜ್ಯೇ ಸುಖಂ ತಿಷ್ಠ ತಿಷ್ಠಂತು ಸ್ವಪದೇ ಸುರಾಃ ॥ ೨೧ ॥

ಅಲಂ ಭೂತವಿರೋಧೇನ ದೇವದ್ರೋಹೇಣ ಕಿಂ ಪುನಃ ।
ಕುಲೀನಾಶ್ಶುದ್ಧಕರ್ಮಾಣಃ ಸರ್ವೇ ಕಶ್ಯಪವಂಶಜಾಃ ॥ ೨೨ ॥

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।
ಜ್ಞಾತಿದ್ರೋಹಜಪಾಪಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೨೩ ॥

॥ ಸನತ್ಕುಮಾರ ಉವಾಚ ॥

ಇತ್ಯಾದಿಬಹುವಾರ್ತಾ ಚ ಶ್ರುತಿಸ್ಮೃತಿಪರಾಂ ಶುಭಾಂ ।
ಪ್ರೋವಾಚ ಶಂಕರಸ್ತಸ್ಮೈ ಬೋಧಯನ್ಜ್ಞಾನಮುತ್ತಮಂ ॥ ೨೪ ॥

ಶಿಕ್ಷಿತಶ್ಶಂಖಚೂಡೇನ ಸ ದೂತಸ್ತರ್ಕವಿತ್ತಮಃ ।
ಉವಾಚ ವಚನಂ ನಮ್ರೋ ಭವಿತವ್ಯಂ ವಿಮೋಹಿತಃ ॥ ೨೫ ॥

---

೨೧. ದೇವತೆಗಳಿಗೆ ಅವರ ರಾಜ್ಯವನ್ನು ಬಿಟ್ಟುಕೊಡು. ಗಳಿಸಿರುವ ನನ್ನ ಪ್ರೀತಿಯನ್ನು ಉಳಿಸಿಕೋ. ಎಲೈ ದಾನವನೇ, ನಿನ್ನ ರಾಜ್ಯದಲ್ಲಿ ಸುಖವಾಗಿ ಆಳುತ್ತಿರು. ತಮ್ಮತಮ್ಮ ಸ್ಥಳಗಳಲ್ಲಿ ದೇವತೆಗಳು ಮೊದಲಿನಂತೆ ಇರಲಿ.

೨೨. ಪ್ರಾಣಿಗಳೊಡನೆಯೂ ದ್ವೇಷವನ್ನು ಕಟ್ಟಿಕೊಳ್ಳಬಾರದು. ಇಂತಹುದರಲ್ಲಿ ದೇವತೆಗಳೊಡನೆ ದ್ವೇಷವನ್ನು ತಳೆಯಬಹುದೇ ? ಕಶ್ಯಪನ ಸಂತತಿಯವರೆಲ್ಲರೂ ಸತ್ಕುಲಪ್ರಸೂತರು, ಶುದ್ಧವಾದ ನಡತೆಯುಳ್ಳವರು.

೨೩. ಬ್ರಹ್ಮಹತ್ಯೆ ಮೊದಲಾದ ಯಾವಯಾವ ಮಹಾಪಾತಕಗಳಿರುವುವೋ ಅವೆಲ್ಲವೂ ಜ್ಞಾತಿದ್ರೋಹದಿಂದಾಗುವ ಪಾಪದ ಹದಿನಾರನೆಯ ಅಂಶವನ್ನೂ ಸರಿದೂಗಲಾರವು ಎಂದನು.

೨೪. ಓ ವ್ಯಾಸ, ಈರೀತಿಯಾಗಿ ಆ ಶಿವನು ಶ್ರುತಿಸ್ಮೃತಿಸಮ್ಮತವಾದ ಬಹುವಿಧವಾದ ಮಾತುಗಳನ್ನು, ಆತನಿಗೆ ಒಳ್ಳೆಯ ಜ್ಞಾನವುಂಟಾಗಲೆಂದು ಬಗೆದು ನುಡಿದನು.

೨೫. ಸ್ವತಃ ವಿಚಾರಶೀಲನೂ, ಮೇಲಾಗಿ ಶಂಖಚೂಡನಿಂದ ಶಿಕ್ಷಿತನಾದವನೂ ಆದ ಆ ದೂತನು ವಿಧಿಯುಬರೆಹದಿಂದ ಮತಿಗೆಟ್ಟು, ನಮ್ರತೆಯಿಂದ ಶಿವನಿಗೆ ಈರೀತಿ ಉತ್ತರವಿತ್ತನು.

॥ ದೂತ ಉವಾಚ ॥

ತ್ವಯಾ ಯತ್ಕಥಿತಂ ದೇವ ನಾನ್ಯಥಾ ತತ್ತಥಾ ವಚಃ ।
ತಥ್ಯಂ ಕಿಂಚಿದ್ಯಥಾರ್ಥಂ ಚ ಶ್ರೂಯತಾಂ ಮೇ ನಿವೇದನಂ ॥ ೨೬ ॥

ಜ್ಞಾತಿದ್ರೋಹೇ ಮಹತ್ಪಾಪಂ ತ್ವಯೋಕ್ತಮಧುನಾ ಚ ಯತ್ ।
ತತ್ಕಿಮೀಶಾಸುರಾಣಾಂ ಚ ನ ಸುರಾಣಾಂ ವದ ಪ್ರಭೋ ॥ ೨೭ ॥

ಸರ್ವೇಷಾಮಿತಿ ಚೇತ್ತದ್ವೈ ತದಾ ವಚ್ಮಿ ವಿಚಾರ್ಯ ಚ ।
ನಿರ್ಣಯಂ ಬ್ರೂಹಿ ತತ್ರಾದ್ಯ ಕುರು ಸಂದೇಹಭಂಜನಂ ॥ ೨೮ ॥

ಮಧುಕೈಟಭಯೋರ್ದೈತ್ಯವರಯೋಃ ಪ್ರಲಯಾರ್ಣವೇ ।
ಶಿರಶ್ಛೇದಂ ಚಕಾರಾಸೌ ಕಸ್ಮಾಚ್ಚಕ್ರೀ ಮಹೇಶ್ವರ ॥ ೨೯ ॥

ತ್ರಿಪುರೈಸ್ಸಹ ಸಂಯುದ್ಧಂ ಭಸ್ಮವತ್ಕರಣಂ ಕುತಃ ।
ಭವಾಞ್ಚಕಾರ ಗಿರಿಶ ಸುರಪಕ್ಷೀತಿ ವಿಶ್ರುತಂ ॥ ೩೦ ॥

---

೨೬. ಓ ದೇವ, ನೀನು ಹೇಳಿದುದೆಲ್ಲವೂ ವಾಸ್ತವವಾದುದೇ ಹೊರತು ಬೇರೆಯಲ್ಲ. ನಿನ್ನ ಹೇಳಿಕೆಯು ಸ್ವಲ್ಪಮಟ್ಟಿಗೆ ನಿಜವಾದುದು. ಆದರೂ ನನ್ನ ಈ ಸಣ್ಣ ಅರಿಕೆಯನ್ನೂ ಸ್ವಲ್ಪ ಆಲಿಸು.

೨೭. ನೀನೀಗ ಜ್ಞಾತಿಗಳಿಗೆ ದ್ರೋಹವೆಸಗಿದರೆ ಮಹಾಪಾಪವೆಂದು ಹೇಳಿದೆಯಲ್ಲವೇ ? ಆ ಪಾಪವು ಅಸುರರಿಗೆ ಮಾತ್ರವೇ ಉಂಟಾಗವುದೇ ? ದೇವತೆಗಳಿಗೆ ಇಲ್ಲವೇಇಲ್ಲವೇ ಹೇಳು.

೨೮. ಎಲ್ಲರಿಗೂ ಆ ದೋಷವು ತಪ್ಪಿದಲ್ಲ ಎಂದು ನೀನು ವಿಚಾರಿಸಿ ನುಡಿಯುವೆಯಾದರೆ ಆಗಲೂ ಹೇಳುವೆನು. ನೀನು ಈಗ ಆ ವಿಷಯದಲ್ಲಿ ನಿರ್ಧರಿಸಿ ಹೇಳಿ ನನ್ನ ಸಂದೇಹವನ್ನು ಹೋಗಲಾಡಿಸು.

೨೯. ಓ ಮಹೇಶ್ವರ, ದೈತ್ಯವೀರರಾದ ಮಧುಕೈಟಭರನ್ನು ಪ್ರಳಯಸಮುದ್ರದಲ್ಲಿ ಆ ವಿಷ್ಣುವು ತಲೆಗಡಿದುದೇಕೆ ?

೩೦. ನೀನು ತ್ರಿಪುರಾಸುರರೊಡನೆ ಯುದ್ಧಮಾಡಿದುದೇಕೆ ? ಅಷ್ಟೇ ಅಲ್ಲದೆ ಅವರನ್ನು ಸುಟ್ಟು ಬೂದಿಮಾಡಿದುದುತಾನೇ ಏಕೆ ? ನೀನು ದೇವತೆಗಳಲ್ಲಿ ಪಕ್ಷಪಾತವನ್ನು ವಹಿಸಿದ್ದರಿಂದಲೇ ಹಾಗಾಯಿತೆಂದು ಜಗತ್ತಿಗೇ ಗೊತ್ತು.

ಗೃಹೀತ್ವಾ ತಸ್ಯ ಸರ್ವಸ್ವಂ ಕುತಃ ಪ್ರಸ್ಥಾಪಿತೋ ಬಲಿಃ ।
ಸುತಲಾದಿ ಸಮುದ್ಧರ್ತುಂ ತದ್ದ್ವಾರೇ ಚ ಗದಾಧರಃ ॥ ೩೧ ॥

ಸಭ್ರಾತೃಕೋ ಹಿರಣ್ಯಾಕ್ಷಃ ಕಥಂ ದೇವೈಶ್ಚ ಹಿಂಸಿತಃ ।
ಶುಂಭಾದಯೋಽಸುರಾಶ್ಚೈವ ಕಥಂ ದೇವೈರ್ನಿಪಾತಿತಾಃ ॥ ೩೨ ॥

ಪುರಾ ಸಮುದ್ರಮಥನೇ ಪೀಯೂಷಂ ಭಕ್ಷಿತಂ ಸುರೈಃ ।
ಕ್ಲೇಶಭಾಜೋ ವಯಂ ತತ್ರ ತೇ ಸರ್ವೇ ಫಲಭೋಗಿನಃ ॥ ೩೩ ॥

ಕ್ರೀಡಾಭಾಂಡಮಿದಂ ವಿಶ್ವಂ ಕಾಲಸ್ಯ ಪರಮಾತ್ಮನಃ ।
ಸ ದದಾತಿ ಯದಾ ಯಸ್ಮೈ ತಸ್ಯೈಶ್ವರ್ಯಂ ಭವೇತ್ತದಾ ॥ ೩೪ ॥

ದೇವದಾನವಯೋರ್ವೈರಂ ಶಶ್ವನ್ನೈಮಿತ್ತಿಕಂ ಸದಾ ।
ಪರಾಜಯೋ ಜಯಸ್ತೇಷಾಂ ಕಾಲಾಧೀನಃ ಕ್ರಮೇಣ ಚ ॥ ೩೫ ॥

---

೩೧. ಬಲಿಯ ಸಂಪತ್ತೆಲ್ಲವನ್ನೂ ಸೂರೆಮಾಡಿ ಅವನನ್ನು ವಿಷ್ಣುವು ಸುತಲ ಲೋಕಕ್ಕೆ ತಳ್ಳಿದುದೇಕೆ ? ಅದೂ ಸಾಲದೆ ಆ ಗದಾಧರನು ಆ ಬಲಿಯ ಮನೆಯ ಬಾಗಿಲಲ್ಲಿ ನಿಂತು ಕಾವಲುಕಾಯುತ್ತಿರುವುದೇಕೆ ?

೩೨. ಹಿರಣ್ಯಾಕ್ಷನು ತನ್ನ ಸೋದರನಾದ ಹಿರಣ್ಯಕಶಿಪುವಿನೊಡನೆ ದೇವತೆಗಳಿಂದ ಕೊಲ್ಲಿಸಲ್ಪಟ್ಟುದೇಕೆ ? ಹಾಗೆಯೇ ಆ ದೇವತೆಗಳು ಶುಂಭನಿಶುಂಭ ಮುಂತಾದ ಅಸುರನನ್ನು ಕೊಲ್ಲಿಸಿದುದೇಕೆ ?

೩೩. ಹಿಂದೆ ಸಮುದ್ರವನ್ನು ಮಥಿಸಿದಾಗ ದೇವತೆಗಳೇ ಮೋಸದಿಂದ ಅಮೃತವೆಲ್ಲವನ್ನೂ ಪಾನಮಾಡಿಬಿಟ್ಟರು. ನಾವು ಶ್ರಮಪಟ್ಟುದೊಂದೇ. ಅವರು ಮಾತ್ರ ನಿರಾಯಾಸವಾಗಿ ಆ ಫಲವನ್ನನುಭವಿಸಿಬಿಟ್ಟರು.

೩೪. ಈ ಪ್ರಪಂಚವು ಪರಮಾತ್ಮನಾದ ಆ ಕಾಲಪುರುಷನಿಗೆ ಆಟದ ಕುಡಿಕೆಯಂತಿದೆ. ಆತನು ಯಾವಾಗ ಯಾರಿಗೆ ಕೊಡುವನೋ ಆಗ ಪುರುಷನಿಗೆ ಐಶ್ವರ್ಯವು ಲಭಿಸುವುದು.

೩೫. ಯಾವಾಗಲೂ ದೇವತೆಗಳಿಗೂ ದಾನವರಿಗೂ ಪದೇಪದೇ ಒಂದಲ್ಲ ಒಂದುಕಾರಣದಿಂದ ವೈರವು ಇದ್ದೇಇರುವುದು. ಒಂದುಸಲ ಗೆಲವು, ಒಂದುಸಲ ಸೋಲು ಅವರಿಗೆ ಕಾಲಾಧೀನವಾಗಿ ಉಂಟಾಗುವುದು.

ತವಾನಯೋರ್ವಿರೋಧೇ ಚ ಗಮನಂ ನಿಷ್ಫಲಂ ಭವೇತ್ ।
ಸಮಸಂಬಂಧಿನಾಂ ತದ್ವೈ ರೋಚತೇ ನೇಶ್ವರಸ್ಯ ತೇ ॥ ೩೬ ॥

ಸುರಾಸುರಾಣಾಂ ಸರ್ವೇಷಾಮೀಶ್ವರಸ್ಯ ಮಹಾತ್ಮನಃ ।
ಇಯಂ ತೇ ರಹಿತಾ ಲಜ್ಜಾ ಸ್ಪರ್ಧಾಸ್ಮಾಭಿಸ್ಸಹಾಧುನಾ ॥ ೩೭ ॥

ಯತೋಽಧಿಕಾ ಚೈವ ಕೀರ್ತಿಹಾನಿಶ್ಚೈವ ಪರಾಜಯೇ ।
ತವೈತದ್ವಿಪರೀತಂ ಚ ಮನಸಾ ಸಂವಿಚಾರ್ಯತಾಂ ॥ ೩೮ ॥

॥ ಸನತ್ಕುಮಾರ ಉವಾಚ ॥

ಇತ್ಯೇತದ್ವಚನಂ ಶ್ರುತ್ವಾ ಸಂಪ್ರಹಸ್ಯ ತ್ರಿಲೋಚನಃ ।
ಯಥೋಚಿತಂ ಚ ಮಧುರಮುವಾಚ ದಾನವೇಶ್ವರಂ ॥ ೩೯ ॥

---

೩೬. ಇವರೀರ್ವರಿಗೂ ಈಗ ಜಗಳವೊದಗಿರುವಾಗ ನೀನು ಮಧ್ಯೆಬರುವುದು ನಿಷ್ಫಲವಾದುದು. ಸಮಾನವಾದ ಪರಾಕ್ರಮವುಳ್ಳ ಅವರೀರ್ವರಿಗೂ ಈ ಯುದ್ಧವು ನಡೆದರೆ ಅದು ಚೆನ್ನಾಗಿ ಒಪ್ಪುವುದು. ಸರ್ವಶಕ್ತನಾದ ನೀನು ಈ ಯುದ್ಧದಲ್ಲಿ ಭಾಗ ವಹಿಸುವುದು ತರವೇ ?

೩೭. ದೇವತೆಗಳಿಗೂ ಅಸುರರಿಗೂ ಎಲ್ಲರಿಗೂ ಪ್ರಭುವೂ ಮಹಾತ್ಮನೂ ಆದ ನೀನು ನಮ್ಮೊಡನೆ ಸರಿಸಮವಾಗಿ ಸ್ಪರ್ಧೆಗೆ ಇಳಿಯುವುದನ್ನು ನೋಡಿದರೆ ನಿನಗೆ ನಾಚಿಕೆಯಿಲ್ಲವೆಂಬುದನ್ನು ತೋರ್ಪಡಿಸುವುದು.

೩೮. ಏಕೆಂದರೆ, ನೀನು ಗೆದ್ದರೂ ಕೀರ್ತಿಯೇನೂ ಹೆಚ್ಚಲಾರದು. ಸೋತರೆ ಮಾತ್ರ ಅಪಾರವಾದ ಹಾನಿಯುಂಟಾಗುವುದು. ಈ ವೈಪರೀತ್ಯವನ್ನು ಮನಸ್ಸಿನಲ್ಲಿ ಚೆನ್ನಾಗಿ ಆಲೋಚಿಸು ಎಂದನು.

೩೯. ಓ ವ್ಯಾಸ, ಈರೀತಿ ಶಂಖಚೂಡನ ದೂತನು ನುಡಿದುದನ್ನು ಕೇಳಿ ಶಿವನು ಗಟ್ಟಿಯಾಗಿ ನಕ್ಕು, ಬಳಿಕ ಆ ದೂತನನ್ನು ಕುರಿತು ಉಚಿತವಾಗಿಯೂ ಹಿತ ವಾಗಿಯೂ ಇರುವ ಮಾತನ್ನು ಹೇಳಿದನು.

॥ ಮಹೇಶ ಉವಾಚ ॥

ವಯಂ ಭಕ್ತಪರಾಧೀನಾ ನ ಸ್ವತಂತ್ರಾಃ ಕದಾಪಿ ಹಿ ।
ತದಿಚ್ಛಯಾ ತತ್ಕರ್ಮಾಣಃ ನ ಕಸ್ಯಾಪಿ ಚ ಪಕ್ಷಿಣಃ ॥ ೪೦ ॥

ಪುರಾ ವಿಧಿಪ್ರಾರ್ಥನಯಾ ಯುದ್ಧಮಾದೌ ಹರೇರಪಿ ।
ಮಧುಕೈಟಭಯೋರ್ದೈತ್ಯವರಯೋಃ ಪ್ರಲಯಾರ್ಣವೇ ॥ ೪೧ ॥

ದೇವಪ್ರಾರ್ಥನಯಾ ತೇನ ಹಿರಣ್ಯಕಶಿಪೋಃ ಪುರಾ ।
ಪ್ರಹ್ರಾದಾರ್ಥಂ ವಧೋಽಕಾರಿ ಭಕ್ತಾನಾಂ ಹಿತಕಾರಿಣಾ ॥ ೪೨ ॥

ತ್ರಿಪುರೈಸ್ಸಹ ಸಂಯುದ್ಧಂ ಭಸ್ಮವತ್ಕರಣಂ ತತಃ ।
ದೇವಪ್ರಾರ್ಥನಯಾಕಾರಿ ಮಯಾಪಿ ಚ ಪುರಾ ಶ್ರುತಂ ॥ ೪೩ ॥

ಸರ್ವೇಶ್ವರ್ಯಾಸ್ಸರ್ವಮಾತುರ್ದೇವಪ್ರಾರ್ಥನಯಾ ಪುರಾ ।
ಆಸೀಚ್ಛುಂಭಾದಿಭಿರ್ಯುದ್ಧಂ ವಧಸ್ತೇಷಾಂ ತಯಾ ಕೃತಃ ॥ ೪೪ ॥

---

೪೦. ನಾವು ಭಕ್ತರು ಹೇಳಿದಂತೆ ಕೇಳುವವರು. ಎಂದೆಂದಿಗೂ ನಮಗೆ ಸ್ವಾತಂತ್ರ್ಯವು ಇಲ್ಲವೇಇಲ್ಲ. ಅವರ ಅಪೇಕ್ಷೆಯಂತೆ ಅವರ ಕೆಲಸಗಳನ್ನು ನೆರವೇರಿಸುವೆವು. ನಮಗೆ ಯಾರ ವಿಷಯದಲ್ಲೂ ಪಕ್ಷಪಾತವೆಂಬುದೇ ಇಲ್ಲ.

೪೧. ಹಿಂದೆ ಪ್ರಲಯಸಮುದ್ರದಲ್ಲಿ ವಿಷ್ಣುವು ಮಧುಕೈಟಭರೆಂಬ ದೈತ್ಯರೊಡನೆ ಯುದ್ಧಮಾಡಿ ಅವರನ್ನು ಕೊಂದುದು ತನ್ನಿಚ್ಛೆಯಿಂದಲ್ಲ, ಬ್ರಹ್ಮನ ಪ್ರಾರ್ಥನೆಯಿಂದ.

೪೨. ಅದೇ ವಿಷ್ಣುವು ಹಿಂದೆ ಹಿರಣ್ಯಕಶಿಪುವನ್ನು ಕೊಂದುದಕ್ಕೂ ಕಾರಣವಿಲ್ಲದೇ ಇಲ್ಲ. ಭಕ್ತರ ಹಿತವನ್ನು ನೆರವೇರಿಸುವ ಆತನು ದೇವತೆಗಳ ಪ್ರಾರ್ಥನೆಯಂತೆ ಪ್ರಹ್ಲಾದನಿಗಾಗಿ ಆ ದೈತ್ಯನನ್ನು ಕೊಂದನು.

೪೩. ನಾನು ಹಿಂದೆ ತ್ರಿಪುರಾಸುರರೊಡನೆ ಯುದ್ಧಕ್ಕೆ ಬಂದುದೂ ಅವರನ್ನು ಸಂಗ್ರಾಮದಲ್ಲಿ ಸುಟ್ಟು ಬೂದಿಮಾಡಿದುದೂ ದೇವತೆಗಳ ಪ್ರಾರ್ಥನೆಯಂತೆಯೇ ಹೊರತು ಮತ್ತು ಬೇರೆಯಲ್ಲ. ಇದು ಎಲ್ಲರಿಗೂ ತಿಳಿದೇ ಇದೆ.

೪೪. ಇದೇರೀತಿಯಾಗಿಯೇ ದೇವತೆಗಳ ಪ್ರಾರ್ಥನೆಯಂತೆ ಸರ್ವೇಶ್ವರಿಯೂ ಸಕಲ ಲೋಕ ಜನನಿಯೂ ಆದ ಕಾಳಿಯು ಶುಂಭಾದಿಗಳೊಡನೆ ಸಮರದಲ್ಲಿ ತೊಡಗಿದಳು. ಆಕೆಯು ಅವರನ್ನು ಆಗ ವಧಿಸಿದಳು.

ಅದ್ಯಾಪಿ ತ್ರಿದಶಾಸ್ಸರ್ವೇ ಬ್ರಹ್ಮಾಣಂ ಶರಣಂ ಯಯುಃ ।
ಸ ಸದೇವೋ ಹರಿರ್ಮಾಂ ಚ ದೇವಶ್ಶರಣಮಾಗತಃ ॥ ೪೫ ॥

ಹರಿಬ್ರಹ್ಮಾದಿಕಾನಾಂ ಚ ಪ್ರಾರ್ಥನಾವಶತೋಽಪ್ಯಹಂ ।
ಸುರಾಣಾಮೀಶ್ವರೋ ದೂತ ಯುದ್ಧಾರ್ಥಮಗಮಂ ಖಲು ॥ ೪೬ ॥

ಪಾರ್ಷದಪ್ರವರಸ್ತ್ವಂ ಹಿ ಕೃಷ್ಣಸ್ಯ ಚ ಮಹಾತ್ಮನಃ ।
ಯೇ ಯೇ ಹತಾಶ್ಚ ದೈತೇಯಾ ನ ಹಿ ಕೇಽಪಿ ತ್ವಯಾ ಸಮಾಃ ॥ ೪೭ ॥

ಕಾ ಲಜ್ಜಾ ಮಹತೀ ರಾಜನ್ಮಮ ಯುದ್ಧೇ ತ್ವಯಾ ಸಹ ।
ದೇವಕಾರ್ಯಾರ್ಥಮೀಶೋಽಹಂ ವಿನಯೇನ ಚ ಪ್ರೇಷಿತಃ ॥ ೪೮ ॥

ಗಚ್ಛ ತ್ವಂ ಶಂಖಚೂಡೇ ವೈ ಕಥನೀಯಂ ಚ ಮೇ ವಚಃ ।
ಸ ಚ ಯುಕ್ತಂ ಕರೋ ತ್ವತ್ರ ಸುರಕಾರ್ಯಂ ಕರೋಮ್ಯಹಂ ॥ ೪೯ ॥

---

೪೫. ಈಗಲೂ ಸಹ ದೇವತೆಗಳೆಲ್ಲರೂ ಬ್ರಹ್ಮನನ್ನು ಮರೆಹೊಕ್ಕರು. ಬಳಿಕ ಆ ದೇವತೆಗಳೊಡನೆ ಬ್ರಹ್ಮನೂ ಹರಿಯೂ ನನ್ನನ್ನು ಮರೆಹೊಕ್ಕರು.

೪೬. ಎಲೈ ದೂತನೇ, ನಾನು ಸರ್ವೇಶ್ವರನಾಗಿದ್ದರೂ ಆ ಹರಿ ಮತ್ತು ಬ್ರಹ್ಮರ ಪ್ರಾರ್ಥನೆಯಂತೆಯೂ ದೇವತೆಗಳ ಪ್ರಾರ್ಥನೆಯಂತೆಯೂ ಈಗ ಯುದ್ಧಕ್ಕೆ ಹೊರಟುಬಂದಿರುವೆನು.

೪೭. ನೀನು ಮಹಾತ್ಮನಾದ ಶ್ರೀಕೃಷ್ಣನ ಅನುಚರನಲ್ಲವೇ? ಹಿಂದೆ ಹತ ರಾದ ಯಾವ ದೈತ್ಯರೂ ನಿನಗೆ ಸಮನಾಗಲಾರರು.

೪೮. ಎಲೈ ಅರಸನೇ, ನಿನ್ನೊಡನೆ ಯುದ್ಧದಲ್ಲಿ ತೊಡಗಿದರೆ ನನಗೆ ಒದಗ ಬಹುದಾದ ಅಂತಹ ಅವಮಾನವೇನು? ನಾನು ಪ್ರಭುವಾದರೂ ದೇವತೆಗಳಿಗೋಸ್ಕರ ವಾಗಿಯೂ ರಾಜನೀತಿಯಂತೆಯೂ ನಿನ್ನೊಡನೆ ಯುದ್ಧಕ್ಕೆ ಬಂದಿರುವೆನು.

೪೯. ಎಲೈ ದೂತನೆ, ನೀನು ಹೊರಡು. ನಾನು ಮೇಲೆ ಹೇಳಿದ ಮಾತನ್ನು ಶಂಖಚೂಡನಿಗೆ ತಿಳಿಸು. ಆತನು ತನಗೆ ಉಚಿತವಾವುದೋ ಅದನ್ನು ಮಾಡಲಿ. ನಾನು ದೇವತೆಗಳ ಕಾರ್ಯವನ್ನು ನೆರವೇರಿಸುವೆನು.

ಇತ್ಯುಕ್ತ್ವಾ ಶಂಕರಸ್ತತ್ರ ವಿರರಾಮ ಮಹೇಶ್ವರಃ ।
ಉತ್ತಸ್ಥೌ ಶಂಖಚೂಡಸ್ಯ ದೂತೋಽಗಚ್ಛತ್ತದಂತಿಕಂ ॥ ೫೦ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡವಧೇ ಶಿವದೂತ
ಸಂವಾದೋ ನಾಮ ಪಂಚತ್ರಿಂಶೋಽಧ್ಯಾಯಃ.

---

೫೦. ಹೀಗೆಂದು ಹೇಳಿ, ಶಿವನು ಆ ಮಾತು ನಿಲ್ಲಿಸಿ ಮೇಲಕ್ಕೆ ಎದ್ದನು. ಬಳಿಕ ಆ ಶಂಖಚೂಡನ ದೂತನೂ ತನ್ನ ಒಡೆಯನ ಬಳಿಗೆ ಹಿಂದಿರುಗಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯು ಯುದ್ಧಖಂಡದಲ್ಲಿ
ಶಿವನಿಗೂ ದೂತನಿಗೂ ನಡೆದ ಸಂವಾದವರ್ಣನವೆಂಬ
ಮೂವತ್ತೈದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಷಟ್ತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಸ ದೂತಸ್ತತ್ರ ಗತ್ವಾ ಚ ಶಿವವಾಕ್ಯಂ ಜಗಾದ ಹ ।
ಸವಿಸ್ತರಂ ಯಥಾರ್ಥಂ ಚ ನಿಶ್ಚಯಂ ತಸ್ಯ ತತ್ತ್ವತಃ ॥ ೧ ॥

ತಚ್ಛ್ರುತ್ವಾ ಶಂಖಚೂಡೋಽಸೌ ದಾನವೇಂದ್ರಃ ಪ್ರತಾಪವಾನ್ ।
ಅಂಗೀಚಕಾರ ಸುಪ್ರೀತ್ಯಾ ರಣಮೇವ ಸ ದಾನವಃ ॥ ೨ ॥

---

### ಮೂವತ್ತಾರನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :—ಬಳಿಕ ಆ ದೂತನು ಶಂಖಚೂಡನ ಬಳಿಗೆ ಹೋಗಿ ಶಿವನಿಗೂ ತನಗೂ ನಡೆದ ಮಾತುಕತೆಯನ್ನೆಲ್ಲಾ ನಡೆದ ಹಾಗೆಯೇ ವಿವರವಾಗಿ ಬಿನ್ನವಿಸಿದನು.

೨. ಆ ಮಾತನ್ನು ಕೇಳಿ ಪರಾಕ್ರಮಶಾಲಿಯಾದ ಆ ದಾನವೇಶ್ವರನು ಬಹು ಸಂತೋಷದಿಂದ ಯುದ್ಧಮಾಡುವುದೇ ಸರಿಯೆಂದು ನಿರ್ಧರಿಸಿದನು.

ಸಮಾರುರೋಹ ಯಾನಂ ಚ ಸಹಾಮಾತ್ಯೈಶ್ಚ ಸತ್ತ್ವರಃ ।
ಆದಿದೇಶ ಸ್ವಸೈನ್ಯಂ ಚ ಯುದ್ಧಾಯ ಶಂಕರೇಣ ಚ ॥ ೩ ॥

ಶಿವಸ್ಸ್ವಸೈನ್ಯಂ ದೇವಾಂಶ್ಚ ಪ್ರೇರಯಾಮಾಸ ಸತ್ವರಃ ।
ಸ್ವಯಮಪ್ಯಖಿಲೇಶೋಽಪಿ ಸಂನದ್ಧೋಽಭೂಚ್ಚ ಲೀಲಯಾ ॥ ೪ ॥

ಯುದ್ಧಾರಂಭೋ ಬಭೂವಾಶು ನೇದುರ್ವಾದ್ಯಾನಿ ಭೂರಿಶಃ ।
ಕೋಲಾಹಲಶ್ಚ ಸಂಜಾತೋ ವೀರಶಬ್ದಸ್ತಥೈವ ಚ ॥ ೫ ॥

ದೇವದಾನವಯೋರ್ಯುದ್ಧಂ ಪರಸ್ಪರಮಭೂನ್ಮುನೇ ।
ಧರ್ಮತೋ ಯುಯುಧೇ ತತ್ರ ದೇವದಾನವಯೋರ್ಗಣಃ ॥ ೬ ॥

ಸ್ವಯಂ ಮಹೇಂದ್ರೋ ಯುಯುಧೇ ಸಾರ್ಧಂ ಚ ವೃಷಪರ್ವಣಾ ।
ಭಾಸ್ಕರೋ ಯುಯುಧೇ ವಿಪ್ರಚಿತ್ತಿನಾ ಸಹ ಧರ್ಮತಃ ॥ ೭ ॥

---

೩. ಬಳಿಕ ತನ್ನ ಮಂತ್ರಿಗಳೊಡನೆ, ಲೀಲೆಯಿಂದ ರಥವನ್ನೇರಿದನು. ಶಿವನೊಡನೆ ಯುದ್ಧಮಾಡಲು ಹೊರಡುವಂತೆ ತನ್ನ ಸೇನೆಗೆ ಅಪ್ಪಣೆಯಿತ್ತನು.

೪. ಇತ್ತ ಶಿವನೂ ತನ್ನ ಸೇನೆಯನ್ನೂ, ದೇವತೆಗಳನ್ನೂ ಬೇಗನೆ ಆ ದೈತ್ಯರನ್ನು ಎದುರಿಸುವಂತೆ ಅಪ್ಪಣೆಯಿತ್ತನು. ಆತನು ಸರ್ವೇಶ್ವರನಾಗಿದ್ದರೂ ಸಹ ತಾನೂ ಲೀಲೆಗಾಗಿ ಕವಚ ಮೊದಲಾದುವುಗಳನ್ನು ತೊಟ್ಟು ಯುದ್ಧಕ್ಕೆ ಸಿದ್ಧನಾದನು.

೫. ಬೇಗನೆ ಯುದ್ಧವು ಮೊದಲಾಯಿತು. ಒಟ್ಟೊಟ್ಟಾಗಿ ವಾದ್ಯಗಳು ಮೊಳಗಿದುವು. ಬಹು ದೊಡ್ಡ ಕೋಲಾಹಲವುಂಟಾಯಿತಲ್ಲದೆ ವೀರನಾದಗಳೂ ಹೆಚ್ಚುತ್ತ ಬಂದುವು.

೬. ಓ ವ್ಯಾಸಮುನೀಂದ್ರನೇ, ಕೇಳು. ಈರೀತಿಯಾಗಿ ದೇವತೆಗಳಿಗೂ ದಾನವರಿಗೂ ಪರಸ್ಪರವಾಗಿ ಸಂಗ್ರಾಮವು ಮೊದಲಾಯಿತು. ಆ ಎರಡು ಗುಂಪಿನವರೂ ಧರ್ಮದಿಂದ ಕಾದಾಡತೊಡಗಿದರು.

೭. ದೇವೇಂದ್ರನು ವೃಷಪರ್ವನೊಂದಿಗೆ ಯುದ್ಧಕ್ಕೆ ನಿಂತನು. ಸೂರ್ಯನು ವಿಪ್ರಚಿತ್ತಿಯೊಡನೆ ಯುದ್ಧಮಾಡಿದನು.

ದಂಭೇನ ಸಹ ವಿಷ್ಣುಶ್ಚ ಚಕಾರ ಪರಮಂ ರಣಂ ।
ಕಾಲಾಸುರೇಣ ಕಾಲಶ್ಚ ಗೋಕರ್ಣೇನ ಹುತಾಶನಃ ॥ ೮ ॥

ಕುಬೇರಃ ಕಾಲಕೇಯೇನ ವಿಶ್ವಕರ್ಮಾ ಮಯೇನ ಚ ।
ಭಯಂಕರೇಣ ಮೃತ್ಯುಶ್ಚ ಸಂಹಾರೇಣ ಯಮಸ್ತಥಾ ॥ ೯ ॥

ಕಾಲಂಬಿಕೇನ ವರುಣಶ್ಚಂಚಲೇನ ಸಮೀರಣಃ ।
ಬುಧಶ್ಚ ಘಟಪೃಷ್ಠೇನ ರಕ್ತಾಕ್ಷೇಣ ಶನೈಶ್ಚರಃ ॥ ೧೦ ॥

ಜಯಂತೋ ರತ್ನಸಾರೇಣ ವಸವೋ ವರ್ಚಸಾಂ ಗಣೈಃ ।
ಅಶ್ವಿನೌ ದೀಪ್ತಿಮದ್ಭ್ಯಾಂ ಚ ಧೂಮ್ರೇಣ ನಲಕೂಬರಃ ॥ ೧೧ ॥

ಧುರಂಧರೇಣ ಧರ್ಮಶ್ಚ ಗಣಕಾಕ್ಷೇಣ ಮಂಗಲಃ ।
ಶೋಭಾಕರೇಣ ವೈಶ್ವಾನಃ ಪಿಪಿಟೇನ ಚ ಮನ್ಮಥಃ ॥ ೧೨ ॥

---

೮. ವಿಷ್ಣುವು ದಂಭನೊಡನೆ ಜೋರಾಗಿ ಕದನದಲ್ಲಿ ತೊಡಗಿದನು. ಕಾಲನೆಂಬ ಅಸುರನೊಡನೆ ಕಾಲನೂ ಗೋಕರ್ಣನೊಡನೆ ಅಗ್ನಿಯೂ ಯುದ್ಧಕ್ಕೆ ನಿಂತರು.

೯. ಕುಬೇರನು ಕಾಲಕೇಯನೊಂದಿಗೂ, ವಿಶ್ವಕರ್ಮನು ಮಯನೊಡನೆಯೂ, ಮೃತ್ಯುವು ಭಯಂಕರನ ಕೂಡೆಯೂ, ಯಮನು ಸಂಹಾರನ ಜೊತೆಯಲ್ಲಿಯೂ ಸಮರಕ್ಕೆ ಇಳಿದರು.

೧೦. ಕಾಲಂಬಿಕನೊಡನೆ ವರುಣನೂ, ಚಂಚಲನೊಂದಿಗೆ ವಾಯುವೂ, ಘಟಪೃಷ್ಠನ ಸಂಗಡ ಬುಧನೂ, ರಕ್ತಾಕ್ಷನ ಜೊತೆಯಲ್ಲಿ ಶನೈಶ್ಚರನೂ ಕಾದಾಡಿದರು.

೧೧. ಜಯಂತನು ರತ್ನಸಾರನೊಂದಿಗೂ ವಸುಗಳು ವರ್ಚಸ್ಸುಗಳೆಂಬುವರೊಡನೆಯೂ, ಅಶ್ವಿನೀದೇವತೆಗಳು ದೀಪ್ತಿಮಂತರೆಂಬ ಯಮಳರೊಂದಿಗೂ ನಲಕೂಬರನು ಧೂಮ್ರನೊಡನೆಯೂ ಹೊಡೆದಾಡಿದರು.

೧೨. ಧರ್ಮನ ಸಂಗಡ ಧುರಂಧರನೂ, ಗಣಕಾಕ್ಷನೊಡನೆ ಮಂಗಲನೂ, ಶೋಭಾಕರನೊಂದಿಗೆ ವೈಶ್ವಾನನೂ, ವಿಪಿಟನೊಡನೆ ಮನ್ಮಥನೂ ಹೋರಾಡಿದರು.

ಗೋಕಾಮುಖೇನ ಚೂರ್ಣೇನ ಖಡ್ಗನಾಮ್ನಾ ಸುರೇಣ ಚ ।
ಧೂಮ್ರೇಣ ಸಂಹಲೇನಾಪಿ ವಿಶ್ವೇನ ಚ ಪ್ರತಾಪಿನಾ ॥ ೧೩ ॥

ಪಲಾಶೇನ ದ್ವಾದಶಾರ್ಕಾ ಯುಯುಧುರ್ಧರ್ಮತಃ ಪರೇ ।
ಅಸುರೈರಮರಾಸ್ಸಾರ್ಧಂ ಶಿವಸಾಹಾಯ್ಯಶಾಲಿನಃ ॥ ೧೪ ॥

ಏಕಾದಶ ಮಹಾರುದ್ರಾಶ್ಚೈಕಾದಶಭಯಂಕರೈಃ ।
ಅಸುರೈರ್ಯುಯುಧುರ್ವೀರೈರ್ಮಹಾಬಲಪರಾಕ್ರಮೈಃ ॥ ೧೫ ॥

ಮಹಾಮಣಿಶ್ಚ ಯುಯುಧೇ ಚೋಗ್ರಚಂಡಾದಿಭಿಸ್ಸಹ ।
ರಾಹುಣಾ ಸಹ ಚಂದ್ರಶ್ಚ ಜೀವಃ ಶುಕ್ರೇಣ ಧರ್ಮತಃ ॥ ೧೬ ॥

ನಂದೀಶ್ವರಾದಯಸ್ಸರ್ವೇ ದಾನವಪ್ರವರೈಸ್ಸಹ ।
ಯುಯುಧುಶ್ಚ ಮಹಾಯುದ್ಧೇ ನೋಕ್ತಾ ವಿಸ್ತರತಃ ಪೃಥಕ್ ॥ ೧೭ ॥

---

೧೩-೧೪. ಶಿವನ ಬೆಂಬಲವನ್ನು ಪಡೆದಿದ್ದ ದ್ವಾದಶಾದಿತ್ಯರು, ಗೋಕಾಮುಖ, ಚೂರ್ಣ, ಖಡ್ಗ, ಧೂಮ್ರ, ಸಂಹಲ, ವಿಶ್ವ, ಪ್ರತಾಪಿ, ಪಲಾಶ ಮೊದಲಾದ ಅಸುರರೊಡನೆ ಧರ್ಮಸಮ್ಮತವಾದ ಕಾಳಗ ನಡೆಸಿದರು.

೧೫. ಹನ್ನೊಂದು ಮಂದಿ ಏಕಾದಶರುದ್ರರು, ಮಹಾಬಲಿಷ್ಠರೂ ಪರಾಕ್ರಮಶಾಲಿಗಳೂ ಭಯಂಕರರೂ ಆದ ರಕ್ಕಸರೊಂದಿಗೆ ಸೆಣಸಲು ನಿಂತರು.

೧೬. ಉಗ್ರದಂಡ ಮೊದಲಾದವರೊಡನೆ ಮಹಾಮಣಿಯೂ, ರಾಹುವಿನೊಡನೆ ಚಂದ್ರನೂ, ಶುಕ್ರಾಚಾರ್ಯನೊಂದಿಗೂ ಬೃಹಸ್ಪತಿಯೂ ಧರ್ಮಯುದ್ಧದಲ್ಲಿ ತೊಡಗಿದರು.

೧೭. ಆ ಮಹಾಸಂಗ್ರಾಮದಲ್ಲಿ ನಂದೀಕೇಶ್ವರ ಮೊದಲಾದ ಶಿವನ ಪಾರಿಷದರು, ಪ್ರಖ್ಯಾತರಾದ ದಾನವ ವೀರರೊಡನೆ ಹೋರಾಡಿದರು. ಅವರೆಲ್ಲರನ್ನೂ ಬೇರೆ ಬೇರೆ ವಿಸ್ತಾರವಾಗಿ ಹೇಳಲಾಗುವುದಿಲ್ಲ.

ವಟಮೂಲೇ ತದಾ ಶಂಭುಸ್ತಸ್ಥೌ ಕಾಲ್ಯಾ ಸುತೇನ ಚ ।
ಸರ್ವೇ ಚ ಯುಯುಧುಸ್ಸೈನ್ಯಸಮೂಹಾಸ್ಸತತಂ ಮುನೇ ॥ ೧೮ ॥

ರತ್ನಸಿಂಹಾಸನೇ ರಮ್ಯೇ ಕೋಟಿದಾನವಸಂಯುತಃ ।
ಉವಾಸ ಶಂಖಚೂಡಶ್ಚ ರತ್ನಭೂಷಣಭೂಷಿತಃ ॥ ೧೯ ॥

ಮಹಾಯುದ್ಧೋ ಬಭೂವಾಥ ದೇವಾಸುರವಿಮರ್ದನಃ ।
ನಾನಾಯುಧಾನಿ ದಿವ್ಯಾನಿ ಚಲಂತಿ ಸ್ಮ ಮಹಾಮೃಧೇ ॥ ೨೦ ॥

ಗದರ್ಷ್ಟಿಪಟ್ಟಿಶಾಶ್ಚಕ್ರಭುಶುಂಡಿಪ್ರಾಸಮುದ್ಗರಾಃ ।
ನಿಸ್ತ್ರಿಂಶಭಲ್ಲಪರಿಘಾಃ ಶಕ್ತ್ಯುನ್ಮುಖಪರಶ್ವಧಾಃ ॥ ೨೧ ॥

ಶರತೋಮರಖಡ್ಗಾಶ್ಚ ಶತಘ್ನ್ಯಶ್ಚ ಸಹಸ್ರಶಃ ।
ಭಿಂದಿಪಾಲಾದಯಶ್ಚಾನ್ಯವೀರಹಸ್ತೇಷು ಶೋಭಿತಾಃ ॥ ೨೨ ॥

---

೧೮. ಆಗ ಶಿವನು ಆಲದಮರದ ಬುಡದಲ್ಲಿ ಭದ್ರಕಾಳಿಯೊಡನೆಯೂ, ಸ್ಕಂದನೊಂದಿಗೂ ಕುಳಿತು, ಯುದ್ಧವನ್ನು ನೋಡುತ್ತಿದ್ದನು. ಓ ವ್ಯಾಸ, ಆ ದೇವದಾನವರ ಸೇನೆಗಳು ಪರಸ್ಪರ ಗುಂಪುಗುಂಪಾಗಿ ಎಡೆಬಿಡದೆ ನುಗ್ಗಿ ಕಾದಾಡಿದವು.

೧೯. ಅತ್ತಲಾಗಿ ಆ ಶಂಖಚೂಡನೂ ಸಹ ರತ್ನ ಖಚಿತವಾದ ಆಭರಣಗಳನ್ನು ಧರಿಸಿ, ಮನೋಹರವಾದ ರತ್ನಸಿಂಹಾಸನದಲ್ಲಿ ಕುಳಿತು, ಕೋಟಿ ದಾನವರೊಡನೆ ಯುದ್ಧವನ್ನು ನಿರೀಕ್ಷಿಸುತ್ತಿದ್ದನು.

೨೦. ಬಳಿಕ ಸಂಗ್ರಾಮವು ಭೀಕರಸ್ವರೂಪವನ್ನು ತಾಳಿತು. ದೇವತೆಗಳೂ ಅಸುರರೂ ನುಚ್ಚುನೂರಾಗತೊಡಗಿದರು. ಆ ಭಯಂಕರ ಸಂಗ್ರಾಮದಲ್ಲಿ ದಿವ್ಯವಾದ ಬಗೆಬಗೆಯ ಆಯುಧಗಳು ಹಾರಾಡಹತ್ತಿದವು.

೨೧-೨೨. ಗದೆ, ಋಷ್ಟಿಯೆಂಬ ಆಯುಧ, ಪಟ್ಟಿಸ, ಚಕ್ರ, ಭುಸುಂಡಿ, ಪ್ರಾಸ, ಮುದ್ಗರ, ಕತ್ತಿ, ಭಲ್ಲೆ, ಪರಿಘ, ಶಕ್ತಿ, ಶೂಲ, ಪರಶ್ವಧ, ಬಾಣ, ತೋಮರ, ಖಡ್ಗ, ಶತಘ್ನಿ, ಭಿಂಡಿಪಾಲ, ಮುಂತಾದ ಸಾವಿರಾರು ಆಯುಧಗಳು, ಆ ವೀರರ ಕೈಲಿ ಶೋಭಿಸಿದುವು.

ಶಿರಾಂಸಿ ಚಿಚ್ಛಿದುಶ್ಶ್ರೈಭಿರ್ವೀರಾಸ್ತತ್ರ ಮಹೋತ್ಸವಾಃ ।
ವೀರಾಣಾಮುಭಯೋಶ್ಚೈವ ಸೈನ್ಯಯೋರ್ಗರ್ಜತೋ ರಣೇ ॥ ೨೩ ॥

ಗಜಾಸ್ತುರಂಗಾ ಬಹವಃ ಸ್ಯಂದನಾಶ್ಚ ಪದಾತಯಃ ।
ಸಾರೋಹವಾಹಾ ವಿವಿಧಾಸ್ತತ್ರಾಸನ್ಸುವಿಖಂಡಿತಾಃ ॥ ೨೪ ॥

ನಿಕೃತ್ತಬಾಹೂರುಕರಕಟಿಕರ್ಣಯುಗಾಂಘ್ರಯಃ ।
ಸಂಭಿನ್ನಧ್ವಜಬಾಣಾಸಿತನುತ್ರವರಭೂಷಣಾಃ ॥ ೨೫ ॥

ಸಮುದ್ಧತಕಿರೀಟೈಶ್ಚ ಶಿರೋಭಿಸ್ಸಹ ಕುಂಡಲೈಃ ।
ಸಂರಂಭನಷ್ಟೈರಾಸ್ತೀರ್ಣಾ ಬಭೌ ಭೂಃ ಕರಭೋರುಭಿಃ ॥ ೨೬ ॥

---

೨೩. ಆ ಯುದ್ಧದಲ್ಲಿ ಎರಡು ಕಡೆಯ ಸೇನೆಗಳಲ್ಲಿಯೂ ಇರುವ ವೀರರು ಮಹಾಸಂಭ್ರಮದಿಂದ ಸಿಂಹನಾದವಮಾಡುತ್ತಾ ತಮ್ಮ ಆಯುಧಗಳನ್ನು ಬೀಸಿ ಶತ್ರುಗಳ ತಲೆಗಳನ್ನು ಕತ್ತರಿಸಿ ಕೆಡವುತ್ತಿದ್ದರು.

೨೪. ಲೆಕ್ಕವಿಲ್ಲದಷ್ಟು ಆನೆಗಳೂ, ಕುದುರೆಗಳೂ, ತೇರುಗಳೂ, ಕಾಲಾಳುಗಳೂ, ಕುದುರೆ ಸವಾರರೂ ಶತ್ರುಗಳ ಏಟಿಗೆ ಸಿಲುಕಿ ಛಿನ್ನಛಿದ್ರವಾಗಿ ಹೋದರು.

೨೫. ಕೆಲವರ ಕೈಗಳು ಕತ್ತರಿಸಿಹೋದುವು. ಕೆಲವರಿಗೆ ತೊಡೆಗಳು ಮುರಿದುಹೋದುವು. ಕೆಲವರ ನಡುವು ಮುರಿಯಿತು. ಕೆಲವರಿಗೆ ಕಿವಿಗಳು ಹರಿದುಹೋದುವು. ಕೆಲವರ ಕಾಲುಗಳು ತುಂಡಾದವು. ಕೆಲವರ ಧ್ವಜಗಳು ಮುರಿದುಹೋದುವು. ಕೆಲವರ ಬಾಣಗಳು ತುಂಡಾಗಿಹೋದುವು. ಕೆಲವರ ಕತ್ತಿಗಳು ಕತ್ತರಿಸಿಹೋದುವು. ಕೆಲವರ ಕವಚಗಳು ಛಿದ್ರಛಿದ್ರವಾದುವು. ಕೆಲವರ ಒಡವೆಗಳು ಹಾರಾಡಿಹೋದುವು.

೨೬-೨೭. ಆ ಭಯಂಕರವಾದ ಸಂಗರದಲ್ಲಿ ಕೆಲವುಕಡೆ ಉನ್ನತವಾದ ಹೊಳೆವ ಕಿರೀಟದಿಂದಲೂ, ಮೆರೆವ ಕುಂಡಲಗಳಿಂದಲೂ, ಕೂಡಿದ ರುಂಡಗಳು ಚೆಂಡಾಡಿದಂತೆ ಉರುಳುತ್ತಿದ್ದುವು. ಕೆಲವು ಕಡೆ ಕಂಭದಂತೆ ಮೃದುವಾದ ತೊಡೆಗಳು ತುಂಡರಿಸಿ ಬಿದ್ದಿದ್ದುವು. ಮತ್ತೆ ಕೆಲವುಕಡೆ ತೊಟ್ಟಿರುವ ಆಭರಣಗಳಿಂದ ಶೋಭಿ

ಮಹಾಭುಜೈಸ್ಸಾಭರಣೈಸ್ಸಂಛಿನ್ನೈಸ್ಸಾಯುಧೈಸ್ತಥಾ ।
ಅಂಗೈರನ್ಯೈಶ್ಚ ಸಹಸಾ ಪಟಲೈರ್ವಾ ಸಸಾರಘೈಃ ॥ ೨೭ ॥

ಮೃಧೇ ಭಟಾಃ ಪ್ರಧಾವಂತಃ ಕಬಂಧಾನ್ಸ್ವಶಿರೋಕ್ಷಿಭಿಃ ।
ಪಶ್ಯಂತಸ್ತತ್ರ ಚೋತ್ಪೇತುರುದ್ಯಾತಾಯುಧಸದ್ಭುಜೈಃ ॥ ೨೮ ॥

ವಲ್ಗಂತೋಽತಿತರಾಂ ವೀರಾ ಯುಯುಧುಶ್ಚ ಪರಸ್ಪರಂ ।
ಶಸ್ತ್ರಾಸ್ತ್ರೈರ್ವಿವಿಧೈಸ್ತತ್ರ ಮಹಾಬಲಪರಾಕ್ರಮಾಃ ॥ ೨೯ ॥

ಕೇಚಿತ್ಸ್ವರ್ಣಮುಖೈರ್ಬಾಣೈರ್ವಿನಿಹತ್ಯ ಭಟಾನ್ಮೃಧೇ ।
ವ್ಯನದನ್ವೀರಸಂನ್ನಾದಂ ಸತೋಯಾ ಇವ ತೋಯದಾಃ ॥ ೩೦ ॥

---

ಸುತ್ತಾ ಹಿಡಿದಿದ್ದ ಆಯುಧಗಳೊಡನೆಯೇ ತೋಳುಗಳು ಕತ್ತರಿಸಿಬಿದ್ದಿದ್ದವು. ಇನ್ನೂ ಅನೇಕ ಅಂಗಾಂಗಗಳು ಕತ್ತರಿಸಿಹೋಗಿ ಭೂಮಿಯನ್ನು ಮುತ್ತಿಬಿಟ್ಟಿದ್ದುವು ಆಗ ಆ ಯುದ್ಧಭೂಮಿಯು, ಜೇನುನೊಣಗಳು ಮುತ್ತಿದ ಜೇನುಗೂಡಿನಂತೆ ತೋರುತ್ತಲಿದ್ದಿತು.

೨೮. ಆ ಯುದ್ಧದಲ್ಲಿ ಯೋಧರು ಕೈಗಳಲ್ಲಿ ಕೈದುಗಳನ್ನು ಪಿಡಿದು, ಇತ್ತಲಿಂದತ್ತ ನೆಗೆದು ಓಡಾಡುತ್ತಾ ತಮ್ಮ ಸ್ವಂತ ಕಂಗಳಿಂದಲೇ ತಮ್ಮ ಮುಂಡವು ನೆಲದಲ್ಲಿ ಹೊರಳಾಡುವುದನ್ನು ಕಾಣುತ್ತಿದ್ದರು.

೨೯. ಮಹಾಬಲಾಢ್ಯರೂ, ಪರಾಕ್ರಮಶಾಲಿಗಳೂ ಆದ ಎರಡು ಕಡೆಯ ವೀರರೂ ನಾನಾವಿಧವಾದ ಆಯುಧಗಳಿಂದಲೂ, ಅಸ್ತ್ರಗಳಿಂದಲೂ ಪರಸ್ಪರ ಹೋರಾಡುತ್ತಾ ಬಹಳ ಜೋರಾಗಿ ಸೆಣಸಿದರು.

೩೦. ಕೆಲಮಂದಿ ಯೋಧರು ಚಿನ್ನದ ಅಲಗುಗಳುಳ್ಳ ಬಾಣಗಳಿಂದ ತಮ್ಮ ಎದುರಾಳಿಗಳನ್ನು ಕೊಂದು ನೀರು ತುಂಬಿದ ಹೊಸ ಮೇಘಗಳಂತೆ ವೀರನಾದವನ್ನು ಮಾಡಿದರು.

ಸರ್ವತಶ್ಶರಕೋಟೀನ ವೀರಸ್ಸರಥಸಾರಥಿಂ ।
ವೀರಂ ಸಂಛಾದಯಾಮಾಸ ಪ್ರಾವೃಟ್ಸೂರ್ಯಮಿವಾಂಬುದಃ ॥ ೩೧ ॥

ಅನ್ಯೋನ್ಯಮಭಿಸಂಸೃತ್ಯ ಯುಯುಧುರ್ದ್ವಂದ್ವಯೋಧಿನಃ ।
ಆಹ್ವಯಂತೋ ವಿಶಂತೋಽಗ್ರೇ ಕ್ಷಿಪಂತೋ ಮರ್ಮಭಿರ್ಮಿಥಃ ॥ ೩೨ ॥

ಸರ್ವತೋ ವೀರಸಂಘಾಶ್ಚ ನಾನಾಬಾಹುಧ್ವಜಾಯುಧಾಃ ।
ವ್ಯದೃಶ್ಯಂತ ಮಹಾಸಂಖ್ಯೇ ಕುರ್ವಂತಃ ಸಿಂಹಸಂರವಂ ॥ ೩೩ ॥

ಮಹಾರವಾನ್ಸ್ವಶಂಖಾಂಶ್ಚ ವಿದಧ್ಮುರ್ವೈ ಪೃಥಕ್ಪೃಥಕ್ ।
ಬಲ್ಗನಂ ಚಕ್ರಿರೇ ತತ್ರ ಮಹಾವೀರಾಃ ಪ್ರಹರ್ಷಿತಾಃ ॥ ೩೪ ॥

---

೩೧. ವೀರನೋರ್ವನು ತನ್ನನ್ನು ಎದುರಿಸಿದ ವೀರನೊಬ್ಬನನ್ನು, ಅವನ ತೇರೂ, ಸಾರಥಿಯೂ ಮುಚ್ಚಿಹೋಗುವಷ್ಟು ಮಟ್ಟಿಗೆ ಸರ್ವತೋಮುಖವಾಗಿ ಬಾಣದ ಮಳೆಯನ್ನು ಕರೆಯುತ್ತಾ ವರ್ಷಋತುವಿನಲ್ಲಿ ಮೋಡವು ಸೂರ್ಯನನ್ನು ಮುಚ್ಚಿ ಬಿಡುವಂತೆ ಮುಚ್ಚಿಬಿಟ್ಟನು.

೩೨. ದ್ವಂದ್ವಯುದ್ಧದಲ್ಲಿ ತೊಡಗಿದ್ದ ವೀರರು ಒಬ್ಬನಮೇಲೊಬ್ಬನು ಏರಿ ಹೋಗುತ್ತಾ ಎದುರಾಳಿಯನ್ನು ಯುದ್ಧಕ್ಕೆ ಬಾರೆಂದು ಕರೆಯುತ್ತಾ ಮರ್ಮಸ್ಥಳ ಗಳನ್ನು ಚುಚ್ಚಿ ಹಿಂಸಿಸುತ್ತಾ ಮುಂದೆ ನಗ್ಗುತ್ತಾ ಪರಸ್ಪರ ಹೊಡೆದಾಡಿದರು.

೩೩. ಆ ಮಹಾಯುದ್ಧದಲ್ಲಿ ಎತ್ತ ನೋಡಿದರತ್ತ ಗುಂಪುಗುಂಪಾಗಿ ಬಗೆಬಗೆ ಯಾದ ಆಯುಧಗಳನ್ನೂ, ಪತಾಕೆಗಳನ್ನೂ ಹಿಡಿದು ಸಿಂಹನಾದಗಳನ್ನೂ ಮಾಡುತಾ ವೀರಯೋಧರು ಕಾಣಬರುತ್ತಿದ್ದರು.

೩೪. ವೀರ್ಯಾತಿಶಯವುಳ್ಳ ಆ ಯೋಧರು ಮಹಾಸಂತೋಷದಿಂದ ಉಬ್ಬುತ್ತಾ, ತುಂಬು ಧ್ವನಿಯುಳ್ಳ ತಮ್ಮ ತಮ್ಮ ಶಂಖಗಳನ್ನು ಬೇರೆಬೇರೆಯಾಗಿ ಊದಿದರು. ಪುಟಚೆಂಡಿನಂತೆ ಆ ರಣಾಂಗಣದಲ್ಲಿ ಹಾರಾಡುತ್ತಾ ತಮ್ಮ ಕೈಚಳಕ ವನ್ನು ತೋರಿಸುತ್ತಿದ್ದರು.

ಏವಂ ಚಿರತರಂ ಕಾಲಂ ದೇವದಾನವಯೋರ್ಮಹತ್ ।
ಬಭೂವ ಯುದ್ಧಂ ವಿಕಟಂ ಕರಾಲಂ ವೀರಹರ್ಷದಂ ॥ ೩೫ ॥

ಮಹಾಪ್ರಭೋಶ್ಚ ಲೀಲೇಯಂ ಶಂಕರಸ್ಯ ಪರಾತ್ಮನಃ ।
ಯಯಾ ಸಂಮೋಹಿತಂ ಸರ್ವಂ ಸದೇವಾಸುರಮಾನುಷಂ ॥ ೩೬ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡವಧೇ ಪರಸ್ಪರಯುದ್ಧ
ವರ್ಣನಂ ನಾಮ ಷಟ್ತ್ರಿಂಶೋಽಧ್ಯಾಯಃ

---

೩೫. ಈರೀತಿಯಾಗಿ ವೀರರಿಗೆ ಹರ್ಷವನ್ನು ಹುಟ್ಟಿಸುವ ಮಹಾಭಯಂಕರವಾದ ಭಾರಿಯುದ್ಧವು ದೇವತೆಗಳಿಗೂ ದಾನವರಿಗೂ ಬಹುಕಾಲ ಜರುಗಿತು

೩೬. ಪ್ರಭುಗಳಿಗೆಲ್ಲ ಪ್ರಭುವೂ, ಪರಮಪುರುಷನೂ ಆದ ಶಂಕರನ ಲೀಲೆಯಿದು. ಈ ಲೀಲೆಯಿಂದಲೇ ದೇವತೆಗಳೂ ಅಸುರರೂ, ಮನುಷ್ಯರೂ ತುಂಬಿರುವ ಈ ಜಗತ್ತೆಲ್ಲವೂ ಮೋಹಿತವಾಗಿರುವುದು.

ಇಲ್ಲಿಗೆ ಶ್ರೀಶಿವಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ ಪರಸ್ಪರ
ಯುದ್ಧವರ್ಣನವೆಂಬ ಮೂವತ್ತಾರನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಸಪ್ತತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ತದಾ ದೇವಗಣಾಸ್ಸರ್ವೇ ದಾನವೈಶ್ಚ ಪರಾಜಿತಾಃ ।
ದುದ್ರುವುರ್ಭಯಭೀತಾಶ್ಚ ಶಸ್ತ್ರಾಸ್ತ್ರಕ್ಷತವಿಗ್ರಹಾಃ ॥ ೧ ॥

ತೇ ಪರಾವೃತ್ಯ ವಿಶ್ವೇಶಂ ಶಂಕರಂ ಶರಣಂ ಯಯುಃ ।
ತ್ರಾಹಿ ತ್ರಾಹೀತಿ ಸರ್ವೇಶೇತ್ಯೂಚುರ್ವಿಹ್ವಲಯಾ ಗಿರಾ ॥ ೨ ॥

---

## ಮೂವತ್ತೇಳನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :—ಓ ವ್ಯಾಸ, ಆಗ ದೇವತೆಗಳೆಲ್ಲರೂ ದಾನವರ ಶಸ್ತ್ರಗಳಿಂದಲೂ, ಅಸ್ತ್ರಗಳಿಂದಲೂ ಗಾಯಗೊಂಡು ಜರ್ಝರಿತವಾದ ಶರೀರವುಳ್ಳವರಾಗಿ, ಭಯದಿಂದ ತತ್ತಳಿಸುತ್ತಾ ದಿಕ್ಕೆಟ್ಟು ಓಡಿಹೋದರು.

೨. ಅವರೆಲ್ಲರೂ ಹಿಂದಕ್ಕೆ ಓಡಿಬರುತ್ತಾ, ಓ ಸರ್ವೇಶ್ವರ, ನಮ್ಮನ್ನು ಕಾಪಾಡು, ಕಾಪಾಡು, ಎಂಬುದಾಗಿ ದೈನ್ಯದಿಂದ ಕೂಗಿಕೊಳ್ಳುತ್ತಾ, ಜಗತ್ಪ್ರಭುವಾದ ಶಂಕರನನ್ನು ಮರೆಹೊಕ್ಕರು.

ದೃಷ್ಟ್ವಾ ಪರಾಜಯಂ ತೇಷಾಂ ದೇವಾದೀನಾಂ ಸ ಶಂಕರಃ ।
ಸಭಯಂ ವಚನಂ ಶ್ರುತ್ವಾ ಕೋಪಮುಚ್ಚೈಶ್ಚಕಾರ ಹ ॥ ೩ ॥

ನಿರೀಕ್ಷ್ಯ ಸ ಕೃಪಾದೃಷ್ಟ್ಯಾ ದೇವೇಭ್ಯಶ್ಚಾಭಯಂ ದದೌ ।
ಬಲಂ ಚ ಸ್ವಗಣಾನಾಂ ವೈ ವರ್ಧಯಾಮಾಸ ತೇಜಸಾ ॥ ೪ ॥

ಶಿವಾಜ್ಞಪ್ತಸ್ತದಾ ಸ್ಕಂದೋ ದಾನವಾನ್ಸ್ವಗಣೈಸ್ಸಹ ।
ಯಯುಧೇ ನಿರ್ಭಯಸ್ಸಂಖ್ಯೇ ಮಹಾವೀರೋ ಹರಾತ್ಮಜಃ ॥ ೫ ॥

ಕೃತ್ವಾ ಕ್ರೋಧಂ ವೀರಶಬ್ದಂ ದೇವೋ ಯಸ್ತಾರಕಾಂತಕಃ ।
ಅಕ್ಷೌಹಿಣೀನಾಂ ಶತಕಂ ಸಮರೇ ಸ ಜಘಾನ ಹ ॥ ೬ ॥

ರುಧಿರಂ ಪಾತಯಾಮಾಸ ಕಾಲೀ ಕಮಲಲೋಚನಾ ।
ತೇಷಾಂ ಶಿರಾಂಸಿ ಸಂಛಿದ್ಯ ಬಭಕ್ಷ ಸಹಸಾ ಚ ಸಾ ॥ ೭ ॥

---

೩. ಆ ಶಂಕರನು ದೇವತೆಗಳೆಲ್ಲರೂ ಸೋತುದನ್ನು ಕಂಡುದಲ್ಲದೆ ಅವರು ಭಯದಿಂದ ತತ್ತರಿಸುತ್ತ ಮೊರೆಯಿಡುತ್ತಿರುವುದನ್ನೂ ಕೇಳಿ ಬಹಳ ಕೋಪವನ್ನು ತಾಳಿದನು.

೪. ಬಳಿಕ ಕೃಪಾಪೂರಿತವಾದ ದೃಷ್ಟಿಯಿಂದ ದೇವತೆಗಳನ್ನು ನೋಡಿ, ಅವರಿಗೆ ಹೆದರಬೇಡಿರೆಂದು ಅಭಯವಿತ್ತನು. ಅನಂತರ ತನ್ನ ತೇಜಸ್ಸಿನಿಂದ ತನ್ನ ಪಕ್ಷೀಯರಾದ ಅವರೆಲ್ಲರಿಗೂ ಬಲವನ್ನು ಹೆಚ್ಚಿಸಿದನು.

೫. ಆಗ ಮಹಾಪರಾಕ್ರಮಿಯೂ, ಶಂಕರನ ಮಗನೂ ಆದ ಷಣ್ಮುಖನು, ತನ್ನ ತಂದೆಯ ಅಪ್ಪಣೆಯಂತೆ ದಾನವರ ಸೇನೆಗಳೊಡನೆ ನಿರ್ಭಯನಾಗಿ ಯುದ್ಧಮಾಡತೊಡಗಿದನು.

೬. ತಾರಕಾಸುರಸಂಹಾರಿಯಾದ ಆ ಕುಮಾರನು ಮಹಾಕೋಪವನ್ನು ತಾಳಿ, ಸಿಂಹನಾದವನ್ನು ಮಾಡುತ್ತಾ, ಆ ದಾನವರ ನೂರು ಅಕ್ಷೋಹಿಣೀ ಸೇನೆಗಳನ್ನು ಸಂಹರಿಸಿಬಿಟ್ಟನು.

೭. ತಾವರೆಯಂತೆ ಕಣ್ಣುಳ್ಳ ಕಾಳಿಯು ಆ ದಾನವರ ತಲೆಗಳನ್ನು ತುಂಡರಿಸಿ ರಕ್ತವು ಚಿಮ್ಮುವಂತೆ ಮಾಡಿದಳು. ಒಡನೆಯೇ ಅವರೆಲ್ಲರನ್ನೂ ಭಕ್ಷಿಸತೊಡಗಿದಳು.

ಪಪೌ ರಕ್ತಾನಿ ತೇಷಾಂ ಚ ದಾನವಾನಾಂ ಸಮಂತತಃ ।
ಯುದ್ಧಂ ಚಕಾರ ವಿವಿಧಂ ಸುರದಾನವಭೀಷಣಂ　　॥ ೮ ॥

ಶತಲಕ್ಷಂ ಗಜೇಂದ್ರಾಣಾಂ ಶತಲಕ್ಷಂ ನೃಣಾಂ ತಥಾ ।
ಸಮಾದಾಯೈಕಹಸ್ತೇನ ಮುಖೇ ಚಿಕ್ಷೇಪ ಲೀಲಯಾ　　॥ ೯ ॥

ಕಬಂಧಾನಾಂ ಸಹಸ್ರಂ ಚ ಸನ್ನನರ್ತ ರಣೇ ಬಹು ।
ಮಹಾನ್ಕೋಲಾಹಲೋ ಜಾತಃ ಕ್ಲೀಬಾನಾಂ ಚ ಭಯಂಕರಃ　　॥ ೧೦ ॥

ಪುನಃ ಸ್ಕಂದಃ ಪ್ರಕುಪ್ಯೋಚ್ಚೈಃ ಶರವರ್ಷಾಣ್ಚಕಾರ ಹ ।
ಪಾತಯಾಮಾಸ ಕ್ಷಯತಃ ಕೋಟಿಶೋಽಸುರನಾಯಕಾ೯　　॥ ೧೧ ॥

ದಾನವಾಃ ಶರಜಾಲೇನ ಸ್ಕಂದಸ್ಯ ಕ್ಷತವಿಗ್ರಹಾಃ ।
ಭೀತಾಃ ಪ್ರದುದ್ರುವುಸ್ಸರ್ವೇ ಶೇಷಾ ಮರಣತಸ್ತದಾ　　॥ ೧೨ ॥

---

೮. ಅಷ್ಟೇ ಅಲ್ಲದೆ ಒಟ್ಟೊಟ್ಟಿಗೆ, ಕತ್ತರಿಸಲ್ಪಟ್ಟ ಆ ದಾನವರ ದೇಹದಿಂದ ಚಿಮ್ಮುತ್ತಿರುವ ರಕ್ತವನ್ನು ಹೀರಿ ಹೀರಿ ಕುಡಿದುಬಿಟ್ಟಳು. ದೇವತೆಗಳಿಗೂ ದಾನವರಿಗೂ, ಎದೆಯು ಝಲ್ಲೆನ್ನಿಸುವಂತೆ, ಬಗೆಬಗೆಯಾಗಿ ಘೋರವಾದ ಯುದ್ಧವನ್ನು ಮಾಡಿದಳು.

೯. ಆ ಕಾಳಿಯು ಒಂದು ಕೋಟಿ ಆನೆಗಳನ್ನೂ, ಒಂದು ಕೋಟಿ ಮನುಷ್ಯರನ್ನೂ, ಲೀಲಾಮಾತ್ರದಿಂದಲೇ ಒಂದು ಹಿಡಿತದಲ್ಲಿ ಹಿಡಿದು ಒಂದೇ ಬಾರಿಗೆ ಬಾಯಿಗೆ ಹಾಕಿಕೊಂಡು ನುಂಗಿಬಿಟ್ಟಳು.

೧೦. ಆ ಯುದ್ಧದಲ್ಲಿ ರುಂಡವಿಲ್ಲದ ಮುಂಡಗಳು, ಸಾವಿರಾರು ಗಟ್ಟಲೆ ಕುಣಿದಾಡತೊಡಗಿದವು. ಆಗ ಹೇಡಿಗಳೆಲ್ಲರೂ ಹೆದರುವಂತೆ ಬಹು ಭಾರಿಯಾದ ಗದ್ದಲವುಂಟಾಯಿತು.

೧೧. ಮರಳಿ ಕುಮಾರನು ಆ ದಾನವರ ಮೇಲೆ ಮಳೆ ಸುರಿಸಿದಂತೆ ಬಾಣಗಳನ್ನು ಸುರಿಸಿದನು. ಆ ಅಸುರರ ಮುಂದಾಳುಗಳನ್ನು ಕೋಟಿಗಟ್ಟಲೆ ಕೊಂದು ಕೆಡಹಿದನು.

೧೨. ಈರೀತಿಯಾಗಿ ಮೇಲೆಮೇಲೆ ಬಂದುಬೀಳುತ್ತಿರುವ ಆ ಕುಮಾರನ ಬಾಣಪರಂಪರೆಗೆ ಈಡಾಗಿ, ಮೈಯ್ಯೆಲ್ಲಾ ಗಾಯಗೊಂಡು ಆ ದಾನವರು ಇನ್ನು ನಾವು ಉಳಿಯಲಾರೆವು ಎಂದು ಹೆದರಿ ಓಡಿಹೋದರು.

ವೃಷಪರ್ವಾ ವಿಪ್ರಚಿತ್ತಿರ್ದಂಡಶ್ಚಾಪಿ ವಿಕಂಪನಃ ।
ಸ್ಕಂದೇನ ಯುಯುಧುಸ್ಸಾರ್ಧಂ ತೇನ ಸರ್ವೇ ಕ್ರಮೇಣ ಚ ॥ ೧೩ ॥

ಮಹಾಮಾರೀ ಚ ಯುಯುಧೇ ನ ಬಭೂವ ಪರಾಙ್ಮುಖೀ ।
ಬಭೂವುಸ್ತೇ ಕ್ಷತಾಂಗಾಶ್ಚ ಸ್ಕಂದಶಕ್ತಿಪ್ರಪೀಡಿತಾಃ ॥ ೧೪ ॥

ಮಹಾಮಾರೀಸ್ಕಂದಯೋಶ್ಚ ವಿಜಯೋಽಭೂತ್ತದಾ ಮುನೇ ।
ನೇದುರ್ದುಂದುಭಯಸ್ಸ್ವರ್ಗೇ ಪುಷ್ಪವೃಷ್ಟಿಃ ಪಪಾತ ಹ ॥ ೧೫ ॥

ಸ್ಕಂದಸ್ಯ ಸಮರಂ ದೃಷ್ಟ್ವಾ ಮಹಾರೌದ್ರಂ ತಮದ್ಭುತಂ ।
ದಾನವಾನಾಂ ಕ್ಷಯಕರಂ ಯಥಾ ಪ್ರಕೃತಿಕಲ್ಪಕಂ ॥ ೧೬ ॥

ಮಹಾಮಾರೀಕೃತಂ ತಚ್ಚೋಪದ್ರವಂ ಕ್ಷಯಹೇತುಕಂ ।
ಚುಕೋಪಾತೀವ ಸಹಸಾ ಸಂನದ್ಧೋಽಭೂತ್ಸ್ವಯಂ ತದಾ ॥ ೧೭ ॥

---

೧೩. ಅನಂತರ ವೃಷಪರ್ವನೂ, ವಿಪ್ರಚಿತ್ತಿಯೂ, ದಂಡನೂ, ವಿಕಂಪನನೂ, ಒಬ್ಬರಾದ ಮೇಲೆ ಒಬ್ಬರಂತೆ ಆ ಸ್ಕಂದನೊಡನೆ ಹೋರಾಡತೊಡಗಿದರು.

೧೪. ಮಹಾಮಾರಿಯೂ (ಕಾಳಿ) ಸಹ ಆ ಕದನದಲ್ಲಿ ಭಾಗವಹಿಸಿದ್ದಳು. ಆಕೆಯು ಯುದ್ಧದಿಂದ ಹಿಂದಿರುಗಲೇ ಇಲ್ಲ. . ಬಳಿಕ ವೃಷಪರ್ವ ಮೊದಲಾದ ದಾನವರು ಕುಮಾರನ ಶಕ್ತಿಯಿಂದ ಪೀಡಿತರಾಗಿ ಮೈಯ್ಯೆಲ್ಲಾ ಛಿನ್ನಭಿನ್ನವಾಗಿ ಹೋದರು.

೧೫. ಓ ವ್ಯಾಸಮುನೀಂದ್ರ, ಇಂತು ಆ ಕಾಳಿನಿಗೂ, ಸ್ಕಂದನಿಗೂ, ಆಗಿನ ಯುದ್ಧದಲ್ಲಿ ಜಯವು ದೊರೆಯಿತು. ಆಗ ಸ್ವರ್ಗಲೋಕದಲ್ಲಿ ದೇವದುಂದುಭಿಗಳು ಮೊಳಗಿದುವು. ಮೇಲಿನಿಂದ ಹೂವಿನ ಮಳೆ ಸುರಿಯಿತು.

೧೬-೧೭. ಈರೀತಿ ಮೈಜುಮ್ಮೆನ್ನುವಂತೆ ಅತಿ ಭಯಂಕರವಾಗಿ ದಾನವರನ್ನೆಲ್ಲಾ ತುಂಡರಿಸಿ, ಕುಮಾರನು ಯುದ್ಧಮಾಡಿದುದನ್ನೂ, ಒಟ್ಟೊಟ್ಟಿಗೆ ದಾನವರನ್ನೆಲ್ಲಾ ನುಂಗಿಬಿಡುತ್ತಾ ಮಹಾಮಾರಿಯು ಮಾಡಿದ ಆ ಉಪಟಳವನ್ನೂ ಕಂಡು, ಶಂಖಚೂಡನಿಗೆ ಮಿತಿಮೀರಿ ರೇಗಿಹೋಯಿತು. ಆಗ ಮೈಗೆ ಕವಚವನ್ನು ತೊಟ್ಟು ತಾನಾಗಿಯೇ ಯುದ್ಧಕ್ಕೆ ನುಗ್ಗಿದನು.

ವರಂ ವಿಮಾನಮಾರುಹ್ಯ ನಾನಾಶಸ್ತ್ರಾಸ್ತ್ರಸಂಯುತಂ ।
ಅಭಯಂ ಸರ್ವವೀರಾಣಾಂ ನಾನಾರತ್ನಪರಿಚ್ಛದಂ ॥ ೧೮ ॥

ಮಹಾವೀರೈಶ್ಶಂಖಚೂಡೋ ಜಗಾಮ ರಥಮಧ್ಯತಃ ।
ಧನುರ್ವಿಕೃಷ್ಯ ಕರ್ಣಾಂತಂ ಚಕಾರ ಶರವರ್ಷಣಂ ॥ ೧೯ ॥

ತಸ್ಯ ಸಾ ಶರವೃಷ್ಟಿಶ್ಚ ದುರ್ನಿವಾರ್ಯಾ ಭಯಂಕರೀ ।
ಮಹಾಘೋರಾಂಧಕಾರಶ್ಚ ವಧಸ್ಥಾನೇ ಬಭೂವ ಹ ॥ ೨೦ ॥

ದೇವಾಃ ಪ್ರದುದ್ರುವುಃ ಸರ್ವೇ ಯೇsನ್ಯೇ ನಂದೀಶ್ವರಾದಯಃ ।
ಏಕ ಏವ ಕಾರ್ತಿಕೇಯಸ್ತಸ್ಥೌ ಸಮರಮೂರ್ಧನಿ ॥ ೨೧ ॥

ಪರ್ವತಾನಾಂ ಚ ಸರ್ಪಾಣಾಂ ನಾಗಾನಾಂ ಶಾಖಿನಾಂ ತಥಾ ।
ರಾಜಾ ಚಕಾರ ವೃಷ್ಟಿಂ ಚ ದುರ್ನಿವಾರ್ಯಾಂ ಭಯಂಕರೀಂ ॥ ೨೨ ॥

---

೧೮-೧೯. ಆ ಶಂಖಚೂಡನು ತನ್ನ ಕಡೆಯ ಮಹಾವೀರರೊಡನೆ ಬಗೆಬಗೆಯಾದ ಶಸ್ತ್ರಗಳಿಂದಲೂ, ಅಸ್ತ್ರಗಳಿಂದಲೂ ಪರಿಪೂರ್ಣವಾಗಿ, ವಿಧವಿಧವಾದ ರತ್ನಗಳಿಂದ ಅಲಂಕರಿಸಲ್ಪಟ್ಟು, ಎಲ್ಲ ವೀರರಿಗೂ ಅಭಯವನ್ನು ನೀಡುವ, ತನ್ನ ವಿಮಾನ ಶ್ರೇಷ್ಠವನ್ನು ಏರಿಬಂದನು. ಅನಂತರ ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ಬಾಣಗಳ ಮಳೆಯನ್ನು ಕರೆದನು.

೨೦. ಆ ರಣಾಂಗಣದಲ್ಲಿ ಆ ಶಂಖಚೂಡನು ಬಿಟ್ಟ ಭಯಂಕರವಾದ ಬಾಣವರ್ಷವನ್ನು ಯಾರಿಗೂ ತಡೆಯಲಾಗಲಾರದಾಯಿತು. ಅಲ್ಲಿ ಬಹು ಭೀಷಣವಾದ ಗಾಢಾಂಧಕಾರವು ಆವರಿಸಿತು.

೨೧. ಆಗ ಯುದ್ಧದಲ್ಲಿ ಮುಂದುಗಡೆ ಕುಮಾರನೊಬ್ಬನು ಮಾತ್ರ ನಿಂತನಲ್ಲದೆ, ಉಳಿದ ನಂದಿಕೇಶ್ವರ ಮೊದಲಾದವರು ಕಾಲಿಗೆ ಬುದ್ಧಿಹೇಳಿದರು.

೨೨. ಅನಂತರ ಆ ಶಂಖಚೂಡನು ಪರ್ವತಗಳನ್ನೂ, ಸರ್ಪಗಳನ್ನೂ, ಆನೆಗಳನ್ನೂ, ದೊಡ್ಡ ದೊಡ್ಡ ಮರಗಳನ್ನೂ ಮಳೆಸುರಿಸಿದಂತೆ ಕುಮಾರನ ಮೇಲೆ ಪ್ರಯೋಗಿಸಿದನು.

ತದ್ವೃಷ್ಟ್ಯಾ ಪ್ರಹತಃ ಸ್ಕಂದೋ ಬಭೂವ ಶಿವನಂದನಃ ।
ನೀಹಾರೇಣ ಚ ಸಾಂದ್ರೇಣ ಸಂವೃತೌ ಭಾಸ್ಕರೌ ಯಥಾ ॥ ೨೩ ॥

ನಾನಾವಿಧಾಂ ಸ್ವಮಾಯಾಂ ಚ ಚಕಾರ ಮಯದರ್ಶಿತಾಂ ।
ತಾಂ ನಾವಿದನ್ಸುರಾಃ ಕೇಽಪಿ ಗಣಾಶ್ಚ ಮುನಿಸತ್ತಮ ॥ ೨೪ ॥

ತದೈವ ಶಂಖಚೂಡಶ್ಚ ಮಹಾಮಾಯೀ ಮಹಾಬಲಃ ।
ಶರೇಣೈಕೇನ ದಿವ್ಯೇನ ಧನುಶ್ಚಿಚ್ಛೇದ ತಸ್ಯ ವೈ ॥ ೨೫ ॥

ಬಭಂಜ ತದ್ರಥಂ ದಿವ್ಯಂ ಚಿಚ್ಛೇದ ರಥಪೀಡಕಾನ್ ।
ಮಯೂರಂ ಜರ್ಜರೀಭೂತಂ ದಿವ್ಯಾಸ್ತ್ರೇಣ ಚಕಾರ ಸಃ ॥ ೨೬ ॥

ಶಕ್ತಿಂ ಚಿಕ್ಷೇಪ ಸೂರ್ಯಾಭಾಂ ತಸ್ಯ ವಕ್ಷಸಿ ಘಾತಿನೀಂ ।
ಮೂರ್ಛಾಮವಾಪ ಸಹಸಾ ತತ್ಪ್ರಹಾರೇಣ ಸ ಕ್ಷಣಂ ॥ ೨೭ ॥

---

೨೩. ಆ ದಾನವನು ಸುರಿಸಿದ ಆ ಬೆಟ್ಟ ಮೊದಲಾದುವುಗಳ ಸುರಿಮಳೆಯಲ್ಲಿ ಸಿಕ್ಕಿದ ಶಿವಕುಮಾರನಾದ ಷಣ್ಮುಖನು ದಟ್ಟವಾಗಿ ಕವಿದಮಂಜಿನ ತೆರೆಯಮರೆಯೊಳಗೆ ಅಡಗಿರುವ ಸೂರ್ಯನಂತೆ ತೋರಿದನು.

೨೪. ಬಳಿಕ ಆ ಶಂಖಚೂಡನು ಮಯನಿಂದ ಕಲಿತಿರುವ ತನ್ನ ಬಗೆಬಗೆಯಾದ ಮಾಯೆಗಳನ್ನು ಬೀಸತೊಡಗಿದನು. ಓವ್ಯಾಸಮಹರ್ಷೀ, ಆ ಮಾಯೆಯನ್ನು ತಿಳಿಯಲು ದೇವತೆಗಳಿಗೂ ಗಣಗಳಿಗೂ ಸಾಧ್ಯವೇ ಆಗಲಿಲ್ಲ.

೨೫. ಮಹಾಬಲಾಢ್ಯನೂ ಮಾಯಾವಿಶಾರದನೂ ಆದ ಆ ಶಂಖಚೂಡನು, ಅದೇ ಸಮಯವೆಂದು ಆ ಕುಮಾರನ ಧನುಸ್ಸನ್ನು ಒಂದು ಬಾಣದಿಂದ ಕತ್ತರಿಸಿ ಕೆಡವಿದನು.

೨೬. ಆತನ ರಥವನ್ನು ಚೂರುಚೂರುಮಾಡಿದನು. ರಥಕ್ಕೆ ಕಟ್ಟಿರುವ ಕುದುರೆಯ ಹಗ್ಗಗಳನ್ನು ಕತ್ತರಿಸಿದನು. ಆತನ ವಾಹನವಾದ ನವಿಲನ್ನು ದಿವ್ಯಾಸ್ತ್ರವೊಂದರಿಂದ ಕ್ಷತವಿಕ್ಷತವನ್ನಾಗಿಮಾಡಿದನು.

೨೭. ಬಳಿಕ ಆ ಕುಮಾರನ ಎದೆಗೆ ಸರಿಯಾಗಿ ಗುರಿಯಿಟ್ಟು ಹಿಂದಿನ ಯುದ್ಧಗಳಲ್ಲಿ ಅನೇಕ ಶತ್ರುಗಳನ್ನುಕೊಂದುಬಿಟ್ಟಿರುವ, ಸೂರ್ಯನಂತೆ ಹೊಳೆಹೊಳೆವ ತನ್ನ ಶಕ್ತಿಯನ್ನು ಬೀಸಿಬಿಟ್ಟನು. ಆ ಶಕ್ತಿಯು ಎದೆಗೆ ತಗುಲಿದೊಡನೆಯೇ ಆ ಕುಮಾರನು ತಟ್ಟನೆ ಕ್ಷಣಕಾಲ ಮೂರ್ಛೆಹೋದನು.

ಪುನಶ್ಚ ಚೇತನಾಂ ಪ್ರಾಪ್ಯ ಕಾರ್ತಿಕೇಃ ಪರವೀರಹಾ ।
ರತ್ನೇಂದ್ರಸಾರನಿರ್ಮಾಣಮಾರುರೋಹ ಸ್ವವಾಹನಂ　　॥ ೨೮ ॥

ಸ್ಮೃತ್ವಾ ಪಾದೌ ಮಹೇಶಸ್ಯ ಸಾಂಬಕಸ್ಯ ಚ ಷಣ್ಮುಖಃ ।
ಶಸ್ತ್ರಾಸ್ತ್ರಾಣಿ ಗೃಹೀತ್ವೈವ ಚಕಾರ ರಣಮುಲ್ಬಣಂ　　॥ ೨೯ ॥

ಸರ್ಪಾಂಶ್ಚ ಪರ್ವತಾಂಶ್ಚೈವ ವೃಕ್ಷಾಂಶ್ಚ ಪ್ರಸ್ತರಾಂಸ್ತಥಾ ।
ಸರ್ವಾಂಶ್ಚಿಚ್ಛೇದ ಕೋಪೇನ ದಿವ್ಯಾಸ್ತ್ರೇಣ ಶಿವಾತ್ಮಜಃ　　॥ ೩೦ ॥

ವಹ್ನಿಂ ನಿವಾರಯಾಮಾಸ ಪಾರ್ಜನ್ಯೇನ ಶರೇಣ ಹ ।
ರಥಂ ಧನುಶ್ಚ ಚಿಚ್ಛೇದ ಶಂಖಚೂಡಸ್ಯ ಲೀಲಯಾ　　॥ ೩೧ ॥

ಸನ್ನಾಹಂ ಸರ್ವವಾಹಾಂಶ್ಚ ಕಿರೀಟಂ ಮುಕುಟೋಜ್ಜ್ವಲಂ ।
ವೀರಶಬ್ದಂ ಚಕಾರಾಸೌ ಜಗರ್ಜ ಚ ಪುನಃ ಪುನಃ　　॥ ೩೨ ॥

---

೨೮. ಬಳಿಕ ಶತ್ರುವೀರರಿಗೆ ಯಮಸ್ವರೂಪನಾದ ಕುಮಾರನು ಕ್ಷಣಮಾತ್ರ ದಲ್ಲಿಯೇ ಎಚ್ಚೆತ್ತು ವಜ್ರದಂತೆ ಗಟ್ಟಿಯಾದ ತನ್ನ ವಾಹನವನ್ನು ಏರಿಬಂದನು.

೨೯. ಅನಂತರ ಕುಮಾರನು, ತನ್ನ ತಾಯಿತಂದೆಗಳಾದ ಪಾರ್ವತೀಶಂಕರರ ಪದಯುಗಲವನ್ನು ಮನದಲ್ಲಿ ನೆನೆದು, ಶಸ್ತ್ರಗಳನ್ನೂ, ಅಸ್ತ್ರಗಳನ್ನೂ ಪ್ರಯೋಗಿ ಸುತ್ತಾ ಘೋರವಾದ ಕದನಕ್ಕೆ ಆರಂಭಿಸಿದನು.

೩೦. ಬಳಿಕ ಆ ಕುಮಾರನು ಬಹುವಾಗಿ ಕೋಪಗೊಂಡು ಶಂಖಚೂಡನು ಸುರಿಸುತ್ತಿದ್ದ ಹಾವುಗಳನ್ನೂ, ಬೆಟ್ಟಗಳನ್ನೂ, ಮರಗಿಡಗಳನ್ನೂ, ಬಂಡೆಗಳನ್ನೂ ಎಲ್ಲವನ್ನೂ ದಿವ್ಯಾಸ್ತ್ರವೊಂದರಿಂದ ಖಂಡಿಸಿಬಿಟ್ಟನು.

೩೧. ಪರ್ಜನ್ಯಾಸ್ತ್ರದಿಂದ ಆ ಶಂಖಚೂಡನ ಬಾಣಗಳಿಂದ ಉಂಟಾಗಿದ್ದ ಬೆಂಕಿಯನ್ನು ಅಡಗಿಸಿಬಿಟ್ಟುದಲ್ಲದೆ ಆತನ ರಥವನ್ನೂ, ಧನುಸ್ಸನ್ನೂ ಲೀಲಾಮಾತ್ರ ದಿಂದ ಕತ್ತರಿಸಿಬಿಟ್ಟನು.

೩೨. ತೇರಿಗೂ, ಕುದುರೆಗಳಿಗೂ ಕಟ್ಟಿದ್ದ ಹಗ್ಗಗಳನ್ನೂ, ಆ ಕುದುರೆಗಳನ್ನೂ ಕತ್ತರಿಸಿಬಿಟ್ಟನು. ತಲೆಯಲ್ಲಿ ಶೋಭಿಸುತ್ತಿದ್ದ ಕಿರೀಟವನ್ನೂ ಕೆಡವಿ ವೀರನಾದ ವನ್ನು ಮಾಡಿದನು. ಸಿಂಹದಂತೆ ಮತ್ತೆ ಮತ್ತೆ ಗರ್ಜಿಸಿದನು.

ಚಿಕ್ಷೇಪ ಶಕ್ತಿಂ ಸೂರ್ಯಾಭಾಂ ದಾನವೇಂದ್ರಸ್ಯ ವಕ್ಷಸಿ ।
ತತ್ಪ್ರಹಾರೇಣ ಸಂಪ್ರಾಪ ಮೂರ್ಛಾಂ ದೀರ್ಘತಮೇನ ಚ ॥ ೩೩ ॥

ಮುಹೂರ್ತಮಾತ್ರಂ ತತ್ಕ್ಲೇಶಂ ವಿನೀಯ ಸ ಮಹಾಬಲಃ ।
ಚೇತನಾಂ ಪ್ರಾಪ್ಯ ಚೋತ್ತಸ್ಥೌ ಜಗರ್ಜ ಹರಿವರ್ಚಸಃ ॥ ೩೪ ॥

ಶಕ್ತ್ಯಾ ಜಘಾನ ತಂ ಚಾಪಿ ಕಾರ್ತಿಕೇಯಂ ಮಹಾಬಲಂ ।
ಸ ಪಪಾತ ಮಹೀಪೃಷ್ಠೇಽಮೋಘಾಂ ಕುರ್ವನ್ವಿಧಿಪ್ರದಾಂ ॥ ೩೫ ॥

ಕಾಲೀ ಗೃಹೀತ್ವಾ ತಂ ಕ್ರೋಡೇ ನಿನಾಯ ಶಿವಸನ್ನಿಧೌ ।
ಜ್ಞಾನೇನ ತಂ ಶಿವಶ್ಚಾಪಿ ಜೀವಯಾಮಾಸ ಲೀಲಯಾ ॥ ೩೬ ॥

ದದೌ ಬಲಮನಂತಂ ಚ ಸಮುತ್ತಸ್ಥೌ ಪ್ರತಾಪವಾನ್ ।
ಗಮನಾಯ ಮತಿಂ ಚಕ್ರೇ ಪುನಸ್ತತ್ರ ಶಿವಾತ್ಮಜಃ ॥ ೩೭ ॥

---

೩೩. ಬಳಿಕ ಸೂರ್ಯನಂತೆ ಹೊಳೆಯುತ್ತಿರುವ ಶಕ್ತ್ಯಾಯುಧವನ್ನು ತೆಗೆದುಕೊಂಡು, ಆ ದಾನವಚಕ್ರವರ್ತಿಯ ಎದೆಗೆ ಸರಿಯಾಗಿ ಗುರಿಯಿಟ್ಟು ಹೊಡೆದನು. ಜೋರಾದ ಆ ಏಟಿನಿಂದ ಶಂಖಚೂಡನು ಮೂರ್ಛಿತನಾದನು.

೩೪. ಮಹಾಬಲಾಢ್ಯನಾದ ಆ ಶಂಖಚೂಡನು ಒಂದು ಮೂಹೂರ್ತಕಾಲ ಆ ಕಷ್ಟವನ್ನು ಅನುಭವಿಸಿ, ಬಳಿಕ ಎಚ್ಚರಹೊಂದಿ ಮೇಲಕ್ಕೆದ್ದು ನಿಂತು ಒಂದು ಬಾರಿ ಸಿಂಹದಂತೆ ಗರ್ಜಿಸಿದನು.

೩೫. ಹಿಂದೆ ತನಗೆ ಬ್ರಹ್ಮನು ಇತ್ತಿದ್ದ ಅಮೋಘವಾದ ಶಕ್ತಿಯನ್ನು ತೆಗೆದುಕೊಂಡು, ಕುಮಾರನ ಮೇಲೆ ಬೀಸಿಬಿಟ್ಟನು. ಆಗ ಕುಮಾರನು ಬ್ರಹ್ಮನಿಗೆ ಗೌರವವಿತ್ತು, ಆ ಶಕ್ತಿಯನ್ನು ವ್ಯರ್ಥಮಾಡದೆ, ಬೇಕೆಂದು ನೆಲದಮೇಲೆ ಬಿದ್ದುಬಿಟ್ಟನು.

೩೬. ಆಗ ಅವನ ಬಳಿಯೇ ಇದ್ದ ಭದ್ರಕಾಳಿಯು ಆ ಕುಮಾರನನ್ನು ಎದೆಗವಚಿಕೊಂಡು ಶಿವನ ಬಳಿಗೆ ಎತ್ತಿಕೊಂಡುಹೋದಳು. ಆ ಶಿವನು ಲೀಲಾಮಾತ್ರದಿಂದಲೇ ಆ ಕುಮಾರನನ್ನು ಬದುಕಿಸಿಬಿಟ್ಟನು.

೩೭. ಹಾಗೆಯೇ ಅನಂತವಾದ ಬಲವನ್ನೂ ಅನುಗ್ರಹಿಸಿದನು. ಅನಂತರ ಪರಾಕ್ರಮಶಾಲಿಯಾದ ಆ ಶಿವಸುತನು ಮೇಲಕ್ಕೆದ್ದು ಕುಳಿತು ಮತ್ತೆ ಅವನ ಮೇಲೆ ಏರಿಹೋಗಲು ಮನಸ್ಸುಮಾಡಿದನು.

ಏತಸ್ಮಿನ್ನಂತರೇ ವೀರೋ ವೀರಭದ್ರೋ ಮಹಾಬಲಃ ।
ಶಂಖಚೂಡೇನ ಯುಯುಧೇ ಸಮರೇ ಬಲಶಾಲಿನಾ ॥ ೩೮ ॥

ವವರ್ಷ ಸಮರೇsಸ್ತ್ರಾಣಿ ಯಾನಿ ಯಾನಿ ಚ ದಾನವಃ ।
ಚಿಚ್ಛೇದ ಲೀಲಯಾ ವೀರಸ್ತಾನಿ ತಾನಿ ನಿಜೈಶ್ಶರೈಃ ॥ ೩೯ ॥

ದಿವ್ಯಾನ್ಯಸ್ತ್ರಾಣಿ ಶತಶೋ ಮುಮುಚೇ ದಾನವೇಶ್ವರಃ ।
ತಾನಿ ಚಿಚ್ಛೇದ ತಂ ಬಾಣೈರ್ವೀರಭದ್ರಃ ಪ್ರತಾಪವಾನ್ ॥ ೪೦ ॥

ಅಥಾತೀವ ಚುಕೋಪೋಚ್ಚೈಶ್ಶಂಖಚೂಡಃ ಪ್ರತಾಪವಾನ್ ।
ಶಕ್ತ್ಯಾ ಜಘಾನೋರಸಿ ತಂ ಸ ಚಕಂಪೇ ಪಪಾತ ಕೌ ॥ ೪೧ ॥

ಕ್ಷಣೇನ ಚೇತನಾಂ ಪ್ರಾಪ್ಯ ಸಮುತ್ತಸ್ಥೌ ಗಣೇಶ್ವರಃ ।
ಜಗ್ರಾಹ ಚ ಧನುರ್ಭೂಯೋ ವೀರಭದ್ರೋ ಗಣಾಗ್ರಣೀಃ ॥ ೪೨ ॥

---

೩೮. ಈ ನಡುವೆ ಮಹಾಬಲಾಢ್ಯನೂ ವೀರನೂ ಆದ ವೀರಭದ್ರನು ಬಲಿಷ್ಠನಾದ ಶಂಖಚೂಡನೊಡನೆ ಯುದ್ಧಕ್ಕೆ ಉಪಕ್ರಮಿಸಿದನು.

೩೯. ಆ ಯುದ್ಧದಲ್ಲಿ ಶಂಖಚೂಡನು ಯಾವ ಯಾವ ಅಸ್ತ್ರಗಳನ್ನು ಉಪಯೋಗಿಸಿದನೋ ಅವೆಲ್ಲವನ್ನೂ ವೀರಭದ್ರನು ತನ್ನ ಬಾಣಗಳಿಂದ ಕತ್ತರಿಸಿಬಿಟ್ಟನು.

೪೦. ಬಳಿಕ ಆ ದಾನವೇಂದ್ರನು ನೂರಾರುಗಟ್ಟಲೆ ಪ್ರಯೋಗಿಸಿದ ದಿವ್ಯಾಸ್ತ್ರಗಳೆಲ್ಲವನ್ನೂ ಆ ಪ್ರತಾಪಶಾಲಿದ ವೀರಭದ್ರನು ತನ್ನ ಬಾಣಗಳಿಂದ ಆದೊಂದಾಟವಂತೆ ಕತ್ತರಿಸಿಬಿಟ್ಟನು.

೪೧. ಇದನ್ನು ನೋಡಿ ಶಂಖಚೂಡನಿಗೆ ಬಹುವಾಗಿ ಕೋಪಹತ್ತಿತು. ಆಗ ಅವನು ಶಕ್ತಿಯನ್ನು ತೆಗೆದುಕೊಂಡು, ವೀರಭದ್ರನ ಎದೆಗೆ ಗುರಿಯಿಟ್ಟು ಹೊಡೆದನು. ಏಟುಬಿದ್ದೊಡನೆ ಅವನು ತತ್ತರಿಸುತ್ತಾ ನೆಲದಮೇಲೆ ಬಿದ್ದನು.

೪೨. ಕ್ಷಣಮಾತ್ರದಲ್ಲಿ ಆ ಗಣಾಧಿಪತಿಯಾದ ವೀರಭದ್ರನು ಮತ್ತೆ ಚೇತರಿಸಿಕೊಂಡು ಮೊದಲಿನಂತೆ ಬಿಲ್ಲುಹಿಡಿದು ಅವನೊಡನೆ ಯುದ್ಧಕ್ಕೆ ನಿಂತನು.

ಏತಸ್ಮಿನ್ನಂತರೇ ಕಾಲೀ ಜಗಾಮ ಸಮರಂ ಪುನಃ ।
ಭಕ್ಷಿತುಂ ದಾನವಾನ್ಸ್ವಾಂಶ್ಚ ರಕ್ಷಿತುಂ ಕಾರ್ತಿಕೇಚ್ಛಯಾ ॥ ೪೩ ॥

ವೀರಾಸ್ತಾಮನುಜಗ್ಮುಶ್ಚ ತೇ ಚ ನಂದೀಶ್ವರಾದಯಃ ।
ಸರ್ವೇ ದೇವಾಶ್ಚ ಗಂಧರ್ವಾ ಯಕ್ಷಾ ರಕ್ಷಾಂಸಿ ಪನ್ನಗಾಃ ॥ ೪೪ ॥

ವಾದ್ಯಭಾಂಡಾಶ್ಚ ಬಹುಶಶ್ಶತಶೋ ಮಧುವಾಹಕಾಃ ।
ಪುನಃ ಸಮುದ್ಯತಾಶ್ಚಾಸ್ಸ ವೀರಾ ಉಭಯತೋಽಖಿಲಾಃ ॥ ೪೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡವಧೇ ಸಸೈನ್ಯ-
ಶಂಖಚೂಡಯುದ್ಧವರ್ಣನಂ ನಾಮ
ಸಪ್ತತ್ರಿಂಶೋಽಧ್ಯಾಯಃ.

---

೪೩. ಇಷ್ಟರಲ್ಲಿ ಕುಮಾರನ ಅಭಿಮತದಂತೆ ಆ ದಾನವರನ್ನು ಭಕ್ಷಿಸಲೂ ತನ್ನ ಕಡೆಯವರನ್ನು ಸಂರಕ್ಷಿಸಲೂ ಭದ್ರಕಾಳಿಯು ಮತ್ತೆ ರಣರಂಗಕ್ಕೆ ಬಂದಳು.

೪೪. ಹೀಗೆ ಬರುತ್ತಿರುವ ಆ ಭದ್ರಕಾಳಿಯನ್ನು ವೀರರಾದ ನಂದಿಕೇಶ್ವರ ಮೊದಲಾದ ಗಣಗಳೂ, ಇಂದ್ರಾದಿದೇವತೆಗಳೂ ಗಂಧರ್ವರೂ, ಯಕ್ಷರೂ, ರಕ್ಷಸ್ಸುಗಳೂ, ಪನ್ನಗರೂ ಹಿಂಬಾಲಿಸಿದರು.

೪೫. ಅನೇಕ ವಿಧವಾದ ವಾದ್ಯಗಳು ನೂರಾರುಗಟ್ಟಲೆ ಮೊಳಗತೊಡಗಿದವು. ಮರಳಿ ಎರಡು ಕಡೆಯ ವೀರರೂ ಯುದ್ಧಕ್ಕೆ ಸಿದ್ಧರಾಗಿ ನಿಂತರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಸೇನಾಸಮೇತನಾದ ಶಂಖಚೂಡನೊಡನೆ ನಡೆದ ಯುದ್ಧದ ವರ್ಣನವೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಅಷ್ಟತ್ರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಸಾ ಚ ಗತ್ವಾ ಹಿ ಸಂಗ್ರಾಮಂ ಸಿಂಹನಾದಂ ಚಕಾರ ಹ ।
ದೇವ್ಯಾಶ್ಚ ತೇನ ನಾದೇನ ಮೂರ್ಛಾಮಾಪುಶ್ಚ ದಾನವಾಃ ॥ ೧ ॥

ಅಟ್ಟಾಟ್ಟಹಾಸಮಶಿವಂ ಚಕಾರ ಚ ಪುನಃ ಪುನಃ ।
ತದಾ ಪಪೌ ಚ ಮಾಧ್ವೀಕಂ ನನರ್ತ ರಣಮೂರ್ಧನಿ ॥ ೨ ॥

---

## ಮೂವತ್ತೆಂಟನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು ;—ಓ ವ್ಯಾಸ, ಆ ಭದ್ರಕಾಳಿಯು ರಣರಂಗವನ್ನು ಸೇರಿದಮೇಲೆ, ಸಿಂಹನಾದವನ್ನು ಮಾಡಿದಳು. ಆ ಸಿಂಹನಾದವನ್ನು ಕೇಳಿದೊಡನೆಯೇ ದಾನವರೆಲ್ಲರೂ ಮೂರ್ಛೆಯನ್ನು ಹೊಂದಿದರು.

೨. ಆಕೆಯು ಶತ್ರುಗಳಿಗೆ ಅನಿಷ್ಟವನ್ನು ಸೂಚಿಸುವಂತಹ ವಿಕಟಾಟ್ಟಹಾಸವನ್ನು ಮತ್ತೆ ಮತ್ತೆ ಮಾಡತೊಡಗಿದಳು. ಅನಂತರ ಮಾಧ್ವೀಕವೆಂಬ ಮಧ್ಯವನ್ನು ಪಾನಮಾಡಿ ರಣಾಗ್ರದಲ್ಲಿ ನರ್ತಿಸತೊಡಗಿದಳು.

ಉಗ್ರದಂಷ್ಟ್ರಾ ಚೋಗ್ರದಂಡಾ ಕೋಟವೀ ಚ ಪಪೌ ಮಧು ।
ಅನ್ಯಾಶ್ಚ ದೇವ್ಯಸ್ತತ್ರಾಜೌ ನನೃತುರ್ಮಧು ಸಂಪಪುಃ ॥ ೩ ॥

ಮಹಾನ್ಕೋಲಾಹಲೋ ಜಾತೋ ಗಣದೇವದಲೇ ತದಾ ।
ಜಹೃಷುರ್ಬಹುಗರ್ಜಂತಸ್ಸರ್ವೇ ಸುರಗಣಾದಯಃ ॥ ೪ ॥

ದೃಷ್ಟ್ವಾ ಕಾಲೀಂ ಶಂಖಚೂಡಶ್ಶೀಘ್ರಮಾಜೌ ಸಮಾಯಯೌ ।
ದಾನವಾಶ್ಚ ಭಯಂ ಪ್ರಾಪ್ತಾ ರಾಜಾ ತೇಭ್ಯೋಽಭಯಂ ದದೌ ॥ ೫ ॥

ಕಾಲೀ ಚಿಕ್ಷೇಪ ವಹ್ನಿಂ ಚ ಪ್ರಲಯಾಗ್ನಿಶಿಖೋಪಮಂ ।
ರಾಜಾ ಜಘಾನ ತಂ ಶೀಘ್ರಂ ವೈಷ್ಣವಾಂಕಿತಲೀಲಯಾ ॥ ೬ ॥

ನಾರಾಯಣಾಸ್ತ್ರಂ ಸಾ ದೇವೀ ಚಿಕ್ಷೇಪ ತದುಪರ್ಯರಂ ।
ವೃದ್ಧಿಂ ಜಗಾಮ ತಚ್ಛಸ್ತ್ರಂ ದೃಷ್ಟ್ವಾ ವಾಮಂ ಚ ದಾನವಂ ॥ ೭ ॥

---

೩. ಉಗ್ರದಂಷ್ಟ್ರೆ, ಉಗ್ರದಂಡೆ, ಕೋಟವೀ ಎಂಬ ಆ ಭದ್ರಕಾಳಿಯ ಯೋಗಿನಿಯರು ಉತ್ಸಾಹವರ್ಧಕವಾದ ಮಧುಪಾನಮಾಡಿದರು. ಆ ಯುದ್ಧದಲ್ಲಿ ಸೇರಿದ ಇತರ ಯೋಗಿನೀದೇವಿಯರೂ, ಸ್ವಚ್ಛಂದವಾಗಿ ಮಧುವನ್ನು ಪಾನಮಾಡಿ ನರ್ತಿಸ ತೊಡಗಿದರು.

೪. ಆಗ ಗಣಗಳ ಮತ್ತು ದೇವತೆಗಳ ಗುಂಪಿನಲ್ಲಿ ದೊಡ್ಡಗದ್ದಲವುಂಟಾಯಿತು. ಆ ದೇವತೆಗಳೂ ಗಣಗಳೂ, ಬಹಳವಾಗಿ ಸಿಂಹನಾದಗಳನ್ನು ಮಾಡುತ್ತಾ ಮಹಾಉತ್ಸಾಹದಿಂದಿದ್ದರು.

೫. ರಣಾಂಗಣಕ್ಕೆ ಭದ್ರಕಾಳಿಯು ಬಂದುದನ್ನು ಕಂಡು ಶಂಖಚೂಡನು ಬೇಗನೆ ತಾನೂ ಯುದ್ಧಭೂಮಿಗೆ ಬಂದನು. ಹೆದರಿಕೆಯಿಂದ ತತ್ತಳಿಸುತ್ತಿದ್ದ ದಾನವರಿಗೆಲ್ಲಾ ಆತನು ಅಭಯವನ್ನಿತ್ತನು.

೬. ಆಗ ಭದ್ರಕಾಳಿಯು ಪ್ರಲಯಕಾಲದ ಅಗ್ನಿಶಿಖೆಯಂತೆ ಘೋರವಾದ ಬೆಂಕಿಯನ್ನು ಸೃಷ್ಟಿಸಿ, ಅವನ ಮೇಲೆಸೆದಳು. ಒಡನೆಯೇ ವೈಷ್ಣವಾಸ್ತ್ರವನ್ನು ಪ್ರಯೋಗಿಸಿ ಲೀಲಾಮಾತ್ರದಿಂದ ಅದನ್ನು ಶಂಖಚೂಡನು ಅಡಗಿಸಿಬಿಟ್ಟನು.

೭. ಬಳಿಕ ಆ ದೇವಿಯು ತಟ್ಟನೆ ನಾರಾಯಣಾಸ್ತ್ರವನ್ನು ಅವನಮೇಲೆ ಪ್ರಯೋಗಿಸಿದಳು. ಯಾರನ್ನೂ ಲಕ್ಷ್ಯಮಾಡದ ಆ ದಾನವನನ್ನು ಕಂಡೊಡನೆಯೇ ಆ ಅಸ್ತ್ರವು ಬೆಳೆಯತೊಡಗಿತು.

ತಂ ದೃಷ್ಟ್ವಾ ಶಂಖಚೂಡಶ್ಚ ಪ್ರಲಯಾಗ್ನಿಶಿಖೋಪಮಂ ।
ಪಪಾತ ದಂಡವದ್ಭೂಮೌ ಪ್ರಣನಾಮ ಪುನಃ ಪುನಃ ॥ ೮ ॥

ನಿವೃತ್ತಿಂ ಪ್ರಾಪ ತಚ್ಛಸ್ತ್ರಂ ದೃಷ್ಟ್ವಾ ನಮ್ರಂ ಚ ದಾನವಂ ।
ಬ್ರಹ್ಮಾಸ್ತ್ರಮಥ ಸಾ ದೇವೀ ಚಿಕ್ಷೇಪ ಮಂತ್ರಪೂರ್ವಕಂ ॥ ೯ ॥

ತಂ ದೃಷ್ಟ್ವಾ ಪ್ರಜ್ವಲಂತಂ ಚ ಪ್ರಣಮ್ಯ ಭುವಿ ಸಂಸ್ಥಿತಃ ।
ಬ್ರಹ್ಮಾಸ್ತ್ರೇಣ ದಾನವೇಂದ್ರೋ ವಿನಿರ್ವಾರಂ ಚಕಾರ ಹ ॥ ೧೦ ॥

ಅಥ ಕ್ರುದ್ಧೋ ದಾನವೇಂದ್ರೋ ಧನುರಾಕೃಷ್ಯ ರಂಹಸಾ ।
ಚಿಕ್ಷೇಪ ದಿವ್ಯಾನ್ಯಸ್ತ್ರಾಣಿ ದೇವ್ಯೈ ವೈ ಮಂತ್ರಪೂರ್ವಕಂ ॥ ೧೧ ॥

ಆಹಾರಂ ಸಮರೇ ಚಕ್ರೇ ಪ್ರಸಾರ್ಯ ಮುಖಮಾಯತಂ ।
ಜಗರ್ಜ ಸಾಟ್ಟಹಾಸಂ ಚ ದಾನವಾ ಭಯಮಾಯಯುಃ ॥ ೧೨ ॥

---

೮. ಆಗ ಪ್ರಲಯಕಾಲದಲ್ಲಿನ ಅಗ್ನಿಶಿಖೆಯಂತೆ ಜಾಜ್ವಲ್ಯಮಾನವಾಗಿ ಉರಿಯುತ್ತಿರುವ ಆ ಅಸ್ತ್ರವನ್ನು ಕಂಡು ಶಂಖಚೂಡನು ನೆಲದಮೇಲೆ ದಂಡಾಕಾರವಾಗಿ ಬಿದ್ದು ಮತ್ತೆ ಮತ್ತೆ ನಮಸ್ಕರಿಸತೊಡಗಿದನು.

೯. ಆ ದಾನವನು ನಮ್ರನಾದುದನ್ನು ಕಂಡು ಆ ಅಸ್ತ್ರವು ಹಿಂದಿರುಗಿಬಿಟ್ಟಿತು. ಬಳಿಕ ಆ ಭದ್ರಕಾಳಿಯು ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಆ ದಾನವನ ಮೇಲೆ ಪ್ರಯೋಗಿಸಿದಳು.

೧೦. ಜ್ವಲಿಸುತ್ತಾ ಬರುತ್ತಿರುವ ಆ ಬ್ರಹ್ಮಾಸ್ತ್ರವನ್ನು ಕಂಡು ಆ ದಾನವನು ನೆಲದಮೇಲೆ ಉದ್ದವಾಗಿ ನಮಸ್ಕಾರಮಾಡಿ ನಿಂತನು. ಹೀಗೆ ಆ ದಾನವನು ಉಪಾಯದಿಂದ ಬ್ರಹ್ಮಾಸ್ತ್ರವನ್ನು ತಪ್ಪಿಸಿಕೊಂಡನು.

೧೧. ಅನಂತರ ಕುಪಿತನಾದ ಆ ಶಂಖಚೂಡನು ಬಿಲ್ಲನ್ನು ಹೆದೆಯೇರಿಸಿ ಆ ದೇವಿಯಮೇಲೆ ದಿವ್ಯಾಸ್ತ್ರಗಳೆಲ್ಲವನ್ನೂ ಅಭಿಮಂತ್ರಿಸಿ ವೇಗನೆ ಬಿಡತೊಡಗಿದನು.

೧೨. ಆಗ ಆ ಭದ್ರಕಾಳಿಯು ತನ್ನ ಬಾಯನ್ನು ದೊಡ್ಡದಾಗಿ ತೆರೆದು, ಆ ದಿವ್ಯಾಸ್ತ್ರಗಳೆಲ್ಲವನ್ನೂ ನುಂಗಿಬಿಟ್ಟು ಅಟ್ಟಹಾಸವನ್ನು ಮಾಡಿ ಜೋರಾಗಿ ಸಿಂಹನಾದ ಮಾಡಿದಳು. ಆಗ ದಾನವರೆಲ್ಲರಿಗೂ ಬಹು ಭಯವಾಯಿತು.

ಕಾಲ್ಯೈ ಚಿಕ್ಷೇಪ ಶಕ್ತಿಂ ಸ ಶತಯೋಜನಮಾಯತಾಂ ।
ದೇವೀ ದಿವ್ಯಾಸ್ತ್ರಜಾಲೇನ ಶತಖಂಡಂ ಚಕಾರ ಸಾ ॥ ೧೩ ॥

ಸ ಚ ವೈಷ್ಣವಮಸ್ತ್ರಂ ಚ ಚಿಕ್ಷೇಪ ಚಂಡಿಕೋಪರಿ ।
ಮಾಹೇಶ್ವರೇಣ ಕಾಲೀ ಚ ನಿನಿವಾರಂ ಚಕಾರ ಸಾ ॥ ೧೪ ॥

ಏವಂ ಚಿರತರಂ ಯುದ್ಧಮನ್ಯೋನ್ಯಂ ಸಂಬಭೂವ ಹ ।
ಪ್ರೇಕ್ಷಕಾ ಅಭವನ್ಸರ್ವೇ ದೇವಾಶ್ಚ ದಾನವಾ ಅಪಿ ॥ ೧೫ ॥

ಅಥ ಕ್ರುದ್ಧಾ ಮಹಾದೇವೀ ಕಾಲೀ ಕಾಲಸಮಾ ರಣೇ ।
ಜಗ್ರಾಹ ಮಂತ್ರಪೂತಂ ಚ ಶರಂ ಪಾಶುಪತಂ ರುಷಾ ॥ ೧೬ ॥

ಕ್ಷೇಪಾತ್ಪೂರ್ವಂ ತನ್ನಿಷೇದ್ಧುಂ ವಾಗ್ಬಭೂವಾಶರೀರಿಣೀ ।
ನ ಕ್ಷಿಪಾಸ್ತ್ರಮಿಮಂ ದೇವಿ ಶಂಖಚೂಡಸ್ಯ ವೈ ರುಷಾ ॥ ೧೭ ॥

---

೧೩. ಬಳಿಕ ದಾನವರಾಜನು ನೂರು ಯೋಜನ ಉದ್ದವಾಗಿದ್ದ ಶಕ್ತಿಯನ್ನು ತೆಗೆದುಕೊಂಡು ಕಾಳಿಯಮೇಲೆ ಬಿಟ್ಟನು. ಆಗ ಆ ದೇವಿಯು ದಿವ್ಯಾಸ್ತ್ರಗಳಿಂದ ಆ ಶಕ್ತಿಯನ್ನು ನೂರು ತುಂಡಾಗಿ ಖಂಡಿಸಿಬಿಟ್ಟಳು.

೧೪. ಬಳಿಕ ಆ ದಾನವನು ಆ ಚಂಡಿಯಮೇಲೆ ವೈಷ್ಣವಾಸ್ತ್ರವನ್ನು ಬಿಟ್ಟನು. ಕಾಳಿಯು ಅದನ್ನು ಮಾಹೇಶ್ವರಾಸ್ತ್ರದಿಂದ ಅಡಗಿಸಿಬಿಟ್ಟಳು.

೧೫. ಈರೀಯಾಗಿ ಅವರಿಬ್ಬರಿಗೂ ಬಹುಕಾಲ ಯುದ್ಧವು ಜರುಗಿತು. ಆಗ ಎಲ್ಲ ದೇವತೆಗಳೂ ದಾನವರೂ ಸುಮ್ಮನೆ ಕುಳಿತು ನೋಡುತ್ತಿದ್ದರು.

೧೬. ಬಳಿಕ ಕಾಲಾಂತಕನಿಗೆ ಸಮಾನಳಾದ ಆ ಕಾಳಿಯು ಮಹಾರೋಷವನ್ನು ತಾಳಿ, ಪಾಶುಪತಾಸ್ತ್ರವನ್ನು ತೆಗೆದುಕೊಂಡು ಅಭಿಮಂತ್ರಿಸತೊಡಗಿದಳು.

೧೭. ಆ ಅಸ್ತ್ರವನ್ನು ಬಿಡುವಷ್ಟರಲ್ಲಿಯೇ ಅದನ್ನು ತಡೆಯಲು ಓ ದೇವಿ, ಕೋಪದಿಂದ ಈ ಅಸ್ತ್ರವನ್ನು ಶಂಖಚೂಡನಮೇಲೆ ಪ್ರಯೋಗಿಸದಿರು ಎಂದು ಅಶರೀರವಾಣಿಯಾಯಿತು.

ಮೃತ್ಯುಃ ಪಾಶುಪತಾನ್ನಾಸ್ತ್ಯಮೋಘಾದಪಿ ಚ ಚಂಡಿಕೇ ।
ಶಂಖಚೂಡಸ್ಯ ವೀರಸ್ಯೋಪಾಯಮನ್ಯಂ ವಿಚಾರಯ ॥ ೧೮ ॥

ಇತ್ಯಾಕರ್ಣ್ಯ ಭದ್ರಕಾಲೀ ನ ಚಿಕ್ಷೇಪ ತದಸ್ತ್ರಕಂ ।
ಶತಲಕ್ಷಂ ದಾನವಾನಾಂ ಜಘಾಸ ಲೀಲಯಾ ಕ್ಷುಧಾ ॥ ೧೯ ॥

ಅತ್ತುಂ ಜಗಾಮ ವೇಗೇನ ಶಂಖಚೂಡಂ ಭಯಂಕರೀ ।
ದಿವ್ಯಾಸ್ತ್ರೇಣ ಚ ರೌದ್ರೇಣ ವಾರಯಾಮಾಸ ದಾನವಃ ॥ ೨೦ ॥

ಅಥ ಕ್ರುದ್ಧೋ ದಾನವೇಂದ್ರಃ ಖಡ್ಗಂ ಚಿಕ್ಷೇಪ ಸತ್ವರಂ ।
ಗ್ರೀಷ್ಮಸೂರ್ಯೋಪಮಂ ತೀಕ್ಷ್ಣಧಾರಮತ್ಯಂತಭೀಕರಂ ॥ ೨೧ ॥

ಸಾ ಕಾಲೀ ತಂ ಸಮಾಲೋಕ್ಯಾಯಾಂತಂ ಪ್ರಜ್ವಲಿತಂ ರುಷಾ ।
ಪ್ರಸಾರ್ಯ ಮುಖಮಾಹಾರಂ ಚಕ್ರೇ ತಸ್ಯ ಚ ಪಶ್ಯತಃ ॥ ೨೨ ॥

---

೧೮. ಎಲೌ ಚಂಡಿಕೆಯೇ, ಅಮೋಘವಾದ ಈ ಪಾಶುಪತಾಸ್ತ್ರದಿಂದಲೂ ಈ ಶಂಖಚೂಡನಿಗೆ ಮರಣವಿಲ್ಲ. ಆದುದರಿಂದ ಬೇರೆ ಉಪಾಯವನ್ನು ಹುಡುಕು ಎಂದು ಆ ಅಶರೀರವಾಣಿಯು ಹೇಳಿತು.

೧೯. ಇದನ್ನು ಕೇಳಿ ಭದ್ರಕಾಳಿಯು ಆ ಪಾಶುಪತಾಸ್ತ್ರವನ್ನು ಪ್ರಯೋಗಿಸದೆ ಅಷ್ಟಕ್ಕೇ ನಿಲ್ಲಿಸಿಬಿಟ್ಟಳು. ಬಳಿಕ ತನಗೆ ಹಸಿವು ತೋರಲು, ಲೀಲಾಮಾತ್ರದಿಂದ ಒಂದು ಕೋಟಿ ದಾನವರನ್ನು ಹಿಡಿದು ಒಟ್ಟಿಗೆ ಕಬಳಿಸಿಬಿಟ್ಟಳು.

೨೦. ಬಳಿಕ ಆ ಭಯಂಕರವಾದ ರೂಪವುಳ್ಳ ಆ ಕಾಳಿಯು ಶಂಖಚೂಡನನ್ನು ನುಂಗಲು ಬೇಗನೆ ಮುನ್ನುಗ್ಗಿದಳು. ಆ ದಾನವವರನ್ನು ದಿವ್ಯವಾದ ರೌದ್ರಾಸ್ತ್ರವನ್ನು ಬಿಟ್ಟು ಅವಳನ್ನು ಅಲ್ಲಿಯೇ ತಡೆದನು.

೨೧. ಬಳಿಕ ಆ ದಾನವೇಂದ್ರನು ರೋಷವನ್ನು ತಾಳಿ, ನೋಡಿದರೆ ಭಯವನ್ನುಹುಟ್ಟಿಸುವಂತಹ ಕೂರಾದ ಅಲಗುಳ್ಳ, ಬೇಸಿಗೆಯ ಸೂರ್ಯನಂತೆ ತೀಕ್ಷ್ಣವಾದ ಕತ್ತಿಯನ್ನು ತೆಗೆದು ಬೀಸಿ ಹೊಡೆದನು.

೨೨. ಉರಿಯುತ್ತ ತನ್ನ ಕಡೆಗೆ ಬರುತ್ತಿರುವ ಆ ಕತ್ತಿಯನ್ನು ಕಂಡು ಆ ಕಾಳಿಯು ಕೋಪದಿಂದ ಬಾಯನ್ನು ತೆರೆದು ಆ ದಾನವನ ಕಣ್ಣೆದುರಿಗೇ ಅದನ್ನು ನುಂಗಿಬಿಟ್ಟಳು.

ದಿವ್ಯಾನ್ಯಸ್ತ್ರಾಣಿ ಚಾನ್ಯಾನಿ ಚಿಚ್ಛೇದ ದಾನವೇಶ್ವರಃ ।
ಪ್ರಾಪ್ತಾನಿ ಪೂರ್ವತಶ್ಚಕ್ರೇ ಶತಖಂಡಾನಿ ತಾನಿ ಚ ॥ ೨೩ ॥

ಪುನರತ್ತುಂ ಮಹಾದೇವೀ ವೇಗತಸ್ತಂ ಜಗಾಮ ಹ ।
ಸರ್ವಸಿದ್ಧೇಶ್ವರಃ ಶ್ರೀಮಾನಂತರ್ಧಾನಂ ಚಕಾರ ಸಃ ॥ ೨೪ ॥

ವೇಗೇನ ಮುಷ್ಟಿನಾ ಕಾಲೀ ತಮದೃಷ್ಟ್ವಾ ಚ ದಾನವಂ ।
ಬಭಂಜ ಚ ರಥಂ ತಸ್ಯ ಜಘಾನ ಕಿಲ ಸಾರಥಿಂ ॥ ೨೫ ॥

ಅಥಾಗತ್ಯ ದ್ರುತಂ ಮಾಯೀ ಚಕ್ರಂ ಚಿಕ್ಷೇಪ ವೇಗತಃ ।
ಭದ್ರಕಾಲ್ಯೈ ಶಂಖಚೂಡಃ ಪ್ರಲಯಾಗ್ನಿಶಿಖೋಪಮಂ ॥ ೨೬ ॥

ಸಾ ದೇವೀ ತಂ ತದಾ ಚಕ್ರಂ ವಾಮಹಸ್ತೇನ ಲೀಲಯಾ ।
ಜಗ್ರಾಹ ಸ್ವಮುಖೇನೈವಾಹಾರಂ ಚಕ್ರೇ ರುಷಾ ದ್ರುತಂ ॥ ೨೭ ॥

---

೨೩. ಆ ದಾನವರಾಜನೂ ಸಹ ತನ್ನ ಕಡೆಗೆ ಬರುತ್ತಿದ್ದ ಇನ್ನೂ ಇತರ ಅನೇಕ ದಿವ್ಯಾಸ್ತ್ರಗಳನ್ನು ತನ್ನ ಬಳಿ ಬರುವ ಮೊದಲೇ ನೂರಾರು ತುಂಡುಗಳಾಗಿ ಕತ್ತರಿಸುತ್ತಿದ್ದನು.

೨೪. ಅನಂತರ ಆ ಭದ್ರಕಾಳಿಯು ಇನ್ನೊಮ್ಮೆ ಆ ದಾನವನನ್ನು ನುಂಗಿ ಬಿಡುತ್ತೇನೆಂದು ಆ ಕಡೆಗೆ ಧಾವಿಸಿ ಬಂದಳು. ಆದರೇನು? ನಾನಾಸಿದ್ಧಿಗಳನ್ನು ಪಡೆದಿದ್ದ ಆ ಕುಶಲನು ತಟ್ಟನೆ ಕಣ್ಮರೆಯಾಗಿಬಿಟ್ಟನು.

೨೫. ವೇಗದಿಂದ ಓಡಿಬಂದ ಆ ಕಾಳಿಯು. ಆ ದಾನವನನ್ನು ಕಾಣದೆ, ಕುಪಿತಳಾಗಿ ತನ್ನ ಕೈಯನ್ನು ಮುಷ್ಟಿಯಾಗಿ ಹಿಡಿದು, ಅವನ ತೇರನ್ನು ಅಪ್ಪಳಿಸಿ, ಚೂರುಚೂರುಮಾಡಿದಳು. ಅವನ ಸಾರಥಿಯನ್ನೂ ಕೊಂದುಬಿಟ್ಟಳು.

೨೬. ಮಾಯಾಕುಶಲನಾದ ಆ ಶಂಖಚೂಡನು ತಟ್ಟನೆ ಬಂದು, ಪ್ರಳಯ ಕಾಲದ ವಹ್ನಿಶಿಖೆಯಂತೆ ಉರಿಯುಗುಳುತ್ತಿರುವ ಚಕ್ರವೊಂದನ್ನು ಹಿಡಿದು ಭದ್ರಕಾಳಿಗೆ ಗುರಿಯಿಟ್ಟು ಜೋರಾಗಿ ತಿರುಗಿಸಿಬಿಟ್ಟನು.

೨೭. ಹಾಗೆ ಉರವಣಿಸಿ ಬರುತ್ತಿದ್ದ ಚಕ್ರವನ್ನು ಆ ದೇವಿಯು ಲೀಲಾಮಾತ್ರದಿಂದಲೇ ಎಡಗೈಯ್ಯಲ್ಲಿ ಹಿಡಿದು ನಿಲ್ಲಿಸಿಬಿಟ್ಟಳು. ಬಳಿಕ ಮಹಾಕೋಪವನ್ನು ತಾಳಿ ತಟಕ್ಕನೆ ಅದನ್ನು ನುಂಗಿಬಿಟ್ಟಳು.

ಮುಷ್ಟ್ಯಾ ಜಘಾನ ತಂ ದೇವೀ ಮಹಾಕೋಪೇನ ವೇಗತಃ ।
ಬಭ್ರಾಮ ದಾನವೇಂದ್ರೋಽಪಿ ಕ್ಷಣಂ ಮೂರ್ಛಾಮವಾಪ ಸಃ ॥ ೨೮ ॥

ಕ್ಷಣೇನ ಚೇತನಾಂ ಪ್ರಾಪ್ಯ ಸ ಚೋತ್ತಸ್ಥೌ ಪ್ರತಾಪವಾನ್ ।
ನ ಚಕ್ರೇ ಬಾಹುಯುದ್ಧಂ ಚ ಮಾತೃಬುದ್ಧ್ಯಾ ತಯಾ ಸಹ ॥ ೨೯ ॥

ಗೃಹೀತ್ವಾ ದಾನವಂ ದೇವೀ ಭ್ರಾಮಯಿತ್ವಾ ಪುನಃ ಪುನಃ ।
ಊರ್ಧ್ವಂ ಚ ಪ್ರಾಪಯಾಮಾಸ ಮಹಾಕೋಪೇನ ವೇಗತಃ ॥ ೩೦ ॥

ಉತ್ಪಪಾತ ಚ ವೇಗೇನ ಶಂಖಚೂಡಃ ಪ್ರತಾಪವಾನ್ ।
ನಿಪತ್ಯ ಚ ಸಮುತ್ತಸ್ಥೌ ಪ್ರಣಮ್ಯ ಭದ್ರಕಾಲಿಕಾಂ ॥ ೩೧ ॥

ರತ್ನೇಂದ್ರಸಾರನಿರ್ಮಾಣವಿಮಾನಂ ಸುಮನೋಹರಂ ।
ಆರುರೋಹ ಸ ಹೃಷ್ಟಾತ್ಮಾ ನ ಭ್ರಾಂತೋಽಪಿ ಮಹಾರಣೇ ॥ ೩೨ ॥

---

೨೮. ಅನಂತರ ಬಹು ರೋಷದಿಂದ ಆ ಭದ್ರಕಾಳಿಯು ಆ ದಾನವೇಂದ್ರನನ್ನು ಬಹು ಜೋರಾಗಿ ಮುಷ್ಟಿಯಿಂದ ಹೊಡೆದಳು. ಅವನೂ ಆ ಏಟು ತಡೆಯಲಾರದೆ ತೂರಾಡುತ್ತಾ ಕ್ಷಣಕಾಲ ಮೂರ್ಛೆಹೊಂದಿ ಕೆಳಗೆ ಬಿದ್ದನು.

೨೯. ಮಹಾಪ್ರತಾಪಶೀಲನಾದ ಆ ದಾನವೇಂದ್ರನು ಕ್ಷಣಮಾತ್ರದಲ್ಲಿ ಎಚ್ಚೆತ್ತು ಮೇಲಕ್ಕೆ ಎದ್ದುನಿಂತನು. ಅವನು ಅವಳೊಡನೆ ಬಾಹುಯುದ್ಧವನ್ನು ಮಾಡಬಹುದಾಗಿತ್ತು. ಆದರೆ ಅವಳನ್ನು ತಾಯಿಯಂತೆ ಭಾವಿಸಿ, ಹಾಗೆ ಮಾಡಲಿಲ್ಲ.

೩೦. ಆಗ ದೇವಿಯು ಮಹಾಕೋಪವನ್ನು ತಾಳಿ ಅವನನ್ನು ಹಿಡಿದು ಮತ್ತೆ ಮತ್ತೆ ಗರಗರನೆ ತಿರುಗಿಸಿ ವೇಗದಿಂದ ಮೇಲಕ್ಕೆ ಎಸೆದಳು.

೩೧. ಮಹಾಪ್ರತಾಪಿಯಾದ ಶಂಖಚೂಡನು ಬಹುವೇಗದಿಂದ ಮೇಲೆ ಹೋಗಿ ಕೆಳಗೆ ಬಿದ್ದನು. ಬಳಿಕ ಭದ್ರಕಾಲಿಗೆ ನಮಸ್ಕಾರಮಾಡಿ ಎದ್ದುನಿಂತನು.

೩೨. ಹೀಗೆ ಭ್ರಮಕ್ಕೆ ಈಡಾಗದ ಆ ಶಂಖಚೂಡನು ಆ ಮಹಾಯುದ್ಧದಲ್ಲಿ ಮೆರೆಯುತ್ತಾ ಬಹು ರಮ್ಯವೂ ವಜ್ರಸಾರವೂ ಆದ ತನ್ನ ವಿಮಾನವನ್ನು ಸಂತೋಷದಿಂದ ಹತ್ತಿದನು.

ದಾನವಾನಾಂ ಹಿ ಕ್ಷತಜಂ ಸಾ ಪಪೌ ಕಾಲಿಕಾ ಕ್ಷುಧಾ ।
ಏತಸ್ಮಿನ್ನಂತರೇ ತತ್ರ ವಾಗ್ಬಭೂವಾಶರೀರಿಣೀ ॥ ೩೩ ॥

ಲಕ್ಷಂ ಚ ದಾನವೇಂದ್ರಾಣಾಮವಶಿಷ್ಟಂ ರಣೇಽಧುನಾ ।
ಉದ್ಧತಂ ಗುಂಜತಾಂ ಸಾರ್ಧಂ ತತಸ್ತ್ವಂ ಭುಂಕ್ಷ್ವ ಚೇಶ್ವರಿ ॥ ೩೪ ॥

ಸಂಗ್ರಾಮೇ ದಾನವೇಂದ್ರಂ ಚ ಹಂತುಂ ನ ಕುರು ಮಾನಸಂ ।
ಅವಧ್ಯೋಽಯಂ ಶಂಖಚೂಡಸ್ತವ ದೇವೀತಿ ನಿಶ್ಚಯಂ ॥ ೩೫ ॥

ತಚ್ಛ್ರುತ್ವಾ ವಚನಂ ದೇವೀ ನಿಃಸೃತಂ ವ್ಯೋಮಮಂಡಲಾತ್ ।
ದಾನವಾನಾಂ ಬಹೂನಾಂ ಚ ಮಾಂಸಂ ಚ ರುಧಿರಂ ತಥಾ ॥ ೩೬ ॥

ಭುಕ್ತ್ವಾ ಪೀತ್ವಾ ಭದ್ರಕಾಲೀ ಶಂಕರಾಂತಿಕಮಾಯಯೌ ।
ಉವಾಚ ರಣವೃತ್ತಾಂತಂ ಪೌರ್ವಾಪರ್ಯೇಣ ಸಕ್ರಮಂ ॥ ೩೭ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡವಧೇ ಕಾಲೀಯುದ್ಧ
ವರ್ಣನಂ ನಾಮಾಷ್ಟತ್ರಿಂಶೋಽಧ್ಯಾಯಃ.

---

೩೩. ಆ ಭದ್ರಕಾಲಿಯು ಹಸಿವಿನಿಂದ ಅಲ್ಲಿರುವ ದಾನವರ ನೆತ್ತರವನ್ನು ಹೀರಿ ಕುಡಿದಳು. ಇಷ್ಟರಲ್ಲಿ ಆ ರಣಭೂಮಿಯಲ್ಲಿ ಅಶರೀರವಾಣಿಯು ಕೇಳಿಸಿತು.

೩೪. ಎಲೈ ಪರಮೇಶ್ವರಿಯೇ, ಈಗ ಯುದ್ಧರಂಗದಲ್ಲಿ ಒಂದುಲಕ್ಷ ದಾನವರಿದ್ದಾರೆ. ಮಹಾ ಔದ್ಧತ್ಯದಿಂದ ಅಬ್ಬರಿಸುತ್ತಾ ಇರುವ ಆ ದಾನವರನ್ನು ಒಟ್ಟಿಗೆ ತಿಂದುಬಿಡು.

೩೫. ಈ ಯುದ್ಧದಲ್ಲಿ ಈ ಶಂಖಚೂಡನನ್ನು ನೀನು ಕೊಲ್ಲಲೆಣಿಸಬೇಡ. ಓ ದೇವಿ, ಈತನು ನಿನ್ನಿಂದ ಖಂಡಿತವಾಗಿಯೂ ಸಾಯಲಾರನು.

೩೬-೩೭. ಹೀಗೆ ಆಕಾಶದಿಂದ ಹೊರಬಿದ್ದ ಅಶರೀರವಾಣಿಯನ್ನು ಕೇಳಿ ಆ ಭದ್ರಕಾಲಿಯು ಆ ಅನೇಕಮಂದಿ ದಾನವರ ಮಾಂಸವನ್ನು ತಿಂದು ಅವರ ನೆತ್ತರವನ್ನು ಕುಡಿದು, ಅನಂತರ ಶಿವನ ಸನ್ನಿಧಿಗೆ ಬಂದು ಶಿವನಿಗೆ ಆ ರಣರಂಗದಲ್ಲಿ ನಡೆವ ಸಂಗತಿಯೆಲ್ಲವನ್ನೂ ಕ್ರಮವಾಗಿ ತಿಳಿಸಿದಳು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಕಾಲೀಯುದ್ಧವರ್ಣನವೆಂಬ ಮೂವತ್ತೆಂಟನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕೋನಚತ್ವಾರಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಶ್ರುತ್ವಾ ಕಾಲ್ಯುಕ್ತಮೀಶಾನೋ ಕಿಂ ಚಕಾರ ಕಿಮುಕ್ತವಾನ್ ।
ತತ್ತ್ವಂ ವದ ಮಹಾಪ್ರಾಜ್ಞ ಪರಂ ಕೌತೂಹಲಂ ಮಮ ॥ ೧ ॥

॥ ಸನತ್ಕುಮಾರ ಉವಾಚ ॥

ಕಾಲ್ಯುಕ್ತಂ ವಚನಂ ಶ್ರುತ್ವಾ ಶಂಕರಃ ಪರಮೇಶ್ವರಃ ।
ಮಹಾಲೀಲಾಕರಶ್ಶಂಭುರ್ಜಹಾಸಾಶ್ವಾಸಯಞ್ಚ ತಾಂ ॥ ೨ ॥

---

### ಮೂವತ್ತೊಂಭತ್ತನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯು ಸನತ್ಕುಮಾರನನ್ನು ಕುರಿತು, ಆ ಭದ್ರಕಾಲಿಯು ಹೇಳಿದ ಮಾತನ್ನು ಕೇಳಿ ಶಿವನು ಏನುಹೇಳಿದನು ? ಎಲೈ ಮಹಾಜ್ಞಾನಿಯೇ, ಅದನ್ನು ನೀನೆನಗೆ ತಿಳಿಸು. ಅದನ್ನು ಕೇಳಲು ನನಗೆ ಬಹಳ ಕುತೂಹಲವಾಗಿರುವುದು ಎಂದು ಪ್ರಶ್ನಿಸಿದನು.

೨. ಆಗ ಸನತ್ಕುಮಾರನು ವ್ಯಾಸನಿಗೆ ವಿವರಿಸತೊಡಗಿದನು. ಓ ವ್ಯಾಸ, ಭದ್ರಕಾಲಿಯು ಹೇಳಿದ ಮಾತನ್ನು ಕೇಳಿ ಪರಮೇಶ್ವರನಾದ ಶಿವನು ನಸುನಕ್ಕು ಆಕೆಯನ್ನು ಸಮಾಧಾನಪಡಿಸಿದನು.

ವ್ಯೋಮವಾಣೀಂ ಸಮಾಕರ್ಣ್ಯ ತತ್ತ್ವಜ್ಞಾನವಿಶಾರದಃ ।
ಯಯೌ ಸ್ವಯಂ ಚ ಸಮರೇ ಸ್ವಗಣೈಸ್ಸಹ ಶಂಕರಃ ॥ ೩ ॥

ಮಹಾವೃಷಭಮಾರೂಢೋ ವೀರಭದ್ರಾದಿಸಂಯುತಃ ।
ಭೈರವೈಃ ಕ್ಷೇತ್ರಪಾಲೈಶ್ಚ ಸ್ವಸಮಾನೈಸ್ಸಮನ್ವಿತಃ ॥ ೪ ॥

ರಣಂ ಪ್ರಾಪ್ತೋ ಮಹೇಶಶ್ಚ ವೀರರೂಪಂ ವಿಧಾಯ ಚ ।
ವಿರರಾಜಾಧಿಕಂ ತತ್ರ ರುದ್ರೋ ಮೂರ್ತ ಇವಾಂತಕಃ ॥ ೫ ॥

ಶಂಖಚೂಡಶ್ಶಿವಂ ದೃಷ್ಟ್ವಾ ವಿಮಾನಾದವರುಹ್ಯ ಸಃ ।
ನನಾಮ ಪರಯಾ ಭಕ್ತ್ಯಾ ಶಿರಸಾ ದಂಡವದ್ಭುವಿ ॥ ೬ ॥

ತಂ ಪ್ರಣಮ್ಯ ತು ಯೋಗೇನ ವಿಮಾನಮಾರುರೋಹ ಸಃ ।
ತೂರ್ಣಂ ಚಕಾರ ಸನ್ನಾಹಂ ಧನುರ್ಜಗ್ರಾಹ ಸೇಷುಕಂ ॥ ೭ ॥

---

೩. ಮಹಾತತ್ತ್ವಜ್ಞಾನಿಯಾದ ಆ ಶಂಕರನು ಆಕಾಶವಾಣಿಯನ್ನು ಕೇಳಿ ತನ್ನ ಗಣಗಳನ್ನೆಲ್ಲಾ ಕರೆದುಕೊಂಡು ತಾನೇ ಯುದ್ಧಕ್ಕೆ ಹೊರಟನು.

೪. ಆ ಶಿವನು ತನ್ನ ವಾಹನವಾದ ಎತ್ತರವಾದ ವೃಷಭವನ್ನೇರಿ ಹೊರಟನು. ಆತನಿಗೆ ಸಮಾನವಾದ ಬಲಪರಾಕ್ರಮಗಳುಳ್ಳ ವೀರಭದ್ರನೂ, ಅಷ್ಟಭೈರವರೂ, ಕ್ಷೇತ್ರಪಾಲಕರೂ ಆ ಶಿವನನ್ನು ಹಿಂಬಾಲಿಸಿದರು.

೫. ಆ ಮಹೇಶನು ವೀರರೂಪವನ್ನು ಧರಿಸಿ ಯುದ್ಧರಂಗದಲ್ಲಿ ಪ್ರತ್ಯಕ್ಷನಾದ ಯಮನಂತೆ ಕಂಗೊಳಿಸಿದನು.

೬. ಶಂಖಚೂಡನು ಶಿವನನ್ನು ಕಂಡೊಡನೆಯೇ ವಿಮಾನದಿಂದ ಕೆಳಕ್ಕೆ ಇಳಿದು ಮಹಾಭಕ್ತಿಯಿಂದ ನೆಲದಮೇಲೆ ದಂಡದಂತೆ ಪ್ರಣಾಮಮಾಡಿದನು.

೭. ಆವನನ್ನು ನಮಸ್ಕರಿಸಿದಮೇಲೆ ತನ್ನ ವಿಮಾನವನ್ನು ಮತ್ತೆ ಹತ್ತಿ ಬೇಗ ಸಿದ್ಧನಾಗಿ ಬಿಲ್ಲು ಬಾಣಗಳನ್ನು ಕೈಗೆ ತೆಗೆದುಕೊಂಡನು.

ಶಿವದಾನವಯೋರ್ಯುದ್ಧಂ ಶತಮಬ್ದಂ ಬಭೂವ ಹ ।
ಬಾಣವರ್ಷಮಿವೋಗ್ರಂ ತದ್ವರ್ಷತೋರ್ಮೇಘಯೋಸ್ತದಾ ॥ ೮ ॥

ಶಂಖಚೂಡೋ ಮಹಾವೀರಶ್ಶರಾಂಶ್ಚಿಕ್ಷೇಪ ದಾರುಣಾನ್ ।
ಚಿಚ್ಛೇದ ಶಂಕರಸ್ತಾನ್ವೈ ಲೀಲಯಾ ಸ್ವಶರೋತ್ಕರೈಃ ॥ ೯ ॥

ತದಂಗೇಷು ಚ ಶಸ್ತ್ರೌಘೈಸ್ತಾಡಯಾಮಾಸ ಕೋಪತಃ ।
ಮಹಾರುದ್ರೋ ವಿರೂಪಾಕ್ಷೋ ದುಷ್ಟದಂಡಸ್ಸತಾಂ ಗತಿಃ ॥ ೧೦ ॥

ದಾನವೋ ನಿಶಿತಂ ಖಡ್ಗಂ ಚರ್ಮ ಚಾದಾಯ ವೇಗವಾನ್ ।
ವೃಷಂ ಜಘಾನ ಶಿರಸಿ ಶಿವಸ್ಯ ವರವಾಹನಂ ॥ ೧೧ ॥

ತಾಡಿತೇ ವಾಹನೇ ರುದ್ರಸ್ತಂ ಕ್ಷುರಪ್ರೇಣ ಲೀಲಯಾ ।
ಖಡ್ಗ ಚಿಚ್ಛೇದ ತಸ್ಯಾಶು ಚರ್ಮ ಚಾಪಿ ಮಹೋಜ್ಜ್ವಲಂ ॥ ೧೨ ॥

---

೮. ಆ ಶಿವನೂ ಶಂಖಚೂಡನೂ ಪರಸ್ಪರವಾಗಿ ತೀವ್ರವಾದ ಬಾಣವರ್ಷವನ್ನು ಕರೆಯುತ್ತಾ ಯುದ್ಧಮಾಡಿದರು. ಹೀಗೆಯೇ ನೂರುವರ್ಷಗಳು ಕಳೆದು ಹೋದುವು.

೯. ಮಹಾವೀರನಾದ ಶಂಖಚೂಡನು ಕ್ರೂರವಾದ ಬಾಣಗಳನ್ನು ತೆಗೆದು ಶಂಕರನಿಗೆ ಗುರಿಯಿಟ್ಟುಬಿಟ್ಟನು. ಶಂಕರನು ತನ್ನ ಬಾಣಪರಂಪರೆಗಳಿಂದ ಅವನ್ನು ಲೀಲಾಮಾತ್ರದಿಂದ ಕತ್ತರಿಸಿ ಕೆಡವಿದನು.

೧೦. ಸತ್ಪುರುಷರಿಗೆ ಏಕಮಾತ್ರಶರಣ್ಯನೂ ದುಷ್ಟರಿಗೆ ದಂಡವಿಧಾಯಕನೂ ಆದ ಆ ವಿರೂಪಾಕ್ಷನು ಕುಪಿತನಾಗಿ ಆ ದಾನವನ ದೇಹವನ್ನು ಗುರಿಯಿಟ್ಟು ಬಗೆಬಗೆಯಾದ ಶಸ್ತ್ರಗಳಿಂದ ಪ್ರಹರಿಸಿದನು.

೧೧. ಅನಂತರ ಆ ದಾನವನು ಒಂದು ಕೈಯಿಂದ ಬಹು ಹರಿತವಾದ ಕತ್ತಿಯನ್ನೂ ಮತ್ತೊಂದು ಕೈಯಿಂದ ಗುರಾಣಿಯನ್ನೂ ಹಿಡಿದು ವೇಗದಿಂದ ಮುನ್ನುಗ್ಗಿ ಶಿವನ ವಾಹನಶ್ರೇಷ್ಠವಾದ ವೃಷಭದ ಶಿರಸ್ಸಿನಮೇಲೆ ಬೀಸಿಹೊಡೆದನು.

೧೨. ತನ್ನ ವಾಹನವಾದ ವೃಷಭಕ್ಕೆ ಏಟುಬಿದ್ದುದನ್ನು ಕಂಡು ಆ ರುದ್ರನು ಲೀಲೆಯಿಂದ ಕತ್ತಿಯೊಂದನ್ನು ತೆಗೆದುಕೊಂಡು ಅವನ ಉಜ್ವಲವಾದ ಕತ್ತಿಯನ್ನೂ ಗುರಾಣಿಯನ್ನೂ ಕತ್ತರಿಸಿಬಿಟ್ಟನು.

ಛಿನ್ನೇऽಸೌ ಚರ್ಮಣಿ ತದಾ ಶಕ್ತಿಂ ಚಿಕ್ಷೇಪ ಸೋऽಸುರಃ ।
ದ್ವಿಧಾ ಚಕ್ರೇ ಸ್ವಬಾಣೇನ ಹರಸ್ತಾಂ ಸಂಮುಖಾಗತಾಂ ॥ ೧೩ ॥

ಕೋಪಾಧ್ಮಾತಃ ಶಂಖಚೂಡಶ್ಚಕ್ರಂ ಚಿಕ್ಷೇಪ ದಾನವಃ ।
ಮುಷ್ಟಿಪಾತೇನ ತಚ್ಚಾಪ್ಯಚೂರ್ಣಯತ್ಸಹಸಾ ಹರಃ ॥ ೧೪ ॥

ಗದಾಮಾವಿಧ್ಯ ತರಸಾ ಸಂಚಿಕ್ಷೇಪ ಹರಂ ಪ್ರತಿ ।
ಶಂಭುನಾ ಸಾಪಿ ಸಹಸಾ ಭಿನ್ನಾ ಭಸ್ಮತ್ವಮಾಗತಾ ॥ ೧೫ ॥

ತತಃ ಪರಶುಮಾದಾಯ ಹಸ್ತೇನ ದಾನವೇಶ್ವರಃ ।
ಧಾವತಿ ಸ್ಮ ಹರಂ ವೇಗಾಚ್ಛಂಖಚೂಡಃ ಕ್ರುಧಾಕುಲಃ ॥ ೧೬ ॥

ಸಮಾಹೃತ್ಯ ಸ್ವಬಾಣೌಘೈರಪಾತಯತ ಶಂಕರಃ ।
ದ್ರುತಂ ಪರಶುಹಸ್ತಂ ತಂ ಭೂತಲೇ ಲೀಲಯಾಸುರಂ ॥ ೧೭ ॥

---

೧೩. ಆಗ ಆ ಅಸುರನು ತನ್ನ ಗುರಾಣಿಯೂ ಕತ್ತಿಯೂ ಕತ್ತರಿಸಿಹೋದುದನ್ನು ಕಂಡು ಶಕ್ತಿಯೆಂಬ ಆಯುಧವನ್ನು ಶಿವನಮೇಲೆ ಪ್ರಯೋಗಿಸಿದನು. ಶಿವನೂ ಸಹ ತನ್ನ ಕಡೆಗೆ ಬರುತ್ತಿರುವ ಆ ಶಕ್ತಿಯನ್ನು ಬಾಣವೊಂದರಿಂದ ಎರಡು ತುಂಡಾಗಿ ಕೆಡಹಿದನು.

೧೪. ಅನಂತರ ಶಂಖಚೂಡನು ಕೋಪದಿಂದ ಕನಲಿ ಚಕ್ರವನ್ನು ಬಿಡಲು, ಶಿವನು ತಟ್ಟನೆ ತನ್ನ ಮುಷ್ಟಿಯಿಂದ ಅಪ್ಪಳಿಸಿ ಆ ಚಕ್ರವನ್ನು ಪುಡಿಪುಡಿ ಮಾಡಿದನು

೧೫. ಬಳಿಕ ಆ ದಾನವನು ಗದೆಯನ್ನು ತೆಗೆದುಕೊಂಡು ಶಿವನಮೇಲೆ ಬೀಸಿ ಹೊಡೆಯಲು ಆ ಶಂಭುವು ಅದನ್ನೂ ಛೇದಿಸಿಬಿಟ್ಟನು. ಆಗ ಆ ಗದೆಯು ಸುಟ್ಟು ಬೂದಿಯಾಗಿ ಹೋಯಿತು.

೧೬. ಆಗ ಶಂಖಚೂಡನು ಜಹುವಾಗಿ ಕನಲಿ ಪರಶುವನ್ನು ಹಿಡಿದು ವೇಗದಿಂದ ಶಿವನಕಡೆಗೆ ನುಗ್ಗಿದನು.

೧೭. ಆ ಶಂಕರನು ಸರ್ರನೆ ಬಾಣಗಳನ್ನು ಹಿಡಿಹಿಡಿಯಾಗಿ ಬಿಲ್ಲಿನಲ್ಲಿ ಹೂಡಿ ಹೊಡೆದು, ಲೀಲಾಮಾತ್ರದಿಂದಲೇ ಪರಶುವಿನೊಡನೆ ಆ ಅಸುರನನ್ನು ನೆಲಕ್ಕೆ ಕೆಡವಿಬಿಟ್ಟನು.

ತತಃ ಕ್ಷಣೇನ ಸಂಪ್ರಾಪ್ಯ ಸಂಜ್ಞಾಮಾರುಹ್ಯ ಸದ್ರಥಂ ।
ಧೃತಿದಿವ್ಯಾಯುಧಶರೋ ಬಭೌ ವ್ಯಾಪ್ಯಾಖಿಲಂ ನಭಃ ॥ ೧೮ ॥

ಆಯಾಂತಂ ತಂ ನಿರೀಕ್ಷ್ಯೈವ ಡಮರುಧ್ವನಿಮಾದರಾತ್ ।
ಚಕಾರ ಜ್ಯಾರವಂ ಚಾಪಿ ಧನುಷೋ ದುಸ್ಸಹಂ ಹರಃ ॥ ೧೯ ॥

ಪೂರಯಾಮಾಸ ಕಕುಭಃ ಶೃಂಗನಾದೇನ ಚ ಪ್ರಭುಃ ।
ಸ್ವಯಂ ಜಗರ್ಜ ಗಿರಿಶಸ್ತ್ರಾಸಂಯನ್ನಸುರಾಂಸ್ತದಾ ॥ ೨೦ ॥

ತ್ಯಾಜಿತೇಭಮಹಾಗರ್ವೈರ್ಮಹಾನಾದೈರ್ವೃಷೇಶ್ವರಃ ।
ಪೂರಯಾಮಾಸ ಸಹಸಾ ಖಂ ಗಾಂ ವಸುದಿಶಸ್ತಥಾ ॥ ೨೧ ॥

ಮಹಾಕಾಲಸ್ಸಮುತ್ಪತ್ಯ ತಾಡಯುದ್ಗಾಂ ತಥಾ ನಭಃ ।
ಕರಾಭ್ಯಾಂ ತನ್ನಿನಾದೇನ ಕ್ಷಿಪ್ತಾ ಆಸನ್ಸ್ವರಾ ರವಾಃ ॥ ೨೨ ॥

---

೧೮ ಬಳಿಕ ಆ ಅಸುರನು ಕ್ಷಣಮಾತ್ರದಲ್ಲಿಯೇ ಎಚ್ಚೆತ್ತು ಸೊಗಸಾದ ರಥವೊಂದನ್ನು ಏರಿ ದಿವ್ಯನಾದ ಆಯುಧಗಳನ್ನು ಧರಿಸಿ ಆಕಾಶವೆಲ್ಲವನ್ನೂ ತನ್ನ ತೇಜಸ್ಸಿನಿಂದ ತುಂಬುತ್ತಾ ಬೆಳಗಿದನು.

೧೯. ಆ ಶಂಖಚೂಡನು ಹೀಗೆ ತನ್ನಮೇಲೆ ನುಗ್ಗಿಬರುತ್ತಿರುವುದನ್ನು ಕಂಡು ಶಿವನು ಸಂತೋಷದಿಂದ ಡಮರುಗವನ್ನು ಬಾರಿಸಿದನು. ಕೇಳಿದವರ ಕಿವಿ ಕಿವುಡಾಗುವಂತೆ ಬಿಲ್ಲಿನ ಹೆದೆಯನ್ನು ಝೇಂಕರಿಸಿದನು.

೨೦. ಆ ಪ್ರಭುವು ತನ್ನ ಕೊಂಬನ್ನು ತೆಗೆದುಕೊಂಡು ಊದಿ ಅದರ ನಾದದಿಂದ ದೆಸೆದೆಸೆಗಳನ್ನೂ ತುಂಬಿದನಲ್ಲದೆ ಎಲ್ಲ ಅಸುರರೂ ಬೆಚ್ಚರ ಬೀಳುವಂತೆ ತಾನೂ ಗಟ್ಟಿಯಾಗಿ ಸಿಂಹನಾದಮಾಡಿದನು.

೨೧. ಆತನ ವಾಹನವಾದ ವೃಷಭವು ತಾನೂ ಸಹ ಮದ್ದಾನೆಯ ಮಹಾನಾದವನ್ನೂ ಮೀರಿಸಿರುವ ತನ್ನ ಗುಟುರೆಗಳಿಂದ ಆಕಾಶವನ್ನೂ ಭೂಮಿಯನ್ನೂ, ಹೆಚ್ಚೇಕೆ ಎಂಟು ದಿಕ್ಕುಗಳನ್ನೂ ತುಂಬಿಬಿಟ್ಟಿತು.

೨೨. ಆಗ ಮಹಾಕಾಲನು ತನ್ನೆರಡು ಕೈಗಳಿಂದಲೂ ಒಮ್ಮೆ ನೆಲವನ್ನೂ ಅಂತರಿಕ್ಷವನ್ನೂ ಅಪ್ಪಳಿಸಿದನು. ಆ ಸಪ್ಪಳದಿಂದ ಹಿಂದಿನ ಶಬ್ದಗಳೆಲ್ಲವೂ ಮುಚ್ಚಿಹೋದುವು.

ಅಟ್ಟಾಟ್ಟಹಾಸಮುಶಿವಂ ಕ್ಷೇತ್ರಪಾಲಶ್ಚಕಾರ ಹ ।
ಭೈರವೋಽಪಿ ಮಹಾನಾದಂ ಸ ಚಕಾರ ಮಹಾಹವೇ ॥ ೨೩ ॥

ಮಹಾಕೋಲಾಹಲೋ ಜಾತೋ ರಣಮಧ್ಯೇ ಭಯಂಕರಃ ।
ವೀರಶಬ್ದೋ ಬಭೂವಾಥ ಗಣಮಧ್ಯೇ ಸಮಂತತಃ ॥ ೨೪ ॥

ಸಂತ್ರೇಸುರ್ದಾನವಾಸ್ಸರ್ವೇ ತೈಶ್ಶಬ್ದೈರ್ಭಯದೈಃ ಖರೈಃ ।
ಚುಕೋಪಾತೀವ ತಚ್ಛ್ರುತ್ವಾ ದಾನವೇಂದ್ರೋ ಮಹಾಬಲಃ ॥ ೨೫ ॥

ತಿಷ್ಠ ತಿಷ್ಠೇತಿ ದುಷ್ಟಾತ್ಮನ್ವ್ಯಾಜಹಾರ ಯದಾ ಹರಃ ।
ದೇವೈರ್ಗಣೈಶ್ಚ ತೈಶ್ಶೀಘ್ರಮುಕ್ತಂ ಜಯ ಜಯೇತಿ ಚ ॥ ೨೬ ॥

ಅಥಾಗತ್ಯ ಸ ದಂಭಸ್ಯ ತನಯಸ್ಸುಪ್ರತಾಪವಾನ್ ।
ಶಕ್ತಿಂ ಚಿಕ್ಷೇಪ ರುದ್ರಾಯ ಜ್ವಾಲಾಮಾಲಾತಿಭೀಷಣಾಂ ॥ ೨೭ ॥

---

೨೩. ಆ ಮಹಾಸಮರದಲ್ಲಿ ಕ್ಷೇತ್ರಪಾಲನು ಘೋರವಾಗಿ ಅಟ್ಟಹಾಸವನ್ನು ಮಾಡಿದನು. ಭೈರವನೂ ಗಟ್ಟಿಯಾಗಿ ಅಬ್ಬರಿಸಿದನು.

೨೪. ಈರೀತಿಯಾಗಿ ರಣಮಧ್ಯದಲ್ಲಿ ಮಹಾಭಯಂಕರವಾದ ದೊಡ್ಡ ಕೋಲಾಹಲವುಂಟಾಯಿತು. ಆ ರಣಾಂಗಣದಲ್ಲಿ ಸೇರಿದ್ದ ಗಣಗಳ ಗುಂಪಿನಲ್ಲಿ ಎತ್ತೆತ್ತಲೂ ವೀರನಾದಗಳು ಮೊದಲಾದುವು.

೨೫. ಈರೀತಿಯಾಗಿ ಶಿವನಕಡೆಯವರ ಭಯಂಕರವಾದ ಆ ರೂಕ್ಷಧ್ವನಿಗಳನ್ನು ಕೇಳಿ ದಾನವರೆಲ್ಲರೂ ಭಯದಿಂದ ತತ್ತಳಿಸಿಹೋದರು. ಅದನ್ನು ಕೇಳಿ ಮಹಾಬಲಾಢ್ಯನಾದ ಆ ದಾನವೇಂದ್ರನು ಬಹುವಾಗಿ ರೋಷವನ್ನು ತಾಳಿದನು.

೨೬. ಯಾವಾಗ ಶಿವನು ಆ ದಾನವನನ್ನು ಕುರಿತು, ಎಲೆ ದುರುಳಾ, ನಿಲ್ಲು ನಿಲ್ಲು ಎಂದನೋ ಆಗ ತಟ್ಟನೇ ದೇವತೆಗಳೂ ಗಣಗಳೂ ಶಿವನನ್ನು ಜಯಜಯ (ಜಯಿಸು) ಎಂದು ಹುರಿದುಂಬಿಸಿದರು.

೨೭. ಬಳಿಕ ಮಹಾಪ್ರತಾಪಶಾಲಿಯೂ ದಂಭನ ಮಗನೂ ಆದ ಆ ದಾನವೇಶ್ವರನು ಉರಿಗಳನ್ನು ಕಕ್ಕುತ್ತಾ ಬಹುಭಯಂಕರವಾದ ಶಕ್ತಿಯೊಂದನ್ನು ಕೈಗೆ ತೆಗೆದುಕೊಂಡು ಶಿವನಮೇಲೆ ಎಸೆದುಬಿಟ್ಟನು.

ವಹ್ನಿಕೂಟಪ್ರಭಾಯಾಂತೀ ಕ್ಷೇತ್ರಪಾಲೇನ ಸತ್ವರಂ ।
ನಿರಸ್ತಾಗತ್ಯ ಸಾಜೌ ವೈ ಮುಖೋತ್ಪನ್ನಮಹೋಲ್ಕಯಾ ॥ ೨೮ ॥

ಪುನಃ ಪ್ರವವೃತೇ ಯುದ್ಧಂ ಶಿವದಾನವಯೋರ್ಮಹತ್ ।
ಚಕಂಪೇ ಧರಣೀ ದ್ಯೌಶ್ಚ ಸನಗಾಬ್ಧಿಜಲಾಶಯಾ ॥ ೨೯ ॥

ದಾಂಭಿಮುಕ್ತಾಂಛರಾಞ್ ಶಂಭುಶ್ಶರಾಂಸ್ತತ್ಪ್ರಹಿತಾನ್ಸ ಚ ।
ಸಹಸ್ರಶಶ್ಶರೈರುಗ್ರೈಶ್ಚಿಚ್ಛೇದ ಶತಶಸ್ತದಾ ॥ ೩೦ ॥

ತತಶ್ಶಂಭುಂ ತ್ರಿಶೂಲೇನ ಸಂಕ್ರುದ್ಧಸ್ತಂ ಜಘಾನ ಹ ।
ತತ್ಪ್ರಹಾರಮಸಹ್ಯಾಶು ಕೌ ಪಪಾತ ಸ ಮೂರ್ಛಿತಃ ॥ ೩೧ ॥

ತತಃ ಕ್ಷಣೇನ ಸಂಪ್ರಾಪ ಸಂಜ್ಞಾಂ ಸ ಚ ತದಾಸುರಃ ।
ಆಜಘಾನ ಶರೈ ರುದ್ರಂ ತಾನ್ಸರ್ವಾನಾತ್ತಕಾರ್ಮುಕಃ ॥ ೩೨ ॥

---

೨೮. ಆಗ ಕ್ಷೇತ್ರಪಾಲನು ತಟ್ಟನೆ ತನ್ನ ಮುಖದಿಂದ ದೊಡ್ಡದಾದ ಕೊಳ್ಳಿಯೊಂದನ್ನು ಕಕ್ಕಲು ಆ ಮಹೋಲ್ಕೆಯು ಬೆಂಕಿಯ ತುಂಡಿನಂತೆ ಬೆಳಗುತ್ತಾ ಬರುತ್ತಿರುವ ಆ ಶಕ್ತಿಯನ್ನು ಅಡಗಿಸಿಬಿಟ್ಟಿತು.

೨೯. ಮತ್ತೆ ಶಿವನಿಗೂ ಶಂಖಚೂಡನಿಗೂ ಭಾರಿಯಾಗಿ ಯುದ್ಧವು ಜರುಗಿತು. ಆಗ ಭೂಮಿಯು ನಡುಗಿತು. ಅಂತರಿಕ್ಷವು ಕಂಪಿಸಿತು. ಬೆಟ್ಟಗಳು ಚದುರಿದುವು. ಸಾಗರಗಳು ಅಲ್ಲಾಡಿಹೋದುವು. ಜಲಾಶಯಗಳು ಹೊರಳಿಹೋದುವು.

೩೦. ಆಗ ಶಂಖಚೂಡನು ಬಿಟ್ಟ ಬಾಣಗಳನ್ನು ಶಿವನೂ, ಶಿವನು ಬಿಟ್ಟ ಶರಗಳನ್ನು ಶಂಖಚೂಡನೂ, ಪರಸ್ಪರವಾಗಿ ನೂರಾರು ಸಾವಿರಾರು ಬಾಣಗಳಿಂದ ಕತ್ತರಿಸಿ ಕೆಡುವುತ್ತಿದ್ದರು.

೩೧. ಬಳಿಕ ಶಿವನು ಕುಪಿತನಾಗಿ ತ್ರಿಶೂಲದಿಂದ ಅವನನ್ನು ತಿವಿದನು. ಆ ಏಟನ್ನು ಸಹಿಸಲಾರದೆ ಆ ದಾನವನು ಮೂರ್ಛೆಹೊಂದಿ ನೆಲಕ್ಕೆ ಬಿದ್ದುಬಿಟ್ಟನು.

೩೨. ಬಳಿಕ ಕ್ಷಣಮಾತ್ರದಲ್ಲಿ ಆ ಅಸುರನು ಎಚ್ಚೆತ್ತು ಬಿಲ್ಲನ್ನು ಹಿಡಿದು ಬಾಣಗಳನ್ನು ಹೂಡಿ ಶಿವನನ್ನೂ ಆತನಕಡೆಯವರೆಲ್ಲರನ್ನೂ ಪೀಡಿಸತೊಡಗಿದನು.

ಬಾಹೂನಾಮಯುತಂ ಕೃತ್ವಾ ಛಾದಯಾಮಾಸ ಶಂಕರಂ ।
ಚಕ್ರಾಯುತೇನ ಸಹಸಾ ಶಂಖಚೂಡಃ ಪ್ರತಾಪವಾನ್ ॥ ೩೩ ॥

ತತೋ ದುರ್ಗಾಪತಿಃ ಕ್ರುದ್ಧೋ ರುದ್ರೋ ದುರ್ಗಾತಿನಾಶನಃ ।
ತಾನಿ ಚಕ್ರಾಣಿ ಚಿಚ್ಛೇದ ಸ್ವಶರೈರುತ್ತಮೈರ್ದ್ರುತಂ ॥ ೩೪ ॥

ತತೋ ವೇಗೇನ ಸಹಸಾ ಗದಾಮಾದಾಯ ದಾನವಃ ।
ಅಭ್ಯಧಾವತ ವೈ ಹಂತುಂ ಬಹುಸೇನಾವೃತೋ ಹರಂ ॥ ೩೫ ॥

ಗದಾಂ ಚಿಚ್ಛೇದ ತಸ್ಯಾಶ್ವಾಪತತಃ ಸೋಽಸಿನಾ ಹರಃ ।
ಶಿತಧಾರೇಣ ಸಂಕ್ರುದ್ಧೋ ದುಷ್ಟಗರ್ವಾಪಹಾರಕಃ ॥ ೩೬ ॥

ಛಿನ್ನಾಯಾಂ ಸ್ವಗದಾಯಾಂ ಚ ಚುಕೋಪಾತೀವ ದಾನವಃ ।
ಶೂಲಂ ಜಗ್ರಾಹ ತೇಜಸ್ವೀ ಪರೇಷಾಂ ದುಸ್ಸಹಂ ಜ್ವಲತ್ ॥ ೩೭ ॥

---

೩೩. ಆ ಪ್ರತಾಪಶೀಲನಾದ ಶಂಖಚೂಡನು ಹತ್ತುಸಹಸ್ರ ಕೈಗಳನ್ನು ತಳೆದು ಅವೆಲ್ಲವುಗಳಲ್ಲೂ ಹತ್ತುಸಹಸ್ರ ಚಕ್ರಗಳನ್ನು ಹಿಡಿದು ಶಿವನಮೇಲೆ ಪ್ರಯೋಗಿಸಿ ಅವುಗಳಿಂದ ಆತನನ್ನು ಮುಚ್ಚಿಬಿಟ್ಟನು.

೩೪. ದುಸ್ಸಾಧ್ಯವಾದ ಪೀಡೆಗಳನ್ನು ಪರಿಹರಿಸುವ ದುರ್ಗಾಪತಿಯಾದ ಆ ರುದ್ರನು ಕೋಪತಾಳಿ ಕೂಡಲೇ ತನ್ನ ಉತ್ತಮವಾದ ಬಾಣಗಳಿಂದ ಆ ಚಕ್ರಗಳನ್ನು ತಟ್ಟನೆ ಕತ್ತರಿಸಿಬಿಟ್ಟನು.

೩೫. ಬಳಿಕ ಆ ದಾನವನು ಬಹುವಾದ ಸೇನೆಗಳೊಡನೆ ಜೊತೆಯಾಗಿ ಗದೆಯೊಂದನ್ನು ತೆಗೆದುಕೊಂಡು ತಟ್ಟನೆ ಶಿವನನ್ನು ಕೊಲ್ಲಲೆಣಿಸಿ ಬೇಗನೆ ಮುಂದೆ ನುಗ್ಗಿ ಬಂದನು.

೩೬. ದುಷ್ಟರ ಗರ್ವವನ್ನು ಮೆಟ್ಟಿ ಮುರಿದಿಕ್ಕುವ ಆ ಹರನು ಬಹು ರೋಷವನ್ನಾಂತು ಬೇಗಬೇಗ ಓಡಿಬರುತ್ತಿರುವ ಆ ಶಂಖಚೂಡನು ಹಿಡಿದಿದ್ದ ಗದೆಯನ್ನು ಕೂರಾದ ಅಲುಗುಳ್ಳ ಕತ್ತಿಯೊಂದರಿಂದ ಕತ್ತರಿಸಿಬಿಟ್ಟನು.

೩೭. ಆ ಪರಾಕ್ರಮಿಯಾದ ದಾನವನು ತನ್ನ ಗದೆಯು ಕತ್ತರಿಸಿಹೋದುದನ್ನು ಕಂಡು ಕಡುಕೋಪದಿಂದ ಇತರರು ಸಹಿಸಲಸಾಧ್ಯವಾದ ಉರಿಯುತ್ತಿರುವ ಶೂಲವೊಂದನ್ನು ಕೈಗೆ ತೆಗೆದುಕೊಂಡನು.

ಸುದರ್ಶನಂ ಶೂಲಹಸ್ತಮಾಯಾಂತಂ ದಾನವೇಶ್ವರಂ ।
ಸ್ವತ್ರಿಶೂಲೇನ ವಿವ್ಯಾಥ ಹೃದಿ ತಂ ವೇಗತೋ ಹರಃ ॥ ೩೮ ॥

ತ್ರಿಶೂಲಭಿನ್ನಹೃದಯಾನ್ನಿಷ್ಕ್ರಾಂತಃ ಪುರುಷಃ ಪರಃ ।
ತಿಷ್ಠ ತಿಷ್ಠೇತಿ ಚೋವಾಚ ಶಂಖಚೂಡಸ್ಯ ವೀರ್ಯವಾನ್ ॥ ೩೯ ॥

ನಿಷ್ಕ್ರಾಮತೋ ಹಿ ತಸ್ಯಾಶು ಪ್ರಹಸ್ಯ ಸ್ವನವತ್ತತಃ ।
ಚಿಚ್ಛೇದ ಚ ಶಿರೋ ಭೀಮಮಸಿನಾ ಸೋಽಪತದ್ಭುವಿ ॥ ೪೦ ॥

ತತಃ ಕಾಲೀ ಚಖಾದೋಗ್ರಂ ದಂಷ್ಟ್ರಾಕ್ಷುಣ್ಣಶಿರೋಧರಾನ್ ।
ಅಸುರಾಂಸ್ತಾನ್ ಬಹೂನ್ಕ್ರೋಧಾತ್ಪ್ರಸಾರ್ಯ ಸ್ವಮುಖಂ ತದಾ ॥ ೪೧ ॥

ಕ್ಷೇತ್ರಪಾಲಶ್ಚ ಖಾದಾನ್ಯಾನ್ಬಹೂನ್ದೈತ್ಯಾನ್ಕ್ರುಧಾಕುಲಃ ।
ಕೇಚಿನ್ನೇಶುರ್ಭೈರವಾಸ್ತ್ರಚ್ಛಿನ್ನಾ ಭಿನ್ನಾಸ್ತಥಾಪರೇ ॥ ೪೨ ॥

---

೩೮. ಶೂಲವನ್ನು ಹಿಡಿದು ಮತ್ತೆ ನೋಡಬೇಕೆನಿಸುವಂತೆ ಬರುತ್ತಿರುವ ಆ ದಾನವೇಂದ್ರನನ್ನು ಕಂಡು ಹರನು ಬೇಗನೆ ತನ್ನ ತ್ರಿಶೂಲದಿಂದ ಅವನ ಎದೆಯಲ್ಲಿ ಬಲವಾಗಿ ಚುಚ್ಚಿದನು.

೩೯. ಆಗ ಆ ತ್ರಿಶೂಲದ ತಿವಿತದಿಂದ ಶಂಖಚೂಡನ ಎದೆಯು ಸೀಳಿಹೋಯಿತು. ಆದರೇನು ? ಆ ಎದೆಯಿಂದ ಮಹಾಪರಾಕ್ರಮಶಾಲಿಯಾದ ಬೇರೊಬ್ಬ ಪುರುಷನು ನಿಲ್ಲು ನಿಲ್ಲು ಎನ್ನುತ್ತಾ ಹೊರಗೆ ಬಂದನು.

೪೦. ಬಳಿಕ ಶಿವನು ಒಮ್ಮೆ ಗಟ್ಟಿಯಾಗಿ ಅಟ್ಟಹಾಸಮಾಡಿ ಅವನು ಹೊರ ಬೀಳುತ್ತಿದ್ದಂತೆಯೇ ಆತನ ಭಯಂಕರವಾದ ಶಿರಸ್ಸನ್ನು ಕತ್ತಿಯಿಂದ ಕತ್ತರಿಸಿಬಿಟ್ಟನು. ಆ ಪುರುಷನು ನೆಲದಲ್ಲಿ ಒರಗಿದನು.

೪೧. ಬಳಿಕ ಭದ್ರಕಾಲಿಯು ತನ್ನ ಮುಖವನ್ನು ತೆರೆದು ಆ ಅಸುರರನ್ನು ಬಹುಕೋಪದಿಂದ ಭಕ್ಷಿಸಿಬಿಟ್ಟಳು. ಅವಳ ಕೋರೆದಾಡೆಗಳಿಗೆ ಸಿಲುಕಿ ಅವರ ತಲೆಗಳು ನುಚ್ಚುನೂರಾದುವು.

೪೨. ಅದರಂತೆಯೇ ಕ್ಷೇತ್ರಪಾಲನೂ ಮಹಾಕೋಪದಿಂದ ಅನೇಕಮಂದಿ ಅಸುರರನ್ನು ಅಗಿದು ನುಂಗಿಬಿಟ್ಟನು. ಉಳಿದ ಕೆಲವುಮಂದಿ ದೈತ್ಯರು ಭೈರವನ ಬಾಣಗಳೇಟಿಗೆ ಸಿಕ್ಕಿ ತುಂಡುತುಂಡಾಗಿ ಹೋದರು. ಮತ್ತೆ ಕೆಲವರು ಸೀಳುಸೀಳಾಗಿ ಹೋದರು.

ವೀರಭದ್ರೋಽಪರಾನ್ವೀರಾನ್ಸಹಸ್ರಾನ್ಕ್ರೋಧಾದನಾಶಯತ್ ।
ನಂದೀಶ್ವರೋ ಜಘಾನಾನ್ಯಾನ್ಸಹಸ್ರಾನಮರಮರ್ದಕಾನ್ ॥ ೪೩ ॥

ಏವಂ ಬಹುಗಣಾ ವೀರಾಸ್ತದಾ ಸಂನಹ್ಯ ಕೋಪತಃ ।
ವ್ಯನಾಶಯನ್ಸಹಸ್ರಾನ್ದೈತ್ಯಾನಸುರಾನ್ದೇವಮರ್ದಕಾನ್ ॥ ೪೪ ॥

ಇತ್ಥಂ ಬಹುತರಂ ತತ್ರ ಯಸ್ಯ ಸೈನ್ಯಂ ನನಾಶ ತತ್ ।
ವಿದ್ರುತಾಶ್ಚಾಪರೇ ವೀರಾ ಬಹವೋ ಭಯಕಾತರಾಃ ॥ ೪೫ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡಪಥವರ್ಣನಂ ನಾಮ
ಏಕೋನಚತ್ವಾರಿಂಶೋಽಧ್ಯಾಯಃ.

---

೪೩. ಅದರಂತೆಯೇ ಕುಪಿತನಾದ ವೀರಭದ್ರನು, ದೇವತೆಗಳನ್ನು ನುಚ್ಚು ನೂರು ಮಾಡಿದ ಅನೇಕಮಂದಿ ದಾನವರನ್ನು ನಾಶಮಾಡಿದನು. ಹಾಗೆಯೇ ನಂದೀಶ್ವರನೂ ಸಹ ಉಳಿದ ಅನೇಕಮಂದಿ ದಾನವರನ್ನು ಸಂಹರಿಸಿದನು.

೪೪. ಈರೀತಿಯಾಗಿ ಬಹುಮಂದಿ ಶಿವನಕಡೆಯ ವೀರರು ಕ್ರೋಧಾಂಧರಾಗಿ ದೇವಕಂಟಕರಾದ ಬಹುಮಂದಿ ದೈತ್ಯರನ್ನು ಕೊಂದರು.

೪೫. ಹೀಗೆ ಯಾವಯಾವನ ಬಳಿ ಸೈನ್ಯವಿದ್ದಿತೋ ಅವನ ಸೈನ್ಯವೆಲ್ಲವೂ ನಾಶವಾಗುತ್ತಿರುವುದನ್ನು ಕಂಡು ಉಳಿದ ಇತರ ವೀರರು ಭಯದಿಂದ ತತ್ತರಿಸುತ್ತಾ ಆ ರಣಾಗ್ರದಿಂದ ಕಾಲ್ದೆಗೆದು ಸಿಕ್ಕಿದಕಡೆ ಚೆದುರಿ ಓಡಿಹೋದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಶಂಖಚೂಡಸೈನ್ಯವಧವರ್ಣನವೆಂಬ ಮೂವತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಚತ್ವಾರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಸ್ವಬಲಂ ನಿಹತಂ ದೃಷ್ಟ್ವಾ ಮುಖ್ಯಂ ಬಹುತರಂ ತತಃ ।
ತಥಾ ವೀರಾನ್ಪ್ರಾಣಸಮಾಞ್ಚುಕೋಪಾತೀವ ದಾನವಃ ॥ ೧ ॥

ಉವಾಚ ವಚನಂ ಶಂಭುಂ ತಿಷ್ಠಾಮ್ಯಾಜೌ ಸ್ಥಿರೋ ಭವ ।
ಕಿಮೇತೈರ್ನಿಹತೈರ್ಮೇಽದ್ಯ ಸಂಮುಖೇ ಸಮರಂ ಕುರು ॥ ೨ ॥

---

## ನಲವತ್ತನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :—ಓ ವ್ಯಾಸ, ಬಳಿಕ ಮುಖ್ಯವಾದ ತನ್ನ ಸೇನೆಯೆಲ್ಲವೂ ನಾಶವಾದುದನ್ನೂ, ತನ್ನ ಪ್ರಾಣಕ್ಕೆ ಸಮಾನರಾದ ಅನೇಕ ಮಂದಿ ವೀರರು ಮಡಿದುಹೋದುದನ್ನು ಕಂಡು ಆ ಶಂಖಚೂಡನು ಬಹುವಾಗಿ ಕೋಪವನ್ನು ತಾಳಿದನು.

೨. ಅನಂತರ ಶಿವನನ್ನು ಕುರಿತು ಹೀಗೆ ನುಡಿದನು. ಓ ಶಂಕರ, ನಾನು ಯುದ್ಧಕ್ಕೆ ಸಿದ್ಧನಾಗಿರುವೆನು. ನೀನು ಅಲುಗಾಡದೆ ನಿಲ್ಲು. ಈ ವೀರರು ಮಡಿದರೆ ಆದುದೇನು? ಈಗ ನನ್ನೆದುರು ನಿಂತು ಸೆಣಸು ಎಂದನು.

ಇತ್ಯುಕ್ತ್ವಾ ದಾನವೇಂದ್ರೋಽಸೌ ಸನ್ನದ್ಧಸ್ಸಮರೇ ಮುನೇ ।
ಅಗಚ್ಛನ್ನಿಶ್ಚಯಂ ಕೃತ್ವಾಭಿಮುಖಂ ಶಂಕರಸ್ಯ ಚ ॥ ೩ ॥

ದಿವ್ಯಾನ್ಯಸ್ತ್ರಾಣಿ ಚಿಕ್ಷೇಪ ಮಹಾರುದ್ರಾಯ ದಾನವಃ ।
ಚಕಾರ ಶರವೃಷ್ಟಿಂ ಚ ತೋಯವೃಷ್ಟಿಂ ಯಥಾ ಘನಃ ॥ ೪ ॥

ಮಾಯಾಶ್ಚಕಾರ ವಿವಿಧಾ ಅದೃಶ್ಯಾ ಭಯದರ್ಶಿತಾಃ ।
ಅಪ್ರತರ್ಕ್ಯಾ ಸುರಗಣೈರ್ನಿಖಿಲೈರಪಿ ಸತ್ತಮೈಃ ॥ ೫ ॥

ತಾಂ ದೃಷ್ಟ್ವಾ ಶಂಕರಸ್ತತ್ರ ಚಿಕ್ಷೇಪಾಸ್ತ್ರಂ ಚ ಲೀಲಯಾ ।
ಮಾಹೇಶ್ವರಂ ಮಹಾದಿವ್ಯಂ ಸರ್ವಮಾಯಾವಿನಾಶನಂ ॥ ೬ ॥

ತೇಜಸಾ ತಸ್ಯ ತನ್ಮಾಯಾ ನಷ್ಟಾಶ್ಚಾಸಸ್ದ್ರುತಂ ತದಾ ।
ದಿವ್ಯಾನ್ಯಸ್ತ್ರಾಣಿ ತಾನ್ಯೇವ ನಿಸ್ತೇಜಾಂಸ್ಯಭವನ್ನಪಿ ॥ ೭ ॥

---

೩. ಓ ಮುನೀಂದ್ರ, ಈರೀತಿಯಾಗಿ ಹೇಳಿ ಆ ದಾನವನು ಯುದ್ಧಕ್ಕೆ ಅನುವಾಗಿ ಮನಸ್ಸಿನಲ್ಲಿ ಒಂದು ನಿರ್ಧಾರಕ್ಕೆ ಬಂದು ಶಿವನಿಗೆದುರಾಗಿ ಬಂದನು.

೪. ಆ ದಾನವನು ಆ ಮಹಾರುದ್ರನಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದ ನಲ್ಲದೆ, ಮೋಡವು ಮಳೆಗರೆಯುವಂತೆ ಧಾರಾಕಾರವಾಗಿ ಬಾಣಗಳನ್ನು ಸುರಿಸಿದನು.

೫. ಆ ಅಸುರನು, ಯಾವ ದೇವಗಣಗಳೂ, ಯಾವ ಮುನಿಶ್ರೇಷ್ಠರೂ, ಕಂಡು ಕೇಳಿರದ, ಊಹಿಸಲಸಾಧ್ಯವಾದ ಮಹಾಭಯಂಕರವಾದ ಬಗೆಬಗೆಯಾದ ಮಾಯೆಗಳನ್ನು ಪ್ರಯೋಗಿಸತೊಡಗಿದನು.

೬. ಈರೀತಿ ಮಾಯೆಗಳು ಬರತೊಡಗಿದುದನ್ನು ಕಂಡು ಆ ಶಂಕರನು ಇಂತಹ ಮಾಯೆಗಳ ಹುಟ್ಟನ್ನೇ ಅಡಗಿಸಿಬಿಡುವ ಅತ್ಯದ್ಭುತವಾದ ಮಾಹೇಶ್ವರಾಸ್ತ್ರ ವನ್ನು ಬಿಟ್ಟನು.

೭. ಆಗ ಆ ಮಹೇಶ್ವರಾಸ್ತ್ರದ ತೇಜಸ್ಸಿನಿಂದ ಆ ದಾನವನು ಪ್ರಯೋಗಿಸಿದ ಮಾಯೆಗಳೂ, ದಿವ್ಯಾಸ್ತ್ರಗಳೂ ಕಂಗೆಟ್ಟು ನಷ್ಟವಾಗಿ ಹೋದುವು.

ಅಥ ಯುದ್ಧೇ ಮಹೇಶಾನಸ್ತದ್ವಧಾಯ ಮಹಾಬಲಃ ।
ಶೂಲಂ ಜಗ್ರಾಹ ಸಹಸಾ ದುರ್ನಿವಾರ್ಯಂ ಸುತೇಜಸಾಂ ॥ ೮ ॥

ತದೈವ ತನ್ನಿಷೇದ್ಧುಂ ಚ ವಾಗ್ಬಭೂವಾಶರೀರಿಣೀ ।
ಕ್ಷಿಪ ಶೂಲಂ ನ ಚೇದಾನೀಂ ಪ್ರಾರ್ಥನಾಂ ಶೃಣು ಶಂಕರ ॥ ೯ ॥

ಸರ್ವಥಾ ತ್ವಂ ಸಮರ್ಥೋಽಹಿ ಕ್ಷಣಾದ್ಬ್ರಹ್ಮಾಂಡನಾಶನೇ ।
ಕಿಮೇಕದಾನವಸ್ಯೇಶ ಶಂಖಚೂಡಸ್ಯ ಸಾಂಪ್ರತಂ ॥ ೧೦ ॥

ತಥಾಪಿ ವೇದಮರ್ಯಾದಾ ನ ನಾಶ್ಯಾ ಸ್ವಾಮಿನಾ ತ್ವಯಾ ।
ತಾಂ ಶೃಣುಷ್ವ ಮಹಾದೇವ ಸಫಲಂ ಕುರು ಸತ್ಯತಃ ॥ ೧೧ ॥

ಯಾವದಸ್ಯ ಕರೇಽತ್ಯುಗ್ರಂ ಕವಚಂ ಪರಮಂ ಹರೇಃ ।
ಯಾವತ್ಸತೀತ್ವಮಸ್ತ್ಯೇವ ಸತ್ಯಾ ಅಪ್ಯಸ್ಯ ಯೋಷಿತಃ ॥ ೧೨ ॥

---

೮. ಬಳಿಕ ಮಹಾಬಲಶಾಲಿಯಾದ ಆ ಮಹೇಶ್ವರನು ಈ ಯುದ್ಧವನ್ನು ಬೇಗನೆ ಮುಗಿಸಲೆಳಸಿ, ಎಂತಹ ತೇಜಸ್ವಿಯೂ ತಡೆಯಲಾರದಂತಹ ಶೂಲವನ್ನು ತಟ್ಟನೆ ಕೈಗೆ ತೆಗೆದುಕೊಂಡನು.

೯. ಆ ಶಿವನು ಆಗಲೇ ಶೂಲವನ್ನು ಪ್ರಯೋಗಿಸುವುದನ್ನು ತಡೆಯಬೇಕೆಂದು ಅಂತರಿಕ್ಷದಿಂದ ಈರೀತಿ ಮಾತು ಕೇಳಿಸಿತು. ಓ ಶಂಕರ, ಈ ಪ್ರಾರ್ಥನೆಯನ್ನು ಆಲಿಸು. ಈಗಲೇ ಶೂಲವನ್ನು ಬಿಡಬೇಡ.

೧೦. ನೀನು ಕ್ಷಣಮಾತ್ರದಲ್ಲಿ ಈ ಬ್ರಹ್ಮಾಂಡವೆಲ್ಲವನ್ನೂ ನಾಶಮಾಡಿ ಬಿಡಲು ಸಮರ್ಥನು. ಹೀಗಿರುವಾಗ ಈ ಒಬ್ಬ ಶಂಖಚೂಡನನ್ನು ಕೊಲ್ಲುವುದು ನಿನಗೆ ಅಸಾಧ್ಯವಾದುದೇ?

೧೧. ಆದರೂ ಪ್ರಭುವಾದ ನೀನು ವೇದದ ಮರ್ಯಾದೆಯನ್ನು ಉಲ್ಲಂಘಿಸಬಾರದು. ಓ ಮಹಾದೇವ, ಆ ವೇದದ ಕಟ್ಟಳೆಯೇನೆಂಬುದನ್ನು ಆಲಿಸು. ಇದನ್ನು ಸತ್ಯವಾಗಿಯೂ ಸಫಲಗೊಳಿಸು.

೧೨-೧೩. ಎಲ್ಲಿಯವರೆಗೆ ಈತನ ಕೈಯಲ್ಲಿ ವಿಷ್ಣುವಿನ ಚಕ್ರವೂ ಮೈಯಲ್ಲಿ ವಿಷ್ಣುವಿನ ಶ್ರೇಷ್ಠವಾದ ಕವಚವೂ ಇರುವುದೋ, ಎಲ್ಲಿಯವರೆಗೆ ಮಹಾಸತಿವ್ರತೆಯಾದ

ಇತ್ಯುಕ್ತ್ವಾ ದಾನವೇಂದ್ರೋಽಸೌ ಸನ್ನದ್ಧಸ್ಸಮರೇ ಮುನೇ ।
ಅಗಚ್ಛನ್ನಿಶ್ಚಯಂ ಕೃತ್ವಾಭಿಮುಖಂ ಶಂಕರಸ್ಯ ಚ ॥ ೩ ॥

ದಿವ್ಯಾನ್ಯಸ್ತ್ರಾಣಿ ಚಿಕ್ಷೇಪ ಮಹಾರುದ್ರಾಯ ದಾನವಃ ।
ಚಕಾರ ಶರವೃಷ್ಟಿಂ ಚ ತೋಯವೃಷ್ಟಿಂ ಯಥಾ ಘನಃ ॥ ೪ ॥

ಮಾಯಾಶ್ಚಕಾರ ವಿವಿಧಾ ಅದೃಶ್ಯಾ ಭಯದರ್ಶಿತಾಃ ।
ಅಪ್ರತರ್ಕ್ಯಾ ಸುರಗಣೈರ್ನಿಖಿಲೈರಪಿ ಸತ್ತಮೈಃ ॥ ೫ ॥

ತಾಂ ದೃಷ್ಟ್ವಾ ಶಂಕರಸ್ತತ್ರ ಚಿಕ್ಷೇಪಾಸ್ತ್ರಂ ಚ ಲೀಲಯಾ ।
ಮಾಹೇಶ್ವರಂ ಮಹಾದಿವ್ಯಂ ಸರ್ವಮಾಯಾವಿನಾಶನಂ ॥ ೬ ॥

ತೇಜಸಾ ತಸ್ಯ ತನ್ಮಾಯಾ ನಷ್ಟಾಶ್ಚಾಸಸ್ದ್ರುತಂ ತದಾ ।
ದಿವ್ಯಾನ್ಯಸ್ತ್ರಾಣಿ ತಾನ್ಯೇವ ನಿಸ್ತೇಜಾಂಸ್ಯಭವನ್ನಪಿ ॥ ೭ ॥

---

೩. ಓ ಮುನೀಂದ್ರ, ಈರೀತಿಯಾಗಿ ಹೇಳಿ ಆ ದಾನವನು ಯುದ್ಧಕ್ಕೆ ಅನುವಾಗಿ ಮನಸ್ಸಿನಲ್ಲಿ ಒಂದು ನಿರ್ಧಾರಕ್ಕೆ ಬಂದು ಶಿವನಿಗೆದುರಾಗಿ ಬಂದನು.

೪. ಆ ದಾನವನು ಆ ಮಹಾರುದ್ರನಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದ ನಲ್ಲದೆ, ಮೋಡವು ಮಳೆಗರೆಯುವಂತೆ ಧಾರಾಕಾರವಾಗಿ ಬಾಣಗಳನ್ನು ಸುರಿಸಿದನು.

೫. ಆ ಅಸುರನು, ಯಾವ ದೇವಗಣಗಳೂ, ಯಾವ ಮುನಿಶ್ರೇಷ್ಠರೂ, ಕಂಡು ಕೇಳರದ, ಊಹಿಸಲಸಾಧ್ಯವಾದ ಮಹಾಭಯಂಕರವಾದ ಬಗೆಬಗೆಯಾದ ಮಾಯೆಗಳನ್ನು ಪ್ರಯೋಗಿಸತೊಡಗಿದನು.

೬. ಈರೀತಿ ಮಾಯೆಗಳು ಬರತೊಡಗಿದುದನ್ನು ಕಂಡು ಆ ಶಂಕರನು ಇಂತಹ ಮಾಯೆಗಳ ಹುಟ್ಟನ್ನೇ ಅಡಗಿಸಿಬಿಡುವ ಅತ್ಯದ್ಭುತವಾದ ಮಾಹೇಶ್ವರಾಸ್ತ್ರ ವನ್ನು ಬಿಟ್ಟನು.

೭. ಆಗ ಆ ಮಹೇಶ್ವರಾಸ್ತ್ರದ ತೇಜಸ್ಸಿನಿಂದ ಆ ದಾನವನು ಪ್ರಯೋಗಿಸಿದ ಮಾಯೆಗಳೂ, ದಿವ್ಯಾಸ್ತ್ರಗಳೂ ಕಂಗೆಟ್ಟು ನಷ್ಟವಾಗಿ ಹೋದುವು.

ಅಥ ಯುದ್ಧೇ ಮಹೇಶಾನಸ್ತದ್ವಧಾಯ ಮಹಾಬಲಃ ।
ಶೂಲಂ ಜಗ್ರಾಹ ಸಹಸಾ ದುರ್ನಿವಾರ್ಯಂ ಸುತೇಜಸಾಂ ॥ ೮ ॥

ತದೈವ ತನ್ನಿಷೇದ್ಧುಂ ಚ ವಾಗ್ಬಭೂವಾಶರೀರಿಣೀ ।
ಕ್ಷಿಪ ಶೂಲಂ ನ ಚೇದಾನೀಂ ಪ್ರಾರ್ಥನಾಂ ಶೃಣು ಶಂಕರ ॥ ೯ ॥

ಸರ್ವಥಾ ತ್ವಂ ಸಮರ್ಥೋಽಸಿ ಕ್ಷಣಾದ್ಬ್ರಹ್ಮಾಂಡನಾಶನೇ ।
ಕಿಮೇಕದಾನವಸ್ಯೇಶ ಶಂಖಚೂಡಸ್ಯ ಸಾಂಪ್ರತಂ ॥ ೧೦ ॥

ತಥಾಪಿ ವೇದಮರ್ಯಾದಾ ನ ನಾಶ್ಯಾ ಸ್ವಾಮಿನಾ ತ್ವಯಾ ।
ತಾಂ ಶೃಣುಷ್ವ ಮಹಾದೇವ ಸಫಲಂ ಕುರು ಸತ್ಯತಃ ॥ ೧೧ ॥

ಯಾವದಸ್ಯ ಕರೇಽತ್ಯುಗ್ರಂ ಕವಚಂ ಪರಮಂ ಹರೇಃ ।
ಯಾವತ್ಸತೀತ್ವಮಸ್ತ್ರ್ಯೇವ ಸತ್ಯಾ ಅಪ್ಯಸ್ಯ ಯೋಷಿತಃ ॥ ೧೨ ॥

---

೮. ಬಳಿಕ ಮಹಾಬಲಶಾಲಿಯಾದ ಆ ಮಹೇಶ್ವರನು ಈ ಯುದ್ಧವನ್ನು ಬೇಗನೆ ಮುಗಿಸಲೆಳಸಿ, ಎಂತಹ ತೇಜಸ್ವಿಯೂ ತಡೆಯಲಾರದಂತಹ ಶೂಲವನ್ನು ತಟ್ಟನೆ ಕೈಗೆ ತೆಗೆದುಕೊಂಡನು.

೯. ಆ ಶಿವನು ಆಗಲೇ ಶೂಲವನ್ನು ಪ್ರಯೋಗಿಸುವುದನ್ನು ತಡೆಯಬೇಕೆಂದು ಅಂತರಿಕ್ಷದಿಂದ ಈರೀತಿ ಮಾತು ಕೇಳಿಸಿತು. ಓ ಶಂಕರ, ಈ ಪ್ರಾರ್ಥನೆಯನ್ನು ಆಲಿಸು. ಈಗಲೇ ಶೂಲವನ್ನು ಬಿಡಬೇಡ.

೧೦. ನೀನು ಕ್ಷಣಮಾತ್ರದಲ್ಲಿ ಈ ಬ್ರಹ್ಮಾಂಡವೆಲ್ಲವನ್ನೂ ನಾಶಮಾಡಿ ಬಿಡಲು ಸಮರ್ಥನು. ಹೀಗಿರುವಾಗ ಈ ಒಬ್ಬ ಶಂಖಚೂಡನನ್ನು ಕೊಲ್ಲುವುದು ನಿನಗೆ ಅಸಾಧ್ಯವಾದುದೇ ?

೧೧. ಆದರೂ ಪ್ರಭುವಾದ ನೀನು ವೇದದ ಮರ್ಯಾದೆಯನ್ನು ಉಲ್ಲಂಘಿಸ ಬಾರದು. ಓ ಮಹಾದೇವ, ಆ ವೇದದ ಕಟ್ಟಳೆಯೇನೆಂಬುದನ್ನು ಆಲಿಸು. ಇದನ್ನು ಸತ್ಯವಾಗಿಯೂ ಸಫಲಗೊಳಿಸು.

೧೨-೧೩. ಎಲ್ಲಿಯವರೆಗೆ ಈತನ ಕೈಯಲ್ಲಿ ವಿಷ್ಣುವಿನ ಚಕ್ರವೂ ಮೈಯಲ್ಲಿ ವಿಷ್ಣುವಿನ ಶ್ರೇಷ್ಠವಾದ ಕವಚವೂ ಇರುವುದೋ, ಎಲ್ಲಿಯವರೆಗೆ ಮಹಾಪತಿವ್ರತೆಯಾದ

ತಾವದಸ್ಯ ಜರಾ ಮೃತ್ಯುಶ್ಶಂಖಚೂಡಸ್ಯ ಶಂಕರ ।
ನಾಸ್ತೀತ್ಯವಿತಥಂ ನಾಥ ವಿಧೇಹಿ ಬ್ರಹ್ಮಣೋ ವಚಃ ॥ ೧೩ ॥

ಇತ್ಯಾಕರ್ಣ್ಯ ನಭೋವಾಣೀಂ ತಥ್ಯೇತ್ಯುಕ್ತೇ ಹರೇ ತದಾ ।
ಹರೇಚ್ಛಯಾ ಗತೋ ವಿಷ್ಣುಸ್ತಂ ದಿದೇಶ ಸತಾಂ ಗತಿಃ ॥ ೧೪ ॥

ವೃದ್ಧಬ್ರಾಹ್ಮಣವೇಷೇಣ ವಿಷ್ಣುರ್ಮಾಯಾವಿನಾಂ ವರಃ ।
ಶಂಖಚೂಡೋಪಕಂಠಂ ಚ ಗತ್ವೋವಾಚ ಸ ತಂ ತದಾ ॥ ೧೫ ॥

॥ ವೃದ್ಧಬ್ರಾಹ್ಮಣ ಉವಾಚ ॥

ದೇಹಿ ಭಿಕ್ಷಾಂ ದಾನವೇಂದ್ರ ಮಹ್ಯಂ ಪ್ರಾಪ್ತಾಯ ಸಾಂಪ್ರತಂ ॥ ೧೬ ॥

ನೇದನೀಂ ಕಥಯಿಷ್ಯಾಮಿ ಪ್ರಕಟಂ ದೀನವತ್ಸಲಂ ।
ಪಶ್ಚಾತ್ತ್ವಾಂ ಕಥಯಿಷ್ಯಾಮಿ ಪುನಸ್ಸತ್ಯಂ ಕರಿಷ್ಯಸಿ ॥ ೧೭ ॥

---

ಈತನ ಮಡದಿಯ ಸತೀತ್ವವು ಕಂಗೊಳಿಸುತ್ತಿರುವುದೋ ಅಲ್ಲಿಯವರೆಗೆ ಈ ಶಂಖಚೂಡನಿಗೆ ಮುಪ್ಪೂ ಸಾವೂ ಉಂಟಾಗಲಾರದು. ಹೀಗೆಂದು ಬ್ರಹ್ಮನ ವರವಿರುವುದು. ಹೇ ಪ್ರಭೂ, ಆ ವಚನವನ್ನು ವ್ಯರ್ಥಗೊಳಿಸದಿರು-

೧೪. ಹೀಗೆಂಬುದಾಗಿ ನುಡಿದ ಆಕಾಶವಾಣಿಯನ್ನು ಆಲಿಸಿ, ಶಿವನು ಹಾಗೆಯೇ ಆಗಲೆಂದು ಒಪ್ಪಿದನು. ಅನಂತರ ಶಿವನ ಇಚ್ಛೆಯಂತೆ ಸಜ್ಜನಪಕ್ಷಪಾತಿಯಾದ ವಿಷ್ಣುವು ಆ ಶಂಖಚೂಡನ ಬಳಿಗೆ ತೆರಳಿದರು.

೧೫. ಮಾಯಾವಿಶಾರದಲ್ಲಿ ಮೊದಲನೆಯವನಾದ ಆ ವಿಷ್ಣುವು ವೃದ್ಧಬ್ರಾಹ್ಮಣನಂತೆ ವೇಷವನ್ನು ತಾಳಿ, ಆ ಶಂಖಚೂಡನ ಬಳಿಸಾರಿ, ಇಂತೆಂದು ನುಡಿದನು.

೧೬-೧೭. ಓ ದಾನವರಾಜ, ನಿನ್ನ ಬಳಿಗೆ ಬಂದಿರುವ ನನಗೆ ಭಿಕ್ಷೆಯನ್ನು ನೀಡು. ನಾನೀಗ ಅದನ್ನು ವ್ಯಕ್ತವಾಗಿ ಹೇಳಲಾರೆನು. ಬಳಿಕ ದೀನವತ್ಸಲನಾದ ನಿನಗೆ ಅದನ್ನು ತಿಳಿಸುವೆನು. ನೀನು ಸತ್ಯವಾಗಿ ಅದನ್ನು ಮಾಡಿಕೊಡು ಎಂದನು.

ಓಮಿತ್ಯುವಾಚ ರಾಜೇಂದ್ರಃ ಪ್ರಸನ್ನವದನೇಕ್ಷಣಃ ।
ಕವಚಾರ್ಥೀ ಜನಶ್ಚಾಹಮಿತ್ಯುವಾಚೇತಿ ಸಚ್ಛಲಾತ್ ॥ ೧೮ ॥

ತಚ್ಛ್ರುತ್ವಾ ದಾನವೇಂದ್ರೋಽಸೌ ಬ್ರಹ್ಮಣ್ಯಃ ಸತ್ಯವಾಗ್ವಿಭುಃ ।
ತದ್ದದೌ ಕವಚಂ ದಿವ್ಯಂ ವಿಪ್ರಾಯ ಪ್ರಾಣಸಂಮತಂ ॥ ೧೯ ॥

ಮಾಯಯೇತ್ಥಂ ತು ಕವಚಂ ತಸ್ಮಾಜ್ಜಗ್ರಾಹ ವೈ ಹರಿಃ ।
ಶಂಖಚೂಡಸ್ಯ ರೂಪೇಣ ಜಗಾಮ ತುಲಸೀಂ ಪ್ರತಿ ॥ ೨೦ ॥

ಗತ್ವಾ ತತ್ರ ಹರಿಸ್ತಸ್ಯಾ ಯೋನೌ ಮಾಯಾವಿಶಾರದಃ ।
ವೀರ್ಯಾಧಾನಂ ಚಕಾರಾಶು ದೇವಕಾರ್ಯಾರ್ಥಮೀಶ್ವರಃ ॥ ೨೧ ॥

ಏತಸ್ಮಿನ್ನಂತರೇ ಶಂಭುಮೀರಯನ್ಸ್ವವಚಃ ಪ್ರಭುಃ ।
ಶಂಖಚೂಡವಧಾರ್ಥಾಯ ಶೂಲಂ ಜಗ್ರಾಹ ಪ್ರಜ್ವಲಂ ॥ ೨೨ ॥

---

೧೮. ಆ ದಾನವರಾಜನು, ಪ್ರಸನ್ನವಾದ ಮುಖವೂ, ನಯನಗಳೂ ಉಳ್ಳವನಾಗಿ ಹಾಗೆಯೇ ಆಗಲೆಂದು ಒಪ್ಪಿದನು. ಬಳಿಕ ಆ ವೃದ್ಧಬ್ರಾಹ್ಮಣನು, ನಾನು ನಿನ್ನ ಕವಚದ ಸಲುವಾಗಿ ಬಂದಿರುವೆನು ಎಂದನು.

೧೯. ಅದನ್ನು ಕೇಳಿದೊಡನೆಯೇ ಆಡಿದ ಮಾತಿಗೆ ತಪ್ಪದವನೂ ಬ್ರಾಹ್ಮಣ ವತ್ಸಲನೂ ಆದ ಆ ದಾನವೇಂದ್ರನು ತನಗೆ ಪ್ರಾಣದಂತೆ ಪ್ರಿಯವಾದ ಆ ದಿವ್ಯವಾದ ಕವಚವನ್ನು ಆ ಕಪಟಬ್ರಾಹ್ಮಣನಿಗೆ ಕೊಟ್ಟನು.

೨೦. ಈರೀತಿಯಾಗಿ ಮೋಸದಿಂದ ಆ ಹರಿಯು ಅವನ ಕವಚವನ್ನು ತೆಗೆದುಕೊಂಡು, ಆತನ ವೇಷವನ್ನು ತಾಳಿ, ಅವನ ಮಡದಿಯಾದ ತುಲಸಿಯ ಬಳಿಗೆ ತೆರಳಿದನು.

೨೧. ಆ ಮಾಯಾಕುಶಲನಾದ ಹರಿಯು, ದೇವತೆಗಳ ಕೆಲಸವು ನೆರವೇರುವುದಕ್ಕಾಗಿ, ಆ ತುಲಸಿಯನ್ನು ಮೋಸಗೊಳಿಸಿ ಅವಳೊಡನೆ ಬೆರತು, ಆಕೆಯ ಸತೀತ್ವವನ್ನು ಅಪಹರಿಸಿಬಿಟ್ಟನು.

೨೨. ಇಷ್ಟರಲ್ಲಿ ಪ್ರಭುವಾದ ಶಂಕರನು ತನ್ನ ಹೆಸರನ್ನು ಹಿಡಿದು ಗಟ್ಟಿಯಾಗಿ ಕೂಗಿ ಹೇಳುತ್ತಾ, ಶಂಖಚೂಡನನ್ನು ಕೊಲ್ಲಲೆಂದು ಜ್ವಲಿಸುತ್ತಿರುವ ಶೂಲವನ್ನು ಕೈಗೆ ತೆಗೆದುಕೊಂಡನು.

ತಚ್ಛೂಲಂ ವಿಜಯಂ ನಾಮ ಶಂಕರಸ್ಯ ಪರಾತ್ಮನಃ ।
ಸಂಚಕಾಶೇ ದಿಶಾಸ್ಸರ್ವಾ ರೋದಸೀಂ ಸಂಪ್ರಕಾಶಯತ್ ॥ ೨೩ ॥

ಕೋಟಿಮಧ್ಯಾಹ್ನಮಾರ್ತಂಡಪ್ರಲಯಾಗ್ನಿಶಿಖೋಪಮಂ ।
ದುರ್ನಿವಾರ್ಯಂ ಚ ದುರ್ಧರ್ಷಮವ್ಯರ್ಥಂ ವೈರಿಘಾತಕಂ ॥ ೨೪ ॥

ತೇಜಸಾಂ ಚಕ್ರಮತ್ಯುಗ್ರಂ ಸರ್ವಶಸ್ತ್ರಾಸ್ತ್ರಸಾಯಕಂ ।
ಸುರಾಸುರಾಣಾಂ ಸರ್ವೇಷಾಂ ದುಸ್ಸಹಂ ಚ ಭಯಂಕರಂ ॥ ೨೫ ॥

ಸಂಹರ್ತುಂ ಸರ್ವಬ್ರಹ್ಮಾಂಡಮವಲಂಬ್ಯ ಚ ಲೀಲಯಾ ।
ಸಂಸ್ಥಿತಂ ಪರಮಂ ತತ್ರ ಏಕತ್ರೀಭೂಯ ವಿಜ್ವಲತ್ ॥ ೨೬ ॥

---

೨೩. ಪರಮಪುರುಷನಾದ ಆ ಶಿವನ ವಿಜಯವೆಂಬ ಆ ಶೂಲವು ಎಂಟು ದಿಕ್ಕುಗಳನ್ನೂ, ಪೃಥಿವ್ಯಾಕಾಶಗಳನ್ನೂ ಬೆಳಗುತ್ತಾ ಕಂಗೊಳಿಸಿತು.

೨೪. ಆ ಶೂಲವು, ಮಧ್ಯಾಹ್ನಕಾಲದಲ್ಲಿ ಉಜ್ವಲವಾಗಿರುವ ಸೂರ್ಯರು ಕೋಟಿಮಂದಿ ಒಕ್ಕಡೆ ಏಕಕಾಲದಲ್ಲಿ ಸೇರಿದರೆ, ಯಾವರೀತಿ ಬೆಳಗುವರೋ ಪ್ರಳಯ ಕಾಲದ ಅಗ್ನಿಶಿಖೆಯು, ಯಾವರೀತಿ ಪ್ರಜ್ವಲಿಸುವುದೋ ಆರೀತಿ ಹೊಳೆಯುತ್ತಿತ್ತು. ಅದನ್ನು ಯಾರೂ ತಡೆಯಲೂ, ಎದುರಿಸಲೂ, ಸಾಧ್ಯವಿಲ್ಲವು. ಅದು ಎಂದಿಗೂ ವ್ಯರ್ಥವಾದುದೇ ಅಲ್ಲ. ಅದು ತನ್ನ ವೈರಿಗಳನ್ನು ಬಿಡದೆ ಕೊಂದುಬಿಡುತ್ತಿತ್ತು.

೨೫. ಆ ಶೂಲವು ಬಹು ಭಯಂಕರವಾದ ತೇಜೋಮಂಡಲದಂತೆ ತೋರುತ್ತಿತ್ತು. ನಾನಾವಿಧವಾದ ಶಸ್ತ್ರಾಸ್ತ್ರಗಳ ಮತ್ತು ಬಾಣಗಳ ಪ್ರಭಾವವನ್ನು ಒಳಗೊಂಡಿತ್ತು. ಅದನ್ನು ಸುರರೂ ಅಸುರರೂ ಯಾರೂ ತಡೆಯಲು ಸಾಧ್ಯವಿರಲಿಲ್ಲ.

೨೬. ಈ ಎಲ್ಲ ಬ್ರಹ್ಮಾಂಡವನ್ನೂ ಲೀಲಾಮಾತ್ರದಿಂದಲೇ ಸಂಹರಿಸಿಬಿಡಲು, ಅನುವಾಗುವಂತೆ ಮಹಾತೇಜಸ್ಸುಗಳೆಲ್ಲವೂ ಒಂವೆಡೆ ಸಮ್ಮಿಳಿತವಾಗಿ ಈ ರೂಪವನ್ನು ತಳೆದಿವೆಯೋ ಎನ್ನುವಂತಿತ್ತು.

ಧನುಸ್ಸಹಸ್ರಂ ದೀರ್ಘೇಣ ಪ್ರಸ್ಥೇನ ಶತಹಸ್ತಕಂ ।
ಜೀವಬ್ರಹ್ಮಸ್ವರೂಪಂ ಚ ನಿತ್ಯರೂಪಮನಿರ್ಮಿತಂ ॥ ೨೭ ॥

ವಿಭ್ರಮದ್ವ್ಯೋಮ್ನಿ ತಚ್ಛೂಲಂ ಶಂಖಚೂಡೋಪರಿ ಕ್ಷಣಾತ್ ।
ಚಕಾರ ಭಸ್ಮ ತಚ್ಛೀಘ್ರಂ ನಿಪತ್ಯ ಶಿವಶಾಸನಾತ್ ॥ ೨೮ ॥

ಅಥ ಶೂಲಂ ಮಹೇಶಸ್ಯ ದ್ರುತಮಾವೃತ್ಯ ಶಂಕರಂ ।
ಯಯೌ ವಿಹಾಯಸಾ ವಿಪ್ರ ಮನೋಯಾಯಿ ಸ್ವಕಾರ್ಯಕೃತ್ ॥ ೨೯ ॥

ನೇದುರ್ದುಂದುಭಯಸ್ಸ್ವರ್ಗೇ ಜಗುರ್ಗಂಧರ್ವಕಿನ್ನರಾಃ ।
ತುಷ್ಟುವುರ್ಮುನಯೋ ದೇವಾ ನನೃತುಶ್ಚಾಪ್ಸರೋಗಣಾಃ ॥ ೩೦ ॥

ಬಭೂವ ಪುಷ್ಪವೃಷ್ಟಿಶ್ಚ ಶಿವಸ್ಯೋಪರಿ ಸಂತತಂ ।
ಪ್ರಶಶಂಸ ಹರಿರ್ಬ್ರಹ್ಮಾ ಶಕ್ರಾದ್ಯಾ ಮುನಯಸ್ತಥಾ ॥ ೩೧ ॥

---

೨೭. ಆ ಶೂಲವು ಸಾವಿರ ಬಿಲ್ಲಳತೆಯಷ್ಟು ಉದ್ದವಾಗಿಯೂ, ನೂರು ಮೊಳದಷ್ಟು ಅಗಲವಾಗಿಯೂ ಇದ್ದಿತು. ಅದು ಜೀವಾತ್ಮಪರಮಾತ್ಮರ ಸ್ವರೂಪವನ್ನು ಒಳಗೊಂಡು ನಿತ್ಯವಾಗಿದ್ದಿತು. ಅದನ್ನು ಯಾರೂ ನಿರ್ಮಿಸಿದುದಲ್ಲ.

೨೮. ಇಂತು ಪ್ರಭಾವಯುತವಾದ ಆ ಶೂಲವು ಆಕಾಶದಲ್ಲಿ ಗರಗರನೆ ತಿರುಗುತ್ತಾ, ಶಂಖಚೂಡನಮೇಲೆ ಬಿದ್ದು, ಶಿವನ ಅಪ್ಪಣೆಯಂತೆ ಅವನನ್ನು ಕ್ಷಣಮಾತ್ರದಲ್ಲಿ ಸುಟ್ಟು ಬೂದಿಮಾಡಿತು.

೨೯. ಓ ಬ್ರಾಹ್ಮಣೋತ್ತಮ, ಮನೋವೇಗವುಳ್ಳ ಆ ಶೂಲವು, ಈರೀತಿ ತನ್ನ ಕೆಲಸವನ್ನು ನೆರವೇರಿಸಿ, ಆಕಾಶಮಾರ್ಗದಿಂದ ಪುನಃ ಜಾಗ್ರತೆಯಾಗಿ ಶಿವನನ್ನೇ ಸೇರಿಬಿಟ್ಟಿತು.

೩೦. ಆಗ ಸ್ವರ್ಗಲೋಕದಲ್ಲಿ ದೇವದುಂದುಭಿಗಳು ಮೊಳಗಿದುವು. ಗಂಧರ್ವರೂ, ಕಿನ್ನರರೂ ಹಾಡಿದರು. ಮುನಿಗಳೂ, ದೇವತೆಗಳೂ ಸ್ತೋತ್ರಮಾಡಿದರು. ಅಪ್ಸರಸ್ತ್ರೀಯರು ನರ್ತನಮಾಡಿದರು.

೩೧. ದೇವಲೋಕದಿಂದ ಶಿವನ ಮೇಲೆ ಹೂಮಳೆಯು ಎಡೆಬಿಡದೆ ಸುರಿಯಿತು. ಆ ಶಿವನನ್ನು ಹರಿಯೂ, ಬ್ರಹ್ಮನೂ, ಇಂದ್ರಾದಿದೇವತೆಗಳೂ, ಮುನಿಗಳೂ ಕೊಂಡಾಡಿದರು.

ಶಂಖಚೂಡೋ ದಾನವೇಂದ್ರಃ ಶಿವಸ್ಯ ಕೃಪಯಾ ತದಾ ।
ಶಾಪಮುಕ್ತೋ ಬಭೂವಾಥ ಪೂರ್ವರೂಪಮವಾಪ ಹ ॥ ೩೨ ॥

ಅಸ್ಥಿಭಿಶ್ಶಂಖಚೂಡಸ್ಯ ಶಂಖಜಾತಿರ್ಬಭೂವ ಹ ।
ಪ್ರಶಸ್ತಂ ಶಂಖತೋಯಂ ಚ ಸರ್ವೇಷಾಂ ಶಂಕರಂ ವಿನಾ ॥ ೩೩ ॥

ವಿಶೇಷೇಣ ಹರೇರ್ಲಕ್ಷ್ಮ್ಯಾಃ ಶಂಖತೋಯಂ ಮಹತ್ಪ್ರಿಯಂ ।
ಸಂಬಂಧಿನಾಂ ಚ ತಸ್ಯಾಪಿ ನ ಹರಸ್ಯ ಮಹಾಮುನೇ ॥ ೩೪ ॥

ತಮಿತ್ಥಂ ಶಂಕರೋ ಹತ್ವಾ ಶಿವಲೋಕಂ ಜಗಾಮ ಸಃ ।
ಸುಪ್ರಹೃಷ್ಟೋ ವೃಷಾರೂಢಃ ಸೋಮಃ ಸ್ಕಂದಗಣೈರ್ವೃತಃ ॥ ೩೫ ॥

ಹರಿರ್ಜಗಾಮ ವೈಕುಂಠಂ ಕೃಷ್ಣಸ್ಸ್ವಸ್ಥೋ ಬಭೂವ ಹ ।
ಸುರಾಸ್ಸ್ವವಿಷಯಂ ಪ್ರಾಪುಃ ಪರಮಾನಂದಸಂಯುತಾಃ ॥ ೩೬ ॥

---

೩೨. ಆಗ ದಾನವೇಂದ್ರನಾಗಿದ್ದ ಆ ಶಂಖಚೂಡನು, ಶಿವನ ಕೃಪೆಯಿಂದ ಶಾಪವನ್ನು ಕಳೆದುಕೊಂಡು, ಮೊದಲಿನಂತೆಯೇ ತನ್ನ ಗೋಪಾಲಕನ ರೂಪವನ್ನು ಧರಿಸಿದನು.

೩೩. ಆ ಶಂಖಚೂಡನ ಅಸ್ಥಿಗಳಿಂದ ಶಂಖಗಳು ಉಂಟಾದುವು. ಶಂಕರನೊಬ್ಬನನ್ನು ಹೊರತು, ಉಳಿದ ಎಲ್ಲರಿಗೂ ಆ ಶಂಖದಿಂದ ಬಿದ್ದ ನೀರು ಬಹು ಪ್ರಶಸ್ತವೆನಿಸಿತು.

೩೪. ಎಲೈ ಮಹಾಮುನಿಯೇ, ಆ ಶಂಖೋದಕವು ವಿಶೇಷವಾಗಿ ಹರಿಗೂ, ಲಕ್ಷ್ಮಿಗೂ, ಆತನ ಪಾರಿಷದರಿಗೂ ಬಹಳ ಪ್ರಿಯವಾದುದು. ಶಿವನಿಗೊಬ್ಬನಿಗೆ ಆ ಶಂಖತೀರ್ಥವು ಸರಿಬೀಳದು.

೩೫. ಈರೀತಿಯಾಗಿ ಆ ಶಂಖಚೂಡನನ್ನು ನಿಗ್ರಹಿಸಿ, ಶಂಕರನು ಬಹು ಸಂತೋಷಗೊಂಡು ತನ್ನ ವೃಷಭವನ್ನೇರಿ ಉಮೆಯೊಡನೆಯೂ, ಸ್ಕಂದ, ಮತ್ತು ಗಣಗಳೊಡನೆಯೂ, ತನ್ನ ನಿವಾಸವಾದ ಶಿವಲೋಕಕ್ಕೆ ತೆರಳಿದನು.

೩೬. ಹರಿಯು ವೈಕುಂಠಕ್ಕೆ ಪಯಣಬೆಳೆಸಿದನು. ಕೃಷ್ಣನು ತನ್ನ ಕಳವಳವನ್ನು ತೊರೆದು, ಶಾಂತಚಿತ್ತನಾದನು. ದೇವತೆಗಳೆಲ್ಲರೂ ಪರಮಾನಂದಭರಿತರಾಗಿ ತಮ್ಮ ತಮ್ಮ ಲೋಕಗಳಿಗೆ ಹಿಂದಿರುಗಿದರು.

ಜಗತ್ಸ್ವಾಸ್ಥ್ಯಮತೀವಾಪ ಸರ್ವನಿರ್ವಿಘ್ನಮಾಪ ಕಂ ।
ನಿರ್ಮಲಂ ಚಾಭವದ್ವ್ಯೋಮ ಕ್ಷಿತಿಸ್ಸರ್ವಾ ಸುಮಂಗಲಾ ॥ ೩೭ ॥

ಇತಿ ಪ್ರೋಕ್ತಂ ಮಹೇಶಸ್ಯ ಚರಿತಂ ಪ್ರಮುದಾವಹಂ ।
ಸರ್ವದುಃಖಹರಂ ಶ್ರೀದಂ ಸರ್ವಕಾಮಪ್ರಪೂರಕಂ ॥ ೩೮ ॥

ಧನ್ಯಂ ಯಶಸ್ಯಮಾಯುಷ್ಯಂ ಸರ್ವವಿಘ್ನನಿವಾರಣಂ ।
ಭುಕ್ತಿದಂ ಮುಕ್ತಿದಂ ಚೈವ ಸರ್ವಕಾಮಫಲಪ್ರದಂ ॥ ೩೯ ॥

ಯ ಇದಂ ಶೃಣುಯಾನ್ನಿತ್ಯಂ ಚರಿತಂ ಶಶಿಮೌಲಿನಃ ।
ಶ್ರಾವಯೇದ್ವಾ ಪಠೇದ್ವಾಪಿ ಪಾಠಯೇದ್ವಾ ಸುಧೀರ್ನರಃ ॥ ೪೦ ॥

ಧನಂ ಧಾನ್ಯಂ ಸುತಂ ಸೌಖ್ಯಂ ಲಭೇತಾತ್ರ ನ ಸಂಶಯಃ ।
ಸರ್ವಾನ್ಕಾಮಾನವಾಪ್ನೋತಿ ಶಿವಭಕ್ತಿಂ ವಿಶೇಷತಃ ॥ ೪೧ ॥

---

೩೭. ಜಗತ್ತು ಬಹುವಾಗಿ ನೆಮ್ಮದಿಯನ್ನು ಪಡೆಯಿತು. ಯಾವೊಂದು ಎಡರೂ ಇಲ್ಲದಂತೆ ಸುಖವನ್ನು ಹೊಂದಿತು. ಆಕಾಶವು ನಿರ್ಮಲವಾಗಿ ಬೆಳಗಿತು. ಭೂಮಿಯೆಲ್ಲವೂ ಮಂಗಲಮಯವಾಗಿ ಕಂಗೊಳಿಸಿತು.

೩೮. ಈರೀತಿಯಾಗಿ ಬಹು ಸಂತೋಷಪ್ರದವಾದ ಶಿವನ ಚರಿತ್ರವನ್ನು ನಿನಗೆ ತಿಳಿಸಿದುದಾಯಿತು. ಈ ಚರಿತ್ರವು, ಎಲ್ಲ ದುಃಖಗಳನ್ನೂ ಹೋಗಲಾಡಿಸುವುದು. ಸಂಪತ್ತನ್ನು ಉಂಟುಮಾಡುವುದು. ಎಲ್ಲ ಇಷ್ಟಾರ್ಥಗಳನ್ನೂ ನೆರವೇರಿಸುವುದು.

೩೯. ಈ ಆಖ್ಯಾನವು ಧನ್ಯವಾದುದು. ಯಶಸ್ಸನ್ನೂ, ಆಯುಸ್ಸನ್ನೂ ಹೆಚ್ಚಿಸುವುದು. ಎಲ್ಲ ವಿಧವಾದ ವಿಘ್ನಗಳನ್ನೂ ನಿವಾರಿಸುವುದು. ಭೋಗಗಳನ್ನೂ ಮೋಕ್ಷವನ್ನೂ ಕರುಣಿಸುವುದು. ಮನೋರಥಗಳೆಲ್ಲವನ್ನೂ ಅನುಗ್ರಹಿಸುವುದು.

೪೦-೪೧. ಯಾವ ಮನುಜನು ಈ ಶಶಾಂಕಮೌಲಿಯ ದಿವ್ಯವಾದ ಚರಿತ್ರವನ್ನು ಪ್ರತಿನಿತ್ಯವೂ ಕೇಳುವನೋ, ಅಥವಾ ಮತ್ತೊಬ್ಬರಿಗೆ ಕೇಳುವಂತೆ ಮಾಡುವನೋ, ಯಾವ ಮಾನವನು ತಾನು ನಿತ್ಯವೂ ಇದನ್ನು ಪಾರಾಯಣಮಾಡುವನೋ ಇಲ್ಲದಿದ್ದರೆ, ಮತ್ತೊಬ್ಬರಿಂದ ಪಾರಾಯಣಮಾಡಿಸುವನೋ ಆ ವಿವೇಕಿಯಾದ ಮಾನವಶ್ರೇಷ್ಠನು, ಸಂಪತ್ತನ್ನೂ, ಧಾನ್ಯಸಮೃದ್ಧಿಯನ್ನೂ, ಮಕ್ಕಳನ್ನೂ, ಸೌಖ್ಯವನ್ನೂ ಖಂಡಿತವಾಗಿಯೂ, ಪಡೆಯುವನು. ಆತನು ತನ್ನ ಎಲ್ಲ ಕೋರಿಕೆಗಳನ್ನೂ ಸಾಧಿಸಿಕೊಳ್ಳುವನು. ವಿಶೇಷವಾಗಿ ಶಿವನಲ್ಲಿ ಭಕ್ತಿಯನ್ನು ತಳೆಯುವನು.

ಇದಮಾಖ್ಯಾನಮತುಲಂ ಸರ್ವೋಪದ್ರವನಾಶನಂ ।
ಪರಮಜ್ಞಾನಜನನಂ ಶಿವಭಕ್ತಿವಿವರ್ಧನಂ ॥ ೪೨ ॥

ಬ್ರಾಹ್ಮಣೋ ಬ್ರಹ್ಮವರ್ಚಸ್ವೀ ಕ್ಷತ್ರಿಯೋ ವಿಜಯೀ ಭವೇತ್ ।
ಧನಾಢ್ಯೋ ವೈಶ್ಯಜಶ್ಶೂದ್ರಶ್ಶೃಣ್ವನ್ಸತ್ತಮತಾಮಿಯಾತ್ ॥ ೪೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶಂಖಚೂಡವಧೋಪಾಖ್ಯಾನಂ
ನಾಮ ಚತ್ವಾರಿಂಶೋಽಧ್ಯಾಯಃ

---

೪೨. ಈ ಆಖ್ಯಾನವು ಅನುಪಮವಾದುದು. ಎಲ್ಲ ವಿಧವಾದ ಉಪದ್ರವಗಳನ್ನೂ ನಾಶಮಾಡಿಬಿಡುವಂಥದು. ಇದು ಶ್ರೇಷ್ಠವಾದ ದಿವ್ಯಜ್ಞಾನವನ್ನು ನೀಡುವುದು. ಶಿವನಲ್ಲಿ ಭಕ್ತಿಯನ್ನು ಮತ್ತಷ್ಟು ಹೆಚ್ಚಿಸುವುದು.

೪೩. ಈ ಚರಿತ್ರವನ್ನು ಕೇಳಿದರೆ ಬ್ರಾಹ್ಮಣನು ಬ್ರಹ್ಮವರ್ಚಸ್ಸನ್ನು ಪಡೆಯುವನು. ಕ್ಷತ್ರಿಯನು ವಿಜಯಶೀಲನಾಗುವನು. ವೈಶ್ಯನು ಹಣಗಾರನಾಗುವನು. ಶೂದ್ರನು ಸತ್ಪುರುಷನಾಗುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಶಂಖಚೂಡವಧೋಪಾಖ್ಯಾನವೆಂಬ ನಲವತ್ತನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕಚತ್ವಾರಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ನಾರಾಯಣಶ್ಚ ಭಗವಾನ್ವೀರ್ಯಾಧಾನಂ ಚಕಾರ ಹ ।
ತುಲಸ್ಯಾಃ ಕೇನ ಯತ್ನೇನ ಯೋನೌ ತದ್ವಕ್ತುಮರ್ಹಸಿ ॥ ೧ ॥

॥ ಸನತ್ಕುಮಾರ ಉವಾಚ ॥

ನಾರಾಯಣೋ ಹಿ ದೇವಾನಾಂ ಕಾರ್ಯಕರ್ತಾ ಸತಾಂ ಗತಿಃ ।
ಶಂಖಚೂಡಸ್ಯ ರೂಪೇಣ ರೇಮೇ ತದ್ರಮಯಾ ಸಹ ॥ ೨ ॥

---

### ನಲವತ್ತೊಂದನೆಯ ಅಧ್ಯಾಯವು.

೧. ವ್ಯಾಸಮಹರ್ಷಿಯು ಸನತ್ಕುಮಾರನನ್ನು ಕುರಿತು, ಓ ಮಹರ್ಷಿ, ಆ ಭಗವಂತನಾದ ಶ್ರೀಹರಿಯು, ಶಂಖಚೂಡನ ಅರ್ಧಾಂಗಿಯಾದ ತುಲಸಿಯ ಸತೀತ್ವವನ್ನು ಯಾವ ಉಪಾಯದಿಂದ ಅಪಹರಿಸಿದನೆಂಬುದನ್ನು ತಿಳಿಸು ಎಂದು ಕೇಳಲು,

೨. ಸನತ್ಕುಮಾರನು ಇಂತೆಂದು ಹೇಳತೊಡಗಿದನು. ದೇವತೆಗಳ ಕೆಲಸವನ್ನು ನೆರವೇರಿಸಲು ಸದಾ ಸಿದ್ಧನೂ, ಸತ್ಪುರುಷರಿಗೆ ಅವಲಂಬನವೂ ಆದ ಆ ಶ್ರೀಹರಿಯು ಶಂಖಚೂಡನ ರೂಪವನ್ನು ಧರಿಸಿ ಅವನ ಗೃಹಲಕ್ಷ್ಮಿಯೊಡನೆ ವಿಹರಿಸಿದನು.

ತದೇವ ಶೃಣು ವಿಷ್ಣೋಶ್ಚ ಚರಿತಂ ಪ್ರಮುಪಾವಹಂ ।
ಶಿವಶಾಸನಕರ್ತುಶ್ಚ ಮಾತುಶ್ಚ ಜಗತಾಂ ಹರೇಃ ॥ ೩ ॥

ರಣಮಧ್ಯೇ ವ್ಯೋಮವಚಃ ಶ್ರುತ್ವಾ ದೇವೇನ ಶಂಭುನಾ ।
ಪ್ರೇರಿತಶ್ಶಂಖಚೂಡಸ್ಯ ಗೃಹೀತ್ವಾ ಕವಚಂ ಪರಂ ॥ ೪ ॥

ವಿಪ್ರರೂಪೇಣ ತ್ವರಿತಂ ಮಾಯಯಾ ನಿಜಯಾ ಹರಿಃ ।
ಜಗಾಮ ಶಂಖಚೂಡಸ್ಯ ರೂಪೇಣ ತುಲಸೀಗೃಹಂ ॥ ೫ ॥

ದುಂದುಭಿಂ ವಾದಯಾಮಾಸ ತುಲಸೀದ್ವಾರಸನ್ನಿಧೌ ।
ಜಯಶಬ್ದಂ ಚ ತತ್ರೈವ ಬೋಧಯಾಮಾಸ ಸುಂದರೀಂ ॥ ೬ ॥

ತಚ್ಛ್ರುತ್ವಾ ಚೈವ ಸಾ ಸಾಧ್ವೀ ಪರಮಾನಂದಸಂಯುತಾ ।
ರಾಜಮಾರ್ಗಂ ಗವಾಕ್ಷೇಣ ದದರ್ಶ ಪರಮಾದರಾತ್ ॥ ೭ ॥

---

೩. ಜಗತ್ತಿನ ಮಾತಾಪಿತೃಗಳಾದ ಶಿವಪಾರ್ವತಿಯರ ಅಪ್ಪಣೆಯನ್ನು ಶಿರಸಾ ವಹಿಸಿ ಪಾಲಿಸುವ ಆ ವಿಷ್ಣುವಿನ ಅತಿ ಸಂತೋಷದಾಯಕವಾದ ಆ ಚರಿತ್ರವನ್ನೇ ಹೇಳುವೆನು ಕೇಳು.

೪. ಆ ಸಂಗ್ರಾಮಮಧ್ಯದಲ್ಲಿ ಆಕಾಶವಾಣಿಯನ್ನು ಆಲಿಸಿ ಪ್ರಭುವಾದ ಶಿವನು ಪ್ರೇರಿಸಿದಂತೆ ಆ ಹರಿಯು ಶಂಖಚೂಡನ ಕವಚವನ್ನು ಬ್ರಾಹ್ಮಣರೂಪದಿಂದ ಉಪಾಯವಾಗಿ ತೆಗೆದುಕೊಂಡನಷ್ಟೆ ?

೫. ಅನಂತರ ತನ್ನ ಮಾಯೆಯಿಂದ ಆ ಹರಿಯು, ಶಂಖಚೂಡನ ರೂಪವನ್ನು ಧರಿಸಿ ಅವನ ಮಡದಿಯಾದ ತುಲಸಿಯ ಮನೆಗೆ ಬಂದನು.

೬. ಆ ಚೆಲುವೆಯು, ತಾನು ಯುದ್ಧದಲ್ಲಿ ಜಯಿಸಿ ಬಂದೆನೆಂದು ತಿಳಿಯುವಂತೆ ಆಕೆಯ ಮನೆಯ ಬಾಗಿಲಿನಲ್ಲಿ ಇಟ್ಟಿದ್ದ ನಗಾರಿಯನ್ನು ಗಟ್ಟಿಯಾಗಿ ಬಾರಿಸಿದನು.

೭. ಆ ಸಾಧ್ವಿಯು. ಆ ವಿಜಯಧ್ವನಿಯನ್ನು ಕೇಳುತ್ತಲೇ ಪರಮಸಂತೋಷಭರಿತಳಾಗಿ, ಬಹು ಕುತೂಹಲದಿಂದ ಕಿಟಕಿಯ ಮುಖಾಂತರ ರಾಜಮಾರ್ಗವನ್ನು ನೋಡಿದಳು.

ಬ್ರಾಹ್ಮಣೇಭ್ಯೋ ಧನಂ ದತ್ವಾ ಕಾರಯಾಮಾಸ ಮಂಗಲಂ ।
ದ್ರುತಂ ಚಕಾರ ಶೃಂಗಾರಂ ಜ್ಞಾತ್ವಾಯಾತಂ ನಿಜಂ ಪತಿಂ ॥ ೮ ॥

ಅವರುಹ್ಯ ರಥಾದ್ವಿಷ್ಣುಸ್ತದ್ದೇವ್ಯಾ ಭವನಂ ಯಯೌ ।
ಶಂಖಚೂಡಸ್ವರೂಪಃ ಸ ಮಾಯಾವೀ ದೇವಕಾರ್ಯಕೃತ್ ॥ ೯ ॥

ದೃಷ್ಟ್ವಾ ತಂ ಚ ಪುರಃ ಪ್ರಾಪ್ತಂ ಸ್ವಕಾಂತಂ ಸಾ ಮುದಾನ್ವಿತಾ ।
ತತ್ಪಾದೌ ಕ್ಷಾಲಯಾಮಾಸ ನನಾಮ ಚ ರುರೋದ ಚ ॥ ೧೦ ॥

ರತ್ನಸಿಂಹಾಸನೇ ರಮ್ಯೇ ವಾಸಯಾಮಾಸ ಮಂಗಲಂ ।
ತಾಂಬೂಲಂ ಚ ದದೌ ತಸ್ಮೈ ಕರ್ಪೂರಾದಿಸುವಾಸಿತಂ ॥ ೧೧ ॥

ಅದ್ಯ ಮೇ ಸಫಲಂ ಜನ್ಮ ಜೀವನಂ ಸಂಬಭೂವ ಹ ।
ರಣೇ ಗತಂ ಚ ಪ್ರಾಣೇಶಂ ಪಶ್ಯಂತ್ಯಾಶ್ಚ ಪುನರ್ಗೃಹೇ ॥ ೧೨ ॥

---

೮. ಬಳಿಕ ಬ್ರಾಹ್ಮಣರಿಗೆ ಬೇಕಾದಷ್ಟು ಧನವನ್ನು ದಾನಮಾಡಿದಳು. ಮಂಗಲಕಾರ್ಯಗಳನ್ನು ಮಾಡಿಸಿದಳು. ತನ್ನ ಪತಿಯು ಬಂದನೆಂದು ತಿಳಿದು ಬೇಗನೆ ತನ್ನನ್ನು ಸಿಂಗರಿಸಿಕೊಂಡಳು.

೯. ಆ ಮಾಯಾಲೀಲನಾದ ಹರಿಯು, ದೇವಕಾರ್ಯಾರ್ಥವಾಗಿ ಶಂಖಚೂಡನಂತೆಯೇ ಆಕಾರವನ್ನು ಧರಿಸಿ, ರಥದಿಂದ ಇಳಿದು ನೇರವಾಗಿ ಆ ದೇವಿಯ ಮಂದಿರವನ್ನೇ ಹೊಕ್ಕನು.

೧೦. ಆ ತುಲಸಿಯು ತನ್ನ ಕಾಂತನು ತನ್ನೆದುರಿಗೆ ಬಂದುದನ್ನು ಕಂಡು, ಪರಮಸಂತೋಷವನ್ನು ತಾಳಿ ಆತನ ಪಾದಗಳನ್ನು ತೊಳೆದು ನಮಸ್ಕಾರಮಾಡಿದಳು. ಅಪರಿಮಿತವಾದ ಹರ್ಷೋದ್ರೇಕದಿಂದ ಅತ್ತುಬಿಟ್ಟಳು.

೧೧. ಬಳಿಕ ಆತನ ಕೈಹಿಡಿದು, ಮನೋಹರವಾದ ರತ್ನಖಚಿತವಾದ ಸಿಂಹಾಸನದಲ್ಲಿ ಕೂರಿಸಿದಳು. ಪಚ್ಚಕರ್ಪೂರ ಮೊದಲಾದುವುಗಳಿಂದ ಘಮಘಮಿಸುತ್ತಿರುವ ಶುಭಕರವಾದ ತಾಂಬೂಲವನ್ನು ಆವನಿಗೆ ಇತ್ತಳು.

೧೨. ಯುದ್ಧಕ್ಕೆ ಹೋಗಿ ಯಾವೊಂದು ಕುಂದೂ ಇಲ್ಲದಂತೆ ಹಿಂದಿರುಗಿ ಮನೆಗೆ ಬಂದ ಪ್ರಾಣಕಾಂತನನ್ನು ಕಂಡ ನನ್ನ ಜನ್ಮವು ಇಂದು ಸಫಲವಾಯಿತು. ನನ್ನ ಜೀವಿತವು ಸಾರ್ಥಕವಾಯಿತು.

ಇತ್ಯುಕ್ತ್ವಾ ಸಕಟಾಕ್ಷಂ ಸಾ ನಿರೀಕ್ಷ್ಯ ಸಗಿರಂ ಮುದಾ ।
ಪಪ್ರಚ್ಛ ರಣವೃತ್ತಾಂತಂ ಕಾಂತಂ ಮಧುರಯಾ ಗಿರಾ ॥ ೧೩ ॥

॥ ತುಲಸ್ಯುವಾಚ ॥

ಅಸಂಖ್ಯವಿಶ್ವಸಂಹರ್ತಾ ಸ ದೇವಪ್ರವರಃ ಪ್ರಭುಃ ।
ಯಸ್ಯಾಜ್ಞಾವರ್ತಿನೋ ದೇವಾ ವಿಷ್ಣುಬ್ರಹ್ಮಾದಯಸ್ಸದಾ ॥ ೧೪ ॥

ತ್ರಿದೇವಜನಕಸ್ಸೋಽತ್ರ ತ್ರಿಗುಣಾತ್ಮಾ ಚ ನಿರ್ಗುಣಃ ।
ಭಕ್ತೇಚ್ಛಯಾ ಚ ಸಗುಣೋ ಹರಿಬ್ರಹ್ಮಪ್ರವರ್ತಕಃ ॥ ೧೫ ॥

ಕುಬೇರಸ್ಯ ಪ್ರಾರ್ಥನಯಾ ಗುಣರೂಪಧರೋ ಹರಃ ।
ಕೈಲಾಸವಾಸೀ ಗಣಪಃ ಪರಬ್ರಹ್ಮ ಸತಾಂ ಗತಿಃ ॥ ೧೬ ॥

ಯಸ್ಯೈಕಪಲಮಾತ್ರೇಣ ಕೋಟಿಬ್ರಹ್ಮಾಂಡಸಂಕ್ಷಯಃ ।
ವಿಷ್ಣುಬ್ರಹ್ಮಾದಯೋಽತೀತಾ ಬಹವಃ ಕ್ಷಣಮಾತ್ರತಃ ॥ ೧೭ ॥

---

೧೩. ಹೀಗೆಂದು ನುಡಿದು, ಬಹು ಸಂತೋಷದಿಂದ ತನ್ನ ಪ್ರಾಣಕಾಂತನ ಮುಖವನ್ನು ಕಡೆಗಣ್ಣಿನಿಂದ ನೋಡುತ್ತಾ, ಇಂಪಾದ ಮಾತಿನಿಂದ ಯುದ್ಧದ ಸಂಗತಿಯನ್ನು ಕೇಳಿದಳು.

೧೪. ಆ ಶಿವನು, ಸಂಖ್ಯಾತೀತವಾದ ಈ ಪ್ರಪಂಚವನ್ನು ಸಂಹರಿಸುವವನೂ ದೇವತೆಗಳಲ್ಲೆಲ್ಲಾ ಶ್ರೇಷ್ಠನೂ, ಪ್ರಭುವೂ, ಆದವನಲ್ಲವೇ ? ಆತನ ಆಜ್ಞೆಯನ್ನು ಎಂದೆಂದಿಂಗೂ ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳು ಪಾಲಿಸುವರಲ್ಲವೇ ?

೧೫. ಆತನು ಕಾರಣಪುರುಷರಾದ ಬ್ರಹ್ಮವಿಷ್ಣುಶಿವರಿಗೆ ಕಾರಣನು. ಅವನು ತ್ರಿಗುಣಸ್ವರೂಪನು, ವಸ್ತುತಃ ನಿರ್ಗುಣನು. ಹರಿಯನ್ನೂ, ಬ್ರಹ್ಮನನ್ನೂ ಪ್ರೇರೇಪಿಸುವ ಆ ಪರಮಪುರುಷನು ಭಕ್ತರ ಇಚ್ಛೆಯಂತೆ, ಗುಣಸಹಿತನಾಗುವನು.

೧೬. ಆ ಹರನು, ಕುಬೇರನ ಪ್ರಾರ್ಥನೆಯಂತೆ ಗುಣವನ್ನೂ ರೂಪವನ್ನೂ ಧರಿಸಿ, ಕೈಲಾಸಪರ್ವತದಲ್ಲಿ ತನ್ನ ಗಣಗಳೊಡನೆ ವಾಸವಾಗಿರುವನು. ಆತನು ಪರಮಪುರುಷನು. ಸತ್ಪುರುಷರಿಗೆ ಏಕಮಾತ್ರ ಶರಣ್ಯನು.

೧೭. ಯಾವಾತನ ಒಂದು ಕ್ಷಣವಾಗುವುದರಲ್ಲಿ ಕೋಟಿ ಬ್ರಹ್ಮಾಂಡಗಳ ಪ್ರಳಯಗಳು ಆಗಿಹೋಗುವುವೋ, ಅನೇಕಮಂದಿ ವಿಷ್ಣುಬ್ರಹ್ಮ ಮೊದಲಾದವರು ಆಗಿಹೋದರೋ;

ಕರ್ತುಂ ಸಾರ್ಧಂ ಚ ತೇನೈವ ಸಮರಂ ತ್ವಂ ಗತಃ ಪ್ರಭೋ ।
ಕಥಂ ಬಭೂವ ಸಂಗ್ರಾಮಸ್ತೇನ ದೇವಸಹಾಯಿನಾ ॥ ೧೮ ॥

ಕುಶಲೀ ತ್ವಮಿಹಾಯಾತಸ್ತಂ ಜಿತ್ವಾ ಪರಮೇಶ್ವರಂ ।
ಕಥಂ ಬಭೂವ ವಿಜಯಸ್ತವ ಬ್ರೂಹಿ ತದೇವ ಮೇ ॥ ೧೯ ॥

ಶ್ರುತ್ವೇತ್ಥಂ ತುಲಸೀವಾಕ್ಯಂ ಸ ವಿಹಸ್ಯ ರಮಾಪತಿಃ ।
ಶಂಖಚೂಡರೂಪಧರಸ್ತಾಮುವಾಚಾಮೃತಂ ವಚಃ ॥ ೨೦ ॥

॥ ಭಗವಾನುವಾಚ ॥

ಯದಾಹಂ ರಣಭೂಮೌ ಚ ಜಗಾಮ ಸಮರಪ್ರಿಯಃ ।
ಕೋಲಾಹಲೋ ಮಹಾನ್ಜಾತಃ ಪ್ರವೃತ್ತೋಽಭೂನ್ಮಹಾರಣಃ ॥ ೨೧ ॥

ದೇವದಾನವಯೋರ್ಯುದ್ಧಂ ಸಂಬಭೂವ ಜಯೈಷಿಣೋಃ ।
ದೈತ್ಯಾಃ ಪರಾಜಿತಾಸ್ತತ್ರ ನಿರ್ಜರೈರ್ಬಲಗರ್ವಿತೈಃ ॥ ೨೨ ॥

---

೧೮. ಅಂತಹ ಶಿವನ ಸಂಗಡಲೇ ಯುದ್ಧಮಾಡಲು ಪ್ರಭೂ, ನೀನು ಹೊರಟಿ ಯಲ್ಲವೇ ? ದೇವತೆಗಳ ಬೆಂಬಲವಿದ್ದ ಆ ಶಿವನೊಡನೆ ಯುದ್ಧವು ಎಂತು ಜರುಗಿತು ?

೧೯. ಆ ಪರಮೇಶ್ವರನನ್ನು ಜಯಿಸಿ ಕ್ಷೇಮವಾಗಿ ನೀನೀಗ ಹಿಂದಿರುಗಿರುವೆ. ನಿನಗೆ ಯಾವ ರೀತಿ ಗೆಲುವು ಉಂಟಾಯಿತು ? ಅದನ್ನೇ ನನಗೆ ತಿಳಿಯಪಡಿಸು ಎಂದಳು.

೨೦. ಈರೀತಿಯಾಗಿ ತುಲಸಿಯು ಕೇಳಿದ ಮಾತನ್ನು ಕೇಳಿ ಶಂಖಚೂಡ ರೂಪಧಾರಿಯಾದ ಆ ಹರಿಯು ಮಧುರವಾದ ಈ ಮಾತನ್ನಾಡಿದನು.

೨೧. ಸಾಹಸಪ್ರಿಯನಾದ ನಾನು ಯಾವಾಗ ಯುದ್ಧಭೂಮಿಗೆ ಕಾಲಿಟ್ಟೆನೋ ಆ ತಕ್ಷಣವೇ ಮಹಾಕೋಲಾಹಲವುಂಟಾಯಿತು. ಬಳಿಕ ಯುದ್ಧವು ಬಹು ಜೋರಾಗಿ ನಡೆಯಿತು.

೨೨. ಪರಸ್ಪರ ಜಯಾಪೇಕ್ಷಿಗಳಾದ ಆ ದೇವತೆಗಳೂ ದಾನವರೂ ಯುದ್ಧಕ್ಕೆ ಮೊದಲುಮಾಡಿದರು. ಬಲದಿಂದ ಗರ್ವಿತರಾದ ಆ ದೇವತೆಗಳು ದೈತ್ಯರನ್ನು ಸೋಲಿಸಿಬಿಟ್ಟರು.

ತದಾಹಂ ಸಮರಂ ತತ್ರಾಕಾರ್ಷಂ ದೇವೈರ್ಬಲೋತ್ಕಟೈಃ ।
ಪರಾಜಿತಾಶ್ಚ ತೇ ದೇವಾಶ್ಶಂಕರಂ ಶರಣಂ ಯಯುಃ ॥ ೨೩ ॥

ರುದ್ರೋऽಪಿ ತತ್ಸಹಾಯಾರ್ಥಮಾಜಗಾಮ ರಣಂ ಪ್ರತಿ ।
ತೇನಾಹಂ ವೈ ಚಿರಂ ಕಾಲಮಯೌತ್ಸ ಬಲದರ್ಪಿತಃ ॥ ೨೪ ॥

ಆವಯೋಸ್ಸಮರಃ ಕಾಂತೇ ಪೂರ್ಣಮಬ್ದಂ ಬಭೂವ ಹ ।
ನಾಶೋ ಬಭೂವ ಸರ್ವೇಷಾಮಸುರಾಣಾಂ ಚ ಕಾಮಿನಿ ॥ ೨೫ ॥

ಪ್ರೀತಿಂ ಚ ಕಾರಯಾಮಾಸ ಬ್ರಹ್ಮಾ ಚ ಸ್ವಯಮಾವಯೋಃ ।
ದೇವಾನಾಮಧಿಕಾರಾಶ್ಚ ಪ್ರದತ್ತಾ ಬ್ರಹ್ಮಶಾಸನಾತ್ ॥ ೨೬ ॥

ಮಯಾಗತಂ ಸ್ವಭವನಂ ಶಿವಲೋಕಂ ಶಿವೋ ಗತಃ ।
ಸರ್ವಸ್ವಾಸ್ಥ್ಯಮತೀವಾಪ ದೂರೀಭೂತೋ ಹ್ಯುಪದ್ರವಃ ॥ ೨೭ ॥

---

೨೩. ಆಗ ನಾನು ಬಲಾಢ್ಯರಾದ ಆ ದೇವತೆಗಳೊಡನೆ ಕಾಳಗಕ್ಕೆ ನಿಂತೆನು. ಆಗ ದೇವತೆಗಳೆಲ್ಲರೂ ಸೋತುಹೋಗಿ ಶಿವನನ್ನು ಮರೆಹೊಕ್ಕರು.

೨೪. ಆ ದೇವತೆಗಳ ಸಹಾಯಕ್ಕೆಂದು ಶಿವನೂ ಯುದ್ಧಕ್ಕೆ ಬಂದನು. ಬಲದಿಂದ ಕೊಬ್ಬಿದ ನಾನೂ ಸಹ ಅವನೊಡನೆ ಬಹುಕಾಲ ಯುದ್ಧಮಾಡಿದೆನು.

೨೫. ಎಲೌ ಕಾಂತೆ, ನನಗೂ ಆ ಶಿವನಿಗೂ ನೂರು ವರ್ಷಗಳು ಅವಿಚ್ಛಿನ್ನವಾಗಿ ಯುದ್ಧವು ಜರುಗಿತು. ಎಲೌ ಕಾಮಿನಿಯೇ, ಆಗ ಅಸುರರೆಲ್ಲರೂ ನಾಶಹೊಂದಿದರು.

೨೬. ಆಗ ಬ್ರಹ್ಮನು ಬಂದು ನಮ್ಮಿರ್ವರಿಗೂ ಸಂಧಿಯನ್ನು ಮಾಡಿಸಿ ಸಖ್ಯವನ್ನುಂಟುಮಾಡಿದನು. ಆ ಬ್ರಹ್ಮನ ಅಪ್ಪಣೆಯಂತೆ ದೇವತೆಗಳ ಅಧಿಕಾರಗಳೆಲ್ಲವನ್ನೂ ಅವರಿಗೆ ಕೊಟ್ಟುಬಿಟ್ಟೆನು.

೨೭. ನಾನು ನನ್ನ ಮನೆಗೆ ಬಂದೆನು. ಶಿವಲೋಕಕ್ಕೆ ಶಿವನು ಹಿಂದಿರುಗಿದನು. ಎಲ್ಲವೂ ನೆಮ್ಮದಿಯನ್ನು ತಾಳಿತು. ಕೋಟಲೆಗಳೆಲ್ಲವೂ ದೂರವಾದುವು.

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಜಗತಾಂ ನಾಥಃ ಶಯನಂ ಚ ಚಕಾರ ಹ ।
ರೇಮೇ ರಮಾಪತಿಸ್ತತ್ರ ರಮಯಾ ಸ ತಯಾ ಮುದಾ ॥ ೨೮ ॥

ಸಾ ಸಾಧ್ವೀ ಸುಖಸಂಭಾವಾಕರ್ಷಣಸ್ಯ ವ್ಯತಿಕ್ರಮಾತ್ ।
ಸರ್ವಂ ವಿತರ್ಕಯಾಮಾಸ ಕಸ್ತ್ವಮೇವೇತ್ಯುವಾಚ ಸಾ ॥ ೨೯ ॥

॥ ತುಲಸ್ಯುವಾಚ ॥

ಕೋ ವಾ ತ್ವಂ ವದ ಮಾಮಾಶು ಭುಕ್ತಾಹಂ ಮಾಯಯಾ ತ್ವಯಾ ।
ದೂರೀಕೃತಂ ಯತ್ಸತೀತ್ವಮಥ ತ್ವಾಂ ವೈ ಶಪಾಮ್ಯಹಂ ॥ ೩೦ ॥

॥ ಸನತ್ಕುಮಾರ ಉವಾಚ ॥

ತುಲಸೀವಚನಂ ಶ್ರುತ್ವಾ ಹರಿಶ್ಶಾಪಭಯೇನ ಚ ।
ದಧಾರ ಲೀಲಯಾ ಬ್ರಹ್ಮನ್ಸ್ವಮೂರ್ತಿಂ ಸುಮನೋಹರಾಂ ॥ ೩೧ ॥

---

೨೮. ಓ ವ್ಯಾಸ, ಈರೀತಿ ನುಡಿದು, ಆ ರಮಾಪತಿಯು, ಆ ಚೆಲುವೆಯೊಡನೆ ಶಯನ ಗೃಹವನ್ನು ಸೇರಿ ಬಹು ಸಂತೋಷದಿಂದ ವಿಹರಿಸಿದನು.

೨೯. ಆ ಸಾಧುಶೀಲೆಯು, ಸುಖದ ರೀತಿಯಲ್ಲಿಯೂ, ಭಾವ ಚತುರತೆಯಲ್ಲಿಯೂ, ಆಕರ್ಷಣಾದಿಕ್ರಮದಲ್ಲಿಯೂ ಏರುಪೇರಾಗಿ ಇರುವುದನ್ನು ಕಂಡು, ಅದೆಲ್ಲವನ್ನೂ ತೀವ್ರವಾಗಿ ವಿಮರ್ಶಿಸಿ, ನೀನಾರೆಂದು ಅವನನ್ನು ಕೇಳಿದಳು.

೩೦. ನೀನು ಯಾರು ? ಬೇಗನೆ ನನಗೆ ಹೇಳು. ನೀನು ನನ್ನನ್ನು ಮೋಸದಿಂದ ಉಪಭೋಗಿಸಿದೆಯಲ್ಲವೆ ? ನನ್ನ ಸತೀತ್ವವನ್ನು ಹಾಳುಮಾಡಿದೆಯಲ್ಲವೇ ? ಇಗೋ ನಿನ್ನನ್ನು ಶಪಿಸುವೆನು ಎಂದಳು.

೩೧. ಓ ವ್ಯಾಸ, ಇಂತು ತುಲಸಿಯು ಕೆರಳಿ ಹೇಳಿದ ಮಾತನ್ನು ಕೇಳಿ ಹರಿಯು ಶಾಪಕ್ಕೆ ಹೆದರಿ ಮನೋಹರವಾದ ತನ್ನ ಶರೀರವನ್ನು ಧರಿಸಿದನು.

ತದ್ದೃಷ್ಟ್ವಾ ತುಲಸೀ ರೂಪಂ ಜ್ಞಾತ್ವಾ ವಿಷ್ಣುಂ ತು ಚಿಹ್ನತಃ ।
ಪಾತಿವ್ರತ್ಯಪರಿತ್ಯಾಗಾತ್ ಕ್ರುದ್ಧಾ ಸಾ ತಮುವಾಚ ಹ ॥ ೩೨ ॥

॥ ತುಲಸ್ಯುವಾಚ ॥

ಹೇ ವಿಷ್ಣೋ ತೇ ದಯಾ ನಾಸ್ತಿ ಪಾಷಾಣಸದೃಶಂ ಮನಃ ।
ಪತಿಧರ್ಮಸ್ಯ ಭಂಗೇನ ಮಮ ಸ್ವಾಮೀ ಹತಃ ಖಲು ॥ ೩೩ ॥

ಪಾಷಾಣಸದೃಶಸ್ತ್ವಂ ಚ ದಯಾಹೀನೋ ಯತಃ ಖಲಃ ।
ತಸ್ಮಾತ್ತ್ವಪಾಷಾಣರೂಪಸ್ತ್ವಂ ಮಚ್ಛಾಪೇನ ಭವಾಧುನಾ ॥ ೩೪ ॥

ಯೇ ವದಂತಿ ದಯಾಸಿಂಧುಂ ತ್ವಾಂ ಭ್ರಾಂತಾಸ್ತೇ ನ ಸಂಶಯಃ ।
ಭಕ್ತೋ ವಿನಾಪರಾಧೇನ ಪರಾರ್ಥೇ ಚ ಕಥಂ ಹತಃ ॥ ೩೫ ॥

---

೩೨. ಆ ಆಕಾರವನ್ನು ನೋಡಿದೊಡನೆಯೇ ತುಲಸಿಯು ಆ ಚಿಹ್ನೆಗಳಿಂದ ವಿಷ್ಣುವೆಂದು ಅರಿತು ತನ್ನ ಪಾತಿವ್ರತ್ಯವು ಭಂಗವಾದುದಕ್ಕಾಗಿ ಮಹಾಕೋಪವನ್ನು ತಾಳಿ ಅವನನ್ನು ಇಂತೆಂದಳು.

೩೩. ಎಲೈ ವಿಷ್ಣುವೇ, ನಿನಗೆ ಸ್ವಲ್ಪವೂ ದಯೆಯೇ ಇಲ್ಲವೇ ? ನಿನ್ನ ಮನಸ್ಸು ಕಲ್ಲಿನಂತೆ ಕಠಿಣವಾದುದು. ನನ್ನ ಪಾತಿವ್ರತ್ಯಧರ್ಮವನ್ನು ಭಂಗಗೊಳಿಸಿ ದುದರಿಂದಲ್ಲವೇ ನನ್ನ ಸ್ವಾಮಿಯು ಹತನಾದನು.

೩೪. ನೀನು ಕಲ್ಲಿನಂತೆ ಕಠಿಣನೂ ದಯಹೀನನೂ ಆದ ನೀಚಾತ್ಮನು. ಆದುದರಿಂದ ನನ್ನ ಶಾಪದಿಂದ ಈಗಲೇ ನೀನು ಕಲ್ಲಿನಂತೆ ಆಗಿಹೋಗು.

೩೫. ಯಾರು ನಿನ್ನನ್ನು ಕರುಣಾಸಾಗರನೆನ್ನುವರೋ ಅವರೆಲ್ಲರೂ ಖಂಡಿತ ವಾಗಿಯೂ ಭ್ರಾಂತರಾದವರೇ ಸರಿ. ನಿನ್ನ ಭಕ್ತನಾದ ನನ್ನ ಸ್ವಾಮಿಯು ಯಾವ ಅಪರಾಧವೂ ಇಲ್ಲದೇಇದ್ದರೂ ಮತ್ತೊಬ್ಬರಿಗೋಸ್ಕರವಾಗಿಯೇ ಆಗಲಿ ಹೇಗೆ ಕೊಲ್ಲಲ್ಪಟ್ಟನು ?

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ತುಲಸೀ ಸಾ ವೈ ಶಂಖಚೂಡಪ್ರಿಯಾ ಸತೀ ।
ಭೃಶಂ ರುರೋದ ಶೋಕಾರ್ತಾ ವಿಲಲಾಪ ಭೃಶಂ ಮುಹುಃ ॥ ೩೬ ॥

ತತಸ್ತಾಂ ರುದತೀಂ ದೃಷ್ಟ್ವಾ ಸ ವಿಷ್ಣುಃ ಪರಮೇಶ್ವರಃ ।
ಸಸ್ಮಾರ ಶಂಕರಂ ದೇವಂ ಯೇನ ಸಂಮೋಹಿತಂ ಜಗತ್ ॥ ೩೭ ॥

ತತಃ ಪ್ರಾದುರ್ಬಭೂವಾಥ ಶಂಕರೋ ಭಕ್ತವತ್ಸಲಃ ।
ಹರಿಣಾ ಪ್ರಣತಸ್ತಾಸೀತ್ಸಂಸ್ತುತೋ ವಿನಯೇನ ಸಃ ॥ ೩೮ ॥

ಶೋಕಾಕುಲಂ ಹರಿಂ ದೃಷ್ಟ್ವಾ ವಿಲಪಂತೀಂ ಚ ತತ್ಪ್ರಿಯಾಂ ।
ನಯೇನ ಬೋಧಯಾಮಾಸ ತಂ ತಾಂ ಕೃಪಣವತ್ಸಲಾಂ ॥ ೩೯ ॥

---

೩೬. ಈರೀತಿಯಾಗಿ ನುಡಿದು ಶಂಖಚೂಡನ ಪ್ರಿಯೆಯೂ ಮಹಾಸಾಧ್ವಿಯೂ ಆದ ಆ ತುಲಸಿಯು ಮಹಾದುಃಖಿತಳಾಗಿ ಪುನಃಪುನಃ ಬಹುವಾಗಿ ಅತ್ತಳು.

೩೭. ಬಳಿಕ ಆ ಹರಿಯು ಅಳುತ್ತಿರುವ ತುಲಸಿಯನ್ನು ಕಂಡು ಏನು ಮಾಡಲೂ ತೋರದೆ ಈ ಜಗತ್ತೆಲ್ಲವೂ ಯಾವನ ಮಾಯೆಗೆ ಸಿಲುಕಿ ಮೋಹಿತವಾಗಿರುವುದೋ ಆ ಶಂಕರನನ್ನು ಮನಸ್ಸಿನಲ್ಲಿ ನೆನೆದನು.

೩೮. ಬಳಿಕ ಭಕ್ತವತ್ಸಲನಾದ ಶಿವನು ಅಲ್ಲಿ ಪ್ರತ್ಯಕ್ಷನಾದನು. ಆಗ ವಿಷ್ಣುವು ವಿನಯದಿಂದ ಶಿವನಿಗೆ ನಮಸ್ಕರಿಸಿ ಸ್ತೋತ್ರಮಾಡಿದನು.

೩೯. ಹರಿಯು ವ್ಯಥಿತನಾಗಿರುವುದನ್ನೂ, ಅವನ ಪ್ರೀತಿಗೆ ಪಾತ್ರಳಾದ ತುಲಸಿಯು ಅಳುತ್ತಿರುವುದನ್ನೂ ಕಂಡು ಆ ಹರಿಯನ್ನೂ, ನಿರ್ವಾಹವಿಲ್ಲದೆ ಇಂತು ಭಂಗಕ್ಕೆ ಒಳಗಾದ ಆ ತುಲಸಿಯನ್ನೂ ಈರೀತಿ ನೀತಿಮಾರ್ಗದಿಂದ ಬೋಧಿಸಿದನು.

॥ ಶಂಕರ ಉವಾಚ ॥

ಮಾ ರೋದೀಸ್ತುಲಸಿ ತ್ವಂ ಹಿ ಭುಂಕ್ತೇ ಕರ್ಮಫಲಂ ಜನಃ ।
ಸುಖದುಃಖದೋ ನ ಕೋऽಪ್ಯಸ್ತಿ ಸಂಸಾರೇ ಕರ್ಮಸಾಗರೇ ॥ ೪೦ ॥

ಪ್ರಸ್ತುತಂ ಶೃಣು ನಿರ್ದುಃಖಂ ಶೃಣೋತು ಸುಮನಾ ಹರಿಃ ।
ದ್ವಯೋಸ್ಸುಖಕರಂ ಯತ್ತದ್ಬ್ರವೀಮಿ ಸುಖಹೇತವೇ ॥ ೪೧ ॥

ತಪಸ್ತ್ವಯಾ ಕೃತಂ ಭದ್ರೇ ತಸ್ಯೈವ ತಪಸಃ ಫಲಂ ।
ತದನ್ಯಥಾ ಕಥಂ ಸ್ಯಾದ್ವೈ ಜಾತಂ ತ್ವಯಿ ತಥಾ ಚ ತತ್ ॥ ೪೨ ॥

ಇದಂ ಶರೀರಂ ತ್ಯಕ್ತ್ವಾ ಚ ದಿವ್ಯದೇಹಂ ವಿಧಾಯ ಚ ।
ರಮಸ್ವ ಹರಿಣಾ ನಿತ್ಯಂ ರಮಯಾ ಸದೃಶೀ ಭವ ॥ ೪೩ ॥

ತವೇಯಂ ತನುರುತ್ಸೃಷ್ಟಾ ನದೀರೂಪಾ ಭವೇದಿಹ ।
ಭಾರತೇ ಪುಣ್ಯರೂಪಾ ಸಾ ಗಂಡಕೀತಿ ಚ ವಿಶ್ರುತಾ ॥ ೪೪ ॥

---

೪೦. ಎಲೌ ತುಲಸಿಯೇ, ನೀನಳಬೇಡ. ತಾನು ಮಾಡಿದ ಕರ್ಮದ ಫಲವನ್ನು ಮನುಷ್ಯನು ಅನುಭವಿಸುವನು. ಈ ಕರ್ಮಗಳಿಗೆ ಸಾಗರಪ್ರಾಯವಾದ ಈ ಸಂಸಾರದಲ್ಲಿ ಸುಖವುಂಟುಮಾಡುವವನೂ, ದುಃಖವನ್ನು ಕೊಡುವವನೂ ಯಾರೂ ಇಲ್ಲ.

೪೧. ನೀನು ವ್ಯಥೆಪಡದೆ ಪ್ರಕೃತ ಈ ಮಾತನ್ನು ಕೇಳು. ಶ್ರೀಹರಿಯೂ ಸಂತೋಷಗೊಂಡ ಮನಸ್ಸಿನಿಂದ ಇದನ್ನು ಕೇಳಲಿ. ನಿಮ್ಮೀರ್ವರಿಗೂ ಸುಖವುಂಟಾಗುವಂತಹ ಮಾತನ್ನು ಹೇಳುವೆನು.

೪೨. ಎಲೌ ಮಂಗಳಾಂಗಿ, ನೀನು ಹಿಂದೆ ತಪಸ್ಸುಮಾಡಿದೆಯಷ್ಟೆ. ಆ ತಪಸ್ಸಿನ ಫಲವೇ ಇದು. ಆ ತಪಃಫಲವು ಹೇಗೆತಾನೇ ಬೇರೆಯಾದೀತು ? ಆದುದರಿಂದಲೇ ನಿನಗೆ ಈರೀತಿ ಘಟಿಸಿತು.

೪೩. ನೀನು ಈ ಶರೀರವನ್ನು ತ್ಯಜಿಸಿ ದಿವ್ಯವಾದ ದೇಹವನ್ನು ಪಡೆದು ಈ ಶ್ರೀಹರಿಯೊಡನೆ ಯಾವಾಗಲೂ ವಿಹರಿಸುತ್ತಾ ಲಕ್ಷ್ಮಿಯಂತೆ ಮೆರೆಯುತ್ತಿರು.

೪೪. ನೀನು ಈ ದೇಹವನ್ನು ವಿಸರ್ಜಿಸಿದಮೇಲೆ ಈ ದೇಹವು ನದಿಯರೂಪವನ್ನು ತಾಳುವುದು. ಈ ಭಾರತದಲ್ಲೆಲ್ಲಾ ಅದುಪುಣ್ಯಪ್ರದವಾದುದಾಗಿ ಗಂಡಕಿಯೆಂದು ಪ್ರಖ್ಯಾತವಾಗುವುದು.

ಕಿಯತ್ಕಾಲಂ ಮಹಾದೇವಿ ದೇವಪೂಜನಸಾಧನೇ ।
ಪ್ರಧಾನರೂಪಾ ತುಲಸೀ ಭವಿಷ್ಯತಿ ವರೇಣ ಮೇ ॥ ೪೫ ॥

ಸ್ವರ್ಗೇ ಮರ್ತ್ಯೇ ಚ ಪಾತಾಲೇ ತಿಷ್ಠ ತ್ವಂ ಹರಿಸನ್ನಿಧೌ ।
ಭವ ತ್ವಂ ತುಲಸೀವೃಕ್ಷೋ ವರಾ ಪುಷ್ಪೇಷು ಸುಂದರೀ ॥ ೪೬ ॥

ವೃಕ್ಷಾಧಿಷ್ಠಾತೃದೇವೀ ತ್ವಂ ವೈಕುಂಠೇ ದಿವ್ಯರೂಪಿಣೀ ।
ಸಾರ್ಧಂ ರಹಸಿ ಹರಿಣಾ ನಿತ್ಯಂ ಕ್ರೀಡಾಂ ಕರಿಷ್ಯಸಿ ॥ ೪೭ ॥

ನದ್ಯಧಿಷ್ಠಾತೃದೇವೀ ಯಾ ಭಾರತೇ ಬಹುಪುಣ್ಯದಾ ।
ಲವಣೋದಸ್ಯ ಪತ್ನೀ ಸಾ ಹರ್ಯಂಶಸ್ಯ ಭವಿಷ್ಯಸಿ ॥ ೪೮ ॥

ಹರಿರ್ವೈ ಶೈಲರೂಪೀ ಚ ಗಂಡಕೀತೀರಸನ್ನಿಧೌ ।
ಸಂಕರಿಷ್ಯತ್ಯಧಿಷ್ಠಾನಂ ಭಾರತೇ ತವ ಶಾಪತಃ ॥ ೪೯ ॥

---

೪೫. ಎಲೌ ಮಹಾದೇವಿಯೇ, ಬಹುವರ್ಷಗಳಕಾಲ ದೇವರನ್ನು ಪೂಜಿಸುವ ಸಾಮಗ್ರಿಗಳಲ್ಲಿ ನನ್ನ ವರದಿಂದ ತುಲಸಿಯು ಪ್ರಧಾನತೆಯನ್ನು ವಹಿಸುವುದು.

೪೬. ನೀನು ಸ್ವರ್ಗದಲ್ಲಿಯೂ ಭೂಮಿಯಲ್ಲಿಯೂ ಪಾತಾಲದಲ್ಲಿಯೂ ಎಲ್ಲೆಲ್ಲಿಯೂ ಹರಿಯ ಸನ್ನಿಧಿಯಲ್ಲೇ ಇರುವವಳಾಗು. ನೀನು ಪುಷ್ಪಗಳಲ್ಲೆಲ್ಲಾ ಶ್ರೇಷ್ಠವಾದ ತುಲಸೀಪುಷ್ಪವನ್ನು ಬಿಡುವ ಗಿಡವಾಗು.

೪೭. ಆ ತುಲಸೀವೃಕ್ಷದ ಅಧಿಷ್ಠಾತ್ರಿಯಾದ ದೇವಿಯಾದ ನೀನು ವೈಕುಂಠದಲ್ಲಿ ದಿವ್ಯರೂಪದಿಂದ ಇದ್ದು ಯಾವಾಗಲೂ ಹರಿಯೊಡನೆ ರಹಸ್ಯವಾಗಿ ಲೀಲೆಗಳಲ್ಲಿ ತೊಡಗಿ ವಿಹರಿಸುವೆ.

೪೮. ಆ ನದಿಗೆ ಅಧಿಷ್ಠಾತ್ರಿಯಾದ ದೇವಿಯು ಭಾರತದಲ್ಲೆಲ್ಲಾ ಬಹು ಪುಣ್ಯಪ್ರದಳಾಗಿ ಈ ಭೂಮಿಯಲ್ಲಿ ಶ್ರೀಹರಿಯ ಅಂಶಭೂತನಾದ ಲವಣಸಮುದ್ರದ ಪತ್ನಿಯಾಗುವಳು.

೪೯. ಈ ಹರಿಯೂ ಸಹ ನಿನ್ನ ಶಾಪದಂತೆ ಭಾರತಭೂಮಿಯಲ್ಲಿ ಗಂಡಕೀನದಿಯತೀರದಲ್ಲಿ ಶೈಲರೂಪವಾಗಿ ಅವತರಿಸುವನು.

ತತ್ರ ಕೋಟ್ಯಾಶ್ಚ ಕೀಟಾಶ್ಚ ತೀಕ್ಷ್ಣದಂಷ್ಟ್ರಾ ಭಯಂಕರಾಃ ।
ತಚ್ಛಿತ್ವಾ ಕುಹರೇ ಚಕ್ರಂ ಕರಿಷ್ಯಂತಿ ತದೀಯಕಂ ॥ ೫೦ ॥

ಶಾಲಗ್ರಮಶಿಲಾ ಸಾ ಹಿ ತಚ್ಛೇದಾದತಿಪುಣ್ಯದಾ ।
ಲಕ್ಷ್ಮೀನಾರಾಯಣಾಖ್ಯಾದಿಶ್ಚಕ್ರಭೇದಾದ್ಭವಿಷ್ಯತಿ ॥ ೫೧ ॥

ಶಾಲಗ್ರಾಮಶಿಲಾ ವಿಷ್ಣೋಃ ತುಲಸ್ಯಾಸ್ತವ ಸಂಗಮಃ ।
ಸದಾ ಸಾದೃಶ್ಯರೂಪಾ ಯಾ ಬಹುಪುಣ್ಯವವಿರ್ದ್ಧಿನೀ ॥ ೫೨ ॥

ತುಲಸೀಪತ್ರವಿಚ್ಛೇದಂ ಶಾಲಗ್ರಾಮೇ ಕರೋತಿ ಯಃ ।
ತಸ್ಯ ಜನ್ಮಾಂತರೇ ಭದ್ರೇ ಸ್ತ್ರೀವಿಚ್ಛೇದೋ ಭವಿಷ್ಯತಿ ॥ ೫೩ ॥

ತುಲಸೀಪತ್ರವಿಚ್ಛೇಡಂ ಶಂಖಂ ಹಿತ್ವಾ ಕರೋತಿ ಯಃ ।
ಭಾರ್ಯಾಹೀನೋ ಭವೇತ್ಸೋಽಪಿ ರೋಗೀ ಸ್ಯಾತ್ಸಪ್ತಜನ್ಮಸು ॥ ೫೪ ॥

---

೫೦. ಅಲ್ಲಿ ಅನೇಕ ಕೋಟಿಸಂಖ್ಯಾತವಾದ ಉಗ್ರವಾದ ಕೋರೆದಾಡೆಗಳುಳ್ಳ ಭಯಂಕರವಾದ ಕೀಟಗಳು ಆ ಪರ್ವತದ ಬಂಡೆಗಳನ್ನು ಭೇದಿಸಿ ಕೊರೆಕೊರೆದು ಆ ರಂಧ್ರದಲ್ಲಿ ಆತನ ಚಕ್ರಚಿಹ್ನವನ್ನು ಮಾಡುವುವು.

೫೧. ಆ ಕೀಟಗಳಿಂದ ಕೊರೆಯಲ್ಪಟ್ಟಿರುವುದರಿಂದಲೇ ಆ ಶಾಲಗ್ರಾಮ ಶಿಲೆಯು ಮಹಾಪುಣ್ಯಪ್ರದವೆನಿಸಿತು. ಅವುಗಳಲ್ಲಿರುವ ಚಕ್ರಗಳ ವ್ಯತ್ಯಾಸದಿಂದ ಲಕ್ಷ್ಮೀನಾರಾಯಣ ಮುಂತಾದ ಹೆಸರುಗಳು ಉಂಟಾಗುವುವು.

೫೨. ಎಲೈ ವಿಷ್ಣುವೇ, ನಿನ್ನ ಸ್ವರೂಪವಾದ ಈ ಶಾಲಗ್ರಾಮಶಿಲೆಗೂ ತುಲಸಿ ದಲಕ್ಕೂ ಯಾವ ನಿರಂತರಸಮಾಗಮವುಂಟೋ ಅದು ಬಹಳ ಪುಣ್ಯವನ್ನು ಉಂಟು ಮಾಡುವಂಥದು.

೫೩. ಎಲೌ ಭದ್ರೆ, ಯಾವನು ಶಾಲಗ್ರಾಮಶಿಲೆಯಿಂದ ತುಲಸೀದಲವನ್ನು ಬೇರ್ಪಡಿಸುವನೋ ಅಥವಾ ಶಾಲಗ್ರಾಮದಮೇಲೆ ತುಲಸೀದಳವನ್ನಿಡಲಾರನೋ ಅವನಿಗೆ ಜನ್ಮಾಂತರದಲ್ಲಿ ಸ್ತ್ರೀವಿಯೋಗವುಂಟಾಗುವುದು.

೫೪. ಯಾವನು ಶಂಖದಿಂದಲೂ ತುಲಸೀಪತ್ರವನ್ನು ಬೇರ್ಪಡಿಸುವನೋ ಆ ಮನುಜನೂ ಸಹ ಭಾರ್ಯಾಹೀನನಾಗುವನಲ್ಲದೆ ಏಳು ಜನ್ಮಗಳಲ್ಲಿಯೂ ರೋಗ ದಿಂದ ನರಳುವನು.

ಶಾಲಗ್ರಾಮಶ್ಚ ತುಲಸೀ ಶಂಖಂ ಚೈಕತ್ರ ಏವ ಹಿ ।
ಯೋ ರಕ್ಷತಿ ಮಹಾಜ್ಞಾನೀ ಸ ಭವೇಚ್ಛ್ರೀಹರಿಪ್ರಿಯಃ ॥ ೫೫ ॥

ತ್ವಂ ಪ್ರಿಯಃ ಶಂಖಚೂಡಸ್ಯ ಚೈಕಮನ್ವಂತರಾವಧಿ ।
ಶಂಖೇನ ಸಾರ್ಧಂ ತ್ವದ್ಭೇದಃ ಕೇವಲಂ ದುಃಖದಸ್ತವ ॥ ೫೬ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಶಂಕರಸ್ತತ್ರ ಮಾಹಾತ್ಮ್ಯಮೂಚಿವಾಂಸ್ತದಾ ।
ಶಾಲಗ್ರಾಮಶಿಲಾಯಾಶ್ಚ ತುಲಸ್ಯಾ ಬಹುಪುಣ್ಯದಂ ॥ ೫೭ ॥

ತತಶ್ಚಾಂತರ್ಹಿತೋ ಭೂತ್ವಾ ಮೋದಯಿತ್ವಾ ಹರಿಂ ಚ ತಾಂ ।
ಜಗಾಮ ಸ್ವಾಲಯಂ ಶಂಭುಃ ಶರ್ಮದೋ ಹಿ ಸದಾ ಸತಾಂ ॥ ೫೮ ॥

ಇತಿ ಶ್ರುತ್ವಾ ವಚಶ್ಶಂಭೋಃ ಪ್ರಸನ್ನಾ ತು ತುಲಸ್ಯಭೂತ್ ।
ತದ್ದೇಹಂ ಚ ಪರಿತ್ಯಜ್ಯ ದಿವ್ಯರೂಪಾ ಬಭೂವ ಹ ॥ ೫೯ ॥

---

೫೫. ಯಾವನು ಶಾಲಗ್ರಾಮವನ್ನೂ ತುಲಸಿಯನ್ನೂ ಶಂಖವನ್ನೂ ಒಂದೇ ಕಡೆಯಿಟ್ಟು ಕಾಪಾಡುವನೋ ಆ ಮಹಾಜ್ಞಾನಿಯು ಶ್ರೀಹರಿಗೆ ಪ್ರೀತಿಪಾತ್ರನಾಗುವನು.

೫೬. ನೀನು ಒಂದು ಮನ್ವಂತರದವರೆಗೂ ಶಂಖಚೂಡನಿಗೆ ಪ್ರಿಯಳಾಗಿದ್ದವಳು. ಆದುದರಿಂದ ಶಂಖದಿಂದ ನಿನ್ನನ್ನು ಬೇರ್ಪಡಿಸಲು ನಿನಗೆ ಬಹುದುಃಖವುಂಟಾಗುವುದು.

೫೭. ಓ ವ್ಯಾಸ, ಶಂಕರನು ಈರೀತಿಯಾಗಿ ಹೇಳಿ ಶಾಲಗ್ರಾಮಶಿಲೆಯ ಮತ್ತು ತುಳಸಿಯ ಬಹುಪುಣ್ಯಪ್ರದವಾದ ಮಾಹಾತ್ಮ್ಯವನ್ನು ತಿಳಿಸಿದನು.

೫೮. ಹೀಗೆ ಆ ಹರಿಯನ್ನೂ ತುಲಸಿಯನ್ನೂ ಸಂತೋಷಪಡಿಸಿ, ಸತ್ಪುರುಷರಿಗೆ ಯಾವಾಗಲೂ ಸುಖವನ್ನು ಕರುಣಿಸುವ ಆ ಶಿವನು ಅಲ್ಲಿಂದ ಅಂತರ್ಧಾನಹೊಂದಿ ತನ್ನ ಮನೆಗೆ ತೆರಳಿದನು.

೫೯. ಈರೀತಿ ಶಿವನು ಹೇಳಿದ ಮಾತನ್ನು ಕೇಳಿ ತುಲಸಿಯೂ ಸಹ ಸಂತುಷ್ಟಳಾಗಿ ಆ ದೇಹವನ್ನು ನೀಗಿಬಿಟ್ಟು ದಿವ್ಯವಾದ ರೂಪವನ್ನು ಪಡೆದಳು.

ಪ್ರಜಗಾಮ ತಯಾ ಸಾರ್ಧಂ ವೈಕುಂಠಂ ಕಮಲಾಪತಿಃ ।
ಸದ್ಯಸ್ತದ್ದೇಹಜಾತಾ ಚ ಬಭೂವ ಗಂಡಕೀ ನದೀ ॥ ೬೦ ॥

ಶೈಲೋಽಭೂದಚ್ಯುತಸ್ಸೋಽಪಿ ತತ್ತೀರೇ ಪುಣ್ಯದೋ ನೃಣಾಂ ।
ಕುರ್ವಂತಿ ತತ್ರ ಕೀಟಾಶ್ಚ ಛಿದ್ರಂ ಬಹುವಿಧಂ ಮುನೇ ॥ ೬೧ ॥

ಜಲೇ ಪತಂತಿ ಯಾಸ್ತತ್ರ ಶಿಲಾಸ್ತಾಸ್ತ್ವತಿಪುಣ್ಯದಾಃ ।
ಸ್ಥಲಸ್ಥಾಃ ಪಿಂಗಲಾ ಜ್ಞೇಯಾಶ್ಚೋಪತಾಪಾಯ ಚೈವ ಹಿ ॥ ೬೨ ॥

ಇತ್యేವಂ ಕಥಿತಂ ಸರ್ವಂ ತವ ಪ್ರಶ್ನಾನುಸಾರತಃ ।
ಚರಿತಂ ಪುಣ್ಯದಂ ಶಂಭೋಃ ಸರ್ವಕಾಮಪ್ರದಂ ನೃಣಾಂ ॥ ೬೩ ॥

---

೬೦. ಆ ದಿವ್ಯರೂಪಧಾರಿಣಿಯಾದ ತುಲಸಿಯೊಡನೆ ಶ್ರೀಹರಿಯು ವೈಕುಂಠಕ್ಕೆ ತೆರಳಿದನು. ತುಲಸಿಯು ಬಿಟ್ಟೊಡನೆಯೇ ಆ ದೇಹದಿಂದ ಗಂಡಕೀನದಿಯು ಉದ್ಭವಿಸಿತು.

೬೧. ಎಲೈ ಮುನಿಯೇ, ಆ ಹರಿಯೂ ಸಹ ಆ ಗಂಡಕೀನದಿಯ ತೀರದಲ್ಲಿ ಮಾನವರ ಪಾಪವನ್ನು ಪರಿಹರಿಸುತ್ತಾ ಶೈಲರೂಪವಾಗಿ ನಿಂತನು. ಅಲ್ಲಿ ಹುಳುಗಳು ನಾನಾವಿಧವಾಗಿ ರಂಧ್ರವನ್ನು ಕೊರೆಯುವುವು.

೬೨. ಆರೀತಿ ಹುಳುಗಳು ಕೊರೆಯಲು ಯಾವ ಶಿಲೆಗಳು ನೀರಲ್ಲಿ ಬೀಳುವುವೋ ಅವುಗಳು ಬಹಳ ಪುಣ್ಯದಾಯಕವಾದವುಗಳು. ನೀರಲ್ಲಿ ಬೀಳದೆ ನೆಲದ ಮೇಲೆಯೇ ಇರುವ ಶಿಲೆಗಳು ಪಿಂಗಳಾ ಎಂಬ ಹೆಸರನ್ನು ಪಡೆಯುವುವು. ಅವುಗಳು ಬಹುವಿಧವಾದ ಕ್ಲೇಶಗಳನ್ನುಂಟುಮಾಡುವುವು.

೬೩. ಓ ವ್ಯಾಸ, ಈರೀತಿಯಾಗಿ ನಿನ್ನ ಪ್ರಶ್ನೆಗಳೆಲ್ಲದರ ಅನುಸಾರವಾಗಿ ಆ ಶಂಭುವಿನ ಪುಣ್ಯಚರಿತ್ರವೆಲ್ಲವನ್ನೂ ತಿಳಿಸಿದುದಾಯಿತು. ಈ ಚರಿತ್ರೆಯು ಮಾನವರ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವುದು.

ಆಖ್ಯಾನಮಿದಮಾಖ್ಯಾತಂ ವಿಷ್ಣುಮಾಹಾತ್ಮ್ಯಮಿಶ್ರಿತಂ ।
ಭುಕ್ತಿಮುಕ್ತಿಪ್ರದಂ ಪುಣ್ಯಂ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೬೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪಂಚಮೇ ಯುದ್ಧಖಂಡೇ ಶಂಖಚೂಡವಧೋಪಾಖ್ಯಾನೇ ತುಲಸೀ ಶಾಪವರ್ಣನಂ ನಾಮೈಕಚತ್ವಾರಿಂಶೋಽಧ್ಯಾಯಃ

---

೬೪. ವಿಷ್ಣುಮಾಹಾತ್ಮ್ಯದಿಂದ ಕೂಡಿದುದೂ, ಭೋಗವನ್ನೂ ಮೋಕ್ಷವನ್ನೂ ಕೊಡುವುದೂ ಪುಣ್ಯಕರವೂ ಆದ ಈ ಉಪಾಖ್ಯಾನವನ್ನು ನಿನಗೆ ಹೇಳಿದೆನು. ಮತ್ತೆ ಇನ್ನೇನು ಕೇಳಬೇಕೆಂದಿರುವೆ ? ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ ಶಂಖಚೂಡ ವಧೋಪಾಖ್ಯಾನವೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ದ್ವಿಚತ್ವಾರಿಂಶೋಽಧ್ಯಾಯಃ

॥ ನಾರದ ಉವಾಚ ॥

ಶಂಖಚೂಡವಧಂ ಶ್ರುತ್ವಾ ಚರಿತಂ ಶಶಿಮೌಲಿನಃ ।
ಅಹಂ ತೃಪ್ತೋಽಸ್ಮಿ ನೋ ತ್ವತ್ತೋಽಮೃತಂ ಪೀತ್ವಾ ಯಥಾ ಜನಃ ॥ ೧ ॥

ಬ್ರಹ್ಮನ್ಯಚ್ಚರಿತಂ ತಸ್ಯ ಮಹೇಶಸ್ಯ ಮಹಾತ್ಮನಃ ।
ಮಾಯಾಮಾಶ್ರಿತ್ಯ ಸಲ್ಲೀಲಾಂ ಕುರ್ವತೋ ಭಕ್ತಮೋದದಾಂ ॥ ೨ ॥

---

## ನಲವತ್ತೆರಡನೆಯ ಅಧ್ಯಾಯವು.

೧-೨. ನಾರದನು ಬ್ರಹ್ಮನನ್ನು ಕುರಿತು, ಓ ಬ್ರಹ್ಮದೇವ, ಶಂಖಚೂಡನ ಸಂಹಾರವೆಂಬ ಶಿವನ ಚರಿತವನ್ನು ನಾನು ಕೇಳಿದುದಾಯಿತು. ಆದರೆ ಅಮೃತವನ್ನು ಕುಡಿಯುತ್ತಿದ್ದರೂ ನರನಿಗೆ ಎಂತು ತೃಪ್ತಿಯುಂಟಾಗದೋ ಆ ರೀತಿಯಾಗಿ ನನಗೂ ತೃಪ್ತಿಯಾಗಲಿಲ್ಲ. ಮಾಯೆಯನ್ನಾಶ್ರಯಿಸಿ, ಭಕ್ತರಿಗೆ ಸಂತೋಷವನ್ನುಂಟು ಮಾಡುವ ನಾನಾವಿಧವಾದ ಲೀಲೆಗಳಲ್ಲಿ ತೊಡಗಿರುವ ಆ ಮಹಾತ್ಮನಾದ ಮಹೇಶ್ವರನ ಮತ್ತಾವುದಾದರೂ ಚರಿತ್ರವೊಂದನ್ನು ನನಗೆ ತಿಳಿಯಪಡಿಸು ಎಂದು ಕೇಳಲು,

॥ ಬ್ರಹ್ಮೋವಾಚ ॥
ಜಲಂಧರವಧಂ ಶ್ರುತ್ವಾ ವ್ಯಾಸಸ್ಸತ್ಯವತೀಸುತಃ ।
ಅಪ್ರಾಕ್ಷೀದಿಮಮೇವಾರ್ಥಂ ಬ್ರಹ್ಮಪುತ್ರಂ ಮುನೀಶ್ವರಂ ॥ ೩ ॥

ಸನತ್ಕುಮಾರಃ ಪ್ರೋವಾಚ ವ್ಯಾಸಂ ಸತ್ಯವತೀಸುತಂ ।
ಸುಪ್ರಶಂಸ್ಯ ಮಹೇಶಸ್ಯ ಚರಿತಂ ಮಂಗಲಾಯನಂ ॥ ೪ ॥

॥ ಸನತ್ಕುಮಾರ ಉವಾಚ ॥
ಶೃಣು ವ್ಯಾಸ ಮಹೇಶಸ್ಯ ಚರಿತಂ ಮಂಗಲಾಯನಂ ।
ಯಥಾನ್ಧಕೋ ಗಾಣಪತ್ಯಂ ಪ್ರಾಪ ಶಂಭೋಃ ಪರಾತ್ಮನಃ ॥ ೫ ॥

ಕೃತ್ವಾ ಪರಮಸಂಗ್ರಾಮಂ ತೇನ ಪೂರ್ವಂ ಮುನೀಶ್ವರ ।
ಪ್ರಸಾದ್ಯ ತಂ ಮಹೇಶಾನಂ ಸತ್ತ್ವಭಾವಾತ್ಪುನಃ ಪುನಃ ॥ ೬ ॥

---

೩. ಆ ಚತುರ್ಮುಖನು ಆ ನಾರದನಿಗೆ ಇಂತೆಂದು ತಿಳಿಸಿದನು. ಓ ನಾರದ, ಜಲಂಧರ ವೃತ್ತಾಂತವನ್ನು ಕೇಳಿ ಸತ್ಯವತೀ ಸುತನಾದ ವ್ಯಾಸನು, ಮುನಿಶ್ರೇಷ್ಠನೂ, ಬ್ರಹ್ಮಪುತ್ರನೂ ಆದ ಸನತ್ಕುಮಾರನನ್ನು ಕುರಿತು, ಇದೇರೀತಿ ಯಾಗಿಯೇ ಪ್ರಶ್ನಿಸಿದನು.

೪. ಆಗ ಸನತ್ಕುಮಾರನು, ವ್ಯಾಸಮಹರ್ಷಿಗೆ ಒಳ್ಳೆಯ ಪ್ರಶಂಸೆಗೆ ಪಾತ್ರ ವಾದುದೂ, ಮಂಗಳಗಳಿಗೆ ಮಹಾಮಾರ್ಗಸ್ವರೂಪವೂ ಆದ ಶಿವಚರಿತ್ರವನ್ನು ತಿಳಿಯ ಪಡಿಸಿದನು. ಅದನ್ನೇ ನಿನಗೆ ತಿಳಿಸುವೆನು.

೫. ಓ ವ್ಯಾಸ, ಮಂಗಲಕ್ಕೆ ಮೂಲವಾದ ಆ ಮಹೇಶನ ಚರಿತ್ರವನ್ನು ಹೇಳುವೆನು ಕೇಳು. ಅಂಧಕನೆಂಬ ಅಸುರನು, ಪರಮಪುರುಷನಾದ ಆ ಶಂಭುವಿನ ಗಣಾಧಿಪತ್ಯವನ್ನು ಪಡೆದ ವೃತ್ತಾಂತವನ್ನೀಗ ಹೇಳುವೆನು.

೬. ಓ ಮುನಿಶ್ರೇಷ್ಠ, ಆ ಅಂಧಕಾಸುರನು, ಮೊದಲು ಶಿವನೊಡನೆ ಬಹು ಘೋರವಾದ ಯುದ್ಧವನ್ನು ಮಾಡಿದನು. ಬಳಿಕ ತನ್ನ ರಾಗದ್ವೇಷಗಳನ್ನು ಬಿಟ್ಟು, ಸಾತ್ತ್ವಿಕತೆಯಿಂದ ಪ್ರೇರಿತನಾಗಿ ಮತ್ತೆ ಮತ್ತೆ ಶಿವನನ್ನು ಒಲಿಸಿ ಕೊನೆಗೆ ಆತನ ಪ್ರೀತಿಗೆ ಪಾತ್ರನಾಗಿ ಗಣಾಧಿಪತ್ಯವನ್ನು ಪಡೆದನು.

ಮಾಹಾತ್ಮ್ಯಮುದ್ಭುತಂ ಶಂಭೋಶ್ಶರಣಾಗತರಕ್ಷಿಣಃ ।
ಸುಭಕ್ತವತ್ಸಲಸ್ಯೈವ ನಾನಾಲೀಲಾವಿಹಾರಿಣಃ ॥ ೭ ॥

ಮಾಹಾತ್ಮ್ಯಮೇತದ್ವೃಷಭಧ್ವಜಸ್ಯ
ಶ್ರುತ್ವಾ ಮುನಿರ್ಗಂಧವತೀಸುತೋ ಹಿ ।
ವಚೋ ಮಹಾರ್ಥಂ ಪ್ರಣಿಪತ್ಯ ಭಕ್ತ್ಯಾ
ಹ್ಯುವಾಚ ತಂ ಬ್ರಹ್ಮಸುತಂ ಮುನೀಂದ್ರಂ ॥ ೮ ॥

॥ ವ್ಯಾಸ ಉವಾಚ ॥

ಕೋ ಹ್ಯಂಧಕೋ ವೈ ಭಗವಾನ್ಮುನೀಶ
ಕಸ್ಯಾನ್ವಯೇ ವೀರ್ಯವತಃ ಪೃಥಿವ್ಯಾಂ ।
ಜಾತೋ ಮಹಾತ್ಮಾ ಬಲವಾನ್ಪ್ರಧಾನಃ
ಕಿಮಾತ್ಮಕಃ ಕಸ್ಯ ಸುತೋಽಂಧಕಶ್ಚ ॥ ೯ ॥

ಏತತ್ಸಮಸ್ತಂ ಸರಹಸ್ಯಮದ್ಯ
ಬ್ರವೀಹಿ ಮೇ ಬ್ರಹ್ಮಸುತ ಪ್ರಸಾದಾತ್ ।

---

೭. ಮರೆಹೊಕ್ಕವರನ್ನು ಬೆಂಬಿಡದೆ ಸಂರಕ್ಷಿಸುವವನೂ, ಭಕ್ತವತ್ಸಲನೂ ನಾನಾವಿಧವಾದ ಲೀಲೆಗಳನ್ನು ತೋರುವುದರಲ್ಲಿ ವಿಶಾರದನೂ ಆದ ಆ ಶಿವನ ಮಾಹಾತ್ಮ್ಯವು ಅತ್ಯಾಶ್ಚರ್ಯಕರವಾದುದು.

೮. ವೃಷಭಧ್ವಜನಾದ ಶಿವನ ಈ ಮಾಹಾತ್ಮ್ಯವನ್ನು ಕೇಳಿ ಸತ್ಯವತೀಸುತನಾದ ಆ ವ್ಯಾಸನು, ಬ್ರಹ್ಮಮಾನಸಪುತ್ರನಾದ ಸನತ್ಕುಮಾರನನ್ನು ಭಕ್ತಿಯಿಂದ ನಮಸ್ಕರಿಸಿ, ಅರ್ಥವತ್ತಾದ ಈ ಮಾತನ್ನು ನುಡಿದನು.

೯. ಎಲೈ ಪೂಜ್ಯನಾದ ಮುನೀಂದ್ರನೇ, ಆ ಅಂಧಕನೆಂಬುವನು ಯಾರು ? ಮಹಾಬಲಾಢ್ಯನೂ, ಮಹಾತ್ಮನೂ, ಆದ ಆತನು ಈ ಭೂಮಿಯಲ್ಲಿ ಯಾವ ವೀರಾಗ್ರಣಿಯ ವಂಶದಲ್ಲಿ ಉದಯಿಸಿದನು ? ಅವನು ಯಾರು ? ಯಾರ ಮಗನು ?

೧೦. ಓ ಬ್ರಹ್ಮಪುತ್ರ, ನನ್ನ ಮೇಲೆ ಅನುಗ್ರಹವಿಟ್ಟು, ಇದೆಲ್ಲ ವಿಷಯವನ್ನೂ, ಅದರ ರಹಸ್ಯಗಳೊಡನೆ, ನನಗೆ ತಿಳಿಸು. ನೀನು ಮಹಾಪ್ರಾಜ್ಞನೂ,

ಸ್ಕಂದಾನ್ಮಯಾ ವೈ ವಿದಿತಂ ಹಿ ಸಮ್ಯ-
ಙ್ಮಹೇಶಪುತ್ರಾದಮಿತಾವಬೋಧಾತ್ ॥ ೧೦ ॥

ಗಾಣಪತ್ಯಂ ಕಥಂ ಪ್ರಾಪ ಶಂಭೋಃ ಪರಮತೇಜಸಃ ।
ಸೋಽಂಧಕೋ ಧನ್ಯ ಏವಾತಿ ಯೋ ಬಭೂವ ಗಣೇಶ್ವರಃ ॥ ೧೧ ॥

॥ ಬ್ರಹ್ಮೋವಾಚ ॥

ವ್ಯಾಸಸ್ಯ ಚೈತದ್ವಚನಂ ನಿಶಮ್ಯ
ಪ್ರೋವಾಚ ಸ ಬ್ರಹ್ಮಸುತಸ್ತದಾನೀಂ ।
ಮಹೇಶ್ವರೋತೀಃ ಪರಮಾಪ್ತಲಕ್ಷ್ಮೀ-
ಸ್ಸಂಶ್ರೋತುಕಾಮಂ ಜನಕಂ ಶುಕಸ್ಯ ॥ ೧೨ ॥

॥ ಸನತ್ಕುಮಾರ ಉವಾಚ ॥

ಪುರಾಗತೋ ಭಕ್ತಕೃಪಾಕರೋಽಸೌ-
ಕೈಲಾಸತಶ್ಶೈಲಸುತಾಗಣಾಢ್ಯಃ ।
ವಿಹರ್ತುಕಾಮಃ ಕಿಲ ಕಾಶಿಕಾಂ ವೈ
ಸ್ವಶೈಲತೋ ನಿರ್ಜರಚಕ್ರವರ್ತೀ ॥ ೧೩ ॥

---

ಮಹೇಶಪುತ್ರನೂ, ಆದ ಕುಮಾರಸ್ವಾಮಿಯಿಂದ ಈ ವಿಷಯಗಳೆಲ್ಲವನ್ನೂ ತಿಳಿದಿರುವಿಯಲ್ಲವೇ ?

೧೧. ಆ ಅಂಧಕನು, ಮಹಾತೇಜಶ್ಶಾಲಿಯಾದ ಆ ಶಿವನ ಗಣಾಧಿಪತ್ಯವನ್ನು ಪಡೆದುದೆಂತು ? ಹಾಗೆ ಶಿವನ ಬಳಿ ಗಣಾಧಿಪತ್ಯವನ್ನು ಪಡೆದ ಆ ಅಂಧಕನೇ ಬಹಳ ಧನ್ಯನೆಂದು ಭಾವಿಸುವೆನು ಎಂದನು.

೧೨. ಓ ನಾರದ, ಈರೀತಿ ವ್ಯಾಸನು ನುಡಿದುದನ್ನು ಕೇಳಿ, ಆ ಸನತ್ಕುಮಾರನು ಆ ಶುಕತಾತನನ್ನು ಕುರಿತು, ಶಾಶ್ವತವಾದ ಸಂಪತ್ತುಗಳನ್ನು ಕರುಣಿಸುವ ಆ ಮಹೇಶ್ವರನ ಮಹಿಮೆಗಳನ್ನು ವಿವರಿಸತೊಡಗಿದನು.

೧೩. ಓ ವ್ಯಾಸ, ಹಿಂದೆ ಒಂದು ಸಲ ದೇವತೆಗಳಿಗೆಲ್ಲರಿಗೂ ಪ್ರಭುವೂ, ಭಕ್ತರ ವಿಷಯದಲ್ಲಿ ಮರುಕವುಳ್ಳವನೂ ಆದ ಆ ಪರಶಿವನು, ಪಾರ್ವತಿಯೊಡನೆಯೂ ಗಣಗಳೊಡನೆಯೂ ಕೂಡಿ ವಿಹಾರಾರ್ಥವಾಗಿ ತನ್ನ ನಿವಾಸವಾದ ಕೈಲಾಸಪರ್ವತವನ್ನು ಬಿಟ್ಟು ಕಾಶಿಗೆ ತೆರಳಿದನು.

ಸ ರಾಜಧಾನೀಂ ಚ ವಿಧಾಯ ತಸ್ಯಾಂ
ಚಕ್ರೇ ಪರೋತೀಃ ಸುಖದಾ ಜನಾನಾಂ ।
ತದ್ರಕ್ಷಕಂ ಭೈರವನಾಮವೀರಂ.
ಕೃತ್ವಾ ಸಮಂ ಶೈಲಜಯಾ ಹಿ ಬಹ್ವೀಃ ॥ ೧೪ ॥

ಸ ಏಕದಾ ಮಂದರನಾಮಧೇಯಂ
ಗತೋ ನಗಂ ತದ್ವರಸುಪ್ರಭಾವಾತ್ ।
ತತ್ರಾಪಿ ನಾನಾಗಣವೀರಮುಖ್ಯೈ-
ಶ್ಶಿವಾಸಮೇತೋ ವಿಜಹಾರ ಭೂರಿ ॥ ೧೫ ॥

ಪೂರ್ವೇ ದಿಶೋ ಮಂದರಶೈಲಸಂಸ್ಥಾ
ಕಪರ್ದಿನಶ್ಚಂಡಪರಾಕ್ರಮಸ್ಯ ।
ಚಕ್ರೇ ತತೋ ನೇತ್ರನಿಮೀಲನಂ ತು-
ಸಾ ಪಾರ್ವತೀ ನರ್ಮಯುತಂ ಸಲೀಲಂ ॥ ೧೬ ॥

---

೧೪. ಬಳಿಕ ಶಿವನು ತನಗೆ ಆ ಕಾಶಿಯನ್ನೇ ರಾಜಧಾನಿಯನ್ನಾಗಿಮಾಡಿಕೊಂಡು ಭೈರವನೆಂಬ ವೀರನನ್ನು ಆ ನಗರದ ಸಂರಕ್ಷಕನ್ನಾಗಿ ನೇಮಿಸಿದನು. ಅನಂತರ ಆ ರಾಜಧಾನಿಯಲ್ಲಿ ಪಾರ್ವತಿಯೊಡನೆ ನಾನಾವಿಧವೂ, ಪ್ರಜೆಗಳಿಗೆ ಸುಖದಾಯಕವೂ ಆದ ಆತ್ಯಾಶ್ಚರ್ಯಕರವಾದ ಮಹಿಮೆಗಳನ್ನು ತೋರತೊಡಗಿದನು.

೧೫. ಹೀಗಿರಲು ಒಂದು ಸಲ ಶಂಕರನು ಮಂದರಪರ್ವತದ ಸೊಬಗಿಗೆ ಮನಸೋತು, ಅಲ್ಲಿಗೆ ತೆರಳಿ ಪ್ರಮುಖರಾದ ತನ್ನ ಪ್ರಮಥವೀರರೊಡನೆಯೂ, ತನ್ನ ಪ್ರಿಯಪತ್ನಿಯಾದ ಪಾರ್ವತಿಯೊಂದಿಗೂ ಬಹುವಾಗಿ ಅಲ್ಲಿ ವಿಹರಿಸುತ್ತಿದ್ದನು.

೧೬. ಒಂದಾನೊಂದು ದಿನ ಆ ಮಂದರಪರ್ವತದ ಮೂಡಣದೆಸೆಯಲ್ಲಿ ಕುಳಿತಿರುವಾಗ ಪಾರ್ವತಿಯು ವಿನೋದಕ್ಕಾಗಿ ಮಹಾಪರಾಕ್ರಮಶಾಲಿಯಾದ ಆ ಶಿವನ ಕಣ್ಣುಗಳನ್ನು ಮುಚ್ಚಿದಳು.

ಪ್ರವಾಲಹೇಮಾಬ್ಜಧೃತಪ್ರಭಾಭ್ಯಾಂ
ಕರಾಂಬುಜಾಭ್ಯಾಂ ನಿಮಿಮೀಲ ನೇತ್ರೇ ।
ಹರಸ್ಯ ನೇತ್ರೇಷು ನಿಮೀಲಿತೇಷು
ಕ್ಷಣೇನ ಜಾತಃ ಸುಮಹಾಂಧಕಾರಃ ॥ ೧೭ ॥

ತತ್ಸ್ಪರ್ಶಯೋಗಾಚ್ಚ ಮಹೇಶ್ವರಸ್ಯ
ಕರೌ ಚ ತಸ್ಯಾಃ ಸ್ಖಲಿತಂ ಮದಾಂಭಃ ।
ಶಂಭೋರ್ಲಲಾಟೇ ಕ್ಷಣವಹ್ನಿತಪ್ತೋ
ವಿನಿರ್ಗತೋ ಭೂರಿ ಜಲಸ್ಯ ಬಿಂದುಃ ॥ ೧೮ ॥

ಗರ್ಭೋ ಬಭೂವಾಥ ಕರಾಲವಕ್ತ್ರೋ
ಭಯಂಕರಃ ಕ್ರೋಧಪರಃ ಕೃತಘ್ನಃ ।
ಅಂಧೋ ವಿರೂಪೀ ಜಟಿಲಶ್ಚ ಕೃಷ್ಣೋ
ನರೇತರೋ ವೈಕೃತಿಕಸ್ಸರೋಮಾ ॥ ೧೯ ॥

---

೧೭. ಹವಳದ ನಾಳದಲ್ಲಿ ಬಿಟ್ಟಿರುವ ಚಿನ್ನದ ಕಮಲದಂತೆ ಕಂಗೊಳಿಸು ತ್ತಿರುವ ತನ್ನೆರಡು ಕೈಗಳಿಂದಲೂ, ಆ ಪಾರ್ವತಿಯು ಶಿವನ ಕಣ್ಣುಗಳನ್ನು ಮುಚ್ಚು ತ್ತಲೇ ಒಡನೆಯೇ ಎಲ್ಲೆಲ್ಲಿಯೂ ಕಗ್ಗತ್ತಲೆಯು ಕವಿದುಕೊಂಡುಬಿಟ್ಟಿತು.

೧೮. ಆ ಪಾರ್ವತಿಯ ಕೈಗಳು ಶಿವನನ್ನು ಸೋಂಕಿದೊಡನೆಯೇ, ಅದರ ಪೀಡನದಿಂದ ಶಿವನ ಮುಖದಲ್ಲಿ ಹನಿಗಳು ಮೂಡಿದುವು. ಆ ಹನಿಗಳು ಆತನ ಲಲಾಟಾಗ್ನಿಯ ಸಾಮೀಪ್ಯದಿಂದ ನಸುಬಿಸುಪಾಂತು ಕೆಳಗೆ ಜಾರಿದುವು.

೧೯. ಅವು ಕೆಳಗೆ ಜಾರಿದೊಡನೆಯೇ, ಒಂದು ವಿಕಾರವಾದ ಮನುಷ್ಯಭಿನ್ನ ವಾದ ಶಿಶುವಿನ ರೂಪವನ್ನು ತಳೆದುವು. ಆ ಶಿಶುವಿನ ಮುಖವು ಭಯಂಕರ ವಾಗಿತ್ತು. ಆ ಶಿಶುವನ್ನು ನೋಡಲು ಹೆದರಿಕೆಯಾಗುತ್ತಿತ್ತು. ಅದು ಯಾವಾ ಗಲೂ ಮಹಾಕೋಪದಿಂದ ಕನಲುತ್ತಿದ್ದಿತು. ಅದು ಹುಟ್ಟುವಾಗಲೇ ಕುರುಡಾಗಿ ಹುಟ್ಟಿತ್ತು. ಅಲ್ಲದೆ ಕಪ್ಪಾಗಿ ಜಟೆಗಳನ್ನು ಬಿಟ್ಟು ಮೈಯೆಲ್ಲ ಕೂದಲುಗಳುಳ್ಳುದಾಗಿ ಮಹಾವಿಕಾರವಾದ ರೂಪವನ್ನು ತಳೆದಿತ್ತು.

ಗಾಯನ್ಹಸನ್ಪ್ರರುದನ್ನೃತ್ಯಮಾನೋ
ವಿಲೇಲಿಹಾನೋ ಘರಘೋರಘೋಷಃ ।
ಜಾತೇನ ತೇನಾದ್ಭುತದರ್ಶನೇನ
ಗೌರೀಂ ಭವೋಽಸೌ ಸ್ಮಿತಪೂರ್ವಮಾಹ ॥ ೨೦ ॥

॥ ಶ್ರೀಮಹೇಶ ಉವಾಚ ॥

ನಿಮೀಲ್ಯ ನೇತ್ರಾಣಿ ಕೃತಂ ಚ ಕರ್ಮ
ಬಿಭೇಷಿ ಸ್ಯಾಸ್ಮಾದ್ದಯಿತೇ ಕಥಂ ತ್ವಂ ।
ಗೌರೀ ಹರಾತ್ತದ್ವಚನಂ ನಿಶಮ್ಯ
ವಿಹಸ್ಯಮಾನಾ ಪ್ರಮುಮೋಚ ನೇತ್ರೇ ॥ ೨೧ ॥

ಜಾತೇ ಪ್ರಕಾಶೇ ಸತಿ ಘೋರರೂಪೋ
ಜಾತೋಽಂಧಕಾರಾದಪಿ ನೇತ್ರಹೀನಃ ।
ತಾದೃಗ್ವಿಧಂ ತಂ ಚ ನಿರೀಕ್ಷ್ಯ ಭೂತಂ
ಪಪ್ರಚ್ಛ ಗೌರೀ ಪುರಹಂ ಮಹೇಶಂ ॥ ೨೨ ॥

---

೨೦. ಆ ಶಿಶುವು ಒಮ್ಮೆ ಹಾಡುವುದು, ಒಮ್ಮೆ ನಗುವುದು, ಒಮ್ಮೆ ಅಳುವುದು, ಒಮ್ಮೆ ಕುಣಿಯುವುದು, ಒಮ್ಮೆ ನಾಲಿಗೆಯನ್ನು ಇತ್ತಲಿಂದತ್ತ ಸುತ್ತಲೂ ಹೊರಳಿಸುವುದು, ಒಂದೊಂದು ಸಲ ಭಯಂಕರವಾಗಿ ಗೊರಗೊರಗುಟ್ಟುವುದು. ಈ ರೀತಿಯಾಗಿ ಅತ್ಯಾಶ್ಚರ್ಯಕರವಾಗಿರುವ ಆ ಶಿಶುವು ಹುಟ್ಟಿದುದನ್ನು ಕಂಡು ಶಿವನು ನಗುನಗುತ್ತಾ ಪಾರ್ವತಿಯನ್ನು ಕುರಿತು ಇಂತೆಂದನು.

೨೧. ನೀನು ನನ್ನ ಕಣ್ಣುಗಳನ್ನು ಮುಚ್ಚಿ ಎಂತಹ ಕೆಲಸಮಾಡಿಬಿಟ್ಟೆ? ಹಾಗೆ ಮಾಡಿಯೂ ಬಿಟ್ಟು, ನೀನು ಈಗ ಏತಕ್ಕೆ ಹೆದರುತ್ತಿರುವೆ? ಎಂದು ಶಿವನು ಪ್ರಶ್ನಿಸಲು, ಪಾರ್ವತಿಯು ಆ ಮಾತನ್ನು ಕೇಳಿ, ನಗುತ್ತಾ ಶಿವನ ಕಂಗಳನ್ನು ಮುಚ್ಚಿದ್ದ ತನ್ನ ಕೈಗಳನ್ನು ತೆಗೆದುಬಿಟ್ಟಳು.

೨೨. ಆ ಶಿಶುವು ಬೆಳಕು ಇಲ್ಲದುದರಿಂದ ವಿಕಾರರೂಪವುಳ್ಳುದಾಗಿಯೂ, ಕಗ್ಗತ್ತಲಿನಲ್ಲಿ ಹುಟ್ಟಿದುದರಿಂದ ಕುರುಡಾಗಿಯೂ ಆಯಿತು. ಈರೀತಿ ವಿಕೃತವಾದ ಆ ಮಹಾಭೂತವನ್ನು ನೋಡಿ, ಗೌರಿಯು ತನ್ನ ಪ್ರಿಯನನ್ನು ಕುರಿತು ಇಂತೆಂದಳು.

॥ ಗೌರ್ಯುವಾಚ ॥

ಕೋಽಯಂ ವಿರೂಪೋ ಭಗವನ್ನಿಹ ಜಾತೋ
ನಾವಗ್ರತೋ ಘೋರಭಯಂಕರಶ್ಚ ।
ವದಸ್ವ ಸತ್ಯಂ ಮಮ ಕಿಂ ನಿಮಿತ್ತಂ
ಸೃಷ್ಟೋಽಥ ವಾ ಕೇನ ಚ ಕಸ್ಯ ಪುತ್ರಃ ॥ ೨೩ ॥

॥ ಸನತ್ಕುಮಾರ ಉವಾಚ ॥

ಶ್ರುತ್ವಾ ಹರಸ್ತದ್ವಚನಂ ಪ್ರಿಯಾಯಾ
ಲೀಲಾಕರಸ್ಸೃಷ್ಟಿಕೃತೋಽಂಧರೂಪಾಂ ।
ಲೀಲಾಕರಾಯಾಸ್ತ್ರಿಜಗಜ್ಜನನ್ಯಾ
ವಿಹಸ್ಯ ಕಿಂಚಿದ್ಭಗವಾನುವಾಚ ॥ ೨೪ ॥

॥ ಮಹೇಶ ಉವಾಚ ॥

ಶೃಣ್ವಂಬಿಕೇ ಹ್ಯದ್ಭುತವೃತ್ತಕಾರೇ
ಉತ್ಪನ್ನ ಏಷೋಽದ್ಭುತಚಂಡವೀರ್ಯಃ ।
ನಿಮೀಲಿತೇ ಚಕ್ಷುಷಿ ಮೇ ಭವತ್ಯಾ
ಸ ಸ್ವೇದಜೋ ಮೇಽಂಧಕನಾಮಧೇಯಃ ॥ ೨೫ ॥

---

೨೩. ಹೇ ಭಗವನ್, ಇಲ್ಲಿ ಈಗ ಹುಟ್ಟಿ ನಮ್ಮ ಕಣ್ಣುಮುಂದೆ ನಿಂತಿರುವ ಭಯಂಕರವೂ, ಕ್ರೂರವೂ ಆದ ಈ ಮಹಾಭೂತವು ಯಾವುದು? ನನಗೆ ನಿಜವಾಗಿ ತಿಳಿಸು. ಇವನು ಏತಕ್ಕೆ ಸೃಷ್ಟಿಸಲ್ಪಟ್ಟನು? ಯಾರು ಈತನನ್ನು ಸೃಷ್ಟಿಸಿದರು? ಇವನು ಯಾರ ಮಗ?

೨೪. ಓ ನಾರದ, ಈರೀತಿ ಮೂರು ಲೋಕಗಳಿಗೂ ಜನನಿಯೂ, ನಾನಾ ವಿಧವಾದ ಲೀಲೆಗಳನ್ನು ತೋರುವವಳೂ ಆದ ತನ್ನ ಪ್ರಿಯೆಯು ನುಡಿದ ಮಾತನ್ನು ಕೇಳಿ, ಲೀಲಾವಿಹಾರಿಯಾದ ಆ ಭಗವಂತನು ನಸುನಕ್ಕು ಇಂತು ನುಡಿದನು.

೨೫. ಸೋಜಿಗವಾದಂತಹ ಸಂಗತಿಗಳನ್ನು ಲೀಲಾಮಾತ್ರದಿಂದಲೇ ನಡೆಸಿಬಿಡುವ ಎಲೈ ಪಾರ್ವತಿಯೇ, ಕೇಳು. ನೀನು ವಿನೋದಕ್ಕಾಗಿ ನನ್ನ ಕಣ್ಣನ್ನು ಮುಚ್ಚಲಿಲ್ಲವೇ? ಆಗ ನಿನ್ನ ಕೈಗಳ ಹಿಡಿತದಿಂದ ನನ್ನ ಮುಖದಲ್ಲಿ ಬೆವರು ಹನಿಗಳು ಮೂಡಿದುವಷ್ಟೆ? ಆ ಬೆವರಿನಿಂದ ಅದ್ಭುತವೂ ದುಸ್ಸಹವೂ ಆದ ಬಲವುಳ್ಳ ಅಂಧಕನೆಂಬ ಹೆಸರಿನ ಈ ಶಿಶುವು ಜನಿಸಿದನು.

ತ್ವಂ ಚಾಸ್ಯ ಕರ್ತಾಸ್ಯಯಥಾನುರೂಪಂ
ತ್ವಯಾ ಸ ಸಖ್ಯಾ ದಯಯಾ ಗಣೇಭ್ಯಃ ।
ಸ ರಕ್ಷಿತವ್ಯಸ್ತ್ವಯಿ ತಂ ಹಿ ನೈಕಂ
ವಿಚಾರ್ಯ ಬುದ್ಧ್ಯಾ ಕರಣೀಯಮಾರ್ಯೇ ॥ ೨೬ ॥

॥ ಸನತ್ಕುಮಾರ ಉವಾಚ ॥

ಗೌರೀ ತತೋ ಭೃತ್ಯವಚೋ ನಿಶಮ್ಯ
ಕಾರುಣ್ಯಭಾವಾತ್ಸಹಿತಾ ಸಖೀಭಿಃ ।
ನಾನಾಪ್ರಕಾರೈರ್ಬಹುಭಿರ್ಹ್ಯುಪಾಯೈ-
ಶ್ಚಕಾರ ರಕ್ಷಾಂ ಸ್ವಸುತಸ್ಯ ಯದ್ವತ್ ॥ ೨೭ ॥

ಕಾಲೇಽಥ ತಸ್ಮಿನ್ ಶಿಶಿರೇ ಪ್ರಯಾತೋ
ಹಿರಣ್ಯನೇತ್ರಸ್ತ್ವಥ ಪುತ್ರಕಾಮಃ ।
ಸ್ವಜ್ಯೇಷ್ಠಬಂಧೋಸ್ತನಯಪ್ರತಾನಂ
ಸಂವೀಕ್ಷ್ಯ ಚಾಸೀತ್ಪ್ರಿಯಯಾ ನಿಯುಕ್ತಃ ॥ ೨೮ ॥

---

೨೬. ನೀನು ಈ ಶಿಶುವನ್ನು ಕಾಣಬೇಕಾದ ರೀತಿಯಲ್ಲಿ ಕಾಣುತ್ತಿಲ್ಲ. ಇದು ಸರಿಯಲ್ಲ. ಎಲೌ ಆರ್ಯೆ, ನೀನು ನಿನ್ನಲ್ಲೇ ಆಲೋಚನೆಮಾಡು. ನಿಮ್ಮವರಲ್ಲಿಯೇ ಒಬ್ಬನಂತೆ ಈ ಶಿಶುವನ್ನು ನೀನೂ, ನಿನ್ನ ಸಖಿಯರೂ ಪ್ರಮಥರೂ, ಎಲ್ಲರೂ ಕರುಣೆ ತೋರಿ ಸಂರಕ್ಷಿಸಿರಿ ಎಂದನು.

೨೭. ಓ ವ್ಯಾಸ, ಈರೀತಿ, ತನ್ನ ಪ್ರಿಯನಾದ ಶಿವನು ನುಡಿದುದನ್ನು ಕೇಳಿದ ಬಳಿಕ ಪಾರ್ವತಿಯು ಕನಿಕರದೊಡನೆ, ತನ್ನ ಸಖಿಯರೊಂದಿಗೆ ಬಗೆಬಗೆಯಾದ ಅನೇಕ ಉಪಾಯಗಳಿಂದ ಆ ಮಗುವನ್ನು ತನ್ನ ಮಗನಂತೆ ಕಾಣುತ್ತಾ ಸಾಕಿದಳು.

೨೮. ಹೀಗಿರುವಾಗ ಅತ್ತಲಾಗಿ ಹಿರಣ್ಯಾಕ್ಷನೆಂಬ ದೈತ್ಯನು ತನ್ನ ಅಣ್ಣನಾದ ಹಿರಣ್ಯಕಶಿಪುವಿಗೆ ಅನೇಕ ಮಂದಿ ಮಕ್ಕಳಾದರೂ ತನಗೆ ಇನ್ನೂ ಆಗದಿರಲು, ತನ್ನಂತೆಯೇ ಕೊರಗುತ್ತಿರುವ ಕಾಂತೆಯಿಂದ ಪ್ರೇರಿತನಾಗಿ ತನಗೂ ಮಕ್ಕಳಾಗ ಬೇಕೆಂಬ ಬಯಕೆಯಿಂದ ಕೊರೆಯುತ್ತಿರುವ ಚಳಿಯನ್ನೂ ಗಮನಿಸದೆ ಶಿಶಿರ ಋತುವಿನಲ್ಲಿ,

ಅರಣ್ಯಮಾಶ್ರಿತ್ಯ ತಪಶ್ಚಕಾರಾ-
ಸ್ಸುರಸ್ತದಾ ಕಶ್ಯಪಜಃ ಸುತಾರ್ಥಂ ।
ಕಾಷ್ಠೋಪಮೋಽಸೌ ಜಿತರೋಷದೋಷ-
ಸ್ಸಂದರ್ಶನಾರ್ಥಂ ತು ಮಹೇಶ್ವರಸ್ಯ ॥ ೨೯ ॥

ತುಷ್ಟಃ ಪಿನಾಕೀ ತಪಸಾಸ್ಯ ಸಮ್ಯ-
ಗ್ವರಪ್ರದಾನಾಯ ಯಯೌ ದ್ವಿಜೇಂದ್ರಃ ।
ತತ್ಸ್ಥಾನಮಾಸಾದ್ಯ ವೃಷಧ್ವಜೋಽಸೌ
ಜಗಾದ ದೈತ್ಯಪ್ರವರಂ ಮಹೇಶಃ ॥ ೩೦ ॥

॥ ಮಹೇಶ ಉವಾಚ ॥

ಹೇ ದೈತ್ಯನಾಥ ಕುರು ನೇಂದ್ರಿಯಸಂಘಪಾತಂ
ಕಿಮರ್ಥಮೇತದ್ವ್ರತಮಾಶ್ರಿತಂ ತೇ ।
ಪ್ರಬ್ರೂಹಿ ಕಾಮಂ ವರದೋ ಭವೋಽಹಂ
ಯದಿಚ್ಛಸಿ ತ್ವಂ ಸಕಲಂ ದದಾಮಿ ॥ ೩೧ ॥

---

೨೯. ತನ್ನ ಮನೆಯನ್ನು ಬಿಟ್ಟು ಕಾಡನ್ನು ಸೇರಿ, ತನ್ನ ಧ್ಯೇಯವನ್ನು ಸಾಧಿಸಲು, ಮಹೇಶ್ವರನ ಪ್ರೀತಿಯನ್ನು ಸಂಪಾದಿಸಬೇಕೆಂದು ಎಣಿಸಿ, ಆತನನ್ನು ಸಾಕ್ಷಾತ್ಕರಿಸಲು, ಕೋಪ ಮೊದಲಾದ ಯಾವ ದೋಷಗಳಿಗೂ ಆಸ್ಪದವಿಲ್ಲದಂತೆ ಮನಸ್ಸನ್ನು ಬಿಗಿಹಿಡಿದು, ಮರದ ತುಂಡಿನಂತೆ ನಿಶ್ಚಲವಾಗಿ ನಿಂತು ಘೋರವಾದ ತಪಸ್ಸನ್ನೆಸಗಿದನು.

೩೦. ಆಗ ಆತನ ತಪಸ್ಸಿಗೆ ಬಹುವಾಗಿ ಮೆಚ್ಚಿ ಆತನಿಗೆ ವರವನ್ನು ಈಯಬೇಕೆಂದು, ವೃಷಭಧ್ವಜನಾದ ಮಹೇಶ್ವರನು, ಬ್ರಾಹ್ಮಣ ವೇಷವನ್ನು ಧರಿಸಿ, ಆತನು ತಪಸ್ಸುಮಾಡುತ್ತಿರುವಲ್ಲಿಗೆ ಬಂದು ಆ ದೈತ್ಯೇಶ್ವರನನ್ನು ಕುರಿತು ಇಂತೆಂದು ನುಡಿದನು.

೩೧. ಎಲೈ ದೈತ್ಯೇಂದ್ರ, ಇಂತು ಇಂದ್ರಿಯಗಳನ್ನೇಕೆ ಹಾಳುಮಾಡಿಕೊಳ್ಳುವೆ? ಬೇಡ. ಏತಕ್ಕೆ ಸಲುವಾಗಿ ಇಂತಹ ಕಡುತರವಾದ ವ್ರತಕ್ಕೆ ಕೈಯಿಟ್ಟೆ? ನಿನ್ನ ಮನಸ್ಸಿನ ಬಯಕೆಯೇನೆಂಬುದನ್ನು ಮರೆಮಾಚದೆ ಬಿಚ್ಚಿಹೇಳು. ನಾನು ಮಹೇಶನು. ನೀನೇನು ಬೇಕೆಂದರೂ ಕೊಡಲು ಸಿದ್ಧನಾಗಿದ್ದೇನೆ ಎಂದನು.

॥ ಸನತ್ಕುಮಾರ ಉವಾಚ ॥

ಸರಸ್ಯಮಾಕರ್ಣ್ಯ ಮಹೇಶವಾಕ್ಯಂ
ಹ್ಯತಿಪ್ರಸನ್ನಃ ಕನಕಾಕ್ಷದೈತ್ಯಃ ।
ಕೃತಾಂಜಲಿರ್ನಮ್ರಶಿರಾ ಉವಾಚ
ಸ್ತುತ್ವಾ ಚ ನತ್ವಾ ವಿವಿಧಂ ಗಿರೀಶಂ ॥ ೩೨ ॥

॥ ಹಿರಣ್ಯಾಕ್ಷ ಉವಾಚ ॥

ಪುತ್ರಸ್ತು ಮೇ ಚಂದ್ರಲಲಾಟ ನಾಸ್ತಿ
ಸುವೀರ್ಯವಾನ್ದೈತ್ಯಕುಲಾನುರೂಪೀ ।
ತದರ್ಥಮೇತದ್ವ್ರತಮಾಸ್ಥಿತೋಽಹಂ
ತಂ ದೇಹಿ ದೇವೇಶ ಸುವೀರ್ಯವಂತಂ ॥ ೩೩ ॥

ಯಸ್ಮಾಚ್ಚ ಮದ್ಭ್ರಾತುರನಂತವೀರ್ಯಾಃ
ಪ್ರಹ್ಲಾದಪೂರ್ವಾ ಅಪಿ ಪಂಚ ಪುತ್ರಾಃ ।
ಮಮೇಹ ನಾಸ್ತೀತಿ ಗತಾಸ್ತ್ವಯೋಽಹಂ
ಕೋ ಮಾಮಕಂ ರಾಜ್ಯಮಿದಂ ಬುಭೂಷೇತ್ ॥ ೩೪ ॥

---

೩೨. ಓ ವ್ಯಾಸ, ಕರ್ಣರಸಾಯನವಾದ ಆ ಶಿವನ ಮಾತುಗಳನ್ನು ಕೇಳುತ್ತಲೇ ಹಿರಣ್ಯಾಕ್ಷನು ಬಹುವಾಗಿ ಹಿಗ್ಗಿ ಬಗೆಬಗೆಯಾಗಿ ಸ್ತೋತ್ರಗಳನ್ನು ಮಾಡುತ್ತಾ, ಬಹುವಿಧವಾಗಿ ನಮಸ್ಕಾರಮಾಡುತ್ತಾ ಇದ್ದು, ಬಳಿಕ ಕೈಗಳನ್ನು ಮುಗಿದುಕೊಂಡು ತಲೆಬಾಗಿ ಆ ಶಿವನನ್ನು ಕುರಿತು ಇಂತೆಂದನು.

೩೩. ಓ ಚಂದ್ರಚೂಡ, ದೈತ್ಯಕುಲಕ್ಕೆ ಅನುರೂಪನೂ, ಒಳ್ಳೆಯ ಪರಾಕ್ರಮಶಾಲಿಯೂ ಆದಂತಹ ಮಗನೊಬ್ಬನು ನನಗೆ ಇಲ್ಲ. ಅದಕ್ಕೋಸ್ಕರ ಇಂತಹ ಕಠಿಣವಾದ ವ್ರತವನ್ನು ತೊಟ್ಟೆನು. ಓ ದೇವೇಶ, ಅಂತಹ ಬಲಾಢ್ಯನಾದ ಮಗನನ್ನು ನನಗೆ ಕರುಣಿಸು.

೩೪. ಮತ್ತು ಒಂದು ವಿಷಯವೇನೆಂದರೆ, ನನ್ನ ಅಣ್ಣನಿಗೆ ಮೇರೆಯಿಲ್ಲದ ಪರಾಕ್ರಮಶಾಲಿಗಳಾದ ಪ್ರಹ್ಲಾದ ಮುಂತಾದ ಐದುಮಂದಿ ಪುತ್ರರಿರುವರು. ನನಗೊಬ್ಬನೂ ಇಲ್ಲ. ಈರೀತಿ ನನ್ನ ಸಂತತಿಯು ಬೆಳೆಯದೆ ಬತ್ತಿಹೋಗಿರುವುದು. ನನ್ನ ಈ ರಾಜ್ಯವನ್ನು ಮುಂದೆ ಯಾವನು ಅಲಂಕರಿಸಬೇಕು ?

ರಾಜ್ಯಂ ಪರಸ್ಯ ಸ್ವಬಲೇನ ಹೃತ್ವಾ
ಭುಂಕ್ತೇಽಥವಾ ಸ್ವಂ ಪಿತುರೇವ ದೃಷ್ಟಂ ।
ಸ ಪ್ರೋಚ್ಯತೇ ಪುತ್ರ ಇಹ ತ್ವಮುತ್ರ
ಪುತ್ರೀ ಸ ತೇನಾಪಿ ಭವೇತ್ಪಿತಾಸೌ ॥ ೩೫ ॥

ಊರ್ಧ್ವಂ ಗತಿಃ ಪುತ್ರವತಾಂ ನಿರುಕ್ತಾ
ಮನೀಷಿಭಿರ್ಧರ್ಮಭೃತಾಂ ವರಿಷ್ಠೈಃ ।
ಸರ್ವಾಣಿ ಭೂತಾನಿ ತದರ್ಥಮೇವ
ಮತೌ ಪ್ರವರ್ತೇತ ಪಶೂನ್ಸ್ವತೇಜಃ ॥ ೩೬ ॥

ನಿರನ್ವಯಸ್ಯಾಥ ನ ಸಂತಿ ಲೋಕಾ-
ಸ್ತದರ್ಥಮಿಚ್ಛಂತಿ ಜನಾಃ ಸುರೇಭ್ಯಃ ।
ಸದಾ ಸಮಾರಾಧ್ಯ ಸುರಾಂಘ್ರಿಪಂಕಜಂ
ಯಾಚಂತ ಇತ್ಥಂ ಸುತಮೇಕಮೇವ ॥ ೩೭ ॥

---

೩೫. ಯಾವನು ತನ್ನ ಬಾಹುಬಲದಿಂದ ಶತ್ರುಗಳನ್ನು ಜಯಿಸಿ ಅವರ ರಾಜ್ಯವನ್ನು ವಶಪಡಿಸಿಕೊಂಡು ಅನುಭವಿಸುವನೋ ಅಥವಾ ತನ್ನ ತಂದೆಯು ಆರ್ಜಿಸಿದ್ದ ರಾಜ್ಯವನ್ನೇ ಅನುಭವಿಸುವನೋ ಅಂಥವನನ್ನು ಈ ಲೋಕದಲ್ಲಿ ಮಗನೆನ್ನುವರು. ಅಂತಹ ಮಗನಿದ್ದಲ್ಲಿ ತಂದೆಯು ಪರಲೋಕದಲ್ಲಿದ್ದರೂ ಪುತ್ರವಂತನೆನಿಸಿಕೊಳ್ಳಲ್ಪಡುವನು.

೩೬. ಮಕ್ಕಳಿಲ್ಲದವರಿಗೆ ಮೇಲಿನ ಲೋಕಗಳು ಸಿಗಲಾರವು ಎಂಬುದಾಗಿ ಮಹಾಮೇಧಾವಿಗಳಾದ ಶ್ರೇಷ್ಠಧರ್ಮಜ್ಞರು ಸಾರಿರುವರು. ಆದುದರಿಂದಲೇ ಎಲ್ಲ ಪ್ರಾಣಿಗಳು ಆ ಮಗನನ್ನು ಪಡೆಯಲು ಹಾತೊರೆಯುವುವು.

೩೭. ಸಂತತಿಯಿಲ್ಲದವನಿಗೆ ಉತ್ತಮಗತಿಯು ದೊರೆಯಲಾರದೆಂದೇ ಜನರೆಲ್ಲರೂ ಮಕ್ಕಳಿಗಾಗಿ ಹಂಬಲಿಸುವರು. ತಮ್ಮ ಕಾಲವೆಲ್ಲವನ್ನೂ ದೇವರ ಪೂಜಾದಿಗಳಲ್ಲೇ ವಿನಾಸಲಾಗಿರಿಸಿ ಇನ್ನಾವುದನ್ನೂ ಒಲ್ಲದೆ, ಮಗನೊಬ್ಬನನ್ನೇ ಬೇಡುವರು ಎಂದನು.

॥ ಸನತ್ಕುಮಾರ ಉವಾಚ ॥

ಏತದ್ವಚಸ್ತದ್ವಚನಂ ನಿಶಮ್ಯ
ಕೃಪಾಕರೋ ದೈತ್ಯನೃಪಸ್ಯ ತುಷ್ಟಃ ।
ತಮಾಹ ದೈತಾಧಿಪ ನಾಸ್ತಿ ಪುತ್ರ-
ಸ್ತ್ವದ್ವೀರ್ಯಜಃ ಕಿಂತು ದದಾಮಿ ಪುತ್ರಂ ॥ ೩೮ ॥

ಮಮಾತ್ಮಜಂ ತ್ವಂಧಕನಾಮಧೇಯಂ
ತ್ವತ್ತುಲ್ಯವೀರ್ಯಂ ತ್ವಪರಾಜಿತಂ ಚ ।
ವೃಣೀಷ್ವ ಪುತ್ರಂ ಸಕಲಂ ವಿಹಾಯ
ದುಃಖಂ ಪ್ರತೀಚ್ಛಸ್ವ ಸುತಂ ತ್ವಮೇವ ॥ ೩೯ ॥

॥ ಸನತ್ಕುಮಾರ ಉವಾಚ ॥

ಇತ್ಯೇವಮುಕ್ತ್ವಾ ಪ್ರದದೌ ಸ ತಸ್ಮೈ
ಹಿರಣ್ಯನೇತ್ರಾಯ ಸುತಂ ಪ್ರಸನ್ನಃ ।
ಹರಸ್ತು ಗೌರ್ಯಾ ಸಹಿತೋ ಮಹಾತ್ಮಾ
ಭೂತಾದಿನಾಥಸ್ತ್ರಿಪುರಾರಿರುಗ್ರಃ ॥ ೪೦ ॥

---

೩೮. ಓ ವ್ಯಾಸ. ಆ ದೈತ್ಯೇಂದ್ರನು ನುಡಿದ ಈ ಮಾತನ್ನು ಕೇಳಿ, ಕರುಣಾಳುವಾದ ಆ ಶಂಕರನು ಬಹುವಾಗಿ ಸಂತೋಷಿಸಿ, ಅವನನ್ನು ಕುರಿತು, ಓ ದೈತ್ಯೇಂದ್ರ, ಔರಸವಾದ ಸಂತಾನದ ಯೋಗವು ನಿನಗೆ ಇಲ್ಲ. ಆದರೆ ಮಗನೊಬ್ಬನನ್ನು ಕೊಡುವೆನು.

೩೯. ನನಗೆ ಅಂಧಕನೆಂಬ ಮಗನಿರುವನು. ಅವನು ನಿನಗೆಣೆಯಾದ ವೀರ್ಯವುಳ್ಳವನು. ಪರಾಜಯವೆಂಬುದನ್ನೇ ಕಾಣನು. ನಿನ್ನೆಲ್ಲ ದುಃಖವನ್ನೂ ತೊರೆದುಬಿಡು. ಇವನನ್ನು ನಿನ್ನ ಮಗನನ್ನಾಗಿ ಭಾವಿಸಿ ಸ್ವೀಕರಿಸು ಎಂದನು.

೪೦. ಓ ವ್ಯಾಸ, ಹೀಗೆ ಹೇಳಿ, ಭೂತಗಳಿಗೆಲ್ಲ ಒಡೆಯನೂ, ತ್ರಿಪುರಾಂತಕನೂ ಆದ ಆ ಮಹಾತ್ಮನಾದ ಶಿವನು ಗೌರಿಯೊಡನೆ ಬಹು ಸಂತೋಷದಿಂದ ಆ ಹಿರಣ್ಯಾಕ್ಷನಿಗೆ ಮಗನನ್ನು ಅನುಗ್ರಹಿಸಿದನು.

ತತೋ ಹರಾತ್ಪ್ರಾಪ್ಯ ಸುತಂ ಸ ದೈತ್ಯಃ
ಪ್ರದಕ್ಷಿಣೀಕೃತ್ಯ ಯಥಾಕ್ರಮೇಣ ।
ಸ್ತೋತ್ರೈರನೇಕೈರಭಿಪೂಜ್ಯ ರುದ್ರಂ
ತುಷ್ಟಸ್ಸ್ವರಾಜ್ಯಂ ಗತವಾನ್ಮಹಾತ್ಮಾ ॥ ೪೧ ॥

ತತಸ್ತು ಪುತ್ರಂ ಗಿರಿಶಾದವಾಪ್ಯ
ರಸಾತಲಂ ಚಂಡಪರಾಕ್ರಮಸ್ತು ।
ಇಮಾಂ ಧರಿತ್ರೀಮನಯತ್ಸ್ವದೇಶಂ
ದೈತ್ಯೋ ವಿಜಿತ್ವಾ ತ್ರಿದಶಾನಶೇಷಾನ್ ॥ ೪೨ ॥

ತತಸ್ತು ದೇವೈರ್ಮುನಿಭಿಶ್ಚ ಸಿದ್ಧೈಃ
ಸರ್ವಾತ್ಮಕಂ ಯಜ್ಞಮಯಂ ಕರಾಲಂ ।
ವಾರಾಹಮಾಶ್ರಿತ್ಯ ವಪುಃ ಪ್ರಧಾನ-
ಮಾರಾಧಿತೋ ವಿಷ್ಣುರನಂತವೀರ್ಯಃ ॥ ೪೩ ॥

---

೪೧. ಬಳಿಕ ಆ ಹಿರಣ್ಯಾಕ್ಷನು, ಶಿವನು ಅನುಗ್ರಹಿಸಿದ ಆ ಪುತ್ರನನ್ನು ಪಡೆದು ಪ್ರದಕ್ಷಿಣೆಮಾಡಿ, ಬಗೆಬಗೆಯಾದ ಅನೇಕ ಸ್ತೋತ್ರಗಳಿಂದ ಆ ಶಿವನನ್ನು ಅರ್ಚಿಸಿ, ಬಹು ಸಂತೋಷದಿಂದ ತನ್ನ ರಾಜ್ಯವನ್ನು ಕುರಿತು ತೆರಳಿದನು.

೪೨. ಶಿವಾನುಗ್ರಹದಿಂದ ಲಬ್ಧನಾದ ಆ ಪುತ್ರನನ್ನು ಪಡೆದಮೇಲಂತು ಆ ಹಿರಣ್ಯಾಕ್ಷನು ದುಸ್ಸಹವಾದ ಪರಾಕ್ರಮದಿಂದ ಮೆರೆಯುತ್ತಾ, ದೇವತೆಗಳನ್ನೆಲ್ಲಾ ಗೆದ್ದು, ಈ ಭೂಮಿಯನ್ನು ತನ್ನ ಲೋಕವಾದ ರಸಾತಲಕ್ಕೆ ಎಳೆದುಕೊಂಡು ಹೋದನು.

೪೩. ಅನಂತರ ದೇವತೆಗಳೂ, ಮುನಿಗಳೂ, ಸಿದ್ಧರೂ, ಬಹು ಪೀಡಿತರಾಗಿ ಮೇರೆಯಿಲ್ಲದ ಪರಾಕ್ರಮಶಾಲಿಯಾದ ಶ್ರೀಮಹಾವಿಷ್ಣುವನ್ನು ಮರೆಹೊಕ್ಕು ಆತನನ್ನು ಆರಾಧಿಸಿದರು. ಆಗ ಅವರ ಪೂಜೆಗೆ ಮೆಚ್ಚಿ ಆ ಮಹಾನುಭಾವನು ಸರ್ವಸ್ವರೂಪವೂ ಯಜ್ಞಮಯವೂ ಆದ ಸೂಕರದೇಹವನ್ನು ಧರಿಸಿ,

ಘೋಣಾಪ್ರಹಾರೈರ್ವಿವಿಧೈರ್ಧರಿತ್ರೀಂ
ವಿದಾರ್ಯ ಪಾತಾಲತಲಂ ಪ್ರವಿಶ್ಯ ।
ತುಂಡೇನ ದೈತ್ಯಾನ್ ಶತಶೋ ವಿಚೂರ್ಣ್ಯ
ದಂಷ್ಟ್ರಾಭಿರಗ್ರ್ಯಾಭಿರಖಂಡಿತಾಭಿಃ ॥ ೪೪ ॥

ಪಾದಪ್ರಹಾರೈರಶನಿಪ್ರಕಾಶೈ-
ರುನ್ಮಥ್ಯ ಸೈನ್ಯಾನಿ ನಿಶಾಚರಾಣಾಂ ।
ಮಾರ್ತಂಡಕೋಟಿಪ್ರತಿಮೇನ ಪಶ್ಚಾ-
ತ್ಸುದರ್ಶನೇನಾದ್ಭುತಚಂಡತೇಜಾಃ ॥ ೪೫ ॥

ಹಿರಣ್ಯನೇತ್ರಸ್ಯ ಶಿರೋ ಜ್ವಲಂತಂ
ಚಿಚ್ಛೇದ ದೈತ್ಯಾಂಶ್ಚ ದದಾಹ ದುಷ್ಟಾನ್ ।
ತತಃ ಪ್ರಹೃಷ್ಟೋ ದಿತಿಜೇಂದ್ರರಾಜ-
ಸ್ತಮಂಧಕಂ ತತ್ರ ಸ ಚಾಭ್ಯಷಿಂಚತ್ ॥ ೪೬ ॥

ಸ್ವಸ್ಥಾನಮಾಗತ್ಯ ತತೋ ಧರಿತ್ರೀಂ-
ದೃಷ್ಟ್ವಾಂಕುರೇಣೋದ್ಧರತಃ ಪ್ರಹೃಷ್ಟಃ ।

---

೪೪. ವಿಧವಿಧವಾದ ಮುಸುಡಿಯ ಗುದ್ದಾಟಗಳಿಂದ ಭೂಮಿಯನ್ನು ಭೇದಿಸಿ ಪಾತಾಳಲೋಕವನ್ನು ಒಳಹೊಕ್ಕು, ಅಲ್ಲಿರುವ ದೈತ್ಯರನ್ನು ನೂರಾರುಗಟ್ಟಲೆ ತೀಕ್ಷ್ಣವಾದ ಕೋರೆದಾಡೆಗಳಿಂದಲೂ, ಮುಖದಿಂದಲೂ ಗುದ್ದಿ ಗುದ್ದಿ ನುಚ್ಚುನೂರು ಮಾಡಿದನು.

೪೫. ಅತ್ಯದ್ಭುತವೂ, ಅತ್ಯುಗ್ರವೂ ಆದ ಪರಾಕ್ರಮವುಳ್ಳ ಆ ವರಾಹವು, ಸಿಡಿಲಿನಂತೆ ಎರಗಿಬೀಳುವ ಕಾಲಿನ ತುಳಿತಗಳಿಂದ ಆ ದೈತ್ಯರ ಸೇನೆಗಳೆಲ್ಲವನ್ನೂ ಪುಡಿಪುಡಿಮಾಡಿತು. ಬಳಿಕ ಆ ಮೂರ್ತಿಯು ಕೋಟಿ ಸೂರ್ಯನಂತೆ ಜ್ವಲಿಸುತ್ತಿರುವ,

೪೬. ಸುದರ್ಶನ ಚಕ್ರವನ್ನು ಕೈಗೆ ತೆಗೆದುಕೊಂಡು, ಹಿರಣ್ಯಾಕ್ಷನ ಜ್ವಲಿಸುತ್ತಿರುವ ತಲೆಯನ್ನು ಕತ್ತರಿಸಿಬಿಟ್ಟನು. ಉಳಿದ ದುಷ್ಟರಾದ ದೈತ್ಯರೆಲ್ಲರನ್ನೂ ಸುಟ್ಟುಬಿಟ್ಟನು. ಆಮೇಲೆ ಹಿರಣ್ಯಕಶಿಪುವು, ಅಂಧಕಾಸುರನನ್ನು ಹಿರಣ್ಯಾಕ್ಷನ ರಾಜ್ಯದಲ್ಲಿ ಸಂತೋಷದಿಂದ ಅಭಿಷೇಕಮಾಡಿದನು.

೪೭. ಹಿರಣ್ಯಾಕ್ಷನನ್ನು ಸಂಹರಿಸಿದ ಮೇಲೆ, ಆ ದಿವ್ಯ ವರಾಹಮೂರ್ತಿಯು ತನ್ನ ಜಾಗಕ್ಕೆ ಮರಳಿ ಬಂದು, ರಸಾತಲದಲ್ಲಿ ಸಿಲುಕಿ ಮುಳುಗಿಹೋಗಿದ್ದ ಭೂಮಿಯನ್ನು

ಭೂಮಿಂ ಚ ಪಾತಾಲತಲಾನ್ಮಹಾತ್ಮಾ
ಪುಪೋಷ ಭಾಗಂ ತ್ವಥ ಪೂರ್ವಕಂ ತು ॥ ೪೭ ॥

ದೇವೈಸ್ಸಮಸ್ತೈರ್ಮುನಿಭಿಃ ಪ್ರಹೃಷ್ಟೈ-
ರಭಿಷ್ಟುತಃ ಪದ್ಮಭುವಾ ಚ ತೇನ ।
ಯಯೌ ಸ್ವಲೋಕಂ ಹರಿರುಗ್ರಕಾಯೋ
ವಾರಾಹರೂಪಸ್ತು ಸುಕಾರ್ಯಕರ್ತಾ ॥ ೪೮ ॥

ಹಿರಣ್ಯನೇತ್ರೇಽಥ ಹತೇಽಸುರೇಶೇ
ವರಾಹರೂಪೇಣ ಸುರೇಣ ದೇವಾಃ ।
ದೇವಾಸ್ಸಮಸ್ತಾ ಮುನಯಶ್ಚ ಸರ್ವೇ
ಪರೇ ಚ ಜೀವಾಸ್ಸುಖಿನೋ ಬಭೂವುಃ ॥ ೪೯ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಹಿರಣ್ಯಾಕ್ಷವಧೋ ನಾಮ
ದ್ವಿಚತ್ವಾರಿಂಶೋಽಧ್ಯಾಯಃ.

---

ತನ್ನ ಕೋರೆದಾಡೆಯ ಕೊನೆಗಳಿಂದ ಮೇಲಕ್ಕೆತ್ತಿ ಅದು ಮೊದಲಿದ್ದ ಜಾಗದಲ್ಲಿ ಸರಿಯಾಗಿ ನಿಲ್ಲಿಸಿಬಿಟ್ಟನು.

೪೮. ಈರೀತಿ, ಭಯಂಕರವಾದ ವಾರಾಹರೂಪವನ್ನು ಧರಿಸಿ ದೇವತೆಗಳ ಕಾರ್ಯವನ್ನು ಜರುಗಿಸಿದ ಶ್ರೀಹರಿಯು, ಸಂತೋಷದಿಂದ ತನ್ನನ್ನು ಮುನಿಗಳೂ ಎಲ್ಲ ದೇವತೆಗಳೂ, ಚತುರ್ಮುಖನೂ ಹೊಗಳುತ್ತಿರಲು, ತನ್ನ ಲೋಕವಾದ ವೈಕುಂಠಕ್ಕೆ ತೆರಳಿದನು.

೪೯. ಹೀಗೆ ವರಾಹರೂಪಧಾರಿಯಾದ ಶ್ರೀಹರಿಯಿಂದ ದೈತ್ಯಾಗ್ರಣಿಯಾದ ಹಿರಣ್ಯಾಕ್ಷನು ಹತನಾಗಲು, ಎಲ್ಲ ದೇವತೆಗಳೂ, ಮುನಿಗಳೂ, ಇತರ ಸಕಲ ಪ್ರಾಣಿಗಳೂ ಬಹು ಸುಖವನ್ನು ಹೊಂದಿದರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಹಿರಣ್ಯಾಕ್ಷ ವಧವೆಂಬ ನಾಲ್ವತ್ತೆರಡನೆಯ ಅಧ್ಯಾಯವು.
ಮುಗಿದುದು.

---

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ತ್ರಿಚತ್ವಾರಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ಹತೇ ತಸ್ಮಿನ್ಸುರದ್ರುಹಿ ।
ಕಿಮಕಾರ್ಷೀತ್ತತಸ್ತಸ್ಯ ಜ್ಯೇಷ್ಠಭ್ರಾತಾ ಮಹಾಸುರಃ ॥ ೧ ॥

ಕುತೂಹಲಮಿತಿ ಶ್ರೋತುಂ ಮಮಾಽಸ್ತೀಹ ಮುನೀಶ್ವರ ।
ತಚ್ಛ್ರಾವಯ ಕೃಪಾಂ ಕೃತ್ವಾ ಬ್ರಹ್ಮಪುತ್ರ ನಮೋಽಸ್ತು ತೇ ॥ ೨ ॥

---

### ನಲವತ್ತಮೂರನೆಯ ಅಧ್ಯಾಯವು.

೧. ಬಳಿಕ ವ್ಯಾಸಮಹರ್ಷಿಯು ಸನತ್ಕುಮಾರನನ್ನು ಕುರಿತು, ಎಲೈ ಸರ್ವಜ್ಞನೇ, ಆ ದೈತ್ಯನು ಹತನಾದಮೇಲೆ ಅವನ ಅಣ್ಣನಾದ ಹಿರಣ್ಯಕಶಿಪುವು ಏನು ಮಾಡಿದನು ?

೨. ಓ ಬ್ರಹ್ಮಪುತ್ರ, ನಿನಗೆ ನಮಸ್ಕರಿಸುವೆನು. ಆ ವೃತ್ತಾಂತವನ್ನು ಕೇಳಲು ನನಗೆ ಬಹಳ ಕುತೂಹಲವಾಗಿರುವುದು. ಆದುದರಿಂದ ನನ್ನಮೇಲೆ ಕೃಪೆಯಿಟ್ಟು ಆ ವೃತ್ತಾಂತವನ್ನು ತಿಳಿಸು ಎಂದನು.

॥ ಬ್ರಹ್ಮೋವಾಚ ॥
ಇತ್ಯಾಕರ್ಣ್ಯ ವಚಸ್ತಸ್ಯ ವ್ಯಾಸಸ್ಯ ಸ ಮುನೀಶ್ವರಃ ।
ಸನತ್ಕುಮಾರಃ ಪ್ರೋವಾಚ ಸ್ಮೃತ್ವಾ ಶಿವಪದಾಂಬುಜಂ ॥ ೩ ॥

॥ ಸನತ್ಕುಮಾರ ಉವಾಚ ॥
ಭ್ರಾತರ್ಯೇವಂ ವಿನಿಹತೇ ಹರಿಣಾ ಕ್ರೋಡಮೂರ್ತಿನಾ ।
ಹಿರಣ್ಯಕಶಿಪುರ್ವ್ಯಾಸ ಪರ್ಯತಪ್ಯದ್ರುಷಾ ಶುಚಾ ॥ ೪ ॥

ತತಃ ಪ್ರಜಾನಾಂ ಕದನಂ ವಿಧಾತುಂ ಕದನಪ್ರಿಯಾನ್ ।
ನಿರ್ದಿದೇಶಾಸುರಾನ್ವೀರಾನ್ಹರಿವೈರಪ್ರಿಯೋ ಹಿ ಸಃ ॥ ೫ ॥

ಅಥ ತೇ ಭರ್ತೃಸಂದೇಶಮಾದಾಯ ಶಿರಸಾಸುರಾಃ ।
ದೇವಪ್ರಜಾನಾಂ ಕದನಂ ವಿದಧುಃ ಕದನಪ್ರಿಯಾಃ ॥ ೬ ॥

ತತೋ ವಿಪ್ರಕೃತೇ ಲೋಕೇಽಸುರೈಸ್ತೈರ್ದುಷ್ಟಮಾನಸೈಃ ।
ದಿವಂ ದೇವಾಃ ಪರಿತ್ಯಜ್ಯ ಭುವಿ ಚೇರುರಲಕ್ಷಿತಾಃ ॥ ೭ ॥

---

೩. ಓ ನಾರದ, ಹೀಗೆಂದು ವ್ಯಾಸನು ಕೇಳಲು, ಆ ಸನತ್ಕುಮಾರಮುನಿಯು ಶಿವನ ಪದಕಮಲಗಳನ್ನು ನೆನೆದು ಈರೀತಿ ಹೇಳತೊಡಗಿದನು.

೪. ಓ ವ್ಯಾಸ, ತನ್ನ ತಮ್ಮನಾದ ಹಿರಣ್ಯಾಕ್ಷನು ವರಾಹರೂಪಧಾರಿಯಾದ ವಿಷ್ಣುವಿನಿಂದ ಹತನಾದಮೇಲೆ ಹಿರಣ್ಯಕಶಿಪುವು ರೋಷದಿಂದಲೂ ದುಃಖದಿಂದಲೂ ಕುದಿಯತೊಡಗಿದನು.

೫. ಅನಂತರ ಹರಿಯಮೇಲೆ ದ್ವೇಷವನ್ನೇ ಸಾಧಿಸತೊಡಗಿ ಆ ದೈತ್ಯರಾಜನು ಯುದ್ಧವೆಂದರೆ ಬಾಯಿಬಿಡುವ ತನ್ನ ಕಡೆಯ ಅಸುರ ವೀರರನ್ನು ವಿಷ್ಣುವಿಗೆ ಪ್ರಿಯರಾದ ಪ್ರಜೆಗಳಮೇಲೆ ಯುದ್ಧಮಾಡಲು ಅಪ್ಪಣೆಯಿತ್ತನು.

೬. ಬಳಿಕ ಕದನಕುತೂಹಲಿಗಳಾದ ಆ ಅಸುರವೀರರು ತಮ್ಮ ಪ್ರಭುವಿನ ಅಪ್ಪಣೆ ದೊರೆತೊಡನೆಯೇ ಶಿರಸಾವಹಿಸಿ ದೇವತೆಗಳಮೇಲೆ ಯುದ್ಧಮಾಡತೊಡಗಿದರು.

೭. ಮನಸ್ಸಿನಲ್ಲಿಯೇ ದ್ವೇಷವನ್ನು ಸಾಧಿಸುತ್ತಿರುವ ಆ ಅಸುರರು ತಮ್ಮ ಲೋಕವೆಲ್ಲವನ್ನೂ ಧ್ವಂಸಮಾಡಲು, ದೇವತೆಗಳು ಸ್ವರ್ಗವನ್ನು ಬಿಟ್ಟುಬಂದು ತಲೆಮರೆಸಿಗೂಂಡು ಯಾರಿಗೂ ಕಾಣದಂತೆ ಭೂಮಿಯಲ್ಲಿ ಅಲೆಯತೊಡಗಿದರು.

ಹಿರಣ್ಯಕಶಿಪುರ್ಭ್ರಾತುಸ್ಸಂಪರೇತಸ್ಯ ದುಃಖಿತಃ ।
ಕೃತ್ವಾ ಕರೋದಕಾದೀನಿ ತತ್ಕಲತ್ರಾದ್ಯಸಾಂತ್ವಯತ್ ॥ ೮ ॥

ತತಸ್ಸ ದೈತ್ಯರಾಜೇಂದ್ರೋ ಹ್ಯಜೇಯಮಜರಾಮರಂ ।
ಆತ್ಮಾನಮಪ್ರತಿದ್ವಂದ್ವಮೇಕರಾಜ್ಯಂ ವ್ಯಧಿತ್ಸತ ॥ ೯ ॥

ಸ ತೇಪೇ ಮಂದರದ್ರೋಣ್ಯಾಂ ತಪಃ ಪರಮದಾರುಣಂ ।
ಊರ್ಧ್ವಬಾಹುರ್ನಭೋದೃಷ್ಟಿಃ ಪಾದಾಂಗುಷ್ಠಾಶ್ರಿತಾವನಿಃ ॥ ೧೦ ॥

ತಸ್ಮಿಂಸ್ತಪಸ್ತಪ್ಯಮಾನೇ ದೇವಾಃ ಸರ್ವೇಬಲಾನ್ವಿಶಾಃ ।
ದೈತ್ಯಾನ್ಸರ್ವಾನ್ವಿನಿರ್ಜಿತ್ಯ ಸ್ವಾನಿ ಸ್ಥಾನಾನಿ ಭೇಜಿರೇ ॥ ೧೧ ॥

ತಸ್ಯ ಮೂರ್ಧ್ನಸ್ಸಮುದ್ಭೂತಃ ಸಧೂಮೋಽಗ್ನಿಸ್ತಪೋಮಯಃ ।
ತಿರ್ಯಗೂರ್ಧ್ವಮಧೋಲೋಕಾನತಪದ್ವಿಷ್ವಗೀರಿತಃ ॥ ೧೨ ॥

---

೮. ದುಃಖಾನ್ವಿತನಾದ ಹಿರಣ್ಯಕಶಿಪುವು ಸತ್ತುಹೋದ ತನ್ನ ತಮ್ಮನಿಗೆ ಉತ್ತರಕ್ರಿಯೆಗಳನ್ನು ನೆರವೇರಿಸಿ ಅವನ ಹೆಂಡತಿ ಮಕ್ಕಳನ್ನು ಸಂತೈಸಿದನು.

೯. ಬಳಿಕ ಆ ಹಿರಣ್ಯಕಶಿಪುವು ಈರೀತಿ ಆಲೋಚಿಸಿದನು. “ ತನ್ನನ್ನು ಯಾರೂ ಜಯಿಸಬಾರದು. ತನಗೆ ಮುಪ್ಪೂ ಸಾವೂ ಬರಬಾರದು. ತನಗೆ ಸರಿಸಮನಾದ ಎದುರಾಳಿಯು ಯಾರೂ ಇರಬಾರದು. ಈ ಸಮಗ್ರ ಪ್ರಪಂಚವೆಲ್ಲವನ್ನೂ ನಾನೊಬ್ಬನೇ ಆಳಬೇಕು ” ಹೀಗೆಂಬುದಾಗಿ ಅವನು ಬಯಸಿ,

೧೦. ಮಂದರಾದ್ರಿಯ ಗವಿಯೊಂದನ್ನು ಸೇರಿ ತೋಳುಗಳನ್ನು ಮೇಲಕ್ಕೆ ಎತ್ತಿ ಆಕಾಶವನ್ನೇ ದಿಟ್ಟಿಸುತ್ತಾ, ಹೆಬ್ಬೆರಳ ತುದಿಯಿಂದ ನೆಲವನ್ನೂರಿ ನಿಂತು ಬಹು ಘೋರವಾದ ತಪಸ್ಸನ್ನಾಚರಿಸಿದನು.

೧೧. ಈರೀತಿ ಹಿರಣ್ಯಕಶಿಪುವು ತನ್ನ ತಪಸ್ಸಿನಲ್ಲಿ ತೊಡಗಿರಲು ಇತ್ತಲಾಗಿ ದೇವತೆಗಳೆಲ್ಲರೂ ತಮ್ಮ ಶೌರ್ಯವನ್ನು ತೋರ್ಪಡಿಸುತ್ತಾ ದೈತ್ಯರೆಲ್ಲರನ್ನೂ ಸೋಲಿಸಿ ತಮ್ಮತಮ್ಮ ಹಿಂದಿನ ಪದವಿಗಳನ್ನು ಪಡೆದು ಮೊದಲಿನಂತೆ ಇದ್ದರು.

೧೨. ಆ ಹಿರಣ್ಯಕಶಿಪುವು ತಪಸ್ಸುಮಾಡುತ್ತಿರಲು ಆತನ ತಲೆಯಿಂದ ತಪೋಮಯವಾದ ಜ್ವಾಲೆಯು ಹೊಗೆಯೊಡನೆ ಹೊರಹೊರಟು ಸ್ವರ್ಗಾದಿ ಊರ್ಧ್ವಲೋಕಗಳನ್ನೂ, ಭೂಮ್ಯಾದಿ ಸಮಲೋಕಗಳನ್ನೂ, ಪಾತಾಲಾದ್ಯಧೋಲೋಕಗಳನ್ನೂ ಆವರಿಸುತ್ತಾ ಬಂದಿತು.

ತೇನ ತಪ್ತಾ ದಿವಂ ತ್ಯಕ್ತ್ವಾ ಬ್ರಹ್ಮಲೋಕಂ ಯಯುಸ್ಸುರಾಃ ।
ಧಾತ್ರೇ ವಿಜ್ಞಾಪಯಾಮಾಸುಸ್ತತ್ತಪೋವಿಕೃತಾನನಾಃ ॥ ೧೩ ॥

ಅಥ ವಿಜ್ಞಾಪಿತೋ ದೇವೈರ್ವ್ಯಾಸ ತೈರಾತ್ಮಭೂರ್ವಿಧಿಃ ।
ಪರೀತೋ ಭೃಗುದಕ್ಷಾದ್ಯೈರ್ಯಯೌ ದೈತ್ಯೇಶ್ವರಾಶ್ರಮಂ ॥ ೧೪ ॥

ಪ್ರತಾಪ್ಯ ಲೋಕಾನಖಿಲಾಂಸ್ತತೋಽಸೌ
ಸಮಾಗತಂ ಪದ್ಮಭವಂ ದದರ್ಶ ।
ವರಂ ಹಿ ದಾತುಂ ತಮುವಾಚ ಧಾತಾ
ವರಂ ವೃಣೀಷ್ವೇತಿ ಪಿತಾಮಹೋಽಪಿ ।
ನಿಶಮ್ಯ ವಾಚಂ ಮಧುರಾಂ ವಿಧಾತು-
ರ್ವಚೋಽಬ್ರವೀದೇವಮಮೂಢಬುದ್ಧಿಃ ॥ ೧೫ ॥

॥ ಹಿರಣ್ಯಶಿಪುರುವಾಚ ॥

ಮೃತ್ಯೋರ್ಭಯಂ ಮೇ ಭಗವನ್ಪ್ರಜೇಶ
ಪಿತಾಮಹಾಭೂನ್ನ ಕದಾಪಿ ದೇವ ।

---

೧೩. ಆ ತಪೋಜ್ವಾಲೆಯ ಬೇಸೆಯನ್ನು ತಾಳಲಾರದೆ ದೇವತೆಗಳೆಲ್ಲರೂ ಸ್ವರ್ಗಲೋಕವನ್ನು ಬಿಟ್ಟು ಬ್ರಹ್ಮಲೋಕಕ್ಕೆ ತೆರಳಿ ಬಾಡಿದ ಮುಖದಿಂದ ಬ್ರಹ್ಮನಿಗೆ ನಡೆದ ಸಂಗತಿಯೆಲ್ಲವನ್ನೂ ಬಿನ್ನವಿಸಿದರು.

೧೪. ವ್ಯಾಸಮುನೀಂದ್ರ, ಹೀಗೆ ದೇವತೆಗಳು ಬಿನ್ನವಿಸಲು ಆ ಸ್ವಯಂಭುವಾದ ಚತುರ್ಮುಖನು ಭೃಗು, ದಕ್ಷ ಮೊದಲಾದ ಪ್ರಜಾಪತಿಗಳೊಡನೆ ಆ ದೈತ್ಯೇಶ್ವರನು ತಪಸ್ಸುಮಾಡುತ್ತಿದ್ದಲ್ಲಿಗೆ ಬಂದನು.

೧೫. ಹೀಗೆ ತನ್ನ ತಪೋಜ್ವಾಲೆಯಿಂದ ಲೋಕಗಳೆಲ್ಲವನ್ನೂ ಬೇಗನೆ ಈಡುಮಾಡಿ ಆ ಹಿರಣ್ಯಕಶಿಪುವು ತನ್ನಬಳಿಗೆ ಬಂದ ಪದ್ಮಸಂಭವನನ್ನು ಕಂಡನು. ಆ ಪಿತಾಮಹನೂ ಈತನಿಗೆ ವರವನ್ನೀಯಬೇಕೆಂದು ಬಗೆದು ನಿನಗಾವ ವರವು ಬೇಕೋ ಕೇಳು ಎಂದು ಹೇಳಲು, ಬ್ರಹ್ಮನು ನುಡಿದ ಪ್ರಿಯವಾದ ಮಾತನ್ನು ಕೇಳಿ ಕುಶಲಮತಿಯಾದ ಹಿರಣ್ಯಕಶಿಪುವು ಇಂತೆಂದು ನುಡಿದನು.

೧೬. ಎಲೈ ಭಗವಂತನೇ, ಓ ಪ್ರಜೇಶ್ವರ, ಓ ಪಿತಾಮಹ, ನನಗೆ ಶಸ್ತ್ರಗಳಿಂದಲೂ ಅಸ್ತ್ರಗಳಿಂದಲೂ ಪಾಶಗಳಿಂದಲೂ. ವಜ್ರಾಯುಧದಿಂದಲೂ ಒಣಮರ

ಶಸ್ತ್ರಾಸ್ತ್ರಪಾಶಾಶನಿಶುಷ್ಕವೃಕ್ಷ-
ಗಿರೀಂದ್ರತೋಯಾಗ್ನಿರಿಪುಪ್ರಹಾರೈಃ ॥ ೧೬ ॥

ದೇವೈಶ್ಚ ದೈತ್ಯೈರ್ಮುನಿಭಿಶ್ಚ ಸಿದ್ಧೈ-
ಸ್ತ್ವತ್ಸೃಷ್ಟಜೀವೈರ್ಬಹುವಾಕ್ಯತಃ ಕಿಂ ।
ಸ್ವರ್ಗೇ ಧರಣ್ಯಾಂ ದಿವಸೇ ನಿಶಾಯಾಂ
ನೈವೋರ್ಧ್ವತೋ ನಾಪ್ಯಧತಃ ಪ್ರಜೇಶ ॥ ೧೭ ॥

॥ ಸನತ್ಕುಮಾರ ಉವಾಚ ॥

ತಸ್ಯೈತದೀದೃಗ್ವಚನಂ ನಿಶಮ್ಯ
ದೈತ್ಯೇಂದ್ರ ತುಷ್ಟೋಽಸ್ಮಿ ಲಭಸ್ವ ಸರ್ವಂ ।
ಪ್ರಣಮ್ಯ ವಿಷ್ಣುಂ ಮನಸಾ ತಮಾಹ
ದಯಾನ್ವಿತೋಽಸಾವಿತಿ ಪದ್ಮಯೋನಿಃ ॥ ೧೮ ॥

ಅಲಂ ತಪಸ್ತೇ ಪರಿಪೂರ್ಣಕಾಮ-
ಸ್ಸಮಾಃ ಸಹಸ್ರಾಣಿ ಚ ಷಣ್ಣವತ್ಯಃ ।

---

ಗಳಿಂದಲೂ ಬೆಟ್ಟಗಳಿಂದಲೂ ನೀರಿನಿಂದಲೂ ಬೆಂಕಿಯಿಂದಲೂ ಶತ್ರುಗಳ ಪ್ರಹಾರಗಳಿಂದಲೂ ಎಂದೆಂದಿಗೂ ಮರಣಭಯವು ಉಂಟಾಗಕೂಡದು.

೧೭. ಹೇ ಪ್ರಜಾಧಿನಾಥ, ದೇವತೆಗಳಿಂದಲೂ ದೈತ್ಯರಿಂದಲೂ ಮುನಿಗಳಿಂದಲೂ ಸಿದ್ಧರಿಂದಲೂ, ಹೆಚ್ಚು ಮಾತೇನು? ನೀನು ಸೃಷ್ಟಿಸಿದ ಯಾವ ಪ್ರಾಣಿಯಿಂದಲೂ ನನಗೆ ಸಾವುಂಟಾಗಕೂಡದು. ನನಗೆ ಸ್ವರ್ಗದಲ್ಲಿಯೂ ಭೂಮಿಯಲ್ಲೂ ಹಗಲಿನಲ್ಲೂ ರಾತ್ರಿಯಲ್ಲೂ ಮೇಲ್ಗಡೆಯೂ ಕೆಳಗಡೆಯೂ ಮರಣವುಂಟಾಗಬಾರದು ಎಂದನು.

೧೮. ಓ ವ್ಯಾಸ, ಆ ದೈತ್ಯರಾಜನು ಕೇಳಿದ ಈ ವರವನ್ನು ಕೇಳಿ ಬ್ರಹ್ಮನು ಮನಸ್ಸಿನಲ್ಲಿ ವಿಷ್ಣುವನ್ನು ನಮಸ್ಕರಿಸಿ, ಆ ದೈತ್ಯನಮೇಲೆ ಕನಿಕರದಿಂದ ಎಲೈ ದೈತ್ಯೇಂದ್ರ, ನಾನು ನಿನ್ನ ತಪಸ್ಸಿಗೆ ಮೆಚ್ಚಿರುವೆನು. ನೀನು ಕೇಳಿದಂತೆಯೇ ಆಗಲಿ.

೧೯. ನೀನು ಮಾಡಿದ ತಪಸ್ಸು ಸಾಕು. ನಿಲ್ಲಿಸು. ನಿನ್ನ ಇಷ್ಟವೆಲ್ಲವೂ ನೆರವೇರಿ ತೊಂಭತ್ತಾರುಸಾವಿರವರ್ಷಗಳಕಾಲ ದೈತ್ಯಚಕ್ರವರ್ತಿಯಾಗಿ ರಾಜ್ಯಭಾರ

ಉತ್ತಿಷ್ಠ ರಾಜ್ಯಂ ಕುರು ದಾನವಾನಾಂ
ಶ್ರುತ್ವಾ ಗಿರಂ ತತ್ಸುಮುಖೋ ಬಭೂವ　　॥ ೧೯ ॥

ರಾಜ್ಯಾಭಿಷಿಕ್ತಃ ಪ್ರಪಿತಾಮಹೇನ
ತ್ರೈಲೋಕ್ಯನಾಶಾಯ ಮತಿಂ ಚಕಾರ ।
ಉತ್ಸಾದ್ಯ ಧರ್ಮಾನ್ಸಕಲಾನ್ಪ್ರಮತ್ತೋ
ಜಿತ್ವಾಹವೇ ಸೋಽಪಿ ಸುರಾನ್ಸಮಸ್ತಾನ್　　॥ ೨೦ ॥

ತತೋ ಭಯಾದಿಂದ್ರಮುಖಾಶ್ಚ ದೇವಾಃ
ಪಿತಾಮಹಾಜ್ಞಾಂ ಸಮವಾಪ್ಯ ಸರ್ವೇ ।
ಉಪದ್ರುತಾ ದೈತ್ಯವರೇಣ ಜಾತಾಃ-
ಕ್ಷೀರೋದಧಿಂ ಯತ್ರ ಹರಿಸ್ತು ಶೇತೇ　　॥ ೨೧ ॥

ಆರಾಧಯಾಮಾಸುರತೀವ ವಿಷ್ಣುಂ
ಸ್ತುತ್ವಾ ವಚೋಭಿಸ್ಸುಖದಂ ಹಿ ಮತ್ವಾ ।
ನಿವೇದಯಾಮಾಸುರಥೋ ಪ್ರಸನ್ನಂ
ದುಃಖಂ ಸ್ವಕೀಯಂ ಸಕಲಂ ಹಿ ತೇ ತೇ　　॥ ೨೨ ॥

---

ವನ್ನು ನಡೆಸುತ್ತಿರು, ಏಳು ಎಂದನು. ಈ ಮಾತನ್ನು ಕೇಳಿದೊಡನೆಯೇ ಆ ಹಿರಣ್ಯಕಶಿಪುವು ಸಂತೋಷದಿಂದ ನಗುಮುಖನಾದನು.

೨೦. ಬಳಿಕ ಬ್ರಹ್ಮನು ದೈತ್ಯಾಧಿಪತ್ಯದಲ್ಲಿ ಆ ಹಿರಣ್ಯಕಶಿಪುವನ್ನು ಅಭಿಷೇಕ ಮಾಡಲು ಅಧಿಕಾರಕ್ಕೆ ಬಂದ ಆ ದೈತ್ಯಾಗ್ರಣಿಯು ಮಹಾಕೊಬ್ಬಿನಿಂದ ಬೀಗುತ್ತಾ ಎಲ್ಲಾ ಧರ್ಮಗಳನ್ನೂ ಹಾಳುಮಾಡಿ ದೇವತೆಗಳೆಲ್ಲರನ್ನೂ ಯುದ್ಧದಲ್ಲಿ ಗೆದ್ದು ಮೂರು ಲೋಕವನ್ನೂ ನಾಶಮಾಡಲು ಹವಣಿಸಿದನು.

೨೧. ಬಳಿಕ ಇಂದ್ರಾದಿ ದೇವತೆಗಳು ಆ ದೈತ್ಯನಿಂದ ಪೀಡಿತರಾಗಿ ಹೆದರಿ ನಡುಗುತ್ತಾ ಬ್ರಹ್ಮನ ಅಪ್ಪಣೆಯಂತೆ ಶ್ರೀಹರಿಯು ಮಲಗಿರುವ ಕ್ಷೀರಸಮುದ್ರದ ಬಳಿಗೆ ಬಂದರು.

೨೨. ಅವರೆಲ್ಲರೂ ತಮಗೆ ಸುಖವನ್ನುಂಟುಮಾಡುವವನು ಆ ವಿಷ್ಣುವೆಂದೇ ತಿಳಿದು, ಹಿತವಾದ ಮಾತುಗಳಿಂದ ಬಹುವಾಗಿ ಆತನನ್ನು ಸ್ತೋತ್ರಮಾಡಿ ಆತನು ಪ್ರಸನ್ನನಾದುದನ್ನು ಕಂಡು, ತಮಗೆ ಬೇಕಾದವನಾದ ಆತನಲ್ಲಿ ತಮ್ಮ ವ್ಯಥೆಯನ್ನು ಹೇಳಿಕೊಂಡರು.

ಶ್ರುತ್ವಾ ತದೀಯಂ ಸಕಲಂ ಹಿ ದುಃಖಂ
ತುಷ್ಟೋ ರಮೇಶಃ ಪ್ರದದೌ ವರಾಂಸ್ತು ।
ಉತ್ಥಾಯ ತಸ್ಮಾಚ್ಛಯನಾದುಪೇಂದ್ರೋ-
ನಿಜಾನುರೂಪೈರ್ವಿವಿಧೈರ್ವಚೋಭಿಃ ॥ ೨೩ ॥

ಆಶ್ವಾಸ್ಯ ದೇವಾನಖಿಲಾನ್ಮುನೀನ್ವಾ
ಉವಾಚ ವೈಶ್ವಾನರತುಲ್ಯತೇಜಾಃ ।
ದೈತ್ಯಂ ಹನಿಷ್ಯೇ ಪ್ರಸಭಂ ಸುರೇಶಾಃ
ಪ್ರಯಾತ ಧಾಮಾನಿ ನಿಜಾನಿ ತುಷ್ಟಾಃ ॥ ೨೪ ॥

ಶ್ರುತ್ವಾ ರಮೇಶಸ್ಯ ವಚಸ್ಸುರೇಶಾಃ
ಶಕ್ರಾದಿಕಾಸ್ತೇ ನಿಖಿಲಾ ಹಿ ತುಷ್ಟಾಃ ।
ಯಯುಃ ಸ್ವಧಾಮಾನಿ ಹಿರಣ್ಯನೇತ್ರಾ-
ನುಜಂ ಚ ಮತ್ವಾ ನಿಹತಂ ಮುನೀಶ ॥ ೨೫ ॥

ಆಶ್ರಿತ್ಯ ರೂಪಂ ಜಟಿಲಂ ಕರಾಲಂ
ದಂಷ್ಟ್ರಾಯುಧಂ ತೀಕ್ಷ್ಣನಖಂ ಸುನಾಸಂ ।

---

೨೩-೨೪. ಅಗ್ನಿಗೆಣೆಯಾದ ತೇಜಸ್ಸುಳ್ಳ ಆ ಶ್ರೀಹರಿಯು ದೇವತೆಗಳ ಸ್ತುತಿಯನ್ನು ಕೇಳಿ ಹರ್ಷಿತನಾಗಿ ಶೇಷತಲ್ಪವನ್ನು ಬಿಟ್ಟೆದ್ದು, ತನಗನುರೂಪವಾದ ವಿಧವಿಧವಾದ ಮಾತುಗಳಿಂದ ಅಲ್ಲಿ ಸೇರಿದ್ದ ಎಲ್ಲ ದೇವತೆಗಳನ್ನೂ ಮುನಿಗಳನ್ನೂ ಸಂತೈಸಿ ಅವರೆಲ್ಲರಿಗೂ ವರಗಳನ್ನಿತ್ತು, ನಾನು ಆ ದೈತ್ಯನನ್ನು ಸಂಹರಿಸುವೆನು. ನೀವು ನಿಮ್ಮನಿಮ್ಮ ನೆಲೆಗಳಿಗೆ ಹಿಂದಿರುಗಿರಿ ಎಂದು ಅಭಯವನ್ನಿತ್ತನು.

೨೫. ಓ ವ್ಯಾಸಮುನೀಂದ್ರ, ವಿಷ್ಣುವಿನ ಮಾತನ್ನು ಕೇಳಿ ಆ ಇಂದ್ರಾದಿ ದೇವತೆಗಳೆಲ್ಲರೂ ಸಂತೋಷಗೊಂಡು ಹಿರಣ್ಯಕಶಿಪುವು ಸತ್ತನೆಂದೇ ತಿಳಿದು ತಂತಮ್ಮ ನೆಲೆಗಳಿಗೆ ಹಿಂದಿರುಗಿದರು.

೨೬-೨೭. ಅನಂತರ ಶ್ರೀಹರಿಯು ಅದ್ಭುತವೂ ಘೋರವೂ ಆದ ವಿಚಿತ್ರರೂಪವನ್ನು ಧರಿಸಿದನು. ಆ ರೂಪವನ್ನೇನೆಂದು ಹೇಳಲಿ ? ಉದ್ದುದ್ದವಾದ ಜಡೆಗಳು

ಸೈಂಹಂ ಚ ನಾರಂ ಸುವಿದಾರಿತಾಸ್ಯಂ
ಮಾರ್ತಂಡಕೋಟಿಪ್ರತಿಮಂ ಸುಘೋರಂ ॥ ೨೬ ॥

ಯುಗಾಂತಕಾಲಾಗ್ನಿಸಮಪ್ರಭಾವಂ
ಜಗನ್ಮಯಂ ಕಿಂ ಬಹುಭಿರ್ವಚೋಭಿಃ ।
ಅಸ್ತಂ ರವೌ ಸೋಽಪಿ ಹಿ ಗಚ್ಛತೀಶೋ
ಗತೋಽಸುರಾಣಾಂ ನಗರೀಂ ಮಹಾತ್ಮಾ ॥ ೨೭ ॥

ಕೃತ್ವಾ ಚ ಯುದ್ಧಂ ಪ್ರಬಲೈಸ್ಸ ದೈತ್ಯೈ-
ರ್ಹತ್ವಾಥ ತಾನ್ದೈತ್ಯಗಣಾನ್ಗೃಹೀತ್ವಾ ।
ಬಭ್ರಾಮ ತತ್ರಾದ್ಭುತವಿಕ್ರಮಶ್ಚ
ಬಭಂಜ ತಾಂಸ್ತಾನಸುರಾನ್ನೃಸಿಂಹಃ ॥ ೨೮ ॥

ದೃಷ್ಟಸ್ಸ ದೈತ್ಯೈರತುಲಪ್ರಭಾವ-
ಸ್ತೇ ರೇಭಿರೇ ತೇ ಹಿ ತಥೈವ ಸರ್ವೇ ।

---

ಭಯಂಕರವಾದ ಆಕೃತಿ, ತೀಕ್ಷ್ಣವಾದ ಕೋರೆದಾಡೆಗಳು, ಕೂರಾದ ಉಗುರುಗಳು, ಎತ್ತರವಾದ ಮೂಗು, ತೆರೆದ ಬಾಯಿ, ಸಿಂಹದ ಮುಖ, ಮನುಷ್ಯದೇಹ, ಇಂಥ ವಿಚಿತ್ರಮೂರ್ತಿಯು ಸೂರ್ಯಕೋಟಿಗಳಿಗೆ ಸರಿಸಾಟಿಯಾಗಿಯೂ ಪ್ರಳಯಕಾಲದ ಅಗ್ನಿಗೆಣೆಯಾಗಿಯೂ ಇದ್ದು ದುಸ್ಸಹವಾದ ತೇಜಸ್ಸಿನಿಂದ ಕಂಗೊಳಿಸುತ್ತಿತ್ತು. ಹೆಚ್ಚು ಹೇಳುವುದೇಕೆ ? ಸಕಲ ಜಗತ್ತೂ ಆ ಮೂರ್ತಿಯಲ್ಲಿ ಅಡಗಿತ್ತು. ಇಂತಹ ರೂಪವನ್ನು ತಾಳಿ ಮಹಾತ್ಮನಾದ ಶ್ರೀಹರಿಯು ಸೂರ್ಯಾಸ್ತಮಾನಸಮಯಕ್ಕೆ ಸರಿಯಾಗಿ ಆ ದೈತ್ಯಾಧಿಪನ ರಾಜಧಾನಿಯನ್ನು ಕುರಿತು ತೆರಳಿದನು.

೨೮. ಆ ನರಸಿಂಹನು ಪ್ರಬಲರಾದ ದೈತ್ಯರೊಂದಿಗೆ ಬಲವಾಗಿ ಸೆಣಸಿ ಅವರೆಲ್ಲರನ್ನೂ ಒಟ್ಟೊಟ್ಟಿಗೆ ಹಿಡಿದು ಸಂಹರಿಸಿದ್ದಲ್ಲದೆ, ಆ ಅದ್ಭುತವಾದ|ಪರಾಕ್ರಮಿಯು ಆ ರಾಜಧಾನಿಯಲ್ಲೆಲ್ಲಾ ಸುತ್ತಾಡುತ್ತಾ ಕೈಗೆ ಸಿಕ್ಕಿದವರೆಲ್ಲರನ್ನೂ ತುಂಡರಿಸುತ್ತಿದ್ದನು.

೨೯. ಎಣೆಯಿಲ್ಲದ ಮಾಹಾತ್ಮ್ಯವುಳ್ಳ ಆ ನರಸಿಂಹಮೂರ್ತಿಯು ಯಾರಾರ ಕಣ್ಣಿಗೆ ಬಿತ್ತೋ ಆ ದೈತ್ಯರೆಲ್ಲರೂ ತಲ್ಲಣಿಸಿಹೋದರು. ಆಗ ದೈತ್ಯೇಂದ್ರನ ಮಗನಾದ

ಸಿಂಹಂ ಚ ತಂ ಸರ್ವಮಯಂ ನಿರೀಕ್ಷ್ಯ
ಪ್ರಹ್ಲಾದನಾಮಾ ದಿತಿಜೇಂದ್ರಪುತ್ರಃ ।
ಉವಾಚ ರಾಜಾನಮಯಂ ಮೃಗೇಂದ್ರೋ
ಜಗನ್ಮಯಃ ಕಿಂ ಸಮುಪಾಗತಶ್ಚ ॥ ೨೯ ॥

॥ ಪ್ರಹ್ಲಾದ ಉವಾಚ ॥

ಏಷ ಪ್ರವಿಷ್ಟೋ ಭಗವಾನನಂತೋ
ನೃಸಿಂಹಮಾತ್ರೋ ನಗರಂ ತ್ವದಂತಃ ।
ನಿವೃತ್ಯ ಯುದ್ಧಾಚ್ಛರಣಂ ಪ್ರಯಾಹಿ
ಪಶ್ಯಾಮಿ ಸಿಂಹಸ್ಯ ಕರಾಲಮೂರ್ತಿಂ ॥ ೩೦ ॥

ಯಸ್ಮಾನ್ನ ಯೋದ್ಧಾ ಭುವನತ್ರಯೇಽಪಿ
ಕುರುಷ್ವ ರಾಜ್ಯಂ ವಿನಮನ್ಮೃಗೇಂದ್ರಂ ।
ಶ್ರುತ್ವಾ ಸ್ವಪುತ್ರಸ್ಯ ವಚೋ ದುರಾತ್ಮಾ
ತಮಾಹ ಭೀತೋಽಸಿ ಕಿಮತ್ರ ಪುತ್ರ ॥ ೩೧ ॥

---

ಪ್ರಹ್ಲಾದನು ಸರ್ವಸ್ವರೂಪನಾದ ಆ ನರಸಿಂಹನನ್ನು ಕಂಡು ದೈತ್ಯರಾಜನನ್ನು ಕುರಿತು ಇಂತೆಂದನು. ಇದೇನು ? ಜಗತ್ತುಗಳೆಲ್ಲವನ್ನೂ ಒಳಗೊಂಡ ಈ ವಿಚಿತ್ರಸಿಂಹವು ಇಲ್ಲಿಗೆ ಬಂದುದೇಕೆ ?

೩೦. ಈ ವಿಚಿತ್ರವಾದ ನರಸಿಂಹವು ಮತ್ತೆ ಯಾರೂ ಅಲ್ಲ. ನಿನ್ನ ಮೃತ್ಯುವಾದ ಸಾಕ್ಷಾತ್‌ನ್ನಾರಾಯಣನೇ ಈರೂಪದಿಂದ್ನನಿನ್ನ ನಗರದೊಳಗೆ ಪ್ರವೇಶಿಸಿರುವನು. ಯುದ್ಧವನ್ನು ನಿಲ್ಲಿಸಿ ಈತನನ್ನು ಮರೆಹೊಗು. ಆ ಸಿಂಹದ ಭಯಂಕರವಾದ ಆಕೃತಿಯನ್ನೇ ಕಾಣುತ್ತಿದೇನೆ.

೩೧. ಈ ಮೂರು ಲೋಕದಲ್ಲಿಯೂ ಈತನಿಗೆದುರಾಗಿ ನಿಲ್ಲುವ ವೀರನನ್ನು ಕಾಣೆನು. ಈ ಮೃಗೆಂದ್ರನಿಗೆ ತಲೆವಾಗಿ ನಿನ್ನ ರಾಜ್ಯವನ್ನು ನಿಲ್ಲಿಸಿಕೋ. ಹೀಗೆ ತನ್ನ ಮಗನಾದ ಪ್ರಹ್ಲಾದನು ನುಡಿದುದನ್ನು ಕೇಳಿ ದುರಾತ್ಮನಾದ ಆ ದೈತ್ಯೇಂದ್ರನು ಅವನನ್ನು ಕುರಿತು, ವತ್ಸ, ಏನು ? ಈತನಿಗೆ ಹೆದರಿಕೊಂಡೆಯೇನು ಎಂದನು.

ಉಕ್ತ್ವೇತಿ ಪುತ್ರಂ ದಿತಿಜಾಧಿನಾಥೋ-
ದೈತ್ಯರ್ಷಭಾನ್ವೀರವರಾನ್ಸ ರಾಜಾ ।
ಗೃಹ್ಣಂತು ವೈ ಸಿಂಹಮಮುಂ ಭವಂತೋ
ವೀರಾ ವಿರೂಪಭ್ರುಕುಟೀಕ್ಷಣಂ ತು ॥ ೩೨ ॥

ತಸ್ಯಾಜ್ಞಯಾ ದೈತ್ಯವರಾಸ್ತತಸ್ತೇ
ಗೃಹೀತುಕಾಮಾ ವಿವಿಶುರ್ಮೃಗೇಂದ್ರಂ ।
ಕ್ಷಣೇನ ದಗ್ಧಾಃ ಶಲಭಾ ಇವಾಗ್ನಿಂ
ರೂಪಾಭಿಲಾಷಾತ್ಪ್ರವಿವಿಕ್ಷವೋ ವೈ ॥ ೩೩ ॥

ದೈತ್ಯೇಷು ದಗ್ಧೇಷ್ವಪಿ ದೈತ್ಯರಾಜ-
ಶ್ಚಕಾರ ಯುದ್ಧಂ ಸ ಮೃಗಾಧಿಪೇನ ।
ಶಸ್ತ್ರೈಸ್ಸಮಗ್ರೈರಖಿಲೈಸ್ತಥಾಸ್ತ್ರೈ-
ಶ್ಶಕ್ತ್ಯೃಷ್ಟಿಪಾಶಾಂಕುಶಪಾವಕಾದ್ಯೈಃ ॥ ೩೪ ॥

---

೩೨. ಈರೀತಿ ಮಗನಿಗೆ ನುಡಿದು ಆ ದೈತ್ಯೇಂದ್ರನು ವೀರರಾದ ದೈತ್ಯರನ್ನು ಕರೆದು, ಎಲೈ ವೀರರೇ, ವಿಕಾರವಾದ ಹುಬ್ಬುಗಳೂ ಕಣ್ಣುಗಳೂ ಉಳ್ಳ ಈ ವಿಚಿತ್ರವಾದ ಸಿಂಹವನ್ನು ಹಿಡಿದುಕೊಳ್ಳಿರಿ ಎಂದನು.

೩೩. ಆ ದೈತ್ಯೇಂದ್ರನ ಅಪ್ಪಣೆಯಾದೊಡನೆಯೇ ಆ ದೈತ್ಯವೀರರು ಆ ಸಿಂಹವನ್ನು ಹಿಡಿಯಲೆಳಸಿ ಮುಂದೆನುಗ್ಗಿದರು. ಆದರೇನು? ದೀಪದ ರೂಪಿಗೆ ಮನಸೋತು ಅದನ್ನು ಹೊಗಲೆಳೆಸುವ ಪತಂಗಗಳಂತೆ ಕ್ಷಣಮಾತ್ರದಲ್ಲಿ ಸುಟ್ಟು ಬೂದಿಯಾಗಿ ಹೋದರು.

೩೪. ತನ್ನ ಕಡೆಯ ವೀರರು ಸುಟ್ಟುಬೂದಿಯಾದುದನ್ನು ಕಂಡು ದೈತ್ಯೇಂದ್ರನು ಆ ಮೃಗೇಂದ್ರನೊಡನೆ ತಾನೇ ಯುದ್ಧಕ್ಕೆ ನಿಂತು ಶಕ್ತಿ, ಋಷ್ಟಿ, ಪಾಶ, ಅಂಕುಶ, ವೊದಲಾದ ಆಯುಧಗಳಿಂದಲೂ ಆಗ್ನೇಯಾಸ್ತ್ರಗಳಿಂದಲೂ ಹೋರಾಡಿದನು.

ಸಂಯುಧ್ಯತೋರೇವ ತಯೋರ್ಜಗಾಮ
ಬ್ರಾಹ್ಮಂ ದಿನಂ ವ್ಯಾಸ ಹಿ ಶಸ್ತ್ರಪಾಣ್ಯೋಃ ।
ಪ್ರವೀರಯೋರ್ವೀರರವೇಣ ಗರ್ಜತೋಃ
ಪರಸ್ಪರಂ ಕ್ರೋಧಸುಯುಕ್ತಚೇತಸೋಃ ॥ ೩೫ ॥

ತತಸ್ಸ ದೈತ್ಯಸ್ಸಹಸಾ ಬಹೂಂಶ್ಚ
ಕೃತ್ವಾ ಭುಜಾಂಚ್ಛಸ್ತ್ರಯುತಾನ್ನಿರೀಕ್ಷ್ಯ ।
ನೃಸಿಂಹರೂಪಂ ಪ್ರಯಯೌ ಮೃಗೇಂದ್ರಂ
ಸಂಯುಧ್ಯಮಾನಂ ಸಹಸಾ ಸಮಂತಾತ್ ॥ ೩೬ ॥

ತತಸ್ಸುಯುದ್ಧಂ ತ್ವತಿದುಃಸಹಂ ತು
ಶಸ್ತ್ರೈಸ್ಸಮಸ್ತೈಶ್ಚ ತಥಾಖಿಲಾಸ್ತ್ರೈಃ ।
ಕೃತ್ವಾ ಮಹಾದೈತ್ಯವರೋ ನೃಸಿಂಹಂ
ಕ್ಷಯಂ ಗತೈಶ್ಶೂಲಧರೋಽಭ್ಯುಪಾಯಾತ್ ॥ ೩೭ ॥

ತತೋ ಗೃಹೀತಸ್ಸ ಮೃಗಾಧಿಪೇನ
ಭುಜೈರನೇಕೈರ್ಗಿರಿಸಾರವದ್ಭಿಃ ।

---

೩೫. ಎಲೈ ವ್ಯಾಸ, ಅವರೀರ್ವರೂ ಮಹಾವೀರರು. ಒಬ್ಬೊಬ್ಬರೂ ಸಿಂಹನಾದ ಮಾಡುತ್ತಿದ್ದರು ಒಬ್ಬೊಬ್ಬರಿಗೂ ಪರಸ್ಪರವಾಗಿ ಮನಸ್ಸಿನಲ್ಲಿ ಕೋಪವು ಕ್ಷುಕ್ತಿತ್ತು. ಹೀಗೆ ಆ ವೀರರು ಶಸ್ತ್ರಗಳನ್ನು ಧರಿಸಿ ಯುದ್ಧಮಾಡುತ್ತಿರಲು ಬ್ರಹ್ಮನ ಒಂದುದಿನವು ಕಳೆದುಹೋಯಿತು.

೩೬. ಬಳಿಕ ಆ ದೈತ್ಯರಾಜನು ಸುತ್ತಲೂ ಮಹಾಶೌರ್ಯದಿಂದ ಹೋರಾಡುತ್ತಿರುವ ಆ ನರಸಿಂಹಮೂರ್ತಿಯನ್ನು ಕಂಡು ಇದ್ದಕ್ಕಿದ್ದಂತೆ ಬಗೆಬಗೆಯಾದ ಆಯುಧಗಳನ್ನು ಧರಿಸಿದ್ದ ಅಸಂಖ್ಯಾತವಾದ ತೋಳುಗಳನ್ನು ತಳೆದು ಆ ಮೃಗೇಂದ್ರನ ಕಡೆಗೆ ನುಗ್ಗಿದನು.

೩೭. ಅನಂತರ ಆ ಮಹಾದೈತ್ಯನು ಎಲ್ಲ ಶಸ್ತ್ರಗಳಿಂದಲೂ, ನಿಖಿಲವಾದ ಅಸ್ತ್ರಗಳಿಂದಲೂ ಆ ನೃಸಿಂಹನೊಡನೆ ಅತಿ ದುಸ್ಸಾಧ್ಯವಾದ ಯುದ್ಧವನ್ನು ಮಾಡಿ, ಆ ಆಯುಧಗಳೆಲ್ಲವೂ ನಾಶವಾಗಲು ಶೂಲವನ್ನು ಹಿಡಿದು ಮೇಲೆ ಬೀಳಬಂದನು.

೩೮-೩೯. ಅನಂತರ ಆ ಮೃಗರಾಜನು ಸರ್ವತೋಪಮವಾದ ತನ್ನ ಬಾಹುಗಳಿಂದ ಆ ದೈತ್ಯೇಂದ್ರನನ್ನು ಹಿಡಿದು ತನ್ನ ಮುಂಡಿಯಮೇಲೆ ಕೆಡವಿಕೊಂಡು ಮರ್ಮ

ನಿಧಾಯ ಜಾನೌ ಸ ಭುಜಾಂತರೇಷು
ನಖಾಂಕುರೈರ್ದಾನವಮರ್ಮಭಿದ್ಭಿಃ ॥ ೩೮ ॥

ನಖಾಸ್ತ್ರಹೃತ್ಪದ್ಮಮಸೃಗ್ವಿಮಿಶ್ರ-
ಮುತ್ಪಾದ್ಯ ಜೀವಾದ್ವಿಗತಃ ಕ್ಷಣೇನ ।
ತ್ಯಕ್ತಸ್ತದಾನೀಂ ಸ ತು ಕಾಷ್ಠಭೂತಃ
ಪುನಃ ಪುನಶ್ಚೂರ್ಣಿತಸರ್ವಗಾತ್ರಃ ॥ ೩೯ ॥

ತಸ್ಮಿನ್ಹತೇ ದೇವರಿಪೌ ಪ್ರಸನ್ನಃ
ಪ್ರಹ್ಲಾದಮಾಮಂತ್ರ್ಯ ಕೃತಪ್ರಣಾಮಂ ।
ರಾಜ್ಯೇಽಭಿಷಿಚ್ಯಾದ್ಭುತವೀರ್ಯ ವಿಷ್ಣು-
ಸ್ತತಃ ಪ್ರಯಾತೋ ಗತಿಮಪ್ರತರ್ಕ್ಯಾಂ ॥ ೪೦ ॥

ತತೋಽತಿಹೃಷ್ಟಾಸ್ಸಕಲಾಸ್ಸುರೇಶಾಃ
ಪ್ರಣಮ್ಯ ವಿಷ್ಣುಂ ದಿಶಿ ವಿಪ್ರ ತಸ್ಯಾಂ ।
ಯಯುಃ ಸ್ವಧಾಮಾನಿ ಪಿತಾಮಹಾದ್ಯಾಃ
ಕೃತಸ್ವಕಾರ್ಯಂ ಭಗವಂತಮೀಡ್ಯಂ ॥ ೪೧ ॥

---

ಭೇದಿಯಾದ ತನ್ನ ಕೂರಾದ ಉಗುರುಗಳಿಂದ ಆತನ ಎದೆಯನ್ನು ಸೀಳಿ ರಕ್ತಸಮ್ಮಿಶ್ರವಾದ ಅವನ ಹೃದಯಕಮಲವನ್ನು ಕಿತ್ತುಬಿಟ್ಟನು. ಇಂತು ಆ ದೈತ್ಯೇಂದ್ರನು ಅಜ್ಜಿಬುಜ್ಜಿಯಾದ ಅವಯವಗಳುಳ್ಳವನಾಗಿ ಕ್ಷಣಮಾತ್ರದಲ್ಲಿ ಜೀವವನ್ನು ನೀಗಿ ಮರದತುಂಡಿನಂತೆ ಬಿದ್ದುಬಿಟ್ಟನು.

೪೦. ಅದ್ಭುತವಾದ ಪರಾಕ್ರಮವುಳ್ಳ ವಿಷ್ಣುವು, ಆ ದೈತ್ಯರಾಜನು ಹತನಾದ ಮೇಲೆ ಪ್ರಸನ್ನನಾಗಿ ಶರಣಾಗತನಾದ ಪ್ರಹ್ಲಾದನನ್ನು ಅವನ ರಾಜ್ಯದಲ್ಲಿ ಅಭಿಷೇಕ ಮಾಡಿ ಯಾರಿಗೂ ಕಾಣದಂತೆ ತನ್ನ ಲೋಕವನ್ನು ಸೇರಿದನು.

೪೧. ಅನಂತರ ಬ್ರಹ್ಮಾದಿ ದೇವತೆಗಳು ತಮ್ಮ ಕೆಲಸವನ್ನು ನೆರವೇರಿಸಿ ಕೊಟ್ಟಪೂಜ್ಯನಾದ ಆ ಭಗವಂತನನ್ನು ಕಾಣದೆ ಆ ದಿಕ್ಕಿನಕಡೆ ತಿರುಗಿ ಪ್ರಣಾಮ ಮಾಡಿ ಬಹುಸಂತೋಷದಿಂದ ತಮ್ಮತಮ್ಮ ಲೋಕಗಳಿಗೆ ತೆರಳಿದರು.

ಪ್ರವರ್ಣಿತಂ ತ್ವಂಧಕಜನ್ಮ ರುದ್ರಾ-
ದ್ಧಿರಣ್ಯನೇತ್ರಸ್ಯ ಮೃತಿರ್ವರಾಹಾತ್ ।
ನೃಸಿಂಹತಸ್ತತ್ಸಹಜಸ್ಯ ನಾಶಃ
ಪ್ರಹ್ಲಾದರಾಜ್ಯಾಪ್ತಿರಿತಿ ಪ್ರಸಂಗಾತ್ ॥ ೪೨ ॥

ಶೃಣು ತ್ವಿದಾನೀಂ ದ್ವಿಜವರ್ಯ ಮತ್ತೋಽನ್ಧ-
ಕಪ್ರಭಾವಂ ಭವಕೃತ್ಪ್ರಲಬ್ಧಂ ।
ಹರೇಣ ಯುದ್ಧಂ ಖಲು ತಸ್ಯ ಪಶ್ಚಾ-
ದ್ಗಣಾಧಿಪತ್ಯಂ ಗಿರಿಶಸ್ಯ ತಸ್ಯ ॥ ೪೩ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಗಣಾಧಿಪತ್ಯಪ್ರಾಪ್ತ್ಯಂಧಕ
ಜನ್ಮಹಿರಣ್ಯನೇತ್ರ ಹಿರಣ್ಯಕಶಿಪುವಧವರ್ಣನಂ ನಾಮ
ತ್ರಿಚತ್ವಾರಿಂಶೋಽಧ್ಯಾಯಃ.

---

೪೨-೪೩. ಓ ಬ್ರಾಹ್ಮಣಶ್ರೇಷ್ಠ, ಶಿವನಿಂದ ಅಂಧಕಾಸುರನು ಜನಿಸಿದುದನ್ನು ತಿಳಿಸಿದೆನು. ಹಾಗೆಯೇ ಪ್ರಸಂಗವಶದಿಂದ ಹಿರಣ್ಯಾಕ್ಷನು ಆದಿವರಾಹನಿಂದ ಸತ್ತುದು, ಆತನ ಸಹೋದರನಾದ ಹಿರಣ್ಯಕಶಿಪುವು ನೃಸಿಂಹಸ್ವಾಮಿಯಿಂದ ನಿಗ್ರಹಿಸಲ್ಪಟ್ಟುದು, ಪ್ರಹ್ಲಾದನಿಗೆ ರಾಜ್ಯವು ಲಭಿಸಿದುದು, ಇದನ್ನೂ ತಿಳಿಸಿದೆನು. ಈಗ ಶಿವಾನುಗ್ರಹದಿಂದ ಆ ಅಂಧಕಾಸುರನಿಗುಂಟಾದ ಪ್ರಭಾವವನ್ನು ತಿಳಿಸುವೆನು. ಆ ಅಂಧಕನು ಶಿವನೊಡನೆ ಹೋರಾಡಿ ಕೊನೆಗೆ ಶಿವನಿಗೆ ಪರಮಪ್ರಿಯನಾದ ಗಣಾಧಿಪತಿಯಾದನು, ಅದನ್ನು ಹೇಳುವೆನು ಕೇಳು ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಅಂಧಕಜನ್ಮ, ಹಿರಣ್ಯಾಕ್ಷ ಹಿರಣ್ಯಕಶಿಪುವಧವರ್ಣನವೆಂಬ
ನಲವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಚತುಶ್ಚತ್ವಾರಿಂಶೋಽಧ್ಯಾಯಃ

---

॥ ಸನತ್ಕುಮಾರ ಉವಾಚ ॥

ತತೋ ಹಿರಣ್ಯಾಕ್ಷಸುತಃ ಕದಾಚಿ-
ತ್ಸಂಶ್ರಾವಿತೋ ನರ್ಮಯುತೈರ್ಮದಾಂಧೈಃ ।
ತೈರ್ಭ್ರಾತೃಭಿಸ್ಸಂಪ್ರಯುತೋ ವಿಹಾರೇ
ಕಿಮಂಧ ರಾಜ್ಯೇನ ತವಾದ್ಯ ಕಾರ್ಯಂ ॥ ೧ ॥

ಹಿರಣ್ಯನೇತ್ರಸ್ತು ಬಭೂವ ಮೂಢಃ
ಕಲಿಪ್ರಿಯಂ ನೇತ್ರವಿಹೀನಮೇವ ।

---

### ನಲವತ್ತನಾಲ್ಕನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :—ಓ ವ್ಯಾಸ, ಒಂದಾನೊಂದು ಸಲ ಹಿರಣ್ಯಾಕ್ಷನ ಮಗನಾದ ಅಂಧಕಾಸುರನು, ತನ್ನ ಪ್ರೀತಿಗೆ ಪಾತ್ರರಾದ ಗೆಳೆಯರೊಡನೆ ವಿನೋದಗೋಷ್ಠಿಯಲ್ಲಿರುವಾಗ ಮದಾಂಧರಾದ ಅವನ ಅಣ್ಣತಮ್ಮಂದಿರು ಅವನನ್ನಿಂತು ನುಡಿದರು. ಎಲೈ ಅಂಧಕನೇ, ನಿನಗೀಗ ಈ ರಾಜ್ಯದಿಂದಾಗಬೇಕಾದುದೇನು?

೨. ಹಿರಣಾಕ್ಷನು ಒಬ್ಬ ಬುದ್ಧಿಹೀನನು. ಅಷ್ಟು ಘೋರವಾದ ತಪಸ್ಸನ್ನಾಚರಿಸಿ, ಶಿವನನ್ನು ಒಲಿಸಿಕೊಂಡು, ನಾನಾವಿಧವಾದ ಕೊರತೆಗಳಿಗೆ ನೆಲೆಯಾಗಿ,

ಯೋ ಲಬ್ಧವಾಂಸ್ತ್ವಾಂ ವಿಕೃತಂ ವಿರೂಪಂ
ಘೋರೈಸ್ತಪೋಭಿರ್ಗಿರಿಶಂ ಪ್ರಸಾದ್ಯ ॥ ೨

ಸ ತ್ವಂ ನ ಭಾಗೀ ಖಲು ರಾಜ್ಯಕಸ್ಯ
ಕಿಮನ್ಯಜಾತೋಽಪಿ ಲಭೇತ ರಾಜ್ಯಂ ।
ವಿಚಾರ್ಯತಾಂ ತದ್ಭವತೈವ ನೂನಂ
ವಯಂ ತು ತದ್ಭಾಗಿನ ಏವ ಸತ್ಯಂ ॥ ೩ ॥

॥ ಸನತ್ಕುಮಾರ ಉವಾಚ ॥

ತೇಷಾಂ ತು ವಾಕ್ಯಾನಿ ನಿಶಮ್ಯ ತಾನಿ
ವಿಚಾರ್ಯ ಬುಧ್ಯಾ ಸ್ವಯಮೇವ ದೀನಃ ।
ತಾಂಭ್ರಾಂತಯಿತ್ವಾ ವಿವಿಧೈರ್ವಚೋಭಿ-
ರ್ಗತಸ್ತ್ವರಣ್ಯಂ ನಿಶಿ ನಿರ್ಜನಂ ತು ॥ ೪ ॥

ವರ್ಷಾಯುತಂ ತತ್ರ ತಪಶ್ಚಚಾರ
ಜಜಾಪ ಜಾಪ್ಯಂ ವಿಧೃತೈಕಪಾದಃ ।

---

ಕಣ್ಣುಕಾಣದೆ, ಅಸಹ್ಯವಾದ ವಿಕಾರರೂಪವುಳ್ಳ ನಿನ್ನನ್ನು ಮಗನೆಂದು ಮೆಚ್ಚಿ, ನಿನ್ನನ್ನು ಸ್ವೀಕರಿಸಿದನಲ್ಲವೇ ?

೩. ನಿನಗೆ ಈ ರಾಜ್ಯದ ಮೇಲೆ ಅಧಿಕಾರವಿಲ್ಲ. ರಾಜ್ಯದ ಉತ್ತರಾಧಿಕಾರಿಯನ್ನು ಬಿಟ್ಟು, ಮತ್ತಾರಮಗನಿಗೋ ರಾಜ್ಯವು ಲಭಿಸುವುದೇ ? ನೀನೇ ಇದನ್ನು ಚೆನ್ನಾಗಿ ಆಲೋಚಿಸು. ನಿಜವಾಗಿಯೂ, ಈ ರಾಜ್ಯಕ್ಕೆ ನಾವು ಭಾಗಿಗಳು ಎಂದರು.

೪. ಓ ವ್ಯಾಸ, ಆ ಅಂಧಕನು ಅವರ ಮಾತುಗಳನ್ನು ಕೇಳಿ, ತಾನು ಮನಸ್ಸಿನಲ್ಲಿ ನ್ಯಾಯವಾದುದೇನೆಂದು ವಿಮರ್ಶಿಸಿ, ವ್ಯಥಿತನಾಗಿ, ಅವರೆಲ್ಲರನ್ನೂ ಬಗೆಬಗೆಯ ಮಾತುಗಳಿಂದ ಸಂತೈಸಿ, ರಾತ್ರಿಯಲ್ಲೆದ್ದು ನಿರ್ಜನವಾದ ಅರಣ್ಯವನ್ನು ಪ್ರವೇಶಿಸಿದನು.

೫. ಅಲ್ಲಿ ಹತ್ತು ಸಹಸ್ರವರ್ಷಗಳಕಾಲ ಒಂದೇಕಾಲಿನಲ್ಲಿ ನಿಂತುಕೊಂಡು ಆಹಾರವನ್ನು ವರ್ಜಿಸಿ ತೋಳುಗಳನ್ನು ಮೇಲಕ್ಕೆ ನೀಡಿಕೊಂಡು, ಅತಿ ಕಠಿಣವಾದ ನಿಯಮ

ಆಹಾರಹೀನೋ ನಿಯಮೋರ್ಧ್ವಬಾಹುಃ
ಕರ್ತುಂ ನ ಶಕ್ಯಂ ಹಿ ಸುರಾಸುರೈರ್ಯತ್ ॥ ೫ ॥

ಪ್ರಜ್ವಾಲ್ಯ ವಹ್ನಿಂ ಸ್ಮ ಜುಹೋತಿ ಗಾತ್ರ-
ಮಾಂಸಂ ಸರಕ್ತಂ ಖಲು ವರ್ಷಮಾತ್ರಂ ।
ತೀಕ್ಷ್ಣೇನ ಶಸ್ತ್ರೇಣ ನಿಕೃತ್ಯ ದೇಹಾ-
ತ್ಸಮಂತ್ರಕಂ ಪ್ರತ್ಯಹಮೇವ ಹುತ್ವಾ ॥ ೬ ॥

ಸ್ನಾಯ್ವಸ್ಥಿಶೇಷಂ ಕುಣಪಂ ತದಾಸೌ
ಕ್ಷಯಂ ಗತಂ ಶೋಣಿತಮೇವ ಸರ್ವಂ ।
ಯದಾಸ್ಯ ಮಾಂಸಾನಿ ನ ಸಂತಿ ದೇಹಂ
ಪ್ರಕ್ಷೇಪ್ತುಕಾಮಸ್ತು ಹುತಾಶನಾಯ ॥ ೭ ॥

ತತಃ ಸ ದೃಷ್ಟಸ್ತ್ರಿದಶಾಲಯೈರ್ಜನೈಃ
ಸುವಿಸ್ಮಿತೈರ್ಭೀತಿಯುತೈಸ್ಸಮಸ್ತೈಃ ।
ಅಥಾಮರೈಶ್ಚಿಪ್ರತರಂ ಪ್ರಸಾದಿತೋ
ಬಭೂವ ಧಾತಾ ನುತಿಭಿರ್ನುತೋ ಹಿ ॥ ೮ ॥

---

ದಿಂದ ಸುರಾಸುರರಿಗೂ ಸಾಧ್ಯವಿಲ್ಲದಂತಹ ತಪಸ್ಸನ್ನು ಆಚರಿಸುತ್ತಾ ಮಂತ್ರಪುರಶ್ಚರಣ ವನ್ನು ಮಾಡುತ್ತಿದ್ದನು.

೬. ಆ ಅಂಧಕನು ಒಂದು ವರ್ಷಕಾಲ ಮೊನಚಾದ ಆಯುಧದಿಂದ ತನ್ನ ದೇಹವನ್ನು ಕತ್ತರಿಸಿ, ರಕ್ತ ಬಸಿಯುತ್ತಿರುವ ಆ ಮಾಂಸಖಂಡವನ್ನು ಪ್ರತಿ ನಿತ್ಯವೂ, ಮಂತ್ರಪೂರ್ವಕವಾಗಿ, ಜ್ವಲಿಸುತ್ತಿರುವ ಅಗ್ನಿಯಲ್ಲಿ ಹೋಮಮಾಡುತ್ತ ಬಂದನು.

೭. ಆಗ ಈತನ ದೇಹದಲ್ಲಿ ನರಗಳೂ, ಮೂಳೆಗಳೂ ಮಾತ್ರ ಉಳಿದುವು. ರಕ್ತವೆಲ್ಲವೂ ಕ್ಷಯಿಸಿಹೋಯಿತು. ಹೀಗಾಗಿ ಇವನ ದೇಹದಲ್ಲಿ ಮಾಂಸವೇ ಮುಗಿದು ಹೋಗಲು, ಆ ಅಗ್ನಿಗೆ ತನ್ನ ಶರೀರವನ್ನೇ ಅರ್ಪಿಸಲು ಸಿದ್ಧನಾದನು.

೮. ಇಷ್ಟು ಘೋರವಾಗಿ ತಪಸ್ಸುಮಾಡುತ್ತಿರುವ ಈತನನ್ನು ಕಂಡು, ದೇವತೆ ಗಳೆಲ್ಲರೂ ಅಚ್ಚರಿಗೊಂಡರು. ಅಷ್ಟೇ ಅಲ್ಲದೆ ಅವರಿಗೆ ಹೆದರಿಕೆಯೂ ಹುಟ್ಟಿತು. ಆಗ ಅವರೆಲ್ಲರೂ ಬ್ರಹ್ಮನನ್ನು ಬಹುವಿಧವಾಗಿ ಸ್ತೋತ್ರಮಾಡಿ, ಜಾಗ್ರತೆ ಒಲಿಸಿಕೊಂಡು, ಅಂಧಕನಕಡೆ ಗಮನವೀಯುವಂತೆ ಪ್ರಾರ್ಥಿಸಿದರು.

ನಿವಾರಯಿತ್ವಾಥ ಪಿತಾಮಹಸ್ತಂ
ಹ್ಯುವಾಚ ತ್ವಂ ಚಾದ್ಯ ವರಂ ವೃಣೀಷ್ವ ।
ಯಸ್ಯಾಪ್ತಿಕಾಮಸ್ತವ ಸರ್ವಲೋಕೇ
ಸುದುರ್ಲಭಂ ದಾನವ ತಂ ಗೃಹಾಣ ॥ ೯ ॥

ಸ ಪದ್ಮಯೋನೇಸ್ತು ವಚೋ ನಿಶಮ್ಯ
ಪ್ರೋವಾಚ ದೀನಃ ಪ್ರಣತಸ್ತು ದೈತ್ಯಃ ।
ಯೈರ್ನಿಷ್ಠುರೈರ್ನೋ ಪ್ರಹೃತಂ ತು ರಾಜ್ಯಂ
ಪ್ರಹ್ಲಾದಮುಖ್ಯಾ ಮಮ ಸಂತು ಭೃತ್ಯಾಃ ॥ ೧೦ ॥

ಅಂಧಸ್ಯ ದಿವ್ಯಂ ಹಿ ತಥಾಸ್ತು ಚಕ್ಷು-
ರಿಂದ್ರಾದಯೋ ಮೇ ಕರದಾ ಭವಂತು ।
ಮೃತ್ಯುಸ್ತು ಮಾಭೂನ್ಮಮ ದೇವದೈತ್ಯ-
ಗಂಧರ್ವಯಕ್ಷೋರಗಮಾನುಷೇಭ್ಯಃ ॥ ೧೧ ॥

---

೯. ಬಳಿಕ ಪಿತಾಮಹನು, ಅಂಧಕನ ಬಳಿಗೆ ಬಂದು, ಅವನ ತಪಸ್ಸನ್ನು ನಿಲ್ಲಿಸುವಂತೆ ಹೇಳಿ, ಓ ದಾನವ, ನಿನಗೆ ಬೇಕಾದ ವರವನ್ನು ಕೇಳು. ಸಕಲ ಲೋಕಗಳಲ್ಲಿಯೂ ಯಾವುದು ಸಿಗಲಾರದೋ, ಅಂತಹುದನ್ನೂ ಬೇಕಾದರೆ ತೆಗೆದುಕೋ ಎಂದನು.

೧೦. ಬ್ರಹ್ಮನಾಡಿದ ಮಾತನ್ನು ಕೇಳುತ್ತಲೇ ಆ ದೈತ್ಯನು ಆತನಿಗೆ ನಮಸ್ಕರಿಸಿ ದೈನ್ಯದಿಂದ ಇಂತು ಬಿನ್ನವಿಸಿದನು. ಕಠಿಣಚಿತ್ತರಾಗಿ ಯಾರು ನನ್ನ ರಾಜ್ಯವನ್ನು ಅಪಹರಿಸಿದರೋ ಆ ಪ್ರಹ್ಲಾದ ಮೊದಲಾದ ದೈತ್ಯರೆಲ್ಲರೂ ನನ್ನ ಸೇವಕರಾಗಿರುವಂತೆ ಆಗಲಿ.

೧೧. ಕುರುಡನಾದ ನನಗೆ ಹೊಳೆಹೊಳೆಯುವ ಕಂಗಳುಂಟಾಗಲಿ. ಇಂದ್ರಾದಿಗಳು ನನಗೆ ಕಪ್ಪವನ್ನು ತೆರುವಂತಾಗಲಿ. ಮತ್ತು ದೇವತೆಗಳಿಂದಲೂ, ದೈತ್ಯರಿಂದಲೂ, ಗಂಧರ್ವ, ಯಕ್ಷ, ನಾಗ, ಮನುಷ್ಯ, ಇವರಿಂದಲೂ, ನನಗೆಂದಿಗೂ ಮರಣ ಉಂಟಾಗದಿರಲಿ.

ನಾರಾಯಣಾದ್ವಾ ದಿತಿಜೇಂದ್ರಶತ್ರೋ-
ಸ್ಸರ್ವಾಜ್ಜನಾತ್ಸರ್ವಮಯಾಚ್ಚ ಶರ್ವಾತ್ ।
ಶ್ರುತ್ವಾ ವಚಸ್ತಸ್ಯ ಸುದಾರುಣಂ ತ-
ತ್ಸಶಂಕಿತಃ ಪದ್ಮಭವಸ್ತಮಾಹ ॥ ೧೨ ॥

॥ ಬ್ರಹ್ಮೋವಾಚ ॥

ದೈತ್ಯೇಂದ್ರ ಸರ್ವಂ ಭವಿತಾ ತದೇತ-
ದ್ವಿನಾಶಹೇತುಂ ಚ ಗೃಹಾಣ ಕಿಂಚಿತ್ ।
ಯಸ್ಮಾನ್ನ ಜಾತೋ ನ ಜನಿಷ್ಯತೇ ವಾ
ಯೋ ನ ಪ್ರವಿಷ್ಟೋ ಮುಖಮಂತಕಸ್ಯ ॥ ೧೩ ॥

ಅತ್ಯಂತದೀರ್ಘಂ ಖಲು ಜೀವಿತಂ ತು
ಭವಾದೃಶಾಸ್ಸತ್ಪುರುಷಾಸ್ತ್ಯಜಂತು ।
ಏತದ್ವಚಸ್ಸಾನುನಯಂ ನಿಶಮ್ಯ
ಪಿತಾಮಹಾತ್ಪ್ರಾಹ ಪುನಸ್ಸ ದೈತ್ಯಃ ॥ ೧೪ ॥

---

೧೨. ಆದರಂತೆಯೇ, ದೈತ್ಯಾಂತಕನಾದ ಆ ನಾರಾಯಣನಿಂದಲೂ ಎಲ್ಲ ಬಗೆಯ ಜನರಿಂದಲೂ, ಹೆಚ್ಚೇಕೆ? ಸರ್ವಸ್ವರೂಪನಾದ ಶಿವನಿಂದಲೂ ನನಗೆ ಮರಣ ವಿಲ್ಲದಿರಲಿ ಎಂದನು. ಈ ಘೋರವಾದ ಮಾತನ್ನು ಕೇಳಿದೊಡನೆಯೇ, ಬ್ರಹ್ಮನು ಚಕಿತನಾಗಿ ಅವನನ್ನು ಕುರಿತು ಈರೀತಿ ನುಡಿದನು.

೧೩. ಓ ದೈತ್ಯೇಂದ್ರ, ನೀನು ಕೇಳಿದಂತೆಯೇ ಎಲ್ಲವೂ ಆಗುವುದು. ಆದರೆ ಯಾವುದಾದರೂ ಒಂದನ್ನು ನಿನ್ನ ನಾಶಕ್ಕೆ ಕಾರಣವಾಗುವಂತೆ ಆರಿಸಿಕೋ, ಏಕೆಂದರೆ ಮತ್ಯುವಿನ ಮುಖವನ್ನು ಪ್ರವೇಶಿಸದಿರುವವನು ಇದುವರೆಗೆ ಹುಟ್ಟಿಲ್ಲ, ಮುಂದೆ ಹುಟ್ಟಲೂ ಲಾರ.

೧೪. ನಿನ್ನಂತಹ ಸತ್ಪುರುಷರು, ಅತಿ ದೀರ್ಘವಾದ ಬದುಕಿಗೆ ಆಸೆಪಡದೆ ಅದನ್ನು ಬಿಟ್ಟುಬಿಡಬೇಕು. ಹೀಗೆ ಬ್ರಹ್ಮನು ನುಡಿದುದನ್ನು ಕೇಳಿ ಮನಸ್ಸಿನಲ್ಲಿ ಸ್ವಲ್ಪ ದುಃಖಿತನಾಗಿ ಆ ದೈತ್ಯನು ಪುನಃ ಬ್ರಹ್ಮನನ್ನು ಕುರಿತು

॥ ಅಂಧಕ ಉವಾಚ ॥

ಕಾಲತ್ರಯೇ ಯಾಶ್ಚ ಭವಂತಿ ನಾರ್ಯಃ
ಶ್ರೇಷ್ಠಾಶ್ಚ ಮಧ್ಯಾಶ್ಚ ತಥಾ ಕನಿಷ್ಠಾಃ ।
ತಾಸಾಂ ಚ ಮಧ್ಯೇ ಖಲು ರತ್ನಭೂತಾ
ಮಮಾಪಿ ನಿತ್ಯಂ ಜನನೀವ ಕಾಚಿತ್ ॥ ೧೫ ॥

ಕಾಯೇನ ವಾಚ ಮನಸಾಪ್ಯಗಮ್ಯಾ
ನಾರೀ ನೃಲೋಕಸ್ಯ ಚ ದುರ್ಲಭಾಯ ।
ತಾಂ ಕಾಮಯಾನಸ್ಯ ಮಮಾಸ್ತು ನಾಶೋ
ದೈತ್ಯೇಂದ್ರಭಾವಾದ್ಭಗವಾನ್ಸ್ವಯಂಭೂಃ ॥ ೧೬ ॥

ವಾಕ್ಯಂ ತದಾಕರ್ಣ್ಯ ಸ ಪದ್ಮಯೋನಿಃ
ಸುವಿಸ್ಮಿತಶ್ಶಂಕರಪಾದಪದ್ಮಂ ।
ಸಸ್ಮಾರ ಸಂಪ್ರಾಪ್ಯ ನಿದೇಶಮಾಶು
ಶಂಭೋಸ್ತು ತಂ ಪ್ರಾಹ ತತೋಽಂಧಕಂ ವೈ ॥ ೧೭ ॥

---

೧೫. ಎಲೈ ಭಗವಂತನಾದ ಬ್ರಹ್ಮದೇವನೆ, ಹಿಂದೆಯೂ, ಇಂದೂ ಮತ್ತು ಮುಂದೆಯೂ ಇರುವ ಉತ್ತಮ, ಮಧ್ಯಮ, ಅಧಮರಾದ ನಾರಿಯರಲ್ಲೆಲ್ಲ ಯಾವಾಕೆಯು ರತ್ನಪ್ರಾಯಳಾಗಿರುವಳೋ, ಯಾವಾಕೆಯು ಸರ್ವದಾ ನನಗೆ ತಾಯಿಯಂತೆ ಪೂಜಾರ್ಹಳೋ,

೧೬. ಯಾವಾಕೆಯು, ದೇಹದಿಂದಲಾಗಲೀ, ಮಾತಿನಿಂದಲಾಗಲೀ, ಮನಸ್ಸಿನಿಂದಲಾಗಲೀ, ದೂಷಿಸಲ್ಪಡಲು ಅಸಾಧ್ಯಳೋ, ಯಾವಾಕೆಯು ಮನುಷ್ಯಮಾತ್ರನಿಗೆ ದುರ್ಲಭಳೋ, ಅಂತಹ ನಾರಿಯನ್ನು ದೈತ್ಯಚಕ್ರವರ್ತಿಯು ನಾನೆಂಬ ಸೊಕ್ಕಿನಿಂದ ಎಚ್ಚರದಪ್ಪಿ ನಾನೇನಾದರೂ ಕಾಮಿಸಿದ ಪಕ್ಷದಲ್ಲಿ ಆಗ ನನಗೆ ಮರಣವುಂಟಾಗಲಿ ಎಂದನು.

೧೭. ಆ ಮಾತನ್ನು ಕೇಳಿ ಬ್ರಹ್ಮನಿಗೆ ಬಹು ಆಶ್ಚರ್ಯವಾಯಿತು ಆಗ ಮನಸ್ಸಿನಲ್ಲಿ ಶಿವನ ಅಡಿದಾವರೆಗಳನ್ನು ನೆನೆಯಲು ಕ್ಷಣಮಾತ್ರದಲ್ಲಿ ಶಿವನ ಪ್ರೇರಣೆಯು ದೊರೆಯಿತು. ಬಳಿಕ ಬ್ರಹ್ಮನು ಅಂಧಕನನ್ನು ಕುರಿತು,

॥ ಬ್ರಹ್ಮೋವಾಚ ॥

ಯತ್ಕಾಂಕ್ಷಸೇ ದೈತ್ಯವರಾಸ್ತು ತೇ ನೈ
ಸರ್ವಂ ಭವತ್ಯೇವ ವಚಸ್ಸಕಾಮಂ ।
ಉತ್ತಿಷ್ಠ ದೈತ್ಯೇಂದ್ರ ಲಭಸ್ವ ಕಾಮಂ
ಸದೈವ ವೀರೈಸ್ತು ಕುರುಷ್ವ ಯುದ್ಧಂ ॥ ೧೮ ॥

ಶ್ರುತ್ವಾ ತದೇತದ್ವಚನಂ ಮುನೀಶ
ವಿಧಾತುರಾಶು ಪ್ರಣಿಪತ್ಯ ಭಕ್ತ್ಯಾ ।
ಲೋಕೇಶ್ವರಂ ಹಾಟಕನೇತ್ರಪುತ್ರಃ
ಸ್ನಾಯ್ವಸ್ಥಿಶೇಷಸ್ತು ತನೂಹ ದೇವಂ ॥ ೧೯ ॥

॥ ಅಂಧಕ ಉವಾಚ ॥

ಕಥಂ ವಿಭೋ ವೈರಿಬಲಂ ಪ್ರವಿಶ್ಯ
ಹ್ಯನೇನ ದೇಹೇನ ಕರೋಮಿ ಯುದ್ಧಂ ।
ಸ್ನಾಯ್ವಸ್ಥಿಶೇಷಂ ಕುರು ಮಾಂಸಪುಷ್ಟಂ
ಕರೇಣ ಪುಣ್ಯೇನ ಚ ಮಾಂ ಸ್ಪೃಶಾದ್ಯ ॥ ೨೦ ॥

---

೧೮. ಎಲೈ ದೈತ್ಯಾಗ್ರಣಿಯೇ, ನಿನ್ನ ಮಾತಿನಂತೆಯೇ, ನಿನ್ನ ಇಷ್ಟಾರ್ಥಗಳೆಲ್ಲವೂ ಪೂರ್ತಿಯಾಗಲಿ ಏಳು, ದೈತ್ಯೇಂದ್ರ, ನಿನ್ನ ಅಭಿಲಾಷೆಯಂತೆ ಯಾವಾಗಲೂ ವೀರರೊಡನೆ ಯಥೇಚ್ಛವಾಗಿ ಯುದ್ಧಮಾಡುತ್ತಿರು ಎಂದನು.

೧೯. ಓ ಮುನೀಂದ್ರ, ಇಂತು ಬ್ರಹ್ಮನಾಡಿದ ಮಾತನ್ನು ಕೇಳಿ ಹಿರಣ್ಯಾಕ್ಷನ ಮಗನಾದ ಆ ಮೂಳೆ, ನರಗಳು ಮಾತ್ರ ಉಳಿದಿರುವ ಅಂಧಕನು, ಲೋಕೇಶನಾದ ಆ ಪಿತಾಮಹನಿಗೆ ಭಕ್ತಿಯಿಂದ ನಮಸ್ಕರಿಸಿ ತಟ್ಟನೆ ಈರೀತಿ ಕೇಳಿದನು.

೨೦. ಎಲೈ ಪ್ರಭುವೇ, ನರಗಳು ಮೂಳೆಗಳು ಮಾತ್ರ ಅಂಟಿಕೊಂಡಿರುವ ಈ ದೇಹದೊಡನೆ, ನಾನೆಂತು ಶತ್ರುಸೈನ್ಯವನ್ನು ಒಳಹೊಕ್ಕು ಅವರೊಡನೆ ಹೋರಾಡಲಿ? ನಿನ್ನ ಪಾವನವಾದ ಕೈಯಿಂದ ನನ್ನ ದೇಹವನ್ನು ಸವರಿ, ಅದನ್ನು ತುಂಬುವಂತೆ ಮಾಡು ಎಂದನು.

॥ ಸನತ್ಕುಮಾರ ಉವಾಚ ॥

ಶ್ರುತ್ವಾ ವಚಸ್ತಸ್ಯ ಸ ಪದ್ಮಯೋನಿಃ
ಕರೇಣ ಸಂಸ್ಪೃಶ್ಯ ಚ ತಚ್ಛರೀರಂ ।
ಗತಸ್ಸುರೇಂದ್ರೈಸ್ಸಹಿತಃ ಸ್ವಧಾಮ
ಸಂಪೂಜ್ಯಮಾನೋ ಮುನಿಸಿದ್ಧಸಂಘೈಃ ॥ ೨೧ ॥

ಸಂಸ್ಪೃಷ್ಟಮಾತ್ರಸ್ಸ ಚ ದೈತ್ಯರಾಜ-
ಸ್ಸಂಪೂರ್ಣದೇಹೋ ಬಲವಾನ್ಬಭೂವ ।
ಸಂಜಾತನೇತ್ರಸ್ಸುಭಗೋ ಬಭೂವ
ಹೃಷ್ಟಸ್ಸ್ವಮೇವಂ ನಗರಂ ವಿವೇಶ ॥ ೨೨ ॥

ಉತ್ಸೃಜ್ಯ ರಾಜ್ಯಂ ಸಕಲಂ ಚ ತಸ್ಮೈ
ಪ್ರಹ್ಲಾದಮುಖ್ಯಾಸ್ತ್ವಥ ದಾನವೇಂದ್ರಾಃ ।
ತಮಾಗತಂ ಲಬ್ಧವರಂ ಚ ಮತ್ವಾ
ಭೃತ್ಯಾ ಬಭೂವುರ್ವಶಗಾಸ್ತು ತಸ್ಯ ॥ ೨೩ ॥

---

೨೧. ಓ ವ್ಯಾಸ, ಹೀಗೆ ನುಡಿದ ಅಂಧಕನ ಮಾತನ್ನು ಕೇಳಿ ಬ್ರಹ್ಮನು ಅವನ ಶರೀರವನ್ನು ಸವರಿ, ಮುನಿಗಳಿಂದಲೂ, ಸಿದ್ಧರಿಂದಲೂ, ಪೂಜೆಯನ್ನು ಕೈಗೊಳ್ಳುತ್ತಾ ದೇವತೆಗಳೊಡನೆ, ತನ್ನ ಲೋಕಕ್ಕೆ ಹಿಂದಿರುಗಿದನು.

೨೨. ಹೀಗೆ ಬ್ರಹ್ಮನು ಮುಟ್ಟಿದೊಡನೆಯೇ, ಆ ದೈತ್ಯರಾಜನು, ಮೈತುಂಬಿ ಕೊಂಡುದಲ್ಲದೆ, ಮಹಾಬಲಾಢ್ಯನಾದನು. ಅವನಿಗೆ ಕಣ್ಣುಗಳು ಬಂದುವು. ಕುರೂಪವು ತೊಲಗಿ ರೂಪವಂತನಾದನು. ಈರೀತಿಯಾಗಲು ಬಹು ಸಂತೋಷ ದಿಂದ ತನ್ನ ಊರಿಗೆ ಹಿಂದಿರುಗಿದನು.

೨೩. ಹೀಗೆ ಅಂಧಕನು ವರಗಳನ್ನು ಪಡೆದು ಊರಿಗೆ ಹಿಂದಿರುಗಿ ಬಂದು ದನ್ನು ತಿಳಿದು, ಪ್ರಹ್ಲಾದ ಮೊದಲಾದ ದೈತ್ಯರೆಲ್ಲರೂ ತಾವು ವಶಪಡಿಸಿಕೊಂಡಿದ್ದ ರಾಜ್ಯವೆಲ್ಲವನ್ನೂ ಅವನಿಗೆ ಒಪ್ಪಿಸಿಬಿಟ್ಟು ಅವನ ಸೇವಕರಾಗಿ ಅವನು ಹೇಳಿದಂತೆ ನಡೆಯತೊಡಗಿದರು.

ತತೋऽಂಧಕಃ ಸ್ವರ್ಗಮುಗಾದ್ವಿಜೇತುಂ
ಸೇನಾಭಿಯುಕ್ತಸ್ಸಹಭೃತ್ಯವರ್ಗಃ ।
ವಿಜಿತ್ಯ ಲೇಖಾನ್ಪ್ರಧನೇ ಸಮಸ್ತಾ-
ನ್ಕರಪ್ರದಂ ವಜ್ರಧರಂ ಚಕಾರ ॥ ೨೪ ॥

ನಾಗಾನ್ಸುಪರ್ಣಾನ್ವರರಾಕ್ಷಸಾಂಶ್ಚ
ಗಂಧರ್ವಯಕ್ಷಾನಪಿ ಮಾನುಷಾಂಸ್ತು ।
ಗಿರೀಂದ್ರವೃಕ್ಷಾನ್ಸಮರೇಷು ಸರ್ವಾಂ-
ಶ್ಚತುಷ್ಪದಃ ಸಿಂಹಮುಖಾನ್ವಿಜಿಗ್ಯೇ ॥ ೨೫ ॥

ತ್ರೈಲೋಕ್ಯಮೇತದ್ಧಿ ಚರಾಚರಂ ವೈ
ವಶಂ ಚಕಾರಾತ್ಮನಿ ಸಂನಿಯೋಜ್ಯ ।
ತತೋऽನುಕೂಲಾನಿ ಸುದರ್ಶನಾನಿ
ನಾರೀಸಹಸ್ರಾಣಿ ಬಹೂನಿ ಗತ್ವಾ ॥ ೨೬ ॥

ರಸಾತಲೇ ಚೈವ ತಥಾ ಧರಾಯಾಂ
ತ್ರಿವಿಷ್ಟಪೇ ಯಾಃ ಪ್ರಮುದಾಃ ಸುರೂಪಾಃ

---

೨೪. ಬಳಿಕ ಅಂಧಕನು, ದೊಡ್ಡಸೇನೆಯೊಡನೆ ತನ್ನ ಸೇವಕರೊಂದಿಗೆ ಸ್ವರ್ಗವನ್ನು ಮುತ್ತಿ ಅಲ್ಲಿನ ದೇವತೆಗಳೆಲ್ಲರನ್ನೂ ಸೋಲಿಸಿ, ಇಂದ್ರನೂ ಸಹ ಕಪ್ಪಕೊಡುವಂತೆ ಅವನನ್ನುಸಾಮಂತನನ್ನಾಗಿಮಾಡಿದನು.

೨೫. ಅವರಂತೆಯೇ ಆ ವೀರನು ಯುದ್ಧದಲ್ಲಿ ನಾಗರನ್ನೂ, ಸುವರ್ಣರನ್ನೂ ರಾಕ್ಷಸರನ್ನೂ, ಗಂಧರ್ವರನ್ನೂ, ಯಕ್ಷರನ್ನೂ, ಮನುಷ್ಯರನ್ನೂ, ಪರ್ವತಗಳನ್ನೂ, ವೃಕ್ಷಗಳನ್ನೂ, ಸಿಂಹ, ಹುಲಿ ಮುಂತಾದ ನಾಲ್ಕುಕಾಲಿನ ಪ್ರಾಣಿಗಳನ್ನೂ ಜಯಿಸಿ ತನ್ನ ಅಧೀನರನ್ನಾಗಿ ಮಾಡಿಕೊಂಡನು.

೨೬-೨೭. ಈರೀತಿ ಆ ಅಂಧಕನು ಚರಾಚರಾತ್ಮಕವಾದ ಈ ಮೂರು ಲೋಕವನ್ನೂ ತನ್ನ ಆಳ್ವಿಕೆಗೊಳಪಡಿಸಿ ವಶಪಡಿಸಿಕೊಂಡನು. ಬಳಿಕ, ಅನುಕೂಲೆಯರೂ, ಸುಂದರಿಯರೂ ಆದ ಸಹಸ್ರಾರುಮಂದಿ ನಾರಿಯರನ್ನು ಉಪಭೋಗಿಸಿದುದಲ್ಲದೆ ಪಾತಾಳದಲ್ಲಿಯೂ, ಭೂಲೋಕದಲ್ಲಿಯೂ, ಸ್ವರ್ಗದಲ್ಲಿಯೂ, ಅತ್ಯಂತ ರೂಪವತಿಯ

ತಾಭಿರ್ಯುತೋಽನ್ಯೇಷು ಸ ಪರ್ವತೇಷು
ರರಾಮ ರಮ್ಯೇಷು ನದೀತಟೇಷು ॥ ೨೭ ॥

ಕ್ರೀಡಾಯಮಾನಸ್ಸ ತು ಮಧ್ಯವರ್ತೀ
ತಾಸಾಂ ಪ್ರಹರ್ಷಾದಥ ದಾನವೇಂದ್ರಃ ।
ತತ್ಪೀತಶಿಷ್ಟಾನಿ ಪಿಬನ್ಸ್ವವೃತ್ತ್ಯಾ
ದಿವ್ಯಾನಿ ಪೇಯಾನಿ ಸಮಾನುಷಾಣಿ ॥ ೨೮ ॥

ಅನ್ಯಾನಿ ದಿವ್ಯಾನಿ ತು ಯದ್ರಸಾನಿ
ಫಲಾನಿ ಮೂಲಾನಿ ಸುಗಂಧವಂತಿ ।
ಸಂಪ್ರಾಪ್ಯ ಯಾನಾನಿ ಸುವಾಹನಾನಿ
ಮಯೇನ ಸೃಷ್ಟಾನಿ ಗೃಹೋತ್ತಮಾನಿ ॥ ೨೯ ॥

ಪುಷ್ಪಾರ್ಘ್ಯಧೂಪಾನ್ನವಿಲೇಪನೈಶ್ಚ
ಸುಶೋಭಿತಾನ್ಯದ್ಭುತದರ್ಶನೈಶ್ಚ ।
ಸಂಕ್ರೀಡಮಾನಸ್ಯ ಗತಾನಿ ತಸ್ಯ
ವರ್ಷಾಯುತಾನೀಹ ತಥಾಂಧಕಸ್ಯ ॥ ೩೦ ॥

---

ರೆನಿಸಿದ ಪ್ರಮದೆಯರೊಡನೆ ಕೂಡಿ ಮನೋಹರವಾದ ಪರ್ವತಪ್ರದೇಶಗಳಲ್ಲೂ ನದೀ ತೀರಗಳಲ್ಲೂ ಸ್ವಚ್ಛಂದವಾಗಿ ವಿಹರಿಸಿದನು.

೨೮. ಆ ದೈತ್ಯೇಂದ್ರನು, ಆ ನಾರಿಯರ ನಡುವೆ ಸೇರಿ ಬಹು ಹರ್ಷದಿಂದ ವಿಹರಿಸುತ್ತಾ, ಮನುಷ್ಯಲೋಕದಲ್ಲಿ ಅತ್ಯುತ್ತಮವೆನಿಸಿದ ಆ ರಮಣಿಯರು ಕುಡಿದು ಮಿಕ್ಕ ರುಚಿಕರವಾದ ಪಾನೀಯಗಳನ್ನು ಕುಡಿಯುತ್ತಿದ್ದನು.

೨೯-೩೦. ಮತ್ತು ದಿವ್ಯವಾದ ಇತರ ರಸಗಳನ್ನೂ ಸೇವಿಸಿದನು. ಚೆನ್ನಾಗಿ ಮಾಗಿ ಒಳ್ಳೆಯ ವಾಸನೆಯನ್ನು ಬೀರುತ್ತಿರುವ ಹಣ್ಣುಗಳನ್ನೂ, ಗೆಡ್ಡೆಗೆಣಸುಗಳನ್ನೂ ತಿಂದನು. ಸೊಗಸಾದ ಕುದುರೆಗಳನ್ನು ಕಟ್ಟಿದ ತೇರುಗಳನ್ನೇರಿ ಮೆರೆದನು. ಒಳ್ಳೆಯ ಹೂಗಳಿಂದಲೂ, ಪೂಜಾದ್ರವ್ಯಗಳಿಂದಲೂ, ಸುವಾಸನೆಯ ಧೂಪಗಳಿಂದಲೂ, ಬಗೆ ಬಗೆಯ ಪಕ್ವಾನ್ನಗಳಿಂದಲೂ, ಮೈಗೆ ತೊಡೆದುಕೊಳ್ಳುವ ಒಳ್ಳೆಯ ಕಂಪನ್ನು ಬೀರುವ ಗಂಧಾದಿವಿಲೇಪನಗಳಿಂದಲೂ ಕೂಡಿ ಪರಿಪೂರ್ಣವಾದ ಮಯನಿರ್ಮಿತವಾದ ಮನೋಹರವಾದ ಸೌಧಗಳಲ್ಲಿ ಮೆರೆದನು. ಈರೀತಿ ವಿಷಯಸುಖಗಳಲ್ಲೇ ಮಗ್ನನಾಗಿದ್ದ ಅಂಧಕನಿಗೆ ಹತ್ತುಸಾವಿರ ವರ್ಷಗಳು ಕಳೆದುಹೋದುವು.

ಜಾನಾತಿ ಕಿಂಚಿನ್ನ ಶುಭಂ ಪರತ್ರ
ಯದಾತ್ಮನಸ್ಸೌಖ್ಯಕರಂ ಭವೇದ್ಧಿ ।
ಸದಾಂಧಕೋ ದೈತ್ಯವರಸ್ಸ ಮೂಢೋ
ಮದಾಂಧಬುದ್ಧಿಃ ಕೃತದುಷ್ಟಸಂಗಃ ॥ ೩೧ ॥

ತತಃ ಪ್ರಮತ್ತಸ್ತು ಸುತಾನ್ಪ್ರಧಾನಾ-
ನ್ಕುತರ್ಕವಾದೈರಭಿಭೂಯ ಸರ್ವಾನ್ ।
ಚಚಾರ ದೈತ್ಯೈಸ್ಸಹಿತೋ ಮಹಾತ್ಮಾ
ವಿನಾಶಯನ್ವೈದಿಕಸರ್ವಧರ್ಮಾನ್ ॥ ೩೨ ॥

ವೇದಾನ್ದ್ವಿಜಾನ್ವಿತ್ತಮದಾಭಿಭೂತೋ
ನ ಮನ್ಯತೇ ಸ್ಮಾಪ್ಯಮರಾನ್ಗುರೂಂಶ್ಚ ।
ರೇಮೇ ತಥಾ ದೈವಗತೋ ಹತಾಯುಃ
ಸ್ವಸ್ಯೈರಹೋಭಿರ್ಗಮಯನ್ವಯಶ್ಚ ॥ ೩೩ ॥

---

೩೧. ದೈತ್ಯವೀರನಾದ ಆ ಅಂಧಕನು ಮೊದಲೇ ವಿವೇಕವಿಲ್ಲದವನು. ಅದರ ಮೇಲೆ ಮದವು ತಲೆಗೇರಿ, ಎಚ್ಚರದಪ್ಪಿದವನು. ಜೊತೆಗೆ ದುಷ್ಟರಾದ ಗೆಳೆಯರ ಸಹವಾಸಬೇರೆ. ಹೀಗಾಗಿ ಮುಂದೆ ತನಗೆ ಶುಭವನ್ನುಂಟುಮಾಡುವ ಶ್ರೇಯಸ್ಕರವಾದ ಕಾರ್ಯವೊಂದನ್ನೂ ಅವನು ಅರಿಯೇ ಅರಿಯನು.

೩೨. ಹೀಗೆ ಮತ್ತು ನೆತ್ತಿಗೇರಿದ ಆ ದೈತ್ಯನು ತನಗೆ ಹಿತವನ್ನು ಹೇಳಬಂದ ಮಕ್ಕಳನ್ನೂ, ಮಂತ್ರಿಗಳನ್ನೂ, ಎಲ್ಲರನ್ನೂ ಕುತರ್ಕಗಳಿಂದ ಬಾಯಿಮುಚ್ಚಿಸಿ, ತನ್ನ ಅನುಚರರಾದ ದೈತ್ಯರೊಡನೆ ವೇದವಿಹಿತವಾದ ಧರ್ಮಗಳೆಲ್ಲವನ್ನೂ ಹಾಳುಮಾಡುತ್ತಾ ತಿರುಗುತ್ತಿದ್ದನು.

೩೩. ಧನಮದದಿಂದ ಮೆರೆಯುತ್ತಿರುವ ಆ ಅಂಧಕನು ವೇದಗಳನ್ನೂ, ಬ್ರಾಹ್ಮಣರನ್ನೂ, ದೇವತೆಗಳನ್ನೂ, ಗುರುಹಿರಿಯರನ್ನೂ, ಲಕ್ಷ್ಯಮಾಡಲೇ ಇಲ್ಲ. ದೈವೋಪಹತನೂ, ಗತಾಯುವೂ ಆದ ಆತನು ಕ್ಷಣಮಾತ್ರದಂತೆ ಕಳೆದುಹೋಗುತ್ತಿದ್ದ ದಿವಸಗಳೊಡನೆ, ತನ್ನ ವಯಸ್ಸೆಲ್ಲವನ್ನೂ ಕಳೆಯುತ್ತಾ ಯಾವೊಂದು ಪರಿವೆಯೂ ಇಲ್ಲದೆ ವಿಹರಿಸುತ್ತಿದ್ದನು.

ತತಃ ಕದಾಚಿದ್ಗತವಾನ್ಸಸೈನ್ಯೋ
ಬಹುಪ್ರಯಾತಾ ಪೃಥಿವೀತಲೇಽಸ್ಮಿನ್ ।
ಅನೇಕಸಂಖ್ಯಾ ಅಪಿ ವರ್ಷಕೋಟ್ಯಃ
ಪ್ರಹರ್ಷಿತೋ ಮಂದರಪರ್ವತಂ ತು ॥ ೩೪ ॥

ಸ್ವರ್ಣೋಪವನಾಂ ತತ್ರ ನಿರೀಕ್ಷ್ಯ ಶೋಭಾಂ
ಬಭ್ರಾಮ ಸೈನ್ಯೈಸ್ಸಹ ಮಾನಮತ್ತಃ ।
ಕ್ರೀಡಾರ್ಥಮಾಸಾದ್ಯ ಚ ತಂ ಗಿರೀಂದ್ರಂ
ಮತಿಂ ಸ ವಾಸಾಯ ಚಕಾರ ಮೋಹಾತ್ ॥ ೩೫ ॥

ಶುಭಂ ದೃಢಂ ತತ್ರ ಪುರಂ ಸ ಕೃತ್ವಾ
ಮುದಾಸ್ಥಿತೋ ದೈತ್ಯಪತಿಃ ಪ್ರಭಾವಾತ್ ।
ನಿವೇಶಯಾಮಾಸ ಪುನಃ ಕ್ರಮೇಣ
ಅತ್ಯದ್ಭುತಂ ಮಂದರಶೈಲಸಾನೌ ॥ ೩೬ ॥

---

೩೪. ಹೀಗೆ ಅನೇಕ ವರ್ಷಗಳಕಾಲ ಭೂಮಂಡಲವಲ್ಲೆಲ್ಲಾ ಸಿಕ್ಕಿದ ಕಡೆ ಅಲೆಯುತ್ತಾ ಇದ್ದ ಆ ಅಂಧಕನು ಒಂದಾನೊಂದು ಸಲ ತನ್ನ ಸೈನ್ಯಸಮೇತನಾಗಿ, ಬಹು ಸಂತೋಷದಿಂದ ಮಂದರಪರ್ವತಕ್ಕೆ ಬಂದನು.

೩೫. ಮಾನಮದಾಂಧನಾದ ಆ ದೈತ್ಯನು, ಚಿನ್ನದಂತೆ ಹೊಳೆಯುತ್ತಿರುವ ಅಲ್ಲಿಯ ರಮಣೀಯತೆಯನ್ನು ಕಂಡು, ತನ್ನ ಸೈನ್ಯಗಳೊಡನೆ ಅಲ್ಲೆಲ್ಲಾ ಸುತ್ತಾಡಿದನು. ಆ ಮಂದರವು ತನ್ನ ವಿಹಾರಕ್ಕೆ ಅನುಕೂಲವಾಗಿದೆಯೆಂದು ಬಗೆದು, ಮೋಹಾಂಧನಾಗಿ ಅಲ್ಲಿಯೇ ತಂಗಲು ನಿಶ್ಚೈಯಿಸಿದನು.

೩೬. ಆ ದೈತ್ಯೇಂದ್ರನು ತನ್ನ ಇಚ್ಛಾಮಾತ್ರದಿಂದಲೇ ಆ ಮಂದರಪರ್ವತದ ತಪ್ಪಲಲ್ಲಿ ಸೊಗಸಾಗಿಯೂ, ದೃಢವಾಗಿಯೂ ಇರುವ ಪಟ್ಟಣವನ್ನು ಕಟ್ಟಿ, ಬಹು ಸಂತೋಷದಿಂದ ತನ್ನವರೊಡನೆ ಅಲ್ಲಿ ವಾಸಮಾಡತೊಡಗಿದನು.

ದುರ್ಯೋಧನೋ ವೈಧಸಹಸ್ತಿಸಂಜ್ಞಾ
ತನ್ಮಂತ್ರಿಣೋ ದಾನವಸತ್ತಮಸ್ಯ ।
ತೇ ವೈ ಕದಾಚಿದ್ಗಿರಿಸುಸ್ಥಲೇ ಹಿ
ನಾರೀಂ ಸುರೂಪಾಂ ದದೃಶುಸ್ತ್ರಯೋಽಪಿ ॥ ೩೭ ॥

ತೇ ಶೀಘ್ರತಾ ದೈತ್ಯವರಾಸ್ತು ಹರ್ಷಾ-
ದ್ದ್ರುತಂ ಮಹಾದೈತ್ಯಪತಿಂ ಸಮೇತ್ಯ ।
ಊಚುರ್ಯಥಾದೃಷ್ಟಮತೀವ ಪ್ರೀತ್ಯಾ
ತಥಾಂಧಕಂ ವೀರವರಂ ಹಿ ಸರ್ವೇ ॥ ೩೮ ॥

॥ ಮಂತ್ರಿಣ ಊಚುಃ ॥

ಗುಹಾಂತರೇ ಧ್ಯಾನನಿಮೀಲಿತಾಕ್ಷೋ
ದೈತ್ಯೇಂದ್ರ ಕಶ್ಚಿನ್ಮುನಿರತ್ರ ದೃಷ್ಟಃ ।
ರೂಪಾನ್ವಿತಶ್ಚಂದ್ರಕಲಾರ್ಧಚೂಡಃ
ಕಟಿಸ್ಥಲೇ ಬದ್ಧಗಜೇಂದ್ರಕೃತ್ತಿಃ ॥ ೩೯ ॥

---

೩೭. ಆ ದಾನವಾಧಿಪತಿಗೆ ದುರ್ಯೋಧನ, ವೈಧಸ, ಹಸ್ತಿ, ಎಂಬ ಮೂವರು ಮಂತ್ರಿಗಳು ಇದ್ದರು. ಅವರು ಒಂದು ಸಲ, ಆ ಪರ್ವತದಲ್ಲಿ ತಿರುಗುತ್ತಿದ್ದಾಗ ಸೌಂದರ್ಯವತಿಯಾದ ನಾರಿಯೊಬ್ಬಳನ್ನು ಕಂಡರು.

೩೮. ಆ ದೈತ್ಯವೀರರು, ಬಹುಬೇಗನೆ ಹಿಂದಿರುಗಿ ಆ ದೈತ್ಯೇಂದ್ರನ ಬಳಿಗೆ ಬಂದು, ಬಹು ಸಂತೋಷದಿಂದ ತಾವು ಕಂಡ ಸಂಗತಿಯನ್ನು ಇದ್ದುದಿದ್ದಂತೆ ತಿಳಿಸಿದರು.

೩೯. ಓ ದೈತ್ಯೇಂದ್ರ ನಾವೊಂದು ಗುಹೆಯಲ್ಲಿ ಮುನಿಯೊಬ್ಬನನ್ನು ಕಂಡೆವು. ಆತನು ಧ್ಯಾನಮಗ್ನನಾಗಿ, ಕಣ್ಣುಗಳನ್ನು ಮುಚ್ಚಿಕೊಂಡಿದ್ದನು. ಆತನು ರೂಪವಂತನು. ತಲೆಯಲ್ಲಿ ಬಾಲ ಚಂದ್ರರೇಖೆಗಳನ್ನು ತಳೆದಿದ್ದನು. ನಡುವಿಗೆ ಆನೆಯ ಚರ್ಮವನ್ನು ಸುತ್ತಿಕೊಂಡಿದ್ದನು.

ನಾಗೇಂದ್ರಭೋಗಾವೃತಸರ್ವಗಾತ್ರಃ
ಕಪಾಲಮಾಲಾಭರಣೋ ಜಟಾಲಃ ।
ಸ ಶೂಲಹಸ್ತಶ್ಶರತೂಣಧಾರೀ
ಮಹಾಧನುಷ್ಮಾನ್ನಿವೃತಾಕ್ಷಸೂತ್ರಃ ॥ ೪೦ ॥

ಖಡ್ಗೀ ತ್ರಿಶೂಲೀ ಲಕುಟೋ ಕಪರ್ದೀಃ
ಚತುರ್ಭುಜೋ ಗೌರತರಾಕೃತಿರ್ಹಿ ।
ಭಸ್ಮಾನುಲಿಪ್ತೋ ವಿಲಸತ್ಸುತೇಜಾ-
ಸ್ತಪಸ್ವಿವರ್ಯೋಽದ್ಭುತಸರ್ವವೇಷಃ ॥ ೪೧ ॥

ತಸ್ಯಾವಿದೂರೇ ಪುರುಷಶ್ಚ ದೃಷ್ಟ-
ಸ್ಸ ವಾನರೋ ಘೋರಮುಖಃ ಕರಾಲಃ ।
ಸರ್ವಾಯುಧೋ ರೂಕ್ಷಕರಶ್ಚ ರಕ್ಷ-
ನ್ಸ್ಥಿರೋ ಜರದ್ಗೋವೃಷಭಶ್ಚ ಶುಕ್ಲಃ ॥ ೪೨ ॥

---

೪೦. ಸರ್ಪಗಳು ಅವನ ಮೈಯೆಲ್ಲವನ್ನೂ ಸುತ್ತಿಕೊಂಡಿರುವುವು. ತಲೆ ಬುರುಡೆಗಳ ಸರವು ಅವನನ್ನು ಅಲಂಕರಿಸಿತ್ತು. ಉದ್ದುದ್ದವಾದ ಜಟೆಗಳು ತಲೆಯಿಂದ ಇಳಿಬಿದ್ದಿದ್ದವು. ಅವನು ಶೂಲವನ್ನೂ ಬಾಣಬತ್ತಳಿಕೆಗಳನ್ನೂ ಕೈಲಿ ಹಿಡಿದಿದ್ದನು. ಅವನು ದೊಡ್ಡಬಿಲ್ಲುಗಾರನು. ಸ್ಫಟಿಕದ ಸರವನ್ನು ಅವನು ತಿರುವುತ್ತಿದ್ದನು.

೪೧. ಆತನು ಖಡ್ಗ, ತ್ರಿಶೂಲ, ಲಗುಡ, (ದೊಣ್ಣೆ) ಗಳನ್ನು ಪಿಡಿದಿರುವನು. ಅವನಿಗೆ ನಾಲ್ಕು ಕೈಗಳು, ಅಚ್ಚಬಿಳಿದಾದ ಮೈಬಣ್ಣ, ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡಿದ್ದನು. ಸೊಗಸಾದ ತೇಜಸ್ಸಿನಿಂದ ಮೆರೆಯುತ್ತಿದ್ದನು. ಆತನು ತಪಸ್ವಿಶ್ರೇಷ್ಠನು. ಆತನ ವೇಷವು ಬಹು ಸೋಜಿಗವನ್ನುಂಟುಮಾಡುತ್ತಿತ್ತು.

೪೨. ಅವನಿಗೆ ಸ್ವಲ್ಪ ದೂರದಲ್ಲಿ ಒಬ್ಬ ಪುರುಷನಿದ್ದನು. ಅವನ ಮುಖವು ವಾನರವನ್ನು ಹೋಲುತ್ತಾ ಭಯಂಕರವಾಗಿತ್ತು. ಅವನು ಎಲ್ಲ ಬಗೆಯ ಆಯುಧಗಳನ್ನೂ ತನ್ನ ಶುಷ್ಕವಾದ ಕೈಗಳಿಂದ ಹಿಡಿದು ಆ ತಪಸ್ವಿಯನ್ನು ಕಾಯುತ್ತಿದ್ದನು. ಅಲ್ಲದೆ ಬಿಳಿದಾದ ಮುದಿ ಎತ್ತು ಒಂದು ಅಲ್ಲಿ ಇದ್ದಿತು.

ತಸ್ಯೋಪವಿಷ್ಟಸ್ಯ ತಪಸ್ವಿನೋಽಪಿ
ಸುಚಾರುರೂಪಾ ತರುಣೀ ಮನೋಜ್ಞಾ ।
ನಾರೀ ಶುಭಾ ಪಾರ್ಶ್ವಗತಾ ಹಿ ತಸ್ಯ
ದೃಷ್ಟ್ವಾ ಚ ಕಾಚಿದ್ಭುವಿ ರತ್ನಭೂತಾ ॥ ೪೩ ॥

ಪ್ರನಾಲಮುಕ್ತಾಮಣಿಹೇಮರತ್ನ-
ವಸ್ತ್ರಾವೃತಾ ಮಾಲ್ಯಶುಭೋಪಗೂಢಾ ।
ಸಾ ಯೇನ ದೃಷ್ಟಾ ಸ ಚ ದೃಷ್ಟಿಮಾನ್ಸ್ಯಾತ್
ದೃಷ್ಟೇನ ಚಾನ್ಯೇನ ಕಿಮತ್ರ ಕಾರ್ಯಂ ॥ ೪೪ ॥

ಮಾನ್ಯಾ ಮಹೇಶಸ್ಯ ಚ ದಿವ್ಯನಾರೀ
ಭಾರ್ಯಾ ಮುನೇಃ ಪುಣ್ಯವತಃ ಪ್ರಿಯಾ ಸಾ ।

---

೪೩. ಅಲ್ಲಿ ಕುಳಿತಿದ್ದವನು ತಪಸ್ವಿಯಾಗಿದ್ದರೂ, ಅವನ ಪಕ್ಕದಲ್ಲಿ ಮಂಗಳಾಂಗಿಯಾದ ನಾರಿಯೊಬ್ಬಳು ಕಂಗೊಳಿಸುತ್ತಿದ್ದಳು. ಆಕೆಯು ಒಳ್ಳೆಯ ರೂಪವತಿಯು. ತನ್ನ ಸೌಂದರ್ಯದಿಂದ ಎಲ್ಲರ ಮನಸ್ಸನ್ನೂ ಸೆಳೆಯುವಳು. ತುಂಬ ಯೌವನದಿಂದ ಮೆರೆಯುತ್ತಿರುವಳು. ಹೆಚ್ಚೇನು ? ಆಕೆಯು ಭೂಲೋಕದ ರತ್ನವೆಂದು ತಿಳಿ.

೪೪. ಆಕೆಯು ಒಳ್ಳೆಯ ಹವಳ, ಮುತ್ತು, ಮಣಿಗಳು, ಚಿನ್ನ, ರತ್ನ ಇವುಗಳ ಒಡವೆಗಳನ್ನು ತೊಟ್ಟಿದ್ದಳು. ಉತ್ತಮವಾದ ವಸ್ತ್ರವನ್ನುಟ್ಟಿದ್ದಳು. ಒಳ್ಳೆಯ ಹೂಮಾಲೆಗಳನ್ನು ಧರಿಸಿದ್ದಳು. ಯಾವನು ಅವಳನ್ನು ತನ್ನ ಕಂಗಳಿಂದ ನೋಡುವನೋ, ಅವನ ಕಣ್ಣುಗಳೇ ಸಾರ್ಥಕವು. ಬೇರೊಂದು ವಸ್ತುವನ್ನು ಕಾಣುವುದರಿಂದ ಆಗುವುದೇನು ?

೪೫. ಉತ್ಕೃಷ್ಟವಾದ ರತ್ನಗಳನ್ನು ಅನುಭವಿಸಲು ಏಕೈಕಮಾತ್ರ ಅಧಿಕಾರಿಯಾದ ಎಲೈ ದೈತ್ಯೇಂದ್ರನೇ, ಪುಣ್ಯಶಾಲಿಯೂ ಮುನಿಯೂ ಆದ ಆ ಮಹೇಶನಿಗೆ, ಆ

ಯೋಗ್ಯಾ ಹಿ ದ್ರಷ್ಟುಂ ಭವತಶ್ಚ ಸಮ್ಯ-
ಗಾನಾಯ್ಯ ದೈತ್ಯೇಂದ್ರ ಸುರತ್ನಭೋಕ್ತಃ ॥ ೪೫ ॥

॥ ಸನತ್ಕುಮಾರ ಉವಾಚ ॥

ಶ್ರುತ್ವೇತಿ ತೇಷಾಂ ವಚನಾನಿ ತಾನಿ
ಕಾಮಾತುರೋ ಘೂರ್ಣಿತಸರ್ವಗಾತ್ರಃ ।
ವಿಸರ್ಜಯಾಮಾಸ ಮುನೇಸ್ಸಕಾಶಂ
ದುರ್ಯೋಧನಾದೀನ್ಸಹಸಾ ಸ ದೈತ್ಯಃ ॥ ೪೬ ॥

ಆಸಾದ್ಯ ತೇ ತಂ ಮುನಿಮಪ್ರಮೇಯಂ
ಬೃಹದ್ವ್ರತಂ ಮಂತ್ರಿವರಾ ಹಿ ತಸ್ಯ ।
ಸುರಾಜನೀತಿಪ್ರವಣಾ ಮುನೀಶ
ಪ್ರಣಮ್ಯ ತಂ ದೈತ್ಯನಿದೇಶಮಾಹುಃ ॥ ೪೭ ॥

---

ದಿವ್ಯವಾದ ಯುವತಿಯು ಪ್ರೀತಿಯ ಸತಿಯಾಗಿರುವಳು. ಆಕೆಯು ಬಹುಮಾನನೀಯಳು. ನೀನು ಆಕೆಯನ್ನು ಬರಮಾಡಿಕೊಂಡು ಅಗತ್ಯವಾಗಿ ನೋಡಬೇಕು ಎಂದರು.

೪೬. ಓ ಮುನೀಂದ್ರ, ಆ ಮಂತ್ರಿಗಳ ಮಾತು ಕಿವಿಗೆ ಬೀಳುತ್ತಲೇ ಆ ದೈತ್ಯನಿಗೆ ಕಾಮಾತುರತೆಯು ತಲೆದೋರಿತು. ಕೈಕಾಲು ಮೊದಲಾದ ಅವಯವಗಳೆಲ್ಲವೂ, ಕಂಪಿಸಿದುವು. ಒಡನೆಯೇ ಅವನು ದುರ್ಯೋಧನ ಮುಂತಾದ ಅವರನ್ನು ಆ ಮುನಿಯ ಬಳಿಗೆ ಅಟ್ಟಿದನು.

೪೭. ಸನತ್ಕುಮಾರನಿಂತೆಂದನು—: ಎಲೈ ಮುನಿಯೇ, ರಾಜನೀತಿಯನ್ನು ಚೆನ್ನಾಗಿ ಬಲ್ಲ ಆ ಅಂಧಕನಮಂತ್ರಿಗಳು ಬೇಗನೆ ಬಂದು, ಒಳ್ಳೆಯ ವ್ರತನಿರತನೂ, ಸರ್ವರಿಗೂ ಅಗೋಚರನೂ ಆದ ಆ ಮುನಿಯನ್ನು ಕಂಡು ನಮಸ್ಕರಿಸಿ, ತಮ್ಮ ಪ್ರಭುವಿನ ಅಪ್ಪಣೆಯನ್ನು ತಿಳಿಸಿದರು.

॥ ಮಂತ್ರಿಣ ಊಚುಃ ॥

ಹಿರಣ್ಯನೇತ್ರಸ್ಯ ಸುತೋ ಮಹಾತ್ಮಾ
ದೈತ್ಯಾಧಿರಾಜೋಽಂಧಕನಾಮಧೇಯಃ ।
ತ್ರೈಲೋಕ್ಯನಾಥೋ ಭವಕೃನ್ನಿದೇಶಾ-
ದಿಹೋಪವಿಷ್ಟೋಽದ್ಯ ವಿಹಾರಶಾಲೀ　　　॥ ೪೮ ॥

ತನ್ಮಂತ್ರಿಣೋ ವೈ ವಯಮಂಗ ವೀರಾ-
ಸ್ತವೋಪಕಂಠಂ ಚ ಸಮಾಗತಾಃ ಸ್ಮ ।
ತತ್ಪ್ರೇಷಿತಾಸ್ತ್ವಾಂ ಯದುವಾಚ ತದ್ವೈ
ಶೃಣುಷ್ವ ಸಂದತ್ತಮನಾಸ್ತಪಸ್ವಿನ್　　　॥ ೪೯ ॥

ತ್ವಂ ಕಸ್ಯ ಪುತ್ರೋಽಸಿ ಕಿಮರ್ಥಮತ್ರ
ಸುಖೋಪವಿಷ್ಟೋ ಮುನಿವರ್ಯ ಧೀಮನ್ ।
ಕಸ್ಯೇಯಮಾದ್ಯಕ್ತರುಣೀ ಸುರೂಪಾ
ದೇಯಾ ಶುಭಾ ದೈತ್ಯಪತೇರ್ಮುನೀಂದ್ರ　　　॥ ೫೦ ॥

---

೪೮. ಓ ಮುನಿವರ, ದೈತ್ಯರಿಗೆಲ್ಲಾ ಚಕ್ರವರ್ತಿಯಾದ ಹಿರಣ್ಯಾಕ್ಷನ ಮಗನಾದ ಅಂಧಕನೆಂಬುವನಿರುವನು. ಅವನು ಮೂರು ಲೋಕಗಳಿಗೂ ಒಡೆಯನು. ಅವನು ಭಗವದಿಚ್ಛೆಯಿಂದ ಅಲ್ಲಲ್ಲಿ ವಿಹರಿಸುತ್ತಾ, ಇದ್ದು ಇಲ್ಲಿ ಬೀಡುಬಿಟ್ಟಿರುವನು.

೪೯. ಎಲೈ ಆರ್ಯನೇ, ನಾವು ಅತನ ಮಂತ್ರಿಗಳು. ಆತನು ಕಳುಹಿಸಲು ನಿನ್ನ ಬಳಿಗೆ ಬಂದಿರುವೆವು. ಅವನು ತಿಳಿಸಬೇಕೆಂದುದನ್ನು ನಾವೀಗ ನುಡಿಯು ತ್ತಿರುವೆವು. ಎಲೆ ತಾಪಸನೇ, ಮನಸ್ಸಿಟ್ಟು ಅದನ್ನು ಕೇಳು.

೫೦. ಎಲೈ ಬುದ್ಧಿಶಾಲಿಯಾದ ಮುನಿವರ್ಯನೇ, ನೀನಾರಮಗನು ? ಏತಕ್ಕೆ ಇಲ್ಲಿ ಸುಖವಾಗಿ ಕುಳಿತಿರುವೆ ? ದೈತ್ಯಾಧಿಪತಿಯಾದ ನನಗೆ ಒಪ್ಪಿಸಲು ಯೋಗ್ಯಳಾದ ಇಂತಹ ರೂಪವತಿಯಾದ ಈ ಯುವತಿಯು ಯಾರಿಗೆ ಸಂಬಂಧಪಟ್ಟವಳು ?

ಕ್ವೇದಂ ಶರೀರಂ ತವ ಭಸ್ಮದಿಗ್ಧಂ
ಕಪಾಲಮಾಲಾಭರಣಂ ವಿರೂಪಂ ।
ತೂಣೀರಸತ್ಕಾರ್ಮುಕಬಾಣಖಡ್ಗ-
ಭುಶುಂಡಿಶೂಲಾಶನಿತೋಮರಾಣಿ ॥ ೫೧ ॥

ಕ್ವ ಜಾಹ್ನವೀ ಪುಣ್ಯತಮಾ ಜಟಾಗ್ರೇ
ಕ್ವಾಯಂ ಶಶೀ ವಾ ಕುಣಪಾಸ್ಥಿಖಂಡಂ ।
ವಿಷಾನಲೋ ದೀರ್ಘಮುಖಃ ಕ್ವ ಸರ್ಪಃ
ಕ್ವ ಸಂಗಮಃ ಪೀನಪಯೋಧರಾಯಾಃ ॥ ೫೨ ॥

ಜರದ್ಗವಾರೋಹಣಮಪ್ರಶಸ್ತಂ
ಕ್ಷಮಾವತಸ್ತಸ್ಯ ನ ದರ್ಶನಂ ಚ ।
ಸಂಧ್ಯಾಪ್ರಣಾಮಃ ಕ್ವಚಿದೇಷ ಧರ್ಮಃ
ಕ್ವ ಭೋಜನಂ ಲೋಕವಿರುದ್ಧಮೇತತ್ ॥ ೫೩ ॥

---

೫೧. ಬೂದಿಯನ್ನು ಬಳಿದುಕೊಂಡು, ತಲೆಬುರುಡೆಗಳ ಸರಗಳನ್ನು ತಳೆದು, ಬಿಲ್ಲು, ಬಾಣ, ಬತ್ತಳಿಕೆ, ಕತ್ತಿ, ಶೂಲ, ಭುಸುಂಡಿ, ವಜ್ರಾಯುಧ, ತೋಮರಗಳನ್ನು ಹಿಡಿದು ಇರುವ ನಿನ್ನ ಈ ಶರೀರವೆಲ್ಲಿ? ಈ ಸುಂದರಿಯು ನಿನಗೊಪ್ಪುವಳೇ?

೫೨. ಜಡೆಯ ಅಂಟಿನಲ್ಲಿರುವ ಪಾವನೆಯಾದ ಗಂಗೆಯೆಲ್ಲಿ? ತಲೆಯಮೇಲೆ ಮೆರೆಯುತ್ತಿರುವ ಬಾಲಶಶಿಯೆಲ್ಲಿ? ಮೈಮೇಲೆಲ್ಲಾ ಜೋತಾಡುವ ಈ ಹೆಣದ ಮೂಳೆಗಳೆಲ್ಲಿ? ಕ್ರೂರವಾದ ವಿಷವುಳ್ಳ ಉದ್ದಮುಖದ ಆ ಸರ್ಪವೆಲ್ಲಿ? ಉಬ್ಬಿದ ಸ್ತನಗಳಿಂದ ಮನಸೆಳೆಯುವ ಈ ಸುಂದರಿಯೆಲ್ಲಿ ?

೫೩. ಈ ಅಸಹ್ಯವಾದ ಮುದಿ ಎತ್ತನ್ನು ಏರಿಹೊರಡುವುದು ಉಚಿತವೇ? ನಿನ್ನಂಥ ಕ್ಷಮಾಶಾಲಿಯು ಇದನ್ನು ನೋಡಲೂಬಾರದು. ನಿತ್ಯವೂ ಸಂಧ್ಯೆಗೆ ನಮಿಸುವೆ. ಇದಾವಧರ್ಮ? ಲೋಕವಿರುದ್ಧವಾದ ಈ ಭೋಜನವೆಲ್ಲಿಯಾದರೂ ಉಂಟೆ?

ಪ್ರಯಚ್ಛ ನಾರೀಂ ಮಮ ಸಾಂತ್ವಪೂರ್ವಂ
ಸ್ತ್ರಿಯಾ ತಪಃ ಕಿಂ ಕುರುಷೇ ವಿಮೂಢ ।
ಅಯುಕ್ತಮೇತತ್ತ್ವಯಿ ನಾನುರೂಪಂ
ಯಸ್ಮಾದಹಂ ರತ್ನಪತಿಸ್ತ್ರಿಲೋಕೇ ॥ ೫೪ ॥

ವಿಮುಂಚ ಶಸ್ತ್ರಾಣಿ ಮಯಾದ್ಯ ಚೋಕ್ತಃ
ಕುರುಷ್ವ ಪಶ್ಚಾತ್ತಪ ಏವ ಶುದ್ಧಂ ।
ಉಲ್ಲಂಘ್ಯ ಮಚ್ಛಾಸನಮಪ್ರಧೃಷ್ಯಂ
ವಿಮೋಕ್ಷ್ಯಸೇ ಸರ್ವಮಿದಂ ಶರೀರಂ ॥ ೫೫ ॥

ಮತ್ವಾಂಧಕಂ ದುಷ್ಟಮತಿಂ ಪ್ರಧಾನೋ
ಮಹೇಶ್ವರೋ ಲೌಕಿಕಭಾವಶೀಲಃ ।
ಪ್ರೋವಾಚ ದೈತ್ಯಂ ಸ್ಮಿತಪೂರ್ವಮೇವ-
ಮಾಕರ್ಣ್ಯ ಸರ್ವಂ ತ್ವಥ ದೂತವಾಕ್ಯಂ ॥ ೫೬ ॥

---

೫೪. ಎಲೈ ಬುದ್ಧಿಹೀನನೇ, ನನಗೆ ಒಳ್ಳೆಯ ಮಾತಿನಲ್ಲಿ ಈ ಯುವತಿಯನ್ನು ಒಪ್ಪಿಸು. ಇವಳ ಜೊತೆಯಲ್ಲಿ ಅದೆಂತು ತಪಸ್ಸುಮಾಡುವೆ? ನಿನಗಿದು ತರವಲ್ಲ. ನಿನಗೆ ಒಗ್ಗುವುದೂ ಇಲ್ಲ. ನಾನು ಮೂರು ಲೋಕಗಳಲ್ಲೂ ಇರುವ ರತ್ನಗಳಿಗೆ ಅಧಿಪತಿಯಲ್ಲವೇ?

೫೫. ನನ್ನ ಮಾತಿನಂತೆ ನೀನು ಹಿಡಿದಿರುವ ಈ ಆಯುಧಗಳೆಲ್ಲವನ್ನೂ ಬಿಸುಟುಬಿಡು. ಬಳಿಕ ಶುದ್ಧವಾಗಿ ತಪಸ್ಸನ್ನು ಆಚರಿಸುವಿಯಂತೆ. ಅಪ್ರತಿಹತವಾದ ನನ್ನಾಜ್ಞೆಯನ್ನು ಉಲ್ಲಂಘಿಸಿದೆಯೆಂದರೆ ನಿನ್ನ ದೇಹವನ್ನೇ ನೀನು ತೊರೆಯಬೇಕಾಗುವುದು ಎಂದರು.

೫೬. ಲೋಕಸ್ವಭಾವವನ್ನು ಚೆನ್ನಾಗಿ ಅರಿತ ಆ ಮಹೇಶನು ಅಂಧಕನು ಬಹು ದುಷ್ಟನೆಂದು ತಿಳಿದು, ಆ ದೂತರ ಮಾತೆಲ್ಲವನ್ನೂ ಕೇಳಿ ನಗುನಗುತ್ತಾ ದೈತ್ಯಾಧಿಪತಿಗೆ ತಿಳಿಸುವಂತೆ ಈ ಮಾತನ್ನು ನುಡಿದನು.

॥ ಶಿವ ಉವಾಚ ॥

ಯದ್ಯಸ್ಮಿ ರುದ್ರಸ್ತವ ಕಿಂ ಮಯಾ ಸ್ಯಾತ್
ಕಿಮರ್ಥಮೇವಂ ವದಸೀತಿ ಮಿಥ್ಯಾ ।
ಶೃಣು ಪ್ರಭಾವಂ ಮಮ ದೈತ್ಯನಾಥ
ನ್ಯಾಯ್ಯಂ ನ ವಕ್ತುಂ ವಚನಂ ತ್ವಯೈವಂ ॥ ೫೭ ॥

ನಾಹಂ ಕ್ವಚಿತ್ಸ್ವಂ ಪಿತರಂ ಸ್ಮರಾಮಿ
ಗುಹಾಂತರೇ ಘೋರಮನನ್ಯಚೀರ್ಣಂ ।
ಏತದ್ವ್ರತಂ ಪಾಶುಪತಂ ಚರಾಮಿ
ನ ಮಾತರಂ ತ್ವಜ್ಞತನೋ ವಿರೂಪೇ ॥ ೫೮ ॥

ಅಮೂಲಮೇತನ್ಮಯಿ ತು ಪ್ರಸಿದ್ಧಂ
ಸುದುಸ್ತ್ಯಜಂ ಸರ್ವಮಿದಂ ಮಮಾಸ್ತಿ ।
ಭಾರ್ಯಾ ಮಮೇಯಂ ತರುಣೀ ಸುರೂಪಾ
ಸರ್ವಂ ಸಹಾ ಸರ್ವಗತಸ್ಯ ಸಿದ್ಧಿಃ ॥ ೫೯ ॥

---

೫೭. ಎಲೈ ದೈತ್ಯಪತಿಯೇ, ನಾನು ರುದ್ರನೇ ಸರಿ. ಆದರೆ ನನ್ನಿಂದ ನಿನಗಾಗುವುದಾದರೂ ಏನು ? ನೀನೇಕೆ ಈರೀತಿ ಇಲ್ಲದ್ದನ್ನು ಹೇಳುವೆ ? ನನ್ನ ಮಹಿಮೆಯನ್ನು ಕೇಳಿ ತಿಳಿದುಕೋ. ನೀನೀರೀತಿ ಮಾತನಾಡುವುದು ನಿನಗೆ ತರವಲ್ಲ.

೫೮. ನನಗೆ ಏನೂ ತಿಳಿಯದು. ನಮ್ಮ ತಂದೆಯನ್ನು ಕಾಣೆನು. ತಾಯಿಯನ್ನೂ ಅರಿಯೆನು. ಮತ್ತಾರೂ ಆಚರಿಸದಿರುವ ಕಠಿಣವಾದ ಪಾಶುಪತವ್ರತವನ್ನು ಗುಹೆಯ ಒಳಗಡೆ ಕುಳಿತು ಆಚರಿಸುತ್ತಿರುವೆನು.

೫೯. ನಿಷ್ಕಾರಣವಾಗಿಯೇ, ಇದೆಲ್ಲವೂ ನನ್ನಲ್ಲಿ ಪ್ರಖ್ಯಾತಿಯನ್ನು ಪಡೆದಿರುವುದು. ಇವು ಸುಲಭವಾಗೆಂದಿಗೂ ನನ್ನನ್ನು ಬಿಡುವಂತಿಲ್ಲ. ಲಾವಣ್ಯವತಿಯೂ, ಯುವತಿಯೂ, ಎಲ್ಲವನ್ನೂ ಸಹಿಸಿಕೊಳ್ಳುವವಳೂ, ಎಲ್ಲದಕ್ಕೂ ಸಿದ್ಧಿಸ್ವರೂಪಳೂ ಆದ ಈಕೆಯು ನನ್ನ ಮಡದಿಯು.

ಏತರ್ಹಿ ಯದ್ಯದ್ರುಚಿತಂ ತವಾಸ್ತಿ
ಗೃಹಾಣ ತದ್ವೈ ಖಲು ರಾಕ್ಷಸ ತ್ವಂ ।
ಏತಾವದುಕ್ತ್ವಾ ವಿರರಾಮ ಶಂಭು-
ಸ್ತಪಸ್ವಿವೇಷಃ ಪುರತಸ್ತು ತೇಷಾಂ    ॥ ೬೦ ॥

॥ ಸನತ್ಕುಮಾರ ಉವಾಚ ॥

ಗಂಭೀರಮೇತದ್ವಚನಂ ನಿಶಮ್ಯ
ತೇ ದಾನವಾಸ್ತಂ ಪ್ರಣಿಪತ್ಯ ಮೂರ್ಧ್ನಾ ।
ಜಗ್ಮುಸ್ತತೋ ದೈತ್ಯವರಸ್ಯ ಸೂನುಂ
ತ್ರೈಲೋಕ್ಯನಾಶಾಯ ಕೃತಪ್ರತಿಜ್ಞಂ    ॥ ೬೧ ॥

ಬಭಾಷಿರೇ ದೈತ್ಯಪತಿಂ ಪ್ರಮತ್ತಂ
ಪ್ರಣಮ್ಯ ರಾಜಾನಮದೀನಸತ್ತ್ವಾಃ ।
ತೇ ತತ್ರ ಸರ್ವೇ ಜಯಶಬ್ದಪೂರ್ವಂ
ರುದ್ರೇಣ ಯತ್ತತ್ಸ್ಮಿತಪೂರ್ವಮುಕ್ತಂ    ॥ ೬೨ ॥

---

೬೦. ಎಲೈ ರಾಕ್ಷಸನೇ, ನಿನಗೆ ಯಾವಾವುದರಮೇಲೆ ಅಭಿಲಾಷೆಯಾಗುವುದೋ ಅದನ್ನು ನೀನೇ ತೆಗೆದುಕೊಂಡು ಹೋಗು. ಹೀಗೆಂದು ತಾಪಸವೇಷಧಾರಿಯಾದ ಶಿವನು ಅಂಧಕನ ಮಂತ್ರಿಗಳೆದುರು ನುಡಿದು ಸುಮ್ಮನಾದನು.

೬೧. ಓ ವ್ಯಾಸ, ಹೀಗೆ ಗೂಢವಾದ ಅರ್ಥವುಳ್ಳ ಆ ಮಾತನ್ನು ಕೇಳಿ ಆ ದಾನವರು ಆತನಿಗೆ ತಲೆಬಾಗಿ ನಮಸ್ಕರಿಸಿ ಬಳಿಕ ಮೂರು ಲೋಕವನ್ನೇ ನಾಶಗೊಳಿಸಲು, ಬದ್ಧಕಂಕಣನಾದ ಆ ಹಿರಣ್ಯಾಕ್ಷಪುತ್ರನ ಬಳಿಗೆ ಬಂದರು.

೬೨. ಬಲಾಢ್ಯರಾದ ಆ ದೈತ್ಯರು ಮದಾಂಧನಾದ ತಮ್ಮ ಪ್ರಭುವಿಗೆ ನಮಸ್ಕರಿಸಿ, ಆತನಿಗೆ ಜಯವಾಗಲೆಂದು ಹರಸಿ, ಬಳಿಕ, ಶಿವನು ನಗುನಗುತ್ತಾ ನುಡಿದ ಮಾತನ್ನು ತಿಳಿಸಿದರು.

॥ ಮಂತ್ರಿಣ ಊಚುಃ ॥

ನಿಶಾಚರಶ್ಚಂಚಲಶೌರ್ಯಧೈರ್ಯಃ
ಕ್ವ ದಾನವಃ ಕೃಪಣಸ್ಸತ್ತ್ವಹೀನಃ ।
ಕ್ರೂರಃ ಕೃತಘ್ನಶ್ಚ ಸದೈವ ಪಾಪೀ
ಕ್ವ ದಾನವಃ ಸೂರ್ಯಸುತಾದ್ಬಿಭೇತಿ ॥ ೬೩ ॥

ರಾಜತ್ವಮುಕ್ತೋऽಖಿಲದೈತ್ಯನಾಥ-
ಸ್ತಪಸ್ವಿನಾ ತನ್ಮುನಿನಾ ವಿಹಸ್ಯ ।
ಮತ್ವಾ ಸ್ವಬುಧ್ಯಾ ತೃಣವತ್ತ್ರಿಲೋಕಂ
ಮಹೌಜಸಾ ವೀರರವೇಣ ನೂನಂ ॥ ೬೪ ॥

ಕ್ವಾಹಂ ಚ ಶಸ್ತ್ರಾಣಿ ಚ ದಾರುಣಾನಿ
ಮೃತ್ಯೋಶ್ಚ ಸಂತ್ರಾಸಕರಂ ಕ್ವ ಯುದ್ಧಂ ।
ಕ್ವ ವೀರಕೋ ವಾನರವಕ್ತ್ರತುಲ್ಯೋ
ನಿಶಾಚರೋ ಜರಸಾ ಜರ್ಜರಾಂಗಃ ॥ ೬೫ ॥

---

೬೩. ಚಂಚಲವಾದ ದೇಹಬಲವೂ, ಮನೋಬಲವೂ ಉಳ್ಳ ನಿಶಾಚಾರಿಯೆಲ್ಲಿ? ಬಲಹೀನನೂ ಬಡಪಾಯಿಯೂ ಆದ ದಾನವನೆಲ್ಲಿ? ಕ್ರೂರನೂ, ಕೃತಘ್ನನೂ, ಸರ್ವದಾ ಪಾಪಕಾರ್ಯಾಸಕ್ತನೂ ಆದ ದೈತ್ಯನೆಲ್ಲಿ ? ಇಂಥವನು ಶನಿಗಾದರೂ ಅಂಜುವನೇ.

೬೪. ಎಲ್ಲ ದೈತ್ಯರಿಗೂ ಒಡೆಯನಾದ ನೀನು ಲೋಕವನ್ನು ಹುಲ್ಲಿಗಿಂತಲೂ ಕಡೆಯಾಗಿ ಅಲ್ಲಗಳೆಯುವನಲ್ಲವೇ ? ಇಂಥವನು, ಮಹಾತೇಜಸ್ವಿಯೂ, ವೀರ್ಯಶಾಲಿಯೂ ಆದ ತಪೋನಿಷ್ಠನಾದ ಮುನಿಯೊಂದಿಗೆ ಪ್ರಭುತ್ವಹೀನನಾದವನಂತೆ ಯುದ್ಧಕ್ಕೆಳಸುವುದು ಉಚಿತವೇ?

೬೫. ನಾನೆಲ್ಲಿ ? ಘೋರವಾದ ಶಸ್ತ್ರಗಳೆಲ್ಲಿ ? ಮೃತ್ಯುವಿಗೂ ನಡುಕವನ್ನು ಹುಟ್ಟಿಸುವ ಯುದ್ಧವೆಲ್ಲಿ ? ಕಪಿಯಂತೆ ಮುಖವುಳ್ಳ ವೀರಕನೆಲ್ಲಿ ? ಮುಪ್ಪಿನಿಂದ ತತ್ತರಿಸುತ್ತಿರುವ ಅವಯುವಗಳುಳ್ಳ ರಾಕ್ಷಸನೆಲ್ಲಿ ?

ಕ್ವಾಯಂ ಸ್ವರೂಪಃ ಕ್ವ ಚ ಮಂದಭಾಗ್ಯೋ
ಬಲಂ ತ್ವದೀಯಂ ಕ್ವ ಚ ವೀರುಧೋ ವಾ ।
ಶಕ್ತೋಽಪಿ ಚೇತ್ತ್ವಂ ಪ್ರಯತಸ್ವ ಯುದ್ಧಂ
ಕರ್ತುಂ ತದಾ ಹ್ಯೇಹಿ ಕುರುಷ್ವ ಕಿಂಚಿತ್ ॥ ೬೬ ॥

ವಜ್ರಾಶನೇಸ್ತುಲ್ಯಮಿಹಾಸ್ತಿ ಶಸ್ತ್ರಂ
ಭವಾದೃಶಾಂ ನಾಶಕರಂ ಚ ಘೋರಂ ।
ಕ್ವ ತೇ ಶರೀರಂ ಮೃದುಪದ್ಮತುಲ್ಯಂ
ವಿಚಾರ್ಯ ಚೈವಂ ಕುರು ರೋಚತೇ ಯತ್ ॥ ೬೭ ॥

॥ ಮಂತ್ರಿಣ ಊಚುಃ ॥

ಇತ್ಯೇವಮಾದೀನಿ ವಚಾಂಸಿ ಭದ್ರೇ
ತಪಸ್ವಿನೋಕ್ತಾನಿ ಚ ದಾನವೇಶ ।
ಯುಕ್ತಂ ನ ತೇ ತೇನ ಸಹಾತ್ರ ಯುದ್ಧಂ
ತ್ವಾಮಾಹ ರಾಜನ್ಸ್ಮಯಮಾನ ಏವ ॥ ೬೮ ॥

---

೬೬. ಈ ಆಕೃತಿಯನ್ನು ಹೊತ್ತ ಭಾಗ್ಯಹೀನನೆಲ್ಲಿ? ನಿನ್ನ ಸೇನೆಯೆಲ್ಲಿ? ಈ ಬಳ್ಳಿಗಿಳ್ಳಿಗಳೆಲ್ಲಿ? ನೀನೊಂದು ವೇಳೆ ಬಲಿಷ್ಠನಾದರೂ ಯುದ್ಧವನ್ನು ಮಾಡಲು ಪ್ರಯತ್ನಿಸುವುದಾದರೆ ಬಾ, ಏನಾದರೂ ಮಾಡುವಿಯಂತೆ.

೬೭. ವಜ್ರಸಾರವೂ, ಸಿಡಿಲಿನಂತೆ ಎರಗುವುದೂ, ಕ್ರೂರವೂ ಆದ ಶಸ್ತ್ರವು, ನಿನ್ನಂತಹರನ್ನುಕೊಂದು ಕೆಡಹುವಂಥದು ನನ್ನಬಳಿಯಿದೆ. ಅಯ್ಯೋ, ತಾವರೆಯೆಸಳಿನಂತೆ ಕೋಮಲವಾದ ನಿನ್ನ ದೇಹವೆಲ್ಲಿ? ಇವೆಲ್ಲವನ್ನೂ ವಿಚಾರಿಸಿದ ಬಳಿಕ ನಿನಗೆ ತೋರಿದುದನ್ನು ಮಾಡು.

೬೮. ಎಲೆ ದಾನವೇಂದ್ರ, ಈರೀತಿಯಾಗಿ ಆ ತಪಸ್ವಿಯು ಇನ್ನೂ ಅನೇಕ ಮಾತುಗಳನ್ನು ಆಡಿದನು. ಅವನೊಡನೆ ನೀನು ಯುದ್ಧಕ್ಕೆ ಇಳಿಯುವುದು ತರವಲ್ಲ. ಮೇಲಿನ ಮಾತುಗಳನ್ನು ಅವನು ಬಹು ಗರ್ವದಿಂದಲೇ ಹೇಳಿರುವನು.

ವಿನಸ್ತ್ವಶೂನ್ಯೈರ್ಬಹುಭಿಃ ಪ್ರಲಾಪೈ-
ರಸ್ಮಾಭಿರುಕ್ತೈರ್ಯದಿ ಬುಧ್ಯಸೇ ತ್ವಂ ।
ತಪೋಽಭಿಯುಕ್ತೇನ ತಪಸ್ವಿನಾ ವೈ
ಸ್ಮರ್ತಾಸಿ ಪಶ್ಚಾನ್ಮುನಿವಾಕ್ಯಮೇತತ್ ॥ ೧೯ ॥

॥ ಸನತ್ಕುಮಾರ ಉವಾಚ ॥

ತತಸ್ಸ ತೇಷಾಂ ವಚನಂ ನಿಶಮ್ಯ
ಜಜ್ವಾಲ ರೋಷೇಣ ಸ ಮಂದಬುದ್ಧಿಃ ।
ಆಜ್ಯಾವಸಿಕ್ತಸ್ತ್ವಿವ ಕೃಷ್ಣವರ್ತ್ಮಾ
ಸತ್ಯಂ ಹಿತಂ ತತ್ಕುಟಿಲಂ ಸುತೀಕ್ಷ್ಣಂ ॥ ೨೦ ॥

ಗೃಹೀತಖಡ್ಗೋ ವರದಾನಮತ್ತಃ
ಪ್ರಚಂಡವಾತಾನುಕೃತಿಂ ಚ ಕುರ್ವನ್ ।

---

೧೯. ನಮ್ಮ ಮಾತುಗಳು ಹುರುಳಿಲ್ಲದ ಒಣಹರಟೆಗಳಂತೆ ನಿನಗೆ ತೋರಬಹುದು. ಆಗಲಿ, ಈಗಲ್ಲದಿದ್ದರೂ, ತಪೋನಿಷ್ಠನಾದ ಆ ತಪಸ್ವಿಯಿಂದ ಆಗ ಚೆನ್ನಾಗಿ ಅರಿಯುವೆ. ಬಳಿಕ ಆ ತಪಸ್ವಿಯ ಮಾತನ್ನು ಚೆನ್ನಾಗಿ ನೆನಸಿಕೊಳ್ಳುವೆ ಎಂದರು.

೨೦. ಓ ವ್ಯಾಸ, ಆ ಮಂತ್ರಿಗಳು ನುಡಿದ, ಹಿತವೂ, ಯಥಾರ್ಥವೂ, ಅತಿ ಸೂಕ್ಷ್ಮವೂ, ಮರ್ಮಸ್ಪರ್ಶಿಯೂ ಆದ ಮಾತುಗಳನ್ನು ಕೇಳುತ್ತಲೇ, ಆ ಬುದ್ಧಿಗೆಟ್ಟ ಅಂಧಕನು ತುಪ್ಪವನ್ನು ಸುರಿದ ಬೆಂಕಿಯಂತೆ ಕೋಪದಿಂದ ಉರಿದೆದ್ದನು.

೨೧. ಮಂದಭಾಗ್ಯನಾದ ಆ ಅಂಧಕನು, ಮನ್ಮಥಬಾಣಗಳಿಗೆ ಸಿಲುಕಿದವನಾಗಿ, ಬ್ರಹ್ಮನು ಇತ್ತಿರುವ ವರಗಳ ಬಲ್ಮೆಯಿಂದ ಮೈಯುಬ್ಬಿ ಕೈಯಲ್ಲಿ

ಗಂತುಂ ಚ ತತ್ರ ಸ್ಮರಬಾಣವಿದ್ಧ-
ಸ್ಸಮುದ್ಯತೋಽಭೂದ್ವಿಪರೀತದೈವಃ　　॥ ೭೧ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಅಂಧಕಗಾಣಪತ್ಯಲಾಭೋಪಾಖ್ಯಾನೇ
ದೂತಸಂವಾದೋ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

ಕತ್ತಿಹಿಡಿದು ಝುಳಪಿಸುತ್ತಾ, ಬಿರ್ರನೆ ಬೀಸುವ ಬಿರುಗಾಳಿಯಂತೆ ಆ ಮುನಿಯಿರುವಲ್ಲಿಗೆ ಹೊರಡಲನುವಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಅಂಧಕನಿಗೆ ಗಣಾಧಿಪತ್ಯವು ದೊರೆತ ಉಪಾಖ್ಯಾನದಲ್ಲಿ ದೂತ
ಸಂವಾದವೆಂಬ ನಲವತ್ತನಾಲ್ಕನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಪಂಚಚತ್ವಾರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಗತಸ್ತತೋ ಮತ್ತಗಜೇಂದ್ರಗಾಮೀ
ಪೀತ್ವಾ ಸುರಾಂ ಘೂರ್ಣಿತಲೋಚನಶ್ಚ ।
ಮಹಾನುಭಾವೋ ಬಹುಸೈನ್ಯಯುಕ್ತಃ
ಪ್ರಚಂಡವೀರೋ ವರವೀರಯಾಯೀ ॥ ೧ ॥

---

## ನಲ್ವತ್ತೈದನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :—ಓ ವ್ಯಾಸ, ಬಳಿಕ ದುಸ್ಸಹವಾದ ಶೌರ್ಯವುಳ್ಳವನೂ, ವೀರಾಗ್ರೇಸರರೊಡನೆಯೇ ಸೆಣಸುವವನೂ, ಮಹತ್ತಾದ ಕೃತ್ಯಗಳನ್ನೆಸಗುವವನೂ ಆದ ಆ ಅಂಧಕನು ಚೆನ್ನಾಗಿ ಮದ್ಯವನ್ನು ಕುಡಿದು, ಕಣ್ಣುಗಳು ಅಲುತ್ತಿರಲು, ತನ್ನ ಅಪರಿಮಿತಸೇನೆಯೊಡನೆ ಮದ್ದಾನೆಯಂತೆ ತೂಗಾಡುತ್ತಾ ಆ ಗುಹೆಯ ಬಳಿಗೆ ಬಂದನು.

ದದರ್ಶ ದೈತ್ಯಃ ಸ್ಮರಬಾಣವಿದ್ಧೋ
ಗುಹಾಂ ತತೋ ವೀರಕರುದ್ಧಮಾರ್ಗಾಂ ।
ಸ್ನಿಗ್ಧಂ ಯಥಾ ವೀಕ್ಷ್ಯ ಪತಂಗಸಂಜ್ಞಃ
ದಶಾಪ್ರದೀಪಂ ಚ ಕೃಮಿಹ್ಯರ್ಪೇತ್ಯ ॥ ೨ ॥

ತಥಾ ಪ್ರದರ್ಶ್ಯಾಸು ಪುನಃ ಪುನಶ್ಚ
ಸಂಪೀಡ್ಯಮಾನೋಽಪಿ ಸ ವೀರಕೇಣ ।
ಬಭೂವ ಕಾಮಾಗ್ನಿಸುದಗ್ಧದೇಹೋಽಂ-
ಧಕೋ ಮಹಾದೈತ್ಯಪತಿಃ ಸ ಮೂಢಃ ॥ ೩ ॥

ಪಾಷಾಣವೃಕ್ಷಾಶನಿತೋಯವಹ್ನಿ-
ಭುಜಂಗಶಸ್ತ್ರಾಸ್ತ್ರವಿಭೀಷಿಕಾಭಿಃ ।
ಸಂಪೀಡಿತೋಽಸೌ ನ ಪುನಃ ಪ್ರಪೀಡ್ಯಃ
ಪೃಷ್ಟಶ್ಚ ಕಸ್ತ್ವಂ ಸಮುಪಾಗತೋಽಸಿ ॥ ೪ ॥

---

೨. ಪತಂಗವೆಂಬ ಹುಳುವು ಉರಿಯುತ್ತಿರುವ ದೀಪವನ್ನು ತನಗೆ ಪ್ರಿಯವಾದ ವಸ್ತುವೆಂದೆಣಿಸಿ ಆಸೆಯಿಂದ ನೋಡುವಂತೆ, ಮನ್ಮಥಶರಪೀಡಿತನಾದ ಆ ಅಂಧಕನು, ಮತ್ತಾರೂ ಒಳಹೊಗದಂತೆ ಎಚ್ಚರದಿಂದ ವೀರಕನೆಂಬ ಗಣಾಧಿಪತಿಯು ಕಾವಲುಕಾಯುತ್ತಿರುವ ಆ ಗುಹೆಯನ್ನು ಕಂಡನು.

೩. ದೈತ್ಯವೀರರಿಗೆಲ್ಲಾ ಒಡೆಯನಾದ ಆ ಅಂಧಕನು, ಮೋಹಾವಿಷ್ಟನಾಗಿ ಆ ಗುಹೆಯನ್ನು ಆಸೆಯಿಂದ ಮತ್ತೆ ಮತ್ತೆ ನೋಡುತ್ತಾ, ವೀರಕನು ತನ್ನನ್ನು ಬಿಡದೆ ತಡೆಯುತ್ತಿರಲು, ಹೆಚ್ಚುಹೆಚ್ಚಾಗಿ ಕಾಮಾಗ್ನಿಯ ತಾಪದಿಂದ ಬೆಂದು ಹೋದನು.

೪. ಈ ಅಂಧಕನು ಹೆದರಿ ಹಿಂದಿರುಗುವಂತೆ ಇವನ ಮೇಲೆ ಆ ವೀರಕನು ಬಂಡೆಗಳನ್ನು ಬೀರಿದನು. ಮರಗಳನ್ನು ಬೀಸಿ ಎಸೆದನು. ನೀರನ್ನು ಹಾಯಿಸಿದನು. ಬೆಂಕಿಯನ್ನು ಹೊತ್ತಿಸಿದನು. ಹಾವುಗಳನ್ನು ಹರಿದಾಡಿಸಿದನು. ಆಯುಧಗಳನ್ನು ಬೀಸಿಬಿಟ್ಟನು. ಅಸ್ತ್ರಗಳನ್ನು ಪ್ರಯೋಗಿಸಿದನು. ಏನಾದರೇನು? ಆ ಅಂಧಕನಿಗೆ ಏನೂ ತೊಂದರೆಯಾದಂತೆ ಕಾಣಲಿಲ್ಲ. ಆಗ ಆ ವೀರಕನು ಅವನನ್ನು ಕುರಿತು ನೀನಾರು? ಇಲ್ಲಿಗೇಕೆ ಬಂದಿರುವೆ? ಎಂದು ಕೇಳಿದನು.

ನಿಶಮ್ಯ ತದ್ವಾಗ್ಂ ಸ್ವಮತಂ ಸ ತಸ್ಮೈ
ಚಕಾರ ಯುದ್ಧಂ ಸ ತು ವೀರಕೇಣ ।
ಮುಹೂರ್ತಮಾಶ್ಚರ್ಯವದಪ್ರಮೇಯಂ
ಸಂಖ್ಯೇ ಜಿತೋ ವೀರತರೇಣ ದೈತ್ಯಃ ॥ ೫ ॥

ತತಸ್ತು ಸಂಗ್ರಾಮಶಿರೋ ವಿಹಾಯ
ಕ್ಷುತ್ಕ್ಷಾಮಕಂಠಸ್ತೃಷಿತೋ ಗತೋಽಭೂತ್ ।
ಚೂರ್ಣೀಕೃತೇ ಖಡ್ಗವರೇ ಚ ಖಿನ್ನೇ
ಪಲಾಯಮಾನೋ ಗತವಿಸ್ಮಯಃ ಸಃ ॥ ೬ ॥

ಚಕ್ರುಸ್ತದಾಜಿಂ ಸಹ ವೀರಕೇಣ
ಪ್ರಹ್ಲಾದಮುಖ್ಯಾ ದಿತಿಜಪ್ರಧಾನಾಃ ।
ಲಜ್ಜಾಂಕುಶಾಕೃಷ್ಟಧಿಯೋ ಬಭೂವು-
ಸ್ಸುದಾರುಣಾಃ ಶಸ್ತ್ರಶತೈರನೇಕೈಃ ॥ ೭ ॥

---

೫. ಆ ವೀರಕನ ಮಾತನ್ನು ಕೇಳಿ ತಾನು ಬಂದುದೇಕೆಂದು ತಿಳಿಸಿ, ಆ ದೈತ್ಯನು ಅವನೊಡನೆ ಊಹಿಸಲಸಾಧ್ಯವೂ, ಅತ್ಯಾಶ್ಚರ್ಯಕಾರಿಯೂ ಆದ ಯುದ್ಧವನ್ನು ಒಂದು ಮುಹೂರ್ತಕಾಲ ನಡೆಸಿ, ತನಗಿಂತಲೂ ಬಲಶಾಲಿಯಾದ ಅವನಿಂದ ಸೋಲಿಸಲ್ಪಟ್ಟನು.

೬. ಅವನ ಕತ್ತಿಯು ಕತ್ತರಿಸಿಬಿತ್ತು. ಅಹಂಕಾರವೆಲ್ಲವೂ ಮುರಿಯಿತು. ಹಸಿವಿನಿಂದ ಕತ್ತು ಹತ್ತಿಕೊಂಡು ಬಂದಿತು. ಬಾಯಾರಿಕೆಯು ಹೆಚ್ಚಾಯಿತು. ಒಡನೆಯೇ ರಣರಂಗವನ್ನು ಬಿಟ್ಟು ಕಾಲಿಗೆ ಬುದ್ಧಿ ಹೇಳಿದನು.

೭. ಆಗ ಪ್ರಹ್ಲಾದ ಮೊದಲಾದ ಆ ದೈತ್ಯವೀರರು, ಲಜ್ಜೆಯೆಂಬ ಅಂಕುಶವು ತಮ್ಮನ್ನು ಚುಚ್ಚಿ ಮುಂದಕ್ಕೆ ನುಗ್ಗುವಂತೆ ಪ್ರೇರಿಸಲು, ಅಸಂಖ್ಯಾತವಾದ ನಾನಾ ಬಗೆಯ ಆಯುಧಗಳನ್ನು ಹಿಡಿದು, ಭಯಂಕರವಾಗಿ ಆ ವೀರಕನೊಡನೆ, ಹೋರಾಡತೊಡಗಿದರು.

ವಿರೋಚನಸ್ತತ್ರ ಚಕಾರ ಯುದ್ಧಂ
ಬಲಿಶ್ಚ ಬಾಣಶ್ಚ ಸಹಸ್ರಬಾಹುಃ ।
ಭಜಿಃ ಕುಜಂಭಸ್ತ್ವಥ ಶಂಬರಶ್ಚ
ವೃತ್ರಾದಯಶ್ಚಾಪ್ಯಥ ವೀರ್ಯವಂತಃ ॥ ೮ ॥

ತೇ ಯುಧ್ಯಮಾನಾ ವಿಜಿತಾಃ ಸಮಂತಾ-
ದ್ದ್ವಿಧಾಕೃತಾ ವೈ ಗಣವೀರಕೇಣ ।
ಶೇಷೇ ಹತಾನಾಂ ಬಹುದಾನವಾನಾ-
ಮುಕ್ತಂ ಜಯತ್ಯೇವ ಹಿ ಸಿದ್ಧಸಂಘೈಃ ॥ ೯ ॥

ಭೇರುಂಡಜಾನಾಭಿನಯಪ್ರವೃತ್ತೇ
ಮೇದೋವಸಾಮಾಂಸಸುಪೂಯಮಧ್ಯೇ ।
ಕ್ರವ್ಯಾದಸಂಘಾತಸಮಾಕುಲೇ ತು
ಭಯಂಕರೇ ಶೋಣಿತಕರ್ದಮೇ ತು ॥ ೧೦ ॥

---

೮. ಆಗ ಆ ಯುದ್ಧದಲ್ಲಿ ಮಹಾವೀರರಾದ, ವಿರೋಚನ, ಬಲಿ, ಸಾವಿರ ತೋಳುಗಳುಳ್ಳ ಬಾಣ, ಭಜಿ, ಕುಜಂಭ, ಶಂಬರ ವೃತ್ರ, ಮುಂತಾದವರು ಭಾಗ ವಹಿಸಿದ್ದರು.

೯. ಆ ವೀರರು ಹೀಗೆ ಯುದ್ಧಮಾಡುತ್ತಿರಲು, ವೀರಕನೆಂಬ ಆ ಪ್ರಮಥಾಗ್ರಣಿಯು ಆಯುಧಗಳಿಂದ ಎರಡಾಗಿ ಸೀಳಲ್ಪಟ್ಟು, ಸಂಪೂರ್ಣವಾಗಿ ಸೋಲಿಸಲ್ಪಟ್ಟರು. ಹೀಗೆ ಆ ದಾನವರೆಲ್ಲರೂ ಮಡಿದುಬಿದ್ದ ಆ ವೀರಕನೊಬ್ಬನೇ ನಿಲ್ಲಲು ಸಿದ್ಧರು ಗುಂಪುಗುಂಪಾಗಿ, ಬಂದುನಿಂತು ಜಯಜಯಕಾರವನ್ನು ಮಾಡಿದರು.

೧೦-೧೧. ಆ ರಣರಂಗದಲ್ಲಿ ಭೇರುಂಡಗಳು ಕುಣಿಯತೊಡಗಿದುವು. ಮೇದಸ್ಸು, ವಸಾ, ಮಾಂಸ, ಕೀವು ಮುಂತಾದುವು ಎಲ್ಲೆಲ್ಲೂ ತುಂಬಿಹೋಗಿತ್ತು. ಗುಂಪುಗುಂಪಾಗಿ ರಾಕ್ಷಸರು ಬಂದು ಗಜಬಿಜಮಾಡತೊಡಗಿದರು. ರಕ್ತವೆಲ್ಲವೂ ಕೆಸರಾಗತೊಡಗಿತು. ಹೀಗೆ ನೋಡಿದರೆ ಮೈಜುಮ್ಮೆನ್ನುವ ಆ ರಣಾಂಗಣದಲ್ಲಿ

ಭಗ್ನೈಸ್ತು ದೈತ್ಯೈರ್ಭಗವಾನ್ಪಿನಾಕೀ
ವ್ರತಂ ಮಹಾಪಾಶುಪತಂ ಸುಘೋರಂ ।
ಪ್ರಿಯೇ ಮಯಾ ಯತ್ಕೃತಪೂರ್ವಮಾಸೀ-
ದ್ದಾಕ್ಷಾಯಿಣೀಂ ಪ್ರಾಹ ಸುಸಾಂತ್ವಯಿತ್ವಾ ॥ ೧೧ ॥

॥ ಶಿವ ಉವಾಚ ॥

ತಸ್ಮಾದ್ಬಲಂ ಯನ್ಮಮ ಯತ್ಪ್ರಣಷ್ಟಂ
ಮರ್ತ್ಯೈರಮರ್ತ್ಯಸ್ಯ ಯತಃ ಪ್ರಪಾತಃ ।
ಪುಣ್ಯಕ್ಷಯಾಹೀ ಗ್ರಹ ಏವ ಜಾತೋ
ದಿವಾನಿಶಂ ದೇವಿ ತವ ಪ್ರಸಂಗಾತ್ ॥ ೧೨ ॥

ಉತ್ಪಾದ್ಯ ದಿವ್ಯಂ ಪರಮಾದ್ಭುತಂ ತು
ಪುನರ್ವರಂ ಘೋರತರಂ ಚ ಗತ್ವಾ ।
ತಸ್ಮಾದ್ವ್ರತಂ ಘೋರತರಂ ಚರಾಮಿ
ಸುನಿರ್ಭಯಾ ಸುಂದರಿ ವೈ ವಿಶೋಕಾಃ ॥ ೧೩ ॥

---

ದೈತ್ಯರೆಲ್ಲರೂ ಮಡಿದುಬಿದ್ದಿರುವುದನ್ನು ಕಂಡು ಭಗವಂತನಾದ ಶಿವನು ತನ್ನ ಸತಿಯಾದ ಪಾರ್ವತಿಯನ್ನು ಒಳ್ಳೆಯ ಮಾತುಗಳಿಂದ ಸಂತೈಸಿ, ಪ್ರಿಯೆ, ನಾನು ಘೋರವಾದ ಪಾಶುಪತವ್ರತವನ್ನು ಇದುವರೆಗೆ ಆಚರಿಸಿದ್ದೆನಷ್ಟೆ.

೧೨. ಎಲೌ ದೇವಿ, ಅದರಿಂದ ನಾನು ಆರ್ಜಿಸಿದ ಬಲವೆಲ್ಲಾ ಈಗ ಕಳೆದು ಹೋಯಿತೆಂದು ಎಣಿಸುತ್ತೇನೆ. ಏಕೆಂದರೆ ಒಂದಲ್ಲ ಒಂದು ದಿನ ಸಾವಿಗೆ ತುತ್ತಾಗುವವರೆಲ್ಲ ಅಮರ್ತ್ಯರಾದ ನಮ್ಮ ಮೇಲೆ ಬೀಳುವಂತಾಯಿತು. ಹಗಲೂ ರಾತ್ರೆ ನಿನ್ನೊಡನೆಯೇ ಇದ್ದುಬಿಟ್ಟದ್ದುದರಿಂದ ವ್ರತಭಂಗವಾದಂತಾಗಿ ಆ ಪುಣ್ಯವೆಲ್ಲವೂ ಕ್ಷಯಿಸಿಬಿಟ್ಟಿರಬೇಕು.

೧೩. ಎಲೌ ಚೆಲುವೆ, ಆದುದರಿಂದ ನಾನು ಮತ್ತೆ ಗೊಂಡಾರಣ್ಯವನ್ನು ಒಳಹೊಕ್ಕು ಅಲ್ಲಿ ಅತ್ಯದ್ಭುತವೂ, ದಿವ್ಯವೂ, ಕಠೋರತರವೂ ಆದ ಪಾಶುಪತವ್ರತವನ್ನು ಆಚರಿಸುವೆನು, ನೀನು ಹೆದರದಿರು, ವ್ಯಥೆಪಡದಿರು ಎಂದನು.

॥ ಸನತ್ಕುಮಾರ ಉವಾಚ ॥

ಏತಾವದುಕ್ತ್ವಾ ವಚನಂ ಮಹಾತ್ಮಾ
ಉತ್ಪಾದ್ಯ ಘೋಷಂ ಶನಕೈಶ್ಚಕಾರ ।
ಸ ತತ್ರ ಗತ್ವಾ ವ್ರತಮುಗ್ರದೀಪ್ತೋ
ಗತೋ ವನಂ ಪುಣ್ಯತಮಂ ಸುಘೋರಂ　　　　॥ ೧೪ ॥

ಕರ್ತುಂ ಹಿ ಶಕ್ಯಂ ತು ಸುರಾಸುರೈರ್ಯ-
ನ್ನ ತಾದೃಶಂ ವರ್ಷಸಹಸ್ರಮಾತ್ರಂ ।
ಸಾ ಪಾರ್ವತೀ ಮಂದರಪರ್ವತಸ್ಥಾ
ಪ್ರತೀಕ್ಷ್ಯಮಾಣಾಗಮನಂ ಭವಸ್ಯ　　　　॥ ೧೫ ॥

ಪತಿವ್ರತಾ ಶೀಲಗುಣೋಪಪನ್ನಾ
ಏಕಾಕಿನೀ ನಿತ್ಯಮಥೋ ವಿಭೀತಾ ।
ಗುಹಾಂತರೇ ದುಃಖಪರಾ ಬಭೂವ
ಸಂರಕ್ಷಿತಾ ಸಾ ಸುತವೀರಕೇಣ　　　　॥ ೧೬ ॥

---

೧೪. ಓ ವ್ಯಾಸ, ಉಗ್ರಮೂರ್ತಿಯೂ, ತೇಜಶ್ಶಾಲಿಯೂ ಆದ ಆ ಮಹಾತ್ಮನು ಹೀಗೆಂದು ನಿಧಾನವಾಗಿ ತನ್ನ ಮಡದಿಯನ್ನು ಸಂತೈಸಿ, ಪಾವನವಾಗಿಯೂ ದಟ್ಟವಾಗಿಯೂ ಇರುವ ಕಾಡನ್ನು ಒಳಹೊಕ್ಕು,

೧೫. ಸುರರಿಗೂ ಅಸುರರಿಗೂ ಆಚರಿಸಲು ಅಸಾಧ್ಯವಾದಂತಹ ಅತಿಕಠಿಣವಾದ ಪಾಶುಪತವ್ರತವನ್ನು ಒಂದು ಸಾವಿರವರ್ಷಗಳವರೆಗೆ ನೇಮದಿಂದ ನಡೆಸತೊಡಗಿದನು. ಇತ್ತ ಮಂದರಾದ್ರಿಯಲ್ಲಿ ಪಾರ್ವತಿಯು ಶಿವನು ಬರುವುದನ್ನೇ ನಿರೀಕ್ಷಿಸುತ್ತಿದ್ದಳು.

೧೬. ಶೀಲವತಿಯೂ, ಸದ್ಗುಣಶಾಲಿನಿಯೂ, ಆದ ಆ ಪತಿವ್ರತೆಯು ಒಬ್ಬಂಟಿಗಳಾದುದರಿಂದ ಕ್ಷಣಕ್ಷಣದಲ್ಲಿಯೂ ಹೆದರಿ ನಡುಗುತ್ತಾ, ಮಗನಂತಿರುವ ವೀರಕನು ತನಗೆ ಕಾವಲಾಗಿದ್ದರೂ ಮಂದರಾದ್ರಿಯ ಆ ಗುಹೆಯಲ್ಲಿ ದುಃಖದಿಂದ ಕೊರಗುತ್ತಿದ್ದಳು.

ತತಸ್ಸ ದೈತ್ಯೋ ವರದಾನಮತ್ತ-
ಸ್ತ್ರೈರ್ಯೋಧಮುಖ್ಯೈಸ್ಸಹಿತೋ ಗುಹಾಂ ತಾಂ।
ವಿಭಿನ್ನಧೈರ್ಯಃ ಪುನರಾಜಗಾಮ
ಶಿಲೀಮುಖೈರ್ಮಾರಸಮುದ್ಭವೈಶ್ಚ ॥ ೧೭ ॥

ಅತ್ಯದ್ಭುತಂ ತತ್ರ ಚಕಾರ ಯುದ್ಧಂ
ಹಿತ್ವಾ ತದಾ ಭೋಜನಪಾನನಿದ್ರಾಃ ।
ರಾತ್ರಿಂದಿವಂ ಪಂಚಶತಾನಿ ಪಂಚ
ಕ್ರುದ್ಧಸ್ಸಸೈನ್ಯಸ್ಸಹ ವೀರಕೇಣ ॥ ೧೮ ॥

ಖಡ್ಗೈಸ್ಸಕುಂತೈಸ್ಸಹ ಭಿಂದಿಪಾಲೈ-
ರ್ಗದಾಭುಶುಂಡೀಭಿರಥೋ ಪ್ರಕಾಂಡೈಃ ।
ಶಿಲೀಮುಖೈರರ್ಧಶಶೀಭಿರುಗ್ರೈ-
ರ್ವಿತಸ್ತಿಭಿಃ ಕೂರ್ಮಮುಖೈರ್ಜ್ವಲದ್ಭಿಃ ॥ ೧೯ ॥

---

೧೭. ಆತ್ತಲಾಗಿ ಬ್ರಹ್ಮನಿಂದ ವರಗಳನ್ನು ಪಡೆದು ಕೊಬ್ಬಿಹೋಗಿದ್ದ ಆ ಅಂಧಕನು ಮನ್ಮಥನ ಬಾಣಗಳಿಗೆ ಸಿಲುಕಿ ತನ್ನ ಧೈರ್ಯವನ್ನು ತೊರೆದು ತನ್ನ ಆರಿಸಿದ ಬಲಾಢ್ಯರಾದ ಯೋಧರೊಡನೆ ಮರಳಿ ಆ ಗುಹೆಯ ಬಳಿಗೆ ಬಂದನು.

೧೮ -೨೦. ಆ ಅಂಧಕನು, ತನ್ನ ಕಡೆಯ ದೈತ್ಯವೀರರೊಡನೆ ಖಡ್ಗಗಳಿಂದಲೂ, ಕುಂತಗಳಿಂದಲೂ, ಭಿಂಡಿವಾಲಗಳಿಂದಲೂ, ಗದೆಗಳಿಂದಲೂ, ಭುಸುಂಡಿಗಳಿಂದಲೂ, ಉದ್ದುದ್ದವಾದ ಅರ್ಧ ಚಂದ್ರಾಕೃತಿಯ ಬಾಣಗಳಿಂದಲೂ, ಆಮೆಯಂತೆ ಮುಖವುಳ್ಳ ಉರಿಯುತ್ತಿರುವ ವಿತಸ್ತಿ ಎಂಬುವುಗಳಿಂದಲೂ, ಚೂಪಾದ ಬಾಣಗಳಿಂದಲೂ, ಶೂಲ ಗಳಿಂದಲೂ, ಇಷ್ಟೇ ಅಲ್ಲದೆ ಪರಶ್ವಧ, ಮುದ್ಗರ, ತೋಮರ ದೊಣ್ಣೆ, ಬೆಟ್ಟ, ಮರ ಮುಂತಾದುವುಗಳಿಂದಲೂ, ದಿವ್ಯಾಸ್ತ್ರಗಳಿಂದಲೂ, ಹಗಲು ರಾತ್ರಿಯೆನ್ನದೆ, ಅನ್ನ,

ನಾರಾಚಮುಖ್ಯೈರ್ನಿಶಿತೈಶ್ಚ ಶೂಲೈಃ
ಪರಶ್ವಧೈಸ್ತೋಮರಮುದ್ಗರೈಶ್ಚ ।
ಖಡ್ಗೈರ್ಗುಡೈಃ ಪರ್ವತಸಾದಪೈಶ್ಚ
ದಿವ್ಯೈರಥಾಸ್ತ್ರೈರಪಿ ದೈತ್ಯಸಂಘೈಃ ॥ ೨೦ ॥

ನದೀಧಿತಿರ್ಭಿನ್ನತನುಃ ಪಪಾತ
ದ್ವಾರಂ ಗುಹಾಯಾ ಪಿಹಿತಂ ಸಮಸ್ತಂ ।
ತೈರಾಯುಧೈರ್ದೈತ್ಯಭುಜಪ್ರಯುಕ್ತೈ-
ರ್ಗುಹಾಮುಖೇ ಮೂರ್ಛಿತ ಏವ ಪಶ್ಚಾತ್ ॥ ೨೧ ॥

ಆಚ್ಛಾದಿತಂ ವೀರಕಮಸ್ತ್ರಜಾಲೈ-
ರ್ದೈತ್ಯೈಶ್ಚ ಸರ್ವೈಸ್ತು ಮುಹೂರ್ತಮಾತ್ರಂ ।
ಅಪಾವೃತಂ ಕರ್ತುಮಶಕ್ಯಮಾಸೀ-
ನ್ನಿರೀಕ್ಷ್ಯ ದೇವೀ ದಿತಿಜಾನ್ಸುಘೋರಾನ್ ॥ ೨೨ ॥

---

ನೀರು ನಿದ್ದೆಗಳನ್ನು ಒಲ್ಲದೆ ಹೋರಾಡುತ್ತಾ ಐನೂರುಐದು ದಿನಗಳವರೆಗೆ ಮಹಾ ರೋಷದಿಂದ ಆ ವೀರಕನೊಡನೆ ಬಹು ಘೋರವಾದ ಯುದ್ಧವನ್ನು ಮಾಡಿದನು.

೨೧. ಆ ದೈತ್ಯವೀರರು ಬಲವಾಗಿ ಬೀಸಿ ಹೊಡೆದ ಆಯುಧಗಳೆಲ್ಲವೂ, ಆ ಗುಹೆಯ ಬಾಗಿಲನ್ನು, ಹೊರಗಿನ ಬೆಳಕು ತೂರಿಹೋಗಲೂ ಅವಕಾಶವಿಲ್ಲದಂತೆ ದಟ್ಟ ವಾಗಿ ಮುಚ್ಚಿಬಿಟ್ಟವು. ಬಳಿಕ ಆ ವೀರಕನು ಆ ಗುಹೆಯಬಾಗಿಲಲ್ಲಿ ಮೂರ್ಛೆಹೋಗಿ ಬಿದ್ದುಬಿಟ್ಟನು.

೨೨. ಇತ್ತಲಾಗಿ ಪಾರ್ವತಿಯು ಆ ವೀರಕನು ಏಕಾಕಿಯಾಗಿ ಹೋರಾ ಡುತ್ತಾ, ಆ ಎಲ್ಲ ದೈತ್ಯರೂ ಪ್ರಯೋಗಿಸಿದ ಆಯುಧಗಳಿಂದ ಮುತ್ತಲ್ಪಟ್ಟು, ಒಂದು ಮುಹೂರ್ತಕಾಲದಷ್ಟು ಕಣ್ಣಿಗೆಬೀಳದೆ ಮರೆಯಾಗಲು, ಅವನನ್ನು ಬಿಡಿಸಲು ಸಾಧ್ಯ ವಿಲ್ಲದೆ ತತ್ತಳಿಸುತ್ತಾ ಆ ಭಯಂಕರರಾದ ದೈತ್ಯರು ಮುನ್ನುಗ್ಗಿ ಬರುತ್ತಿರು ವುದನ್ನೂ ಕಂಡು,

ಭಯೇನ ಸಸ್ಮಾರ ಪಿತಾಮಹಂ ತು
ದೇವೀ ಸಖೀಭಿಸ್ಸಹಿತಾ ಚ ವಿಷ್ಣುಂ ।
ಸೈನ್ಯಂ ಚ ಮದ್ವೀರವರಸ್ಯ ಸರ್ವಂ
ಸ ಸ್ಮಾರಯಾಮಾಸ ಗುಹಾಂತರಸ್ಥಾ ॥ ೨೩ ॥

ಬ್ರಹ್ಮಾ ತಯಾ ಸಂಸ್ಮೃತಮಾತ್ರ ಏವ
ಸ್ತ್ರೀರೂಪಧಾರೀ ಭಗವಾಂಶ್ಚ ವಿಷ್ಣುಃ ।
ಇಂದ್ರೈಶ್ಚ ಸರ್ವೈಃ ಸಹ ಸೈನ್ಯಕೈಶ್ಚ
ಸ್ತ್ರೀರೂಪಮಾಸ್ಥಾಯ ಸಮಾಗತಾಸ್ತೇ ॥ ೨೪ ॥

ಭೂತ್ವಾ ಸ್ತ್ರಿಯಸ್ತೇ ವಿವಿಶುಸ್ತದಾನೀಂ
ಮುನೀಂದ್ರಸಂಘಾಶ್ಚ ಮಹಾನುಭಾವಾಃ ।
ಸಿದ್ಧಾಶ್ಚ ನಾಗಾಸ್ತ್ವಥ ಗುಹ್ಯಕಾಶ್ಚ
ಗುಹಾಂತರಂ ಪರ್ವತರಾಜಪುತ್ರ್ಯಾಃ ॥ ೨೫ ॥

---

೨೩. ತನ್ನ ಸಖಿಯರೊಡನೆ ಭಯದಿಂದ ನಡುಗುತ್ತಾ ಗುಹೆಯ ಒಳಗಡೆಯನ್ನು ಸೇರಿ, ಬ್ರಹ್ಮನನ್ನೂ ವಿಷ್ಣುವನ್ನೂ, ತನ್ನ ವೀರಕಸಿಗೆ ನೆರವಾಗಲು ಬೇಕಾದ ಸೈನ್ಯವನ್ನೂ ತನ್ನ ಮನಸ್ಸಿನಿಂದ ನೆನಸಿಕೊಂಡಳು.

೨೪. ಹೀಗೆ ಪಾರ್ವತಿಯು ತನ್ನ ಮನಸ್ಸಿನಲ್ಲಿ ನೆನೆಯುತ್ತಲೇ ಬ್ರಹ್ಮವಿಷ್ಣುಗಳೂ ಇಂದ್ರನೂ ತಮ್ಮೆಲ್ಲ ಸೈನ್ಯದೊಡನೆ ಕೂಡಿಕೊಂಡು ಸ್ತ್ರೀರೂಪವನ್ನು ತಾಳಿ ಅಲ್ಲಿಗೆ ಬಂದರು.

೨೫. ಅದೇರೀತಿಯಾಗಿ ಮಹಾನುಭಾವರಾದ ಮುನಿಗಳೂ ಸಿದ್ಧರೂ ನಾಗರೂ ಗುಹ್ಯಕರೂ ಹೆಣ್ಣುತನವನ್ನು ತಾಳಿ ಆ ಪರ್ವತರಾಜಪುತ್ರಿಯು ಇರುವ ಗುಹೆಯೊಳಕ್ಕೆ ಬಂದರು.

ಯಸಾತ್ಸುರಾಜ್ಯಾಸನಸಂಸ್ಥಿತಾನಾ-
ಮಂತಃಪುರೇ ಸಂಗಮನಂ ವಿರುದ್ಧಂ ।
ತತಸ್ಸಹಸ್ರಾಣಿ ನಿತಂಬಿನೀನಾ-
ಮನಂತಸಂಖ್ಯಾನ್ಯಪಿ ದರ್ಶಯಂತ್ಯಃ ॥ ೨೬ ॥

ರೂಪಾಣಿ ದಿವ್ಯಾನಿ ಮಹಾದ್ಭುತಾನಿ
ಗೌರ್ಯ್ಯೈ ಗುಹಾಯಾಂ ತು ಸವೀರಕಾರ್ಯ್ಯೈಃ ।
ಸ್ತ್ರಿಯಃ ಪ್ರಹೃಷ್ಟಾ ಗಿರಿರಾಜಕನ್ಯಾ
ಗುಹಾಂತರಂ ಪರ್ವತರಾಜಪುತ್ರ್ಯಾ ॥ ೨೭ ॥

ಸ್ತ್ರೀಭಿಸ್ಸಹಸ್ರೈಶ್ಚ ಶತೈರನೇಕೈ-
ರ್ನೇದುಶ್ಚ ಕಲ್ಪಾಂತರಮೇಘಘೋಷಾಃ ।
ಭೇರ್ಯಶ್ಚ ಸಂಗ್ರಾಮಜಯಪ್ರದಾಸ್ತು
ಧ್ಮಾತಾಸ್ಸುಶಂಖಾಃ ಸುನಿತಂಬಿನೀಭಿಃ ॥ ೨೮ ॥

---

೨೬. ರತ್ನಸಿಂಹಾಸನದಲ್ಲಿ ಮಂಡಿಸುವಂತಹ ಚಕ್ರೇಶ್ವರರ ಅಂತಪುರದಲ್ಲಿ ಇತರರು ಪ್ರವೇಶಿಸುವುದು ಮಹಾದೋಷವೆಂದು ಬಗೆದು, ಅವರೆಲ್ಲರೂ ಆ ಸೈನ್ಯದೊಂದಿಗೆ ಸಂಖ್ಯಾತೀತವಾದ ಸುಂದರಸ್ತ್ರೀಯರ ದಿವ್ಯರೂಪವನ್ನು ತಾಳಿ ಆ ಪಾರ್ವತಿಗೆ ಕಾಣಿಸಿಕೊಳ್ಳುತ್ತಾ,

೨೭-೨೮. ಬಹುಸಂತೋಷದಿಂದ ಆ ಗುಹೆಯಬಳಿಗೆ ಬಂದರು. ಬಳಿಕ ಪಾರ್ವತಿಯೂ ಅಸಂಖ್ಯಾತರಾದ ಗುಂಪುಗುಂಪಾದ ಆ ಅನೇಕಮಂದಿ ಸ್ತ್ರೀಯರೂ ಯುದ್ಧದಲ್ಲಿ ಜಯವನ್ನು ಪಡೆಯುವಂತೆ ಮಂಗಳಕರವಾಗಿ ಭೇರಿಗಳನ್ನುಬಾರಿಸಿದರು. ಶಂಖಗಳನ್ನು ಊದಿದರು. ಆ ಸ್ತ್ರೀಯರಿಂದ ಬಡಿಯಲ್ಪಟ್ಟ ಭೇರಿಗಳೂ, ಊದಲ್ಪಟ್ಟ ಶಂಖಗಳೂ ಪ್ರಳಯಕಾಲದ ಮೇಘಗಳಂತೆ ಮೊಳಗಿದುವು.

ಮೂರ್ಛಾಂ ವಿಹಾಯಾದ್ಭುತಚಂಡವೀರ್ಯ-
ಸ್ಸ ವೀರಕೋ ವೈ ಪುರತಃ ಸ್ಥಿತಸ್ತು ।
ಪ್ರಗೃಹ್ಯ ಶಸ್ತ್ರಾಣಿ ಮಹಾರಥಾನಾಂ
ತೈರೇವ ಶಸ್ತ್ರೈರ್ದಿತಿಜಂ ಜಘಾನ ॥ ೨೯ ॥

ಬ್ರಾಹ್ಮೀ ತತೋ ದಂಡಕರಾ ವಿರುದ್ಧಾ
ಗೌರೀ ತದಾ ಕ್ರೋಧಪರೀತಚೇತಾಃ ।
ನಾರಾಯಣೀ ಶಂಖಗದಾಸುಚಕ್ರ-
ಧನುರ್ಧರಾ ಪೂರಿತಬಾಹುದಂಡಾ ॥ ೩೦ ॥

ವಿನಿರ್ಯಯೌ ಲಾಂಗಲದಂಡಹಸ್ತಾ
ವ್ಯೋಮಾಲಕಾ ಕಾಂಚನತುಲ್ಯವರ್ಣಾ ।
ಧಾರಾಸಹಸ್ರಾಕುಲಮುಗ್ರವೇಗಂ
ಬೈಡೌಜಸೀ ವಜ್ರಕರಾ ತದಾನೀಂ ॥ ೩೧ ॥

---

೨೯. ಅದ್ಭುತವೂ ತಡೆಯಲಸಾಧ್ಯವೂ ಆದ ಪರಾಕ್ರಮವುಳ್ಳ ಆ ವೀರಕನು ಈ ಧ್ವನಿಯನ್ನು ಕೇಳಿದೊಡನೆ ಮೂರ್ಛೆಯಿಂದ ತಿಳಿದೆದ್ದು, ತನ್ನ ಮೇಲೆ ಮಹಾ ರಥರು ಪ್ರಯೋಗಿಸಿದ್ದ ಆಯುಧಗಳನ್ನೇ ತೆಗೆದುಕೊಂಡು ಆ ದೈತ್ಯನನ್ನು ಪ್ರಹರಿಸಿದನು.

೩೦. ಬಳಿಕ ಬ್ರಹ್ಮಾಣಿಯು ದಂಡಾಯುಧವನ್ನು ಕೈಲಿಹಿಡಿದು ಹೊರಟಳು. ಗೌರಿಯು ಕೋಪದಿಂದ ಉರಿಯುತ್ತಾ ಆ ದೈತ್ಯರಿಗೆ ವಿರುದ್ಧವಾಗಿ ನಡೆದಳು. ನಾರಾಯಣಿಯು ಶಂಖ, ಚಕ್ರ, ಗದೆ, ಬಿಲ್ಲುಗಳನ್ನು ತನ್ನ ಬಾಹುದಂಡಗಳಲ್ಲಿ ಧರಿಸಿ ಹೊರಟುಬಂದಳು.

೩೧. ಆಗ ಚಿನ್ನದಂತೆ ಥಳಥಳಿಸುತ್ತಿರುವ ಮೈಬಣ್ಣದಿಂದಲೂ, ಆಕಾಶದಂತೆ ನೀಲವಾದ ಕೇಶಪಾಶದಿಂದಲೂ ಕಂಗೊಳಿಸುತ್ತಿರುವ ಇಂದ್ರಾಣಿಯು ಒಂದು ಕೈಲಿ ನೇಗಿಲನ್ನೂ ಮತ್ತೊಂದು ಕೈಲಿ ಅತಿ ತೀಕ್ಷ್ಣವಾದ ಸಾವಿರ ಅಲುಗುಗಳುಳ್ಳ ವಜ್ರಾಯುಧವನ್ನೂ ಹಿಡಿದು ಯುದ್ಧಕ್ಕೆ ಹೊರಟಳು.

ಸಹಸ್ರನೇತ್ರಾ ಯುಧಿ ಸುಸ್ಥಿರಾ ಚ
ಸುದುರ್ಜಯಾ ದೈತ್ಯಶತೈರಧೃಷ್ಯಾ ।
ವೈಶ್ವಾನರೀ ಶಕ್ತಿರಸೌಮ್ಯವಕ್ತ್ರಾ
ಯಾಮ್ಯಾ ಚ ದಂಡೋದ್ಯತಪಾಣಿರುಗ್ರಾ ॥ ೩೨ ॥

ಸುತೀಕ್ಷ್ಣಖಡ್ಗೋದ್ಯತಪಾಣಿರೂಪಾ
ಸಮಾಯಯೌ ನೈರ್ಋತಿಘೋರಚಾಪಾ ।
ತೋಯಾಲಿಕಾ ವಾರಣಪಾಶಹಸ್ತಾ
ವಿನಿರ್ಗತಾ ಯುದ್ಧಮಭೀಪ್ಸಮಾನಾ ॥ ೩೩ ॥

ಪ್ರಚಂಡವಾತಪ್ರಭವಾ ಚ ದೇವೀ
ಕ್ಷುಧಾ ವಪುಸ್ತ್ವಂಕುಶಪಾಣಿರೇವ ।
ಕಲ್ಪಾಂತವಾತಿಪ್ರತಿಮಾಂ ಗದಾಂ ಚ
ಪಾಣೌ ಗೃಹೀತ್ವಾ ಧನದೋದ್ಭವಾ ಚ ॥ ೩೪ ॥

---

೩೨. ಯುದ್ಧದಲ್ಲಿ ಹಿಂದೆಗೆಯದವಳೂ, ನೂರಾರು ದೈತ್ಯರು ಒಟ್ಟಿಗೆ ನುಗ್ಗಿ ಬಂದರೂ ಜಗ್ಗದವಳೂ, ಜಯಿಸಲಸಾಧ್ಯಳೂ ಆದ ಆಗ್ನೇಯಿಯು ಸಾವಿರ ಕಣ್ಣುಳ್ಳವಳಾಗಿ ಉರಿಯುತ್ತಿರುವ ಮುಖದಿಂದ ಹೊರಟಳು. ಅದಲ್ಲದೆ ಘೋರಾಕಾರವುಳ್ಳ ಯಾಮ್ಯೆಯೂ ಸಹ ದಂಡಾಯುಧವನ್ನು ಕೈಲೆತ್ತಿ ಹಿಡಿದು ಬಂದಳು.

೩೩. ಬಳಿಕ ಚೆನ್ನಾಗಿ ಮಸೆಯಲ್ಪಟ್ಟ ಕತ್ತಿಯನ್ನೂ ಘೋರವಾದ ಧನುಸ್ಸನ್ನೂ ಕೈಲಿ ಧರಿಸಿ ನೈರ್ಋತಿಯು ಬಂದಳು. ಅವಳೊಡನೆ ಯುದ್ಧವನ್ನು ಮಾಡಬೇಕೆಂಬ ಕುತೂಹಲದಿಂದ ವರುಣಪಾಶವನ್ನು ಹಿಡಿದು ವಾರುಣಿಯೂ ಬಂದಳು.

೩೪. ಬಳಿಕ ಪ್ರಚಂಡಳಾದ ವಾಯುವಿಯು ಅಂಕುಶಾಯುಧವನ್ನು ಧರಿಸಿ ಬಹು ಹಸಿವೆಯಿಂದ ನುಗ್ಗಿ ಬಂದಳು. ಅದರಂತೆ ಕೌಬೇರಿಯೂ ಸಹ ಪ್ರಳಯಕಾಲದ ಅಗ್ನಿಯಂತೆ ಧಗಧಗಿಸುತ್ತಿರುವ ಗದೆಯನ್ನು ಹಿಡಿದು ಹೊರಹೊರಟಳು.

ಯಕ್ಷೇಶ್ವರೀ ತೀಕ್ಷ್ಣಮುಖಾ ವಿರೂಪಾ
ನಖಾಯುಧಾ ನಾಗಭಯಂಕರೀ ಚ ।
ಏತಾಸ್ತಥಾನ್ಯಾಶ್ಶತಶೋ ಹಿ ದೇವ್ಯಃ
ಸುನಿರ್ಗತಾಃ ಸಂಕುಲಯುದ್ಧಭೂಮಿಂ ॥ ೩೫ ॥

ದೃಷ್ಟ್ವಾ ಚ ತತ್ಸೈನ್ಯಮನಂತಪಾರಂ
ವಿವರ್ಣವರ್ಣಾಶ್ಚ ಸುವಿಸ್ಮಿತಾಶ್ಚ ।
ಸಮಾಕುಲಾಸ್ಸಂಚಕಿತಾ ಭಯಾದ್ವೈ
ದೇವ್ಯೋ ಬಭೂವುರ್ಹೃದದೀನಸತ್ತ್ವಾಃ ॥ ೩೬ ॥

ಚಕ್ರುಸ್ಸಮಾಧಾಯ ಮನಸ್ಸಮಸ್ತಾ-
ಸ್ತಾ ದೇವವಧ್ವೋ ವಿಧಿಶಕ್ತಿಮುಖ್ಯಾಃ ।
ಸುಸಂಮತತ್ವೇನ ಗಿರೀಶಪುತ್ರ್ಯಾಃ
ಸೇನಾಪತಿರ್ವೀರಸುಘೋರವೀರ್ಯಃ ॥ ೩೭ ॥

---

೩೫. ವಿಕಾರವಾದ ರೂಪವೂ ಉರಿಯುತ್ತಿರುವ ಮುಖವೂ ಉಳ್ಳ ಯಕ್ಷೇಶ್ವರಿಯೂ, ಕೂರಾದ ಉಗುರುಗಳೇ ಆಯುಧವಾಗುಳ್ಳ ಭಯಂಕರಳಾದ ನಾಗದೇವಿಯೂ ಇನ್ನೂ ಇತರ ಅನೇಕಮಂದಿ ದೇವಿಯರೂ ನೂರಾರುಗಟ್ಟಲೆ ಗುಂಪು ಗುಂಪಾಗಿ ಯುದ್ಧರಂಗಕ್ಕೆ ಬಂದಿಳಿದರು.

೩೬. ಮೇರೆಯೇ ಇಲ್ಲದ ಆ ಅಂಧಕನ ಸೈನ್ಯವನ್ನು ಕಾಣುತ್ತಲೇ ಬ್ರಹ್ಮಾಣಿಯೇ ಮೊದಲಾದ ದೇವಶಕ್ತಿಗಳೆಲ್ಲರೂ ಕಳವಳಪಡುತ್ತಾ, ಹೆದರಿಕೆಯಿಂದ ತತ್ತಳಿಸುತ್ತಾ ಸಂಭ್ರಾಂತರಾದರು. ಅವರ ಮುಖದ ವರ್ಚಸ್ಸು ಕಳೆಗುಂದಿತು. ಇದೇನು ಸೇನೆಯೆಂದು ಅವರು ಆಶ್ಚರ್ಯಪಟ್ಟರು. ಅವರ ಎದೆಯಲ್ಲಿನ ಕೆಚ್ಚೂ ಇಳಿ ಮುಖವಾಗತೊಡಗಿತು.

೩೭. ಆ ಬ್ರಹ್ಮಾಣಿ (ಬ್ರಹ್ಮಶಕ್ತಿ) ಯೇ ಮೊದಲಾದ ದೇವಾಂಗನೆಯರೆಲ್ಲರೂ ತಮ್ಮ ಮನಸ್ಸನ್ನು ಹತೋಟಿಗೆ ತಂದುಕೊಡು, ಗಿರಿರಾಜಕುಮಾರಿಯ ಸಮ್ಮತಿಯಂತೆ ಅತ್ಯುಗ್ರವಾದ ಪರಾಕ್ರಮವುಳ್ಳ ಆ ವೀರಕನನ್ನು ತಮ್ಮ ಸೇನಾಪತಿಯನ್ನಾಗಿ ಮಾಡಿಕೊಂಡರು.

ಚಕ್ರುರ್ಮಹಾಯುದ್ಧಮಭೂತಪೂರ್ವಂ
ನಿಧಾಯ ಬುದ್ಧೌ ದಿತಿಜಾಃ ಪ್ರಧಾನಾಃ ।
ನಿವರ್ತನಂ ಮೃತ್ಯುಮಥಾತ್ಮನಶ್ಚ
ನಾರೀಭಿರನ್ಯೇ ವರದಾನಸತ್ತ್ವಾಃ ॥ ೩೮ ॥

ಅತ್ಯದ್ಭುತಂ ತತ್ರ ಚಕಾರ ಯುದ್ಧಂ
ಗೌರೀ ತದಾನೀಂ ಸಹಿತಾ ಸಖೀಭಿಃ ।
ಕೃತ್ವಾ ರಣೇ ಚಾದ್ಭುತಬುದ್ಧಿಶೌಂಡಂ
ಸೇನಾಪತಿಂ ವೀರಕಘೋರವೀರ್ಯಂ ॥ ೩೯ ॥

ಹಿರಣ್ಯನೇತ್ರಾತ್ಮಜ ಏವ ಭೂಪ-
ಶ್ಚಕ್ರೇ ಮಹಾವ್ಯೂಹಮರಂ ಸುಕರ್ಮಾ ।
ಸಂಭಾವ್ಯ ವಿಷ್ಣುಂ ಚ ನಿರೀಕ್ಷ್ಯ ಯಾಮ್ಯಾಂ
ಸುದಾರುಣಂ ತದ್ಗಿಲನಾಮಧೇಯಂ ॥ ೪೦ ॥

---

೩೮. ಬಳಿಕ ಮುಂದಾಳುಗಳಾದ, ವರಬಲದಿಂದ ಕೊಬ್ಬಿದ ಆ ದೈತ್ಯರು, ಹಿಂದಿರುಗಬೇಕು ಇಲ್ಲವೇ ಮಡಿಯಬೇಕು ಎಂದು ಮನದಲ್ಲಿ ನಿಶ್ಚಯಿಸಿ, ಆ ದೇವ ನಾರಿಯರೊಡನೆ ಹಿಂದೆಂದೂ ನಡೆಯದಂತಹ ಕಾಳಗವನ್ನು ನಡೆಸಿದರು.

೩೯. ಆಗ ಗೌರೀದೇವಿಯು ತನ್ನ ಸಖಿಯರೊಂದಿಗೆ ಕೂಡಿ ಭಯಂಕರವಾಗಿ ಯುದ್ಧಮಾಡಿದಳು. ಸೇನಾಪತಿಯಾದ ವೀರಕನೂ ಸಹ ತನ್ನ ಬುದ್ಧಿಬಲದಿಂದಲೂ ಬಾಹುಬಲದಿಂದಲೂ ಕೂಡಿ ಯುದ್ಧದಲ್ಲಿ ಮುಂದುವರಿದಿದ್ದನು.

೪೦. ಹಿರಣ್ಯಾಕ್ಷನ ಪುತ್ರನಾದ ಅಂಧಕನು ತಾನೇ ಯುದ್ಧದಲ್ಲಿ ನಿಂತು ತನ್ನ ಸೈನ್ಯಗಳಿಂದ ಒಂದು ದೊಡ್ಡ ವ್ಯೂಹವನ್ನೇ ನಿರ್ಮಿಸಿದನು. ದಕ್ಷಿಣಭಾಗದಲ್ಲಿ ವಿಷ್ಣುವೂ ತದ್ಗಿಲನೆಂಬ ರಾಕ್ಷಸನೂ ಸಹ ಯುದ್ಧಮಾಡುತ್ತಿದ್ದರು.

ಮುಖಂ ಕರಾಲಂ ವಿಧಿಸೇವಯಾಸ್ಯ
ತಸ್ಮಿನ್ಕೃತೇ ಭಗವಾನಾಜಗಾಮ ।
ಕಲ್ಪಾಂತಘೋರಾರ್ಕಸಹಸ್ರಕಾಂತಿ-
ಕೀರ್ಣಂ ಚ ವೈ ಕುಪಿತಃ ಕೃತ್ತಿವಾಸಾಃ ॥ ೪೧ ॥

ಗತೇ ತತೋ ವರ್ಷಸಹಸ್ರಮಾತ್ರೇ
ತಮಾಗತಂ ಪ್ರೇಕ್ಷ್ಯ ಮಹೇಶ್ವರಂ ಚ ।
ಚಕ್ರುರ್ಮಹಾಯುದ್ಧಮತೀವಮಾತ್ರಂ
ನಾರ್ಯಃ ಪ್ರಹೃಷ್ಟಾಸ್ಸಹ ವೀರಕೇಣ ॥ ೪೨ ॥

ಪ್ರಣಮ್ಯ ಗೌರೀ ಗಿರಿಶಂ ಚ ಮೂರ್ಧ್ನಾ
ಸಂದರ್ಶಯನ್ಪತ್ಯುರತೀವ ಶೌರ್ಯಂ ।
ಗೌರೀ ಪ್ರಯುದ್ಧಂ ಚ ಚಕಾರ ಹೃಷ್ಟಾ
ಹರಸ್ತತಃ ಪರ್ವತರಾಜಪುತ್ರೀಂ ॥ ೪೩ ॥

---

೪೧. ಬ್ರಹ್ಮನ ಸೇವೆಯಿಂದ ಸಂಪಾದಿಸಿದ ಭಯಂಕರಾಕಾರವುಳ್ಳ ಅಂಧಕನ ಸಂಹಾರಕ್ಕಾಗಿಯೇ ಭಗವಂತನಾದ ಪರಮೇಶ್ವರನು ಹಠಾತ್ತಾಗಿ ಅಲ್ಲಿಗೆ ಬಂದು ನಿಂತನು. ಪರಮೇಶ್ವರನ ಮುಖವಾದರೋ ಪ್ರಳಯಕಾಲದ ಪ್ರಚಂಡ ಸೂರ್ಯರ ಸಹಸ್ರಸಂಖ್ಯೆಯ ಕಾಂತಿಗಿಂತಲೂ ಅಧಿಕವಾಗಿ ಬೆಳಗುತ್ತಿತ್ತು.

೪೨. ಸಹಸ್ರವರ್ಷ ತಪಸ್ಸನ್ನು ಮಾಡಿ ಅನಂತರ ಬಂದಿರುವ ಮಹೇಶ್ವರ ನನ್ನು ನೋಡಿದೊಡನೆಯೇ ನಾರಿಯರೂ ಸೇನಾಪತಿಯಾದ ವೀರಕನೂ ಸಹ ಇನ್ನೂ ಹೆಚ್ಚಾದ ಉತ್ಸಾಹದಿಂದ ಯುದ್ಧಮಾಡತೊಡಗಿದರು.

೪೩. ಪಾರ್ವತಿಯು ಪರಮೇಶ್ವರನಿಗೆ ನಮಸ್ಕರಿಸಿ, ತನ್ನ ಯುದ್ಧನೈಪುಣ್ಯ ವನ್ನು ಪತಿಗೆ ತೋರ್ಪಡಿಸಿ ಮತ್ತೆ ಯುದ್ಧಕ್ಕೆ ತೊಡಗಿದಳು. ಅದನ್ನು ನೋಡಿ ಪರಮೇಶ್ವರನು ಸಂತೋಷಗೊಂಡು ಪಾರ್ವತಿಯನ್ನು ಕರೆದು,

ಕಾಂತೇ ಗೃಹೀತ್ವಾ ತು ಗುಹಾಂ ಪ್ರವಿಷ್ಟೋ
ರಮಾಸಹಸ್ರಾಣಿ ವಿಸರ್ಜಿತಾನಿ ।
ಗೌರೀ ಚ ಸನ್ಮಾನಶತೈಃ ಪ್ರಪೂಜ್ಯ
ಗುಹಾಮುಖೇ ವೀರಕಮೇವ ಸ್ಥಾಪರ್ಯ   ॥ ೪೪ ॥

ತತೋ ನ ಗೌರೀಂ ಗಿರಿಶಂ ಚ ದೃಷ್ಟ್ವಾಽ-
ಸುರೇಶ್ವರೋ ನೀತಿವಿಚಕ್ಷಣೋ ಹಿ ।
ದ್ರುತಂ ಸ್ವದೂತಂ ವಿಧಸಾಖ್ಯಮೇವ
ಸ ಪ್ರೇಷಯಾಮಾಸ ಶಿವೋಪಕಂಠಂ   ॥ ೪೫ ॥

ತೈಸ್ತೈಃ ಪ್ರಹಾರೈರಪಿ ಜರ್ಜರಾಂಗ-
ಸ್ತಸ್ಮಿನ್ರಣೇ ದೇವಗಣೇರಿತೈರ್ಯಃ ।
ಜಗಾದ ವಾಕ್ಯಂ ತು ಸಗರ್ವಮುಗ್ರಂ
ಪ್ರವಿಶ್ಯ ಶಂಭುಂ ಪ್ರಣಿಪತ್ಯ ಮೂರ್ಧ್ನಾ   ॥ ೪೬ ॥

---

೪೪. ಏಕಾಂತವಾಗಿ ದೇವಿಯೊಡನೆ ಗುಹೆಯನ್ನು ಪ್ರವೇಶಿಸಿದನು. ಜೊತೆಯಲ್ಲಿದ್ದ ಸಖಿಯರನ್ನೂ ಸೇನಾಪತಿಯಾದ ವೀರಕನನ್ನೂ ಅನೇಕ ಸನ್ಮಾನಗಳಿಂದ ಉಪಚರಿಸಿ ಅವರನ್ನು ಅಲ್ಲಿಯೇ ಬಿಟ್ಟು ದೇವಿಯೊಬ್ಬಳೇ ಒಳಕ್ಕೆ ತೆರಳಿದಳು.

೪೫. ನೀತಿಯನ್ನು ಚೆನ್ನಾಗಿ ಅರಿತಿದ್ದ ಅಂಧಕನು ಯುದ್ಧರಂಗದಲ್ಲಿ ಪಾರ್ವತೀ ಪರಮೇಶ್ವರರು ಇಲ್ಲದಿರುವುದನ್ನು ಕಂಡನು. ಒಡನೆಯೇ ತನ್ನ ಸೇವಕನಾದ ವಿಧಸನನ್ನು ಕರೆದು ಪರಮೇಶ್ವರ ಸಮೀಪಕ್ಕೆ ಕಳುಹಿಸಿದನು.

೪೬. ಆ ವಿಧಸನ ದೇಹವೆಲ್ಲವೂ ಶತ್ರುಗಳ ಶಸ್ತ್ರಪ್ರಹಾರಗಳಿಂದ ಜಜ್ಜಿಹೋಗಿದ್ದಿತು. ಹಾಗೆಯೇ ಶಿವನಿದ್ದ ಗುಹೆಯ ಬಳಿಗೆ ಬಂದು ಪರಶಿವನಿಗೆ ನಮಸ್ಕರಿಸಿ ಹೀಗೆ ಹೇಳಿದನು.

॥ ದೂತ ಉವಾಚ ॥

ಸಂಪ್ರೇಷಿತೋಽಹಂ ವಿವಿಶೇ ಗುಹಾಂ ತು
ಹ್ಯೇಷೋಂಽಧಕಸ್ತ್ವಾಂ ಸಮುವಾಚ ವಾಕ್ಯಂ ।
ನಾರ್ಯಾಂ ಚ ಕಾರ್ಯಂ ತವ ಕಿಂಚಿದಸ್ತಿ
ವಿಮುಂಚ ನಾರೀಂ ತರುಣೀಂ ಸುರೂಪಾಂ ॥ ೪೭ ॥

ಪ್ರಾಯೋ ಭವಾಂಸ್ತಾಪಸಸ್ತಜ್ಜುಷಸ್ವ
ಕ್ಷಾಂತಂ ಮಯಾ ಯತ್ಕಮನೀಯಮಂತಃ ।
ಮುನಿರ್ವಿರೋಧವ್ಯ ಇತಿ ಪ್ರಚಿಂತ್ಯ
ನ ತ್ವಂ ಮುನಿಸ್ತಾಪಸ ಕಿಂತು ತತ್ರುಃ ॥ ೪೮ ॥

ಅತೀವ ದೈತ್ಯೇಷು ಮಹಾವಿರೋಧೀ
ಯುಧ್ಯಸ್ವ ವೇಗೇನ ಮಯಾ ಪ್ರಮಥ್ಯ ।
ನಯಾಮಿ ಪಾತಾಲತಲಾನುರೂಪಂ
ಯಮಕ್ಷಯಂ ತಾಪಸಧೂರ್ತ ಹಿ ತ್ವಾಂ ॥ ೪೯ ॥

---

೪೭. ಓ ಪರಮೇಶ್ವರ, ಅಂಧಕನು ನನ್ನನ್ನು ನಿನ್ನ ಸಮೀಪಕ್ಕೆ ಹೀಗೆ ಹೇಳಲು ಕಳುಹಿಸಿರುವನು. ನಿನ್ನ ಪತ್ನಿಯು ಸುಂದರಿಯೂ ಯುವತಿಯೂ ಹೌದು. ಅಂತಹ ಸೌಂದರ್ಯವತಿಯು ನಿನಗೆ ಅಯೋಗ್ಯಳು. ಅವಳನ್ನು ಬಿಟ್ಟುಬಿಡು.

೪೮. ಮುಖ್ಯವಾಗಿ ನೀನು ತಪಸ್ವಿಯು. ತಪಸ್ವಿಯನ್ನು ಹಿಂಸಿಸುವುದು. ತರವಲ್ಲವೆಂದು ನಿನ್ನನ್ನು ನಾನು ಇಲ್ಲಿಯವರೆಗೂ ಕ್ಷಮಿಸಿರುವೆನು. ಈಗಲಾದರೋ ನೀನು ನಿಜವಾಗಿ ಋಷಿಯಾಗಿಲ್ಲ. ನನಗೆ ಶತ್ರುವಾಗಿದ್ದೀಯೆ.

೪೯. ದೈತ್ಯರಲ್ಲಿ ನೀನು ಅತಿಯಾಗಿ ವಿರೋಧಿಯಾಗಿದ್ದೀಯೆ. ನೀನು ಈಗ ಯುದ್ಧಮಾಡು. ನಿನ್ನನ್ನು ಪಾತಾಳಕ್ಕೋ ಯಮಸದನಕ್ಕೋ ಓಡಿಸುವೆನು. ನೀನು ತಾಪಸನಲ್ಲ. ಧೂರ್ತನಾಗಿದ್ದೀಯೆ ಎಂದನು.

॥ ಸನತ್ಕುಮಾರ ಉವಾಚ ॥

ಏತದ್ವಚೋ ದೂತಮುಖಾನ್ನಿಶಮ್ಯ
ಕಪಾಲಮಾಲೀ ತಮುವಾಚ ಕೋಪಾತ್ ।
ಜ್ವಲನ್ವಿಷಾದೇನ ಮಹಾಂಸ್ತ್ರಿನೇತ್ರ-
ಸ್ಸತಾಂ ಗತಿರ್ದುಷ್ಟಮದಪ್ರಹರ್ತಾ ॥ ೫೦ ॥

॥ ಶಿವ ಉವಾಚ ॥

ವ್ಯಕ್ತಂ ವಚಸ್ತೇ ತದತೀವ ಚೋಗ್ರಂ
ಪ್ರೋಕ್ತಂ ಹಿ ತತ್ತ್ವಂ ತ್ವರಿತಂ ಪ್ರಯಾಹಿ ।
ಕುರುಷ್ವ ಯುದ್ಧಂ ಹಿ ಮಯಾ ಪ್ರಸಹ್ಯ
ಯದಿ ಪ್ರಶಕ್ತೋಽಸಿ ಬಲೇನ ಹಿ ತ್ವಂ ॥ ೫೧ ॥

ಯಃ ಸ್ಯಾದಶಕ್ತೋ ಭುವಿ ತಸ್ಯ ಕೋಽರ್ಥೋ
ದಾರೈರ್ಧನೈರ್ವಾ ಸುಮನೋಹರೈಶ್ಚ ।
ಆಯಾಂತು ದೈತ್ಯಾಶ್ಚ ಬಲೇನ ಮತ್ತಾ
ವಿಚಾರ್ಯ್ಯಮೇವಂ ತು ಕೃತಂ ಮಯೈ ತತ್ ॥ ೫೨ ॥

---

೫೦. ದುಷ್ಟಸಂಹಾರಕನೂ ಶಿಷ್ಟರಕ್ಷಕನೂ ಆದ ಕಪಾಲಿಯು ಈ ಮಾತುಗಳನ್ನು ಕೇಳಿದೊಡನೆಯೇ ಕೋಪದಿಂದ ಉರಿದು,

೫೧. ಎಲೈ ಅಂಧಕನೇ, ನಿನ್ನ ಮಾತಿನಿಂದಲೇ ನಿನ್ನ ಉಗ್ರಸ್ವರೂಪವು ವ್ಯಕ್ತವಾಯಿತು. ವಿಧಸನೇ, ನೀನು ಜಾಗ್ರತೆ ಹೊರಡು. ಅಂಧಕನು ನಿಜವಾಗಿ ಶಕ್ತನಾಗಿದ್ದರೆ ನನ್ನೊಡನೆ ಈಗಲೇ ಯುದ್ಧಮಾಡಲಿ.

೫೨. ಲೋಕದಲ್ಲಿ ಅಶಕ್ತನಾದವನಿಗೆ ಹೆಂಡತಿ, ಹಣ, ಭೋಗ್ಯವಸ್ತು, ಇವುಗಳಿಂದ ಯಾವ ಪ್ರಯೋಜನವೂ ದೊರಕುವುದಿಲ್ಲ. ಆದ್ದರಿಂದಲೇ ಬಲಿಷ್ಠರಾದ ರಾಕ್ಷಸರು ಈಗ ಇಲ್ಲಿಗೆ ಬರಲಿ. ಅದಕ್ಕಾಗಿಯೇ ನಾನು ವಿಚಾರಮಾಡಿ ಇಷ್ಟನ್ನೂ ಮಾಡಿರುವೆನು.

ಶರೀರಯಾತ್ರಾಪಿ ಕುತಸ್ತ್ವಶಕ್ತೇಃ
ಕುರ್ವಂತು ಯದ್ಯದ್ವಿಹಿತಂ ತು ತೇಷಾಂ ।
ಮಮಾಪಿ ಯದ್ಯತ್ಕರಣೀಯಮಸ್ತಿ
ತತ್ತತ್ಕರಿಷ್ಯಾಮಿ ನ ಸಂಶಯೋಽತ್ರ ॥ ೫೩ ॥

॥ ಸನತ್ಕುಮಾರ ಉವಾಚ ॥

ಏತದ್ವಚಸ್ತದ್ವಿಘಸೋಽಪಿ ತಸ್ಮಾ
ಚ್ಛ್ರುತ್ವಾ ಹರಾನ್ನಿರ್ಗತ ಏವ ಹೃಷ್ಟಃ ।
ಪ್ರಾಗತ್ತತೋ ಗರ್ಜಿತಹುಂಕೃತಾನಿ
ಕುರ್ವಂಸ್ತತೋ ದೈತ್ಯಪತೇಸ್ಸಕಾಶಂ ॥ ೫೪ ॥

**ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ ಪಂಚಮೇ ಯುದ್ಧಖಂಡೇ ಯುದ್ಧಪ್ರಾರಂಭದೂತಸಂವಾದ ವರ್ಣನಂ ನಾಮ ಪಂಚಚತ್ವಾರಿಂಶೋಽಧ್ಯಾಯಃ.**

---

೫೩. ಅಶಕ್ತನಾದವನಿಗೆ ಶರೀರವು ತಾನೇ ಏತಕ್ಕೆ ? ಅವನಿಗೆ ಯಾವುದು ಯುಕ್ತವೆಂದು ತೋರುವುದೋ ಅದನ್ನೆಲ್ಲಾ ಮಾಡಲಿ. ನಾನೂ ಸಹ ಯಾವ ಯಾವುದನ್ನು ಮಾಡಬೇಕೋ ಅವೆಲ್ಲವನ್ನೂ ಮಾಡಿ ಮುಗಿಸುತ್ತೇನೆ. ಇದರಲ್ಲಿ ಏನೂ ಅನುಮಾನವಿಲ್ಲ ಎಂದನು.

೫೪. ಪರಮೇಶ್ವರನ ಈ ಮಾತುಗಳನ್ನು ವಿಘಸನು ಕೇಳಿ ಸಂತುಷ್ಟನಾಗಿ ನಾನಾವಿಧವಾಗಿ ಗರ್ಜಿಸುತ್ತಾ ದೈತ್ಯರಾಜನಾದ ಅಂಧಕನ ಸಮೀಪಕ್ಕೆ ಬಂದು ಸೇರಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ ದೂತಸಂವಾದವರ್ಣನವೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಷಟ್ಚತ್ವಾರಿಂಶೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ತಸ್ಯೇಂಗಿತಜ್ಞಾಶ್ಚ ಸ ದೈತ್ಯರಾಜೋ
ಗದಾಂ ಗೃಹೀತ್ವಾ ತ್ವರಿತಸ್ಸಸೈನ್ಯಃ ।
ಕೃತ್ವಾಽಥ ಸಾಗ್ರೇ ಗಿಲನಾಮಧೇಯಂ
ಸುದಾರುಣಂ ದೇವವರೈರಭೇದ್ಯಂ ॥ ೧ ॥

---

### ನಲವತ್ತಾರನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :—ಅಂಧಕನು ವಿಧಸನ ಮಾತುಗಳನ್ನು ಕೇಳಿ ಕುಪಿತನಾಗಿ, ಒಡನೆಯೇ ಸೈನ್ಯಗಳಿಂದ ಕೂಡಿಕೊಂಡು ಗದೆಯನ್ನು ಹಿಡಿದು ಯುದ್ಧಕ್ಕೆ ಹೊರಟನು. ಅಲ್ಲದೆ ದೇವತೆಗಳಿಂದ ಜಯಿಸಲು ಅಸಾಧ್ಯನಾದ ಮತ್ತು ಭಯಂಕರನಾದ ಗಿಲನೆಂಬುವನನ್ನು ಸೇನಾಪತಿಯನ್ನಾಗಿಮಾಡಿ ಅವನನ್ನೇ ಮುಂದೆ ಬಿಟ್ಟುಕೊಂಡು ತಾನು ಪ್ರಯಾಣಮಾಡಿದನು.

ಗುಹಾಮುಖಂ ಪ್ರಾಪ್ಯ ಮಹೇಶ್ವರಸ್ಯ
ಬಿಭೇದ ಶಸ್ತ್ರೈರಶನಿಪ್ರಕಾಶೈಃ ।
ಅನ್ಯೇ ತತೋ ವೀರಕಮೇವ ಶಸ್ತ್ರೈ
ರವಾಕಿರಂಚ್ಛೈಲಸುತಾಂ ತಥಾನ್ಯೇ ॥ ೨ ॥

ದ್ವಾರಂ ಹಿ ಕೇಚಿದ್ರುಚಿರಂ ಬಭಂಜುಃ
ಪುಷ್ಪಾಣಿ ಪತ್ರಾಣಿ ವಿನಾಶಯೇಯುಃ ।
ಫಲಾನಿ ಮೂಲಾನಿ ಜಲಂ ಚ ಹೃದ್ಯ-
ಮುದ್ಯಾನಮಾರ್ಗಾನಪಿ ಖಂಡಯೇಯುಃ ॥ ೩ ॥

ವಿಲೋಡಯೇಯುರ್ಮುದಿತಾಶ್ಚ ಕೇಚಿ-
ಚ್ಛೃಂಗಾಣಿ ಶೈಲಸ್ಯ ಚ ಭಾನುಮಂತಿ ।
ತತೋ ಹರಸ್ಸಂಸ್ಮೃತವಾನ್ಸ್ವಸೈನ್ಯಂ
ಸಮಾಹ್ವಯನ್ಕುಪಿತಃ ಶೂಲಪಾಣಿಃ ॥ ೪ ॥

---

೨. ಮಹೇಶ್ವರನಿದ್ದ ಗುಹೆಯ ಬಳಿಗೆ ಬಂದು ಸಿಡಿಲಿನಂತೆ ಹೊಳೆಯುವ ಶಸ್ತ್ರಗಳಿಂದ ಆ ಗುಹೆಯನ್ನು ಭೇದಿಸಲು ಯತ್ನಿಸಿದನು. ಮತ್ತೆ ಕೆಲವು ರಾಕ್ಷಸರು, ನಿಶಿತಾಸ್ತ್ರಗಳಿಂದ ವೀರಕನನ್ನೂ ಕೆಲವರು ಪಾರ್ವತಿಯನ್ನೂ ಹೊಡೆಯಲು ಆರಂಭಿಸಿದರು.

೩. ಕೆಲವರು ಸುಂದರವಾದ ಗುಹಾದ್ವಾರವನ್ನು ಮುರಿದರು. ಹಣ್ಣು, ಹೂವು ಎಲೆ ಇವುಗಳನ್ನು ಕೆಲವರು ನಾಶಮಾಡಿದರು. ಹಲವರು ಕಂದಮೂಲಗಳನ್ನೂ, ಸ್ವಾದುಜಲವನ್ನೂ, ಉದ್ಯಾನವನಗಳನ್ನೂ ಧ್ವಂಸಮಾಡಿದರು.

೪. ಮತ್ತೆ ಕೆಲವು ದೈತ್ಯರು ಸಂತೋಷದಿಂದ ಆ ಬೆಟ್ಟದ ಪ್ರಕಾಶಮಾನವಾದ ಶಿಖರಗಳನ್ನೆಲ್ಲಾ ಕಿತ್ತೊಗೆದರು. ಇದನ್ನೆಲ್ಲಾ ನೋಡಿದ ಶೂಲಪಾಣಿಯಾದ ಪರಮೇಶ್ವರನು ಕೋಪದಿಂದ ತನ್ನ ಸೈನ್ಯವನ್ನು ಸ್ಮರಿಸಿಕೊಂಡು ಒಂದು ಸಾರಿ ಕೂಗಿದನು.

ಭೂತಾನಿ ಚಾನ್ಯಾನಿ ಸುದಾರುಣಾನಿ
ದೇವಾನ್ಸಸೈನ್ಯಾನ್ಸಹ ವಿಷ್ಣುಮುಖ್ಯಾನ್ ।
ಆಹೂತಮಾತ್ರಾನುಗಣಾಸ್ಸಸೈನ್ಯಾ
ರಥೈರ್ಗಜೈರ್ವಾಜಿವೃಷೈಶ್ಚ ಗೋಭಿಃ ॥ ೫ ॥

ಉಷ್ಟ್ರೈಃ ಖರೈಃ ಪಕ್ಷಿವರೈಶ್ಚ ಸಿಂಹೈ-
ಸ್ತೇ ಸರ್ವದೇವಾಃ ಸಹ ಭೂತಸಂಘೈಃ ।
ವ್ಯಾಘ್ರೈರ್ಮೃಗೈಸ್ಸೂಕರಸಾರಸೈಶ್ಚ
ಸಮೀನಮತ್ಸ್ಯೈಶ್ಶಿಶುಮಾರಮುಖ್ಯೈಃ ॥ ೬ ॥

ಅನ್ಯೈಶ್ಚ ನಾನಾವಿಧಜೀವಸಂಘೈ-
ರ್ವಿಶೀರ್ಣದಂಶಾಃ ಸ್ಫುಟಿತೈಸ್ಸ್ಮಶಾನೈಃ ।
ಭುಜಂಗಮೈಃ ಪ್ರೇತಶತೈಃ ಪಿಶಾಚೈ-
ರ್ದಿವ್ಯೈರ್ವಿಮಾನೈಃ ಕಮಲಾಕರೈಶ್ಚ ॥ ೭ ॥

---

೫. ಹೀಗೆ ಪರಮೇಶ್ವರನು ಕೂಗಿದೊಡನೆಯೇ, ವಿಷ್ಣುವೇ ಮೊದಲಾದ ಸಮಸ್ತ ದೇವತೆಗಳೂ, ಸಮಸ್ತ ಭೂತಪ್ರೇತಗಳೂ ಸಹ ತಮ್ಮ ತಮ್ಮ ಸೈನಿಕರೊಡನೆಯೂ ರಥಗಜತುರಗಗಳಿಂದಲೂ, ವೃಷಭ, ಗೋವು ಮೊದಲಾದ ಪ್ರಾಣಿಗಳಿಂದಲೂ ಕೂಡಿ ಪರಮೇಶ್ವರನ ಸಹಾಯಕ್ಕೆ ಸಿದ್ಧರಾಗಿ ಬಂದುನಿಂತರು.

೬. ಒಂಟೆಗಳೂ, ಕತ್ತೆಗಳೂ, ನಾನಾಜಾತಿಯ ಹಕ್ಕಿಗಳೂ, ಸಿಂಹಗಳೂ, ಹುಲಿಗಳೂ, ಮೃಗಗಳೂ, ಹಂದಿಗಳೂ, ಸಾರಸಪಕ್ಷಿಗಳೂ, ಮೀನು, ಜಲಚರ ಇವುಗಳೂ ಸಹ ದೇವತೆಗಳನ್ನು ಹಿಂಬಾಲಿಸಿ ಪರಮೇಶ್ವರನ ಸಹಾಯಕ್ಕೆ ಬಂದು ನೆರೆದರು.

೭. ಇವೂ ಅಲ್ಲದೆ ಇನ್ನೂ ಅನೇಕ ಜೀವರಾಶಿಗಳೆಲ್ಲವೂ, ಸ್ಮಶಾನವಾಸಿಗಳಾದ ಪಿಶಾಚಾದಿಗಳೂ, ಪ್ರೇತಗಳೂ, ಸರ್ಪಗಳೂ, ದಿವ್ಯವಾದ ವಿಮಾನಗಳೂ ಸುಂದರವಾದ ಕಮಲವನಪ್ರದೇಶಗಳು, ಇವೆಲ್ಲವೂ ಪರಮೇಶ್ವರನ ಅಪ್ಪಣೆಯಂತೆ ಬಂದು ನೆರೆದವು.

ನದೀನದ್ಯೈಃ ಪರ್ವತವಾಹನೈಶ್ಚ
ಸಮಾಗತಾಃ ಪ್ರಾಂಜಲಯಃ ಪ್ರಣಮ್ಯ ।
ಕಪರ್ದಿನಂ ತಸ್ಥುರದೀನಸತ್ತ್ವಾ-
ಸ್ಸೇನಾಪತಿಂ ವೀರಕಮೇವ ಕೃತ್ವಾ ॥ ೮ ॥

ವಿಸರ್ಜಯಾಮಾಸ ರಣಾಯ ದೇವಾ-
ನ್ವಿಶ್ರಾಂತವಾಹಾನಥ ತತ್ಪಿನಾಕೀ
ಯುದ್ಧೇ ಸ್ಥಿರಂ ಲಬ್ಧಜಯಂ ಪ್ರಧಾನಂ
ಸಂಪ್ರೇಷಿತಾಸ್ತೇ ತು ಮಹೇಶ್ವರೇಣ ॥ ೯ ॥

ಚಕ್ರುರ್ಯುಗಾಂತಪ್ರತಿಮಂ ಚ ಯುದ್ಧಂ
ಮರ್ಯಾದಹೀನಂ ಸಗಿಲೇನ ಸರ್ವೇ ।
ದೈತ್ಯೇಂದ್ರಸೈನ್ಯೇನ ಸದೈವ ಘೋರಂ
ಕ್ರೋಧಾನ್ವಿಗೀರ್ಣಾಸ್ತ್ರಿದಶಾಸ್ತು ಸಂಖ್ಯೇ ॥ ೧೦ ॥

---

೮. ನದಿಗಳೂ, ನದಗಳೂ, ಪರ್ವತಗಳೂ, ಸಹ ಅಲ್ಲಿಗೆ ಬಂದವು. ಶೂರ ಸೈನಿಕರೆಲ್ಲರೂ ವೀರಕನನ್ನು ಸೇನಾಪತಿಯನ್ನಾಗಿಮಾಡಿಕೊಂಡು, ಪರಮೇಶ್ವನಲ್ಲಿಗೆ ಬಂದು ಕೈಜೋಡಿಸಿ ಯುದ್ಧಕ್ಕೆ ಸಿದ್ಧರಾಗಿ ನಿಂತರು.

೯. ಮಹೇಶ್ವರನು ಅವರೆಲ್ಲರನ್ನೂ ಯುದ್ಧಕ್ಕೆ ಕಳುಹಿಸಿದನು. ಎಲ್ಲರೂ ಐಕಮತ್ಯದಿಂದ ಯುದ್ಧದಲ್ಲಿ ಜಯವನ್ನು ಪಡೆಯಲೇಬೇಕೆಂಬ ಮನೋನಿಶ್ಚಯದಿಂದ ಪ್ರಯಾಣಮಾಡಿದರು.

೧೦. ಹೀಗೆ ದೇವತೆಗಳ ಸೈನ್ಯಕ್ಕೂ ರಾಕ್ಷಸಸೈನ್ಯಕ್ಕೂ ಘೋರವಾದ ಯುದ್ಧವು ಒಂದುಯುಗ ಪೂರ್ತಿಯಾಗಿ ನಡೆಯಿತು. ಆದರೂ ಅದಕ್ಕೆ ಕೊನೆಯಿಲ್ಲದಂತಾಯಿತು. ರಾಕ್ಷಸರ ಸೇನಾಪತಿಯಾದ ಗಿಲನೂ, ವಿಘಸನೂ ಸಹ ಯುದ್ಧದಲ್ಲಿ ಅನೇಕ ಜನ ದೇವತೆಗಳನ್ನು ನಾಶಮಾಡಿದರು.

ತಸ್ಮಿನ್ಕ್ಷಣೇ ಯುಧ್ಯಮಾನಾಶ್ಚ ಸರ್ವೇ
ಬ್ರಹ್ಮೇಂದ್ರವಿಷ್ಣ್ವರ್ಕಶಶಾಂಕಮುಖ್ಯಾಃ ।
ಆಸನ್ನಿಗೀರ್ಣಾ ವಿಘಸೇನ ತೇನ
ಸೈನ್ಯೇ ನಿಗೀರ್ಣೇಽಸ್ಮಿ ತು ವೀರಕೋ ಹಿ ॥ ೧೧ ॥

ವಿಹಾಯ ಸಂಗ್ರಾಮಮಶಿರೋ ಗುಹಾಂ ತಾಂ
ಪ್ರವಿಶ್ಯ ಶರ್ವಂ ಪ್ರಣಿಪತ್ಯ ಮೂರ್ಧ್ನಾ ।
ಪ್ರೋವಾಚ ದುಃಖಾಭಿಹತಃ ಸ್ಮರಾರಿಂ
ಸುವೀರಕೋ ವಾಗ್ಮಿವರೋಽಥ ವೃತ್ತಂ ॥ ೧೨ ॥

ನಿಗೀರ್ಣಂ ತೇ ಸೈನ್ಯಂ ವಿಘಸದಿತಿಜೇನಾದ್ಯ ಭಗವ-
ನ್ನಿಗೀರ್ಣೋಽಸೌ ವಿಷ್ಣುಸ್ತ್ರಿಭುವನಗುರುರ್ದೈತ್ಯದಲನಃ ।
ನಿಗೀರ್ಣೌ ಚಂದ್ರಾರ್ಕೌ ದ್ರುಹಿಣಮಘವಾನೌ ಚ ವರದಾ
ನಿಗೀರ್ಣಾಸ್ತೇ ಸರ್ವೇ ಯಮವರುಣವಾತಾಶ್ಚ ಧನದಃ ॥ ೧೩ ॥

---

೧೧. ಅದೇ ಸಮಯದಲ್ಲಿ ಬ್ರಹ್ಮ, ಇಂದ್ರ, ವಿಷ್ಣು, ಸೂರ್ಯ, ಚಂದ್ರ ಇವರೇ ಮೊದಲಾದ ದೇವತೆಗಳು ಭಯಂಕರವಾಗಿ ಯುದ್ಧಮಾಡಿದರು. ಆದರೆ ವಿಘಸನು ಇವರೆಲ್ಲರನ್ನೂ ಸಂಪೂರ್ಣವಾಗಿ ಸೋಲಿಸಿದನು. ಆ ಸಮಯದಲ್ಲಿ ಸೈನ್ಯವೆಲ್ಲಾ ಚದುರಿಹೋಗಲು ವೀರಕನು ಮಾತ್ರ.

೧೨. ಆ ರಣರಂಗದಿಂದ ಓಡಿಬಂದು ಪರಶಿವನಿದ್ದ ಗುಹೆಯನ್ನು ಮುಟ್ಟಿದನು. ಅಲ್ಲಿದ್ದ ಪರಮೇಶ್ವರನಿಗೆ ವಂದಿಸಿ, ಅತ್ಯಂತವಾದ ದುಃಖದಿಂದ ವಾಚಾಲಿಯಾದ ವೀರಕನು ಹೀಗೆ ಹೇಳಿದನು.

೧೩. ಭಗವಂತನೇ, ನಿನ್ನ ಸೈನ್ಯವನ್ನೆಲ್ಲಾ ವಿಘಸನೆಂಬ ರಾಕ್ಷಸನು ಸೋಲಿಸಿದನು. ದೈತ್ಯನಾಶಕನಾದ ವಿಷ್ಣುವೂ ಸಹ ಅವನಿಗೆ ಸೋತಿದ್ದಾನೆ. ಸೂರ್ಯ, ಚಂದ್ರರೂ ಬ್ರಹ್ಮೇಂದ್ರರೂ, ಯಮ, ವರುಣ, ವಾಯು, ಕುಬೇರ ಮುಂತಾದ ಎಲ್ಲಾ ವೀರರೂ ಸಹ ಈಗ ಪರಾಜಿತರಾಗಿದ್ದಾರೆ.

ಸ್ಥಿತೋಽಸ್ಮ್ಯೇಕಃ ಪ್ರಷ್ಟಃ ಕಿಮಿಹ ಕರಣೀಯಂ ಭವತು ಮೇ ।
ಅಜೇಯೋ ದೈತ್ಯೇಂದ್ರಃ ಪ್ರಮುದಿತಮನಾ ದೈತ್ಯಸಹಿತಃ ॥ ೧೪ ॥

ಅಜೇಯಂ ತ್ವಾಂ ಪ್ರಾಪ್ತಃ ಪ್ರತಿಭಯಮನಾ ಮಾರುತಗತಿ-
ಸ್ಸ್ವಯಂ ವಿಷ್ಣುರ್ದೇವಃ ಕನಕಕಶಿಪುಂ ಕಶ್ಯಪಸುತಂ ।
ನಖೈಸ್ತೀಕ್ಷ್ಣೈರ್ಭಕ್ತ್ಯಾ ತದಪಿ ಭಗವಾಂಛಿಷ್ಟವಶಗಃ
ಪ್ರವೃತ್ತಸ್ತ್ರೈಲೋಕ್ಯಂ ವಿಧಮತು ಮಲಂ ವ್ಯಾತ್ತವದನಃ ॥ ೧೫ ॥

ವಸಿಷ್ಠಾದ್ಯೈಶ್ಶಪ್ತೋ ಭುವನಪತಿಭಿಸ್ಸಪ್ತಮುನಿಭಿ-
ಸ್ತಥಾಭೂತೇ ಭೂಯಸ್ತ್ವಮಿತಿ ಸುಚಿರಂ ದೈತ್ಯಸಹಿತಃ ॥ ೧೬ ॥

ತತಸ್ತೇನೋಕ್ತಾಸ್ತೇ ಪ್ರಣಯವಚನೈರಾತ್ಮನಿ ಹಿತೈಃ
ಕದಾಸ್ಮಾದ್ವೈ ಘೋರಾದ್ಭವತಿ ಮಮ ಮೋಕ್ಷೋ ಮುನಿವರಾಃ ।

---

೧೪. ಸ್ವಾಮಿಯೇ, ನಾನೊಬ್ಬನೇ ಈಗ ಉಳಿದಿದ್ದೇನೆ. ಮುಂದೆ ಮಾಡು ವುದನ್ನು ಆಜ್ಞಾಪಿಸು. ಅಂಧಕನಾದರೋ ಈಗ ಸೋಲುವಂತಿಲ್ಲ. ಇತರ ದೈತ್ಯ ರೊಡನೆ ಇನ್ನೂ ಸಂತೋಷದಿಂದಲೇ ಯುದ್ಧಮಾಡುತ್ತಿದ್ದಾನೆ.

೧೫. ಹಿಂದೆ ಕಶ್ಯಪರ ಮಗನಾದ ಹಿರಣ್ಯಕಶಿಪುವನ್ನು ತನ್ನ ಮೊನಚಾದ ಉಗುರುಗಳಿಂದಲೇ ನಾಶಮಾಡಿದ ವಿಷ್ಣುವು ಈಗ ಈ ರಾಕ್ಷಸನಿಗೆ ಹೆದರಿ ವಾಯು ವೇಗದಿಂದ ಓಡಿಬಂದು ಅಜೇಯನಾದ ನಿನ್ನನ್ನು ಮರೆಹೊಕ್ಕಿದ್ದಾನೆ. ಆದ್ದರಿಂದ ದಯಾಶಾಲಿಯೂ, ಶಿಷ್ಟರಕ್ಷಕನೂ ಆದ ನೀನು ಈ ರಾಕ್ಷಸರನ್ನು ನಾಶಮಾಡಿ ಮೂರು ಲೋಕಕ್ಕೂ ಮಂಗಳವನ್ನುಂಟುಮಾಡು.

೧೬. ಲೋಕದಲ್ಲಿ ಉತ್ತಮೋತ್ತಮರಾದ ಸಪ್ತರ್ಷಿಗಳಿಂದಲೂ, ವಸಿಷ್ಠನೇ ಮೊದಲಾದ ಮಹರ್ಷಿಗಳಿಂದಲೂ ಎಷ್ಟೋವೇಳೆ ಶಾಪವನ್ನು ಹೊಂದಿದ್ದಾನೆ. ಆದರೂ ಈ ರಾಕ್ಷಸನು ತಿರುಗಿ ಅನೇಕ ದೈತ್ಯರೊಡನೆ ಕೂಡಿ ನಿನ್ನ ಮೇಲೆಯೇ ಯುದ್ಧಕ್ಕೆ ಬಂದಿದ್ದಾನೆ.

೧೭. ಆ ವಿಧಸನು, ಶಾಪಕೊಟ್ಟ ಋಷಿಗಳನ್ನೆಲ್ಲಾ ಹಿಡಿದು, ಒಳ್ಳೆಯ ವಿಶ್ವಾಸದ ಮಾತುಗಳಿಂದ ಆ ಶಾಪಪರಿಹಾರದ ಉಪಾಯವನ್ನು ಕೇಳಿದನು. ಅದಕ್ಕೆ

ಯತಃ ಕ್ರುದ್ಧೈರುಕ್ತೋ ವಿಘಸಹರಣಾದ್ಯುದ್ಧಸಮಯೇ
ತತೋ ಘೋರೈರ್ಬಾಣೈರ್ವಿದಲಿತಮುಖೇ ಮುಷ್ಟಿಭಿರಲಂ　　॥ ೧೭ ॥

ಬದರ್ಯಾಖ್ಯಾರಣ್ಯೇ ನನು ಹರಿಗೃಹಾಪುಣ್ಯವಸತೌ
ನಿಸಂಸ್ತಭ್ಯಾತ್ಮಾನಂ ವಿಗತಕಲುಷೋ ಯಾಸ್ಯಸಿ ಪರಂ ।
ತತಸ್ತೇಷಾಂ ವಾಕ್ಯಾತ್ಪ್ರತಿದಿನಮಸೌ ದೈತ್ಯಗಿಲನಃ
ಕ್ಷುಧಾರ್ತಸ್ಸಂಗ್ರಾಮಾದ್ಭ್ರಮತಿ ಪುನರಾಮೋದಮುದಿತಃ　　॥ ೧೮ ॥

ತಮಸ್ವೇದಂ ಘೋರಂ ಜಗದುದಿತಯೋಸ್ಸೂರ್ಯಶಶಿನೋ-
ರ್ಯಥಾಶುಕ್ರಸ್ತುಭ್ಯಂ ಪರಮರಿಪುರತ್ಯಂತನಿಕರಃ ।
ಹತಾನ್ದೇವೈರ್ದೈತ್ಯಾನ್ಪುನರಮೃತವಿದ್ಯಾಸ್ತುತಿಪದೈ-
ಸ್ಸವೀರ್ಯಾನ್ಸಂಹೃಷ್ಟಾನ್ಪ್ರಣಶತವಿಯುಕ್ತಾನ್ಪ್ರಕುರುತೇ　　॥ ೧೯ ॥

---

ಅವರು ಬಹಳವಾಗಿ ಕೋಪಗೊಳ್ಳಲು, ವಿಘಸನು ಅವರೆಲ್ಲರನ್ನೂ ಘೋರವಾದ ಬಾಣಗಳಿಂದಲೂ ಮುಷ್ಟಿಪ್ರಹಾರಗಳಿಂದಲೂ, ಬಲವಾಗಿ ಹೊಡೆಯಲು ಅದಕ್ಕೆ ಹೆದರಿ ಆ ಋಷಿಗಳು,

೧೮. ಅಯ್ಯಾ ವಿಘಸನೇ, ನೀನು ಬದರಿಕಾಶ್ರಮಕ್ಕೆ ಹೋಗಿ, ವಿಷ್ಣು ದೇವಾಲಯದ ಒಂದು ಭಾಗದಲ್ಲಿ ವಾಸಮಾಡಿದರೆ ನಿನ್ನ ಶಾಪವು ಪರಿಹಾರವಾಗುವುದೆಂದು ಶಾಪವಿಮೋಚನಸನ್ನು ತಿಳಿಸಿದರು. ಅದರಂತೆಯೇ ಅವನೂ ಗಿಲನನೂ ಸಹ ಪ್ರತಿನಿತ್ಯವೂ ಅಲ್ಲಿಗೆ ಹೋಗಿ ಪುನಃ ಯುದ್ಧರಂಗಕ್ಕೆ ಬರುತ್ತಾರೆ. ಅವರು ಹೊಟ್ಟೆ ಹಸಿವಿನಿಂದ ನರಳುತ್ತಿದ್ದರೂ, ಯುದ್ಧಭೂಮಿಯ ವಾಸನೆಯಿಂದಲೇ ಸಂತುಷ್ಟರಾಗಿ ಪುನಃ ಯುದ್ಧಸಿದ್ಧರಾಗುತ್ತಾರೆ.

೧೯. ಸ್ವಾಮಿಯೇ, ಸೂರ್ಯಚಂದ್ರರಿಂದ ಆ ರಾಕ್ಷಸನು ಬಳಲದಂತೆಯೂ, ದೇವತೆಗಳಿಂದ ನಾಶವಾಗಿರುವ ದೈತ್ಯಸೈನಿಕರು ಪುನಃ ಮೊದಲಿನಂತೆ ಪರಾಕ್ರಮಿಗಳಾಗಿ ವ್ರಣಾದಿಗಳನ್ನು ಕಳೆದುಕೊಂಡು ಯುದ್ಧಮಾಡುವಂತೆಯೂ, ಶುಕ್ರಾಚಾರ್ಯನು ಮೃತಸಂಜೀವಿನೀ ಮಂತ್ರಗಳಿಂದ ಅವರಿಗೆ ಸಹಾಯಮಾಡುತ್ತಿದ್ದಾನೆ. ಈಗ ನಿನಗೆ ಹೆಚ್ಚು ದ್ವೇಷಿಯೆಂದರೆ ಆ ಶುಕ್ರನೇ ಆಗಿರುವನು.

ವರಂ ಪ್ರಾಣಾಸ್ತ್ಯಾಜ್ಯಾಸ್ತ್ರವ ಮಮ ತು ಸಂಗ್ರಾಮಸಮಯೇ
ಭವಾನ್ಸಾಕ್ಷೀ ಭೂತಃ ಕ್ಷಣಮಪಿ ವೃತಃ ಕಾರ್ಯಕರಣೇ ॥ ೨೦ ॥

॥ ಸನತ್ಕುಮಾರ ಉವಾಚ ॥

ಇತೀದಂ ಸತ್ಪುತ್ರಾತ್ಪ್ರಮಥಪತಿರಾಕರ್ಣ್ಯ ಕುಪಿತ-
ಶ್ಚಿರಂ ಧ್ಯಾತ್ವಾ ಚಕ್ರೇ ತ್ರಿಭುವನಪತಿಃ ಪ್ರಾಗನುಪಮಂ ।
ಪ್ರಗಾಯತ್ಸಾಮಾಖ್ಯಂ ದಿನಕರಕರಾಕಾರವಪುಷಾ
ಪ್ರಹಾಸಾತ್ತನ್ನಾಮ್ನಾ ತದನು ನಿಹತಂ ತೇನ ಚ ತಮಃ ॥ ೨೧ ॥

ಪ್ರಕಾಶೇಽಸ್ಮಿಂಲ್ಲೋಕೇ ಪುನರಪಿ ಮಹಾಯುದ್ಧಮಕರೋ-
ದ್ರಣೇ ದೈತ್ಯೈಸ್ಸಾರ್ಧಂ ವಿಕೃತವದನೈರ್ವೀರಕಮುನಿಃ ।
ಶಿಲಾಚೂರ್ಣಂ ಭುಕ್ತ್ವಾ ಪ್ರವರಮುನಿನಾ ಯಸ್ತು ಜನಿತ-
ಸ್ಸ ಕೃತ್ವಾ ಸಂಗ್ರಾಮಂ ಪುನರಪಿ ಪುರಾ ಯಶ್ಚ ಜಿತವಾನ್ ॥ ೨೨ ॥

---

೨೦. ದೇವದೇವನೇ, ನಿನ್ನ ಎದುರಿನಲ್ಲಿ ನಡೆಯುತ್ತಿರುವ ಈ ಘೋರ ಸಂಗ್ರಾಮದಲ್ಲಿ ಪ್ರಾಣಬಿಡುವುದೇ ಉತ್ತಮವಾದ ಕೆಲಸವೆಂಬುದು ನನಗೆ ಈಗ ತಿಳಿದುಬಂದಿದೆ ಎಂದು ವೀರಕನು ಮಹೇಶ್ವರನಲ್ಲಿ ಹೇಳಿಕೊಂಡನು.

೨೧. ಹೀಗೆ ವೀರಕನು ಹೇಳಿದ ಮಾತುಗಳನ್ನು ಪರಮೇಶ್ವರನು ಕೇಳಿ, ಕುಪಿತನಾಗಿ ಅಪೂರ್ವವಾದ ಸಾಮವೆಂಬ ಮಂತ್ರವನ್ನು ಜಪಿಸಿದನು. ಒಡನೆಯೇ ಸೂರ್ಯನಂತೆ ಕಾಂತಿಯುಳ್ಳ ಒಂದು ತೇಜಸ್ಸು ಹುಟ್ಟಿ, ಆ ಅಂಧಕನು ಸೃಷ್ಟಿ ಮಾಡಿದ್ದ ಕತ್ತಲೆಯೆಲ್ಲವನ್ನೂ ನಾಶಮಾಡಿತು

೨೨. ಈ ತೇಜಸ್ಸಿನ ಪ್ರಕಾಶದಲ್ಲಿ ಪುನಃ ದೇವದೈತ್ಯರಿಗೆ ಯುದ್ಧವು ಆರಂಭವಾಯಿತು. ಇತ್ತ ಈಶ್ವರನ ಪಕ್ಷದಲ್ಲಿ ವೀರಕಋಷಿಯು ಬಹು ಧೈರ್ಯದಿಂದ ಯುದ್ಧಮಾಡತೊಡಗಿದನು. ಆ ವೀರಕಋಷಿಯಾದರೋ ಶಿಲಾಚೂರ್ಣವನ್ನು ತಿಂದು ಋಷಿಯಿಂದ ಜನಿಸಿದವನು. ಹಿಂದೆ ತ್ರಿಪುರಾಸುರರ ಯುದ್ಧದಲ್ಲಿಯೂ ಸಹ ಈತನೇ ದೇವಪಕ್ಷದಲ್ಲಿದ್ದು ಜಯಶೀಲನಾಗಿದ್ದನು.

ಮಹಾರುದ್ರಸ್ಸದ್ಯಃ ಸ ಖಲು ದಿತಿಜೇನಾತಿಗಿಲಿತ-
ಸ್ತತಶ್ಚಾಸೌ ನಂದೀ ನಿಶಿತಶರಶೂಲಾಸಿಸಹಿತಃ ।
ಪ್ರಧಾನೋ ಯೋಧಾನಾಂ ಮುನಿವರಶತಾನಾಮಪಿ ಮಹಾ-
ನ್ನಿವಾಸೋ ವಿದ್ಯಾನಾಂ ಶಮದಮಮಹಾಧೈರ್ಯಸಹಿತಃ ॥ ೨೩ ॥

ನಿರೀಕ್ಷ್ಯೈವಂ ಪಶ್ಚಾದ್ವೃಷಭವರಮಾರುಹ್ಯ ಭಗವಾ-
ನ್ಕಪರ್ದೀ ಯುದ್ಧಾರ್ಥೀ ವಿಧಸದಿತಿಜಂ ಸಂಮುಖಮುಖಃ ।
ಜಪನ್ದಿವ್ಯಂ ಮಂತ್ರಂ ನಿಗಲನವಿಧಾನೋದ್ಗಿಲನಕಂ
ಸ್ಥಿತಸ್ಸಜ್ಜಂ ಕೃತ್ವಾ ಧನುರಶನಿಕಲ್ಪಾನಪಿ ಶರಾನ್ ॥ ೨೪ ॥

ತತೋ ನಿಷ್ಕ್ರಾಂತೋಽಸೌ ವಿಧಸವದನಾದ್ವೀರಕಮುನಿ-
ರ್ಗೃಹೀತ್ವಾ ತತ್ಸರ್ವೇ ಸ್ವಬಲಮತುಲಂ ವಿಷ್ಣುಸಹಿತಃ ।
ಸಮುದ್ಗೀರ್ಣಾಸ್ಸರ್ವೇ ಕಮಲಜಬಲಾರೀಂದುದಿನಪಾಃ
ಪ್ರಹೃಷ್ಟಂ ತತ್ಸೈನ್ಯಂ ಪುನರಪಿ ಮಹಾಯುದ್ಧಮಕರೋತ್ ॥ ೨೫ ॥

---

೨೩. ಮಹಾಭಯಂಕರವಾಗಿ ಯುದ್ಧಮಾಡುತ್ತಿದ್ದ ವೀರಕಮುನಿಯನ್ನೂ ಸಹ ದೈತ್ಯನು ನುಂಗಿದನು. ಆನಂತರ ಬಾಣ, ಶೂಲ, ಕತ್ತಿ ಇವುಗಳಿಂದ ಕೂಡಿದ್ದ, ಪ್ರಧಾನಸೇನಾಪತಿಯು ಶಮದಮಾದಿಸದ್ಗುಣಗಳಿಂದ ಕೂಡಿದವನೂ, ವಿದ್ಯಾ ವಿಶಾರದನೂ ಆದ ನಂದೀಶ್ವರನನ್ನು ಸಹ ಆ ದೈತ್ಯನು ನುಂಗಿಹಾಕಿದನು.

೨೪. ಪರಮೇಶ್ವರನು ಇದನ್ನು ನೋಡಿ ವೃಷಭಾರೂಢನಾಗಿ ವಿಧಸನೆಂಬ ರಾಕ್ಷಸನಿಗೆ ಅಭಿಮುಖವಾಗಿ ಯುದ್ಧಕ್ಕೆ ನಿಂತನು. ನುಂಗಿದವರನ್ನು ಪುನಃ ಹಿಂದಿರುಗಿಸುವ ಮಂತ್ರವೊಂದನ್ನು ಜಪಿಸಿ, ಸಿಡಿಲಿನಂತೆ ಭಯಂಕರವಾದ ಬಾಣಗಳನ್ನು ಧನುಸ್ಸಿಗೆ ಹೂಡಿದನು.

೨೫. ಮಹೇಶ್ವರನು ಆ ಮಂತ್ರವನ್ನು ಜಪಿಸಿದೊಡನೆಯೇ ವಿಧಸನ ಬಾಯಿಂದ ವೀರಕಮುನಿಯೂ, ಬ್ರಹ್ಮ, ವಿಷ್ಣು, ಇಂದ್ರ, ಸೂರ್ಯ, ಚಂದ್ರ, ಮುಂತಾದವರೆಲ್ಲರೂ ತಮ್ಮ ಸೈನ್ಯಸಮೇತರಾಗಿ ಹೊರಗೆ ಬಂದುಬಿಟ್ಟರು. ಒಡನೆಯೇ ಸಂತೋಷದಿಂದ ಅವರೆಲ್ಲರೂ ಒಟ್ಟಾಗಿ ದೈತ್ಯರಮೇಲೆ ಯುದ್ಧಮಾಡಲುಪಕ್ರಮಿಸಿದರು.

ಜಿತೇ ತಸ್ಮಿಂಚ್ಛುಕ್ರಸ್ತದನು ದಿತಿಜಾನ್ಯುದ್ಧವಿಹತಾನ್
ಯದಾ ವಿದ್ಯಾವೀರ್ಯಾತ್ಪುನರಪಿ ಸಜೀವಾನ್ಸ್ವಕುರುತೇ ।
ತದಾ ಬದ್ಧಾನೀತಃ ಪಶುರಿವ ಗಣೈರ್ಭೂತಪತಯೇ
ನಿಗೀರ್ಣಸ್ತೇನಾಸೌ ತ್ರಿಪುರರಿಪುಣಾ ದಾನವಗುರುಃ ॥ ೨೬ ॥

ವಿನಷ್ಟೇ ಶುಕ್ರಾಖ್ಯೇ ಸುರರಿಪುನಿವಾಸಸ್ತದಖಿಲೋ
ಜಿತೋ ಧ್ವಸ್ತೋ ಭಗ್ನೋ ಭೃಶಮಪಿ ಸುರೈಶ್ಚಾಪಿ ದಲಿತಂ ।
ಪ್ರಭೂತೈರ್ಭೂತಾಘೈರ್ದಿತಿಜಕುಣಪಗ್ರಾಸರಸಿಕೈ-
ಸ್ಸರುಂಡೈರ್ನೃತ್ಯದ್ಭಿರ್ನಿಶಿತಶರಶಕ್ತ್ಯುದ್ಧತಕರೈಃ ॥ ೨೭ ॥

ಪ್ರಮತ್ತೈರ್ವೇತಾಲೈಸ್ಸುದೃಢಕರತುಂಡೈರಪಿ ಖಗೈ-
ರ್ವೃಕೈರ್ನಾನಾಭೇದೈಶ್ಶವಕುಣಪಪೂರ್ಣಾಸ್ಯಕವಲೈಃ ।
ವಿಕೀರ್ಣೇ ಸಂಗ್ರಾಮೇ ಕನಕಕಶಿಪೋರ್ವಂಶಜನಕ-
ಶ್ಚಿರಂ ಯುದ್ಧಂ ಕೃತ್ವಾ ಹರಿಹರಮಹೇಂದ್ರೈಶ್ಚ ವಿಜಿತಃ ॥ ೨೮ ॥

---

೨೬. ಹೀಗೆ ದೈವಸೈನಿಕರು ಗೆಲ್ಲುತ್ತಿರಲು, ಸತ್ತ ರಾಕ್ಷಸವೀರರನ್ನೆಲ್ಲಾ ಶುಕ್ರಾಚಾರ್ಯನು ವಿದ್ಯಾಬಲದಿಂದ ಬದುಕಿಸಿದನು. ಇದನ್ನು ನೋಡಿದ ಪ್ರಮಥ ಗಣಗಳು ಶುಕ್ರಾಚಾರ್ಯನನ್ನು ಪಶುವನ್ನು ಹಿಡಿದುತರುವಂತೆ ಪರಮೇಶ್ವರನ ಸಮೀಪಕ್ಕೆ ಎಳೆದುತಂದರು. ಒಡನೆಯೇ ಪರಶಿವನು ಆ ದೈತ್ಯಗುರುವನ್ನು ನುಂಗಿಹಾಕಿದನು.

೨೭. ಶುಕ್ರನು ಹೊರಟುಹೋದ ಮೇಲೆ ದೈತ್ಯರ ಬಲ ಕುಗ್ಗಿತು. ದೇವತೆಗಳು ಮುಂದಾದರು. ದೈತ್ಯಸೈನ್ಯವೆಲ್ಲಾ ನಷ್ಟವಾಯಿತು. ದೇವತೆಗಳು ಗೆದ್ದರು. ರಣರಂಗದಲ್ಲೆಲ್ಲಾ ರಾಕ್ಷಸರ ರುಂಡಗಳನ್ನು ಹಿಡಿದು ಭೂತಪ್ರೇತಗಳು ಕುಣಿಯಲಾರಂಭಿಸಿದುವು.

೨೮. ಮದಿಸಿದ ಭೇತಾಳಗಳು, ಮೊನಚಾದ ಮೂತಿಯುಳ್ಳ ಹಕ್ಕಿಗಳು, ತೋಳಗಳು, ಇನ್ನೂ ನಾನಾವಿಧವಾದ ಶವಭಕ್ಷಕಗಳಾದ ಪ್ರಾಣಿಗಳು ಇವುಗಳಿಂದ ರಣರಂಗವು ತುಂಬಿಹೋಯಿತು. ಇಷ್ಟಾದರೂ ಅಂಧಕನು ಮಾತ್ರ ಯುದ್ಧಮಾಡುತ್ತಲೇ ಇದ್ದನು. ಬಹಳಕಾಲ ಒಂಟಿಯಾಗಿ ಯುದ್ಧಮಾಡಿ ಕೊನೆಗೆ ಹರಿ, ಹರ, ಇಂದ್ರ ಮೂವರಿಂದಲೂ ಸೋತುಹೋದನು.

ಪ್ರವಿಷ್ಟೇ ಪಾತಾಲೇ ಗಿರಿಜಲಧಿರಂಧ್ರಾಣ್ಯಪಿ ತಥಾ
ತತಸ್ಸೈನ್ಯೇ ಕ್ಷೀಣೇ ದಿತಿಜವೃಷಭಶ್ಚಾಂಧಕವರಃ ।
ಪ್ರಕೋಪೇ ದೇವಾನಾಂ ಕದನದವರೋ ವಿಶ್ವದಲನೋ
ಗದಾಘಾತೈರ್ಘೋರೈರ್ವಿದಲಿತಮದಶ್ಚಾಪಿ ಹರಿಣಾ ॥ ೨೯ ॥

ನ ವೈ ಯಸ್ಸಂಗ್ರಾಮಂ ತ್ಯಜತಿ ವರಲಬ್ಧಃ ಕಿಲ ಯತ-
ಸ್ತದಾ ತಾಡ್ಯೈರ್ಘೋರೈಸ್ತ್ರಿದಶಪತಿನಾ ಪೀಡಿತತನುಃ ।
ತತಶ್ಯಸ್ತ್ರಾಸ್ತ್ರೌಘೈಸ್ತರುಗಿರಿಜಲೈಶ್ಚಾಶು ವಿಬುಧಾನ್
ಜಿಗಾಯೋಚ್ಚೈರ್ಗರ್ಜನ್ಪ್ರಮಥಪತಿಮಾಹೂಯ ಶನಕೈಃ ॥ ೩೦ ॥

ಸ್ಥಿತೋ ಯುದ್ಧಂ ಕುರ್ವನ್ರಣಪತಿತಶಸ್ತ್ರೈರ್ಬಹುವಿಧೈಃ
ಪರಿಕ್ಷೀಣೈಸ್ಸರ್ವೈಸ್ತದನು ಗಿರಿಜಾರುದ್ರಮತುದತ್ ।
ತಥಾ ವೃಕ್ಷೈಸ್ಸರ್ಪೈರಶನಿನಿವಹೈಃ ಶಸ್ತ್ರಪಟಲೈ-
ರ್ವಿರೂಪೈರ್ಮಾಯಾಭಿಃ ಕಪಟರಚನಾಶಂಬರಶತೈಃ ॥ ೩೧ ॥

---

೨೯. ಅಂಧಕನು ಕೊನೆಗೆ ಪಾತಾಳಕ್ಕೆ ಓಡಿಹೋದನು. ಅಲ್ಲಿ ಗಿರಿಗಳೂ, ಸಮುದ್ರಗಳೂ, ಅವನೊಡನೆ ಹೋರಾಡಿದುವು. ಇವನ ಸೈನ್ಯವೆಲ್ಲಾ ನಾಶವಾಯಿತು. ಕೊನೆಗೆ ಅತ್ಯಂತ ಕೋಪದಿಂದ ಗದೆಯನ್ನು ಬೀಸುತ್ತಾ ಮುಂದುವರಿದನು. ಆಗ ವಿಷ್ಣುವು ಇವನನ್ನು ಎದುರಿಸಿ ಅವನ ಸೊಕ್ಕನ್ನು ಅಲ್ಲಿಯೇ ಮುರಿದನು.

೩೦. ಪುನಃ ಅಷ್ಟಕ್ಕೇ ನಿಲ್ಲದೆ ಅಂಧಕನು ಬ್ರಹ್ಮನ ವರಬಲದಿಂದ ಮುಂದೆ ನುಗ್ಗಿದನು. ಅಲ್ಲಿ ಇಂದ್ರನು ಅವನನ್ನು ಎದುರಿಸಿ ಭಯಂಕರವಾದ ತಾಡನಗಳಿಂದ ಅವನನ್ನು ನೋಯಿಸಿದನು. ಆದರೂ ಮುಂದುವರಿದು, ತರು, ಗಿರಿ, ನೀರು, ಇವುಗಳ ಸಹಾಯದಿಂದ ಅನೇಕ ದೇವತೆಗಳನ್ನು ಜಯಿಸಿ, ಮಹೇಶ್ವರನನ್ನು ಯುದ್ಧಕ್ಕೆ ಕರೆಯುತ್ತಿದ್ದನು,

೩೧. ಹಾಗೆ ಪಾರ್ವತೀಪರಮೇಶ್ವರರನ್ನು ಎದುರಿಸಿ ಯುದ್ಧಮಾಡುತ್ತಾ, ತನ್ನ ಸೈನ್ಯವನ್ನೆಲ್ಲಾ ಕಳೆದುಕೊಂಡಿದ್ದರೂ, ಮರಗಳಿಂದಲೂ ಸರ್ಪಗಳಿಂದಲೂ, ಶಸ್ತ್ರಾಸ್ತ್ರಗಳಿಂದಲೂ, ಮಾಯಾಯುದ್ಧಗಳಿಂದಲೂ, ಕೃತ್ರಿಮೋಪಾಯಗಳಿಂದಲೂ ಪಾರ್ವತೀಪರಮೇಶ್ವರರನ್ನು ನೋಯಿಸಿದನು.

ವಿಜೇತುಂ ಶೈಲೇಶಂ ಕುಹಕಮಪರಂ ತತ್ರ ಕೃತವಾ-
ನ್ಮಹಾಸತ್ತ್ವೋ ವೀರಸ್ತ್ರಿಪುರರಿಪುತುಲ್ಯಶ್ಚ ಮತಿಮಾನ್ ।
ನ ವಧ್ಯೋ ದೇವಾನಾಂ ವರಶತಮನೋನ್ಮಾದವಿವಶಃ
ಪ್ರಭೂತೈಶ್ಶಸ್ತ್ರಾಸ್ತ್ರೈಸ್ಸಪದಿ ದಿತಿಜೋ ಜರ್ಜರತನುಃ ॥ ೩೨ ॥

ತದೀಯಾದ್ವಿಷ್ಯಂದಾತ್ಕ್ಷಿತಿತಲಗತೈರಂಧಕಗಣೈ-
ರತಿವ್ಯಾಪ್ತಂ ಘೋರಂ ವಿಕೃತವದನಂ ಸ್ವಾತ್ಮಸದೃಶಂ ।
ದಧತ್ಕಲ್ಪಾಂತಾಗ್ನಿಪ್ರತಿಮವಪುಷಾ ಭೂತಪತಿನಾ
ತ್ರಿಶೂಲೇನೋದ್ಭಿನ್ನಸ್ತ್ರಿಪುರರಿಪುಣಾ ದಾರುಣತರಂ ॥ ೩೩ ॥

ಯದಾ ಸೈನ್ಯಾತ್ಸೈನ್ಯಂ ಪಶುಪತಿಹತಾದನ್ಯದಭವ-
ದ್ವ್ರಣೋತ್ಥೈರತ್ಯುಷ್ಣೈಃ ಪಿಶಿತನಿಸ್ಸೃತೈರ್ಬಿಂದುಭಿರಲಂ ।
ತದಾ ವಿಷ್ಣುರ್ಯೋಗಾತ್ಪ್ರಮಥಮತಿಮಾಹೂಯ ಮತಿಮಾನ್
ಚಕಾರೋಗ್ರಂ ರೂಪಂ ವಿಕೃತವದನಂ ಸ್ತ್ರೈಣಮಜಿತಂ ॥ ೩೪ ॥

---

೩೨. ಬಹು ಪರಾಕ್ರಮಿಯಾದ ಅಂಧಕನು, ಪರಮೇಶ್ವರನನ್ನು ಗೆಲ್ಲಲು ಅಸಾಧ್ಯ ಪ್ರಯತ್ನಮಾಡಿದನು. ಅಂಧಕನಾದರೋ, ಶೌರ್ಯದಲ್ಲಿ ಮಹೇಶ್ವರನಿಗೆ ಸಮನಾದವನು. ದೇವತೆಗಳಿಂದ ಸಾಯತಕ್ಕವನಲ್ಲ. ವರಬಲಗಳು ಅವನಿಗೆ ಅನೇಕ. ಶಸ್ತ್ರಾಸ್ತ್ರಗಳು ಅವನಲ್ಲಿ ಬಹಳ. ಪರಮೇಶ್ವರನ ಏಟಿನಿಂದ ಅವನ ದೇಹವು ಜಜ್ಜಿ ಹೋಯಿತೇ ಹೊರತು ಅವನು ಮಾತ್ರ ಸಾಯಲಿಲ್ಲ.

೩೩. ಪರಮೇಶ್ವರನು ಉಗ್ರಬಾಣಗಳಿಂದ ಅಂಧಕನಿಗೆ ಹೊಡೆದತಕ್ಷಣ ಅವನ ಮೈಯಿಂದ ರಕ್ತಕಣಗಳು ನೆಲಕ್ಕೆ ಉದುರುತ್ತಿದ್ದುವು. ಆ ಒಂದೊಂದು ರಕ್ತ ಬಿಂದುವೇ ಒಬ್ಬೊಬ್ಬ ಅಂಧಕಾಸುರನಾಗುತ್ತಿತ್ತು. ಅವರೆಲ್ಲರೂ ಒಟ್ಟಾಗಿ ಪರಶಿವ ನೊಡನೆ ಯುದ್ಧಮಾಡುತ್ತಿದ್ದರು. ಈ ತಂತ್ರದಿಂದ ಶಿವನನ್ನು ಗೆಲ್ಲಲು ಅಂಧಕನು ಯೋಚಿಸಿದನು.

೩೪. ಹೀಗೆ ಒಂದು ಸೈನ್ಯವು ನಾಶವಾದರೆ ಮತ್ತೊಂದು ಸೈನ್ಯವು ಹುಟ್ಟು ತ್ತಿತ್ತು. ರಾಕ್ಷಸರಕ್ತಬಿಂದುಗಳೇ ಸೈನಿಕರಾಗಲಾರಂಭಿಸಿದುವು. ಇದನ್ನು ನೋಡಿ, ವಿಷ್ಣುವು ಪರಮೇಶ್ವರನಿಗೆ ಈ ವಿಷಯವನ್ನು ತಿಳಿಸಿ, ಭಯಂಕರವಾದ ಒಂದು ಸ್ತ್ರೀ ರೂಪವನ್ನು ಸೃಷ್ಟಿಮಾಡಿದನು.

ಕರಾಲಂ ಸಂಶುಷ್ಕಂ ಬಹುಭುಜಲತಾಕ್ರಾಂತಕುಪಿತೋ
ವಿನಿಷ್ಕ್ರಾಂತಃ ಕರ್ಣಾದ್ಗಣಶಿರಸಿ ಶಂಭೋಶ್ಚ ಭಗವಾನ್ ॥ ೩೫ ॥

ರಣಸ್ಥಾ ಸಾ ದೇವೀ ಚರಣಯುಗಲಾಲಂಕೃತಮಹೀ
ಸ್ತುತಾ ದೇವೈಸ್ಸರ್ವೈಸ್ತದನು ಭಗವಾನ್ಪ್ರೇರಿತಮತಿಃ ।
ಕ್ಷುಧಾರ್ತಾ ತತ್ಸೈನ್ಯಂ ದಿತಿಜನಿಸೃತಂ ತಚ್ಚ ರುಧಿರಂ
ಪಪೌ ಸಾತ್ಯುಷ್ಣಂ ತದ್ರಣಶಿರಸಿ ಸೃತ್ಕರ್ದಮಮಲಂ ॥ ೩೬ ॥

ತತಸ್ತ್ವೇಕೋ ದೈತ್ಯಸ್ತದಪಿ ಯುಯುಧೇ ಶುಷ್ಕರುಧಿರ-
ಸ್ತಲಾಘಾತೈರ್ಘೋರೈರಶನಿಸದೃಶೈರ್ಜಾನುಚರಣೈಃ ।
ನಖೈರ್ವಜ್ರಾಕಾರೈರ್ಮುಖಭುಜಶಿರೋಭಿಶ್ಚ ಗಿರಿಶಂ
ಸ್ಮರನ್ಕ್ಷಾತ್ರಂ ಧರ್ಮಂ ಸ್ವಕುಲವಿಹಿತಂ ಶಾಶ್ವತಮಜಂ ॥ ೩೭ ॥

---

೩೫. ಆ ಸ್ತ್ರೀರೂಪವು ಬಹು ಭಯಂಕರವಾಗಿ ಉರಿಯುತ್ತಾ ಅನೇಕ ಭುಜಗಳಿಂದ ಕೂಡಿದ್ದಾಗಿ ಪರಮೇಶ್ವರನ ಕಿವಿಯಿಂದ ಹೊರಟು ರಣರಂಗದಲ್ಲೆಲ್ಲಾ ವ್ಯಾಪಿಸಿತು.

೩೬. ಆ ಸ್ತ್ರೀರೂಪವು ರಣರಂಗದಲ್ಲಿ ತನ್ನ ಎರಡು ಕಾಲುಗಳಿಂದಲೂ ನಿಂತು ದೇವತೆಗಳಿಂದ ಸ್ತುತಿಸಲ್ಪಟ್ಟಿತು. ಭಗವಂತನಾದ ವಿಷ್ಣುವು ಅದಕ್ಕೆ ಪ್ರೇರಕವಾದ ಬುದ್ಧಿಯನ್ನಿತ್ತನು. ಒಡನೆಯೇ ಅದು ಬಾಯಾರಿಕೆಯಿಂದ ಕೂಡಿ, ರಾಕ್ಷಸರ ದೇಹದಿಂದ ನೆಲಕ್ಕೆ ಸುರಿಯುವ ರಕ್ತವನ್ನೆಲ್ಲಾ ಪಾನಮಾಡಲಾರಂಭಿಸಿತು.

೩೭. ಕೊನೆಗೆ ಇದರಿಂದ ರಾಕ್ಷಸ ಸೈನ್ಯವೆಲ್ಲಾ ಧ್ವಂಸವಾಯಿತು. ಅಂಧಕನು ಒಬ್ಬನೇ ಉಳಿದನು. ಆವನ ರಕ್ತವೂ ಒಣಗಿಹೋಯಿತು. ಅಷ್ಟಾದರೂ ಕ್ಷತ್ರಿಯಧರ್ಮವನ್ನೂ, ತನ್ನ ವಂಶೀಕರ ಕೀರ್ತಿಯನ್ನೂ ಜ್ಞಾಪಿಸಿಕೊಂಡು ತನ್ನ ಕೈಕಾಲುಗಳನ್ನೂ ಕಠಿನವಾದ ಉಗುರುಗಳನ್ನೂ ದೇಹದ ಸರ್ವಾವಯಗಳನ್ನೂ ಸಹಾಯವನ್ನಾಗಿ ಮಾಡಿಕೊಂಡು ದೃಢವಾಗಿ ಯುದ್ಧಮಾಡುತ್ತಲೇ ಇದ್ದನು.

ರಣೇ ಶಾಂತಃ ಪಶ್ಚಾತ್ಪ್ರಮಥಪತಿನಾ ಭಿನ್ನಹೃದಯ-
ಸ್ತ್ರಿಶೂಲೇ ಸಂಪ್ರೋತೋ ನಭಸಿ ವಿಧೃತಃ ಸ್ಥಾಣುಸದೃಶಃ ।
ಅಧಃ ಕಾಯಶ್ಶುಷ್ಕಸ್ತಪನಕಿರಣೈರ್ಜೀರ್ಣತನುಮಾನ್
ಜಲಾಸಾರೈರ್ಮೇಘೈಃ ಪವನಸಹಿತೈಃ ಕ್ಲೇದಿತವಪುಃ ॥ ೩೮ ॥

ವಿಶೀರ್ಣಸ್ತಿಗ್ಮಾಂಶೋಸ್ತುಹಿನಶಕಲಾಕಾರಶಕಲ-
ಸ್ತಥಾಭೂತಃ ಪ್ರಾಣಾಂಸ್ತದಪಿ ನ ಜಹೌ ದೈತ್ಯವೃಷಭಃ ।
ತದಾ ತುಷ್ಟಶ್ಶಂಭುಃ ಪರಮಕರುಣಾವಾರಿಧಿರಸೌ
ದದೌ ತಸ್ಮೈ ಪ್ರೀತ್ಯಾ ಗಣಪತಿಪದಂ ತೇನ ವಿನುತಃ ॥ ೩೯ ॥

ತತೋ ಯುದ್ಧಸ್ಯಾಂತೇ ಭುವನಪತಯಸ್ಸಾರ್ಥರಮುಖೈ-
ಸ್ತ್ವನ್ಯೈರ್ನಾನಾಭೇದ್ಯೈಃ ಪ್ರಮಥಪತಿಮಭ್ಯರ್ಚ್ಯ ವಿಧಿವತ್ ।
ಹರಿಬ್ರಹ್ಮಾದ್ಯಾಸ್ತೇ ಪರಮನುತಿಭಿಸ್ತುಷ್ಟುವುರಲಂ
ನತಸ್ಕಂಧಾಃ ಪ್ರೀತಾ ಜಯ ಜಯ ಗಿರಂ ಪ್ರೋಚ್ಯ ಸುಖಿತಾಃ ॥ ೪೦ ॥

---

೩೮. ಒಬ್ಬನೇಬಹಳ ಹೊತ್ತು ಯುದ್ಧಮಾಡಿ ಕೊನೆಗೆ ಬಳಲಿ ನಿಂತನು. ಮಹೇಶ್ವರನು ತನ್ನ ತ್ರಿಶೂಲದಿಂದ ಅವನನ್ನು ತಿವಿದು ಆಕಾಶಕ್ಕೆ ಅವನ ಶರೀರವನ್ನು ಎತ್ತಿಹಿಡಿದನು. ಅವನ ದೇಹವು ಆಗ ಮರದ ತುಂಡಿನಂತೆ ಆಯಿತು. ದೇಹದ ಕೆಳಭಾಗವು ಸೂರ್ಯನ ಉಗ್ರಕಿರಣಗಳಿಂದಲೂ ಮೇಲ್ಭಾಗವು ಗಾಳಿ ಮೇಘಗಳಿಂದಲೂ ಒಣಗಿ ಕೊನೆಗೆ ನಾಶವಾಯಿತು.

೩೯. ಸೂರ್ಯನ ಕಿರಣಗಳಿಂದ ಅವನ ದೇಹವು ಒಣಗಿಹೋದರೂ ಶೀತ ವಾತಾದಿಗಳಿಂದ ಅವನ ಶರೀರವು ಮಂಜಿನಗೆಡ್ಡೆಯಂತಾದರೂ ಅವನ ಆ ಪ್ರಾಣವು ಹೋಗಲಿಲ್ಲ. ದಯಾಸಮುದ್ರನಾದ ಮಹೇಶ್ವರನು ಇದನ್ನು ನೋಡಿ ಅವನಿಗೆ ಸಂತೋಷದಿಂದ ಪ್ರಮಥಗಣಗಳ ಒಡೆತನವನ್ನು ದಯಪಾಲಿಸಿದನು.

೪೦. ಯುದ್ಧವು ಈರೀತಿಯಾಗಿ ಮುಗಿಯಿತು ಹರಿಯೇ ಮೊದಲಾದ ಸಮಸ್ತ ದೇವತೆಗಳೂ ಪರಮೇಶ್ವರನನ್ನು ನಾನಾವಿಧವಾಗಿ ಪೂಜಿಸಿದರು. ವಿಧವಿಧವಾಗಿ ಹೊಗಳಿ ವಿನಯಪೂರ್ವಕವಾಗಿ ಸರ್ವರೂ ಸಂತೋಷವಾಗಿದ್ದರು.

ಹರಸ್ತೈಸ್ತೈಸ್ಸಾರ್ಧಂ ಗಿರಿವರಗುಹಾಯಾಂ ಪ್ರಮುದಿತೋ
ವಿಸೃಜ್ಯೈಕಾನಂಶಾನ್ ವಿವಿಧಬಲಿನಾ ಪೂಜ್ಯಸುನಗಾನ್ ।
ಚಕಾರಾಜ್ಞಾಂ ಕ್ರೀಡಾಂ ಗಿರಿವರಸುತಾಂ ಪ್ರಾಪ್ಯ ಮುದಿತಾಂ
ತಥಾ ಪುತ್ರಂ ಘೋರಾದ್ವಿಘಸವದನಾನ್ಮುಕ್ತಮನಘಂ ॥ ೪೧ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಅಂಧಕವಧೋಪಾಖ್ಯಾನೇ ಅಂಧಕ
ಯುದ್ಧವರ್ಣನಂ ನಾಮ ಷಟ್ಚತ್ವಾರಿಂಶೋಽಧ್ಯಾಯಃ

---

೪೧. ಮಹೇಶ್ವರನು ಹೀಗೆ ಶ್ರೇಷ್ಠವಾದ ಗಿರಿಯಲ್ಲಿ ಸರ್ವರೊಡನೆ ಸಂತೋಷದಿಂದಿದ್ದು ವಿಘಸನ ಮುಖದಿಂದ ಬದುಕಿಬಂದ ಮಗನನ್ನೂ ಪತ್ನಿಯಾದ ಪಾರ್ವತಿಯನ್ನೂ ತೃಪ್ತಿಪಡಿಸಿ ಸರ್ವರಿಗೂ ಸಂತೋಷವನ್ನುಂಟುಮಾಡಿ ಅವರೆಲ್ಲರನ್ನೂ ಕಳುಹಿಸಿಕೊಟ್ಟನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಅಂಧಕಾಸುರವಧವೆಂಬ ಯುದ್ಧವರ್ಣನೆಯು ನಲವತ್ತಾರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಸಪ್ತಚತ್ವಾರಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ತಸ್ಮಿನ್ಮಹತಿ ಸಂಗ್ರಾಮೇ ದಾರುಣೇ ಲೋಮಹರ್ಷಣೇ ।
ಶುಕ್ರೋ ದೈತ್ಯಪತಿರ್ವಿದ್ವಾನ್ಭಕ್ಷಿತಸ್ತ್ರಿಪುರಾರಿಣಾ ॥ ೧ ॥

ಇತಿ ಶ್ರುತಂ ಸಮಾಸಾನ್ಮೇ ತತ್ಪುನರ್ಬ್ರೂಹಿ ವಿಸ್ತರಾತ್ ।
ಕಿಂ ಚಕಾರ ಮಹಾಯೋಗೀ ಜಠರಸ್ಥಃ ಪಿನಾಕಿನಃ ॥ ೨ ॥

---

### ನಲವತ್ತೇಳನೆಯ ಅಧ್ಯಾಯವು.

೧-೨. ವ್ಯಾಸನು ಬ್ರಹ್ಮನನ್ನು ಕುರಿತು ;—ಓ ಬ್ರಹ್ಮನೇ, ಆ ಘೋರವಾದ ಸಂಗ್ರಾಮದಲ್ಲಿ ದೈತ್ಯರ ಗುರುವಾದ ಶುಕ್ರನನ್ನು ಈಶ್ವರನು ನುಂಗಿದನು ಎಂದು ನೀನು ಸೂಕ್ಷ್ಮವಾಗಿ ತಿಳಿಸಿದೆಯಷ್ಟೆ. ಈಶ್ವರನ ಜಠರದಲ್ಲಿ ಆ ಶುಕ್ರಾಚಾರ್ಯನು ಏನು ಮಾಡಿದನೆಂಬುದನ್ನು ವಿಸ್ತಾರವಾಗಿ ಹೇಳು.

ನ ದದಾಹ ಕಥಂ ಶಂಭೋಶ್ಶುಕ್ರಂ ತಂ ಜಠರಾನಲಃ ।
ಕಲ್ಪಾಂತದಹನಃ ಕಾಲೋ ದೀಪ್ತತೇಜಾಶ್ಚ ಭಾರ್ಗವಃ ॥ ೩ ॥

ವಿನಿಷ್ಕ್ರಾಂತಃ ಕಥಂ ಧೀಮಾಂಚ್ಛಂಭೋರ್ಜಠರಪಂಜರಾತ್ ।
ಕಥಮಾರಾಧಯಾಮಾಸ ಕಿಯತ್ಕಾಲಂ ಸ ಭಾರ್ಗವಃ ॥ ೪ ॥

ಅಥ ಚ ಲಬ್ಧವಾನ್ವಿದ್ಯಾಂ ತಾಂ ಮೃತ್ಯುಶಮನೀಂ ಪರಾಂ ।
ಕಾ ಸಾ ವಿದ್ಯಾ ಪರಾ ತಾತ ಯಯಾ ಮೃತ್ಯುರ್ಹಿ ವಾರ್ಯತೇ ॥ ೫ ॥

ಲೇಭೇಽಂಧಕೋ ಗಾಣಪತ್ಯಂ ಕಥಂ ಶೂಲಾದ್ವಿನಿರ್ಗತಃ ।
ದೇವದೇವಸ್ಯ ವೈ ಶಂಭೋರ್ಮುನೇರ್ಲೀಲಾವಿಹಾರಿಣಃ ॥ ೬ ॥

ಏತತ್ಸರ್ವಮಶೇಷೇಣ ಮಹಾಧೀಮನ್ಕೃಪಾಂ ಕುರು ।
ಶಿವಲೀಲಾಮೃತಂ ತಾತ ಶೃಣ್ವತಃ ಕಥಯಸ್ವ ಮೇ ॥ ೭ ॥

---

೩. ಶುಕ್ರಾಚಾರ್ಯನು ಪರಮೇಶ್ವರನ ಜಠರಾಗ್ನಿಯಿಂದ ಸುಟ್ಟುಹೋಗಲಿಲ್ಲವೆ? ಅಲ್ಲದೆ ಶುಕ್ರಾಚಾರ್ಯನು ತೇಜಸ್ವಿಯು. ಪ್ರಳಯಕಾಲದ ಅಗ್ನಿಯಂತೆ ಕ್ರೂರಿಯೂ ಹೌದು.

೪. ಬುದ್ಧಿಶಾಲಿಯಾದ ಶುಕ್ರನು ಈಶ್ವರನ ಹೃದಯಪಂಜರದಿಂದ ಹೇಗೆ ತಪ್ಪಿಸಿಕೊಂಡನು? ಹಾಗೆ ಬದುಕಲು ಸ್ವಾಮಿಯನ್ನು ಹೇಗೆ ಎಷ್ಟುಕಾಲ ಪೂಜಿಸಿದನು.

೫. ಅಲ್ಲದೆ ಆ ಶುಕ್ರಾಚಾರ್ಯನು ಮೃತ್ಯುನಿವಾರಕವಾದ ವಿದ್ಯೆಯನ್ನು ಹೇಗೆ ಕಲಿತನು? ಮೃತ್ಯುವನ್ನು ನಿವಾರಿಸುವ ಆ ವಿದ್ಯೆ ಯಾವುದು?

೬. ದೇವದೇವನಾದ ಪರಮೇಶ್ವರನ ತ್ರಿಶೂಲದಿಂದ ಹೊರಹೊರಟ ಅಂಧಕನು ಲೀಲಾವಿಹಾರಿಯಾದ ಮಹೇಶ್ವರನ ಸೈನ್ಯಗಳಿಗೆ ಒಡೆಯನಾದದ್ದು ಹೇಗೆ?

೭. ಮಹಾಬುದ್ಧಿಶಾಲಿಯಾದ ಬ್ರಹ್ಮನೇ, ಇವೆಲ್ಲವನ್ನೂ ನನಗೆ ದಯೆಯಿಂದ ವಿಸ್ತಾರವಾಗಿ ತಿಳಿಸು. ಶಿವಲೀಲೆಯೆಂಬ ಅಮೃತಪಾನಾಸಕ್ತವಾಗಿರುವ ನನಗೆ ಅದೆಲ್ಲವನ್ನೂ ವಿಸ್ತಾರವಾಗಿ ತಿಳಿಸು ಎನ್ನಲು,

॥ ಬ್ರಹ್ಮೋವಾಚ ॥

ಇತಿ ತಸ್ಯ ವಚಃ ಶ್ರುತ್ವಾ ವ್ಯಾಸಸ್ಯಾಮಿತತೇಜಸಃ ।
ಸನತ್ಕುಮಾರಃ ಪ್ರೋವಾಚ ಸ್ಮೃತ್ವಾ ಶಿವಪದಾಂಬುಜಂ ॥ ೮ ॥

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಮಹಾಬುದ್ಧೇ ಶಿವಲೀಲಾಮೃತಂ ಪರಂ ।
ಧನ್ಯಸ್ತ್ವಂ ಶರ್ವಮುಖ್ಯೋಽಸಿ ಮಮಾನಂದಕರಃ ಸ್ವತಃ ॥ ೯ ॥

ಪ್ರವರ್ತಮಾನೇ ಸಮರೇ ಶಂಕರಾಂಧಕಯೋಸ್ತಯೋಃ ।
ಅನಿರ್ಭೇದ್ಯಪವಿಪ್ರೂಹಗಿರಿವ್ಯೂಹಾಧಿನಾಥಯೋಃ ॥ ೧೦ ॥

ಪುರಾ ಜಯೋ ಬಭೂವಾಪಿ ದೈತ್ಯಾನಾಂ ಬಲಶಾಲಿನಾ ।
ಶಿವಪ್ರಭಾವಾದಭವತ್ಪ್ರಮಥಾನಾಂ ಮುನೇ ಜಯಃ ॥ ೧೧ ॥

ತಚ್ಛ್ರುತ್ವಾಸೀದ್ದ್ವಿಷಣ್ಣೋ ಹಿ ಮಹಾದೈತ್ಯೋಽಂಧಕಾಸುರಃ ।
ಕಥಂ ಸ್ಯಾನ್ಮೇ ಜಯ ಇತಿ ವಿಚಾರಣಪರೋಽಭವತ್ ॥ ೧೨ ॥

---

೮. ಬ್ರಹ್ಮನಿಂತೆಂದನು ;—ಪರಮತೇಜಸ್ವಿಯಾದ ವ್ಯಾಸನ ಮಾತನ್ನು ಕೇಳಿ ಸನತ್ಕುಮಾರನು ಪರಶಿವನ ಪಾದಗಳನ್ನು ಧ್ಯಾನಿಸುತ್ತಾ ಅವನು ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ಹೇಳಲು ಆರಂಭಿಸಿದನು.

೯. ಬುದ್ಧಿಶಾಲಿಯಾದ ವ್ಯಾಸನೇ, ಕೇಳು. ಶಿವಲೀಲೆಯನ್ನು ಕೇಳಲು ಹೊರಟಿರುವ ನೀನೇ ಧನ್ಯನು. ಇದರಿಂದ ನನಗೂ ಸಂತೋಷವನ್ನುಂಟು ಮಾಡಿರುವೆ.

೧೦. ಕ್ರೂರವಾದ ಬಾಣಗಳಿಂದ ಕೂಡಿದ ಅಂಧಕನಿಗೂ ಪರ್ವತಸೈನ್ಯಗಳಿಂದ ಸುತ್ತುವರಿಯಲ್ಪಟ್ಟ ಪರಮೇಶ್ವರನಿಗೂ ದೊಡ್ಡಯುದ್ಧವು ನಡೆಯಿತಷ್ಟೆ.

೧೧. ಆ ಯುದ್ಧದಲ್ಲಿ ಬಲಿಷ್ಠರಾದ ರಾಕ್ಷಸರಿಗೇ ಮೊದಲು ಜಯವು ಸಿಕ್ಕಿತು. ಆದರೆ ಪರಮೇಶ್ವರನ ಅನುಗ್ರಹದಿಂದ ಕೊನೆಯಲ್ಲಿ ಪ್ರಮಥಗಣಗಳು ಗೆದ್ದುವು.

೧೨. ತನ್ನ ಸೈನ್ಯವು ಸೋತು ಶತ್ರುಸೈನ್ಯವು ಗೆಲ್ಲುವುದನ್ನು ದೈತ್ಯನಾದ ಅಂಧಕನು ಕೇಳಿ ತಾನು ಯುದ್ಧದಲ್ಲಿ ಹೇಗೆ ಗೆಲ್ಲುವುದು ಎಂದು ಯೋಚಿಸಲಾರಂಭಿಸಿದನು.

ಅಪಸೃತ್ಯ ತತೋ ಯುದ್ಧಾದಂಧಕಃ ಪರಬುದ್ಧಿಮಾನ್ ।
ದ್ರುತಮುಧ್ಯಗಮದ್ವೀರ ಏಕಲಶ್ಶುಕ್ರಸನ್ನಿಧಿಂ ॥ ೧೩ ॥

ಪ್ರಣಮ್ಯ ಸ್ವಗುರುಂ ಕಾಮ್ಯಮುರುಹ್ಯ ರಥಾಚ್ಚ ಸಃ ।
ಬಭಾಷೇದಂ ವಿಚಾರ್ಯಾರ್ಥ ಸಾಂಜಲಿರ್ನೀತಿವಿತ್ತಮಃ ॥ ೧೪ ॥

॥ ಅಂಧಕ ಉವಾಚ ॥

ಭಗವಂಸ್ತ್ವಾಮುಪಾಶ್ರಿತ್ಯ ಗುರೋರ್ಭಾವಂ ವಹಾಮಹೇ ।
ಪರಾಜಿತಾ ಭವಾಮೋ ನೋ ಸರ್ವದಾ ಜಯಶಾಲಿನಃ ॥ ೧೫ ॥

ತ್ವತ್ಪ್ರಭಾವಾತ್ಸದಾ ದೇವಾಸ್ಸಮಸ್ತಾನ್ಸಾನುಗಾನ್ವಯಂ ।
ಮನ್ಯಾಮಹೇ ಹರೋಪೇಂದ್ರಮುಖಾನಪಿ ಹಿ ಕೆತ್ತೃಣಾನ್ ॥ ೧೬ ॥

ಅಸ್ಮತ್ತೋ ಬಿಭ್ಯತಿ ಸುರಾಸ್ಸದಾ ಭವದನುಗ್ರಹಾತ್ ।
ಗಜಾ ಇವ ಹರಿಭ್ಯಶ್ಚ ತಾರ್ಕ್ಷ್ಯೇಭ್ಯ ಇವ ಪನ್ನಗಾಃ ॥ ೧೭ ॥

---

೧೩. ಒಡನೆಯೇ ಅಂಧಕನು ಯುದ್ಧರಂಗದಿಂದ ಹಿಂದಿರುಗಿ ಜಾಗ್ರತೆಯಾಗಿ ಓಡಿಬಂದು ಶುಕ್ರಾಚಾರ್ಯನ ಸಮೀಪಕ್ಕೆ ತಾನೊಬ್ಬನೇ ಹೋದನು.

೧೪. ರಥದಿಂದಿಳಿದು ಮೊದಲು ಗುರುಗಳಿಗೆ ವಂದಿಸಿ ಕೈಜೋಡಿಸಿ ನಿಂತು ಅಂಧಕನು ಗುರುಗಳೊಡನೆ ತನ್ನ ವಿಚಾರವನ್ನು ಹೇಳಿಕೊಂಡನು.

೧೫. ಸ್ವಾಮಿಯೇ, ನಿನ್ನನ್ನು ನಾವು ಗುರುಗಳೆಂದು ಭಾವಿಸಿದ್ದೇವೆ. ಯಾವಾಗಲೂ ಜಯವನ್ನೇ ಸಂಪಾಸಿದ್ದ ನಾವುಗಳು ಇಂದು ಸೋತಿದ್ದೇವೆ.

೧೬. ಗುರುವೇ, ನಿನ್ನ ಅನುಗ್ರಹಬಲದಿಂದ ನಾವು ಸಮಸ್ತ ದೇವತೆಗಳನ್ನೂ ಅವರ ಅನುಯಾಯಿಗಳನ್ನೂ ಹರ, ಉಪೇಂದ್ರ ಮೊದಲಾದ ತ್ರಿಮೂರ್ತಿಗಳನ್ನೂ ಸಹ ಒಂದು ಹುಲ್ಲುಕಡ್ಡಿಗೆ ಸಮರನ್ನಾಗಿ ತಿಳಿದಿದ್ದೇವೆ.

೧೭. ಸಿಂಹಗಳಿಂದ ಆನೆಗಳು ಹೆದರುವಂತೆಯೂ ಹಾವುಗಳು ಗರುಡಪಕ್ಷಿಗಳಿಗೆ ಹೆದರುವಂತೆಯೂ ನಮ್ಮನ್ನು ನೋಡಿ ದೇವತೆಗಳು ಹೆದರುತ್ತಾರೆ.

ಅನಿರ್ಭೇದ್ಯಂ ಪವಿವ್ಯೂಹಂ ವಿವಿಶುರ್ದೈತ್ಯದಾನವಾಃ ।
ಪ್ರಮಥಾನೀಕಮಖಿಲಂ ವಿಧೂಯ ತ್ವದನುಗ್ರಹಾತ್ ॥ ೧೮ ॥

ವಯಂ ತ್ವಚ್ಛರಣಾ ಭೂತ್ವಾ ಸದಾ ಗಾ ಇವ ನಿಶ್ಚಲಾಃ ।
ಸ್ಥಿತಾ ಚರಾಮೋ ನಿಶ್ಶಂಕಮಾಜಾವಪಿ ಹಿ ಭಾರ್ಗವ ॥ ೧೯ ॥

ರಕ್ಷ ರಕ್ಷಾಭಿತೋ ವಿಪ್ರ ಪ್ರವ್ರಜ್ಯ ಶರಣಾಗತಾನ್ ।
ಅಸುರಾಂಶ್ಚ ಶತ್ರುಭಿರ್ವೀರೈರರ್ದಿತಾಂಶ್ಚ ಮೃತಾನಪಿ ॥ ೨೦ ॥

ಪ್ರಮಥೈರ್ಭೀಮವಿಕ್ರಾಂತೈಃ ಕ್ರಾಂತಾನ್ಮೃತ್ಯುಪ್ರಮಾಥಿಭಿಃ ।
ಸೂದಿತಾನ್ಪತಿತಾನ್ಪಶ್ಯ ಹುಂಡಾದೀನ್ಮದ್ಗಣಾನ್ವರಾನ್ ॥ ೨೧ ॥

ಯಃ ಪೀತ್ವಾ ಕಣಧೂಮಂ ವೈ ಸಹಸ್ರಂ ಶರದಾಂ ಪುರಾ ।
ತ್ವಯಾ ಪ್ರಾಪ್ತಾ ವರಾ ವಿದ್ಯಾ ತಸ್ಯಾಃ ಕಾಲೋಽಯಮಾಗತಃ ॥ ೨೨ ॥

---

೧೮. ಪೂಜ್ಯನೇ, ನಿನ್ನ ಅನುಗ್ರಹಬಲದಿಂದ ಯಾರಿಂದಲೂ ಭೇಧಿಸಲು ಅಸಾಧ್ಯವಾದ ಪವಿವ್ಯೂಹ (ವಜ್ರವ್ಯೂಹ) ದಲ್ಲಿ ದೈತ್ಯರೂ ದಾನವರೂ ಸಹ ಸೇರಿ ಸಮಸ್ತ ಪ್ರಮಥಗಣಗಳ ಸೈನ್ಯವನ್ನೆಲ್ಲಾ ನಾಶಮಾಡಿದರು.

೧೯. ಆಚಾರ್ಯನೇ, ನಿನ್ನ ದಯೆಯಿಂದ ನಾವು ಈಗಲೂರಣರಂಗದಲ್ಲಿ ಧೈರ್ಯವಾಗಿ ಗೂಳಿಗಳು ಓಡಾಡುವಂತೆ ಓಡಾಡುತ್ತಿದ್ದೇವೆ.

೨೦. ಓ ಬ್ರಾಹ್ಮಣಶ್ರೇಷ್ಠನೇ, ಆದರೂ ನಮ್ಮ ಶತ್ರುಗಳು ಈಗ ಶೂರರಾಗಿದ್ದಾರೆ. ಅವರಿಂದ ಗಾಯಹೊಂದಿದ ಮತ್ತು ಅವರ ಶಸ್ತ್ರಗಳಿಂದ ಮೃತರಾದ ರಾಕ್ಷಸರನ್ನು ನೀನು ದಯವಿಟ್ಟು ಕಾಪಾಡಬೇಕು.

೨೧. ಯುದ್ಧರಂಗದಲ್ಲಿ ಶೂರರಾದ ಪ್ರಮಥಗಣಗಳು ಅನೇಕ ರಾಕ್ಷಸರನ್ನು ಸೆರೆಹಿಡಿದಿದ್ದಾರೆ. ಕೆಲವರನ್ನು ಕೊಂದಿದ್ದಾರೆ. ಹುಂಡನೇ ಮೊದಲಾದ ನಮ್ಮಂತಹ ವೀರರೆಲ್ಲರೂ ಅಲ್ಲಲ್ಲಿ ಸತ್ತುಬಿದ್ದಿದ್ದಾರೆ. ಅವರೆಲ್ಲರನ್ನೂ ನೀನು ರಕ್ಷಿಸು.

೨೨. ನೀನು ಹಿಂದೆ ಸಾವಿರಾರು ವರ್ಷಗಳು ಹವಿರ್ಧೂಮಗಳನ್ನು ಭಕ್ಷಿಸುತ್ತಾ ಶ್ರೇಷ್ಠವಾದ ವಿದ್ಯೆಯನ್ನು ಸಂಪಾದಿಸಿರುವೆಯಲ್ಲಾ. ಆ ವಿದ್ಯೆಯಿಂದ ಪ್ರಯೋಜನವು ಈಗ ನಮಗೆ ದೊರೆಯಬೇಕಾಗಿದೆ.

ಅದ್ಯ ವಿದ್ಯಾಫಲಂ ತತ್ತೇ ಸರ್ವೇ ಪಶ್ಯಂತು ಭಾರ್ಗವ ।
ಪ್ರಮಥಾ ಅಸುರಾಸ್ಸರ್ವಾಸ್ಕೃಪಯಾ ಜೀವಯಿಷ್ಯತಃ ॥ ೨೩ ॥

॥ ಸನತ್ಕುಮಾರ ಉವಾಚ ॥
ಇತ್ಥಮಂಧಕವಾಕ್ಯಂ ಸ ಶ್ರುತ್ವಾ ಧೀರೋ ಹಿ ಭಾರ್ಗವಃ ।
ತದಾ ವಿಚಾರಯಾಮಾಸ ದೂಯಮಾನೇನ ಚೇತಸಾ ॥ ೨೪ ॥

ಕಿಂ ಕರ್ತವ್ಯಂ ಮಯಾದ್ಯಾಪಿ ಕ್ಷೇಮಂ ಮೇ ಸ್ಯಾತ್ಕಥಂ ತ್ವಿತಿ ।
ಸನ್ನಿಪಾತವಿಧಿರ್ಜೀವಃ ಸರ್ವಥಾನುಚಿತೋ ಮಮ ॥ ೨೫ ॥

ವಿಧೇಯಂ ಶಂಕರಾತ್ಪ್ರಾಪ್ತಾ ತದ್ಗುಣಾನ್ಪ್ರತಿ ಯೋಜಯೇ ।
ತದ್ರಣೇ ಮರ್ದಿತಾನ್ವೀರೈಃ ಪ್ರಮಥೈಶ್ಶಂಕರಾನುಗೈಃ ॥ ೨೬ ॥

ಶರಣಾಗತಧರ್ಮೋಽಥ ಪ್ರವರಸ್ಸರ್ವತೋ ಹೃದಾ ।
ವಿಚಾರ್ಯ ಶುಕ್ರೇಣ ಧಿಯಾ ತದ್ವಾಣೀ ಸ್ವೀಕೃತಾ ತದಾ ॥ ೨೭ ॥

---

೨೩. ಆಚಾರ್ಯನೇ, ನಿನ್ನ ವಿದ್ಯಾಮಹಿಮೆಯಿಂದ ಶತ್ರುಸೈನಿಕರಿಂದ ಹತರಾಗಿರುವ ರಾಕ್ಷಸರೆಲ್ಲರೂ ಪುನಃ ಬದುಕಲಿ. ಇದರಿಂದ ಪ್ರಮಥಗಣಗಳೆಲ್ಲವೂ ನಿನ್ನ ಮಹಿಮೆಯನ್ನು ನೋಡಿ ಆಶ್ಚರ್ಯಪಡಲಿ.

೨೪. ಹೀಗೆ ಹೇಳಿದ ಅಂಧಕನ ಮಾತನ್ನು ಧೀರನಾದ ಶುಕ್ರಾಚಾರ್ಯನು ಕೇಳಿ ಖಿನ್ನಮನಸ್ಕನಾಗಿ ಮುಂದೆ ಏನುಮಾಡಬೇಕೆಂಬುದನ್ನು ಯೋಚಿಸಿದನು.

೨೫. ಈಗ ನಾನು ಏನುಮಾಡಲಿ ? ಯಾವುದರಿಂದ ನನಗೆ ಕ್ಷೇಮವುಂಟಾದೀತು? ನನ್ನ ಮನಸ್ಸಾದರೋ ಈಗ ಅನುಚಿತವಾದ ಕಾರ್ಯವನ್ನು ಸಾಧಿಸಲು ನಿಂತಿದೆ.

೨೬. ನಾನು ವಿದ್ಯೆಯನ್ನು ಸಂಪಾದಿಸಿದ್ದು ಶಂಕರನಿಂದ. ಅದೇ ವಿದ್ಯೆಯನ್ನು ಶಂಕರನ ಗಣಗಳಾದ ಪ್ರಮಥರಿಂದ ನಾಶಮಾಡಲ್ಪಟ್ಟ ರಾಕ್ಷಸರ ಮೇಲೆಯೇ ಪ್ರಯೋಗಿಸಬೇಕಾಗಿದೆ. ಇದು ನ್ಯಾಯವೇ ?

೨೭. ಅಲ್ಲದೆ ಶರಣಾಗತರನ್ನು ಕಾಪಾಡುವುದೂ ಸಹ ಹೆಚ್ಚಿನ ಧರ್ಮವಲ್ಲವೇ? ಎಂದು ನಾನಾಪ್ರಕಾರವಾಗಿ ಯೋಚಿಸಿ ಕೊನೆಗೆ ಅಂಧಕನ ಪ್ರಾರ್ಥನೆಯನ್ನೇ ಮನಸ್ಸಿನಲ್ಲಿ ಒಪ್ಪಿಕೊಂಡನು.

ಕಿಂಚಿತ್ಸ್ಮಿತಂ ತದಾ ಕೃತ್ವಾ ಸೋಽಬ್ರವೀದ್ದಾನವಾಧಿಪಂ ।
ಭಾರ್ಗವಶ್ಶಿವಪಾದಾಬ್ಜಂ ಸ್ಮೃತ್ವಾ ಸ್ವಸ್ಥೇನ ಚೇತಸಾ ॥ ೨೮ ॥

॥ ಶುಕ್ರ ಉವಾಚ ॥

ಯತ್ತ್ವಯಾ ಭಾಷಿತಂ ತಾತ ತತ್ಸರ್ವಂ ತಥ್ಯಮೇವ ಹಿ
ಏತದ್ವಿದ್ಯೋಽಪಾರ್ಜನಂ ಹಿ ದಾನವಾರ್ಥಂ ಕೃತಂ ಮಯಾ ॥ ೨೯ ॥

ದುಸ್ಸಹಂ ಕಣಧೂಮಂ ವೈ ಪೀತ್ವಾ ವರ್ಷಸಹಸ್ರಕಂ ।
ವಿದ್ಯೇಯಮೀಶ್ವರಾತ್ಪ್ರಾಪ್ತಾ ಬಂಧೂನಾಂ ಸುಖದಾ ಸದಾ ॥ ೩೦ ॥

ಪ್ರಮಥೈರ್ಮಥಿತಾನ್ದೈತ್ಯಾನ್ಪ್ರಣೇಽಹಂ ವಿದ್ಯಯಾನಯಾ ।
ಉತ್ಥಾಪಯಿಷ್ಯೇ ಮ್ಲಾನಾನಿ ಶಸ್ಯಾನಿ ಜಲಮುಗ್ಯಥಾ ॥ ೩೧ ॥

ನಿರ್ವ್ರಣಾನ್ನೀರುಜಃ ಸ್ವಸ್ಥಾನ್ಸುಪ್ತ್ವೇವ ಪುನರುತ್ಥಿತಾನ್ ।
ಮುಹೂರ್ತೇಽಸ್ಮಿನ್ಸ ದ್ರಷ್ಟಾಸಿ ದೈತ್ಯಾಂಸ್ತಾನುತ್ಥಿತಾನ್ನಿಜಾನ್ ॥ ೩೨ ॥

---

೨೮. ಶುಕ್ರಾಚಾರ್ಯನು ಪರಮೇಶ್ವರನ ಪಾದಕಮಲವನ್ನು ಶುದ್ಧಮನಸ್ಸಿನಿಂದ ಧ್ಯಾನಿಸಿ ಮಂದಹಾಸದಿಂದ ಅಂಧಕನನ್ನು ಕುರಿತು,

೨೯. ಎಲೈ ಅಂಧಕನೇ, ನೀನು ಹೇಳಿದ್ದೆಲ್ಲವೂ ಸಹಜವೇ. ಈ ವಿದ್ಯೆಯನ್ನು ನಾನು ಕಷ್ಟಪಟ್ಟು ಸಂಪಾದಿಸಿದ್ದು ಕೇವಲ ರಾಕ್ಷಸರ ಉಪಕಾರಕ್ಕಾಗಿಯೇ.

೩೦. ನಾನು ಹಿಂದೆ ಸಾವಿರವರ್ಷಗಳು ಕಣಧೂಮವನ್ನು ಕುಡಿದು ಪರಮೇಶ್ವರನನ್ನು ಮೆಚ್ಚಿಸಿ ಈ ವಿದ್ಯೆಯನ್ನು ಸಂಪಾದಿಸಿದೆನು. ಬಂಧುಗಳಿಗೆ ಸುಖವನ್ನು ಒದಗಿಸುವುದೇ ಈ ವಿದ್ಯೆಗೆ ಮುಖ್ಯ ಉದ್ದೇಶ.

೩೧. ಪ್ರಮಥಸೈನ್ಯವು ರಣರಂಗದಲ್ಲಿ ನಾಶಮಾಡಿದ ರಾಕ್ಷಸರ ಸೈನಿಕರನ್ನೆಲ್ಲಾ, ಮೇಘವು ಮಳೆಗರೆದು ಒಣಗಿದ ಸಸ್ಯಗಳನ್ನು ಚಿಗುರಿಸುವಂತೆ ಜೀವಸಹಿತರನ್ನಾಗಿ ಮಾಡುತ್ತೇನೆ.

೩೨. ಒಂದೇಕ್ಷಣದಲ್ಲಿ ಸತ್ತುಬಿದ್ದಿರುವ ರಾಕ್ಷಸಸೈನಿಕರನ್ನೆಲ್ಲಾ ರೋಗ, ವ್ರಣ, ಇವುಗಳು ಯಾವುವೂ ಇಲ್ಲದಂತೆ ಮಾಡಿ ಮಲಗಿದ್ದವರು ಎದ್ದುಕೂರುವಂತೆ ಅವರನ್ನೆಲ್ಲಾ ಬದುಕಿಸುತ್ತೇನೆ. ನನ್ನ ಸಾಮರ್ಥ್ಯವನ್ನು ನೋಡು ಎಂದನು.

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಸೋಽಂಧಕಂ ಶುಕ್ರೋ ವಿದ್ಯಾಮಾವರ್ತಯತ್ಕವಿಃ ।
ಏಕೈಕಂ ದೈತ್ಯಮುದ್ದಿಶ್ಯ ಸ್ಮೃತ್ವಾ ವಿದ್ಯೇಶಮಾದರಾತ್ ॥ ೩೩ ॥

ವಿದ್ಯಾವರ್ತನಮಾತ್ರೇಣ ತೇ ಸರ್ವೇ ದೈತ್ಯದಾನವಾಃ ।
ಉತ್ತಸ್ಥುರ್ಯುಗಪದ್ವೀರಾಸ್ಸುಪ್ತಾ ಇವ ಧೃತಾಯುಧಾಃ ॥ ೩೪ ॥

ಸದಾಭ್ಯಸ್ತಾ ಯಥಾ ವೇದಾಸ್ಸಮುರೇ ವಾ ಯಥಾಂಬುದಾಃ ।
ಶ್ರದ್ಧಯಾರ್ಥಾಸ್ತಥಾ ದತ್ತಾ ಬ್ರಾಹ್ಮಣೇಭ್ಯೋ ಯಥಾಪದಿ ॥ ೩೫ ॥

ಉಜ್ಜೀವಿತಾಂಸ್ತು ತಾನ್ದೃಷ್ಟ್ವಾ ಹುಂಡಾದೀಂಶ್ಚ ಮಹಾಸುರಾನ್ ।
ವಿನೇದುರಸುರಾಸ್ಸರ್ವೇ ಜಲಪೂರ್ಣಾ ಇವಾಂಬುದಾಃ ॥ ೩೬ ॥

---

೩೩. ಶುಕ್ರನು ಅಂಧಕನಿಗೆ ಹಾಗೆ ಭರವಸೆಕೊಟ್ಟು ತಾನು ಕಲಿತಿದ್ದ ವಿದ್ಯೆಯನ್ನು ಆವರ್ತನರೀತಿಯಿಂದ ಉಚ್ಚರಿಸಿದನು. ಆ ಮಂತ್ರಾಧಿದೇವತೆಯನ್ನು ಧ್ಯಾನಿಸಿ ಒಂದೊಂದುಸಾರಿ ಉಚ್ಚರಿಸಲು ಒಬ್ಬೊಬ್ಬ ರಾಕ್ಷಸನು ಜೀವಂತನಾಗುತ್ತಿದ್ದನು.

೩೪. ಶುಕ್ರಾಚಾರ್ಯನು ಹೀಗೆ ಮಂತ್ರಾವೃತ್ತಿಯಿಂದ ಎಲ್ಲ ದೈತ್ಯರನ್ನೂ ಬದುಕಿಸಿದನು. ಸತ್ತ ರಾಕ್ಷಸರೆಲ್ಲರೂ ಒಟ್ಟಾಗಿ ಪುನಃ ಆಯುಧವನ್ನು ಧರಿಸಿ ಮಲಗಿದ್ದವರು ಎದ್ದಂತೆ ಪುನಃ ಎದ್ದು ಯುದ್ಧಸನ್ನದ್ಧರಾದರು.

೩೫. ಆ ರಣರಂಗದಲ್ಲಿ ರಾಕ್ಷಸರು, ಚೆನ್ನಾಗಿ ಬಾಯಿಪಾಠಮಾಡಿದ ವೇದದಂತೆಯೂ ಮೇಘಮಾಲೆಯಂತೆಯೂ ಆಪತ್ಕಾಲದಲ್ಲಿ ಬ್ರಾಹ್ಮಣರಿಗೆ ಶ್ರದ್ಧೆಯಿಂದ ಕೊಡುವ ದಾನದ್ರವ್ಯದಂತೆಯೂ ತಂಡತಂಡವಾಗಿ ಬರಲು ಪ್ರಾರಂಭವಾದರು.

೩೬. ಹುಂಡಾದಿಯೇ ಮೊದಲಾದ ಸಮಸ್ತ ರಾಕ್ಷಸರೂ ಬದುಕಿಬಂದರು. ಅವರನ್ನೆಲ್ಲಾ ನೋಡಿದ ಇತರ ದೈತ್ಯರು ನೀರಿನಿಂದ ತುಂಬಿದ ಮೇಘಗಳಂತೆ ಸಂತೋಷಭರಿತರಾದರು.

ರಣೋದ್ಯತಾಃ ಪುನಶ್ಚಾಸನ್ಗರ್ಜಂತೋ ವಿಕಟಾನ್ರವಾನ್ ।
ಪ್ರಮಥೈಸ್ಸಹ ನಿರ್ಭೀತಾ ಮಹಾಬಲಪರಾಕ್ರಮಾಃ ॥ ೩೭ ॥

ಶುಕ್ರೇಣೋಜ್ಜೀವಿತಾನ್ದೃಷ್ಟ್ವಾ ಪ್ರಮಥಾ ದೈತ್ಯದಾನವಾನ್ ।
ವಿಸಿಷ್ಮಿರೇ ತತಸ್ಸರ್ವೇ ನಂದ್ಯಾದ್ಯಾ ಯುದ್ಧದುರ್ಮದಾಃ ॥ ೩೮ ॥

ವಿಜ್ಞಾಪ್ಯಮೇವಂ ಕರ್ಮೈತದ್ದೇವೇಶೇ ಶಂಕರೇಽಖಿಲಂ ।
ವಿಚಾರ್ಯ ಬುದ್ಧಿಮಂತಶ್ಚ ಹ್ಯೇವಂ ತೇಽನ್ಯೋನ್ಯಮಬ್ರುವನ್ ॥ ೩೯ ॥

ಆಶ್ಚರ್ಯರೂಪೇ ಪ್ರಮಥೇಶ್ವರಾಣಾಂ
ತಸ್ಮಿಂಸ್ತಥಾ ವರ್ತತಿ ಯುದ್ಧಯಜ್ಞೇ ।
ಅಮರ್ಷಿತೌ ಭಾರ್ಗವಕರ್ಮ ದೃಷ್ಟ್ವಾ
ಶಿಲಾದಪುತ್ರೋಽಭ್ಯಗಮನ್ಮಹೇಶಂ ॥ ೪೦ ॥

---

೩೭. ಮಹಾಪರಾಕ್ರಮಿಗಳಾದ ಆ ರಾಕ್ಷಸರು ಪುನಃ ಯುದ್ಧಸಿದ್ಧರಾದರು. ಭಯಂಕರಗರ್ಜನೆಗಳಿಂದ ಮುಂದುವರಿದು ಪ್ರಮಥಾದಿ ದೇವಗಣಗಳನ್ನೆಲ್ಲಾ ಎದುರಿಸಿ ನಿಂತರು.

೩೮. ನಂದಿಯೇ ಮೊದಲಾದ ದೇವಗಣಗಳೆಲ್ಲವೂ ಶುಕ್ರಾಚಾರ್ಯನ ವಿದ್ಯಾ ಬಲದಿಂದ ಬದುಕಿಬಂದ ರಾಕ್ಷಸರನ್ನು ನೋಡಿ ಅತಿಯಾಗಿ ಆಶ್ಚರ್ಯಪಟ್ಟರು.

೩೯. ಅಲ್ಲದೆ ಬುದ್ಧಿಶಾಲಿಗಳಾದ ಕೆಲವು ದೇವತೆಗಳು ಈ ವಿಚಾರವನ್ನು ಪರಮೇಶ್ವರನಿಗೆ ತಿಳಿಸಬೇಕು ಎಂದು ಪರಸ್ಪರವಾಗಿ ಮಾತನಾಡಿಕೊಂಡರು.

೪೦. ಪ್ರಮಥಾದಿಗಳ ಎದುರಿನಲ್ಲಿ ಆ ಯುದ್ಧವೆಂಬ ಯಜ್ಞವು ಆಶ್ಚರ್ಯರೂಪ ದಿಂದ ನಡೆಯಲು ಆರಂಭಿಸಿತು. ಅವರಲ್ಲಿ ಶುಕ್ರಾಚಾರ್ಯನ ಕರ್ಮವಂತೂ ಸರ್ವರಿಗೂ ಕೋಪವನ್ನುಂಟುಮಾಡಿತು. ಇದನ್ನು ಶಿಲಾದ ಪುತ್ರನಾದ ನಂಧಿಯು ನೋಡಿ ಮಹೇಶ್ವರನ ಸಮೀಪಕ್ಕೆ ಓಡಿಬಂದನು.

ಜಯೇತಿ ಚೋಕ್ತ್ವಾ ಜಯಯೋನಿಮುಗ್ರ-
ಮುವಾಚ ನಂದೀ ಕನಕಾವದಾತಂ ।
ಗಣೇಶ್ವರಾಣಾಂ ರಣಕರ್ಮ ದೇವ
ದೇವೈಶ್ಚ ಸೇಂದ್ರೈರಪಿ ದುಷ್ಕರಂ ಯತ್ ॥ ೪೮ ॥

ತದ್ಭಾರ್ಗವೇಣಾದ್ಯ ಕೃತಂ ವೃಥಾ ನ-
ಸ್ಸಂಜೀವತಾಂಸ್ತಾನ್ವಿ ಮೃತಾನ್ವಿಪಕ್ಷಾನ್ ।
ಆವರ್ತ್ಯ ವಿದ್ಯಾಂ ಮೃತಜೀವದಾತ್ರೀ-
ಮೇಕೈಕಮುದ್ದಿಶ್ಯ ಸಹೇಲಮೀಶ ॥ ೪೯ ॥

ತುಹುಂಡಹುಂಡಾದಿಕಕುಂಭಜಂಭ-
ವಿಪಾಕಪಾಕಾದಿಮಹಾಸುರೇಂದ್ರಾಃ ।
ಯಮಾಲಯಾದದ್ಯ ಪುನರ್ನಿವೃತ್ತಾ
ವಿದ್ರಾವಯಂತಃ ಪ್ರಮಥಾಂಶ್ಚರಂತಿ ॥ ೫೦ ॥

---

೪೮. ನಂದಿಯು ಜಯಶಬ್ದಪೂರ್ವಕವಾಗಿ ಈಶ್ವರನನ್ನು ಹೊಗಳಿ, ಉಗ್ರ ಸ್ವರೂಪಿಯೂ ಸುವರ್ಣಚ್ಛಾಯೆಯುಳ್ಳವನೂ ಆದ ಮಹೇಶ್ವರನೊಡನೆ ಈಗ ನಡೆಯುತ್ತಿರುವ ಯುದ್ಧವು ಇಂದ್ರಾದಿ ದೇವತೆಗಳಿಗೂ ಸಹ ಅಸಾಧ್ಯವಾಗಿದೆ ಎಂದು ತಿಳಿಸಿದನು.

೪೯. ಓ ಮಹೇಶ್ವರನೇ, ಶುಕ್ರಾಚಾರ್ಯನು ರಣದಲ್ಲಿ ಸತ್ತುಬಿದ್ದಿರುವ ದೈತ್ಯ ಸೈನಿಕರನ್ನೆಲ್ಲಾ ತನ್ನ ಮಂತ್ರಾವೃತ್ತಿಯಿಂದ ಬದುಕಿಸಿದ್ದಾನೆ. ಈ ಕೆಲಸವು ಅವನಿಗೆ ಲೀಲಾಜಾಲವಾಗಿದೆ. ಆ ಮಂತ್ರವೂ ಸಹ ಸತ್ತವರನ್ನು ಬದುಕಿಸತಕ್ಕದ್ದಾಗಿದೆ.

೫೦. ತುಹುಂಡ, ಹುಂಡ, ಕುಂಭ, ಜಂಭ, ವಿಪಾಕ, ಪಾಕ, ಮೊದಲಾದ ರಾಕ್ಷಸವೀರರೆಲ್ಲಾ ಮೊದಲು ಮೃತರಾಗಿದ್ದರು. ಈಗ ಆ ವಿದ್ಯಾಬಲದಿಂದ ಬದುಕಿ ಬಂದು ನಮ್ಮ ಪ್ರಮಥಗಣಗಳನ್ನೆಲ್ಲಾ ಹೊಡೆದು ಓಡಿಸುತ್ತಿದ್ದಾರೆ.

ಯದಿ ಹ್ಯಸೌ ದೈತ್ಯವರಾನ್ನಿರಸ್ತಾ-
ನ್ಸಂಜೀವಯೇದತ್ರ ಪುನಃ ಪುನಸ್ತಾನ್ ।
ಜಯಃ ಕುತೋ ನೋ ಭವಿತಾ ಮಹೇಶ
ಗಣೇಶ್ವರಾಣಾಂ ಕುತ ಏವ ಶಾಂತಿಃ ॥ ೪೪ ॥

॥ ಸನತ್ಕುಮಾರ ಉವಾಚ ॥

ಇತ್ಯೇವಮುಕ್ತಃ ಪರಮೇಶ್ವರೇಣ
ಸ ನಂದಿನಾ ವೈ ಪ್ರಮಥೇಶ್ವರೇಶಃ ।
ಉವಾಚ ದೇವಃ ಪ್ರಹಸಂಸ್ತದಾನೀಂ
ತಂ ನಂದಿನಂ ಸರ್ವಗಣೇಶರಾಜಂ ॥ ೪೫ ॥

॥ ಶಿವ ಉವಾಚ ॥

ನಂದಿನ್ಪ್ರಯಾಹಿ ತ್ವರಿತೋಽತಿಮಾತ್ರಂ
ದ್ವಿಜೇಂದ್ರವರ್ಯಂ ದಿತಿನಂದನಾನಾಂ ।
ಮಧ್ಯಾತ್ಸಮುದ್ಧೃತ್ಯ ತಥಾನಯಾಶು
ಶ್ಯೇನೋ ಯಥಾ ಲಾವಕಮಂಡಜಾತಂ ॥ ೪೬ ॥

---

೪೪. ಓ ಸ್ವಾಮಿಯೇ, ಹೀಗೆ ಸತ್ತ ರಾಕ್ಷಸರೆಲ್ಲಾ ಪುನಃಪುನಃ ಬದುಕುವುದಾದರೆ ನಾವು ಗೆಲ್ಲುವುದು ಹೇಗೆ ? ನಮ್ಮ ಸೈನಿಕರು ಶಾಂತಿಯನ್ನು ಹೊಂದುವುದು ತಾನೆ ಎಲ್ಲಿ ? ಎಂದನು.

೪೫. ಸನತ್ಕುಮಾರನಿಂತೆಂದನು :—ಹೀಗೆ ಹೇಳಿದ ಮಾತನ್ನು ಈಶ್ವರನು ಕೇಳಿ ನಸುನಗುತ್ತಾ ಸರ್ವಗಣಗಳಿಗೂ ಒಡೆಯನಾದ ನಂದೀಶ್ವರನನ್ನು ಕುರಿತು,

೪೬. ಎಲೈ ನಂದಿಯೇ, ನೀನು ಈಗಲೇ ಜಾಗ್ರತೆ ಹೊರಟು ಆ ದೈತ್ಯಗುರುವಾದ ಶುಕ್ರಾಚಾರ್ಯನನ್ನು ಹಿಡಿದು, ಗಿಡುಗನು ಹಕ್ಕಿಯ ಮೊಟ್ಟೆಯನ್ನು ಎತ್ತಿಕೊಂಡು ಹೋಗುವಂತೆ ಎಳೆದು ತನ್ನಿ ಎಂದು ಶಿವನು ಅಪ್ಪಣೆಮಾಡಿದನು.

॥ ಸನತ್ಕುಮಾರ ಉವಾಚ ॥

ಸ ಏವಮುಕ್ತೋ ವೃಷಭಧ್ವಜೇನ
ನನಾದ ನಂದೀ ವೃಷಸಿಂಹನಾದಃ ।
ಜಗಾಮ ತೂರ್ಣಂ ಚ ವಿಗಾಹ್ಯ ಸೇನಾಂ
ಯತ್ರಾಭವದ್ಭಾರ್ಗವವಂಶದೀಪಃ ॥ ೪೭ ॥

ತಂ ರಕ್ಷ್ಯಮಾಣಂ ದಿತಿಜೈಸ್ಸಮಸ್ತೈಃ
ಪಾಶಾಸಿವೃಕ್ಷೋಪಲಶೈಲಹಸ್ತೈಃ ।
ವಿಕ್ಷೋಭ್ಯ ದೈತ್ಯಾನ್ಬಲವಾ೯ ಜಹಾರ
ಕಾವ್ಯಂ ಸ ನಂದೀ ಶರಭೋ ಯಥೇಭಂ ॥ ೪೮ ॥

ಪ್ರಸ್ತಾಂಬರಂ ವಿಚ್ಯುತಭೂಷಣಂ ಚ
ವಿಮುಕ್ತಕೇಶಂ ಬಲಿನಾ ಗೃಹೀತಂ ।
ವಿಮೋಚಯಿಷ್ಯಂತ ಇವಾನುಜಗ್ಮುಃ
ಸುರಾರಯಸ್ಸಿಂಹರವಾಂಸ್ತ್ಯಜಂತಃ ॥ ೪೯ ॥

---

೪೭. ಪರಮೇಶ್ವರನು ಹೀಗೆ ಹೇಳಿದಮೇಲೆ ನಂದಿಯು ಸಂತೋಷದಿಂಧ ಸಿಂಹನಾದಮಾಡುತ್ತಾ ಶುಕ್ರಾಚಾರ್ಯನು ಇದ್ದ ಸ್ಥಳಕ್ಕೆ ಸೈನ್ಯಸಮೇತವಾಗಿ ಪ್ರಯಾಣ ಮಾಡಿದನು.

೪೮. ಅಲ್ಲಿ ಶುಕ್ರಾಚಾರ್ಯನನ್ನು ಸಮಸ್ತ ದೈತ್ಯರೂ ಸಹ ಪಾಶ, ಕತ್ತಿ, ಮರ, ಕಲ್ಲು, ಪರ್ವತ ಇವುಗಳನ್ನು ಹಿಡಿದು ಶತ್ರುಗಳ ಬಾಧೆ ಬರದಂತೆ ರಕ್ಷಿಸುತ್ತಿದ್ದರು. ಅಂತಹ ಬಲಿಷ್ಠರಾದ ರಾಕ್ಷಸರನ್ನೂ ಸಹ ನಂದಿಕೇಶ್ವರನು ಲಕ್ಷ್ಯಮಾಡದೆ ಮುಂದೆ ನುಗ್ಗಿ ಶುಕ್ರಾಚಾರ್ಯನ ಸಮೀಪಕ್ಕೆ ಹೋದನು.

೪೯. ಅಲ್ಲಿ ನಂದಿಯು ಶುಕ್ರನನ್ನು ಬಲವಾಗಿ ಕಟ್ಟಿ ಹೊತ್ತು ತಂದನು. ತರುವಾಗ ಶುಕ್ರಾಚಾರ್ಯನ ಬಟ್ಟೆಗಳೆಲ್ಲವೂ ಜಾರಿಹೋಗಿದ್ದುವು. ಒಡವೆಗಳೆಲ್ಲವೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ತಲೆಕೂದಲು ಕೆದರಿಹೋಗಿದ್ದಿತು. ಇದನ್ನು ನೋಡಿ ರಾಕ್ಷಸರೆಲ್ಲರೂ ಶುಕ್ರಾಚಾರ್ಯರನ್ನು ಬಿಡಿಸಲು ಸಿಂಹಗರ್ಜನೆಮಾಡುತ್ತಾ ನಂದಿಯನ್ನು ಹಿಂಬಾಲಿಸಿ ಬಂದರು.

ದಂಭೋಲಿಶೂಲಾಸಿಪರಶ್ವಧಾನಾ-
ಮುದ್ದಂಡಚಕ್ರೋಪಲಕಂಪನಾನಾಂ ।
ನಂದೀಶ್ವರಸ್ಯೋಪರಿ ದಾನವೇಂದ್ರಾ
ವರ್ಷಂ ವವರ್ಷುರ್ಜಲದಾ ಇವೋಗ್ರಂ ॥ ೫೦ ॥

ತಂ ಭಾರ್ಗವಂ ಪ್ರಾಪ್ಯ ಗಣಾಧಿರಾಜೋ
ಮುಖಾಗ್ನಿನಾ ಶಸ್ತ್ರಶತಾನಿ ದಗ್ಧ್ವಾ ।
ಆಯಾತ್ಪ್ರವೃದ್ಧೇಽಸುರದೇವಯುದ್ಧೇ
ಭವಸ್ಯ ಪಾರ್ಶ್ವೇ ವ್ಯಥಿತಾರಿಪಕ್ಷಃ ॥ ೫೧ ॥

ಅಯಂ ಸ ಶುಕ್ರೋ ಭಗವನ್ನಿತೀದಂ
ನಿವೇದಯಾಮಾಸ ಭವಾಯ ಶೀಘ್ರಂ ।
ಜಗ್ರಾಹ ಶುಕ್ರಂ ಸ ಚ ದೇವದೇವೋ
ಯಥೋಪಹಾರಂ ಶುಚಿನಾ ಪ್ರದತ್ತಂ ॥ ೫೨ ॥

---

೫೦. ರಾಕ್ಷಸರು ನಂದಿಕೇಶ್ವರನಮೇಲೆ ವಜ್ರಾಯುಧಗಳನ್ನೂ ಶೂಲ, ಕತ್ತಿ, ಪರಶ್ವಧ, ಚಕ್ರ, ಇವೇ ಮೊದಲಾದ ಆಯುಧವಿಶೇಷಗಳನ್ನೂ ಪ್ರಯೋಗಿಸುತ್ತಾ ಮೇಘವು ಉಗ್ರವಾದ ಮಳೆಯನ್ನು ಸುರಿಸುವಂತೆ ಅಸ್ತ್ರಗಳನ್ನು ಸುರಿದು ಅವನನ್ನೇ ಹಿಂಬಾಲಿಸಿದರು.

೫೧. ನಂದಿಯಾದರೋ ಶುಕ್ರಾಚಾರ್ಯನನ್ನು ಬಲವಾಗಿ ಹಿಡಿದು ರಾಕ್ಷಸರ ಶಸ್ತ್ರಾಸ್ತ್ರಗಳನ್ನೆಲ್ಲಾ ತನ್ನ ಮುಖದ ಅಗ್ನಿಯಿಂದಲೇ ಸುಟ್ಟು ಆ ಘೋರವಾದ ದೇವ ರಾಕ್ಷಸರ ಯುದ್ಧ ಮಧ್ಯದಲ್ಲಿಯೇ ಓಡಿಬಂದು ಮಹೇಶ್ವರನ ಸಮೀಪದಲ್ಲಿ ಬಂದು ನಿಂತನು.

೫೨. ಒಡನೆಯೇ ನಾನು ಶುಕ್ರಾಚಾರ್ಯನನ್ನು ನಿನಗೆ ಅರ್ಪಿಸಿದ್ದೇನೆಂದು ನಂದಿಯು ಪರಮೇಶ್ವರನಲ್ಲಿ ನುಡಿಯಲು ದೇವದೇವನಾದ ಪರಶಿವನು ಭಕ್ತನು ಕೊಡುವ ಉಪಹಾರವನ್ನು ಸ್ವೀಕರಿಸುವಂತೆ ಆ ಶುಕ್ರನನ್ನು ಕೈಯ್ಯಲ್ಲಿ ಹಿಡಿದು ಕೊಂಡನು.

ನ ಕಿಂಚಿದುಕ್ತ್ವಾ ಸ ಹಿ ಭೂತಗೋಽಪ್ತಾ
ಚಿಕ್ಷೇಪ ವಕ್ತ್ರಂ ಫಲವತ್ಕವೀಂದ್ರಂ ।
ಹಾಹಾರವಸ್ತೈರಸುರೈಸ್ಸಮಸ್ತೈ-
ರುಚ್ಚೈರ್ವಿಮುಕ್ತೋ ಹಹಹೇತಿ ಭೂರಿ ॥ ೫೩ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಅಂಧಕಯುದ್ಧೇ ಶುಕ್ರನಿಗೀರ್ಣನ
ವರ್ಣನಂ ನಾಮ ಸಪ್ತಚತ್ವಾರಿಂಶೋಽಧ್ಯಾಯಃ

---

೫೩. ಭೂತಪತಿಯಾದ ಮಹೇಶ್ವರನು ಯಾವ ಮಾತನ್ನೂ ಆಡದೆ ಹಣ್ಣನ್ನು ಬಾಯಲ್ಲಿ ಹಾಕಿಕೊಳ್ಳುವಂತೆ ಶುಕ್ರಾಚಾರ್ಯನನ್ನು ಬಾಯಲ್ಲಿ ಹಾಕಿಕೊಂಡು ನುಂಗಿದನು. ಇದನ್ನು ನೋಡಿದ ಸಮಸ್ತ ರಾಕ್ಷಸರೂ ಹಾ ಹಾ ಎಂದು ಗಟ್ಟಿಯಾಗಿ ಅರಚಿಕೊಂಡರು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯಲ್ಲಿ ಅಂಧಕಾಸುರ
ಯುದ್ಧದಲ್ಲಿ ಶುಕ್ರನನ್ನು ನುಂಗಿದ ವರ್ಣನವೆಂಬ ನಲವತ್ತೇಳನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಅಷ್ಟಚತ್ವಾರಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಶುಕ್ರೇ ನಿಗೀರ್ಣೇ ರುದ್ರೇಣ ಕಿಮಕುರ್ವಂಶ್ಚ ದಾನವಾಃ ।
ಅಂಧಕೇಶಾ ಮಹಾವೀರಾ ವದ ತತ್ತ್ವಂ ಮಹಾಮುನೇ ॥ ೧ ॥

॥ ಸನತ್ಕುಮಾರ ಉವಾಚ ॥

ಕಾವ್ಯೇ ನಿಗೀರ್ಣೇ ಗಿರಿಜೇಶ್ವರೇಣ
ದೈತ್ಯಾ ಜಯಾಶಾರಹಿತಾ ಬಭೂವುಃ ।

---

## ನಲವತ್ತೆಂಟನೆಯ ಅಧ್ಯಾಯವು.

೧. ಪುನಃ ವ್ಯಾಸನು ಮಹಾಮುನಿಯಾದ ಸನತ್ಕುಮಾರನನ್ನು ಕುರಿತು ಮಹರ್ಷಿಯೇ, ಮಹೇಶ್ವರನು ಶುಕ್ರನನ್ನು ನುಂಗಿದಮೇಲೆ ಸಮಸ್ತ ರಾಕ್ಷಸರೂ ಏನು ಮಾಡಿದರು? ಅಂಧಕನ ಪ್ರಯತ್ನವೇನಾಯಿತು? ಅದನ್ನು ವಿಸ್ತರಿಸಿ ಹೇಳು ಎಂದು ಕೇಳಲು,

೨. ಸನತ್ಕುಮಾರಋಷಿಯು ಹೇಳಿದನು:—ಅಯ್ಯಾ ವ್ಯಾಸನೇ, ಪರಮೇಶ್ವರನು ಶುಕ್ರನನ್ನು ನುಂಗಿದಮೇಲೆ, ರಾಕ್ಷಸರು ತಾವು ಗೆಲ್ಲುವ ಆಸೆಯನ್ನೇ

ಹಸ್ತೈರ್ವಿಮುಕ್ತಾ ಇವ ವಾರಣೇಂದ್ರಾಃ
ಶೃಂಗೈರ್ವಿಹೀನಾ ಇವ ಗೋವೃಷಾಶ್ಚ ॥ ೨ ॥

ಶಿರೋವಿಹೀನಾ ಇವ ದೇಹಸಂಘಾ
ದ್ವಿಜಾ ಯಥಾ ಚಾಧ್ಯಯನೇನ ಹೀನಾಃ ।
ನಿರುದ್ಯಮಾಸ್ಸತ್ತ್ವಗಣಾ ಯಥಾ ವೈ
ಯಥೋದ್ಯಮಾ ಭಾಗ್ಯವಿವರ್ಜಿತಾಶ್ಚ ॥ ೩ ॥

ಪತ್ಯಾ ವಿಹೀನಾಶ್ಚ ಯಥೈವ ಯೋಷಾ
ಯಥಾ ವಿಪಕ್ವಾಃ ಖಲು ಮಾರ್ಗಣೌಘಾಃ ।
ಆಯೂಂಷಿ ಹೀನಾನಿ ಯಥೈವ ಪುಣ್ಯೈ
ರ್ವ್ರತೈರ್ವಿಹೀನಾನಿ ಯಥಾ ಶ್ರುತಾನಿ ॥ ೪ ॥

ವಿನಾ ಯಥಾ ವೈಭವಶಕ್ತಿಮೇಕಾಂ
ಭವಂತಿ ಹೀನಾಸ್ಸ್ವಫಲೈಃ ಕ್ರಿಯೌಘಾಃ ।

---

ಬಿಟ್ಟುಬಿಟ್ಟರು. ಸೊಂಡಲಿಲ್ಲದ ಮದ್ದಾನೆಯಂತೆಯೂ, ಕೊಂಬುಗಳಿಲ್ಲದ ಎತ್ತುಗಳಂತೆಯೂ ಅಸಹಾಯಕರಾದರು.

೩. ಆಗ ರಾಕ್ಷಸರು, ತಲೆಗಳಿಲ್ಲದ ದೇಹರಾಶಿಯಂತೆಯೂ, ಅಧ್ಯಯನಗಳನ್ನು ಬಿಟ್ಟು ಕೆಟ್ಟ ಬ್ರಾಹ್ಮಣರಂತೆಯೂ, ಉದ್ಯೋಗವಿಲ್ಲದ ಮನುಷ್ಯರಂತೆಯೂ ಐಶ್ವರ್ಯವಿಲ್ಲದ ಉದ್ಯೋಗಗಳಂತೆಯೂ, ಅಪ್ರಯೋಜಕರಾಗಿ ನಿಂತುಬಿಟ್ಟರು.

೪. ಗಂಡನಿಲ್ಲದ ಹೆಂಡತಿ, ಶತ್ರುಗಳ ಬಾಣಾಘಾತಕ್ಕೆ ಸಿಕ್ಕಿದ ಯೋಧರು, ಆಯುಸ್ಸಿಲ್ಲದ ಪುಣ್ಯಶಾಲಿಗಳು, ವ್ರತನಿಯಮಗಳನ್ನು ಬಿಟ್ಟ ವೇದಸಂಪತ್ತು, ಹೇಗೆ ವ್ಯರ್ಥಗಳಾಗುವುವೋ ಹಾಗೆ ಅಂದು ರಾಕ್ಷಸರು ಮಂಕರಾದರು.

೫. ಸಮಸ್ತ ಕಾರ್ಯಗಳಿಗೂ ಒಂದು ವಿಧವಾದ ಐಶ್ವರ್ಯದ ಸಹಾಯವು ಬೇಕಷ್ಟೆ? ಕ್ಷತ್ರಿಯನಿಗೆ ಶೌರ್ಯವು ಇರಬೇಕು. ಧರ್ಮವು ಸತ್ಯದಿಂದಲೇ ಕೂಡಿರ

ಯಥಾ ವಿಶೂರಾಃ ಖಲು ಕ್ಷತ್ರಿಯಾಶ್ಚ
ಸತ್ಯಂ ವಿನಾ ಧರ್ಮಗಣೋ ಯಥೈವ ॥ ೫ ॥

ನಂದಿನಾ ಚ ಹೃತೇ ಶುಕ್ರೇ ಗಿಲಿತೇ ಚ ವಿಷಾದಿನಾ ।
ವಿಷಾದಮುಗಮನ್ದೈತ್ಯಾ ಯತಮಾನರಣೋತ್ಸವಾಃ ॥ ೬ ॥

ತಾನ್ವೀಕ್ಷ್ಯ ವಿಗತೋತ್ಸಾಹಾನಂಧಕಃ ಪ್ರತ್ಯಭಾಷತ ।
ದೈತ್ಯಾಂಸ್ತುಹುಂಡಹುಂಡಾದೀನ್ಮಹಾಧೀರಪರಾಕ್ರಮಃ ॥ ೭ ॥

॥ ಅಂಧಕ ಉವಾಚ ॥

ಕವಿಂ ವಿಕ್ರಮ್ಯ ನಯತಾ ನಂದಿನಾ ವಂಚಿತಾ ವಯಂ ।
ತನುರ್ವಿನಾ ಕೃತಾಃ ಪ್ರಾಣಾಸ್ಸರ್ವೇಷಾಮದ್ಯ ನೋ ನನು ॥ ೮ ॥

ಧೈರ್ಯಂ ವೀರ್ಯಂ ಗತಿಃ ಕೀರ್ತಿಸ್ಸತ್ವಂ ತೇಜಃ ಪರಾಕ್ರಮಃ ।
ಯುಗಪನ್ನೋ ಹೃತಂ ಸರ್ವಮೇಕಸ್ಮಿನ್ಭಾರ್ಗವೇ ಹೃತೇ ॥ ೯ ॥

---

ಬೇಕು. ಇವುಗಳಿಲ್ಲದಿದ್ದರೆ ಕಾರ್ಯಗಳೂ, ಕ್ಷತ್ರಿಯನೂ, ಧರ್ಮವೂ ಹೇಗೆ ಹದಗೆಡುವುವೋ ಹಾಗೆ ರಾಕ್ಷಸರು ಆಗ ದಿಕ್ಕುಕೆಟ್ಟು ನಿಂತರು.

೬. ನಂದಿಯು ಶುಕ್ರನನ್ನು ಒಯ್ದನು. ಶಿವನು ಅವನನ್ನು ನುಂಗಿದನು ಇದರಿಂದ ರಾಕ್ಷಸರು ಯುದ್ಧಕಾರ್ಯದಲ್ಲಿ ತೊಡಗದೆ ದುಃಖಿತರಾಗಿ ನಿಂತುಬಿಟ್ಟರು.

೭. ಮಹಾಬಲಶಾಲಿಯಾದ ಅಂಧಕನು ಉತ್ಸಾಹವಿಲ್ಲದೆ ನಿಂತಿದ್ದ ಹುಂಡಾದಿಗಳೇ ಮೊದಲಾದ ರಾಕ್ಷಸರನ್ನು ಕುರಿತು,

೮. ನಂದಿಯು ನಮಗೆ ಗೊತ್ತಾಗದಂತೆ ಶುಕ್ರನನ್ನು ಅಪಹರಿಸಿದನು. ಆದರಿಂದ ಈಗ ನಾವು ದೇಹವನ್ನು ಕಳೆದುಕೊಂಡ ಪ್ರಾಣಗಳಂತೆ ಅಲೆದಾಡುತ್ತಿದ್ದೇವೆ.

೯. ಒಬ್ಬ ಶುಕ್ರಾಚಾರ್ಯನನ್ನು ಕಳೆದುಕೊಂಡ ನಮ್ಮ ಧೈರ್ಯ, ಶಕ್ತಿ, ಸ್ಥಿತಿ, ಕೀರ್ತಿ, ತೇಜಸ್ಸು, ಶೌರ್ಯ ಇವೆಲ್ಲವೂ ಒಂದೇ ಸಲ ನಾಶವಾದಂತೆ ನಮಗೆ ತೋರುತ್ತಿದೆ.

ಧಿಗಸ್ಮಾನ್ಕುಲಪೂಜ್ಯೋ ಯೈರೇಕೋಽಪಿ ಕುಲಸತ್ತಮಃ ।
ಗುರುಸ್ಸರ್ವಸಮರ್ಥಶ್ಚ ತ್ರಾತಾ ತ್ರಾತೋ ನ ಚಾಪದಿ ॥ ೧೦ ॥

ತದ್ಯೋಯಮವಿಲಂಬ್ಯೈಹ ಯುಧ್ಯಧ್ವಮರಿಭಿಸ್ಸಹ ।
ವೀರೈಸ್ತ್ರೈಃ ಪ್ರಮಥೈರ್ವೀರಾಃ ಸ್ಮೃತ್ವಾ ಗುರುಪದಾಂಬುಜಂ ॥ ೧೧ ॥

ಗುರೋಃ ಕಾವ್ಯಸ್ಯ ಸುಖದೌ ಸ್ಮೃತ್ವಾ ಚರಣಪಂಕಜೌ ।
ಸೂದಯಿಷ್ಯಾಮಹಂ ಸರ್ವಾನ್ಪ್ರಮಥಾರ್ನ್ ಸಹ ನಂದಿನಾ ॥ ೧೨ ॥

ಅದ್ಯೈತಾನ್ವಿವರ್ಶಾ ಹತ್ವಾ ಸಹದೇವೈಸ್ಸವಾಸವೈಃ ।
ಭಾರ್ಗವಂ ಮೋಚಯಿಷ್ಯಾಮಿ ಜೀವಂ ಯೋಗೀವ ಕರ್ಮತಃ ॥ ೧೩ ॥

ಸ ಚಾಪಿ ಯೋಗೀ ಯೋಗೇನ ಯದಿ ನಾಮ ಸ್ವಯಂ ಪ್ರಭುಃ ।
ಶರೀರಾತ್ತಸ್ಯ ನಿರ್ಗಚ್ಛೇದಸ್ಮಾಕಂ ಶೇಷಪಾಲಿತಾಃ ॥ ೧೪ ॥

---

೧೦. ನಮ್ಮ ಆಚಾರ್ಯನು ನಮಗೆ ಕುಲಗುರುವು. ಸರ್ವ ಕಾರ್ಯದಲ್ಲಿಯೂ ಸಮರ್ಥನು. ನಮ್ಮೆಲ್ಲರನ್ನೂ ಕಷ್ಟದಲ್ಲಿ ಕಾಪಾಡುತ್ತಿದ್ದನು. ಅಂತಹ ಒಬ್ಬ ಗುರುವನ್ನು ನಾವೆಲ್ಲರೂ ಸೇರಿ ಅವನ ಕಷ್ಟಕಾಲದಲ್ಲಿ ಸಹಾಯಮಾಡಲಾರದೇ ಹೋದೆವಲ್ಲಾ.

೧೧. ಆದ್ದರಿಂದ ಈಗ ನೀವೆಲ್ಲರೂ ಒಟ್ಟುಗೂಡಿ, ಆಚಾರ್ಯನ ಪಾದಕಮಲವನ್ನು ಧ್ಯಾನಿಸುತ್ತಾ ಆ ಶೂರಪ್ರಮಥಗಣಗಳೊಡನೆ ಹೋರಾಡಿರಿ.

೧೨. ನಾನೂ ಸಹ ಪರಮಪೂಜ್ಯವಾದ ಗುರುಪಾದಗಳನ್ನು ಧ್ಯಾನಿಸುತ್ತಾ ಆ ಆಚಾರ್ಯನಿಗೆ ದ್ರೋಹಮಾಡಿದ ಪ್ರಮಥಗಣಗಳನ್ನೂ, ಆ ನಂದಿಯನ್ನೂ ಧ್ವಂಸ ಮಾಡುತ್ತೇನೆ.

೧೩. ಈಗಲೇ ನಾನು ಅವರನ್ನೆಲ್ಲಾ ಮೂರ್ಛೆಗೊಳಿಸಿ, ಇಂದ್ರನೇ ಮೊದಲಾದ ದೇವತೆಗಳನ್ನು ಸೋಲಿಸಿ, ಯೋಗಿಯು ಕರ್ಮಪಾಶಗಳಿಂದ ಜೀವನನ್ನು ಬಿಡಿಸುವಂತೆ ನಮ್ಮ ಗುರುವನ್ನು ಬಿಡಿಸಿಕೊಂಡು ಬರುತ್ತೇನೆ.

೧೪ ಆ ಆಚಾರ್ಯನೂ ಸಹ ಪರಮಯೋಗಿಯು. ನಮ್ಮಿಂದ ಸ್ವಲ್ಪ ಸಹಾಯವು ದೊರೆತರೂ ಸಹ ತನ್ನ ಯೋಗಬಲದಿಂದ ಆ ಪರಮೇಶ್ವರನ ದೇಹವನ್ನು ಭೇದಿಸಿಕೊಂಡು ಹೊರಗೆ ಬಂದಾನು.

॥ ಸನತ್ಕುಮಾರ ಉವಾಚ ॥

ಇತ್ಯಂಧಕವಚಃ ಶ್ರುತ್ವಾ ದಾನವಾ ಮೇಘನಿಸ್ಸ್ವನಾಃ ।
ಪ್ರಮಥಾ ನಿರ್ದಯಾಃ ಪ್ರಾಹುರ್ಮಂತವ್ಯೇ ಕೃತನಿಶ್ಚಯಾಃ ॥ ೧೫ ॥

ಸತ್ಯಾಯುಷಿ ನ ನೋ ಜಾತು ಶಕ್ತಾಸ್ಸ್ಯುಃ ಪ್ರಮಥಾ ಬಲಾತ್ ।
ಅಸತ್ಯಾಯುಷಿ ಕಿಂ ಗತ್ವಾ ತ್ಯಕ್ತ್ವಾ ಸ್ವಾಮಿನಮಾಹವೇ ॥ ೧೬ ॥

ಯೇ ಸ್ವಾಮಿನಂ ವಿಹಾಯಾತೋ ಬಹುಮಾನಧನಾ ಜನಾಃ ।
ಯಾಂತಿ ತೇ ಯಾಂತಿ ನಿಯತಮಂಧತಾಮಿಸ್ರಮಾಲಯಂ ॥ ೧೭ ॥

ಅಯಶಸ್ತಮಸಾ ಖ್ಯಾತಿಂ ಮಲಿನೀಕೃತ್ಯ ಭೂರಿಶಃ ।
ಇಹಾಮುತ್ರಾಪಿ ಸುಖಿನೋ ನ ಸ್ಯುರ್ಭಗ್ನಾ ರಣಾಜಿರೇ ॥ ೧೮ ॥

---

೧೫. ಎಂದು ಹೇಳಲು, ಅಂಧಕನ ಮಾತುಗಳನ್ನು ಕೇಳಿದ ರಾಕ್ಷಸರು ಮೇಘಗಳಂತೆ ಗರ್ಜಿಸುತ್ತಾ, ಪ್ರಮಥರನ್ನು ನಿರ್ದಯವಾಗಿ ನಾಶಮಾಡಲು ದೃಢಮನಸ್ಸುಳ್ಳವರಾಗಿ ಹೊರಟರು.

೧೬. ನಮ್ಮ ಆಯುಸ್ಸು ಸ್ಥಿರವಾಗಿದ್ದರೆ ನಮ್ಮನ್ನು ಪ್ರಮಥಗಣಗಳು ಕೊಲ್ಲಲಾರರು. ನಮ್ಮ ಆಯುಸ್ಸು ಅಲ್ಪವಾಗಿದ್ದರೆ, ನಾವು ಸ್ವಾಮಿಕಾರ್ಯಕ್ಕಾಗಿ ನಾಶವಾಗುತ್ತೇವೆಯೇ ಹೊರತು ಹಿಂಜರಿದು ಪ್ರಯೋಜನವಿಲ್ಲವೆಂದು ಸೈನಿಕರೆಲ್ಲರೂ ತೀರ್ಮಾನ ಮಾಡಿದರು.

೧೭. ಯಾರು ಆಪತ್ಕಾಲದಲ್ಲಿ ತಮ್ಮ ಯಜಮಾನನ್ನು ಬಿಟ್ಟು, ಕೇವಲ ತಮ್ಮ ಮರ್ಯಾದೆ ಮತ್ತು ತಮ್ಮ ದ್ರವ್ಯಗಳನ್ನು ಮಾತ್ರ ರಕ್ಷಿಸಿಕೊಳ್ಳುವರೋ ಅವರು ನಿಜವಾಗಿಯೂ ಅಂಧಕಾರಮಯವಾದ ನರಕದಲ್ಲಿ ಬೀಳುವರು.

೧೮. ಯಾರು ಯುದ್ಧರಂಗದಲ್ಲಿ ಹಿಂಜರಿದು ಓಡಿಹೋಗುವರೋ, ಅವರು ತಮ್ಮ ಕೀರ್ತಿಯನ್ನು ಕಳೆದುಕೊಳ್ಳುವರು. ಅಷ್ಟಲ್ಲದೆ ಈ ಲೋಕ ಮತ್ತು ಪರಲೋಕಗಳ ಉಭಯಸೌಖ್ಯವನ್ನು ಹೊಂದಲಾರರು.

ಕಿಂ ದಾನೈಃ ಕಿಂ ತಪೋಭಿಶ್ಚ ಕಿಂ ತೀರ್ಥಪರಿಮಜ್ಜನೈಃ ।
ಧಾರಾತೀರ್ಥೇ ಯದಿ ಸ್ನಾನಂ ಪುನರ್ಭವಮಲಾಪಹೇ ॥ ೧೯ ॥

ಸಂಪ್ರಧಾರ್ಯೇತಿ ತದ್ವಾಕ್ಯಂ ದೈತ್ಯಾಸ್ತೇ ದನುಜಾಸ್ತಥಾ ।
ಮಮಂಥುಃ ಪ್ರಮಥಾನಾಜೌ ರಣಭೇರೀಂ ನಿನಾದ್ಯ ಚ ॥ ೨೦ ॥

ತತ್ರ ಬಾಣಾಸಿವಜ್ರೌಘೈಃ ಕಠಿನೈಶ್ಚ ಶಿಲಾಮಯೈಃ ।
ಭುಶುಂಡಿಭಿಂದಿಪಾಲೈಶ್ಚ ಶಕ್ತಿಭಲ್ಲಪರಶ್ವಧೈಃ ॥ ೨೧ ॥

ಖಟ್ವಾಂಗೈಃ ಪಟ್ಟಿಶೈಶ್ಶೂಲೈರ್ಲಕುಟೈರ್ಮುಶಲೈರಲಂ ।
ಪರಸ್ಪರಮಭಿಘ್ನಂತಃ ಪ್ರಚಕ್ರುಃ ಕದನಂ ಮಹತ್ ॥ ೨೨ ॥

ಕಾರ್ಮುಕಾಣಾಂ ವಿಕೃಷ್ಟಾನಾಂ ಪತತಾಂ ಚ ಪತತ್ರಿಣಾಂ ।
ಭಿಂದಿಪಾಲಭುಶುಂಡೀನಾಂ ಕ್ಷ್ವೇಡಿತಾನಾಂ ರವೋಽಭವತ್ ॥ ೨೩ ॥

---

೧೯. ವೀರನಿಗೆ ದಾನವೂ, ತಪಸ್ಸೂ, ತೀರ್ಥಯಾತ್ರೆಗಳೂ ಉಪಯೋಗವಿಲ್ಲ. ಯುದ್ಧಭೂಮಿಯೆಂಬ ತೀರ್ಥದಲ್ಲಿ ಸ್ನಾನಮಾಡುವುದೇ ಜನ್ಮಾಂತರ ನಿವಾರಕ ವಾದ ಸಾಧನವು.

೨೦. ಹೀಗೆ ಹೇಳಿದ ಮಾತುಗಳನ್ನು ಕೇಳಿ ದಾನವರೆಲ್ಲರೂ, ಅದರಲ್ಲಿ ನಂಬಿಕೆ ಯನ್ನಿಟ್ಟು, ರಣಭೇರಿಯನ್ನು ಬಾರಿಸುತ್ತಾ, ಯುದ್ಧರಂಗದಲ್ಲಿ ಪ್ರಮಥರನ್ನು ನಾಶ ಮಾಡಲು ಪ್ರಯತ್ನಿಸಿದರು.

೨೧-೨೨. ಅಲ್ಲಿ ದೇವದಾನವರು ಬಾಣಗಳಿಂದಲೂ ಕತ್ತಿ, ವಜ್ರಾಯುಧ, ಕಠಿನವಾದ ಕಲ್ಲುಗಳು, ಭುಶುಂಡಿ, ಭಿಂದಿಪಾಲ, ಶಕ್ತಿ, ಭಲ್ಲೆ, ಪರಶ್ವಧ, ಖಟ್ವಾಂಗ, ಪಟ್ಟಿಶ, ಶೂಲ, ಲಕುಟ, ಒನಕೆ, ಇವೇ ಮೊದಲಾದ ಆಯುಧಗಳಿಂದಲೂ ಪರಸ್ಪರ ವಾಗಿ ಯುದ್ಧಮಾಡಲಾರಂಭಿಸಿದರು.

೨೩. ಧನುಸ್ಸುಗಳಿಗೆ ಬಾಣಗಳನ್ನು ಹೂಡುವುದು, ಬಿಡುವುದು, ಈ ಶಬ್ದ ಗಳೂ, ಏಟಿಗೆಸಿಕ್ಕಿ ಬೀಳುವವರ ಗೋಳಾಟವೂ, ಭಿಂದಿಪಾಲ, ಭುಶುಂಡಿ, ಮೊದಲಾದ ಆಯುಧಗಳ ತಾಡನಧ್ವನಿಯೂ ರಣರಂಗದಲ್ಲೆಲ್ಲಾ ವ್ಯಾಪಿಸಿತು.

ರಣತೂರ್ಯನಿನಾದೈಶ್ಚ ಗಜಾನಾಂ ಬಹುಬೃಂಹಿತೈಃ ।
ಹ್ರೇಷಾರವೈರ್ಹಯಾನಾಂ ಚ ಮಹಾನ್ಕೋಲಾಹಲೋಽಭವತ್ ॥ ೨೪ ॥

ಅತಿಸ್ವನೈರವಾಪೂರಿ ದ್ಯಾವಾಭೂಮ್ಯೋರ್ಯದಂತರಂ ।
ಅಭೀರೂಣಾಂ ಚ ಭೀರೂಣಾಂ ಮಹಾರೋಮೋದ್ಗಮೋಽಭವತ್ ॥

ಗಜವಾಜಿಮಹಾರಾವಸ್ಫುಟಿಶಬ್ದಗ್ರಹಾಣಿ ಚ ।
ಭಗ್ನಧ್ವಜಪತಾಕಾನಿ ಕ್ಷೀಣಪ್ರಹರಣಾನಿ ಚ ॥ ೨೬ ॥

ರುಧಿರೋದ್ಗಾರಚಿತ್ರಾಣಿ ವ್ಯಶ್ವಹಸ್ತಿರಥಾನಿ ಚ ।
ಪಿಪಾಸಿತಾನಿ ಸೈನ್ಯಾನಿ ಮುಮೂರ್ಚ್ಛುರುಭಯತ್ರ ವೈ ॥ ೨೭ ॥

ಅಥ ತೇ ಪ್ರಮಥಾ ವೀರಾ ನಂದಿಪ್ರಭೃತಯಸ್ತದಾ ।
ಬಲೇನ ಜಘ್ನುರಸುರಾನ್ಸರ್ವಾನ್ಪ್ರಾಪುರ್ಜಯಂ ಮುನೇ ॥ ೨೮ ॥

---

೨೪. ತುತ್ತೂರಿಯ ಧ್ವನಿಯೂ, ಆನೆಗಳ ಘೀಂಕಾರವೂ, ಕುದುರೆಗಳ ಕೆನೆತವೂ ಒಟ್ಟಾಗಿ ಸೇರಿ ರಣರಂಗದಲ್ಲೆಲ್ಲಾ ದೊಡ್ಡಕೋಲಾಹಲವೆದ್ದಿತು.

೨೫. ಆ ಕೋಲಾಹಲಧ್ವನಿಯು ಭೂಮ್ಯಾಕಾಶದಲ್ಲೆಲ್ಲಾ ವ್ಯಾಪಿಸಿತು. ಅದನ್ನು ಕೇಳಿದ ಧೈರ್ಯಶಾಲಿಗಳಿಗೂ ಭೀರುಸ್ವಭಾವದವರಿಗೂ ಒಂದೇರೀತಿಯಲ್ಲಿ ರೋಮಾಂಚನವುಂಟಾಯಿತು.

೨೬-೨೭. ಎರಡು ಕಡೆಗಳಲ್ಲಿಯೂ ಆನೆಕುದುರೆಗಳ ಗರ್ಜನೆಯೂ, ಮುರಿದು ಬಿದ್ದ ಧ್ವಜಗಳೂ, ಸಿಡಿದುಹಾರಿದ ಆಯುಧಗಳೂ ಎಲ್ಲೆಲ್ಲೂ ಕಾಣುತ್ತಿದ್ದುವು. ಅಲ್ಲದೆ ಸೈನಿಕರೂ ಸಹ, ರಕ್ತವನ್ನು ಕಾರುತ್ತಾ ಶತ್ರುಗಳ ಏಟನಿಂದ ಆನೆ, ಕುದುರೆ, ತೇರು ಇವೆಲ್ಲವನ್ನೂ ಕಳೆದುಕೊಂಡು, ಬಾಯಾರಿಕೆಯಿಂದ ಕೂಡಿ ಮೂರ್ಛೆ ಬೀಳುತ್ತಿದ್ದರು.

೨೮. ಇಷ್ಟಾದಮೇಲೆ ನಂದಿಯೇ ಮೊದಲಾದ ಪ್ರಮಥವೀರರು ಬಲಿಷ್ಠರಾಗಿ ಸಮಸ್ತ ರಾಕ್ಷಸರನ್ನೂ ಕೊಂದು ಕಡೆಗೆ ತಾವೇ ಜಯಶೀಲರಾದರು.

ದೃಷ್ಟ್ವಾ ಸೈನ್ಯಂ ಚ ಪ್ರಮಥೈರ್ಭಜ್ಯಮಾನಮಿತಸ್ತತಃ ।
ದುದ್ರಾವ ರಥಮಾಸ್ಥಾಯ ಸ್ವಯಮೇವಾಂಧಕೋ ಗಣಾನ್ ॥ ೨೯ ॥

ಶರಾವಾರಪ್ರಯುಕ್ತೈಸ್ತ್ರೈರ್ವಜ್ರಪಾತೈರ್ನಗಾ ಇವ ।
ಪ್ರಮಥಾ ನೇಶಿರೇ ಚಾಸ್ತ್ರೈರ್ನಿಸ್ತೋಯಾ ಇವ ತೋಯದಾಃ ॥ ೩೦ ॥

ಯಾಂತಮಾಯಾಂತಮಾಲೋಕ್ಯ ದೂರಸ್ಥಂ ನಿಕಟಸ್ಥಿತಂ ।
ಪ್ರತ್ಯೇಕಂ ರೋಮಸಂಖ್ಯಾಭಿರ್ವಿವ್ಯಾಧೇಷುಭಿರಂಧಕಃ ॥ ೩೧ ॥

ದೃಷ್ಟ್ವಾ ಸೈನ್ಯಂ ಭಜ್ಯಮಾನಮಂಧಕೇನ ಬಲೀಯಸಾ ।
ಸ್ಕಂದೋ ವಿನಾಯಕೋ ನಂದೀ ಸೋಮನಂದ್ಯಾದಯಃ ಪರೇ ॥ ೩೨ ॥

ಪ್ರಮಥಾಃ ಪ್ರಬಲಾ ವೀರಾಶ್ಶಂಕರಸ್ಯ ಗಣಾ ನಿಜಾಃ ।
ಚುಕ್ರುಧುಃ ಸಮರಂ ಚಕ್ರುರ್ವಿಚಿತ್ರಂ ಚ ಮಹಾಬಲಾಃ ॥ ೩೩ ॥

---

೨೯. ಹಾಗೆ ಪ್ರಮಥರಿಂದ ನಾಶವಾದ ತನ್ನ ಸೈನ್ಯವನ್ನು ನೋಡಿ ಅಂಧಕನು ತಾನೇ ರಥದಲ್ಲಿ ಕುಳಿತುಕೊಂಡು ಮುಂದೆ ನುಗ್ಗಿದನು.

೩೦. ಅಂಧಕನು ತನ್ನ ಕ್ರೂರವಾದ ಅಸ್ತ್ರಗಳಿಂದ ಶತ್ರುಗಳನ್ನು, ವಜ್ರಪಾತಗಳಿಂದ ಇಂದ್ರನು ಪರ್ವತಗಳನ್ನು ನಾಶಮಾಡಿದಂತೆ ನಾಶಮಾಡಿದನು. ನೀರಿಲ್ಲದ ಮೇಘಗಳಂತೆ ಪ್ರಮಥರೂ ಸಹ ಅಲ್ಲಲ್ಲೇ ನಷ್ಟವಾಗಿ ಹೋದರು.

೩೧. ಎದುರಾಗಿ ಬರುವವರನ್ನೂ, ಎದುರಿಸಿ ಓಡುತ್ತಿರುವವರನ್ನೂ, ದೂರದಲ್ಲಿದ್ದವರನ್ನೂ, ಹತ್ತಿರಕ್ಕೆ ಬಂದವರನ್ನೂ ಒಂದೇ ಸಮನಾಗಿ ಅಸಂಖ್ಯಾತವಾದ ಬಾಣಗಳನ್ನು ಪ್ರಯೋಗಿಸಿ, ಅಂಧಕನು ಎಲ್ಲಾ ಪ್ರಮಥರನ್ನೂ ನೋಯಿಸಿದನು.

೩೨-೩೩. ಈರೀತಿ ಅಂಧಕನು ಶಿವಸೈನ್ಯವನ್ನೆಲ್ಲಾ ಧ್ವಂಸಮಾಡುತ್ತಿರಲು. ವಿನಾಯಕನೂ, ಷಣ್ಮುಖಸ್ವಾಮಿಯೂ, ನಂದೀಶ್ವರನೂ, ಸೋಮನಂದಿ ಇವರೇ ಮೊದಲಾದ ವೀರರೂ, ಪ್ರಬಲರಾದ ಪ್ರಮಥವೀರರೂ, ಪರಮೇಶ್ವರನ ಮುಖ್ಯಗಣಗಳೂ ಸಹ ಇದಕ್ಕಾಗಿ ಬಹಳ ಕೋಪಿಸಿಕೊಂಡು ತಾವೇ ಮುಂದಾಗಿ ನಿಂತು ಘೋರ ಯುದ್ಧವನ್ನು ಮಾಡತೊಡಗಿದರು.

ವಿನಾಯಕೇನ ಸ್ಕಂದೇನ ನಂದಿನಾ ಸೋಮನಂದಿನಾ ।
ವೀರೇಣ ನೈಗಮೇಯೇನ ವೈಶಾಖೇನ ಬಲೀಯಸಾ ॥ ೩೪ ॥

ಇತ್ಯಾದ್ಯೈಸ್ತು ಗಣೈರುಗ್ರೈರಂಧಕೋಽಪ್ಯಂಧಕೀಕೃತಃ ।
ತ್ರಿಶೂಲಶಕ್ತಿಬಾಣೌಘಧಾರಾಸಂಪಾತಪಾತಿಭಿಃ ॥ ೩೫ ॥

ತತಃ ಕೋಲಾಹಲೋ ಜಾತೋ ಪ್ರಮಥಾಸುರಸೈನ್ಯಯೋಃ ।
ತೇನ ಶಬ್ದೇನ ಮಹತಾ ಶುಕ್ರಶ್ಶಂಭೂದರೇ ಸ್ಥಿತಃ ॥ ೩೬ ॥

ಛಿದ್ರಾನ್ವೇಷೀ ಭ್ರಮನ್ಸೋಽಥ ವಿನಿಕೇತೋ ಯಥಾನಿಲಃ ।
ಸಪ್ತಲೋಕಾನ್ಸಪಾತಾಲಾನ್ರುದ್ರದೇಹೇ ವ್ಯಲೋಕಯತ್ ॥ ೩೭ ॥

ಬ್ರಹ್ಮನಾರಾಯಣೇಂದ್ರಾಣಾಂ ಸ್ಯಾದಿತ್ಯಾಪ್ಸರಸಾಂ ತಥಾ ।
ಭುವನಾನಿ ವಿಚಿತ್ರಾಣಿ ಯುದ್ಧಂ ಚ ಪ್ರಮಥಾಸುರಂ ॥ ೩೮ ॥

---

೩೪.೩೫. ವಿನಾಯಕ, ಷಣ್ಮುಖ, ನಂದೀ, ಸೋಮನಂದೀ, ನೈಗಮೇಯ, ವೈಶಾಖ ಮೊದಲಾದ ಪ್ರಮಥವೀರರು, ತಮ್ಮ ತ್ರಿಶೂಲ, ಶಕ್ತಿ, ಬಾಣ ಇವುಗಳನ್ನು ಪರಂಪರೆಯಾಗಿ ಅಂಧಕನ ಮೇಲೆ ಎಸೆಯುತ್ತಾ, ಉಗ್ರವಾಗಿ ಯುದ್ಧಮಾಡಿದರು. ಇದರಿಂದ ನಿಜವಾಗಿಯೂ ಅಂಧಕನು ಆಗ ದಿಕ್ಕುಕೆಟ್ಟುನಿಂತನು.

೩೬-೩೭. ಹೀಗೆ ಪ್ರಮಥಸೈನ್ಯಕ್ಕೂ, ದಾನವಸೈನ್ಯಕ್ಕೂ ದೊಡ್ಡಯುದ್ಧವು ಜರುಗುತ್ತಿರಲು; ಇತ್ತ ಪರಮೇಶ್ವರನ ಉದರದಲ್ಲಿ ಅಡಗಿದ್ದ ಶುಕ್ರನು ಆ ಭಯಂಕರ ಶಬ್ದವನ್ನು ಕೇಳಿ ಮನೆಯಲ್ಲಿ ಪ್ರವೇಶಿಸಿದ ವಾಯುವಿನಂತೆ ಪರಮೇಶ್ವರನ ಎಲ್ಲಾ ದೇಹದಲ್ಲೂ ಸಂಚರಿಸಿದನು. ತಪ್ಪಿಸಿಕೊಳ್ಳುವ ದಾರಿಯಿದೆಯೋ ಎಂದು ಎಲ್ಲ ಕಡೆಯಲ್ಲಿಯೂ ಹುಡುಕಿದನು. ಆ ಸಮಯದಲ್ಲಿ ಪರಮೇಶ್ವರನ ಉದರದಲ್ಲಿಯೇ ಸಪ್ತ ಲೋಕಗಳನ್ನೂ, ಪಾತಾಳಲೋಕವನ್ನೂ ಕಂಡು ಆಶ್ಚರ್ಯಯುಕ್ತನಾದನು.

೩೮. ಬ್ರಹ್ಮ, ವಿಷ್ಣು, ಸೂರ್ಯ, ಅಪ್ಸರರು, ಸಮಸ್ತ ಲೋಕಗಳೂ, ಪ್ರಮಥಾಸುರರ ಯುದ್ಧ ಇವೆಲ್ಲವನ್ನೂ ಶುಕ್ರನು ಆ ರುದ್ರದೇಹದಲ್ಲಿಯೇ ನೋಡಿದನು.

ಸ ವರ್ಷಾಣಾಂ ಶತಂ ಕುಕ್ಷೌ ಭವಸ್ಯ ಪರಿತೋ ಭ್ರಮನ್ ।
ನ ತಸ್ಯ ದದೃಶೇ ರಂಧ್ರಂ ಶುಚೇ ರಂಧ್ರಂ ಖಲೋ ಯಥಾ ॥ ೩೯ ॥

ಶಾಂಭವೇನಾಥ ಯೋಗೇನ ಶುಕ್ರರೂಪೇಣ ಭಾರ್ಗವಃ ।
ಇಮಂ ಮಂತ್ರವರಂ ಜಪ್ತ್ವಾ ಶಂಭೋರ್ಜಠರಪಂಜರಾತ್ ॥ ೪೦ ॥

ನಿಷ್ಕ್ರಾಂತೋ ಲಿಂಗಮಾರ್ಗೇಣ ಪ್ರಣನಾಮ ತತಶ್ಶಿವಂ ।
ಗೌರ್ಯಾ ಗೃಹೀತಃ ಪುತ್ರಾರ್ಥಂ ತದವಿಘ್ನೇಶ್ವರೀಕೃತಃ ॥ ೪೧ ॥

ಅಥ ಕಾವ್ಯಂ ವಿನಿಷ್ಕ್ರಾಂತಂ ಶುಕ್ರಮಾರ್ಗೇಣ ಭಾರ್ಗವಂ ।
ದೃಷ್ಟ್ವೋವಾಚ ಮಹೇಶಾನೋ ವಿಹಸ್ಯ ಕರುಣಾನಿಧಿಃ ॥ ೪೨ ॥

॥ ಮಹೇಶ್ವರ ಉವಾಚ ॥

ಶುಕ್ರವನ್ನಿಃಸೃತೋ ಯಸ್ಮಾಲ್ಲಿಂಗಾನ್ಮೇ ಭೃಗುನಂದನ ।
ಕರ್ಮಣಾ ತೇನ ಶುಕ್ರಸ್ತ್ವಂ ಮಮ ಪುತ್ರೋಽಸಿ ಗಮ್ಯತಾಂ ॥ ೪೩ ॥

---

೩೯. ಹೀಗೆ ಆ ಶುಕ್ರಾಚಾರ್ಯನು ಶಿವನ ದೇಹದಲ್ಲಿ ನೂರು ವರ್ಷಗಳು ಸಂಚರಿಸಿದನು. ಆಷ್ಟಾದರೂ ಅವನಿಗೆ ತಪ್ಪಿಸಿಕೊಳ್ಳಲು ದ್ವಾರವು ಸಿಕ್ಕಲಿಲ್ಲ. ದುಷ್ಟನು ಸತ್ಪುರುಷರಲ್ಲಿ ಎಷ್ಟು ದಿನಗಳಾದರೂ ಹೇಗೆ ದೋಷವನ್ನು ಕಾಣಲಾರನೋ ಹಾಗೆ ಶುಕ್ರನು ರಂಧ್ರಾನ್ವೇಷಣದಲ್ಲಿ ಅಸಮರ್ಥನಾದನು.

೪೦-೪೧. ಕೊನೆಗೆ ಶುಕ್ರನು ಶಂಭುವಿನ ಮಹಿಮಾದರ್ಶಕವಾದ ಮಂತ್ರಗಳನ್ನು ಪಠಿಸಿ, ಆ ಮಂತ್ರಬಲದಿಂದ ಮಹೇಶ್ವರನ ಜಠರದಲ್ಲಿ ವೀರ್ಯರೂಪವನ್ನು ಪಡೆದು ಆ ವೀರ್ಯರೂಪದಿಂದಲೇ ಶಿವನ ಲಿಂಗದ ದ್ವಾರದಿಂದ ಈಚೆಗೆ ಬಂದನು. ಒಡನೆಯೇ ಶಿವನಿಗೆ ವಂದಿಸಿದನು. ಗೌರೀದೇವಿಯು ತನ್ನ ಮಗುವೆಂದು ತಿಳಿದು ವಿಘ್ನೇಶ್ವರನನ್ನು ಪ್ರೀತಿಸುವಂತೆ ಅವನನ್ನು ಪೋಷಿಸಲಾರಂಭಿಸಿದಳು.

೪೨. ದಯಾಶಾಲಿಯಾದ ಮಹೇಶ್ವರನು ತನ್ನ ಶುಕ್ರರೂಪವಾಗಿ ಬಂದ ಶುಕ್ರಾಚಾರ್ಯನನ್ನು ನೋಡಿ ನಸುನಕ್ಕು

೪೩. ಓ ದೈತ್ಯಗುರುವೇ, ನೀನು ನನ್ನ ಲಿಂಗದಮೂಲಕ ಶುಕ್ರರೂಪದಿಂದ ಹೊರಬಿದ್ದಿದ್ದೀಯೆ. ಆದ್ದರಿಂದ ನೀನು ನನ್ನ ಮಗನು, ಹೋಗು ಎಂದು ಈಶ್ವರನು ಶುಕ್ರನಿಗೆ ಹೇಳಿದನು.

॥ ಸನತ್ಕುಮಾರ ಉವಾಚ ॥

ಇತ್ಯೇವಮುಕ್ತೋ ದೇವೇನ ಶುಕ್ರೋಽರ್ಕಸದೃಶದ್ಯುತಿಃ ।
ಪ್ರಣನಾಮ ಶಿವಂ ಭೂಯಸ್ತುಷ್ಟಾವ ನಿಹಿತಾಂಜಲಿಃ ॥ ೪೪ ॥

॥ ಶುಕ್ರ ಉವಾಚ ॥

ಅನಂತಪಾದಸ್ತ್ವಮನಂತಮೂರ್ತಿ-
ರನಂತಮೂರ್ಧಾಂತಕರಶ್ಶಿವಶ್ಚ ।
ಅನಂತಬಾಹುಃ ಕಥಮೀದೃಶಂ ತ್ವಾಂ
ಸ್ತೋಷ್ಯೇಹ ನುತ್ಯಂ ಪ್ರಣಿಪತ್ಯ ಮೂರ್ಧ್ನಾ ॥ ೪೫ ॥

ತ್ವಮಷ್ಟಮೂರ್ತಿಸ್ತ್ವಮನಂತಮೂರ್ತಿ-
ಸ್ತ್ವಮಿಷ್ಟದಸ್ಸರ್ವಸುರಾಸುರಾಣಾಂ ।
ಅನಿಷ್ಟದೃಷ್ಟಶ್ಚ ವಿಮರ್ದಕಶ್ಚ
ಸ್ತೋಷ್ಯೇಹ ನುತ್ಯಂ ಕಥಮೀದೃಶಂ ತ್ವಾಂ ॥ ೪೬ ॥

---

೪೪. ಪರಮೇಶ್ವರನು ಹೀಗೆ ಶುಕ್ರನನ್ನು ಅನುಗ್ರಹಿಸಿದ ಒಡನೆಯೇ ಶುಕ್ರನು ಸೂರ್ಯನಷ್ಟು ತೇಜಸ್ವಿಯಾದನು. ಅನಂತರ ತಾನು ಮಹೇಶ್ವರನನ್ನು ವಂದಿಸಿ ಈ ರೀತಿ ಅಂಜಲಿಬದ್ಧನಾಗಿ ಸ್ತೋತ್ರಮಾಡಿದನು.

೪೫. ಓ ಸ್ವಾಮಿಯೇ, ನಿನ್ನ ಪಾದಗಳು, ನಿನ್ನ ಆಕಾರವು, ನಿನ್ನ ಶಿರಸ್ಸು, ನಿನ್ನ ಕೈಗಳು, ಬಾಹುಗಳು, ಅನಂತಾನಂತವಾಗಿವೆ. ಇಂತಹ ಅನಂತಸ್ವರೂಪಿಯಾದ ನಿನ್ನನ್ನು ನಾನು ಯಾವ ರೀತಿ ಸ್ತೋತ್ರಮಾಡಲಿ ?

೪೬. ನೀನು ಎಂಟು ವಿಧವಾದ ದೇಹವುಳ್ಳವನು ಎಂದರೆ ಅಷ್ಟಮೂರ್ತಿಯೆಂದು ಪ್ರಸಿದ್ಧನಾದವನು. ನೀನೇ ಅನಂತಸ್ವರೂಪನು, ದೇವಾಸುರರ ಇಷ್ಟಾರ್ಥಗಳನ್ನು ನೆರವೇರಿಸತಕ್ಕವನು. ಭಕ್ತರಲ್ಲದವರಿಗೆ ಅಗೋಚರನು, ಶತ್ರುಸಂಹಾರಕನು ಇಂತಹ ನಿನ್ನನ್ನು ನಾನು ಹೇಗೆ ಸ್ತೋತ್ರಮಾಡಲಿ ?

॥ ಸನತ್ಕುಮಾರ ಉವಾಚ ॥

ಇತಿ ಸ್ತುತ್ವಾ ಶಿವಂ ಶುಕ್ರಃ ಪುನರ್ನತ್ವಾ ಶಿವಾಜ್ಞಯಾ ।
ವಿವೇಶ ದಾನವಾನೀಕಂ ಮೇಘಮಾಲಾಂ ಯಥಾ ಶಶೀ ॥ ೪೭ ॥

ನಿಗೀರ್ಣನಮಿತಿ ಪ್ರೋಕ್ತಂ ಶಂಕರೇಣ ಕವೇ ರಣೇ ।
ಶೃಣು ಮಂತ್ರಂ ಚ ತಂ ಜಪ್ತೋ ಯಶ್ಶಂಭೋಃ ಕವಿನೋದರೇ ॥ ೪೮ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಶುಕ್ರನಿಗೀರ್ಣನಂ ನಾಮಾಷ್ಟ-
ಚತ್ವಾರಿಂಶೋಽಧ್ಯಾಯಃ.

---

೪೭. ಸನತ್ಕುಮಾರನಿಂತೆಂದನು :—ಹೀಗೆಂದು ಪರಶಿವನನ್ನು ಸ್ತುತಿಸಿ, ಚಂದ್ರನು ಮೇಘರಾಶಿಯಲ್ಲಿ ಸೇರುವಂತೆ ಮಹೇಶ್ವರನ ಅಪ್ಪಣೆಯಿಂದಲೇ ರಾಕ್ಷಸ ಸೈನ್ಯವನ್ನು ಹೋಗಿ ಸೇರಿದನು.

೪೮. ಪರಮೇಶ್ವರನು ಯಾವ ಮಂತ್ರದಿಂದ ತುಷ್ಟನಾಗಿ ಶುಕ್ರನನ್ನು ಅನುಗ್ರಹಿಸಿದನೋ ಅದೇ ಮಂತ್ರವನ್ನು ನಾನು ನಿನಗೆ ಈಗ ವಿವರಿಸುತ್ತೇನೆ ಎಂದನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ಎರಡನೆಯ ರುದ್ರಸಂಹಿತೆಯ ಐದನೆಯ
ಯುದ್ಧಖಂಡದಲ್ಲಿ ಶುಕ್ರನಿಗೀರ್ಣನವೆಂಬ ನಲವತ್ತೆಂಟನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕೋನಪಂಚಾಶತ್ತಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಓಂ ನಮಸ್ತೇ ದೇವೇಶಾಯ ಸುರಾಸುರನಮಸ್ಕೃತಾಯ ಭೂತ-ಭವ್ಯಮಹಾದೇವಾಯ ಹರಿತಪಿಂಗಲಲೋಚನಾಯ ಬಲಾಯ ಬುದ್ಧಿ-ರೂಪಿಣೇ ವೈಯಾಘ್ರವಸನಚ್ಛದಾಯಾರಣೇಯಾಯ ತ್ರೈಲೋಕ್ಯಪ್ರಭವೇ ಈಶ್ವರಾಯ ಹರಾಯ ಹರಿನೇತ್ರಾಯ ಯುಗಾಂತಕರಣಾಯಾನಲಾಯ

---

## ನಲವತ್ತೊಂಭತ್ತನೆಯ ಅಧ್ಯಾಯವು.

ಶುಕ್ರಾಚಾರ್ಯರು ಈಶ್ವರನನ್ನು ಸ್ತುತಿಸಿದ ಮಂತ್ರವನ್ನು ಸನತ್ಕುಮಾರನು ಹೀಗೆ ವಿವರಿಸಿದನು.

ಓ ಪರಮೇಶ್ವರನೇ, ನೀನು ದೇವದೇವನು. ಸುರಾಸುರರಿಂದ ವಂದಿಸಲ್ಪಡುವೆ. ಪ್ರಾಣಿಗಳಿಗೆ ಸುಖವನ್ನು ಕೊಡುವೆ. ಹಸುರು ಮತ್ತು ಪಿಂಗಳವರ್ಣದ ಕಣ್ಣುಗಳು ನಿನಗಿವೆ ಬಲಿಷ್ಠನು, ಮತ್ತು ಬುದ್ಧಿಸ್ವರೂಪನು. ಹುಲಿಯ ಚರ್ಮವನ್ನು ಧರಿಸಿ, ಮೂರು ಲೋಕಕ್ಕೂ ಪ್ರಭುವಾಗಿರುವೆ. ಈಶ್ವರ, ಹರ, ಎಂಬುವನೂ ನೀನೆ. ಹರಿಯನ್ನೇ ಕಣ್ಣುಳ್ಳವನು. ಯುಗಾಂತಕನೂ, ಅಗ್ನಿಸ್ವರೂಪನೂ, ಗಣಪತಿಯೂ,

ಗಣೇಶಾಯ ಲೋಕಪಾಲಾಯ ಮಹಾಭುಜಾಯ ಮಹಾಹಸ್ತಾಯ ಶೂಲಿನೇ ಮಹಾದಂಷ್ಟ್ರಿಣೇ ಕಾಲಾಯ ಮಹೇಶ್ವರಾಯ ಅವ್ಯಯಾಯ ಕಾಲರೂಪಿಣೇ ನೀಲಗ್ರೀವಾಯ ಮಹೋದರಾಯ ಗಣಾಧ್ಯಕ್ಷಾಯ ಸರ್ವಾತ್ಮನೇ ಸರ್ವಭಾವನಾಯ ಸರ್ವಗಾಯ ಮೃತ್ಯುಹಂತ್ರೇ ಪರಿಯಾತ್ರಸುವ್ರತಾಯ ಬ್ರಹ್ಮಚಾರಿಣೇ ವೇದಾಂತಗಾಯ ತಪೋಂತ-ಗಾಯ ಪಶುಪತಯೇ ವ್ಯಂಗಾಯ ಶೂಲಪಾಣಯೇ ವೃಷಕೇತವೇ ಹರಯೇ ಜಟಿನೇ ಶಿಖಡಿಂನೇ ಲಕುಟಿನೇ ಮಹಾಯಶಸೇ ಭೂತೇಶ್ವರಾಯ ಗುಹಾವಾಸಿನೇ ವೀಣಾಪಣವತಾಲವತೇ ಅಮರಾಯ ದರ್ಶನೀಯಾಯ ಬಾಲಸೂರ್ಯನಿಭಾಯ ಸ್ಮಶಾನವಾಸಿನೇ ಭಗವತೇ ಉಮಾಪತಯೇ ಅರಿಂದಮಾಯ ಭಗಸ್ಯಾಕ್ಷಿಪಾತಿನೇ ಪೂಷ್ಣೋದಶನನಾಶನಾಯ ಕ್ರೂರ-

---

ಲೋಕಪಾಲಕನೂ, ಮಹಾಪರಾಕ್ರಮಿಯೂ ನೀನೇ. ನಿನ್ನ ಹಸ್ತಗಳು, ನಿನ್ನ ಶೂಲವೂ, ನಿನ್ನ ದವಡೆಗಳೂ ಮಹತ್ತಾದವುಗಳು. ನೀನೇ ಲೋಕಕ್ಕೆ ಯಮ, ಮಹೇಶ್ವರ, ನಾಶರಹಿತನಾದ ಬ್ರಹ್ಮ. ನಿನ್ನ ಕಂಠವು ನೀಲವಾಗಿದೆ. ನಿನ್ನ ಉದರವು ದೊಡ್ಡದು. ಗಣಗಳಿಗೆ ಒಡೆಯನೂ ನೀನೆ. ಸರ್ವಾತ್ಮನಾದ ಸರ್ವರಲ್ಲಿಯೂ ಅಡಗಿರುವ ಸರ್ವರಿಗೂ ಗೋಚರಿಸುವ ಮೃತ್ಯುನಾಶಕನಾದ ಒಳ್ಳೆಯ ನಿಯಮವುಳ್ಳ ನಿನಗೆ ನಮಸ್ಕಾರವು. ಓ ಪರಶಿವನೇ ನೀನು ಬ್ರಹ್ಮಚಾರಿ, ವೇದ ಮತ್ತು ತಪಸ್ಸು ಇವುಗಳ ಪಾರವನ್ನು ಕಂಡಿದ್ದೀಯೆ. ನೀನು ಪಶುಪತಿಯು ಶೂಲಪಾಣಿಯು ವೃಷಭಧ್ವಜನು ಹರಿಯು, ಜಟಾಧಾರಿಯು, ಇಂತಹ ನಿನಗೆ ವಂದನೆಯು. ನೀನು ಶಿಖಂಡಿ ಯಾಗಿಯೂ, ಮಹಾಯಶಸ್ವಿಯಾಗಿಯೂ ಭೂತಗಳಿಗೆ ಒಡೆಯನಾಗಿಯೂ ಇದ್ದೀಯೆ. ನೀನು ಗುಹೆಯಲ್ಲಿ ವಾಸಿಸುವೆ. ವೀಣೆ, ತಾಳ, ತಮಟೆ ಮೊದಲಾದ ವಾದ್ಯಗಳನ್ನುಳ್ಳ ವನು. ನಿನಗೆ ಮರಣವೇ ಇಲ್ಲ. ನೀನು ಸುಂದರನು. ಬಾಲಸೂರ್ಯನಂತೆ ಪ್ರಕಾಶಕನು, ಸ್ಮಶಾನವಾಸಿಯು, ಉಮಾಪತಿಯು, ಭಗವತ್ಸ್ವರೂಪನು, ಶತ್ರುನಾಶಕನು, ಸದ್ಗುಣ ಗಳಲ್ಲಿ ಪಕ್ಷಪಾತಿಯು. ಸೂರ್ಯನಿಗೆ ಹಲ್ಲಿಲ್ಲದಂತೆ ಮಾಡಿದವನೂ ನೀನೆ. ಶತ್ರು ಗಳನ್ನು ಕ್ರೂರವಾಗಿ ಕತ್ತರಿಸುವವನು ನೀನು. ನಿನ್ನ ಕೈಯ್ಯಲ್ಲಿ ಪಾಶವಿದೆ. ಪ್ರಲಯ

ಕರ್ತಕಾಯ ಪಾಶಹಸ್ತಾಯ ಪ್ರಲಯಕಾಲಾಯ ಉಲ್ಕಾಮುಖಾಯಾಗ್ನಿ-ಕೇತವೇ ಮುನಯೇ ದೀಪ್ತಾಯ ವಿಶಾಂತಪತಯೇ ಉನ್ನತಯೇ ಜನಕಾಯ ಚತುರ್ಥಕಾಯ ಲೋಕಸತ್ತಮಾಯ ವಾಮದೇವಾಯ ವಾಗ್ದಾಕ್ಷಿಣ್ಯಾಯ ವಾಮತೋ ಭಿಕ್ಷವೇ ಭಿಕ್ಷುರೂಪಿಣೇ ಜಟಿನೇ ಸ್ವಯಂ ಜಟಿಲಾಯ ಶಕ್ರ-ಹಸ್ತಪ್ರತಿಸ್ತಂಭಕಾಯ ವಸೂನಾಂ ಸ್ತಂಭಕಾಯ ಕ್ರತವೇ ಕೆಕ್ರಕೆರಾಯ ಕಾಲಾಯ ಮೇಧಾವಿನೇ ಮಧುಕರಾಯ ಚಲಾಯ ವಾನಸ್ಪತ್ಯಾಯ ವಾಜಸನೇತಿಸಮಾಶ್ರಮಪೂಜಿತಾಯ ಜಗದ್ಧಾತ್ರೇ ಜಗತ್ಕರ್ತ್ರೇ ಪುರುಷಾಯ ಶಾಶ್ವತಾಯ ಧ್ರುವಾಯ ಧರ್ಮಾಧ್ಯಕ್ಷಾಯ ತ್ರಿವರ್ತ್ಮನೇ ಭೂತಭಾವನಾಯ ತ್ರಿನೇತ್ರಾಯ ಬಹುರೂಪಾಯ ಸೂರ್ಯಾಯುತ-ಸಮಪ್ರಭಾಯ ದೇವಾಯ ಸರ್ವತೂರ್ಯನಿನಾದಿನೇ ಸರ್ವಬಾಧಾ-

---

ಕಾಲದಲ್ಲಿ ನೀನೇ ಯಮನು, ಉಲ್ಕಾರೂಪದ ಅಗ್ನಿಮುಖವುಳ್ಳವನು ನೀನೇ. ಮುನಿಯಂತೆ ಪ್ರಕಾಶಿಸುವವನೂ, ಪ್ರಜೆಗಳಿಗೆ ಒಡೆಯನಾಗಿಯೂ, ಶತ್ರುಧ್ವಂಸಕನಾಗಿಯೂ, ಉನ್ನತಸ್ವರೂಪನೂ. ಬ್ರಹ್ಮರೂಪಿಯೂ ವೇದತ್ರಯಗಳಿಗೆ ಚತುರ್ವೇದದಂತಿರುವವನೂ ನೀನೇ. ಲೋಕವನ್ನು ಉದ್ಧಾರಮಾಡಿ, ವಾಮದೇವ, ವಾಗ್ರೂಪಿ, ಭಿಕ್ಷುಕ, ಜಟೀ ಎಂಬಹೆಸರುಗಳನ್ನು ಪಡೆದಿದ್ದೀಯೆ. ಇಂದ್ರನ ಹಸ್ತವನ್ನು ಚಲನವಿಲ್ಲದಂತೆ ಸ್ತಂಭನ ಮಾಡಿದವನು ವಸುಸ್ತಂಭಕನೂ, ಯಾಗರೂಪಿಯೂ, ಯಾಗಕರ್ತನೂ, ಕಾಲರೂಪಿಯೂ, ಮೇಧಾವಿಯೂ ಆಗಿ ಪ್ರಕಾಶಿಸುವ ಸ್ವಾಮಿಯೇ, ನಿನಗೆ ವಂದನೆಯು. ಮಧುಕರನೂ ಚಂಚಲನೂ, ವನಸ್ಪತಿಯಾಗಿರುವವನೂ, ವಾಜಸನವೆಂಬ ಹೆಸರಿನಿಂದ ಪೂಜಿತನೂ ಆಗಿರುವ ನಿನ್ನನ್ನು ನಮಸ್ಕರಿಸುತ್ತೇನೆ. ಶಂಕರನೇ, ನೀನು ಜಗತ್ತನ್ನು ಧರಿಸುವೆ, ಸೃಷ್ಟಿಸುವೆ, ಪುರುಷರೂಪದಿಂದಿರುವೆ. ನೀನು ಶಾಶ್ವತನು, ಧ್ರುವನು, ಧರ್ಮಕ್ಕೆ ಒಡೆಯನು. ಧರ್ಮಾರ್ಥಕಾಮವೆಂಬ ಮೂರು ಮಾರ್ಗಗಳಲ್ಲಿ ನಡೆಯುವವನು. ಬಹು ರೂಪನಾಗಿ ಹತ್ತುಸಾವಿರ ಸೂರ್ಯನಂತೆ ಹೊಳೆಯುವವನು. ದೇವಸ್ವರೂಪನಾಗಿಯೂ, ಸರ್ವವ್ಯಾಪಿಯೂ, ಸಮಸ್ತ ಬಾಧೆಗಳನ್ನೂ ನಿವಾರಿಸುವವನೂ, ಬಂಧನವನ್ನುಂಟುಮಾಡುವವನೂ, ಆಗಿರುವೆ. ಸಮಸ್ತಲೋಕವನ್ನೇ ಧರಿಸಿ, ಕಾಪಾಡುವವನು

ವಿಮೋಚನಾಯ ಬಂಧನಾಯ ಸರ್ವಧಾರಿಣೇ ಧರ್ಮೋತ್ತಮಾಯ ಪುಷ್ಪದಂತಾಯಾಪಿಭಾಗಾಯ ಮುಖಾಯ ಸರ್ವಹರಾಯ ಹಿರಣ್ಯಶ್ರವಸೇ ದ್ವಾರಿಣೇ ಭೀಮಾಯ ಭೀಮಪರಾಕ್ರಮಾಯ ಓಂ ನಮೋ ನಮಃ ॥

॥ ಸನತ್ಕುಮಾರ ಉವಾಚ ॥

ಇಮಂ ಮಂತ್ರವರಂ ಜಪ್ತ್ವಾ ಶುಕ್ರೋ ಜಠರಪಂಜರಾತ್ ।
ನಿಷ್ಕ್ರಾಂತೋ ಲಿಂಗಮಾರ್ಗೇಣ ಶಂಭೋಶ್ಶುಕ್ರಮಿವೋತ್ಕಟಂ ॥ ೧ ॥

ಗೌರ್ಯಾ ಗೃಹೀತಃ ಪುತ್ರಾರ್ಥಂ ವಿಶ್ವೇಶೇನ ತತಃ ಕೃತಃ ।
ಅಜರಶ್ಚಾಮರಃ ಶ್ರೀಮಾನ್ದ್ವಿತೀಯ ಇವ ಶಂಕರಃ ॥ ೨ ॥

ತ್ರಿಭಿರ್ವರ್ಷಸಹಸ್ರೈಸ್ತು ಸಮತೀತೈರ್ಮಹೀತಲೇ ।
ಮಹೇಶ್ವರಾತ್ಪುನರ್ಜಾತಃ ಶುಕ್ರೋ ವೇದನಿಧಿರ್ಮುನಿಃ ॥ ೩ ॥

---

ಪುಷ್ಪದಂತನಿಗೆ ಮೋಕ್ಷಕೊಟ್ಟವನು ಸರ್ವ ದೇವತೆಗಳ ಸ್ವರೂಪನಾಗಿ ಕೊನೆಗೆ ಲೋಕವನ್ನೆಲ್ಲಾ ಧ್ವಂಸಮಾಡುವ ಹಿರಣ್ಯಶ್ರವನೆಂದೂ, ಭೀಮನೆಂದೂ, ಭಯಂಕರವಾದ ಪರಾಕ್ರಮಿಯೆಂದೂ ಹೇಳಿಸಿಕೊಳ್ಳುವ ಓ ಶಂಭುವೇ ನಿನಗೆ ನಮಸ್ಕಾರವು. ನಿನಗೆ ವಂದನೆಯು.

೧. ಶುಕ್ರಾಚಾರ್ಯನು ಹೀಗೆ ಮಂತ್ರವನ್ನು ಜಪಿಸಿ, ಶಿವನ ಉದರದಿಂದ ತಪ್ಪಿಸಿಕೊಂಡು ಲಿಂಗಮಾರ್ಗವಾಗಿ, ಉತ್ಕಟವಾದ ಪರಶಿವನ ವೀರ್ಯದಂತೆ ಈಚೆಗೆ ಬಿದ್ದನು.

೨. ಇದನ್ನು ನೋಡಿ ಪಾರ್ವತಿಯು ಪುತ್ರಭಾವದಿಂದ ಆ ಶುಕ್ರನನ್ನು ಪ್ರೀತಿಸಿದಳು. ಆಮೇಲೆ ಶಂಕರನು, ಆ ಶುಕ್ರನನ್ನು ಜರಾಮರಣವರ್ಜಿತನನ್ನಾಗಿ ಮಾಡಿದನು. ಬಳಿಕ ಶುಕ್ರನು ಸಾಕ್ಷಾತ್ ಎರಡನೆಯ ಶಂಕರನಂತೆಯೇ ಪ್ರಕಾಶಿಸಿದನು.

೩. ಭೂಮಿಯಲ್ಲಿ ಮಾನವನ ಮೂರುಸಾವಿರ ವರ್ಷಪರ್ಯಂತವಾಗಿ ಶುಕ್ರನು ಈಶ್ವರನ ಜಠರದಲ್ಲಿದ್ದನು. ಅನಂತರ ಮಹೇಶ್ವರನಿಂದ ಪುನಃ ಜನಿಸಿ ಅಂಧಕನ ಸಹಾಯಕ್ಕಾಗಿ ತೆರಳಿ, ಅಲ್ಲಿ,

ದದರ್ಶ ಶೂಲೇ ಸಂಶುಷ್ಕಂ ಧ್ಯಾಯಂತಂ ಪರಮೇಶ್ವರಂ ।
ಅಂಧಕಂ ಧೈರ್ಯಸಂಪನ್ನಂ ದಾನವೇಶಂ ತಪಸ್ವಿನಂ ॥ ೪ ॥

ಮಹಾದೇವಂ ವಿರೂಪಾಕ್ಷಂ ಚಂದ್ರಾರ್ಧಕೃತಶೇಖರಂ ।
ಅಮೃತಂ ಶಾಶ್ವತಂ ಸ್ಥಾಣುಂ ನೀಲಕಂಠಂ ಪಿನಾಕಿನಂ ॥ ೫ ॥

ವೃಷಭಾಕ್ಷಂ ಮಹಾಜ್ಞೇಯಂ ಪುರುಷಂ ಸರ್ವಕಾಮದಂ ।
ಕಾಮಾರಿಂ ಕಾಮದಹನಂ ಕಾಮರೂಪಂ ಕಪರ್ದಿನಂ ॥ ೬ ॥

ವಿರೂಪಂ ಗಿರಿಶಂ ಭೀಮಂ ಸ್ರಕ್ಕಿಣಂ ರಕ್ತವಾಸಸಂ ।
ಯೋಗಿನಂ ಕಾಲದಹನಂ ತ್ರಿಪುರಘ್ನಂ ಕಪಾಲಿನಂ ॥ ೭ ॥

ಗೂಢವ್ರತಂ ಗುಪ್ತಮಂತ್ರಂ ಗಂಭೀರಂ ಭಾವಗೋಚರಂ ।
ಅಣಿಮಾದಿಗುಣಾಧಾರಂ ತ್ರಿಲೋಕೈಶ್ವರ್ಯದಾಯಕಂ ॥ ೮ ॥

ವೀರಂ ವೀರಹಣಂ ಘೋರಂ ವಿರೂಪಂ ಮಾಂಸಲಂ ಪಟುಂ ।
ಮಹಾಮಾಂಸಾದಮುನ್ಮತ್ತಂ ಭೈರವಂ ವೈ ಮಹೇಶ್ವರಂ ॥ ೯ ॥

---

೪. ಶೂಲದಲ್ಲಿ ಒಣಗಿ, ಪರಮೇಶ್ವರನನ್ನೇ ಧ್ಯಾನಿಸುತ್ತಿದ್ದ ಧೀರರಾಕ್ಷಸ ರಾಜನಾದ ಅಂಧಕನನ್ನು ಬಂದು ನೋಡಿದನು.

೫-೧೮. ಶುಕ್ರಾಚಾರ್ಯರು ಅಂಧಕನನ್ನು ಬಂದು ನೋಡಿದಾಗ, ಆ ಅಸುರನು ಪರಮೇಶ್ವರನನ್ನು ಈ ವಿಧವಾದ ಅಷ್ಟೋತ್ತರ ಶತನಾಮಗಳಿಂದ ಸ್ತುತಿಸಿ, ತನ್ನ ಆ ಶೂಲದ ಮಹಾಭಯವನ್ನು ಕಳೆದುಕೊಂಡಿದ್ದನು. ಅವನು ಪಠಿಸಿದ ಅಷ್ಟೋತ್ತರ ಶತನಾಮಗಳು ಹೀಗಿದ್ದುವು. ಎಲೈ ಮಹಾದೇವನೇ, ವಿರೂಪಾಕ್ಷನೇ, ಅರ್ಧಚಂದ ಧಾರಿಯೇ, ಮರಣರಹಿತನೇ ನಿನಗೆ ವಂದನೆಯು. ಶಾಶ್ವತನೂ, ಸ್ಥಾಣುವೂ, ನೀಲಕಂಠನೂ, ಪಿನಾಕವನ್ನು ಧರಿಸಿದವನೂ, ವೃಷಭಾಕ್ಷನೂ, ಮಹಾಜ್ಞೇಯನೂ, ನೀನೇ ಆಗಿರುವೆ. ಪುರುಷನೂ, ಸರ್ವಕಾಮದನೂ, ಕಾಮನಿಗೆ ಶತ್ರುವೂ, ಕಾಮದಹನನೂ, ಬೇಕಾದ ರೂಪಗಳನ್ನು ಧರಿಸುವವನೂ, ಜಟಾಜೂಟವನ್ನು ಧರಿಸಿರುವವನೂ ನೀನೇ ಆಗಿರುವೆ. ವಿರೂಪ, ಗಿರಿಶ, ಭೀಮ, ಸ್ರಕ್ಕಿಣ, ರಕ್ತ ವಾಸಸ್ಸು, ಯೋಗೀಕಾಲದಹನ, ತ್ರಿಪುರಘ್ನ, ಕಪಾಲಿ, ಇವೆಲ್ಲವೂ ನಿನ್ನ ನಾಮಗಳು.

ತ್ರೈಲೋಕ್ಯದ್ರಾವಣಂ ಲುಬ್ಧಂ ಲುಬ್ಧಕಂ ಯಜ್ಞಸೂದನಂ ।
ಕೃತ್ತಿಕಾನಾಂ ಸುತೈರ್ಯುಕ್ತಮುತ್ತಮಂ ಕೃತ್ತಿವಾಸಸಂ ॥ ೧೦ ॥

ಗಜಕೃತ್ತಿಪರೀಧಾನಂ ಕ್ಷುಬ್ಧಂ ಭುಜಗಭೂಷಣಂ ।
ದತ್ತಾಲಂಬಂ ಚ ವೇತಾಲಂ ಘೋರಂ ಶಾಕಿನಿಪೂಜಿತಂ ॥ ೧೧ ॥

ಅಘೋರಂ ಘೋರದೈತ್ಯಘ್ನಂ ಘೋರಘೋಷಂ ವನಸ್ಪತಿಂ ।
ಭಸ್ಮಾಂಗಂ ಜಟಿಲಂ ಶುದ್ಧಂ ಭೇರುಂಡಶತಸೇವಿತಂ ॥ ೧೨ ॥

ಭೂತೇಶ್ವರಂ ಭೂತನಾಥಂ ಪಂಚಭೂತಾಶ್ರಿತಂ ಖಗಂ ।
ಕ್ರೋಧಿತಂ ನಿಷ್ಠುರಂ ಚಂಡಂ ಚಂಡೀಶಂ ಚಂಡಿಕಾಪ್ರಿಯಂ ॥ ೧೩ ॥

ಚಂಡಂ ತುಂಗಂ ಗರುತ್ಮಂತಂ ನಿತ್ಯಮಾಸವಭೋಜನಂ ।
ಲೇಲಿಹಾನಂ ಮಹಾರೌದ್ರಂ ಮೃತ್ಯುಮೃತ್ಯೋರಗೋಚರಂ ॥ ೧೪ ॥

ಮೃತ್ಯೋರ್ಮೃತ್ಯುಂ ಮಹಾಸೇನಂ ಶ್ಮಶಾನಾರಣ್ಯವಾಸಿನಂ ।
ರಾಗಂ ವಿರಾಗಂ ರಾಗಾಂಧಂ ವೀತರಾಗಶತಾರ್ಚಿತಂ ॥ ೧೫ ॥

---

ನಿನ್ನ ವ್ರತಗಳು ಗೂಢವಾದವು. ನಿನ್ನ ಮಂತ್ರವೂ ಗುಟ್ಟಾದದ್ದು. ನೀನು ಗಂಭೀರನು. ಭಕ್ತಿಭಾವಕ್ಕೆ ಗೋಚರನು. ಅಣಿಮಾದಿಗುಣಗಳಿಗೆ ಆಧಾರನು. ತ್ರಿಲೋಕಗಳ ಐಶ್ವರ್ಯವನ್ನೆಲ್ಲಾ ಕೊಡುವವನು. ವೀರನೂ, ವೀರಹಣನೂ, ಘೋರನೂ, ವಿರೂಪನೂ ನೀನೇ ಆಗಿರುವೆ. ಮಾಂಸಲ, ಪಟು, ಮಹಾಮಾಂಸವನ್ನು ಭಕ್ಷಿಸುವವನೂ, ಉನ್ಮತ್ತನೂ, ಭೈರವನೂ, ಮಹೇಶ್ವರನೂ ನೀನೇ. ತ್ರಿಲೋಕಗಳಿಗೆ ಭಯಂಕರನೂ, ಲುಬ್ಧನೂ, ಬೇಡರ ವೇಷಧಾರಿಯೂ, ಯಜ್ಞನಾಶಕನೂ, ಕೃತ್ತಿಕಾಪುತ್ರರೊಡಗೂಡಿದವನೂ, ಉನ್ಮತ್ತನೂ, ಕೃತ್ತಿವಾಸನೂ ನೀನೇ ಆಗಿರುವೆ. ಗಜಚರ್ಮಧಾರಿಯೂ, ಕ್ಷುಬ್ಧನೂ, ಭುಜುಗಭೂಷಣನೂ, ದತ್ತಾಲಂಬನೂ, ವೇತಾಲನೂ, ಘೋರನೂ, ಶಾಕಿನಿಯಿಂದ ಪೂಜಿತನೂ ನೀನು. ನಿನಗೆ ಅಘೋರ, ಘೋರದೈತ್ಯಘ್ನ, ಘೋರಘೋಷ, ವನಸ್ಪತಿ, ಭಸ್ಮಾಂಗ, ಜಟಿಲ, ಶುದ್ಧ, ಭೇರುಂಡಸೇವಿತ, ಭೂತೇಶ್ವರ, ಭೂತಪತಿ, ಪಂಚಭೂತಾಶ್ರಿತ, ಖಗ, ಕ್ರೋಧಿತ, ನಿಷ್ಠುರ,

ಸತ್ತ್ವಂ ರಜಸ್ತಮೋಧರ್ಮಮಧರ್ಮಂ ವಾಸವಾನುಜಂ ।
ಸತ್ಯಂ ತ್ವಸತ್ಯಂ ಸದ್ರೂಪಮಸದ್ರೂಪಮಹೇತುಕಂ ॥ ೧೬ ॥

ಅರ್ಧನಾರೀಶ್ವರಂ ಭಾನುಂ ಭಾನುಕೋಟಿಶತಪ್ರಭಂ ।
ಯಜ್ಞಂ ಯಜ್ಞಪತಿಂ ರುದ್ರಮೀಶಾನಂ ವರದಂ ಶಿವಂ ॥ ೧೭ ॥

ಅಷ್ಟೋತ್ತರಶತಂ ಹ್ಯೇತನ್ಮೂರ್ತೀನಾಂ ಪರಮಾತ್ಮನಃ ।
ಶಿವಸ್ಯ ದಾನವೋ ಧ್ಯಾಯನ್ಮುಕ್ತಸ್ತಸ್ಮಾನ್ಮಹಾಭಯಾತ್ ॥ ೧೮ ॥

ದಿವ್ಯೇನಾಮೃತವರ್ಷೇಣ ಸೋಽಭಿಷಿಕ್ತಃ ಕಪರ್ದಿನಾ ।
ತುಷ್ಟೇನ ಮೋಚಿತಸ್ತಸ್ಮಾಚ್ಛೂಲಾಗ್ರಾದವರೋಪಿತಃ ॥ ೧೯ ॥

ಉಕ್ತಶ್ಚಾಥ ಮಹಾದೈತ್ಯೋ ಮಹೇಶಾನೇನ ಸೋಽಂಧಕಃ ।
ಅಸುರಸ್ಸಾಂತ್ವಪೂರ್ವಂ ಯತ್ಕೃತಂ ಸರ್ವಂ ಮಹಾತ್ಮನಾ ॥ ೨೦ ॥

---

ಚಂಡ, ಚಂಡೀಶ, ಚಂಡಿಕಾಪ್ರಿಯ, ಚಂಡ, ತುಂಗ, ಗರುತ್ಮಂತ, ನಿತ್ಯ, ಆಸವ ಭೋಜನ ಎಂಬ ಹೆಸರುಗಳಿವೆ. ಲೇಲಿಹಾನ, ಮಹಾರೌದ್ರ, ಮೃತ್ಯು, ಮೃತ್ಯುವಿಗೆ ಅಗೋಚರ, ಮೃತ್ಯುವಿಗೆ ಮೃತ್ಯು, ಮಹಾಸೇನ, ಸ್ಮಶಾನವಾಸಿ, ರಾಗ, ವಿರಾಗ ರಾಗಾಂಧ, ವೀತರಾಗ ಶತಾರ್ಚಿತ, ಸತ್ತ್ವರಜಸ್ತಮೋಗುಣಗಳಿಂದ ಕೂಡಿದವನು. ಧರ್ಮಾಧರ್ಮನೂ, ವಾಸವಾನುಜನೂ, ಸತ್ಯಾಸತ್ಯನೂ ಸದಸದ್ರೂಪನೂ, ಕಾರಣ ರಹಿತನೂ, ಅರ್ಧನಾರೀಶ್ವರನೂ, ಭಾನುವೂ, ಭಾನುಕೋಟಿಪ್ರಭನೂ, ಯಜ್ಞನೂ, ಯಜ್ಞಪತಿಯೂ, ರುದ್ರನೂ, ಈಶಾನನು, ವರದನೂ, ಶಿವನೂ ನೀನೇ ಆಗಿರುವೆ ಎಂದು ಅಂಧಕನು ಧ್ಯಾನಮಾಡಿದನು.

೧೯. ಈ ವಿಧವಾದ ಸ್ತುತಿಯಿಂದ ಸಂತುಷ್ಟನಾದ ಪರಮೇಶ್ವರನು ಅಂಧಕನ ಮೇಲೆ ಅಮೃತವರ್ಷವನ್ನು ಸುರಿಸಿದನು. ಅಲ್ಲದೆ ಶೂಲದಿಂದ ಕೆಳಗಿಳಿಸಿ ಆ ಭಯ ವನ್ನು ಅವನಿಗೆ ತಪ್ಪಿಸಿದನು.

೨೦. ಅಮೇಲೆ ಆ ಅಂಧಕಾಸುರನನ್ನು ಮಹೇಶ್ವರನು ತನ್ನ ಸಮೀಪಕ್ಕೆ ಕರೆದು ಸಮಾಧಾನಮಾಡಿ ತಾನು ಅವನಿಗಾಗಿ ಮಾಡಿದ ಸಹಾಯಗಳೆಲ್ಲವನ್ನೂ ಹೀಗೆ ವಿವರಿಸಿದನು.

॥ ಈಶ್ವರ ಉವಾಚ ॥

ಭೋ ಭೋ ದೈತ್ಯೇಂದ್ರ ತುಷ್ಟೋಽಸ್ಮಿ ದಮೇನ ನಿಯಮೇನ ಚ ।
ಶೌರ್ಯೇಣ ತವ ಧೈರ್ಯೇಣ ವರಂ ವರಯ ಸುವ್ರತ ॥ ೨೧ ॥

ಆರಾಧಿತಸ್ತ್ವಯಾ ನಿತ್ಯಂ ಸರ್ವನಿರ್ಧೂತಕಲ್ಮಷಃ ।
ವರದೋಽಹಂ ವರಾರ್ಹಸ್ತ್ವಂ ಮಹಾದೈತ್ಯೇಂದ್ರಸತ್ತಮ ॥ ೨೨ ॥

ಪ್ರಾಣಸಂಧಾರಣಾದಸ್ತಿ ಯಚ್ಚ ಪುಣ್ಯಫಲಂ ತವ ।
ತ್ರಿಭಿರ್ವರ್ಷಸಹಸ್ರೈಸ್ತು ತೇನಾಸ್ತು ತವ ನಿರ್ವೃತಿಃ ॥ ೨೩ ॥

॥ ಸನತ್ಕುಮಾರ ಉವಾಚ ॥

ಏತಚ್ಛ್ರುತ್ವಾಂಧಕಃ ಪ್ರಾಹ ವೇಪಮಾನಃ ಕೃತಾಂಜಲಿಃ ।
ಭೂಮೌ ಜಾನುದ್ವಯಂ ಕೃತ್ವಾ ಭಗವಂತಮುಮಾಪತಿಂ ॥ ೨೪ ॥

---

೨೧. ಎಲೈ ರಾಕ್ಷಸೇಶ್ವರನೇ, ನಿನ್ನ ನಿಯಮಕ್ಕೂ, ನಿನ್ನ ತಪಸ್ಸಿಗೂ, ಶೌರ್ಯ ಧೈರ್ಯಗಳಿಗೂ ನಾನು ಮೆಚ್ಚಿದ್ದೇನೆ. ನಿನಗೆ ಬೇಕಾದ ವರಗಳನ್ನು ಕೇಳಿಕೋ ಈಗಲೇ ಕೊಡುವೆನು.

೨೨. ಎಲೈ ದೈತ್ಯರಾಜನೇ, ನೀನು ಸಮಸ್ತ ಪಾಪಕಾರ್ಯಗಳನ್ನೂ ಬಿಟ್ಟು ನನ್ನನ್ನು ಬಹಳವಾಗಿ ಆರಾಧಿಸಿದ್ದೀಯೆ. ವರಕೊಡುವ ಶಕ್ತಿ ನನ್ನಲ್ಲಿದೆ. ವರಗಳನ್ನು ಕೇಳಲು ನೀನು ಅರ್ಹನಾಗಿದ್ದೀಯೆ. ಆದುದರಿಂದ ನೀನು ಬೇಕಾದ ವರಗಳನ್ನು ಕೇಳು ಎಂದು ತಿಳಿಸಿ

೨೩. ಅಯ್ಯಾ ಅಂಧಕನೇ, ನೀನು ನಿನ್ನ ಪುಣ್ಯಫಲದಿಂದ ಮೂರುಸಾವಿರ ವರ್ಷಗಳಿಂದಲೂ, ಪ್ರಾಣಧಾರಣೆಮಾಡಿದ್ದೀಯೆ. ಈಗ ನಿನಗೆ ಆ ದುಃಖಗಳ ನಿವೃತ್ತಿ ಯಾಗಿ ಸಂತೋಷವುಂಟಾಗಲಿ ಎಂದು ಶಿವನು ಹೇಳಲಾಗಿ,

೨೪. ಆ ಮಾತುಗಳನ್ನು ಕೇಳಿದ ಅಂಧಕನು ಭಯಭಕ್ತಿಗಳಿಂದ ನಮ್ರನಾಗಿ ನಡುಗುತ್ತಾ, ಮೊಳಕಾಲೂರಿ ಕುಳಿತು, ಭಗವಂತನಾದ ಪರಮೇಶ್ವರನೊಡನೆ ಹೀಗೆ ಹೇಳಿಕೊಂಡನು.

॥ ಅಂಧಕ ಉವಾಚ ॥

ಭಗವನ್ಯನ್ಮಯೋಕ್ತೋಽಸಿ ದೀನೋದೀನಃ ಪರಾತ್ಪರಃ ।
ಹರ್ಷಗದ್ಗದಯಾ ವಾಚಾ ಮಯಾ ಪೂರ್ವಂ ರಣಾಜಿರೇ ॥ ೨೫ ॥

ಯದ್ಯತ್ಕೃತಂ ವಿಮೂಢತ್ವಾತ್ಕರ್ಮ ಲೋಕೇಷು ಗರ್ಹಿತಂ ।
ಅಜಾನತಾ ತ್ವಾಂ ತತ್ಸರ್ವಂ ಪ್ರಭೋ ಮನಸಿ ಮಾ ಕೃಥಾಃ ॥ ೨೬ ॥

ಪಾರ್ವತ್ಯಾಮಪಿ ದುಷ್ಟಂ ಯತ್ಕಾಮದೋಷಾತ್ಕೃತಂ ಮಯಾ ।
ಕ್ಷಮ್ಯತಾಂ ಮೇ ಮಹಾದೇವ ಕೃಪಣೋ ದುಃಖಿತೋ ಭೃಶಂ ॥ ೨೭ ॥

ದುಃಖಿತಸ್ಯ ದಯಾ ಕಾರ್ಯಾ ಕೃಪಣಸ್ಯ ವಿಶೇಷತಃ ।
ದೀನಸ್ಯ ಭಕ್ತಿಯುಕ್ತಸ್ಯ ಭವತಾ ನಿತ್ಯಮೇವ ಹಿ ॥ ೨೮ ॥

ಸೋಽಹಂ ದೀನೋ ಭಕ್ತಿಯುಕ್ತ ಆಗತಶ್ಶರಣಂ ತವ ।
ರಕ್ಷ್ಯಾ ಮಯಿ ವಿಧಾತವ್ಯಾ ರಚಿತೋಽಯಂ ಮಯಾಂಜಲಿಃ ॥ ೨೯ ॥

---

೨೫. ಓ ಪೂಜ್ಯನಾದ ಪರಮೇಶ್ವರನೇ, ಹಿಂದೆ ಯುದ್ಧರಂಗದಲ್ಲಿ ಪರಾಪರ ಸ್ವರೂಪನೂ ದೀನೋದ್ಧಾರಕನೂ ಆದ ನಿನ್ನ ಎದುರಿನಲ್ಲಿ ಸಂತೋಷದಿಂದಲೂ, ಗರ್ವದಿಂದಲೂ ಎಷ್ಟೋ ಮಾತುಗಳನ್ನಾಡಿರುವೆನು.

೨೬. ಅಲ್ಲದೆ ಅಜ್ಞಾನದಿಂದ ಹಿಂದೆ ಎಷ್ಟೆಷ್ಟೋ ಪಾಪಕೃತ್ಯಗಳನ್ನೂ ಮಾಡಿರುವೆನು. ಓ ಪ್ರಭುವೇ, ಅವೆಲ್ಲವೂ ನನ್ನಿಂದ ತಿಳಿಯದೇ ಮಾಡಲ್ಪಟ್ಟವೆ. ಆದ್ದರಿಂದ ಅವೆಲ್ಲವನ್ನೂ ಮನಸ್ಸಿನಲ್ಲಿಡದೆ ಕ್ಷಮಿಸಿ ನನ್ನನ್ನು ರಕ್ಷಿಸು.

೨೭. ಓ ಪರಮೇಶ್ವರನೇ, ನಾನು ಜಗನ್ಮಾತೆಯಾದ ಪಾರ್ವತೀದೇವಿಯಲ್ಲಿ ಪಾಪಬುದ್ಧಿಯನ್ನು ತೋರಿಸಿದೆನು. ಅದು ನಿಜವಾಗಿಯೂ ತಪ್ಪೆಂದು ಈಗ ನಾನು ತಿಳಿದು ಅತ್ಯಂತ ದುಃಖಪಡುತ್ತಿದ್ದೇನೆ.

೨೮. ಈಗ ನಾನು ನನ್ನ ತಪ್ಪಿಗೆ ಪಶ್ಚಾತ್ತಾಪಪಡುತ್ತಿರುವೆನು. ದೀನನಾಗಿ ಭಕ್ತನಾಗಿರುವ ನನ್ನಮೇಲೆ ನೀನು ನಿಜವಾಗಿಯೂ ದಯೆಯನ್ನಿಡಬೇಕು. ಇದು ಭಕ್ತವತ್ಸಲನಾದ ನಿನ್ನ ಕರ್ತವ್ಯ.

೨೯. ನಾನು ಈಗ ದೀನನೂ ಭಕ್ತನೂ ಆಗಿ ನಿನ್ನ ಶರಣವನ್ನು ಹೊಂದಿದ್ದೇನೆ. ಈ ಸಮಯದಲ್ಲಿ ನನ್ನಮೇಲೆ ನೀನು ದಯೆಯನ್ನಿಡಬೇಕು. ಇಗೋ ನಿನಗೆವಂದನೆಯು.

ಇಯಂ ದೇವೀ ಜಗನ್ಮಾತಾ ಪರಿತುಷ್ಟಾ ಮಮೋಪರಿ ।
ಕ್ರೋಧಂ ವಿಹಾಯ ಸಕಲಂ ಪ್ರಸನ್ನಾ ಮಾಂ ನಿರೀಕ್ಷತಾಂ ॥ ೩೦ ॥

ಕ್ವಾಸ್ಯಾಃ ಕ್ರೋಧಃ ಕ್ವ ಕೃಪಣೋ ದೈತ್ಯೋಽಹಂ ಚಂದ್ರಶೇಖರ ।
ತತ್ಸೋಢಾ ನಾಹಮುದ್ಧರ್ಷಂದುಚೂಡ ಶಂಭೋ ಮಹೇಶ್ವರ ॥ ೩೧ ॥

ಕ್ವ ಭವಾನ್ಪರಮೋದಾರಃ ಕ್ವ ಚಾಹಂ ವಿವಶೀಕೃತಃ ।
ಕಾಮಕ್ರೋಧಾದಿಭಿರ್ದೋಷೈರ್ಜರಸಾ ಮೃತ್ಯುನಾ ತಥಾ ॥ ೩೨ ॥

ಅಯಂ ತೇ ವೀರಕಃ ಪುತ್ರೋ ಯುದ್ಧಶೌಂಡೋ ಮಹಾಬಲಃ ।
ಕೃಪಣಂ ಮಾಂ ಸಮಾಲಕ್ಷ್ಯ ಮಾ ಮನ್ಯುವಶಮನ್ವಗಾಃ ॥ ೩೩ ॥

ತುಷಾರಹಾರಶೀತಾಂಶುಶಂಖಕುಂದೇಂದುವರ್ಣಭಾಕ್ ।
ಪಶ್ಯೇಮಾಂ ಪಾರ್ವತೀಂ ನಿತ್ಯಂ ಮಾತರಂ ಗುರುಗೌರವಾತ್ ॥ ೩೪ ॥

---

೩೦. ಈ ಜಗನ್ಮಾತೆಯಾದ ಪಾರ್ವತಿಯು ನನ್ನ ಮೇಲೆ ಆಗ್ರಹವನ್ನು ಬಿಡಲಿ. ಹಿಂದಿನ ಕೋಪವನ್ನೆಲ್ಲಾ ದೂರಮಾಡಿ, ನನ್ನನ್ನು ಕೃಪಾದೃಷ್ಟಿಯಿಂದ ರಕ್ಷಿಸಲಿ.

೩೧. ಓ ಚಂದ್ರಶೇಖರನಾದ ಸ್ವಾಮಿಯೇ, ಈ ದೇವಿಯ ಕೋಪದ ಮುಂದೆ ರಾಕ್ಷಸನಾದ ನಾನು ಎಷ್ಟರವನು? ದೇವಿಯ ಕೋಪವನ್ನು ನಾನು ಖಂಡಿತವಾಗಿಯೂ ತಡೆಯಲಾರೆನು. ನನ್ನನ್ನು ರಕ್ಷಿಸು.

೩೨. ಉದಾರಸ್ವಭಾವದನಾದ ನೀನು ಎಲ್ಲಿ? ಕಾಮಕ್ರೋಧಾದಿ ಅರಿಷಡ್ವರ್ಗಗಳಿಗೂ, ಜರಾಮೃತ್ಯುಗಳಿಗೂ ಅಧೀನನಾಗಿರುವ ನಾನೆಲ್ಲಿ? ನಿನ್ನೊಡನೆ ಯಾವ ವಿಧದಲ್ಲಿಯೂ ನಾನು ಸರಿಸಮನಾಗಲಾರೆನು.

೩೩. ಈ ನಿನ್ನ ಪುತ್ರನಾದ ವೀರಕನು ಮಹಾಶೂರನು, ಯುದ್ಧವೀರನು. ಯುದ್ಧದಲ್ಲಿ ಕಾರ್ಪಣ್ಯ ವಹಿಸಿ ನಿಮಗೆ ಅಲಕ್ಷ್ಯನಾಗಿರುವ ನನ್ನ ಮೇಲೆ ನೀನು ಎಂದೂ ಕೋಪಿಸಿಕೊಳ್ಳಬೇಡ.

೩೪. ಇಗೋ ಇಲ್ಲಿ ಹಿಮರಾಶಿಯಂತೆಯೂ, ಮುಕ್ತಾಹಾರದಂತೆಯೂ, ಚಂದ್ರಮಂಡಲದಂತೆಯೂ, ಶಂಖ, ಕುಂದಪುಷ್ಪ ಇವುಗಳಂತೆಯೂ ಶುಭ್ರವಾಗಿ ಹೊಳೆಯುತ್ತಿರುವ ಪಾರ್ವತೀದೇವಿಯನ್ನು ನಾನು ತಾಯಿಯಂತೆ ಗೌರವಭಾವದಿಂದ ನೋಡುತ್ತೇನೆ.

ನಿತ್ಯಂ ಭವದ್ಭ್ಯಾಂ ಭಕ್ತಸ್ತು ನಿರ್ವೈರೋ ದೈವತೈಃ ಸಹ ।
ನಿವಸೇಯಂ ಗಣೈಸ್ಸಾರ್ಧಂ ಶಾಂತಾತ್ಮಾ ಯೋಗಚಿಂತಕಃ ॥ ೩೫ ॥

ಮಾ ಸ್ಮರೇಯಂ ಪುನರ್ಜಾತಂ ವಿರುದ್ಧಂ ದಾನವೋದ್ಭವಂ ।
ತ್ವತ್ಕೃಪಾತೋ ಮಹೇಶಾನ ದೇಹ್ಯೇತದ್ವರಮುತ್ತಮಂ ॥ ೩೬ ॥

॥ ಸನತ್ಕುಮಾರ ಉವಾಚ ॥

ಏತಾವದುಕ್ತ್ವಾ ವಚನಂ ದೈತ್ಯೇಂದ್ರೋ ಮೌನಮಾಸ್ಥಿತಃ ।
ಧ್ಯಾಯಂಸ್ತ್ರಿಲೋಚನಂ ದೇವಂ ಪಾರ್ವತೀಂ ಪ್ರೇಕ್ಷ್ಯ ಮಾ ತರಂ ॥ ೩೭ ॥

ತತೋ ದೃಷ್ಟಸ್ತು ರುದ್ರೇಣ ಪ್ರಸನ್ನೇನೈವ ಚಕ್ಷುಷಾ ।
ಸ್ಮೃತವಾನ್ಪೂರ್ವವೃತ್ತಾಂತಮಾತ್ಮನೋ ಜನ್ಮ ಚಾದ್ಭುತಂ ॥ ೩೮ ॥

ತಸ್ಮಿನ್ಸ್ಮೃತೇ ಚ ವೃತ್ತಾಂತೇ ತತಃ ಪೂರ್ಣಮನೋರಥಃ ।
ಪ್ರಣಮ್ಯ ಮಾತಾಪಿತರೌ ಕೃತಕೃತ್ಯೋಽಭವತ್ತತಃ ॥ ೩೯ ॥

---

೩೫. ಯಾವಾಗಲೂ ನಿಮ್ಮಿಬ್ಬರಿಗೂ ನಾನು ಭಕ್ತನಾಗಿರುವೆನು. ದೇವತೆಗಳೊಡನೆ ವೈರವನ್ನು ಬಿಡುವೆನು. ನಿನ್ನ ಪ್ರಮಥಗಣಗಳೊಂದಿಗೆ ಶಾಂತಮನಸ್ಸಿನಿಂದ ಯೋಗಾಭ್ಯಾಸಮಾಡುತ್ತಾ ವಾಸಮಾಡುವೆನು.

೩೬. ಓ ಮಹೇಶ್ವರನೇ, ಇನ್ನು ಮುಂದೆ ನಿನಗೆ ವಿರುದ್ಧವಾಗಿರುವ ಇಂತಹ ರಾಕ್ಷಸ ಜನ್ಮದಲ್ಲಿ ನನಗೆ ಉತ್ಪತ್ತಿಯನ್ನು ಕೊಡಬೇಡ. ಇದೇ ನೀನು ನನಗೆ ಕೊಡಬೇಕಾದ ವರವು ಎಂದನು.

೩೭. ಹೀಗೆ ಅಂಧಕನು ತನ್ನ ಮನೋಭೀಷ್ಟವನ್ನು ವಿವರಿಸಿ, ಪಾರ್ವತೀ ಪರಮೇಶ್ವರನನ್ನೇ ಧ್ಯಾನಿಸುತ್ತಾ ಮೌನವಾಗಿ ನಿಂತಿದ್ದನು.

೩೮. ಆಮೇಲೆ ಪರಮೇಶ್ವರನು ತನ್ನ ಪ್ರಸನ್ನವಾದ ದೃಷ್ಟಿಯನ್ನು ಅಂಧಕನ ಮೇಲೆ ಬೀರಲು, ಅದರ ಮಹಿಮೆಯಿಂದ ಅಂಧಕನ ಪೂರ್ವವೃತ್ತಾಂತವೆಲ್ಲವೂ ಅವನ ಸ್ಮರಣೆಗೆ ಬಂದಿತು.

೩೯. ಅವನಿಗೆ ಪೂರ್ವಸ್ಮರಣೆಯುಂಟಾಗಲೂ ತನ್ನ ನಿಜವಾದ ತಂದೆತಾಯಿಗಳೇ ಇವರು ಎಂದರಿತು, ತನ್ನ ಮಾತಾಪಿತೃಗಳಾದ ಪಾರ್ವತೀಪರಮೇಶ್ವರನನ್ನು ಭಕ್ತಿಯಿಂದ ವಂದಿಸಿದನು.

ಪಾರ್ವತ್ಯಾ ಮುಹೂರ್ಧ್ನ್ಯುಗ್ರಸಾಘ್ರಾತಶ್ಶಂಕರೇಣ ಚ ಧೀಮತಾ ।
ತಥಾಭಿಲಷಿತಂ ಲೇಭೇ ತುಷ್ಟಾದ್ಬಾಲೇಂದುಶೇಖರಾತ್ ॥ ೪೦ ॥

ಏತದ್ವಸ್ಸರ್ವಮಾಖ್ಯಾತಮಂಧಕಸ್ಯ ಪುರಾತನಂ ।
ಗಾಣಪತ್ಯಂ ಮಹಾದೇವಪ್ರಸಾದಾತ್ಪರಸೌಖ್ಯದಂ ॥ ೪೧ ॥

ಮೃತ್ಯುಂಜಯಶ್ಚ ಕಥಿತೋ ಮಂತ್ರೋ ಮೃತ್ಯುವಿನಾಶನಃ ।
ಪಠಿತವ್ಯಃ ಪ್ರಯತ್ನೇನ ಸರ್ವಕಾಮಫಲಪ್ರದಃ ॥ ೪೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಅಂಧಕಗಣಜೀವಿತಪ್ರಾಪ್ತಿವರ್ಣನಂ
ನಾಮ ಏಕೋನಪಂಚಾಶತ್ತಮೋಽಧ್ಯಾಯಃ

---

೪೦. ಇಷ್ಟು ವಿಧೇಯನಾದ ತಮ್ಮ ಪುತ್ರನನ್ನು ನೋಡಿ ಸಂತೋಷಪಟ್ಟು ಪಾರ್ವತೀಪರಮೇಶ್ವರರು ಅಂಧಕನ ಶಿರಸ್ಸನ್ನು ಆಘ್ರಾಣಿಸಿದರು. ಅವನಇಷ್ಟಾರ್ಥವು ಸಿದ್ಧಿಸಲೆಂದು ಪರಮೇಶ್ವರನು ವರವಿತ್ತನು.

೪೧. ಹೀಗೆ ಅಂಧಕನು ಪರಮೇಶ್ವರ ವರಬಲದಿಂದ ಗಣಗಳಿಗೆ ಒಡೆಯನಾದ ಎಲ್ಲಾ ವೃತ್ತಾಂತವನ್ನೂ ನಾನು ತಿಳಿಸಿರುವೆನು.

೪೨. ನಿಮಗೆ ಹಿಂದೆ ಹೇಳಿದ ಮತ್ಯುಂಜಯ ದೇವತಾಕವಾದ ಮಂತ್ರವು ಸರ್ವದಾ ಮೃತ್ಯುನಾಶಕವಾದದ್ದು. ಆದುದರಿಂದ ಸರ್ವರೂ ಇದನ್ನು ಪಠಿಸುತ್ತಿರಬೇಕು.

ಇಲ್ಲಿಗೆ ಶಿವಪುರಾಣದ ಎರಡನೆಯ ರುದ್ರಸಂಹಿತೆಯಲ್ಲಿ ಐದನೇ ಯುದ್ಧಖಂಡದಲ್ಲಿ ಅಂಧಕನು ಗಣಗಳಲ್ಲಿ ಸೇರಿದ ಕಥೆಯ ವರ್ಣನವೆಂಬ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

---

॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಾಷ್ಟೋತ್ತರ ಶತನಾಮಾವಳೀ

ಓಂ ದೇವೇಶಾಯ ನಮಃ
ಓಂ ಸುರಾಸುರನಮಸ್ಕೃತಾಯ ನಮಃ
ಓಂ ಭೂತಭವ್ಯಮಹಾದೇವಾಯ ನಮಃ
ಓಂ ಹರಿತಪಿಂಗಲಲೋಚನಾಯ ನಮಃ
ಓಂ ಬಲಾಯ ನಮಃ
ಓಂ ಬುದ್ಧಿರೂಪಿಣೇ ನಮಃ
ಓಂ ವೈಯಾಘ್ರವಸನಚ್ಛದಾಯ ನಮಃ
ಓಂ ಅರಣೇಯಾಯ ನಮಃ
ಓಂ ತ್ರೈಲೋಕ್ಯಪ್ರಭವೇ ನಮಃ
ಓಂ ಈಶ್ವರಾಯ ನಮಃ ೧೦
ಓಂ ಹರಾಯ ನಮಃ
ಓಂ ಹರಿನೇತ್ರಾಯ ನಮಃ
ಓಂ ಯುಗಾಂತಕರಣಾಯಾ-
ನಲಾಯ ನಮಃ
ಓಂ ಗಣೇಶಾಯ ನಮಃ
ಓಂ ಲೋಕಪಾಲಾಯ ನಮಃ
ಓಂ ಮಹಾಭುಜಾಯ ನಮಃ
ಓಂ ಮಹಾಹಸ್ತಾಯ ನಮಃ
ಓಂ ಶೂಲಿನೇ ನಮಃ
ಓಂ ಮಹಾದಂಷ್ಟ್ರಿಣೇ ನಮಃ
ಓಂ ಕಾಲಾಯ ನಮಃ ೨೦
ಓಂ ಮಹೇಶ್ವರಾಯ ನಮಃ
ಓಂ ಅವ್ಯಯಾಯ ನಮಃ
ಓಂ ಕಾಲರೂಪಿಣೇ ನಮಃ
ಓಂ ನೀಲಗ್ರೀವಾಯ ನಮಃ
ಓಂ ಮಹೋದರಾಯ ನಮಃ
ಓಂ ಗಣಾಧ್ಯಕ್ಷಾಯ ನಮಃ
ಓಂ ಸರ್ವಾತ್ಮನೇ ನಮಃ
ಓಂ ಸರ್ವಭಾವನಾಯ ನಮಃ
ಓಂ ಸರ್ವಗಾಯ ನಮಃ
ಓಂ ಮೃತ್ಯುಹಂತ್ರೇ ನಮಃ ೩೦
ಓಂ ಪರಿಯಾತ್ರಸುವ್ರತಾಯ ನಮಃ

---

ಸೂಚನೆ:— ಈ ಅಧ್ಯಾಯದಲ್ಲಿರುವ ಎರಡು ಅಷ್ಟೋತ್ತರ ಶತನಾಮಗಳನ್ನು ಸಾಧಕರ ಅನುಕೂಲಕ್ಕಾಗಿ ಚತುರ್ಥೀ ವಿಭಕ್ತಿಯಿಂದ ಕೂಡಿದ ನಾಮಗಳ ರೂಪದಲ್ಲಿ ಕೊಟ್ಟಿರುತ್ತೆ.

ಓಂ ಬ್ರಹ್ಮಚಾರಿಣೇ ನಮಃ
ಓಂ ವೇದಾಂತಗಾಯ ನಮಃ
ಓಂ ತಪೋಂತಗಾಯ ನಮಃ
ಓಂ ಪಶುಪತಯೇ ನಮಃ
ಓಂ ವ್ಯಂಗಾಯ ನಮಃ
ಓಂ ಶೂಲಪಾಣಯೇ ನಮಃ
ಓಂ ವೃಷಕೇತವೇ ನಮಃ
ಓಂ ಹರಯೇ ನಮಃ
ಓಂ ಜಟಿನೇ ನಮಃ ೪೦
ಓಂ ಶಿಖಂಡಿನೇ ನಮಃ
ಓಂ ಲಕುಟಿನೇ ನಮಃ
ಓಂ ಮಹಾಯಶಸೇ ನಮಃ
ಓಂ ಭೂತೇಶ್ವರಾಯ ನಮಃ
ಓಂ ಗುಹಾವಾಸಿನೇ ನಮಃ
ಓಂ ವೀಣಾಪಣವತಾಲವತೇ ನಮಃ
ಓಂ ಅಮರಾಯ ನಮಃ
ಓಂ ದರ್ಶನೀಯಾಯ ನಮಃ
ಓಂ ಬಾಲಸೂರ್ಯ ನಿಭಾಯ ನಮಃ
ಓಂ ಸ್ಮಶಾನವಾಸಿನೇ ನಮಃ ೫೦
ಓಂ ಭಗವತೇ ನಮಃ
ಓಂ ಉಮಾಪತಯೇ ನಮಃ
ಓಂ ಅರಿಂದಮಾಯ ನಮಃ
ಓಂ ಭಗಸ್ಯಾಕ್ಷಿಪಾತಿನೇ ನಮಃ
ಓಂ ಪೂಷ್ಣೋದಶನನಾಶನಾಯ ನಮಃ
ಓಂ ಕ್ರೂರಕರ್ತಕಾಯ ನಮಃ
ಓಂ ಪಾಶಹಸ್ತಾಯ ನಮಃ
ಓಂ ಪ್ರಲಯಕಾಲಾಯ ನಮಃ
ಓಂ ಉಲ್ಕಾಮುಖಾಯ ನಮಃ
ಓಂ ಅಗ್ನಿಕೇತವೇ ನಮಃ ೬೦
ಓಂ ಮುನಯೇ ನಮಃ
ಓಂ ದೀಪ್ತಾಯ ನಮಃ
ಓಂ ವಿಶಾಂಪತಯೇ ನಮಃ
ಓಂ ಉನ್ನಯತೇ ನಮಃ
ಓಂ ಜನಕಾಯ ನಮಃ
ಓಂ ಚತುರ್ಥಕಾಯ ನಮಃ
ಓಂ ಲೋಕಸತ್ತಮಾಯ ನಮಃ
ಓಂ ವಾಮದೇವಾಯ ನಮಃ
ಓಂ ವಾಗ್ದಾಕ್ಷಿಣ್ಯಾಯ ನಮಃ
ಓಂ ವಾಮತೋ ಭಿಕ್ಷವೇ ನಮಃ ೭೦
ಓಂ ಭಿಕ್ಷುರೂಪಿಣೇ ನಮಃ
ಓಂ ಜಟಿನೇ ನಮಃ
ಓಂ ಸ್ವಯಂ ಜಟಿಲಾಯ ನಮಃ
ಓಂ ಶಕ್ರಹಸ್ತಪ್ರತಿಸ್ತಂಭಕಾಯ ನಮಃ
ಓಂ ವಸೂನಾಂಸ್ತಂಭಕಾಯ ನಮಃ
ಓಂ ಕ್ರತವೇ ನಮಃ
ಓಂ ಕ್ರತುಕರಾಯ ನಮಃ
ಓಂ ಕಾಲಾಯ ನಮಃ
ಓಂ ಮೇಧಾವಿನೇ ನಮಃ
ಓಂ ಮಧುಕರಾಯ ನಮಃ ೮೦
ಓಂ ಚಲಾಯ ನಮಃ

ಓಂ ವಾನಸ್ಪತ್ಯಾಯ ನಮಃ
ಓಂ ವಾಜಸನೇತಿ ಸಮಾಶ್ರಮ-
ಪೂಜಿತಾಯ ನಮಃ
ಓಂ ಜಗದ್ಧಾತ್ರೇ ನಮಃ
ಓಂ ಜಗತ್ಕರ್ತ್ರೇ ನಮಃ
ಓಂ ಪುರುಷಾಯ ನಮಃ
ಓಂ ಶಾಶ್ವತಾಯ ನಮಃ
ಓಂ ಧ್ರುವಾಯ ನಮಃ
ಓಂ ಧರ್ಮಾಧ್ಯಕ್ಷಾಯ ನಮಃ
ಓಂ ತ್ರಿವರ್ತ್ಮನೇ ನಮಃ ೯೦
ಓಂ ಭೂತಭಾವನಾಯ ನಮಃ
ಓಂ ತ್ರಿನೇತ್ರಾಯ ನಮಃ
ಓಂ ಬಹುರೂಪಾಯ ನಮಃ
ಓಂ ಸೂರ್ಯಾಯುತಸಮಪ್ರಭಾಯನಮಃ
ಓಂ ದೇವಾಯ ನಮಃ
ಓಂ ಸರ್ವತೂರ್ಯನಿನಾದಿನೇ ನಮಃ
ಓಂ ಸರ್ವಬಾಧಾವಿಮೋಚನಾಯ ನಮಃ
ಓಂ ಬಂಧನಾಯ ನಮಃ
ಓಂ ಸರ್ವಧಾರಿಣೇ ನಮಃ
ಓಂ ಧರ್ಮೋತ್ತಮಾಯ ನಮಃ ೧೦೦
ಓಂ ಪುಷ್ಪದಂತಾಯಾ ನಮಃ
ಓಂ ಭಾಗಾಯ ನಮಃ
ಓಂ ಮುಖಾಯ ನಮಃ
ಓಂ ಸರ್ವಹರಾಯ ನಮಃ
ಓಂ ಹಿರಣ್ಯಶ್ರವಸೇ ನಮಃ
ಓಂ ದ್ವಾರಿಣೇ ನಮಃ
ಓಂ ಭೀಮಾಯ ನಮಃ
ಓಂ ಭೀಮಪರಾಕ್ರಮಾಯ ನಮಃ ೧೦೮

॥ ಇತಿ ಶ್ರೀ ಶಿವಾಷ್ಟೋತ್ತರಶತನಾಮಾವಳೀ ಸಮಾಪ್ತಾ ॥

॥ ಶ್ರೀ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀಶಿವಾಷ್ಟೋತ್ತರ ಶತನಾಮಾವಳೀ

( ಪ್ರಕಾರಾಂತರಾ )

ಓಂ ಮಹಾದೇವಾಯ ನಮಃ
ಓಂ ವಿರೂಪಾಕ್ಷಾಯ ನಮಃ
ಓಂ ಚಂದ್ರಾರ್ಧಕೃತಶೇಖರಾಯ ನಮಃ
ಓಂ ಅಮೃತಾಯ ನಮಃ
ಓಂ ಶಾಶ್ವತಾಯ ನಮಃ
ಓಂ ಸ್ಥಾಣವೇ ನಮಃ
ಓಂ ನೀಲಕಂಠಾಯ ನಮಃ
ಓಂ ಪಿನಾಕಿನೇ ನಮಃ
ಓಂ ವೃಷಭಾಕ್ಷಾಯ ನಮಃ
ಓಂ ಮಹಾಜ್ಞೇಯಾಯ ನಮಃ ೧೦
ಓಂ ಪುರುಷಾಯ ನಮಃ
ಓಂ ಸರ್ವಕಾಮದಾಯ ನಮಃ
ಓಂ ಕಾಮಾರಯೇ ನಮಃ
ಓಂ ಕಾಮದಹನಾಯ ನಮಃ
ಓಂ ಕಾಮರೂಪಾಯ ನಮಃ
ಓಂ ಕಪರ್ದಿನೇ ನಮಃ
ಓಂ ವಿರೂಪಾಯ ನಮಃ
ಓಂ ಗಿರಿಶಾಯ ನಮಃ
ಓಂ ಭೀಮಾಯ ನಮಃ
ಓಂ ಸೃಕ್ಕಿಣೇ ನಮಃ ೨೦
ಓಂ ರಕ್ತವಾಸಸೇ ನಮಃ
ಓಂ ಯೋಗಿನೇ ನಮಃ
ಓಂ ಕಾಲದಹನಾಯ ನಮಃ
ಓಂ ತ್ರಿಪುರಘ್ನಾಯ ನಮಃ
ಓಂ ಕಪಾಲಿನೇ ನಮಃ
ಓಂ ಗೂಢವ್ರತಾಯ ನಮಃ
ಓಂ ಗುಪ್ತಮಂತ್ರಾಯ ನಮಃ
ಓಂ ಗಂಭೀರಾಯ ನಮಃ
ಓಂ ಭಾವಗೋಚರಾಯ ನಮಃ
ಓಂ ಅಣಿಮಾದಿಗುಣಾಧಾರಾಯನಮಃ ೩೦
ಓಂ ತ್ರಿಲೋಕ್ಯೈಶ್ವರ್ಯದಾಯಕಾಯ ನಮಃ
ಓಂ ವೀರಾಯ ನಮಃ
ಓಂ ವಿರಹಿಣೇ ನಮಃ
ಓಂ ಘೋರಾಯ ನಮಃ
ಓಂ ವಿರೂಪಾಯ ನಮಃ
ಓಂ ಮಾಂಸಲಾಯ ನಮಃ

ಓಂ ಪಟವೇ ನಮಃ
ಓಂ ಮಹಾಮಾಂಸಾದಾಯ ನಮಃ
ಓಂ ಉನ್ಮತ್ತಾಯ ನಮಃ
ಓಂ ಭೈರವಾಯ ನಮಃ ೪೦
ಓಂ ಮಹೇಶ್ವರಾಯ ನಮಃ
ಓಂ ತ್ರೈಲೋಕ್ಯದ್ರಾವಣಾಯ ನಮಃ
ಓಂ ಲುಬ್ಧಾಯ ನಮಃ
ಓಂ ಲುಬ್ಧಕಾಯ ನಮಃ
ಓಂ ಯಜ್ಞಸೂದನಾಯ ನಮಃ
ಓಂ ಕೃತ್ತಿಕಾಸುತಯುಕ್ತಾಯ ನಮಃ
ಓಂ ಕೃತ್ತಿವಾಸಸೇ ನಮಃ.
ಓಂ ಗಜಕೃತ್ತಿಪರೀಧಾನಾಯ ನಮಃ
ಓಂ ಕ್ಷುಬ್ಧಾಯ ನಮಃ
ಓಂ ಭುಜಗಭೂಷಣಾಯ ನಮಃ ೫೦
ಓಂ ದತ್ತಾಲಂಬಾಯ ನಮಃ
ಓಂ ವೇತಾಲಾಯ ನಮಃ
ಓಂ ಘೋರಾಯ ನಮಃ
ಓಂ ಶಾಕಿನೀಪೂಜಿತಾಯ ನಮಃ
ಓಂ ಅಘೋರಾಯ ನಮಃ
ಓಂ ಘೋರದೈತ್ಯಘ್ನಾಯ ನಮಃ
ಓಂ ಘೋರಘೋಷಾಯ ನಮಃ
ಓಂ ವನಸ್ಪತಯೇ ನಮಃ
ಓಂ ಭಸ್ಮಾಂಗಾಯ ನಮಃ
ಓಂ ಜಟಿಲಾಯ ನಮಃ ೬೦
ಓಂ ಶುದ್ಧಾಯ ನಮಃ

ಓಂ ಭೇರುಂಡಶತಸೇವಿತಾಯ ನಮಃ
ಓಂ ಭೂತೇಶ್ವರಾಯ ನಮಃ
ಓಂ ಭೂತಪತಯೇ ನಮಃ
ಓಂ ಪಂಚಭೂತಾಶ್ರಿತಾಯ ನಮಃ
ಓಂ ಖಗಾಯ ನಮಃ
ಓಂ ಕ್ರೋಧಿತಾಯ ನಮಃ
ಓಂ ನಿಷ್ಠುರಾಯ ನಮಃ
ಓಂ ಚಂಡಾಯ ನಮಃ
ಓಂ ಚಂಡೀಶಾಯ ನಮಃ ೭೦
ಓಂ ಚಂಡಿಕಾಪ್ರಿಯಾಯ ನಮಃ
ಓಂ ಚಂಡಾಯ ನಮಃ
ಓಂ ತುಂಗಾಯ ನಮಃ
ಓಂ ಗರುತ್ಮತೇ ನಮಃ
ಓಂ ನಿತ್ಯಾಯ ನಮಃ
ಓಂ ಆಸವಭೋಜನಾಯ ನಮಃ
ಓಂ ಲೇಲಿಹಾನಾಯ ನಮಃ
ಓಂ ಮಹಾರೌದ್ರಾಯ ನಮಃ
ಓಂ ಮೃತ್ಯವೇ ನಮಃ
ಓಂ ಮೃತ್ಯೋರಗೋಚರಾಯ ನಮಃ ೮೦
ಓಂ ಮೃತ್ಯೋರ್ಮೃತ್ಯವೇ ನಮಃ
ಓಂ ಮಹಾಸೇನಾಯ ನಮಃ
ಓಂ ಶ್ಮಶಾನಾರಣ್ಯವಾಸಿನೇ ನಮಃ
ಓಂ ರಾಗಾಯ ನಮಃ
ಓಂ ವಿರಾಗಾಯ ನಮಃ
ಓಂ ರಾಗಾಂಧಾಯ ನಮಃ

ಓಂ ವೀತರಾಗಾಯ ನಮಃ

ಓಂ ಶತಾರ್ಚಿತಾಯ ನಮಃ

ಓಂ ಸತ್ತ್ವಾಯ ನಮಃ

ಓಂ ರಜಸೇ ನಮಃ ೯೦

ಓಂ ತಮಸೇ ನಮಃ

ಓಂ ಧರ್ಮಾಯ ನಮಃ

ಓಂ ಅಧರ್ಮಾಯ ನಮಃ

ಓಂ ವಾಸವಾನುಜಾಯ ನಮಃ

ಓಂ ಸತ್ಯಾಯ ನಮಃ

ಓಂ ಅಸತ್ಯಾಯ ನಮಃ

ಓಂ ಸದ್ರೂಪಾಯ ನಮಃ

ಓಂ ಅಸದ್ರೂಪಾಯ ನಮಃ

ಓಂ ಅಹೇತುಕಾಯ ನಮಃ

ಓಂ ಅರ್ಧನಾರೀಶ್ವರಾಯ ನಮಃ ೧೦೦

ಓಂ ಭಾನವೇ ನಮಃ

ಓಂ ಭಾನುಕೋಟಿಶತಪ್ರಭಾಯ ನಮಃ

ಓಂ ಯಜ್ಞಾಯ ನಮಃ

ಓಂ ಯಜ್ಞಪತಯೇ ನಮಃ

ಓಂ ರುದ್ರಾಯ ನಮಃ

ಓಂ ಈಶಾನಾಯ ನಮಃ

ಓಂ ವರದಾಯ ನಮಃ

ಓಂ ಶಿವಾಯ ನಮಃ ೧೦೮

॥ ಇತಿ ಶ್ರೀಶಿವಾಷ್ಟೋತ್ತರ ಶತನಾಮಾವಳೀ ಸಮಾಪ್ತಾ ॥

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಪಂಚಾಶತ್ತಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಯಥಾ ಪ್ರಾಪ್ತಾ ಮೃತ್ಯುಪ್ರಶಮನೀ ಪರಾ ।
ವಿದ್ಯಾ ಕಾವ್ಯೇನ ಮುನಿನಾ ಶಿವಾನ್ಮೃತ್ಯುಂಜಯಾಭಿಧಾತ್ ॥ ೧ ॥

ಪುರಾಸೌ ಭೃಗುದಾಯಾದೋ ಗತ್ವಾ ವಾರಾಣಸೀಂ ಪುರೀಂ ।
ಬಹುಕಾಲಂ ತಪಸ್ತೇಪೇ ಧ್ಯಾಯನ್ವಿಶ್ವೇಶ್ವರಂ ಪ್ರಭುಂ ॥ ೨ ॥

---

### ಐವತ್ತನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು !—ಓ ವ್ಯಾಸನೇ, ಮೃತ್ಯುಂಜಯನಾದ ಪರಮೇಶ್ವರನಿಂದ ಶುಕ್ರಾಚಾರ್ಯನಿಗೆ ಮೃತ್ಯುನಿವಾರಕವಾದ ಆ ಮಂತ್ರಶಕ್ತಿಯು ಹೇಗೆ ಬಂದಿತೆಂಬುದನ್ನು ಈಗ ಹೇಳುವೆನು ಕೇಳು.

೨. ಹಿಂದೆ ಒಂದುಸಾರಿ ಭೃಗುಪುತ್ರನಾದ ಶುಕ್ರಾಚಾರ್ಯನು ಕಾಶಿಯಲ್ಲಿ ವಿಶ್ವೇಶ್ವರನನ್ನು ಕುರಿತು ಬಹುಕಾಲ ತಪಸ್ಸುಮಾಡಿದನು.

ಸ್ಥಾಪಯಾಮಾಸ ತತ್ರೈವ ಲಿಂಗಂ ಶಂಭೋಃ ಪರಾತ್ಮನಃ ।
ಕೂಪಂ ಚಕಾರ ಸದ್ರಮ್ಯಂ ವೇದವಾಸ ತದಗ್ರತಃ ॥ ೩ ॥

ಪಂಚಾಮೃತೈರ್ದ್ರೋಣಮಿತೈರ್ಲಕ್ಷಕೃತ್ವಃ ಪ್ರಯತ್ನತಃ ।
ಸ್ನಾಪಯಾಮಾಸ ದೇವೇಶಂ ಸುಗಂಧಸ್ನಪನೈರ್ಬಹು ॥ ೪ ॥

ಸಹಸ್ರಕೃತ್ವೋ ದೇವೇಶಂ ಚಂದನೈರ್ಯಕ್ಷಕರ್ದಮೈಃ ।
ಸಮಾನಿಲಿಂಪ ಸುಪ್ರೀತ್ಯಾ ಸುಗಂಧೋದ್ವರ್ತನಾನ್ಯನು ॥ ೫ ॥

ರಾಜಚಂಪಕಧತ್ತೂರೈಃ ಕರವೀರಕುಶೇಶಯೈಃ ।
ಮಾಲತೀಕರ್ಣಿಕಾರೈಶ್ಚ ಕದಂಬೈರ್ಬಕುಲೋತ್ಪಲೈಃ ॥ ೬ ॥

ಮಲ್ಲಿಕಾಶತಪತ್ರೀಭಿಸ್ಸಿಂಧುವಾರೈಸ್ಸಕಿಂಶುಕೈಃ ।
ಬಂಧೂಕಪುಷ್ಪೈಃ ಪುನ್ನಾಗೈರ್ನಾಗಕೇಶರಕೇಶರೈಃ ॥ ೭ ॥

---

೩. ಅಲ್ಲಿಯೇ ಪರಮೇಶ್ವರನ ಒಂದು ಲಿಂಗವನ್ನು ಪ್ರತಿಷ್ಠೆಮಾಡಿದನು. ಆ ದೇವಾಲಯದ ಮುಂದೆ ಮನೋಹರವಾದ ಕೊಳವೊಂದನ್ನು ಅವನೇ ನಿರ್ಮಿಸಿದನು.

೪. ಆ ಲಿಂಗಕ್ಕೆ ಒಂದುಲಕ್ಷಸಾರಿ ಒಂದೊಂದು ಕೊಳಗದ ಅಳತೆಯಿಂದ ಸುಗಂಧಮಯವಾದ ಪಂಚಾಮೃತದ್ರವ್ಯಗಳಿಂದ ಅಭಿಷೇಕಮಾಡಿದನು.

೫. ಸುಗಂಧದ್ರವ್ಯಗಳಾದ ಚಂದನ, ಶ್ರೀಗಂಧ, ಇವೇ ಮೊದಲಾದುವುಗಳಿಂದ ಅನೇಕ ಸಾವಿರಸಾರಿ ಲಿಂಗವನ್ನು ಅಲಂಕರಿಸಿದನು.

೬-೧೧. ಆತನು ತಾನು ಪ್ರತಿಷ್ಠೆಮಾಡಿದ ಶಂಕರನ ಲಿಂಗಕ್ಕೆ, ರಾಜಸಂಪಿಗೆ, ದತ್ತೂರಿ, ಕಣಿಗಲೆ, ಕಮಲ, ಮಾಲತೀ, ಗಿರಿಕರ್ಣಿಕೆ, ಕದಂಬಪುಷ್ಪ, ಬಕುಲಪುಷ್ಪ, ಮಲ್ಲಿಗೆ, ನೈದಿಲೆ, ಕೆಂಪುಕಣಿಗಲೆ, ಮುತ್ತುಗ, ದಾಸವಾಳ, ಸುರಗಿ, ನಾಗಕೇಸರ, ಕಾಡುಮಲ್ಲಿಗೆ, ಕುಂದಪುಷ್ಪ, ಇರುವಂತಿಗೆ, ಮಂದಾರ, ಬಿಲ್ವಪತ್ರೆ, ತುಂಬೆಹೂವು, ಮರುಗ, ದವನ, ಮಾವಿನಚಿಗುರು, ತುಲಸೀ, ದೇವಗಾಂಧಾರೀ, ಬೃಹತ್ಪತ್ರ, ದರ್ಭೆ,

ನವಮಲ್ಲೀಚಿಬಿಲಿಕೈಃ ಕುಂದೈಸ್ಸಮುಚುಕುಂದಕೈಃ ।
ಮಂದಾರೈರ್ಬಿಲ್ವಪತ್ರೈಶ್ಚ ದ್ರೋಣೈರ್ಮರುವಕೈರ್ವಕೈಃ ।
ಗ್ರಂಥಿಪರ್ಣೈರ್ದಮನಕೈಃ ಸುರಮ್ಯೈಶ್ಚೂತಪಲ್ಲವೈಃ ॥ ೮ ॥

ತುಲಸೀದೇವಗಂಧಾರೀಬೃಹತ್ಪತ್ರೀಕುಶಾಂಕುರೈಃ ।
ನಂದ್ಯಾವರ್ತೈರಗಸ್ತ್ಯೈಶ್ಚ ಸಶಾಲೈರ್ದೇವದಾರುಭಿಃ ॥ ೯ ॥

ಕಾಂಚನಾರೈಃ ಕುರವಕೈರ್ದೂರ್ವಾಂಕುರಕುರುಂಟಕೈಃ ।
ಪ್ರತ್ಯೇಕಮೇಭಿಃ ಕುಸುಮೈಃ ಪಲ್ಲವೈರಪರೈರಪಿ ॥ ೧೦ ॥

ಪತ್ರೈಃ ಸಹಸ್ರಪತ್ರೈಶ್ಚ ರಮ್ಯೈರ್ನಾನಾವಿಧೈಶ್ಶುಭೈಃ ।
ಸಾವಧಾನೇನ ಸುಪ್ರೀತ್ಯಾ ಸ ಸಮಾನರ್ಚ ಶಂಕರಂ ॥ ೧೧ ॥

ಗೀತನೃತ್ಯೋಪಹಾರೈಶ್ಚ ಸಂಸ್ತುತಃ ಸ್ತುತಿಭಿರ್ಬಹು ।
ನಾಮ್ನಾಂ ಸಹಸ್ರೈರನ್ಯೈಶ್ಚ ಸ್ತೋತ್ರೈಸ್ತುಷ್ಟಾವ ಶಂಕರಂ ॥ ೧೨ ॥

ಸಹಸ್ರಂ ಪಂಚಶರದಾಮಿತ್ಥಂ ಶುಕ್ರೋ ಮಹೇಶ್ವರಂ ।
ನಾನಾಪ್ರಕಾರವಿಧಿನಾ ಮಹೇಶಂ ಸ ಸಮರ್ಚಯತ್ ॥ ೧೩ ॥

---

ನಂದಿಬಟ್ಟಲು, ಅಗಸ್ತ್ಯಪತ್ರ, ದೇವದಾರುಪುಷ್ಪ, ಸುವರ್ಣಪುಷ್ಪ, ಗೋರಂಟಹೂವು, ಹುಲ್ಲುಗರಿಕೆ, ಉತ್ತರಣೇ, ಇವೇ ಮೊದಲಾದ ಹೂವುಗಳಿಂದಲೂ ಪತ್ರೆಗಳಿಂದಲೂ ಪ್ರತ್ಯೇಕಪ್ರತ್ಯೇಕವಾಗಿ ಸಹಸ್ರನಾಮಾರ್ಚನೆಗಳನ್ನು ಮಾಡಿದನು. ಸಂಪೂರ್ಣವಾದ ಭಕ್ತಿಯಿಂದ ಹೀಗೆ ಶಿವನಿಗೆ ಅರ್ಚನೆಮಾಡಿದನು.

೧೨. ಗೀತ, ನೃತ್ಯ, ನಿವೇದನ, ಇವೇ ಮೊದಲಾದ ಕ್ರಿಯೆಗಳಿಂದಲೂ ನಾನಾವಿಧವಾದ ಸ್ತುತಿಪಾಠಗಳಿಂದಲೂ ಸಹಸ್ರನಾಮಾರ್ಚನೆಗಳಿಂದಲೂ ಪರಮೇಶ್ವರನನ್ನು ವಿಧವಿಧವಾಗಿ ತುಷ್ಟಿಪಡಿಸಿದನು.

೧೩. ಹೀಗೆ ಶುಕ್ರಾಚಾರ್ಯನು ಐದುಸಾವಿರವರ್ಷಗಳು ನಾನಾವಿಧವಾದ ರೀತಿಗಳಿಂದ ಪರಶಿವನನ್ನು ಆರಾಧಿಸಿದನು.

ಯದಾ ದೇವಂ ನಾನುಲೋಕೇ ಮನಾಗಪಿ ವರೋನ್ಮುಖಂ ।
ತದಾನ್ಯಂ ನಿಯಮಂ ಘೋರಂ ಜಗ್ರಾಹಾತೀವ ದುಸ್ಸಹಂ ॥ ೧೪ ॥

ಪ್ರಕ್ಷಾಲ್ಯ ಚೇತಸೋಽತ್ಯಂತಂ ಚಾಂಚಲ್ಯಾಖ್ಯಂ ಮಹಾಮಲಂ ।
ಭಾವನಾವಾರ್ಭಿರಸಕೃದಿಂದ್ರಿಯೈಸ್ಸಹಿತಸ್ಯ ಚ ॥ ೧೫ ॥

ನಿರ್ಮಲೀಕೃತ್ಯ ತಚ್ಚೇತೋರತ್ನಂ ದತ್ವಾ ಪಿನಾಕಿನೇ ।
ಪ್ರಯಯೌ ಕಣಧೂಮೌಘಂ ಸಹಸ್ರಂ ಶರದಾಂ ಕವಿಃ ॥ ೧೬ ॥

ಕಾವ್ಯಮಿತ್ಥಂ ತಪೋ ಘೋರಂ ಕುರ್ವಂತಂ ದೃಢಮಾನಸಂ ।
ಪ್ರಸಸಾದ ಸ ತಂ ವೀಕ್ಷ್ಯ ಭಾರ್ಗವಾಯ ಮಹೇಶ್ವರಃ ॥ ೧೭ ॥

ತಸ್ಮಾಲ್ಲಿಂಗಾದ್ವಿನಿರ್ಗತ್ಯ ಸಹಸ್ರಾರ್ಕಾಧಿಕದ್ಯುತಿಃ ।
ಉವಾಚ ತಂ ವಿರೂಪಾಕ್ಷಸ್ಸಾಕ್ಷಾದ್ದಾಕ್ಷಾಯಣೀಪತಿಃ ॥ ೧೮ ॥

---

೧೪. ಅಷ್ಟುಮಾಡಿದರೂ ಆ ದೇವನು ಶುಕ್ರನಿಗೆ ಪ್ರತ್ಯಕ್ಷವಾಗಲಿಲ್ಲ. ಆಗ ಅದಕ್ಕಿಂತ ಘೋರವಾದ ಕಷ್ಟತಮವಾದ ಮತ್ತೊಂದು ವಿಧಾನವನ್ನು ಅನುಸರಿಸಿದನು.

೧೫. ಮನಸ್ಸಿನಲ್ಲಿದ್ದ ಚಾಂಚಲ್ಯವೆಂಬ ಕೊಳೆಯುನ್ನು ಸದ್ಭಾವನೆಯೆಂಬ ನೀರಿನಿಂದ ತೊಳೆದು ಇಂದ್ರಿಯಗಳನ್ನು ಮೊದಲು ನಿಗ್ರಹಿಸಿಕೊಂಡನು.

೧೬. ಅಲ್ಲದೆ ಆ ತಪಃಕ್ರಿಯೆಯಲ್ಲಿ ಅರಿಷಡ್ವರ್ಗಗಳೆಂಬ ಧೂಳು, ಧೂಮ ಇವುಗಳಿಂದ ಕೂಡಿದ ತನ್ನ ಮನಸ್ಸೆಂಬ ರತ್ನವನ್ನು ಶುದ್ಧಿಮಾಡಿ ಆ ಪವಿತ್ರರತ್ನವನ್ನು ಪಿನಾಕಿಯಾದ ಪರಮೇಶ್ವರನಿಗೆ ಅರ್ಪಿಸಿದನು.

೧೭. ಈರೀತಿಯಾಗಿ ಶುಕ್ರನು ತಪಸ್ಸನ್ನು ಆಚರಿಸಲು ಆ ಉಗ್ರತಪಸ್ಸಿಗೆ ಮೆಚ್ಚಿ ಪರಮೇಶ್ವರನು ಶುಕ್ರನಿಗೆ ಅನುಗ್ರಹಮಾಡಿದನು.

೧೮. ಪರಶಿವನು ಅದೇ ಲಿಂಗದಿಂದ ಸಾವಿರ ಸೂರ್ಯರಂತೆ ಹೊಳೆಯುತ್ತಾ ಪ್ರತ್ಯಕ್ಷನಾದನು. ಮತ್ತು ಭಕ್ತನಾದ ಶುಕ್ರನನ್ನು ನೋಡಿ ಗೌರೀಪತಿಯಾದ ಶಿವನು ಹೀಗೆ ಹೇಳಿದನು.

॥ ಮಹೇಶ್ವರ ಉವಾಚ ॥
ತಪೋನಿಧೇ ಮಹಾಭಾಗ ಭೃಗುಪುತ್ರ ಮಹಾಮುನೇ ।
ತಪಸಾನೇನ ತೇ ನಿತ್ಯಂ ಪ್ರಸನ್ನೋऽಹಂ ವಿಶೇಷತಃ ॥ ೧೯ ॥

ಮನೋऽಭಿಲಷಿತಂ ಸರ್ವಂ ವರಂ ವರಯ ಭಾರ್ಗವ ।
ಪ್ರೀತ್ಯಾ ದಾಸ್ಯೇऽಖಿಲಾನ್ಕಾಮಾನ್ನಾದೇಯಂ ವಿದ್ಯತೇ ತವ ॥ ೨೦ ॥

॥ ಸನತ್ಕುಮಾರ ಉವಾಚ ॥
ನಿಶಮ್ಯೇತಿ ವಚಶ್ಶಂಭೋರ್ಮಹಾಸುಖಕರಂ ಪರಂ ।
ಸ ಬಭೂವ ಕವಿಸ್ತುಷ್ಟೋ ನಿಮಗ್ನಸ್ಸುಖವಾರಿಧೌ ॥ ೨೧ ॥

ಉದ್ಯದಾನಂದಸಂದೋಹರೋಮಾಂಚಾಂಚಿತವಿಗ್ರಹಃ ।
ಪ್ರಣನಾಮ ಮುದಾ ಶಂಭುಮಂಭೋಜನಯನೋ ದ್ವಿಜಃ ॥ ೨೨ ॥

ತುಷ್ಟಾವಾಷ್ಟತನುಂ ತುಷ್ಟಃ ಪ್ರಫುಲ್ಲನಯನಾಂಜಲಿಃ ।
ಮೌಲಾವಂಜಲಿಮಾಧಾಯ ವದನ್ ಜಯಜಯೇತಿ ಚ ॥ ೨೩ ॥

---

೧೯. ಎಲೈ ತಪಸ್ವಿಯಾದ ಭಾರ್ಗವನೇ, ನೀನು ತುಂಬಾ ಅದೃಷ್ಟಶಾಲಿಯು. ನಿನ್ನ ಈ ಘೋರತಪಸ್ಸಿಗೆ ಮೆಚ್ಚಿ ನಿನಗೆ ಪ್ರಸನ್ನನಾಗಿರುವೆನು.

೨೦. ನಿನ್ನ ಇಷ್ಟಾರ್ಥವೇನು ಕೇಳು. ನೀನು ಕೇಳಿದ್ದನ್ನೆಲ್ಲಾ ನಾನು ಈಗ ಸಂತೋಷದಿಂದ ಕೊಡುವೆನು. ನಿನಗೆ ಕೊಡಬಾರದಂತಹ ವರವೊಂದೂ ಇರುವುದಿಲ್ಲ. ಏನುಬೇಕಾದರೂ ಕೇಳು ಎಂದು ಶಂಕರನು ಹೇಳಲು,

೨೧. ಶಂಕರನ ಈ ಸುಖಪ್ರದವಾದ ಮಾತುಗಳನ್ನು ಶುಕ್ರನು ಕೇಳಿ ಬಹುವಾಗಿ ಸಂತೋಷಪಟ್ಟು ಸುಖವೆಂಬ ಸಮುದ್ರದಲ್ಲಿ ಮಗ್ನನಾದನು.

೨೨. ಅವನ ಸಂತೋಷವು ಉಕ್ಕಿಉಕ್ಕಿ ಬರುತ್ತಿತ್ತು. ದೇಹವೆಲ್ಲವೂ ರೋಮಾಂಚದಿಂದ ಪುಳಕಿತವಾಯಿತು. ಕಣ್ಣುಗಳು ಅರಳಿದುವು. ಕೊನೆಗೆ ಭಕ್ತಿಯಿಂದ ವಂದಿಸಿ ಆ ಪರಮೇಶ್ವರನ ಮುಂದೆ ನಿಂತು,

೨೩. ವಿಧವಿಧವಾದ ಸ್ತೋತ್ರಗಳಿಂದ ಆ ಶಂಭುವನ್ನು ತುಷ್ಟಿಗೊಳಿಸಿದನು. ವಿಶಾಲವಾದ ಕಣ್ಣುಳ್ಳವನಾಗಿ ತಲೆಯಮೇಲೆ ಅಂಜಲಿಯಿಟ್ಟು ಜಯಜಯಶಬ್ದಗಳಿಂದ ನಮಸ್ಕರಿಸಿದನು.

॥ ಭಾರ್ಗವ ಉವಾಚ ॥

ತ್ವಂ ಭಾಭಿರಾಭಿರಭಿಭೂಯ ತಮಸ್ಸಮಸ್ತ-
ಮಸ್ತಂ ನಯಸ್ಯಭಿಮತಾನಿ ನಿಶಾಚರಾಣಾಂ ।
ದೇದೀಪ್ಯಸೇ ದಿವಮಣೇ ಗಗನೇ ಹಿತಾಯ
ಲೋಕತ್ರಯಸ್ಯ ಜಗದೀಶ್ವರ ತನ್ನಮಸ್ತೇ ॥ ೨೪ ॥

ಲೋಕೇಽತಿವೇಲಮತಿವೇಲಮಹಾಮಹೋಭಿ-
ರ್ನಿರ್ಮಾಸಿ ಕೌ ಚ ಗಗನೇಽಖಿಲಲೋಕನೇತ್ರಃ ।
ವಿದ್ರಾವಿತಾಖಿಲತಮಾಸ್ಸುತನೋ ಹಿಮಾಂಶೋ
ಪೀಯೂಷಪೂರಪರಿಪೂರಿತ ತನ್ನಮಸ್ತೇ ॥ ೨೫ ॥

ತ್ವಂ ಪಾವನೇ ಪಥಿ ಸದಾ ಗತಿರಪ್ಯುಪಾಸ್ಯಃ
ಕಸ್ತ್ವಾಂ ವಿನಾ ಭುವನಜೀವನ ಜೀವತೀಹ ।
ಸ್ತಬ್ಧಪ್ರಭಂಜನವಿವರ್ಧಿತಸರ್ವಜಂತೋಃ
ಸಂತೋಷಿತಾಹಿಕುಲ ಸರ್ವಗ ವೈ ನಮಸ್ತೇ ॥ ೨೬ ॥

---

೨೪. ಓ ಪರಮೇಶ್ವರನೇ, ನೀನು ನಿನ್ನ ತೇಜಸ್ಸಿನಿಂದ ಲೋಕದ ಎಲ್ಲಾ ಕತ್ತಲೆಯನ್ನೂ ನಾಶಗೊಳಿಸಿರುವೆ. ಹಾಗೆಯೇ ರಾಕ್ಷಸರ ಇಷ್ಟಾರ್ಥಗಳನ್ನೆಲ್ಲಾ ವ್ಯರ್ಥವನ್ನಾಗಿ ಮಾಡಿರುವೆ. ಓ ಜಗದೀಶ್ವರನೇ, ನೀನು ಸೂರ್ಯನಂತೆ ಮೂರು ಲೋಕದ ಸಮಸ್ತ ಜನರಿಗೂ ಹಿತವನ್ನುಂಟುಮಾಡಲು ಉದ್ಯುಕ್ತನಾಗಿರುವೆ. ಇಂತಹ ನಿನಗೆ ನಮಸ್ಕಾರವು.

೨೫. ಓ ಅಮೃತಾತ್ಮನಾದ ಚಂದ್ರಶೇಖರನೇ, ನೀನು ನಿನ್ನ ಅತಿಶಯವಾದ ತೇಜಸ್ಸಿನಿಂದ ಭೂಮ್ಯಾಕಾಶಗಳಿಗೆ ಒಂದು ಕಣ್ಣಿನಂತೆ ಹೊಳೆಯುತ್ತಿರುವೆ. ಸಮಸ್ತ ಜನರ ಅಜ್ಞಾನವೆಂಬ ಕತ್ತಲೆಯನ್ನು ಚಂದ್ರನಂತೆ ಹೋಗಲಾಡಿಸುತ್ತಿರುವೆ. ಇಂತಹ ನಿನಗೆ ನಮಸ್ಕಾರವು.

೨೬. ನಿನ್ನನ್ನು ನೋಡಲು ಪರಿಶುದ್ಧವಾದ ಮಾರ್ಗವನ್ನೇ ಸರ್ವರೂ ಅವಲಂಬಿಸಬೇಕು. ನಿನ್ನ ದಯೆಯಿಲ್ಲದೆ ಲೋಕದಲ್ಲಿ ಯಾರೂ ಬದುಕುವಂತಿಲ್ಲ. ಪ್ರಾಣಿಗಳ ಹೃದಯದಲ್ಲಿ ಓಡಾಡುವ ಪ್ರಾಣವಾಯುವೂ ಸಹ ನೀನೇ. ನಾಗಲೋಕಗಳಿಗೆಲ್ಲಾ ಆನಂದವನ್ನುಂಟುಮಾಡುವ ಓ ಪರಮೇಶ್ವರನೇ, ನಿನಗೆ ವಂದನೆಯು.

ವಿಶ್ವೈಕಪಾವಕಕ ನತಾವಕ ಪಾವಕೈಕ-
ಶಕ್ತೇ ಋತೇ ಮೃತವತಾಮೃತದಿವ್ಯಕಾರ್ಯಂ ।
ಪ್ರಾಣಿಷ್ಯದೋ ಜಗದಹೋ ಜಗದಂತರಾತ್ಮಂ-
ಸ್ತ್ವಂ ಪಾವಕಃ ಪ್ರತಿಪದಂ ಶಮದೋ ನಮಸ್ತೇ ॥ ೨೭ ॥

ಪಾನೀಯರೂಪ ಪರಮೇಶ ಜಗತ್ಪವಿತ್ರ
ಚಿತ್ರಂ ವಿಚಿತ್ರಸುಚರಿತ್ರಕರೋಽಸಿ ನೂನಂ ।
ವಿಶ್ವಂ ಪವಿತ್ರಮಮಲಂ ಕಿಲ ವಿಶ್ವನಾಥ
ಪಾನೀಯಗಾಹನತ ಏತದತೋ ನತೋಽಸ್ಮಿ ॥ ೨೮ ॥

ಆಕಾಶರೂಪ ಬಹಿರಂತರುತಾವಕಾಶ-
ದಾನಾದ್ವಿಕಸ್ವರಮಿಹೇಶ್ವರವಿಶ್ವಮೇತತ್ ।
ತ್ವತ್ತಸ್ಸದಾ ಸದಯ ಸಂಶ್ವಸಿತಿ ಸ್ವಭಾವಾ-
ತ್ಸಂಕೋಚಮೇತಿ ಭವತೋಽಸ್ಮಿ ನತಸ್ತತಸ್ತ್ವಾಂ ॥ ೨೯ ॥

---

೨೭. ಲೋಕರಕ್ಷಕನೇ, ಭಕ್ತಜನೋದ್ಧಾರಿಯೇ, ನಿನ್ನ ಸಹಾಯವಿಲ್ಲದಿದ್ದರೆ ದೇವತೆಗಳು ಅಮೃತವನ್ನು ಹೇಗೆ ಹೊಂದುತ್ತಿದ್ದರು ? ಜಗತ್ತು ಉಸಿರಾಡುತ್ತಿದ್ದುದು ಹೇಗೆ ? ನೀನು ಜಗತ್ತಿನಲ್ಲೆಲ್ಲಾ ಅಡಗಿರುವ ಅಗ್ನಿ ಸ್ವರೂಪನು ಮತ್ತು ಶಾಂತಾತ್ಮನು. ಇಂತಹ ನಿನಗೆ ನಮಸ್ಕಾರವು.

೨೮. ಓ ಪರಮೇಶ್ವರನೇ, ನೀನು ಜಲರೂಪನು. ಜಗತ್ತನ್ನು ಜಲರೂಪ ದಿಂದ ಪವಿತ್ರಗೊಳಿಸುತ್ತಿರುವೆ. ನಿನ್ನ ಆ ಪವಿತ್ರೀಕರಣಕಾರ್ಯವು ಅತಿ ವಿಚಿತ್ರವಾಗಿದೆ. ಓ ವಿಶ್ವನಾಥನೇ, ನೀನು ಸಮಸ್ತ ಸಮುದ್ರದಲ್ಲಿಯೂ ವ್ಯಾಪಕನಾಗಿರುವ ಪರಶಿವನು. ಜಲಮಯನಾದ ನಿನಗೆ ವಂದನೆಯು.

೨೯. ಓ ಪರಮೇಶ್ವರನೇ, ನೀನು ಪ್ರಪಂಚದ ಒಳಗೂ ಹೊರಗೂ ಆಕಾಶರೂಪ ದಿಂದ ವ್ಯಾಪಿಸಿರುವೆ. ಶಬ್ದಗುಣಾತ್ಮಕವಾದ ಆ ಆಕಾಶದಲ್ಲಿ ಪ್ರಪಂಚವೆಲ್ಲವನ್ನೂ ಅಡಗಿ ಸಿರುವೆ. ನಿನ್ನ ಧ್ವನಿಯಿಂದ ಆಕಾಶವು ವಿಕಾಸವನ್ನು ಪಡೆದರೆ ಸಮಸ್ತ ಪ್ರಾಣಿಗಳು ಉಸಿರಾಡುತ್ತಿರುತ್ತವೆ. ಕಾಲವೈಪರೀತ್ಯದಿಂದ ನಿನ್ನ ಆಕಾಶರೂಪವಾದ ಈ ದೇಹವು ಸಂಕುಚಿತವಾದರೆ ಲೋಕಪ್ರಳಯವೇ ಆಗುವುದು. ಓ ಸ್ವಾಮಿಯೇ, ನಿನಗೆ ನಾನು ವಂದಿಸುವೆನು.

ವಿಶ್ವಂಭರಾತ್ಮಕ ಬಿಭರ್ಷಿ ವಿಭೋऽತ್ರ ವಿಶ್ವಂ
ಕೋ ವಿಶ್ವನಾಥ ಭವತೋऽನ್ಯತಮಸ್ತನೋರೀಃ ।
ಸ ತ್ವಂ ವಿನಾಶಯ ತಮೋ ಮಮ ಚಾಹಿಭೂಷ-
ಸ್ತವ್ಯಾತ್ಪರಃ ಪರಪರಂ ಪ್ರಣತಸ್ತತಸ್ತ್ವಾಂ　　॥ ೩೦ ॥

ಆತ್ಮಸ್ವರೂಪ ತವ ರೂಪಪರಂಪರಾಭಿ-
ರಾಭಿಸ್ತತಂ ಹರ ಚರಾಚರರೂಪಮೇತತ್ ।
ಸರ್ವಾಂತರಾತ್ಮನಿಲಯಪ್ರತಿರೂಪರೂಪ
ನಿತ್ಯಂ ನತೋऽಸ್ಮಿ ಪರಮಾತ್ಮಜನೋऽಷ್ಟಮೂರ್ತೇ　　॥ ೩೧ ॥

ಇತ್ಯಷ್ಟಮೂರ್ತಿಭಿರಿಮಾಭಿರಬಂಧಬಂಧೋ
ಯುಕ್ತೋ ಕರೋಷಿ ಖಲು ವಿಶ್ವಜನೀನಮೂರ್ತೇ ।
ಏತತ್ತತಂ ಸುವಿತತಂ ಪ್ರಣತಪ್ರಣೀತ
ಸರ್ವಾರ್ಥಸಾರ್ಥಪರಮಾರ್ಥ ತತೋ ನತೋऽಸ್ಮಿ　　॥ ೩೨ ॥

---

೩೦. ಭೂರೂಪಧಾರಿಯಾದ ಓ ಜಗನ್ನಿಯಾಮಕನೇ, ನಿನ್ನಂತೆ ಜಗತ್ತನ್ನು ಶತ್ರುಗಳ ಬಾಧೆಯಿಂದ ರಕ್ಷಿಸುವ ಧೀರನು ಮತ್ತಾರು ? ಎಲೈ ದೇವದೇವನೇ, ನನ್ನ ದೇಹದಲ್ಲಿ ಅಡಗಿರುವ ತಮೋಗುಣವನ್ನು ನಾಶಮಾಡು. ನಿನ್ನನ್ನು ನಾನಾವಿಧವಾದ ಸ್ತುತಿಗಳಿಂದ ಪ್ರಾರ್ಥಿಸಿ ನಮಸ್ಕರಿಸುವೆನು.

೩೧. ನಿನ್ನ ರೂಪಗಳು ಅನಂತಾನಂತವಾದವುಗಳು. ಈ ಅನೇಕ ರೂಪಗಳಿಂದ ಚರಾಚರವಸ್ತುಗಳಲ್ಲಿ ನೀನು ಅಡಗಿರುತ್ತೀಯೆ. ಎಲ್ಲರ ಹೃದಯದಲ್ಲಿಯೂ ಅಡಗಿರುವ ಆತ್ಮಸ್ವರೂಪನೇ ನೀನು. ಇಂತಹ ಅಷ್ಟಮೂರ್ತ್ಯಾತ್ಮಕನಾದ ನಿನ್ನನ್ನು ನಾನು ಶಿರಸಾ ವಂದಿಸುವೆನು.

೩೨. ಈ ವಿಧವಾದ ಅಷ್ಟದೇಹಗಳುಳ್ಳವನಾಗಿದ್ದರೂ ಯಾವವಿಧವಾದ ಬಂಧನಗಳಿಗೂ ಸಿಲುಕದೆ ಪ್ರಪಂಚದಲ್ಲಿ ಖ್ಯಾತನಾಗಿದ್ದೀಯೆ ಓ ಭಕ್ತರಕ್ಷಕನೇ, ನೀನು ಭಕ್ತರಿಗೆ ಸರ್ವಾರ್ಥಗಳನ್ನೂ ಒದಗಿಸುವುದರಲ್ಲಿ ಆಸಕ್ತನಾಗಿರುವೆ. ಈ ನಿನ್ನ ಗುಣಗಳು ಜಗದ್ವಿಖ್ಯಾತಗಳಾಗಿವೆ. ಇಂತಹ ನಿನ್ನನ್ನು ನಾನು ನಮಸ್ಕರಿಸುವೆನು.

॥ ಸನತ್ಕುಮಾರ ಉವಾಚ ॥

ಅಷ್ಟಮೂರ್ತ್ಯಷ್ಟಕೇನೇತ್ಥಂ ಪರಿಷ್ಟುತ್ಯೇತಿ ಭಾರ್ಗವಃ ।
ಭರ್ಗಂ ಭೂಮಿಮಿಲನ್ಮೌಲಿಃ ಪ್ರಣನಾಮ ಪುನಃ ಪುನಃ ॥ ೩೩ ॥

ಇತಿ ಸ್ತುತೋ ಮಹಾದೇವೋ ಭಾರ್ಗವೇಣಾತಿತೇಜಸಾ ।
ಉತ್ಥಾಪ್ಯ ಭೂಮೇರ್ಬಾಹುಭ್ಯಾಂ ಧೃತ್ವಾ ತಂ ಪ್ರಣತಂ ದ್ವಿಜಂ ॥ ೩೪ ॥

ಉವಾಚ ಶ್ಲಕ್ಷ್ಣಯಾ ವಾಚಾ ಮೇಘನಾದಗಭೀರಯಾ ।
ಸುಪ್ರೀತ್ಯಾ ದಶನಜ್ಯೋತ್ಸ್ನಾ ಪ್ರದ್ಯೋತಿತದಿಗಂತರಃ ॥ ೩೫ ॥

॥ ಮಹಾದೇವ ಉವಾಚ ॥

ವಿಪ್ರವರ್ಯ ಕವೇ ತಾತ ಮಮ ಭಕ್ತೋಽಸಿ ಪಾವನಃ ।
ಅನೇನಾತ್ಯುಗ್ರತಪಸಾ ಸ್ವಚರಿತೇನ ಚ ॥ ೩೬ ॥

---

೩೩. ಹೀಗೆ ಶುಕ್ರನು ಎಂಟು ಶ್ಲೋಕಗಳಿಂದ ಎಂಟುವಿಧವಾದ ದೇಹಗಳುಳ್ಳ ಅಷ್ಟಮೂರ್ತಿಸ್ವರೂಪನಾದ ಪರಶಿವನನ್ನು ಸ್ತುತಿಸಿದನು. ಅಲ್ಲದೆ ಬಾರಿಬಾರಿಗೂ ಸಾಷ್ಟಾಂಗನಮಸ್ಕಾರಗಳನ್ನು ಮಾಡುತ್ತಾ ಪರಮೇಶ್ವರನನ್ನು ತನ್ನ ಭಕ್ತಿಯಿಂದ ತೃಪ್ತಿಗೊಳಿಸಿದನು.

೩೪-೩೫. ಹೀಗೆ ಶುಕ್ರನು ನಾನಾವಿಧವಾಗಿ ಸ್ತುತಿಸಿ ಭೂಮಿಯಮೇಲೆ ನಮಸ್ಕರಿಸಿ ಮಲಗಿರುವ ಆ ಶುಕ್ರಾಚಾರ್ಯನನ್ನು ಸಾಕ್ಷಾನ್ಮಹಾದೇವನೇ, ತನ್ನ ಎರಡು ತೋಳುಗಳಿಂದಲೂ ಮೇಲಕ್ಕೆ ಎತ್ತಿದನು. ಅಲ್ಲದೆ ತನ್ನ ಶುಭ್ರವಾದ ದಂತಪಂಕ್ತಿಗಳ ಕಾಂತಿಯು ಬೆಳಗುತ್ತಿರಲು, ಮೇಘದಂತೆ ಗಂಭೀರವಾದ ಧ್ವನಿಯಿಂದ ದಿಗಂಬರನಾದ ಪರಮೇಶ್ವರನು ಆ ಶುಕ್ರಾಚಾರ್ಯನನ್ನು ಕುರಿತು,

೩೬. ಎಲೈ ಶುಕ್ರಾಚಾರ್ಯನೇ, ನಿನ್ನ ಉಗ್ರತಪಸ್ಸಿನಿಂದಲೂ ಭಕ್ತಿಯುತವಾದ ಆಚರಣೆಯಿಂದಲೂ ನೀನು ನನ್ನ ಪರಮಭಕ್ತನಾಗಿರುವೆ.

ಲಿಂಗಸ್ಥಾಪನಪುಣ್ಯೇನ ಲಿಂಗಸ್ಯಾಗಧನೇನ ಚ ।
ದತ್ತಚಿತ್ತೋಪಹಾರೇಣ ಶುಚಿನಾ ನಿಶ್ಚಲೇನ ಚ ॥ ೩೭ ॥

ಅವಿಮುಕ್ತಮಹಾಕ್ಷೇತ್ರಪರಿತ್ರಾಚರಣೇನ ಚ ।
ತ್ವಾಂ ಸುತಾಭ್ಯಾಂ ಪ್ರಪಶ್ಯಾಮಿ ತವಾದೇಯಂ ನ ಕಿಂಚನ ॥ ೩೮ ॥

ಅನೇನೈವ ಶರೀರೇಣ ಮಮೋದರದರೀಗತಃ ।
ಮದ್ವರೇಂದ್ರಿಯಮಾರ್ಗೇಣ ಪುತ್ರಜನ್ಮತ್ವಮೇಷ್ಯಸಿ ॥ ೩೯ ॥

ಯಚ್ಚಾಪ್ಯಹಂ ವರಂ ತೇಽದ್ಯ ದುಷ್ಪ್ರಾಪ್ಯಂ ಪಾರ್ಷದೈರಪಿ ।
ಹರೇರ್ಹಿರಣ್ಯಗರ್ಭಾಚ್ಚ ಪ್ರಾಯಶೋಽಹಂ ಜುಗೋಪ ಯಂ ॥ ೪೦ ॥

ಮೃತಸಂಜೀವಿನೀ ನಾಮ ವಿದ್ಯಾ ಯಾ ಮಮ ನಿರ್ಮಲಾ ।
ತಪೋಬಲೇನ ಮಹತಾ ಮಯೈವ ಪರಿನಿರ್ಮಿತಾ ॥ ೪೧ ॥

---

೩೭. ನೀನು ಲಿಂಗವನ್ನು ಪ್ರತಿಷ್ಠಿಸಿದುದೂ, ಅದೇ ಲಿಂಗವನ್ನು ನೀನು ಆರಾಧಿಸಿದುದೂ, ನಿನ್ನ ನಿಶ್ಚಲವಾದ ಭಕ್ತಿಯನ್ನು ನನಗೆ ತೋರ್ಪಡಿಸಿದುದೂ ನನ್ನ ಮನಸ್ಸನ್ನು ಆಕರ್ಷಿಸಿವೆ.

೩೮. ಒಂದು ಮಹಾಕ್ಷೇತ್ರವನ್ನು ನಿರ್ಮಿಸಿ ಅದರ ಮೂಲಕ ನೀನು ಅಗಾಧ ಕಾರ್ಯವನ್ನು ಮಾಡಿರುವೆ. ಆದ್ದರಿಂದ ನಿನ್ನನ್ನು ಇನ್ನುಮುಂದೆ ನನ್ನ ಎರಡು ಮಕ್ಕಳಿಗೆ ಸಮನೆಂದು ಅರಿಯುವೆನು.

೩೯. ಅದೂ ಅಲ್ಲದೆ ನನ್ನ ಮುಖ್ಯ ಅಂಗದಿಂದಲೇ ನೀನು ಈಗ ಜನಿಸಿರುವೆ. ನನ್ನ ಇಂದ್ರಿಯದಿಂದಲೇ ಜನಿಸಿರುವ ನಿನ್ನನ್ನು ನನ್ನ ಪುತ್ರನೆಂದು ಹೇಳಲು ಅಡ್ಡಿಯೇನಿರುವುದು ? ನಿನಗೆ ಕೊಡಬಾರದ ವರವು ಯಾವುದೂ ಇಲ್ಲ.

೪೦. ಸಮಸ್ತ ದೇವತೆಗಳಿಗೂ ದುರ್ಲಭವಾದ ವರವನ್ನು ಈಗ ನಿನಗೆ ಕೊಡುವೆನು. ಈ ವರವನ್ನು ಹರಿ, ಬ್ರಹ್ಮ ಮೊದಲಾದ ಮಹಾ ದೇವತೆಗಳಿಗೂ ಸಹ ನಾನು ಇಲ್ಲಿನವರೆಗೂ ಕೊಡದೆ ನನ್ನಲ್ಲಿಯೇ ರಕ್ಷಿಸಿ ಇಟ್ಟುಕೊಂಡಿರುವೆನು.

೪೧. ಮೃತಸಂಜೀವನಿಯೆಂಬ ಒಂದು ವಿದ್ಯೆಯುಂಟು. ಅದು ಬಹಳ ಪವಿತ್ರವಾದ ವಿದ್ಯೆಯು. ಅದನ್ನು ನಾನು ಸಂಪಾದಿಸಲು ಘೋರವಾದ ತಪಸ್ಸನ್ನು ಮಾಡಿ ತನ್ಮೂಲಕವಾದ ಪುಣ್ಯಪರಿಪಾಕದಿಂದ ಈ ಮೃತಸಂಜೀವಿನಿಯನ್ನು ನಾನು ಸೃಷ್ಟಿಸಿರುವೆನು.

ತ್ವಾಂ ತಾಂ ತು ಪ್ರಾಪಯಾಮ್ಯದ್ಯ ಮಂತ್ರರೂಪಾಂ ಮಹಾಶುಚೇ ।
ಯೋಗ್ಯತಾ ತೇऽಸ್ತಿ ವಿದಾಯಾಸ್ತಸ್ಯಾಶ್ಶುಚಿತಪೋನಿಧೇ ॥ ೪೨ ॥

ಯಂ ಯಮುದ್ದಿಶ್ಯ ನಿಯತಮೇತಾಮಾವರ್ತಯಿಷ್ಯಸಿ ।
ವಿದ್ಯಾಂ ವಿದ್ಯೇಶ್ವರಶ್ರೇಷ್ಠಂ ಸತ್ಯಂ ಪ್ರಾಣಿಷ್ಯಸಿ ಧ್ರುವಂ ॥ ೪೩ ॥

ಅತ್ಯರ್ಕಮತ್ಯಗ್ನಿ ಚ ತೇ ತೇಜೋ ವ್ಯೋಮ್ನಿ ಚ ತಾರಕಂ ।
ದೇದೀಪ್ಯಮಾನಂ ಭವಿತಾ ಗ್ರಹಾಣಾಂ ಪ್ರವರೋ ಭವ ॥ ೪೪ ॥

ಅಭಿ ಚ ತ್ವಾಂ ಕರಿಷ್ಯಂತಿ ಯಾತ್ರಾಂ ನಾರ್ಯೋ ನರೋऽಪಿ ವಾ ।
ತೇಷಾಂ ತ್ವದ್ದೃಷ್ಟಿಪಾತೇನ ಸರ್ವಕಾಯ ಪ್ರಣಶ್ಯತಿ ॥ ೪೫ ॥

ತವೋದಯೇ ಭವಿಷ್ಯಂತಿ ವಿವಾಹಾದೀನಿ ಸುವ್ರತ ।
ಸರ್ವಾಣಿ ಧರ್ಮಕಾರ್ಯಾಣಿ ಫಲವಂತಿ ನೃಣಾಮಿಹ ॥ ೪೬ ॥

---

೪೨. ಅಂತಹ ಪವಿತ್ರವಿದ್ಯೆಯನ್ನು ಈಗ ನಿನಗೆ ಉಪದೇಶಮಾಡುವೆನು. ಅದು ಮಂತ್ರರೂಪವಾಗಿದೆ. ನೀನು ಶುಚಿಯಾದ ತಪಸ್ವಿಯಾಗಿರುವುದರಿಂದಲೇ ಅಂತಹ ವಿದ್ಯೆಗೆ ನೀನು ಅರ್ಹನಾದವನೆಂದು ತಿಳಿದು ನಿನಗೆ ಬೋಧಿಸುವೆನು.

೪೩. ಈ ವಿಧ್ಯೆಯ ಫಲವೇನೆಂದರೆ ಮೃತನಾಗಿರುವ ಒಂದು ವ್ಯಕ್ತಿಗಾಗಿ ಈ ಮಂತ್ರವನ್ನು ಪುನಶ್ಚರಣೆಯಿಂದ ಪಠಿಸಿದರೆ ಈ ವಿದ್ಯಾಪ್ರಭಾವದಿಂದ ಆ ಮೃತ ವ್ಯಕ್ತಿಯು ಒಡನೆಯೇ ಎದ್ದು ಕೂರುವುದು. ಇದೇ ಈ ವಿದ್ಯಾಮಹಿಮೆ;

೪೪. ನೀನು ಇನ್ನು ಮುಂದೆ ಅಂತರಿಕ್ಷದಲ್ಲಿ ನಕ್ಷತ್ರದಂತೆ ಹೊಳೆಯುವೆ. ಆ ನಿನ್ನ ಕಾಂತಿಯು ಸೂರ್ಯನ ಮತ್ತು ಅಗ್ನಿಯ ಕಾಂತಿಯನ್ನೂ ಸಹ ಮೀರಿಸುವುದು. ನೀನು ಕಾಂತಿಯಲ್ಲಿ ಎಲ್ಲಾ ಗ್ರಹಗಳನ್ನೂ ಮೀರಿಸಿ ಗ್ರಹಶ್ರೇಷ್ಠನಾಗುವೆ.

೪೫. ಹೆಂಗಸರಾಗಲಿ ಗಂಡಸರಾಗಲಿ ನಿನ್ನ ದೃಷ್ಟಿಯನ್ನು ಪಡೆದು ಪ್ರಯಾಣ ಮಾಡಿದರೆ ಅವರು ಪ್ರಯಾಣಕಾಲದಲ್ಲಿ ಸರ್ವವಿಘ್ನಗಳನ್ನೂ ಕಳೆದು ಸುಖಿಗಳಾಗುವರು.

೪೬. ನೀನು ಸೂರ್ಯಸಾನ್ನಿಧ್ಯದಿಂದ ಉದಯವಾದಾಗ ಸಮಸ್ತಜನರ ವಿವಾಹವೇ ಮೊದಲಾದ ಶುಭಕಾರ್ಯಗಳೂ ಧರ್ಮಕಾರ್ಯಗಳೂ ಪ್ರಶಸ್ತ ಫಲವುಳ್ಳವುಗಳಾವುವು.

ಸರ್ವಾಶ್ಚ ತಿಥಯೋ ನಂದಾಸ್ತವ ಸಂಯೋಗತಶ್ಶುಭಾಃ ।
ತವ ಭಕ್ತಾ ಭವಿಷ್ಯಂತಿ ಬಹುಶುಕ್ರಾ ಬಹುಪ್ರಜಾಃ ॥ ೪೭ ॥

ತ್ವಯೇದಂ ಸ್ಥಾಪಿತಂ ಲಿಂಗಂ ಶುಕ್ರೇಶಮಿತಿ ಸಂಜ್ಞಿತಂ ।
ಯೇಽರ್ಚಯಿಷ್ಯಂತಿ ಮನುಜಾಸ್ತೇಷಾಂ ಸಿದ್ಧಿರ್ಭವಿಷ್ಯತಿ ॥ ೪೮ ॥

ಆವರ್ಷಂ ಪ್ರತಿಘಸ್ರಾಂ ಯೇ ನಕ್ತವ್ರತಪರಾಯಣಾಃ ।
ತ್ವದ್ದಿನೇ ಶುಕ್ರಕೂಪೇ ಯೇ ಕೃತಸರ್ವೋದಕಕ್ರಿಯಾಃ ॥ ೪೯ ॥

ಶುಕ್ರೇಶಮರ್ಚಯಿಷ್ಯಂತಿ ಶೃಣು ತೇಷಾಂ ತು ಯತ್ಫಲಂ ।
ಅವಧ್ಯಶುಕ್ರಾಸ್ತೇ ಮರ್ತ್ಯಾಃ ಪುತ್ರವಂತೋಽತಿರೇತಸಃ ॥ ೫೦ ॥

ಪುಂಸ್ತ್ವಸೌಭಾಗ್ಯಸಂಪನ್ನಾ ಭವಿಷ್ಯಂತಿ ನ ಸಂಶಯಃ ।
ವ್ಯಪೇತವಿದ್ಯಾಸ್ತೇ ಸರ್ವೇ ಜನಾಸ್ಸ್ಯುಃ ಸುಖಭಾಗಿನಃ ॥ ೫೧ ॥

---

೪೭. ಎಲ್ಲಾ ತಿಥಿಗಳೂ ನಿನ್ನ ವಾರಸಂಬಂಧದಿಂದಲೇ ಪ್ರಶಸ್ತವಾಗುತ್ತವೆ. ಆ ತಿಥಿಯಲ್ಲಿ ನಡೆದ ಸಕಲ ಕಾರ್ಯಗಳೂ ನಿನ್ನ ಭಕ್ತರಾದ ಜನರಿಗೆ ಹೆಚ್ಚಿನ ಶಕ್ತಿಯನ್ನೂ ಪುತ್ರಸಂಪತ್ತನ್ನೂ ಒದಗಿಸಿಕೊಡುತ್ತವೆ.

೪೮. ನೀನು ಈಗ ಪ್ರತಿಷ್ಠೆಮಾಡಿರುವ ಲಿಂಗಕ್ಕೆ ಶುಕ್ರೇಶನೆಂಬ ಹೆಸರು ಬರಲಿ. ಯಾರು ಈ ಲಿಂಗವನ್ನು ಭಕ್ತಿಯಿಂದ ಅರ್ಚಿಸುವರೋ ಅವರು ಸಕಲ ಸಿದ್ಧಿಗಳನ್ನೂ ಪಡೆಯುವರು.

೪೯. ಪ್ರತಿದಿನವೂ ಯಾರು ನಕ್ತವ್ರತಪರಾಯಣರಾಗಿದ್ದು ವರ್ಷಾಂತ್ಯದ ನಿನ್ನ ಶುಕ್ರವಾರದಲ್ಲಿ ನಿನ್ನಿಂದ ನಿರ್ಮಿತವಾಗಿರುವ ಈ ಬಾವಿಯಲ್ಲಿ ಸ್ನಾನವೇ ಮೊದಲಾದ ನಿತ್ಯಕರ್ಮಗಳನ್ನು ಅನುಷ್ಠಾನಮಾಡಿ,

೫೦. ಆ ದಿನವೇ ಈ ಶುಕ್ರೇಶನನ್ನು ಯಾರು ಭಕ್ತಿಯಿಂದ ಪೂಜಿಸುವರೋ ಅವರು ಯಾರಿಂದಲೂ ನಾಶವಾಗದಂತಹ ಶಕ್ತಿಯನ್ನು ಪಡೆದು ಬಹುಪುತ್ರವಂತರಾಗುವರು. ಅತಿಯಾದ ವೀರ್ಯವುಳ್ಳವರಾಗಿಯೂ ಶೋಭಿಸುವರು.

೫೧. ಅದೂ ಅಲ್ಲದೆ ಆ ನಿನ್ನ ಭಕ್ತರು ಪುರುಷಶ್ರೇಷ್ಠರಾಗಿ ಸಕಲ ಸಂಪತ್ತನ್ನೂ ಅನುಭವಿಸುವರು. ಅವರು ಎಷ್ಟೋ ವಿದ್ಯಾವಿಹೀನರಾಗಿದ್ದರೂ ಸಮಸ್ತ ಸುಖಗಳನ್ನೂ ಸುಲಭವಾಗಿ ಪಡೆಯುವರು.

ಇತಿ ದತ್ವಾ ವರಾನ್ದೇವಸ್ತತ್ರ ಲಿಂಗೇ ಲಯಂ ಯಯೌ ।
ಭಾರ್ಗವೋಽಪಿ ನಿಜಂ ಧಾಮ ಪ್ರಾಪ ಸಂತುಷ್ಟಮಾನಸಃ ॥ ೫೨ ॥

ಇತಿ ತೇ ಕಥಿತಂ ವ್ಯಾಸ ಯಥಾ ಪ್ರಾಪ್ತಾ ತಪೋಬಲಾತ್ ।
ಮೃತ್ಯುಂಜಯಾಭಿಧಾ ವಿದ್ಯಾ ಕಿಮನ್ಯಚ್ಛ್ರೋತುಮಿಚ್ಛಸಿ ॥ ೫೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಮೃತಸಂಜೀವಿನೀವಿದ್ಯಾಪ್ರಾಪ್ತಿ
ವರ್ಣನಂ ನಾಮ ಪಂಚಾಶತ್ತಮೋಽಧ್ಯಾಯಃ.

---

೫೨. ಹೀಗೆ ಪರಮೇಶ್ವರನು ಶುಕ್ರನಿಗೆ ವರವನ್ನು ಕೊಟ್ಟು ಅದೇ ಲಿಂಗದಲ್ಲಿಯೇ ಲೀನನಾದನು. ಶುಕ್ರನೂ ಸಹ ಸಂತುಷ್ಟನಾಗಿ ತನ್ನ ಮನೆಗೆ ತೆರಳಿದನು.

೫೩. ಓ ವ್ಯಾಸಮಹರ್ಷಿಯೇ, ಶುಕ್ರನು ಮೃತಸಂಜೀವಿನೀ ವಿದ್ಯೆಯನ್ನು ಹೇಗೆ ಪಡೆದನೆಂಬುದನ್ನು ನಾನು ನಿನಗೆ ವಿವರಿಸಿರುವೆನು. ಮತ್ತೇನನ್ನು ಕೇಳಲು ಇಚ್ಛಿಸುವೆ ? ಎಂದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಮೃತಸಂಜೀವಿನೀ ವಿದ್ಯಾಪ್ರಾಪ್ತಿಯೆಂಬ ಐವತ್ತನೆಯ ಅಧ್ಯಾಯವು
ಮುಗಿದುದು.

---

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕಪಂಚಾಶತ್ತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಸನತ್ಕುಮಾರ ಸರ್ವಜ್ಞ ಶ್ರಾವಿತಾ ಸುಕಥಾದ್ಭುತಾ ।
ಭವತಾನುಗ್ರಹಾತ್ಪ್ರೀತ್ಯಾ ಶಂಭ್ವನುಗ್ರಹನಿರ್ಭರಾ ॥ ೧ ॥

ಇದಾನೀಂ ಶ್ರೋತುಮಿಚ್ಛಾಮಿ ಚರಿತಂ ಶಶಿಮೌಲಿನಃ ।
ಗಾಣಪತ್ಯಂ ದದೌ ಪ್ರೀತ್ಯಾ ಯಥಾ ಬಾಣಾಸುರಾಯ ವೈ ॥ ೨ ॥

---

### ಐವತ್ತೊಂದನೆಯ ಅಧ್ಯಾಯವು.

೧. ವ್ಯಾಸನು ಸನತ್ಕುಮಾರನನ್ನು ಪ್ರಶ್ನೆಮಾಡಿದನು ;—ಓ ಸನತ್ಕುಮಾರ ಋಷಿಯೇ, ನಿನ್ನಿಂದ ಸಮಸ್ತ ಅದ್ಭುತವಾದ ಕಥೆಗಳೆಲ್ಲವನ್ನೂ ಕೇಳಿದ ಹಾಗಾಯಿತು. ಆದರಿಂದ ನಿನ್ನ ಅನುಗ್ರಹವೂ ಶಂಭುವಿನ ಅನುಗ್ರಹವೂ ನನಗೆ ದೊರಕಿದೆ.

೨. ಈಗ ಬಾಣಸುರನಿಗೆ ಪರಶಿವನು ಹೇಗೆ ಗಣಾಧಿಪತ್ಯವನ್ನು ಕೊಟ್ಟನೆಂದು ಕೇಳಲು ಇಚ್ಛಿಸುವೆನು. ಅದನ್ನು ದಯವಿಟ್ಟು ತಿಳಿಸು ಎನ್ನಲು,

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸಾದರಾತ್ತಾಂ ವೈ ಕಥಾಂ ಶಂಭೋಃ ಪರಾತ್ಮನಃ ।
ಗಾಣಪತ್ಯಂ ಯಥಾ ಪ್ರೀತ್ಯಾ ದದೌ ಬಾಣಾಸುರಾಯ ಹಿ ॥ ೩ ॥

ಅತ್ರೈವ ಸುಚರಿತ್ರಂ ಚ ಶಂಕರಸ್ಯ ಮಹಾಪ್ರಭೋಃ ।
ಕೃಷ್ಣೇನ ಸಮರೋಽಸ್ಯತ್ರ ಶಂಭೋರ್ಬಾಣಾನುಗೃಹ್ಣತಃ ॥ ೪ ॥

ಅತ್ರಾನುರೂಪಂ ಶೃಣು ಮೇ ಶಿವಲೀಲಾನ್ವಿತಂ ಪರಂ ।
ಇತಿಹಾಸಂ ಮಹಾಪುಣ್ಯಂ ಮನಃಶ್ರೋತ್ರಸುಖಾವಹಂ ॥ ೫ ॥

ಬ್ರಹ್ಮಪುತ್ರೋ ಮರೀಚಿರ್ಯೋ ಮುನಿರಾಸೀನ್ಮಹಾಮತಿಃ ।
ಮಾನಸಸ್ಸರ್ವಪುತ್ರೇಷು ಜ್ಯೇಷ್ಠಃ ಶ್ರೇಷ್ಠಃ ಪ್ರಜಾಪತಿಃ ॥ ೬ ॥

ತಸ್ಯ ಪುತ್ರೋ ಮಹಾತ್ಮಾಸೀತ್ಕಶ್ಯಪೋ ಮುನಿಸತ್ತಮಃ ।
ಸೃಷ್ಟಿಪ್ರವೃದ್ಧಕೋಽತ್ಯಂತಂ ಪಿತುರ್ಭಕ್ತೋ ವಿಧೇರಪಿ ॥ ೭ ॥

---

೩. ಸನತ್ಕುಮಾರನಿಂತೆಂದನು :—ಓ ವ್ಯಾಸನೇ ಕೇಳು. ನಿನ್ನಿಷ್ಟದಂತೆಯೇ ಆಗಲಿ. ಪರಮೇಶ್ವರನು ಬಾಣಾಸುರನಿಗೆ ಗಣಗಳ ಮೇಲಿನ ಅಧಿಕಾರವನ್ನು ಕೊಟ್ಟದ್ದನ್ನು ವರ್ಣಿಸುವೆನು.

೪. ಎಲೈ ವ್ಯಾಸನೇ, ಶಂಭುವಿನ ಅನುಗ್ರಹಕ್ಕೆ ಪಾತ್ರನಾದ ಬಾಣನಿಗಾಗಿ ಶಂಕರನೂ ಸಹ ಕೃಷ್ಣನ ಜೊತೆಯಲ್ಲಿ ಯುದ್ಧಮಾಡಬೇಕಾಯಿತು. ಅದನ್ನು ನಿನಗೆ ಈಗ ವಿವರಿಸುವೆನು.

೫. ಈಗ ನಾನು ಹೇಳುವುದೆಲ್ಲವೂ ಶಿವನ ಲೀಲೆಯನ್ನೇ ವಿವರಿಸುವುದು. ಅಲ್ಲದೆ ಈ ಇತಿಹಾಸಗಳೆಲ್ಲವೂ ಪುಣ್ಯಕರವೂ, ಮನಸ್ಸಿಗೆ ಹಿತಕರವೂ, ಕರ್ಣಗಳಿಗೆ ಶ್ರಾವ್ಯವೂ ಆಗಿರುವವು.

೬. ಬ್ರಹ್ಮನ ಮಾನಸಪುತ್ರರಲ್ಲಿ ಮರೀಚಿಯೆಂಬುವನು ಶ್ರೇಷ್ಠನೂ, ಮಹಾಬುದ್ಧಿಶಾಲಿಯೂ ಆದ ಪುತ್ರನು. ಆತನು ಎಲ್ಲಾ ಬ್ರಹ್ಮಪುತ್ರರಿಗಿಂತ ಹಿರಿಯುವನು.

೭. ಆ ಮರೀಚಿಗೆ ಕಶ್ಯಪನೆಂಬುವನು ಮಗನು. ಆತನು ತಂದೆಗೂ, ಬ್ರಹ್ಮನಿಗೂ ಬಹಳ ವಿಧೇಯನಾಗಿ ಸೃಷ್ಟಿಕಾರ್ಯದಲ್ಲಿ ನಿರತನಾಗಿದ್ದನು. ಆತನೂ ಸಹ ಮಹಾತ್ಮನಾದ ಋಷಿಶ್ರೇಷ್ಠನೆನಿಸಿಕೊಂಡಿದ್ದನು.

ತಸ್ಯ ತ್ರಯೋದಶಮಿತಾ ದಕ್ಷಕನ್ಯಾಸ್ಸುಶೀಲಿಕಾಃ ।
ಕಶ್ಯಪಸ್ಯ ಮುನೇರ್ವ್ಯಾಸ ಪತ್ನ್ಯಶ್ಚಾಸನ್ಪತಿವ್ರತಾಃ　॥ ೮ ॥

ತತ್ರ ಜ್ಯೇಷ್ಠಾ ದಿತಿಶ್ಚಾಸೀದ್ದೈತ್ಯಾಸ್ತತ್ತನಯಾಸ್ಸ್ಮೃತಾಃ ।
ಅನ್ಯಾಸಾಂ ಚ ಸುತಾ ಜಾತಾ ದೇವಾದ್ಯಾಸ್ಸಚರಾಚರಾಃ　॥ ೯ ॥

ಜ್ಯೇಷ್ಠಾಯಾಃ ಪ್ರಥಮೌ ಪುತ್ರೌ ದಿತೇಶ್ಚಾಸಾಂ ಮಹಾಬಲೌ ।
ಹಿರಣ್ಯಕಶಿಪುರ್ಜ್ಯೇಷ್ಠೋ ಹಿರಣ್ಯಾಕ್ಷೋಽನುಜಸ್ತತಃ　॥ ೧೦ ॥

ಹಿರಣ್ಯಕಶಿಪೋಃ ಪುತ್ರಾಶ್ಚತ್ವಾರೋ ದೈತ್ಯಸತ್ತಮಾಃ ।
ಹ್ರಾದಾನುಹ್ರಾದಸಂಹ್ರಾದಪ್ರಹ್ರಾದಾಶ್ಚೇತ್ಯನುಕ್ರಮಾತ್　॥ ೧೧ ॥

ಪ್ರಹ್ರಾದಸ್ತತ್ರ ಹಿ ಮಹಾನ್ವಿಷ್ಣುಭಕ್ತೋ ಜಿತೇಂದ್ರಿಯಃ ।
ಯಂ ನಾಶಿತುಂ ನ ಶಕ್ತಾಸ್ತೇಽಭವನ್ದೈತ್ಯಾಶ್ಚ ಕೇಽಪಿ ಹ　॥ ೧೨ ॥

---

೮. ಆ ಕಶ್ಯಪನಿಗೆ ದಕ್ಷಬ್ರಹ್ಮನ ಪುತ್ರಿಯರಾದ ಹದಿಮೂರು ಜನರು ಪತ್ನಿಯರಾದರು. ಅವರೆಲ್ಲರೂ ಪತಿವ್ರತೆಯರೂ ಸುಶೀಲೆಯರೂ ಆಗಿದ್ದರು.

೯. ಆ ಪತ್ನಿಯರಲ್ಲಿ ದೊಡ್ಡವಳೇ ದಿತೀದೇವಿಯು. ಅವಳ ಮಕ್ಕಳೇ ದೈತ್ಯರೆಂಬ ರಾಕ್ಷಸರು. ಉಳಿದವರ ಹೊಟ್ಟೆಯಲ್ಲಿ ದೇವತೆಗಳೂ ಮತ್ತು ಚರಾಚರವಾದ ವಸ್ತುಗಳೂ ಆವಿರ್ಭವಿಸಿದುವು.

೧೦. ಆ ದಿತೀದೇವಿಗೆ ಮೊದಲನೆಯ ಮಗನೇ ಹಿರಣ್ಯಕಶಿಪುವು. ಅವನ ತಮ್ಮನೇ ಪ್ರಸಿದ್ಧನಾದ ಹಿರಣ್ಯಾಕ್ಷನು.

೧೧. ಹಿರಣ್ಯಕಶಿಪುವಿಗೆ ಹ್ರಾದ, ಅನುಹ್ರಾದ, ಸಂಹ್ರಾದ, ಪ್ರಹ್ರಾದರೆಂಬ ನಾಲ್ವರು ಕುಮಾರರಿದ್ದರು

೧೨. ಅವರಲ್ಲಿ ಹಿರಿಯವನಾದ ಪ್ರಹ್ರಾದನು ವಿಷ್ಣುಭಕ್ತನಾಗಿಯೂ ಜಿತೇಂದ್ರಿಯನಾಗಿಯೂ ಇದ್ದನು. ಅವನನ್ನು ನಾಶಮಾಡಲು ಯಾವ ರಾಕ್ಷಸನಿಗೂ ಸಾಧ್ಯವಾಗಲಿಲ್ಲ.

ವಿರೋಚನಃ ಸುತಸ್ತಸ್ಯ ಮಹಾದಾತೃಪರೋಽಭವತ್ ।
ಶಕ್ರಾಯ ಸ್ವಶಿರೋ ಯೋಽದಾದ್ಯಾಚಮಾನಾಯ ವಿಪ್ರತಃ ॥ ೧೩ ॥

ತಸ್ಯ ಪುತ್ರೋ ಬಲಿಶ್ಚಾಸೀನ್ಮಹಾದಾನೀ ಶಿವಪ್ರಿಯಃ ।
ಯೇನ ವಾಮನರೂಪಾಯ ಹರಯೇಽದಾಯಿ ಮೇದಿನೀ ॥ ೧೪ ॥

ತಸ್ಯೌರಸಃ ಸುತೋ ಬಾಣಶ್ಶಿವಭಕ್ತೋ ಬಭೂವ ಹ ।
ಮಾನ್ಯೋ ವದಾನ್ಯೋ ಧೀಮಾಂಶ್ಚ ಸತ್ಯಸಂಧಸ್ಸಹಸ್ರದಃ ॥ ೧೫ ॥

ಶೋಣಿತಾಖ್ಯೇ ಪುರೇ ಸ್ಥಿತ್ವಾ ಸ ರಾಜ್ಯಮಕರೋತ್ಪುರಾ ।
ತ್ರೈಲೋಕ್ಯಂ ಚ ಬಲಾಜ್ಜಿತ್ವಾ ತನ್ನಾಥಾನಸುರೇಶ್ವರಃ ॥ ೧೬ ॥

ತಸ್ಯ ಬಾಣಾಸುರಸ್ಯೇವ ಶಿವಭಕ್ತಸ್ಯ ಚಾಮರಾಃ ।
ಶಂಕರಸ್ಯ ಪ್ರಸಾದೇನ ಕಿಂಕರಾ ಇವ ತೇಽಭವನ್ ॥ ೧೭ ॥

---

೧೩. ಆ ಪ್ರಹ್ಲಾದನ ಮಗನೇ ವಿರೋಚನನು ಆತನು ಮಹಾದಾನಿ. ಒಂದು ಸಾರಿ ಇಂದ್ರನು ಬ್ರಾಹ್ಮಣವೇಷದಿಂದ ಬಂದು ಅವನ ತಲೆಯನ್ನು ಯಾಚನೆಮಾಡಿದನು. ಒಡನೆಯೇ ತನ್ನ ಕತ್ತನ್ನು ಕೊಯ್ದು ಆ ಇಂದ್ರನಿಗೆ ದಾನ ಮಾಡಿದನು.

೧೪. ವಿರೋಚನನ ಪುತ್ರನೇ ಪ್ರಸಿದ್ಧನಾದ ಬಲಿಚಕ್ರವರ್ತಿಯು. ಆತನೂ ಸಹ ದಾನಶೂರನೇ, ಶಿವಭಕ್ತನು. ವಾಮನಾವತಾರದಿಂದ ಬಂದು ಬೇಡಿದ ಶ್ರೀ ಹರಿಗೆ ಸಮಸ್ತ ಭೂಮಿಯನ್ನು ದಾನಮಾಡಿದನು.

೧೫. ಆ ಬಲಿಯ ಔರಸಪುತ್ರನಾದ ಬಾಣಾಸುರನು, ಶಿವಭಕ್ತನಾಗಿಯೂ, ಮಾನ್ಯನಾಗಿಯೂ, ದಾನಪರನಾಗಿಯೂ, ಸತ್ಯಸಂಧನಾಗಿಯೂ ಪ್ರಕಾಶಿಸುತ್ತಿದ್ದನು.

೧೬. ಅವನ ರಾಜಧಾನಿಯು ಶೋಣಿತವೆಂಬ ಪಟ್ಟಣ. ಅಲ್ಲಿ ಬಾಣಾಸುರನು ರಾಜ್ಯವಾಳುತ್ತಾ ತನ್ನ ಪರಾಕ್ರಮದಿಂದ ಮೂರುಲೋಕಗಳನ್ನೂ, ಗೆದ್ದು ಎಲ್ಲಕ್ಕೂ ತಾನು ಚಕ್ರವರ್ತಿಯೆನಿಸಿಕೊಂಡನು.

೧೭. ಆ ಪರಮೇಶ್ವರನ ಭಕ್ತನಾದ ಬಾಣಾಸುರನಿಗೆ ಸಮಸ್ತ ದೇವತೆಗಳೂ ಸಹ ಸೇವಕರಂತೆ ವರ್ತಿಸುತ್ತಿದ್ದರು.

ತಸ್ಯ ರಾಜ್ಯೇऽಮರಾನ್ಹಿತ್ವಾ ನಾಭವನ್ದುಃಖಿತಾಃ ಪ್ರಜಾಃ ।
ಸಾಪತ್ನ್ಯಾದ್ದುಃಖಿತಾಸ್ತೇ ಹಿ ಪರಧರ್ಮಪ್ರವರ್ತಿನಃ ॥ ೧೮ ॥

ಸಹಸ್ರಬಾಹುವಾದ್ಯೇನ ಸ ಕದಾಚಿನ್ಮಹಾಸುರಃ ।
ತಾಂಡವೇನ ಹಿ ನೃತ್ಯೇನಾತೋಷಯತ್ತಂ ಮಹೇಶ್ವರಂ ॥ ೧೯ ॥

ತೇನ ನೃತ್ಯೇನ ಸಂತುಷ್ಟಸ್ಸುಪ್ರಸನ್ನೋ ಬಭೂವ ಹ ।
ದದರ್ಶ ಕೃಪಯಾ ದೃಷ್ಟ್ಯಾ ಶಂಕರೋ ಭಕ್ತವತ್ಸಲಃ ॥ ೨೦ ॥

ಭಗವಾನ್ಸರ್ವಲೋಕೇಶಶ್ಶರಣ್ಯೋ ಭಕ್ತಕಾಮದಃ ।
ವರೇಣ ಚ್ಛಂದಯಾಮಾಸ ಬಾಲೇಯಂ ತಂ ಮಹಾಸುರಂ ॥ ೨೧ ॥

॥ ಶಂಕರ ಉವಾಚ ॥

ಬಾಲೇಯಃ ಸ ಮಹಾದೈತ್ಯೋ ಬಾಣೋ ಭಕ್ತವರಸ್ಸುಧೀಃ ।
ಪ್ರಣಮ್ಯ ಶಂಕರಂ ಭಕ್ತ್ಯಾ ನುನಾವ ಪರಮೇಶ್ವರಂ ॥ ೨೨ ॥

---

೧೮. ಅವನ ರಾಜ್ಯದಲ್ಲಿ ಸರ್ವರೂ ಸುಖವಾಗಿಯೇ ಇದ್ದರು. ಆದರೆ ದೇವತೆಗಳಿಗೆ ಮಾತ್ರ ಮಹಾಹಿಂಸೆಯಿತ್ತು. ಏತಕ್ಕೆಂದರೆ ಆ ದೇವತೆಗಳು ಈ ರಾಕ್ಷಸನಿಗೆ ದಾಯಾದಿಗಳಾಗಿದ್ದರು.

೧೯. ಒಂದು ಸಾರಿ ಬಾಣಾಸುರನು, ಸಹಸ್ರವಿಧವಾದ ವಾದ್ಯವಿಶೇಷಗಳಿಂದ ಕೂಡಿ, ಪರಮೇಶ್ವರನ ತೃಪ್ತಿಗಾಗಿ ತಾಂಡವನಾಟ್ಯವನ್ನಾಡಿದನು. ಇದರಿಂದ ಪರಮೇಶ್ವರನು ಬಹಳವಾಗಿ ತೃಪ್ತಿಪಟ್ಟನು.

೨೦. ಆ ನಾಟ್ಯದಿಂದ ಸಂತುಷ್ಟನಾದ ಪರಶಿವನು ಆ ಬಾಣಾಸುರನನ್ನು ತನ್ನ ಕೃಪಾದೃಷ್ಟಿಯಿಂದ ನೋಡಿ, ಪ್ರಸನ್ನಹೃದಯನಾದನು.

೨೧ ಲೋಕೇಶ್ವರನೂ, ಭಕ್ತವತ್ಸಲನೂ, ದಯಾರಾಶಿಯೂ ಆದ ಪರಮೇಶ್ವರನು ಆ ಬಲಿಪುತ್ರನಾದ ಬಾಣಾಸುರನಿಗೆ ವರಗಳನ್ನು ಕೊಟ್ಟು ತೃಪ್ತಿಪಡಿಸಿದನು.

೨೨. ಆ ಮಹಾದೈತ್ಯನೂ, ಶಿವಭಕ್ತನೂ, ಆದ ಬಾಣಾಸುರನು ಶಂಕರನನ್ನು ಬಹು ವಿಧವಾಗಿ ಸ್ತುತಿಸಿ ಸಾಷ್ಟಾಂಗ ನಮಸ್ಕಾರಮಾಡಿದನು.

॥ ಬಾಣಾಸುರ ಉವಾಚ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ಸಂತುಷ್ಟೋಽಸಿ ಮಹೇಶಾನ ಮಮೋಪರಿ ವಿಭೋ ಯದಿ ॥ ೨೩ ॥

ಮದ್ರಕ್ಷಕೋ ಭವ ಸದಾ ಮದುಪಸ್ಥಃ ಪುರಾಧಿಪಃ ।
ಸರ್ವಥಾ ಪ್ರೀತಿಕೃನ್ಮೇ ಹಿ ಸಸುತಸ್ಸಗಣಃ ಪ್ರಭೋ ॥ ೨೪ ॥

॥ ಸನತ್ಕುಮಾರ ಉವಾಚ ॥

ಬಲಿಪುತ್ರಸ್ಸ ವೈ ಬಾಣೋ ಮೋಹಿತಶ್ಶಿವಮಾಯಯಾ ।
ಮುಕ್ತಿಪ್ರದಂ ಮಹೇಶಾನಂ ದುರಾರಾಧ್ಯಮಪಿ ಧ್ರುವಂ ॥ ೨೫ ॥

ಸ ಭಕ್ತವತ್ಸಲಃ ಶಂಭುರ್ದತ್ವಾ ತಸ್ಮೈ ವರಾಂಶ್ಚ ತಾನ್ ।
ತತ್ರೋವಾಸ ತಥಾ ಪ್ರೀತ್ಯಾ ಸಗಣಸ್ಸಸುತಃ ಪ್ರಭುಃ ॥ ೨೬ ॥

---

೨೩-೨೪. ಬಾಣಾಸುರನು ಶಂಕರನನ್ನು ನೋಡಿ ಓ ದೇವದೇವನೇ, ಶರಣಾಗತರಕ್ಷಕನೇ, ನೀನು ನನ್ನ ಮೇಲೆ ನಿಜವಾಗಿ ಅನುಗ್ರಹವಿಟ್ಟಿದ್ದರೆ, ಯಾವಾಗಲೂ ನೀನು ನನ್ನ ನಗರದಲ್ಲಿಯೇ ವಾಸಿಸುತ್ತಾ ನನ್ನನ್ನು ರಕ್ಷಿಸುತ್ತಿರಬೇಕು. ಹಾಗೆಯೇ ನಿನ್ನ ಮಕ್ಕಳೂ ನಿನ್ನ ಪ್ರಮಥಗಣಗಳೂ ಸಹ ನನ್ನ ಸಂರಕ್ಷಣೆಯಲ್ಲಿಯೇ ನಿರತರಾಗಿರಬೇಕು. ಇದೇ ನಾನು ಬೇಡುವ ವರ ಎಂದು ಕೇಳಿಕೊಂಡನು.

೨೫. ಸನತ್ಕುಮಾರನಿಂತೆಂದನು ;—ಪರಮೇಶ್ವರನು ಸಾಕ್ಷಾತ್ತಾಗಿ ಮೋಕ್ಷ ಕೊಡತಕ್ಕವನು. ಮತ್ತು ಎಷ್ಟೇ ಕಷ್ಟಪಟ್ಟರೂ ಸುಲಭವಾಗಿ ಗೋಚರನಾಗುವುದಿಲ್ಲ. ಇಂತಹ ಪರಮೇಶ್ವರನನ್ನು ಶಿವಮಾಯಾಮೋಹಿತನಾದ ಈ ಬಾಣಾಸುರನು ಅಂತಹ ಅಲ್ಪವಾದ ವರವನ್ನು ಕೇಳಿಕೊಂಡನು.

೨೬. ಆ ಭಕ್ತವತ್ಸಲನಾದ ಶಿವನು ಹಾಗೆಯೇ ಆಗಲೆಂದು ಅವನಿಗೆ ವರವಿತ್ತನು. ಆದರಂತೆಯೇ ತಾನು ಪುತ್ರರೊಡಗೂಡಿ ಪ್ರಮಥಗಣಗಳೊಡನೆ ಅಲ್ಲಿಯೇ ವಾಸಮಾಡತೊಡಗಿದನು.

ಸ ಕದಾಚಿದ್ಬಾಣಪುರೇ ಚಕ್ರೇ ದೇವಾಸುರೈಸ್ಸಹ ।
ನದೀತೀರೇ ಹರಃ ಕ್ರೀಡಾಂ ರಮ್ಯೇ ಶೋಣಿತಕಾಹ್ವಯೇ ॥ ೨೭ ॥

ನನೃತುರ್ಜಹಸುಶ್ಚಾಪಿ ಗಂಧರ್ವಾಪ್ಸರಸಸ್ತಥಾ ।
ಜೇಯುಃ ಪ್ರಣೇಯುರ್ಮುನಯ ಆನರ್ಚುಸ್ತುಷ್ಟುವುಶ್ಚ ತಂ ॥ ೨೮ ॥

ವವಲ್ಗುಃ ಪ್ರಥಮಾಸ್ಸರ್ವೇ ಋಷಯೋ ಜುಹುವುಸ್ತದಾ ।
ಆಯುಯುಃ ಸಿದ್ಧಸಂಘಾಶ್ಚ ದದೃಶುಶ್ಶಾಂಕರೀಂ ರತಿಂ ॥ ೨೯ ॥

ಕುತರ್ಕಿಕಾ ವಿನೇಶುಶ್ಚ ಮ್ಲೇಚ್ಛಾಶ್ಚ ಪರಿಪಂಥಿನಃ ।
ಮಾತರೋಽಭಿಮುಖಾಸ್ತಸ್ಥುರ್ವಿನೇಶುಶ್ಚ ವಿಭೀಷಿಕಾಃ ॥ ೩೦ ॥

ರುದ್ರಸದ್ಭಾವಭಕ್ತಾನಾಂ ಭವದೋಷಾಶ್ಚ ವಿಸ್ಮೃತಾಃ ।
ತಸ್ಮಿನ್ದೃಷ್ಟೇ ಪ್ರಜಾಸ್ಸರ್ವಾಃ ಸುಪ್ರೀತಿಂ ಪರಮಾಂ ಯಯುಃ ॥ ೩೧ ॥

---

೨೭. ಒಂದು ದಿವಸ ಈಶ್ವರನು ಅದೇ ಶೋಣಿತಪುರದಲ್ಲಿ ಒಂದು ನದೀದಡದಲ್ಲಿ ದೇವಾಸುರರೊಡನೆ ಕೂಡಿ ಆಟವಾಡಲು ಆರಂಭಿಸಿದನು.

೨೮. ಸಮಸ್ತ ಗಂಧರ್ವರೂ, ಅಪ್ಸರರಸ್ಸುಗಳೂ ಪರಮೇಶ್ವರನ ಮುಂದೆ ನರ್ತನಮಾಡಿದರು, ನಕ್ಕರು, ಓಡಾಡಿದರು. ಎಲ್ಲಾ ಋಷಿಗಳೂ ಸಹ ಆಗಲೇ ಶಂಕರನಿಗೆನಮಸ್ಕರಿಸಿದರು, ಪೂಜಿಸಿದರು. ಎಲ್ಲರೂ ಅವನನ್ನು ಹಾಗೆ ತೃಪ್ತಿಪಡಿಸಿದರು.

೨೯. ಪ್ರಮಥಗಣಗಳೆಲ್ಲವೂ ವಂದಿಸಿದರು. ಸಮಸ್ತ ಋಷಿಗಳೂ ಹೋಮಾದಿಗಳಿಂದ ಶಂಕರನನ್ನು ತೃಪ್ತಿಪಡಿಸಿದರು. ಸಿದ್ಧರು ಸಾಧ್ಯರು ಇವರೇ ಮೊದಲಾದ ಸಮಸ್ತದೇವತೆಗಳೂ ಶಂಕರನ ಆಟವನ್ನು ನೋಡಲು ಓಡಿಓಡಿ ಬಂದರು.

೩೦. ಕುಯುಕ್ತಿಯುಳ್ಳ ನೀಚರೂ, ಮ್ಲೇಚ್ಛರೂ, ಶಿವದ್ವೇಷಿಗಳೂ ಈ ಸಂದರ್ಭದಲ್ಲಿ ನಾಶವಾದರು. ಸಪ್ತಮಾತೃಕೆಗಳೂ ಪರಶಿವನ ಎದುರಿನಲ್ಲಿ ಬಂದು ನಿಂತರು. ದುಷ್ಟದೇವತೆಗಳೆಲ್ಲವೂ ದೂರಸರಿದುವು.

೩೧. ಶಿವಭಕ್ತರೆಲ್ಲರಿಗೂ ಸಾಂಸಾರಿಕವಾದ ಸಮಸ್ತ ದೋಷಗಳೂ ಮರೆತು ಹೋದವು. ಆ ಪರಮೇಶ್ವರನನ್ನು ನೋಡಿದೊಡನೆಯೇ, ಎಲ್ಲ ಜನರೂ ಸಹ ಸಂಪೂರ್ಣವಾದ ಪ್ರೀತಿಯನ್ನು ಪಡೆದುನಿಂತರು.

ವವಲ್ಗುರ್ಮುನಯಸ್ಸಿದ್ಧಾಃ ಸ್ತ್ರೀಣಾಂ ದೃಷ್ಟ್ವಾ ವಿಚೇಷ್ಟಿತಂ ।
ಪುಪುಷುಶ್ಚಾಪಿ ಋತವಸ್ಸ್ವಪ್ರಭಾವಂ ತು ತತ್ರ ಚ ॥ ೩೨ ॥

ವವುರ್ವಾತಾಶ್ಚ ಮೃದವಃ ಪುಷ್ಪಕೇಸರಧೂಸರಾಃ ।
ಚುಕೂಜುಃ ಪಕ್ಷಿಸಂಘಾಶ್ಚ ಶಾಖಿನಾಂ ಮಧುಲಂಪಟಾಃ ॥ ೩೩ ॥

ಪುಷ್ಪಭಾರಾವನದ್ಧಾನಾಂ ರಾರಟ್ಯೇರಂಶ್ಚ ಕೋಕಿಲಾಃ ।
ಮಧುರಂ ಕಾಮಜನನಂ ವನೇಷೂಪವನೇಷು ಚ ॥ ೩೪ ॥

ತತಃ ಕ್ರೀಡಾವಿಹಾರೇ ತು ಮತ್ತೋ ಬಾಲೇಂದುಶೇಖರಃ ।
ಅನಿರ್ಜಿತೇನ ಕಾಮೇನ ದೃಷ್ಟಃ ಪ್ರೋವಾಚ ನಂದಿನಂ ॥ ೩೫ ॥

॥ ಚಂದ್ರಶೇಖರ ಉವಾಚ ॥

ವಾಮಾಮಾನಯ ಗೌರೀಂ ತ್ವಂ ಕೈಲಾಸಾತ್ಕೃತಮಂಡನಾಂ ।
ಶೀಘ್ರಮಸ್ಮಾದ್ವನಾದ್ಗತ್ವಾ ಹ್ಯುಕ್ತ್ವಾ ಕೃಷ್ಣಾಮಿಹಾನಯ ॥ ೩೬ ॥

---

೩೨. ಋಷಿಗಳೂ, ಸಿದ್ಧರೂ, ಆ ಕಾಲದ ಸ್ತ್ರೀಯರ ಚೇಷ್ಟಾದಿಗಳಿಗೆ ಮನ ಸೋತರು. ಆ ಕಾಲದಲ್ಲಿ ಸಮಸ್ತ ಋತುಗಳೂ ತಮ್ಮ ತಮ್ಮ ಪ್ರಭಾವವನ್ನು ಬೀರಲು ಪ್ರಾರಂಭಿಸಿದುವು.

೩೩. ಮಾರುತವು ಪುಷ್ಪಪರಾಗಗಳಿಂದ ಸುವಾಸಿತವಾಗಿ ಮಂದವಾಗಿ ಬೀಸಿತು. ಪಕ್ಷಿಗಳೆಲ್ಲವೂ ಇಂಪಾಗಿ ಧ್ವನಿಗೈದವು. ಮರಗಳೆಲ್ಲವೂ ಸುಮಭರಿತ ಗಳಾದವು.

೩೪. ಹೂಗೊಂಚಲುಗಳಲ್ಲಿ ಕುಳಿತಿದ್ದ ಕೋಗಿಲೆಗಳು ಎಲ್ಲಾ ಉದ್ಯಾನವನ ಗಳಲ್ಲಿಯೂ ಸರ್ವರಿಗೂ ಕಾಮೋದ್ರೇಕವಾಗುವಂತೆ ಮಧುರವಾಗಿ ಧ್ವನಿಗೈದವು.

೩೫. ಚಂದ್ರಶೇಖರನಾದ ಶಿವನು ಆ ಕ್ರೀಡಾವಿಹಾರದಲ್ಲಿ ಕಾಮಾಸಕ್ತನಾಗಿ ಎದುರಿನಲ್ಲಿದ್ದ ನಂದೀಶ್ವರನನ್ನು ಕುರಿತು,

೩೬. ಎಲೈ ನಂದಿಯೇ, ಈಗಲೇ ನೀನು ಕೈಲಾಸಕ್ಕೆ ಹೋಗು. ಅಲ್ಲಿ ಪಾರ್ವತಿಯು ಅಲಂಕೃತಳಾಗಿರುವಳು. ಅವಳನ್ನು ಒಡನೆಯೇ ಇಲ್ಲಿಗೆ ಕರೆದು ಕೊಂಡುಬಾ ಎಂದನು.

॥ ಸನತ್ಕುಮಾರ ಉವಾಚ ॥

ಸ ತಥೇತಿ ಪ್ರತಿಜ್ಞಾಯ ಗತ್ವಾ ತತ್ರಾಹ ಪಾರ್ವತೀಂ ।
ಸುಪ್ರಣಮ್ಯ ರಹೋ ದೂತಶ್ಶಂಕರಸ್ಯ ಕೃತಾಂಜಲಿಃ ॥ ೩೭ ॥

॥ ನಂದೀಶ್ವರ ಉವಾಚ ॥

ದ್ರಷ್ಟುಮಿಚ್ಛತಿ ದೇವಿ ತ್ವಾಂ ದೇವದೇವೋ ಮಹೇಶ್ವರಃ ।
ಸ್ವವಲ್ಲಭಾಂ ರೂಪಕೃತಾಂ ಮಯೋಕ್ತಂ ತನ್ನಿದೇಶತಃ ॥ ೩೮ ॥

॥ ಸನತ್ಕುಮಾರ ಉವಾಚ ॥

ತತಸ್ತದ್ವಚನಾದ್ಗೌರೀ ಮಂಡನಂ ಕರ್ತುಮಾದರಾತ್ ।
ಉದ್ಯತಾಭೂನ್ಮುನಿಶ್ರೇಷ್ಠ ಪತಿವ್ರತಪರಾಯಣಾ ॥ ೩೯ ॥

ಆಗಚ್ಛಾಮಿ ಪ್ರಭುಂ ಗಚ್ಛ ವದ ತಂ ತ್ವಂ ಮಮಾಜ್ಞಯಾ ।
ಆಜಗಾಮ ತತೋ ನಂದೀ ರುದ್ರಾಸನ್ನಂ ಮನೋಗತಿಃ ॥ ೪೦ ॥

---

೩೭. ಹಾಗೆಯೇ ಆಗಲೆಂದು ನಂದಿಯು ಕೈಲಾಸಕ್ಕೆ ಹೋಗಿ ಅಲ್ಲಿ ಪಾರ್ವತಿಗೆ ವಂದಿಸಿ ಪರಮೇಶ್ವರನ ಕೋರಿಕೆಯನ್ನು ತಿಳಿಸಿದನು.

೩೮. ಎಲೈ ದೇವಿಯೇ, ದೇವದೇವನಾದ ಮಹೇಶ್ವರನು ಸೌಂದರ್ಯಶಾಲಿನಿಯಾದ ನಿನ್ನನ್ನು ನೋಡಲು ಬಯಸುವನು. ಆ ಪರಶಿವನ ಮಾತನ್ನೇ ನಾನು ಈಗ ಹೇಳಿದ್ದೇನೆ ಎಂದು ನಂದಿಯು ಹೇಳಲು,

೩೯. ಆ ಮಾತಿನಿಂದ ಗೌರೀದೇವಿಯು ಸಂತುಷ್ಟಳಾಗಿ, ತಾನು ಅಲಂಕಾರ ಮಾಡಿಕೊಳ್ಳಲು ಪ್ರಾರಂಭಿಸಿದಳು. ಓ ವ್ಯಾಸನೇ, ಆ ಗೌರಿಯು ಪತಿವ್ರತಾಶಿರೋಮಣಿಯಲ್ಲವೇ ?

೪೦. ಎಲೈ ನಂದಿಯೇ, ನೀನು ಹೊರಡು, ನಾನು ಬರುತ್ತೇನೆಂದು ಹೇಳು ಎಂದು ಪಾರ್ವತಿಯು ನಂದಿಯನ್ನು ಕಳುಹಿಸಲು ಆ ನಂದಿಯು ಮನೋವೇಗದಿಂದ ಶಿವನಲ್ಲಿಗೆ ಬಂದು ಸೇರಿದನು.

ಪುನರಾಹ ತತೋ ರುದ್ರೋ ನಂದಿನಂ ಪರವಿಭ್ರಮಃ ।
ಪುನರ್ಗಚ್ಛ ತತಸ್ತಾತ ಕ್ಷಿಪ್ರಮಾನಯ ಪಾರ್ವತೀಂ ॥ ೪೧ ॥

ಬಾಢಮುಕ್ತ್ವಾ ಸ ತಾಂ ಗತ್ವಾ ಗೌರೀಮಾಹ ಸುಲೋಚನಾಂ ।
ದ್ರಷ್ಟುಮಿಚ್ಛತಿ ತೇ ಭರ್ತಾ ಕೃತವೇಷಾಂ ಮನೋರಮಾಂ ॥ ೪೨ ॥

ಶಂಕರೋ ಬಹುಧಾ ದೇವಿ ವಿಹರ್ತುಂ ಸಂಪ್ರತೀಕ್ಷತೇ ।
ಏವಂ ಪತೌ ಸುಕಾಮಾರ್ತೇ ಗಮ್ಯತಾಂ ಗಿರಿನಂದಿನಿ ॥ ೪೩ ॥

ಅಪ್ಸರೋಭಿಸ್ಸಮಗ್ರಾಭಿರನ್ಯೋನ್ಯಮಭಿಮಂತ್ರಿತಂ ।
ಲಬ್ಧಭಾವೋ ಯಥಾ ಸದ್ಯಃ ಪಾರ್ವತ್ಯಾ ದರ್ಶನೋತ್ಸುಕಃ ॥ ೪೪ ॥

ಅಯಂ ಪಿನಾಕೀ ಕಾಮಾರಿಃ ವೃಣುಯಾದ್ಯಾಂ ನಿತಂಬಿನೀಂ ।
ಸರ್ವಾಸಾಂ ದಿವ್ಯನಾರೀಣಾಂ ರಾಜ್ಞೀ ಭವತಿ ವೈ ಧ್ರುವಂ ॥ ೪೫ ॥

---

೪೧. ಅನಂತರ ಈಶ್ವರನು ಪುನಃ ನಂದಿಯನ್ನು ಕುರಿತು ಅಯ್ಯಾ ನಂದಿಯೇ, ಇನ್ನೊಂದು ಸಾರಿ ಈಗಲೇ ಹೋಗಿ ಪಾರ್ವತಿಯನ್ನು ಕರೆದು ತಾ ಎಂದು ಅಪ್ಪಣೆ ಮಾಡಿದನು.

೪೨. ಹಾಗೆಯೇ ಆಗಲೆಂದು ನಂದಿಯು ಪುನಃ ಕೈಲಾಸಕ್ಕೆ ಹೋಗಿ ಪಾರ್ವತಿಯೊಡನೆ ಓ ದೇವಿಯೇ, ಅಲಂಕೃತಳಾಗಿ ಮನೋಹರಳಾಗಿರುವ ನಿನ್ನನ್ನು ಈಗಲೇ ನೋಡಲು ಶಂಕರನು ಅಪೇಕ್ಷಿಸುತ್ತಾನೆ ಎಂದು ಹೇಳಿದನು.

೪೩. ಪುನಃ ನಂದಿಯು, ಶಂಕರನು ಬಹುವಾಗಿ ಕಾಮಪೀಡಿತನಾಗಿರುವನು. ನಾನಾರೀತಿಯಲ್ಲಿ ನಿನ್ನೊಡನೆ ವಿಹರಿಸಲು ಇಚ್ಛಿಸಿರುವನು. ಪತಿಯು ಹೀಗಿರುವಾಗ ನೀನು ಬೇಗ ಹೊರಡುವುದು ನ್ಯಾಯವು ಎಂದು ತಿಳಿಸಿದನು,

೪೪. ಸಮಸ್ತ ಅಪ್ಸರೆಯರೂ ಸಹ ತಮ್ಮ ತಮ್ಮಲ್ಲಿ ಆಲೋಚಿಸುತ್ತಿರುವರು. ಪಾರ್ವತಿಯ ದರ್ಶನಾಸಕ್ತನಾಗಿ ಶಂಭುವು ಪಾರ್ವತಿಯನ್ನೇ ನಿರೀಕ್ಷಿಸುತ್ತಿರುವನು.

೪೫. ಈ ಪಿನಾಕಧಾರಿಯಾದ ಈಶ್ವರನು ಆ ಸಮಯದಲ್ಲಿ ಯಾವ ಸ್ತ್ರೀಯನ್ನು ಬೇಕಾದರೂ ವರಿಸಬಹುದು. ಹಾಗೆ ವರಿಸುವುದರಿಂದ ಆ ಹೆಂಗಸು ಸಮಸ್ತ ದೇವತಾಸ್ತ್ರೀಯರಿಗೂ ರಾಣಿಯೆನಿಸಿಕೊಳ್ಳುವಳು.

ವೀಕ್ಷಣಂ ಗೌರಿರೂಪೇಣ ಕ್ರೀಡಯೇನ್ಮನ್ಮಥೈರ್ಗಣೈಃ ।
ಕಾಮೋಽಯಂ ಹಂತಿ ಕಾಮಾರಿಮೂಚುರನ್ಯೋನ್ಯಮಾದೃತಾಃ ॥ ೪೬ ॥

ಸ್ಪಷ್ಟಂ ಶಕ್ನೋತಿ ಯಾ ಕಾಚಿದೃತೇ ದಾಕ್ಷಾಯಣೀಂ ಸ್ತ್ರಿಯಂ ।
ಸಾಗಚ್ಛೇತ್ತತ್ರ ನಿಶ್ಯಂಕಂ ಮೋಹಯೇತ್ಪಾರ್ವತೀಪತಿಂ ॥ ೪೭ ॥

ಕೂಷ್ಮಾಂಡತನಯಾ ತತ್ರ ಶಂಕರಂ ಸ್ಪ್ರಷ್ಟುಮುತ್ಸಹೇ ।
ಅಹಂ ಗೌರೀಸುರೂಪೇಣ ಚಿತ್ರಲೇಖಾ ವಚೋಽಬ್ರವೀತ್ ॥ ೪೮ ॥

॥ ಚಿತ್ರಲೇಖ ಉವಾಚ ॥

ಯದಥಾನ್ಮೋಹಿನೀರೂಪಂ ಕೇಶವೋ ಮೋಹನೇಚ್ಛಯಾ ।
ಪುರಾ ತದ್ವೈಷ್ಣವಂ ಯೋಗಮಾಶ್ರಿತ್ಯ ಪರಮಾರ್ಥತಃ ॥ ೪೯ ॥

ಉರ್ವಶ್ಯಾಶ್ಚ ತತೋ ದೃಷ್ಟ್ವಾ ರೂಪಸ್ಯ ಪರಿವರ್ತನಂ ।
ಕಾಲೀರೂಪಂ ಘೃತಾಚೀ ತು ವಿಶ್ವಾಚೀ ಚಾಂಡಿಕಂ ವಪುಃ ॥ ೫೦ ॥

---

೪೬. ಈ ಪರಮೇಶ್ವರನು ಈಗ ಕಾಮಾಸಕ್ತನಾಗಿರುವನು. ಗೌರಿಯೊಡನೆ ಕ್ರೀಡಿಸಲು ಅತ್ಯಾದರನಾಗಿದ್ದಾನೆ. ಕಾಮನು ತನ್ನ ಶತ್ರುವಾದ ಶಿವನನ್ನು ಪೀಡಿಸುತ್ತಿರುವನು ಎಂದು ಪರಸ್ಪರವಾಗಿ ಮಾತನಾಡಿಕೊಂಡರು.

೪೭. ಈಗ ಕಾಮಾರಿಯನ್ನು ಸಂತೋಷಗೊಳಿಸಲು ಪಾರ್ವತಿಯನ್ನು ಬಿಟ್ಟರೆ ಮತ್ತಾರಿಂದಲೂ ಸಾಧ್ಯವಿಲ್ಲ. ಆ ಪಾರ್ವತಿಯು ಈಗಲೇನಾದರೂ ಬಂದರೆ ಅವಳು ತನ್ನ ಪತಿಯಾದ ಶಂಕರನನ್ನು ತೃಪ್ತಿಪಡಿಸುವಳು.

೪೮. ಕೂಷ್ಮಾಂಡನೆಂಬ ರಾಕ್ಷಸಪುತ್ರಿಯಾದ ಚಿತ್ರಲೇಖೆಯು ತಾನು ಶಂಕರನನ್ನು ಸೇವಿಸಬೇಕೆಂದು ಗೌರೀದೇವಿಯ ಆಕಾರವನ್ನು ಪಡೆದಳು.

೪೯. ಹಿಂದೆ ವಿಷ್ಣುವು ತನ್ನ ಮಾಯೆಯಿಂದ ಮೋಹಿನೀರೂಪವನ್ನು ಧರಿಸಿದಂತೆ ಈಗ ನಾನು ವಿಷ್ಣುಶಕ್ತಿಯನ್ನನುಸರಿಸಿ ಗೌರೀವೇಷವನ್ನು ಪಡೆಯುವೆನು ಎಂದು ಚಿತ್ರಲೇಖೆಯು ಹೇಳಿದಳು.

೫೦. ಇದನ್ನು ನೋಡಿ ಊರ್ವಶೀದೇವಿಯು ತನ್ನ ರೂಪವನ್ನು ಬದಲಾಯಿಸಿಕೊಂಡಳು. ಹಾಗೆಯೇ ಘೃತಾಚಿಯು ಕಾಳೀರೂಪವನ್ನೂ, ವಿಶ್ವಾಚೀದೇವಿಯು ಚಂಡಿಯವೇಷವನ್ನೂ ಧರಿಸಿನಿಂತರು.

ಸಾವಿತ್ರಿರೂಪಂ ರಂಭಾ ಚ ಗಾಯತ್ರಂ ಮೇನಕಾ ತಥಾ ।
ಸಹಜನ್ಯಾ ಜಯಾರೂಪಂ ವೈಜಯಂ ಪುಂಜಕಸ್ಥಲೀ ॥ ೫೧ ॥

ಮಾತೃಕಾಮಪ್ಯನುಕ್ತಾನಾಮನುಕ್ತಾಶ್ಚಾಪ್ಸರೋವರಾಃ ।
ಯತ್ನಾದ್ರೂಪಾಣಿ ತಾಶ್ಚಕ್ರುಸ್ಸ್ವವಿದ್ಯಾಸಂಯುತಾ ಅನು ॥ ೫೨ ॥

ತತಸ್ತಾಸಾಂ ತು ರೂಪಾಣಿ ದೃಷ್ಟ್ವಾ ಕುಂಭಾಂಡನಂದಿನೀ ।
ವೈಷ್ಣವಾದಾತ್ಮಯೋಗಾಚ್ಚ ವಿಜ್ಞಾತಾರ್ಥಾ ವ್ಯಡಂಬಯತ್ ॥ ೫೩ ॥

ಉಷಾ ಬಾಣಾಸುರಸುತಾ ದಿವ್ಯಯೋಗವಿಶಾರದಾ
ಚಕಾರ ರೂಪಂ ಪಾರ್ವತ್ಯಾ ದಿವ್ಯಮತ್ಯದ್ಭುತಂ ಶುಭಂ ॥ ೫೪ ॥

ಮಹಾರಕ್ತಾಬ್ಜಸಂಕಾಶಂ ಚರಣಂ ಚೋಕ್ತಮಪ್ರಭಂ ।
ದಿವ್ಯಲಕ್ಷಣಸಂಯುಕ್ತಂ ಮನೋಽಭೀಷ್ಟಾರ್ಥದಾಯಕಂ ॥ ೫೫ ॥

---

೫೧. ಇದನ್ನು ನೋಡಿ ರಂಭೆಯು ಸಾವಿತ್ರಿಯಾದಳು. ಮೇನಕೆಯು ಗಾಯತ್ರಿಯಾದಳು. ಸಹಜನ್ಯೆಯು ಜಯಾದೇವಿಯಾಗಿಯೂ, ಪುಂಜಕಸ್ಥಲಿಯು ವೈಜಯಿಯಾಗಿಯೂ ಆದರು.

೫೨. ಇನ್ನು ಉಳಿದ ಅಪ್ಸರಸ್ತ್ರೀಯರೆಲ್ಲರೂ ಉಳಿದ ಮಾತೃಕಾದೇವಿಯರ ವೇಷವನ್ನು ಧರಿಸಿದವರಾದರು. ಅಲ್ಲದೆ ಅವರೆಲ್ಲರೂ ತಮ್ಮ ತಮ್ಮ ಮಹಿಮಾನುಸಾರವಾಗಿ ಬೇರೆ ಬೇರೆ ರೂಪಗಳನ್ನು ಧರಿಸಿದರು.

೫೩. ಕುಂಭಾಂಡನೆಂಬ ರಾಕ್ಷಸನ ಮಗಳು, ಈ ಎಲ್ಲರೂ ಬೇರೆ ಬೇರೆ ವೇಷ ಧರಿಸುವುದನ್ನು ನೋಡಿ ತಾನೂ ಸಹ ವಿಷ್ಣುಮಾಯೆಯಿಂದಲೂ, ಆತ್ಮಪ್ರಭಾವದಿಂದಲೂ, ರೂಪಾಂತರವನ್ನು ಪಡೆದಳು.

೫೪. ಹಾಗೆಯೇ ಬಾಣಾಸುರನ ಪುತ್ರಿಯಾದ ಉಷಾದೇವಿಯು ತನ್ನ ಯೋಗಬಲದಿಂದ ಪಾರ್ವತಿಯ ವೇಷವನ್ನೇ ಪಡೆದಳು. ಆ ವೇಷವಾದರೋ ಅತ್ಯಾಶ್ಚರ್ಯವನ್ನುಂಟುಮಾಡುತ್ತಿತ್ತು.

೫೫. ಅಲ್ಲದೆ ಆ ವೇಷವು ಕೆಂಪುಕಮಲದ ಹೂವಿನಂತೆ ಕಂಗೊಳಿಸುವ ಪಾದವನ್ನು ಪಡೆದಿದ್ದಿತು. ಮನೋಭೀಷ್ಟಗಳನ್ನು ನೆರವೇರಿಸುವ ಪಾರ್ವತಿಯಂತೆ ಆ ಉಷೆಯೂ ಕೂಡ ದಿವ್ಯಲಕ್ಷಣಗಳಿಂದ ಕೂಡಿ ಪ್ರಕಾಶಿಸುತ್ತಿದ್ದಳು.

ತಸ್ಯಾ ರಮಣಸಂಕಲ್ಪಂ ವಿಜ್ಞಾಯ ಗಿರಿಜಾ ತತಃ ।
ಉವಾಚ ಸರ್ವವಿಜ್ಞಾನಾ ಸರ್ವಾಂತರ್ಯಾಮಿನೀ ಶಿವಾ ॥ ೫೬ ॥

॥ ಗಿರಿಜೋವಾಚ ॥

ಯತೋ ಮಮ ಸ್ವರೂಪಂ ವೈ ಧೃತಮೂಷೇ ಸಖಿ ತ್ವಯಾ ।
ಸಕಾಮತ್ವೇನ ಸಮಯೇ ಸಂಪ್ರಾಪ್ತೇ ಸತಿ ಮಾನಿನಿ ॥ ೫೭ ॥

ಅಸ್ಮಿಂಸ್ತು ಕಾರ್ತಿಕೇ ಮಾಸಿ ಋತುಧರ್ಮಾಸ್ತು ಮಾಧವೇ ।
ದ್ವಾದಶ್ಯಾಂ ಶುಕ್ಲಪಕ್ಷೇ ತು ಯಸ್ತು ಘೋರೇ ನಿಶಾಗಮೇ ॥ ೫೮ ॥

ಕೃತೋಪವಾಸಾಂ ತ್ವಾಂ ಭೋಕ್ತಾ ಸುಪ್ತಾಮಂತಃಪುರೇ ನರಃ ।
ಸ ತೇ ಭರ್ತಾ ಕೃತೋ ದೇವೈಸ್ತೇನ ಸಾರ್ಧಂ ರಮಿಷ್ಯಸಿ ॥ ೫೯ ॥

ಆಬಾಲ್ಯಾದ್ವಿಷ್ಣುಭಕ್ತಾಸಿ ಯತೋಽನಿಶಮತಂದ್ರಿತಾ ।
ಏವಮಸ್ತ್ವಿತಿ ಸಾ ಪ್ರಾಹ ಮನಸಾ ಲಜ್ಜಿತಾನನಾ ॥ ೬೦ ॥

---

೫೬. ಇದನ್ನು ತಿಳಿದು ಸರ್ವಾಂತರ್ಯಾಮಿನಿಯೂ ತನ್ನ ಗಂಡನಲ್ಲಿ ಆಸಕ್ತಳೂ ಆಗಿರುವ ಪಾರ್ವತಿಯು ಉಷೆಯನ್ನು ಕುರಿತು,

೫೭. ಎಲೌ ಉಷೆ, ನನ್ನ ಪತಿಯು ಕಾಮುಕನಾಗಲಾಗಿ ನೀನು ನನ್ನ ಸ್ವರೂಪನ್ನು ಪಡೆದು ಅವನ ತೃಪ್ತಿಗಾಗಿ ಬಂದು ನಿಂತಿದ್ದೀಯೆ. ನಿನ್ನಲ್ಲಿ ತಪ್ಪೇನು ?

೫೮. ಓ ದೇವಿ, ಇದೇ ಕಾರ್ತಿಕಮಾಸದ ಶುಕ್ಲಪಕ್ಷದ ದ್ವಾದಶೀ ತಿಥಿಯ ರಾತ್ರಿಯಲ್ಲಿ ಶ್ರೀಕೃಷ್ಣನು—

೫೯. ಉಪವಾಸದಿಂದ ಪಾರಣೆಮಾಡಿ ತೃಪ್ತಿಗೊಂಡು ಸುಖವಾಗಿ ಮಲಗಿರುವ ನಿನ್ನ ಸಮೀಪಕ್ಕೆ ಬಂದು ನಿನ್ನಲ್ಲಿ ರಮಿಸುವನು. ಅವನೇ ನಿನ್ನ ಪತಿಯು. ಈ ವಿಧವಾಗಿ ನಡೆಯುವ ವಿವಾಹವನ್ನು ದೇವತೆಗಳೂ ಸಹ ಒಪ್ಪುವರು.

೬೦. ನೀನು ಚಿಕ್ಕವಯಸ್ಸಿನಿಂದ ವಿಷ್ಣುಭಕ್ತಳಾಗಿದ್ದೀಯೆ. ಆದಕ್ಕೆ ಈ ಫಲವು ನಿನಗೆ ದೊರೆಯಲಿ ಎಂದು ಪಾರ್ವತಿಯು ಹೇಳಲು ಹಾಗೆಯೇ ಆಗಲೆಂದು ಉಷೆಯು ನಾಚಿಕೆಯಿಂದ ಒಪ್ಪಿದಳು.

ಅಥ ಸಾ ಪಾರ್ವತೀ ದೇವೀ ಕೃತಕೌತುಕಮಂಡನಾ ।
ರುದ್ರಸಂನಿಧಿಮಾಗತ್ಯ ಚಿಕ್ರೀಡೇ ತೇನ ಶಂಭುನಾ ॥ ೬೧ ॥

ತತೋ ರತಾಂತೇ ಭಗವಾನ್ರುದ್ರಶ್ಚಾದರ್ಶನಂ ಯಯೌ ।
ಸದಾರಃ ಸಗಣಶ್ಚಾಪಿ ಸಹಿತೋ ದೈವತೈರ್ಮುನೇ ॥ ೬೨ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಉಷಾಚರಿತ್ರವರ್ಣನಂ ಶಿವಶಿವಾ
ವಿವಾಹವರ್ಣನಂ ನಾಮ ಏಕಪಂಚಾಶತ್ತಮೋಽಧ್ಯಾಯಃ

---

೬೧. ಅಚ್ಚರಿಯ ಅಲಂಕಾರದಿಂದ ಶೋಭಿತಳಾದ ಗೌರಿಯು ಹಾಗೆ ಹೇಳಿ ಪರಶಿವನ ಸಮೀಪಕ್ಕೆ ಬಂದು ಅವನೊಡನೆ ಕ್ರೀಡಿಸಿ ಸಂತುಷ್ಟಳಾದಳು

೬೨. ಈರೀತಿಯಾಗಿ ರತಿಕ್ರೀಡೆಯಾದೊಡನೆಯೇ ಶಂಕರನು ಪತ್ನಿ ಮತ್ತು ಪ್ರಮಥಗಣಗಳೊಡನೆ ಅಲ್ಲಿಯೇ ಅಂತರ್ಧಾನನಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯಲ್ಲಿ
ಉಷಾಚರಿತ್ರೆ, ಮತ್ತು ಶಿವಪಾರ್ವತಿಯರ ವಿವಾಹವರ್ಣನವೆಂಬ
ಐವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ದ್ವಿಪಂಚಾಶತ್ತಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಶೃಣುಷ್ವಾನ್ಯಚ್ಚರಿತ್ರಂ ಚ ಶಿವಸ್ಯ ಪರಮಾತ್ಮನಃ ।
ಭಕ್ತವಾತ್ಸಲ್ಯಸಂಗರ್ಭಿ ಪರಮಾನಂದದಾಯಕಂ ॥ ೧ ॥

ಪುರಾ ಬಾಣಾಸುರೋ ನಾಮ ದೈವದೋಷಾಚ್ಚ ಗರ್ವಿತಃ ।
ಕೃತ್ವಾ ತಾಂಡವನೃತ್ಯಂ ಚ ತೋಷಯಾಮಾಸ ಶಂಕರಂ ॥ ೨ ॥

---

### ಐವತ್ತೆರಡನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :—ಶಿವನ ಮತ್ತೊಂದು ಚರಿತ್ರೆಯನ್ನು ಹೇಳುವೆನು ಕೇಳು. ಅದು ಶಂಕರನಿಗೆ ತನ್ನ ಭಕ್ತನ ಮೇಲಿನ ಪ್ರೀತಿಯನ್ನು ಚೆನ್ನಾಗಿ ವ್ಯಕ್ತಪಡಿಸುವುದು ಮತ್ತು ಮನಸ್ಸಿಗೆ ಹರ್ಷವನ್ನುಂಟುಮಾಡುವುದು.

೨. ತನ್ನ ನಾಟ್ಯದಿಂದಲೇ ಪರಶಿವನು ವರಕೊಟ್ಟನಲ್ಲಾ ಎಂಬ ಭಾವನೆಯಿಂದ ಬಾಣಾಸುರನಿಗೆ ಕಾಲಕ್ರಮೇಣ ಗರ್ವವುಂಟಾಯಿತು.

ಜ್ಞಾತ್ವಾ ಸಂತುಷ್ಟಮನಸಂ ಪಾರ್ವತೀವಲ್ಲಭಂ ಶಿವಂ ।
ಉವಾಚ ಚಾಸುರೋ ಬಾಣೋ ನತಸ್ಕಂಧಃ ಕೃತಾಂಜಲಿಃ. ॥ ೩ ॥

॥ ಬಾಣ ಉವಾಚ ॥

ದೇವದೇವ ಮಹಾದೇವ ಸರ್ವದೇವಶಿರೋಮಣೇ ।
ತ್ವತ್ಪ್ರಸಾದಾದ್ಬಲೀ ಚಾಹಂ ಶೃಣು ಮೇ ಪರಮಂ ವಚಃ ॥ ೪ ॥

ದೋಸ್ಸಹಸ್ರಂ ತ್ವಯಾ ದತ್ತಂ ಪರಂ ಭಾರಾಯ ಮೇಽಭವತ್ ।
ತ್ರಿಲೋಕ್ಯಾಂ ಪ್ರತಿಯೋದ್ಧಾರಂ ನ ಲಭೇ ತ್ವದೃತೇ ಸಮಂ ॥ ೫ ॥

ಹೇ ದೇವ ಕಿಮನೇನಾಪಿ ಸಹಸ್ರೇಣ ಕರೋಮ್ಯಹಂ ।
ಬಾಹೂನಾಂ ಗಿರಿತುಲ್ಯಾನಾಂ ವಿನಾ ಯುದ್ಧಂ ವೃಷಧ್ವಜ ॥ ೬ ॥

ಕಂಡೂತ್ಯಾ ನಿಭೃತೈರ್ದೋರ್ಭಿರ್ಯುಯುತ್ಸುರ್ದಿಗ್ಗಜಾನಹಂ ।
ಪುರಾಣ್ಯಾಚೂರ್ಣಯನ್ನದ್ರೀನ್ಭೀತಾಸ್ತೇಽಪಿ ಪ್ರದುದ್ರುವುಃ ॥ ೭ ॥

---

೩. ಸಂತೋಷದಿಂದ ಪಾರ್ವತಿಯೊಡನೆ ಪರಮೇಶ್ವರನಿದ್ದ ಸಮಯದಲ್ಲಿ ಬಾಣಾಸುರನು ಹೋಗಿ ವಿನಯದಿಂದ ತಲೆತಗ್ಗಿಸಿ ಕೈಜೋಡಿಸಿ ನಿಂತು ಹೀಗೆ ಹೇಳಿಕೊಂಡನು.

೪. ಓ ಮಹಾದೇವನೇ, ದೇವಾದಿದೇವನೇ, ನಾನು ಈಗ ನಿನ್ನ ಅನುಗ್ರಹ ಬಲದಿಂದಲೇ ಬಹಳ ಶೂರನಾಗಿರುವೆನು. ಆದ್ದರಿಂದ ನನ್ನ ಮಾತನ್ನು ಕೇಳು.

೫. ನನಗೆ ನೀನು ಸಾವಿರ ತೋಳುಗಳನ್ನು ಕೊಟ್ಟಿರುವೆಯಷ್ಟೆ ? ಅವೆಲ್ಲವೂ ನನಗೆ ಭಾರವಾಗಿವೆ. ಏಕೆಂದರೆ ನಿನ್ನನ್ನು ಬಿಟ್ಟರೆ ಮತ್ತೆ ಯಾರೂ ನನ್ನೊಡನೆ ಯುದ್ಧಮಾಡುವವರೇ ಇಲ್ಲದಂತಾಗಿದೆ.

೬. ಈ ನನ್ನ ಭುಜಗಳಲ್ಲಿ ಪರ್ವತದಷ್ಟು ಬಲವಿದೆ. ಆದರೇನು ? ಯಾರೊಡನೆ ಯುದ್ಧಮಾಡಲಿ ? ಯುದ್ಧವಿಲ್ಲದಿದ್ದರೆ ಈ ಶಕ್ತವಾದ ಭುಜಗಳಿಂದ ಪ್ರಯೋಜನವೇನು ?

೭. ನನ್ನ ತೋಳು ತೀಟೆಯಿಂದ ಎಲ್ಲಾ ದಿಕ್ಕುಗಳನ್ನು ಗೆದ್ದೆನು. ಎಲ್ಲಾ ಊರುಗಳನ್ನೂ, ದುರ್ಗಗಳನ್ನೂ ಭೇದಿಸಿದೆನು. ಜನರೆಲ್ಲರೂ ನನಗೆ ಹೆದರಿ ಓಡಿ ಹೋಗಿರುವರು.

ಮಯಾ ಯಮಃ ಕೃತೋ ಯೋದ್ಧಾ ವಹ್ನಿಶ್ಚ ಕೃತಕೋ ಮಹಾನ್ ।
ವರುಣಶ್ಚಾಪಿ ಗೋಪಾಲೋ ಗವಾಂ ಪಾಲಯಿತಾ ತಥಾ ॥ ೮ ॥

ನಚಾಧ್ಯಕ್ಷಃ ಕುಬೇರಸ್ತು ಸೈರಂಧ್ರೀ ಚಾಪಿ ನಿರ್ಋತಿಃ ।
ಜಿತಶ್ಚಾಖಂಡಲೋ ಲೋಕೇ ಕರದಾಯೀ ಸದಾ ಕೃತಃ ॥ ೯ ॥

ಯುದ್ಧಸ್ಯಾಗಮನಂ ಬ್ರೂಹಿ ಯತ್ರೈತೇ ಬಾಹವೋ ಮಮ ।
ಶತ್ರುಹಸ್ತಪ್ರಯುಕ್ತೈಶ್ಚ ಶಸ್ತ್ರಾಸ್ತ್ರೈರ್ಜರ್ಜರೀಕೃತಾಃ ॥ ೧೦ ॥

ಪತಂತು ಶತ್ರುಹಸ್ತಾದ್ವಾ ಪಾತಯಂತು ಸಹಸ್ರಧಾ ।
ಏತನ್ಮನೋರಥಂ ಮೇ ಹಿ ಪೂರ್ಣಂ ಕುರು ಮಹೇಶ್ವರ ॥ ೧೧ ॥

॥ ಸನತ್ಕುಮಾರ ಉವಾಚ ॥

ತಚ್ಛ್ರುತ್ವಾ ಕುಪಿತೋ ರುದ್ರಸ್ತ್ವಟ್ಟಹಾಸಂ ಮಹಾದ್ಭುತಂ ।
ಕೃತ್ವಾಽಬ್ರವೀನ್ಮಹಾಮನ್ಯುರ್ಭಕ್ತಬಾಧಾಽಪಹಾರಕಃ ॥ ೧೨ ॥

---

೮. ಯಮನೊಡನೆ ಹೋರಾಡಿದೆನು. ಅಗ್ನಿಯೂ, ವರುಣನೂ ನನಗೆ ಸೋತರು. ಗೋಪಾಲನಾದ ಕೃಷ್ಣನು ನನಗೆ ಹೆದರಿ ದನಕರುಗಳನ್ನು ಕಾಪಾಡಲು ಹೊರಟನು.

೯. ಕುಬೇರನನ್ನು ಅಧ್ಯಕ್ಷಪದವಿಯಿಂದ ತಳ್ಳಿದೆನು. ಸೈರಂಧ್ರಿಯಂತೆ ನಿರ್ಋತಿಯನ್ನು ಹೇಡಿಯನ್ನಾಗಿಮಾಡಿದೆನು. ಇಂದ್ರನನ್ನು ಗೆದ್ದು ಅವನಿಂದ ಕಪ್ಪ ಕಾಣಿಕೆಗಳನ್ನು ತಂದೆನು.

೧೦. ಯಾವ ಯುದ್ಧದಲ್ಲಿ ಶತ್ರುಗಳು ಬಿಟ್ಟ ಬಾಣವು ನನ್ನ ಸಾವಿರ ತೋಳುಗಳನ್ನು ಜರ್ಜರವನ್ನಾಗಿಮಾಡುತ್ತವೆಯೋ ಅಂತಹ ಯುದ್ಧವೊಂದಿದ್ದರೆ ನನಗೆ ಹೇಳು. ನಾನು ಅದಕ್ಕೆ ಹೋಗುವೆನು.

೧೧. ನನ್ನ ತೋಳುಗಳನ್ನು ಶತ್ರುಗಳು ಕತ್ತರಿಸಲಿ. ಅಥವಾ ನಾನು ಅವರ ತೋಳುಗಳನ್ನು ಬೀಳಿಸುವೆನು. ಇವೆರಡೂ ನನಗೆ ಇಷ್ಟವೇ ಈ ಇಷ್ಟವನ್ನು ಪೂರ್ತಿ ಮಾಡು ಎಂದನು.

೧೨. ಈ ಮಾತುಗಳನ್ನು ಕೇಳಿ ರುದ್ರನು ಆ ಬಾಣಾಸುರನ ಅಟ್ಟಹಾಸಕ್ಕೆ ಬಹಳವಾಗಿ ಕೋಪಿಸಿಕೊಂಡನು. ಅಲ್ಲದೆ ಭಕ್ತವತ್ಸಲನಾದರೂ, ಅವನ ಅಹಂಕಾರಕ್ಕಾಗಿ ಆ ಪರಶಿವನು ಆ ಭಕ್ತನ ವಿಷಯದಲ್ಲಿ ಬಹಳವಾಗಿ ಕೋಪಿಸಿಕೊಂಡು ಇಂತೆಂದನು.

॥ ರುದ್ರ ಉವಾಚ ॥

ಧಿಗ್ಧಿಕ್ತ್ವಂ ಸರ್ವತೋ ಗರ್ವಿನ್ಸರ್ವದೈತ್ಯಕುಲಾಧಮ ।
ಬಲಿಪುತ್ರಸ್ಯ ಭಕ್ತಸ್ಯ ನೋಚಿತಂ ವಚ ಈದೃಶಂ ॥ ೧೩ ॥

ದರ್ಪಸ್ಯಾಸ್ಯ ಪ್ರಶಮನಂ ಲಪ್ಸ್ಯಸೇ ಚಾಶು ದಾರುಣಂ ।
ಮಹಾಯುದ್ಧಮಕಸ್ಮಾದ್ವೈ ಬಲಿನಾ ಮತ್ಸಮೇನ ಹಿ ॥ ೧೪ ॥

ತತ್ರ ತೇ ಗಿರಿಸಂಕಾಶಾ ಬಾಹವೋಽನಲಕಾಷ್ಠವತ್ ।
ಛಿನ್ನಾ ಭೂಮೌ ಪತಿಷ್ಯಂತಿ ಶಸ್ತ್ರಾಸ್ತ್ರೈಃ ಕದಲೀಕೃತಾಃ ॥ ೧೫ ॥

ಯದೇಷ ಮಾನುಷಶಿರೋ ಮಯೂರಸಹಿತೋ ಧ್ವಜಃ ।
ವಿದ್ಯತೇ ತವ ದುಷ್ಟಾತ್ಮಂಸ್ತಸ್ಯ ಸ್ಯಾತ್ಪತನಂ ಯದಾ ॥ ೧೬ ॥

ಸ್ಥಾಪಿತಸ್ಯಾಯುಧಾಗಾರೇ ವಿನಾ ವಾತಕೃತಂ ಭಯಂ ।
ತದಾ ಯುದ್ಧಂ ಮಹಾಘೋರಂ ಸಂಪ್ರಾಪ್ತಮಿತಿ ಚೇತಸಿ ॥ ೧೭ ॥

---

೧೩. ಎಲೈ ದೈತ್ಯಾಧಮನೇ, ನೀನು ತುಂಬ ಅಹಂಕಾರಿಯು. ನಿನ್ನ ವರ್ತನೆಗೆ ಧಿಕ್ಕಾರವು. ನನ್ನ ಭಕ್ತನಾದ ಬಲಿಯ ಮಗನಾಗಿದ್ದರೂ ನೀನು ಈರೀತಿ ಮಾತನಾಡುವುದು ನ್ಯಾಯವಲ್ಲ.

೧೪. ನಿನ್ನ ಅಹಂಕಾರವನ್ನು ಮುರಿಯುವಂತಹ ಒಂದು ಘೋರಯುದ್ಧವು ಕ್ಷಿಪ್ರದಲ್ಲಿಯೇ ನಡೆಯುವುದು. ನನ್ನಷ್ಟೇ ಬಲಿಷ್ಠನಾದವನೊಬ್ಬನು ನಿನ್ನೊಡನೆ ಯುದ್ಧಮಾಡಿ ನಿನ್ನ ಸೊಕ್ಕನ್ನು ಅಡಗಿಸುವನು.

೧೫. ಈಗ ಬೆಟ್ಟದಂತಿರುವ ನಿನ್ನ ಬಾಹುಗಳು ಆ ಯುದ್ಧದಲ್ಲಿ ಶತ್ರುಗಳ ಶಸ್ತ್ರಾಸ್ತ್ರಗಳಿಗೆ ಸಿಕ್ಕಿ ಬೆಂಕಿಗೆ ಬಿದ್ದ ಕಾಷ್ಠಗಳಂತೆ ಚೂರುಚೂರಾಗಿ ಭೂಮಿಯಮೇಲೆ ಕತ್ತರಿಸಿ ಬೀಳುವುವು.

೧೬-೧೭. ಈ ನಿನ್ನ ಮನುಷ್ಯನ ಶರೀರವೂ ನವಿಲಿನ ಗುರುತಿನ ಧ್ವಜವೂ ಯಾವಾಗ ಕೆಳಗೆ ಬಿದ್ದು ನಾಶವಾಗುವುವೋ, ಯಾವಾಗ ಗಾಳಿಯ ಭಯವಿಲ್ಲದಿದ್ದರೂ ಆಯುಧಾಗಾರದ ಧ್ವಜಗಳು ಕೆಳಗೆ ಬೀಳುವುವೋ, ಆಗಲೇ ನಿನ್ನೊಡನೆ ಯುದ್ಧವು ಒದಗುವುದೆಂಬುದನ್ನು ತಿಳಿ.

ನಿಧಾಯಘೋರಂ ಸಂಗ್ರಾಮಂ ಗಚ್ಛೇಥಾಃ ಸರ್ವಸೈನ್ಯವಾನ್ ।
ಸಾಂಪ್ರತಂ ಗಚ್ಛ ತದ್ವೇಶ್ಮ ಯತಸ್ತದ್ವಿದ್ಯತೇ ಶಿವಃ ॥ ೧೮ ॥

ತಥಾ ತಾನ್ಸ್ವಮಹೋತ್ಪಾತಾಂಸ್ತತ್ರ ದ್ರಷ್ಟಾಸಿ ದುರ್ಮತೇ ।
ಇತ್ಯುಕ್ತ್ವಾ ವಿರರಾಮಾಥ ಗರ್ವಹೃದ್ಭಕ್ತವತ್ಸಲಃ ॥ ೧೯ ॥

॥ ಸನತ್ಕುಮಾರ ಉವಾಚ ॥

ತಚ್ಛ್ರುತ್ವಾ ರುದ್ರಮಭ್ಯರ್ಚ್ಯ ದಿವ್ಯೈರಂಜಲಿಕುಡ್ಮಲೈಃ ।
ಪ್ರಣಮ್ಯ ಚ ಮಹಾದೇವಂ ಬಾಣಶ್ಚ ಸ್ವಗೃಹಂ ಗತಃ ॥ ೨೦ ॥

ಕುಂಭಾಂಡಾಯ ಯಥಾವೃತ್ತಂ ಪೃಷ್ಟಃ ಪ್ರೋವಾಚ ಹರ್ಷಿತಃ ।
ಪರ್ಯೈಕ್ಷಿಷ್ಟಾಸುರೋ ಬಾಣಸ್ತಂ ಯೋಗಂ ಹ್ಯುತ್ಸುಕಸ್ಸದಾ ॥ ೨೧ ॥

ಅಥ ದೈವಾತ್ಕದಾಚಿತ್ಸ ಸ್ವಯಂ ಭಗ್ನಂ ಧ್ವಜಂ ಚ ತಂ ।
ದೃಷ್ಟ್ವಾ ತತ್ರಾಸುರೋ ಬಾಣೋ ಹೃಷ್ಟೋ ಯುದ್ಧಾಯ ನಿರ್ಯಯೌ ॥

---

೧೮. ಆ ಸಮಯದಲ್ಲಿಯೇ ನೀನು ಸರ್ವ ಸೈನ್ಯಸಮೇತನಾಗಿ ಯುದ್ಧಕ್ಕೆ ಹೊರಡು. ಈಗ ನೀನು ನಿನ್ನ ಮನೆಗೆ ಹೋಗು. ಅಲ್ಲಿ ಶಿವನು ಯಾವಾಗಲೂ ನೆಲಸಿರುವನು.

೧೯. ಅಲ್ಲಿ ನೀನು ಇನ್ನೂ ಅನೇಕ ಅಪಶಕುನಗಳನ್ನು ಕಾಣುತ್ತೀಯೆ ಎಂದು ಹೇಳಿ ಯೋಗ್ಯಭಕ್ತರನ್ನು ರಕ್ಷಿಸುವ ಪರಮೇಶ್ವರನು ಸುಮ್ಮನಾದನು.

೨೦. ಬಾಣಾಸುರನು ಹೀಗೆ ಹೇಳಿದ ಶಿವನ ಮಾತುಗಳನ್ನು ಕೇಳಿ ಪರಮೇಶ್ವರನನ್ನು ವಂದಿಸಿ, ತನ್ನ ಮನೆಗೆ ಹೊರಟುಹೋದನು.

೨೧. ತನ್ನ ಮನೆಗೆ ಹೋದಮೇಲೆ ಕುಂಭಾಂಡನೆಂಬುವನಿಗೆ ಎಲ್ಲಾ ವಿಷಯವನ್ನೂ ತಿಳಿಸಿದನು. ಅಲ್ಲದೆ ಶಿವನು ಹೇಳಿದ ಗುರುತುಗಳನ್ನೇ ನಿರೀಕ್ಷಿಸುತ್ತಿದ್ದನು.

೨೨. ಒಂದು ಸಾರಿ ಅಕಸ್ಮಾತ್ತಾಗಿ ಆ ಬಾಣಾಸುರನ ರಥದ ಧ್ವಜವು ಮುರಿದುಬಿತ್ತು. ಅದನ್ನು ನೋಡಿ ಬಾಣಾಸುರನು ಸಂತೋಷದಿಂದ ಯುದ್ಧಕ್ಕೆ ಹೊರಟನು.

ಸ ಸ್ವಸೈನ್ಯಂ ಸಮಾಹೂಯ ಸಂಯುಕ್ತಃ ಸಾಷ್ಟಭಿರ್ಗಣೈಃ ।
ಇಷ್ಟಿಂ ಸಾಂಗ್ರಾಮಿಕಾಂ ಕೃತ್ವಾ ಪೀತ್ವಾ ಸಾಂಗ್ರಾಮಿಕಂ ಮಧು ॥ ೨೩ ॥

ಕಕುಭಾಂ ಮಂಗಲಂ ಸರ್ವಂ ಸಂಪ್ರೇಕ್ಷ್ಯ ಪ್ರಸ್ಥಿತೋಽಭವತ್ ।
ಮಹೋತ್ಸಾಹೋ ಮಹಾವೀರೋ ಬಲಿಪುತ್ರೋ ಮಹಾರಥಃ ॥ ೨೪ ॥

ಇತಿ ಹೃತ್ಕಮಲೇ ಕೃತ್ವಾ ಕಃ ಕಸ್ಮಾದಾಗಮಿಷ್ಯತಿ ।
ಯೋದ್ಧಾ ರಣಪ್ರಿಯೋ ಯಸ್ತು ನಾನಾಶಸ್ತ್ರಾಸ್ತ್ರಪಾರಗಃ ॥ ೨೫ ॥

ಯಸ್ತು ಬಾಹುಸಹಸ್ರಂ ಮೇ ಛಿನತ್ತ್ಯಲನಕಾಷ್ಠವತ್ ।
ತಥಾ ಶಸ್ತ್ರೈರ್ಮಹಾತೀಕ್ಷ್ಣೈಶ್ಛಿನದ್ಮಿ ಶತಶಸ್ತ್ವಿಹ ॥ ೨೬ ॥

---

೨೩. ಬಾಣಾಸುರನ ಎಂಟು ಗಣಗಳಿಂದ ಕೂಡಿದ ಸೈನ್ಯವು ಒಟ್ಟಾಗಿ ಸೇರಿತು. ಯುದ್ಧಕ್ಕೆ ಮುಂಚೆ ಮಾಡಬೇಕಾದ ಯಾಗಾದಿಕಾರ್ಯಗಳನ್ನು ನೆರವೇರಿಸಿದನು. ಮತ್ತು ಯುದ್ಧಕ್ಕೆ ಪೂರ್ವಭಾವಿಯಾಗಿ ವೀರ್ಯೋತ್ತೇಜಕವಾದ ಮಧ್ಯವನ್ನು ಪಾನಮಾಡಿದನು.

೨೪. ಬಲಿಪುತ್ರನಾದ ಬಾಣಾಸುರನು ಉತ್ಸಾಹ ಮತ್ತು ವೀರ್ಯವುಳ್ಳವನಾಗಿ, ಸಮಸ್ತ ದಿಕ್ಕುಗಳಲ್ಲಿಯೂ ಅಮಂಗಲಕರವಾದ ಸೂಚನೆಯನ್ನು ನೋಡುತ್ತಾ ಪ್ರಯಾಣಬೆಳೆಸಿದನು.

೨೫. ಅಲ್ಲದೆ ನನ್ನೊಡನೆ ಯುದ್ಧಮಾಡಲು ಬರತಕ್ಕ ಶೂರನು ಯಾರಿರಬಹುದು? ಅಂತಹ ಶಸ್ತ್ರಾಸ್ತ್ರಸಂಪನ್ನನು ಯಾರು? ನೋಡೋಣ, ಇವೇ ಮುಂತಾಗಿ ಯೋಚಿಸುತ್ತಿದ್ದನು.

೨೬. ಯಾರು ನನ್ನ ಸಾವಿರ ತೋಳುಗಳನ್ನು ಕಟ್ಟಿಗೆಯಂತೆ ಕತ್ತರಿಸುವನೋ ನೋಡೋಣ. ನಾನು ಅವನನ್ನು ನನ್ನ ಕ್ರೂರವಾದ ಬಾಣಗಳಿಂದ ಚೂರುಚೂರು ಮಾಡುವೆನು.

ಏತಸ್ಮಿನ್ನಂತರೇ ಕಾಲಃ ಸಂಪ್ರಾಪ್ತಶ್ಶಂಕರೇಣ ಹಿ ।
ಯತ್ರ ಸಾ ಬಾಣದುಹಿತಾ ಸುಜಾತಾ ಕೃತಮಂಗಲಾ ॥ ೨೭ ॥

ಮಾಧವಂ ಮಾಧವೇ ಮಾಸಿ ಪೂಜಯಿತ್ವಾ ಮಹಾನಿಶಿ ।
ಸುಪ್ತಾ ಚಾಂತಃಪುರೇ ಗುಪ್ತೇ ಸ್ತ್ರೀಭಾವಮುಪಲಂಭಿತಾ ॥ ೨೮ ॥

ಗೌರ್ಯಾ ಸಂಪ್ರೇಷಿತೇನಾಪಿ ವ್ಯಾಕೃಷ್ಟಾ ದಿವ್ಯಮಾಯಯಾ ।
ಕೃಷ್ಣಾತ್ಮಜಾತ್ಮಜೇನಾಥ ರುದಂತೀ ಸಾ ಹ್ಯನಾಥವತ್ ॥ ೨೯ ॥

ಸ ಚಾಪಿ ತಾಂ ಬಲಾದ್ಭುಕ್ತ್ವಾ ಪಾರ್ವತ್ಯಾಃ ಸಖಿಭಿಃ ಪುನಃ ।
ನೀತಸ್ತು ದಿವ್ಯಯೋಗೇನ ದ್ವಾರಕಾಂ ನಿಮಿಷಾಂತರಾತ್ ॥ ೩೦ ॥

ವ್ಯುದಿತಾ ಸಾ ತದೋತ್ಥಾಯ ರುದಂತೀ ವಿವಿಧಾ ಗಿರಃ ।
ಸಖೀಭ್ಯಃ ಕಥಯಿತ್ವಾ ತು ದೇಹತ್ಯಾಗೇ ಕೃತಕ್ಷಣಾ ॥ ೩೧ ॥

---

೨೭-೨೮. ಹೀಗೆ ಯೋಚಿಸುತ್ತಿರುವಲ್ಲಿ ಶಂಕರನಿಂದ ನಿಯಮಿತವಾದ ಒಂದು ಕಾಲವು ಬಂದೊದಗಿತು. ಬಾಣಾಸುರನ ಮಗಳಾದ ಊಷಾದೇವಿಯು ವೈಶಾಖಮಾಸದ ಒಂದುದಿನದಲ್ಲಿ ಮಾಧವನನ್ನು ಪೂಜಿಸಿ ಅರ್ಧರಾತ್ರಿಯಲ್ಲಿ ಸುಖವಾಗಿ ಮಲಗಿದ್ದಳು.

೨೯. ಆಗ ಗೌರೀದೇವಿಯು ತನ್ನ ಮಾಯಾಬಲದಿಂದ ಕೃಷ್ಣನ ಮೊಮ್ಮಗನಾದ ಅನಿರುದ್ಧನನ್ನು ಊಷಾದೇವಿಯು ಸಮೀಪಕ್ಕೆ ಕಳುಹಿಸಿದಳು. ಅವನೊಡನೆ ರತಿಕ್ರೀಡೆಯನ್ನೆಸಗಿ ಕೊನೆಗೆ ಅವನನ್ನು ಕಾಣದೆ ಅನಾಥಳಂತೆ ಅಳಲು ಪ್ರಾರಂಭಿಸಿದಳು.

೩೦. ಅನಿರುದ್ಧನಾದರೋ ಆ ಊಷಾದೇವಿಯನ್ನು ಬಲಾತ್ಕಾರವಾಗಿ ಭೋಗಿಸಿದನು. ಒಡನೆಯೇ ಪಾರ್ವತಿಯ ಮಾಯಾಸಖಿಯರು ಅವನನ್ನು ದ್ವಾರಕಾಪಟ್ಟಣಕ್ಕೆ ಕರೆದೊಯ್ದರು.

೩೧. ಸ್ವಲ್ಪಹೊತ್ತಿನ ಮೇಲೆ ಊಷೆಯು ಎದ್ದು ನೋಡಲು ಆಗ ಪುರುಷನನ್ನು ಕಾಣದೆ ವ್ಯಥೆಪಟ್ಟು, ಕೊನೆಗೆ ತನ್ನ ಸಖಿಯರೊಡನೆ ಆ ವಿಷಯವನ್ನೇ ಹೇಳಿಕೊಳ್ಳುತ್ತಾ ಆ ಪತಿವಿರಹವನ್ನು ಸಹಿಸಲಾರದೆ ಪ್ರಾಣತ್ಯಾಗಮಾಡಲು ಸಿದ್ಧಳಾದಳು.

ಸಖ್ಯಾ ಕೃತಾತ್ಮನೋ ದೋಷಂ ಸಾ ವ್ಯಾಸ ಸ್ಮಾರಿತಾ ಪುನಃ ।
ಸರ್ವಂ ತತ್ಪೂರ್ವವೃತ್ತಾಂತಂ ತತೋ ದೃಷ್ಟ್ವಾ ಚ ಸಾಭವತ್ ॥ ೩೨ ॥

ಅಬ್ರವೀಚ್ಚಿತ್ರಲೇಖಾ ಚ ತತೋ ಮಧುರಯಾ ಗಿರಾ ।
ಊಷಾ ಬಾಣಸ್ಯ ತನಯಾ ಕುಂಭಾಂಡತನಯಾಂ ಮುನೇ ॥ ೩೩ ॥

॥ ಊಷೋವಾಚ ॥

ಸಖಿ ಯದ್ಯೇಷ ಮೇ ಭರ್ತಾ ಪಾರ್ವತ್ಯಾ ವಿಹಿತಃ ಪುರಾ ।
ಕೇನೋಪಾಯೇನ ತೇ ಗುಪ್ತಃ ಪ್ರಾಪ್ಯತೇ ವಿಧಿವನ್ಮಯಾ ॥ ೩೪ ॥

ಕಸ್ಮಿನ್ಕುಲೇ ಸ ವಾ ಜಾತೋ ಮಮ ಯೇನ ಹೃತಂ ಮನಃ ।
ಇತ್ಯೂಷಾವಚನಂ ಶ್ರುತ್ವಾ ಸಖೀ ಪ್ರೋವಾಚ ತಾಂ ತದಾ ॥ ೩೫ ॥

---

೩೨. ಸಖಿಯು ಹಿಂದೆ ಊಷೆಯು ಮಾಡಿದ ತಪ್ಪನ್ನೂ ಅದಕ್ಕೆ ಪಾರ್ವತಿಯು ಕೊಟ್ಟ ವರವನ್ನೂ ತಿಳಿಸಿದಳು. ಅದನ್ನು ಸ್ಮರಿಸಿಕೊಂಡು ಊಷೆಯು ಸುಮ್ಮನಾದಳು.

೩೩. ಆಮೇಲೆ ಚಿತ್ರಲೇಖೆಯೂ ಸಹ ಹಿಂದಿನ ಸಮಾಚಾರವನ್ನೆಲ್ಲಾ ತಿಳಿಸಿದಳು. ಅದನ್ನು ಕೇಳಿ ಊಷೆಯು ಕುಂಭಾಂಡನ ಪುತ್ರಿಯಾದ ಚಿತ್ರಲೇಖೆಯೊಡನೆ,

೩೪. ಎಲೌ ಸಖಿ, ನನ್ನ ಪತಿಯು ಪಾರ್ವತಿಯಿಂದ ಹಿಂದೆ ಹೇಳಲ್ಪಟ್ಟವನೇ ಆದರೆ ಅವನನ್ನು ಯಾವ ಉಪಾಯದಿಂದ ನಾನು ಸ್ವಾಧೀನಪಡಿಸಿಕೊಳ್ಳಬಹುದು ? ಅಲ್ಲದೆ ಅವನು ಯಾರು ಎಂಬುದನ್ನೂ ತಿಳಿಯುವ ಬಗೆ ಹೇಗೆ ?

೩೫. ಅಲ್ಲದೆ ನನ್ನ ಮನಸ್ಸನ್ನು ಸೆಳೆದಿರುವ ಆ ಪುರುಷನು ಯಾವ ಕುಲದವನು ? ಅವನ ಜನ್ಮಸ್ಥಳವಾವುದು ? ಇದನ್ನು ತಿಳಿಯುವುದು ಹೇಗೆ ? ಎಂದು ಸಖಿಯೊಡನೆ ಊಷಾದೇವಿಯು ಹೇಳುತ್ತಿರಲು ಸಖಿಯಾದ ಚಿತ್ರಲೇಖೆಯು ಅವಳನ್ನು ಕುರಿತು,

॥ ಚಿತ್ರಲೇಖೋವಾಚ ॥

ತ್ವಯಾ ಸ್ವಪ್ನೇ ಚ ಯೋ ದೃಷ್ಟಃ ಪುರುಷೋ ದೇವಿ ತಂ ಕಥಂ ।
ಅಹಂ ಸಮಾನಯಿಷ್ಯಾಮಿ ನ ವಿಜ್ಞಾತಸ್ತು ಯೋ ಮಮ ॥ ೩೬ ॥

ದೈತ್ಯಕನ್ಯಾ ತದುಕ್ತೇ ತು ರಾಗಾಂಧಾ ಮರಣೋತ್ಸುಕಾ ।
ರಕ್ಷಿತಾ ಚ ತಯಾ ಸಖ್ಯಾ ಪ್ರಥಮೇ ದಿವಸೇ ತತಃ ॥ ೩೭ ॥

ಪುನಃ ಪ್ರೋವಾಚ ಸೋಷಾಂ ವೈ ಚಿತ್ರಲೇಖಾ ಮಹಾಮತಿಃ ।
ಕುಂಭಾಂಡಸ್ಯ ಸುತಾ ಬಾಣತನಯಾಂ ಮುನಿಸತ್ತಮ ॥ ೩೮ ॥

॥ ಚಿತ್ರಲೇಖೋವಾಚ ॥

ವ್ಯಸನಂ ತೇಽಪಕರ್ಷಾಮಿ ತ್ರಿಲೋಕ್ಯಾಂ ಯದಿ ಭಾಸ್ಯತೇ ।
ಸಮಾನೇಷ್ಯೇ ನರಂ ಯಸ್ತೇ ಮನೋಹರ್ತಾ ತಮಾದಿಶ ॥ ೩೯ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ವಸ್ತ್ರಪುಟಕೇ ದೇವಾನ್ದೈತ್ಯಾಂಶ್ಚ ದಾನವಾನ್ ।
ಗಂಧರ್ವಸಿದ್ಧನಾಗಾಂಶ್ಚ ಯಕ್ಷಾದೀಂಶ್ಚ ತಥಾಲಿಖತ್ ॥ ೪೦ ॥

---

೩೬. ಎಲೌ ಊಷಾದೇವಿಯೇ, ನಿನ್ನ ಸ್ವಪ್ನದಲ್ಲಿ ಕಂಡವನನ್ನು ನಾನು ಕರೆದು ತರುವುದು ಹೇಗೆ? ಅವನ ಕುಲಗೋತ್ರಗಳಾವುದೂ ನನಗೆ ತಿಳಿಯದಲ್ಲಾ ಎಂದಳು.

೩೭. ಹೀಗೆ ಚಿತ್ರಲೇಖೆಯು ಹೇಳಲು ಊಷೆಯು ಕಾಮಮೋಹಿತಳಾಗಿ ಉಪಾಯವನ್ನು ಕಾಣದೆ ಪ್ರಾಣತ್ಯಾಗಮಾಡಲು ಸಿದ್ಧಳಾದಳು. ಆಗ ಆ ಚಿತ್ರಲೇಖೆಯು ಸಮಾಧಾನ ಹೇಳಿ ಹೇಗೋ ಒಂದು ದಿವಸವನ್ನು ಕಳೆದಳು.

೩೮. ಅನಂತರ, ಕುಂಭಾಂಡಪುತ್ರಿಯಾದ ಚಿತ್ರಲೇಖೆಯು ಬಾಣಾಸುರ ಪುತ್ರಿಯಾದ ಊಷೆಯೊಡನೆ ಮತ್ತಿಂತೆಂದಳು.

೩೯. ಓ ದೇವಿ, ನಿನ್ನ ಅನುರಾಗಕ್ಕೆ ಸಿಕ್ಕಿದ ಪುರುಷನು ಮೂರು ಲೋಕದಲ್ಲಿ ಎಲ್ಲಿದ್ದರೂ ಕರೆದು ತರುವೆನು. ಆದರೆ ಅವನೆಲ್ಲಿರುವನೆಂಬುದನ್ನು ಮಾತ್ರ ತಿಳಿಸು ಎಂದು ಹೇಳಿ,

೪೦-೪೧. ಒಂದು ವಿಶಾಲವಾದ ಬಟ್ಟೆಯಲ್ಲಿ ಸಮಸ್ತ ದೇವರಾಕ್ಷಸರ ಪ್ರತಿಕೃತಿಗಳನ್ನೂ, ಹಾಗೆಯೇ ಸಿದ್ಧರು, ನಾಗರು, ಯಕ್ಷರು, ಗಂಧರ್ವರು ಇವರೆಲ್ಲರ

ತಥಾ ನರಾಂಸ್ತೇಷು ವೃಷ್ಣೀನ್ ಶೂರಮಾನಕದುಂದುಭಿಂ ।
ವ್ಯಲಿಖದ್ರಾಮಕೃಷ್ಣೌ ಚ ಪ್ರದ್ಯುಮ್ನಂ ನರಸತ್ತಮಂ ॥ ೪೧ ॥

ಅನಿರುದ್ಧಂ ವಿಲಿಖಿತಂ ಪ್ರಾದ್ಯುಮ್ನಿಂ ವೀಕ್ಷ್ಯ ಲಜ್ಜಿತಾ ।
ಆಸೀದವಾಙ್ಮುಖೀ ಚೋಷಾ ಹೃದಯೇ ಹರ್ಷಪೂರಿತಾ ॥ ೪೨ ॥

ಊಷಾ ಪ್ರೋವಾಚ ಚೌರೋಽಸೌ ಮಯಾ ಪ್ರಾಪ್ತಸ್ತು ಯೋ ನಿಶಿ ।
ಪುರುಷಃ ಸಖಿ ಯೇನಾಶು ಚೇತೋರತ್ನಂ ಹೃತಂ ಮಮ ॥ ೪೩ ॥

ಯಸ್ಯ ಸಂಸ್ಪರ್ಶನಾದೇವಂ ಮೋಹಿತಾಹಂ ತಥಾಭವಂ ।
ತಮಹಂ ಜ್ಞಾತುಮಿಚ್ಛಾಮಿ ವದ ಸರ್ವಂ ಚ ಭಾಮಿನಿ ॥ ೪೪ ॥

ಕಸ್ಯಾಯಮನ್ವಯೇ ಜಾತೋ ನಾಮ ಕಿಂ ಚಾಸ್ಯ ವಿದ್ಯತೇ ।
ಇತ್ಯುಕ್ತಾ ಸಾಬ್ರವೀನ್ನಾಮ ಯೋಗಿನೀ ತಸ್ಯ ಚಾನ್ವಯಂ ॥ ೪೫ ॥

---

ಚಿತ್ರಗಳನ್ನೂ, ಅನೇಕ ಮನುಷ್ಯರ ವಿಗ್ರಹಗಳನ್ನೂ ಬರೆದು, ಅದರಲ್ಲಿ ಕೃಷ್ಣವಂಶದ ಶೂರಸೇನ, ಬಲರಾಮ, ವಸುದೇವ, ಶ್ರೀಕೃಷ್ಣ, ಪ್ರದ್ಯುಮ್ನ ಅನಿರುದ್ಧ ಇವರ ಆಕಾರಗಳನ್ನು ಚಿತ್ರಿಸಿದಳು.

೪೨. ಇವರುಗಳನ್ನೆಲ್ಲಾ ಊಷೆಯು ನೋಡಿ, ಕೊನೆಯಲ್ಲಿ ಪ್ರದ್ಯುಮ್ನನ ಮಗನಾದ ಅನಿರುದ್ಧನ ಚಿತ್ರವನ್ನು ನೋಡುತ್ತಲೇ ನಾಚಿಕೆಯಿಂದ ಕೂಡಿದವಳಾಗಿ ಮನಸ್ಸಿನಲ್ಲಿ ಹರ್ಷವನ್ನು ತಾಳಿ ತಲೆಬಾಗಿ ನಿಂತಳು.

೪೩. ಅಲ್ಲದೆ ಸಖಿಯೊಡನೆ ಓ ಸಖಿ, ಈ ಪುರುಷನೇ ಅಂದು ರಾತ್ರಿಯಲ್ಲಿ ನನಗೆ ಸುಖವನ್ನಿತ್ತು ನನ್ನ ಮನಸ್ಸನ್ನು ಅಪಹರಿಸಿರುವನು ಎಂದು ಹೇಳಿದಳು.

೪೪-೪೫. ಇವನ ಸ್ಪರ್ಶಸುಖದಿಂದಲೇ ನಾನು ಮೋಹಿತಳಾಗಿರುವೆನು. ಇವನ ವಿಷಯವನ್ನೇ ನಾನು ತಿಳಿಯಲು ಉತ್ಸುಕತೆಯಿಂದಿರುವೆನು. ಇವನು ಯಾವ ವಂಶದವನು ? ಇವನ ಹೆಸರೇನು ? ಇವನ್ನೆಲ್ಲಾ ನನಗೆ ತಿಳಿಸು ಎನ್ನಲು,

ಸರ್ವಮಾಕರ್ಣ್ಯ ಸಾ ತಸ್ಯ ಕುಲಾದಿ ಮುನಿಸತ್ತಮ ।
ಉತ್ಸುಕಾ ಬಾಣತನಯಾ ಬಭಾಷೇ ಸಾ ತು ಕಾಮಿನೀ　　॥ ೪೬ ॥

॥ ಊಷೋವಾಚ ॥

ಉಪಾಯಂ ರಚಯ ಪ್ರೀತ್ಯಾ ತತ್ಪ್ರಾಪ್ತ್ಯೈ ಸಖಿ ತತ್ಕ್ಷಣಾತ್ ।
ಯೇನೋಪಾಯೇನ ತಂ ಕಾಂತಂ ಲಭೇಯಂ ಪ್ರಾಣವಲ್ಲಭಂ　　॥ ೪೭ ॥

ಯಂ ವಿನಾಹಂ ಕ್ಷಣಂ ನೈಕಂ ಸಖಿ ಜೀವಿತುಮುತ್ಸಹೇ ।
ತಮಾನಯೇಹ ಸದ್ಯತ್ನಾತ್ಸುಖಿನೀಂ ಕುರು ಮಾಂ ಸಖಿ　　॥ ೪೮ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತಾ ಸಾ ತಯಾ ಬಾಣಾತ್ಮಜಯಾ ಮಂತ್ರಿಕನ್ಯಕಾ ।
ವಿಸ್ಮಿತಾಭೂನ್ಮುನಿಶ್ರೇಷ್ಠ ಸುವಿಚಾರಪರಾಭವತ್　　॥ ೪೯ ॥

ತತಸ್ಸಖೀಂ ಸಮಾಭಾಷ್ಯ ಚಿತ್ರಲೇಖಾ ಮನೋಜವಾ ।
ಬುಧ್ವಾ ತಂ ಕೃಷ್ಣಪೌತ್ರಂ ಸಾ ದ್ವಾರಕಾಂ ಗಂತುಮುದ್ಯತಾ　　॥ ೫೦ ॥

---

೪೬-೪೭. ಸಖಿಯು ಅವನ ಕುಲಗೋತ್ರಗಳನ್ನೆಲ್ಲಾ ತಿಳಿಸಿದಳು ಬಳಿಕ ಊಷೆಯು ತನ್ನ ಸಖಿಯನ್ನು ಕುರಿತು, ಓ ಸಖಿ, ಯಾವುದಾದರೂ ಉಪಾಯದಿಂದ ಆ ಪುರುಷನನ್ನೇ ನನ್ನ ಪ್ರಾಣವಲ್ಲಭನನ್ನಾಗಿಮಾಡು ಅಥವಾ ಆ ಮಾರ್ಗವನ್ನಾದರೂ ನನಗೆ ತೋರಿಸು.

೪೮. ಆ ಪುರುಷನ ಸಂಬಂಧವಿಲ್ಲದೆ ನಾನು ಕ್ಷಣಕಾಲವೂ ಬದುಕಲಾರೆನು. ಆದುದರಿಂದ ಜಾಗ್ರತೆಯಾಗಿ ಅವನನ್ನು ಇಲ್ಲಿಗೆ ಕರೆದುತಂದು ನನ್ನನ್ನು ಸುಖಿನಿಯನ್ನಾಗಿಮಾಡು ಎಂದಳು.

೪೯. ಸನತ್ಕುಮಾರನಿಂತೆಂದನು.—ಎಲೈ ವ್ಯಾಸನೇ, ಹೀಗೆ ಊಷಾದೇವಿಯು ಮಂತ್ರಿಪುತ್ರಿಯಾದ ಚಿತ್ರಲೇಖೆಯೊಡನೆ ಸ್ವಾಭಿಪ್ರಾಯವನ್ನು ಹೇಳಲು ಆಕೆಯು ಆಶ್ಚರ್ಯದಿಂದ ಕೂಡಿದವಳಾಗಿ ಯೋಚಿಸಲಾರಂಭಿಸಿದಳು.

೫೦-೫೧. ಆಮೇಲೆ ಚಿತ್ರಲೇಖೆಯು ಊಷೆಯನ್ನು ಸಮಾಧಾನಪಡಿಸಿ ಕೃಷ್ಣನ ಮೊಮ್ಮಗನಾದ ಅನಿರುದ್ಧನು ಇರುವ ದ್ವಾರಕಿಗೆ ಮನೋವೇಗದಿಂದ ಹೊರಟು

ಜ್ಯೇಷ್ಠಕೃಷ್ಣಚತುರ್ದಶ್ಯಾಂ ತೃತೀಯೇ ತು ಗತೇಽಹನಿ ।
ಅಪ್ರಭಾತಾನ್ಮುಹೂರ್ತೇ ತು ಸಂಪ್ರಾಪ್ತಾ ದ್ವಾರಕಾಂ ಪುರೀಂ ॥ ೫೧ ॥

ಏಕೇನ ಕ್ಷಣಮಾತ್ರೇಣ ನಭಸಾ ದಿವ್ಯಯೋಗಿನೀ ।
ತತಶ್ಚಾಂತಃಪುರೋದ್ಯಾನೇ ಪ್ರಾದ್ಯುಮ್ನಿರ್ದದೃಶೇ ತಯಾ ॥ ೫೨ ॥

ಕ್ರೀಡನ್ನಾರೀಜನೈಸ್ಸಾರ್ಧಂ ಪ್ರಾಪಿಬನ್ಮಾಧವೀಮಧು ।
ಸರ್ವಾಂಗಸುಂದರಶ್ಶ್ಯಾಮಃ ಸುಸ್ಮಿತೋ ನವಯೌವನಃ ॥ ೫೩ ॥

ತತಃ ಖಟ್ವಾಂ ಸಮಾರೂಢಮಂಧಕಾರಪಟೇನ ಸಾ ।
ಆಚ್ಛಾಧಯಿತ್ವಾ ಯೋಗೇನ ತಾಮಸೇನ ಚ ಮಾಧವಂ ॥ ೫೪ ॥

ತತಸ್ಸಾ ಮೂರ್ಧ್ನಿ ತಾಂ ಖಟ್ವಾಂ ಗೃಹಿತ್ವಾ ನಿಮಿಷಾಂತರಾತ್ ।
ಸಂಪ್ರಾಪ್ತಾ ಶೋಣಿತಪುರಂ ಯತ್ರ ಸಾ ಬಾಣನಂದಿನೀ ॥ ೫೫ ॥

---

ಜ್ಯೇಷ್ಠಮಾಸದ ಬಹುಳ ಚತುರ್ದಶಿಯ ದಿನ ಹಗಲು ಮೂರು ಮುಹೂರ್ತವು ಕಳೆದಿರಲಾಗಿ ದ್ವಾರಕಪಟ್ಟಣ ಪ್ರವೇಶವನ್ನು ಮಾಡಿದಳು.

೫೨. ದಿವ್ಯಯೋಗಿನಿಯಾದ ಆ ಚಿತ್ರಲೇಖೆಯು ಕ್ಷಣಕಾಲದಲ್ಲಿ ಅಂತರಿಕ್ಷ ಮಾರ್ಗವಾಗಿ ಆ ಪುರದ ಉದ್ಯಾನದಲ್ಲಿ ಬಂದಿಳಿದಳು. ಅಲ್ಲಿ ಅನಿರುದ್ಧನಿರುವುದನ್ನು ಕಂಡಳು.

೫೩. ಅನಿರುದ್ಧನಾದರೂ ಮಾಧವೀ ಎಂಬ ಮದ್ಯಪಾನದಿಂದ ಮತ್ತನಾಗಿ ನಾರೀಜನರೊಡನೆ ಅಲ್ಲಿ ವಿಹರಿಸುತ್ತಿದ್ದನು. ಆತನ ದೇಹವಾದರೋ ನವಯೌವನ ಸಂಪತ್ತಿನಿಂದ ಬೆಳಗುತ್ತಿದ್ದಿತು. ಸರ್ವಾಂಗಸುಂದರನೂ ವಿಕಸಿತವದನನೂ ಆಗಿ ಕಂಗೊಳಿಸುತ್ತಿದ್ದನು.

೫೪-೫೫. ಬಳಿಕ ಚಿತ್ರಲೇಖೆಯು ತನ್ನ ಮಾಯಾಶಕ್ತಿಯಿಂದ ಅವನು ಕುಳಿತಿದ್ದ ಮಂಚವನ್ನೇ ಕಪ್ಪುಬಟ್ಟೆಯಿಂದ ಮುಚ್ಚಿ ಹೊತ್ತು ಕೆಲವು ನಿಮಿಷಗಳಲ್ಲಿಯೇ ಬಾಣಾಸುರಪುತ್ರಿಯಿದ್ದ ಶೋಣಿತನಗರಿಗೆ ತಂದುಬಿಟ್ಟಳು.

ಕಾಮಾರ್ತಾ ವಿವಿಧಾನ್ಭಾವಾಙ್ಕಾರೋನ್ಮತ್ತಮಾನಸಾ ।
ಅನೀತಮಥ ತಂ ದೃಷ್ಟ್ವಾ ತದಾ ಭೀತಾ ಚ ಸಾಭವತ್ ॥ ೫೬ ॥

ಅಂತಃಪುರೇ ಸುಗುಪ್ತೇ ಚ ನವೇ ತಸ್ಮಿನ್ನವಮಾಗಮೇ ।
ಯಾವತ್ಕ್ರೀಡಿತುಮಾರಬ್ಧಂ ತಾವಜ್ಞಾತಂ ಚ ತತ್ಕ್ಷಣಾತ್ ॥ ೫೭ ॥

ಅಂತಃಪುರದ್ವಾರಗತೈರ್ವೇತ್ರಜರ್ಜರಪಾಣಿಭಿಃ ।
ಇಂಗಿತೈರನುಮಾನೈಶ್ಚ ಕನ್ಯಾದೌಃಶೀಲ್ಯಮಾಚರನ್ ॥ ೫೮ ॥

ಸ ಚಾಪಿ ದೃಷ್ಟಸ್ತೈಸ್ತತ್ರ ನರೋ ದಿವ್ಯವಪುರ್ಧರಃ ।
ತರುಣೋ ದರ್ಶನೀಯಸ್ತು ಸಾಹಸೀ ಸಮರಪ್ರಿಯಃ ॥ ೫೯ ॥

ತಂ ದೃಷ್ಟ್ವಾ ಸರ್ವಮಾಚಖ್ಯುರ್ಬಾಣಾಯ ಬಲಿಸೂನವೇ ।
ಪುರುಷಾಸ್ತೇ ಮಹಾವೀರಾಃ ಕನ್ಯಾಂತಃಪುರರಕ್ಷಕಾಃ ॥ ೬೦ ॥

---

೫೬. ಆ ಕಾಮಿನಿಯಾದ ಊಷಾದೇವಿಯು ಆ ಅನಿರುದ್ಧನನ್ನು ನೋಡಿ ನಾನಾವಿಧವಾದ ಕಾಮುಚೇಷ್ಟೆಗಳನ್ನು ತೋರ್ಪಡಿಸಿದಳು. ಅಲ್ಲದೆ ಮನಸ್ಸಿನಲ್ಲಿ ಭಯವಿದ್ದೇ ಇದ್ದಿತು.

೫೭. ಹೀಗೆ ಅಂತಃಪುರದಲ್ಲಿ ಗುಟ್ಟಾಗಿ ಇವರಿಬ್ಬರೂ ಕ್ರೀಡಿಸುತ್ತಿದ್ದುದು ಒಡನೆಯೇ ಅಲ್ಲಿ ಎಲ್ಲರಿಗೂ ತಿಳಿದುಹೋಯಿತು.

೫೮. ಅಂತಃಪುರದ ಬಾಗಿಲಿನಲ್ಲಿ ಬೆತ್ತಗಳನ್ನು ಹಿಡಿದು ನಿಂತಿರುವ ಸೇವಕರು ಈ ಊಷೆಯ ದುಶ್ಶೀಲತೆಗಳನ್ನು ಅನುಮಾನದಿಂದ ಊಹಿಸಿ ತಿಳಿದುಕೊಂಡರು.

೫೯. ಅಷ್ಟರಲ್ಲಿಯೇ ಆ ಸುಂದರನೂ, ಸಾಹಸಿಯೂ, ಯುದ್ಧಪ್ರಿಯನೂ ಆದ ಅನಿರುದ್ಧನು ಅವರಿಗೆಲ್ಲರಿಗೂ ಅಲ್ಲಿಯೇ ಕಾಣಿಸಿಕೊಂಡನು.

೬೦. ಅವನನ್ನು ಕಂಡೊಡನೆಯೇ ಅಂತಃಪುರರಕ್ಷಕರಾದ ಆ ವೀರರೆಲ್ಲರೂ ಆ ವಿಷಯವನ್ನು ಬಾಣಾಸುರನಿಗೆ ತಿಳಿಸಿದರು.

॥ ದ್ವಾರಪಾಲಾ ಊಚುಃ ॥
ದೇವ ಕಶ್ಚಿನ್ನ ಜಾನೀತೇ ಗುಪ್ತಶ್ಚಾಂತಃಪುರೇ ಬಲಾತ್ ।
ಶಕ್ರಸ್ತು ತವ ಕನ್ಯಾಂ ವೈ ಸ್ವಯಂಗ್ರಾಹಾದಧರ್ಷಯತ್ ॥ ೬೧ ॥

ದಾನವೇಂದ್ರ ಮಹಾಬಾಹೋ ಪಶ್ಯ ಪಶ್ಯೈನಮತ್ರ ಚ ।
ಯದ್ಯುಕ್ತಂ ಸ್ಯಾತ್ತತ್ಕುರುಷ್ವ ನ ದುಷ್ಟಾ ವಯಮಿತ್ಯುತ ॥ ೬೨ ॥

॥ ಸನತ್ಕುಮಾರ ಉವಾಚ ॥
ತೇಷಾಂ ತದ್ವಚನಂ ಶ್ರುತ್ವಾ ದಾನವೇಂದ್ರೋ ಮಹಾಬಲಃ ।
ವಿಸ್ಮಿತೋಽಭೂನ್ಮುನಿಶ್ರೇಷ್ಠ ಕನ್ಯಾಯಾಃ ಶ್ರುತದೂಷಣಃ ॥ ೬೩ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಊಷಾಚರಿತ್ರವರ್ಣನಂ ನಾಮ
ದ್ವಿಪಂಚಾಶತ್ತಮೋಽಧ್ಯಾಯಃ

---

೬೧. ದ್ವಾರಪಾಲಕರೆಲ್ಲರೂ ಬಾಣಾಸುರನಲ್ಲಿಗೆ ಹೋಗಿ, ಓ ಸ್ವಾಮಿಯೇ, ಇಂದ್ರನೂ ಸಹ ಆ ನಿಮ್ಮ ಪುತ್ರಿಯನ್ನು ಹೊಂದಲು ಅಸಮರ್ಥನಾಗಿರುವನು. ಹೀಗಿರುವಲ್ಲಿ ಯಾವನೋ ಒಬ್ಬ ಪುರುಷನು ಗೂಢವಾಗಿ ನಿಮ್ಮ ಮಗಳ ಅಂತಃಪುರ ವನ್ನು ಹೊಕ್ಕಿರುವನು.

೬೨. ಎಲೈ ರಾಕ್ಷಸವೀರನಾದ ಬಾಣಾಸುರನೇ, ಇಗೋ ಇವನನ್ನು ನೋಡು. ನಿನಗೆ ಏನು ಯುಕ್ತವೆಂದು ತೋರುವುದೋ ಅದನ್ನು ಮಾಡು. ಇದ್ದ ಸಂಗತಿಯನ್ನು ತಿಳಿಸಿದ್ದೇವೆ ಎಂದು ವಿಜ್ಞಾಪಿಸಿದರು.

೬೩. ಸನತ್ಕುಮಾರನಿಂತೆಂದನು :—ಓ ವ್ಯಾಸನೇ, ಹೀಗೆ ಹೇಳಿದ ದ್ವಾರಪಾಲಕರ ಮಾತುಗಳನ್ನು ಆ ಬಾಣಾಸುರನು ಕೇಳಿ ಅಚ್ಚರಿಯಿಂದ ಕೂಡಿ, ತನ್ನ ಮಗಳಲ್ಲಿ ಈ ದೋಷವಿರುವುದನ್ನು ತಿಳಿದು ತುಂಬಾ ಖಿನ್ನನಾದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಊಷಾಚರಿತ್ರೆಯೆಂಬ ಐವತ್ತೆರಡನೆಯ ಅಧ್ಯಾಯವು
ಮುಗಿದುದು.

॥ ಶ್ರೀ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾ ಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ತ್ರಿಪಂಚಾಶತ್ತಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಅಥ ಬಾಣಾಸುರಃ ಕ್ರುದ್ಧಸ್ತತ್ರ ಗತ್ವಾ ದದರ್ಶ ತಂ ।
ದಿವ್ಯಲೀಲಾತ್ತವಪುಷಂ ಪ್ರಥಮೇ ವಯಸಿ ಸ್ಥಿತಂ ॥ ೧ ॥

ತಂ ದೃಷ್ಟ್ವಾ ವಿಸ್ಮಿತಂ ವಾಕ್ಯಂ ಕಿಂ ಕಾರಣಮಥಾಬ್ರವೀತ್ ।
ಬಾಣಃ ಕ್ರೋಧಪರೀತಾತ್ಮಾ ಯುಧಿ ಶೌಂಡೋ ಹಸನ್ನಿವ ॥ ೨ ॥

---

### ಐವತ್ತಮೂರನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :—ಅನಂತರ ಕುಪಿತನಾದ ಬಾಣಾಸುರನು ಮಗಳ ಅಂತಃಪುರಕ್ಕೆ ಹೋಗಿ ಅಲ್ಲಿ ಚಿಕ್ಕವಯಸ್ಸಿನವನೂ ಸುಂದರನೂ ಆದ ಅನಿರುದ್ಧನನ್ನು ನೋಡಿದನು.

೨. ನೋಡಿದೊಡನೆಯೇ ಬಾಣಾಸುರನ ಕೋಪವು ಮತ್ತೂ ಹೆಚ್ಚಿತು. ಕೋಪದಿಂದಲೇ ಮಾತನಾಡುತ್ತಾ ಅಲ್ಲಿಗೆ ಬಂದಿದ್ದಕ್ಕೆ ಕಾರಣವನ್ನು ಕೇಳಿದನು.

ಅಹೋ ಮನುಷ್ಯೋ ರೂಪಾಢ್ಯಸ್ಸಾಹಸೀ ಧೈರ್ಯವಾನಿತಿ ।
ಕೋಽಯಮಾಗತಕಾಲಶ್ಚ ದುಷ್ಟಭಾಗ್ಯೋ ವಿಮೂಢಧೀಃ ॥ ೩ ॥

ಯೇನ ಮೇ ಕುಲಚಾರಿತ್ರಂ ದೂಷಿತಂ ದುಹಿತಾ ಹಿತಾ ।
ತಂ ಮಾರಯಧ್ವಂ ಕುಪಿತಾಶ್ಶೀಘ್ರಂ ಶಸ್ತ್ರೈಸ್ಸುದಾರುಣೈಃ ॥ ೪ ॥

ದುರಾಚಾರಂ ಚ ತಂ ಬದ್ಧ್ವಾ ಘೋರೇ ಕಾರಾಗೃಹೇ ತತಃ ।
ರಕ್ಷಧ್ವಂ ನಿಕಟೇ ವೀರಾ ಬಹುಕಾಲಂ ವಿಶೇಷತಃ ॥ ೫ ॥

ನ ಜಾನೇ ಕೋಽಯಮುಭಯಃ ಕೋ ವಾ ಘೋರಪರಾಕ್ರಮಃ ।
ವಿಚಾರ್ಯೇತಿ ಮಹಾಬುದ್ಧಿಸ್ಸಂದಿಗ್ಧೋಽಭೂಚ್ಛರಾಸುರಃ ॥ ೬ ॥

ತತೋ ದೈತ್ಯೇನ ಸೈನ್ಯಂ ತು ದಶಸಾಹಸ್ರಕಂ ಶನೈಃ ।
ವಧಾಯ ತಸ್ಯ ವೀರಸ್ಯ ವ್ಯಾದಿಷ್ಟಂ ಪಾಪಬುದ್ಧಿನಾ ॥ ೭ ॥

---

೩. ಓಹೋ ಈತನು ಮನುಷ್ಯನು. ಸುಂದರನು. ಸಾಹಸಿಯಂತೆ ಕಾಣುತ್ತಿರುವನು. ಬುದ್ಧಿಯಿಲ್ಲದೆ ಅದೃಷ್ಟಶೂನ್ಯನಾಗಿ ಇಲ್ಲಿಗೆ ಬಂದು ಸೇರಿರುವನು. ಇವನಿಗೆ ಮೃತ್ಯುವು ಸನ್ನಿಹಿತವಾಗಿರುವುದು.

೪. ಇವನಿಂದ ನಮ್ಮ ಕುಲಕ್ಕೆ ಕಳಂಕಬಂದಿದೆ. ನನ್ನ ಮಗಳ ಶೀಲತೆಯನ್ನು ಈ ದುಷ್ಟನು ಹಾಳುಮಾಡಿದ್ದಾನೆ. ಈಗಲೇ ಈತನನ್ನು ಕ್ರೂರಾಸ್ತ್ರಗಳಿಂದ ಕೊಂದುಹಾಕಿರಿ.

೫. ಈ ದುರಾಚಾರಿಯಾದ ಪುರುಷನನ್ನು ಹಿಡಿದು ಸೆರೆಮನೆಯಲ್ಲಿಟ್ಟು ಜೀವಾಧಾರಕ್ಕಾಗಿ ಬಹು ಸ್ವಲ್ಪ ಆಹಾರವನ್ನು ಮಾತ್ರ ಕೊಡುತ್ತಾ ತಪ್ಪಿಸಿಕೊಂಡು ಹೋಗದಂತೆ ಜೋಪಾನವಾಗಿ ಕಾಪಾಡುತ್ತಿರಿ ಎಂದು ತನ್ನ ಸೇವಕರಿಗೆ ಅಪ್ಪಣೆ ಮಾಡಿದನು.

೬. ಇಷ್ಟಾದರೂ ಈತನು ಭಯವಿಲ್ಲದೆ ಇರುವನಲ್ಲ. ಈತನು ಯಾರಿರಬಹುದು? ಬಹುಪರಾಕ್ರಮಿಯಂತೆ ಕಾಣುವನು ಎಂದು ಯೋಚಿಸುತ್ತಾ ಬಾಣಾಸುರನು ಸಂದೇಹಗ್ರಸ್ತನಾದನು.

೭. ಒಡನೆಯೇ ಪಾಪಬುದ್ಧಿಯುಳ್ಳ ಆ ಬಾಣನು ಅವನನ್ನು ಎದುರಿಸಲು ಸಿದ್ಧನಾಗಿ ಅವನ ನಾಶಕ್ಕೋಸ್ಕರ ಹತ್ತುಸಾವಿರ ಸೈನ್ಯವನ್ನು ಸಿದ್ಧಗೊಳಿಸಿದನು.

ತದಾದಿಷ್ಟಾಸ್ತು ತೇ ವೀರಾಃ ಸರ್ವತೋಽಂತಃ ಪುರಂ ದ್ರುತಂ।
ಛಾದಯಾಮಾಸುರತ್ಯುಗ್ರಾಶ್ಛಿಂಧಿ ಭಿಂದೀತಿ ವಾದಿನಃ ॥ ೮ ॥

ಶತ್ರುಸೈನ್ಯಂ ತತೋ ದೃಷ್ಟ್ವಾ ಗರ್ಜಮಾನಃ ಸ ಯಾದವಃ ।
ಅಂತಃಪುರಂ ದ್ವಾರಗತಂ ಪರಿಘಂ ಗೃಹ್ಯ ಚಾತುಲಂ ॥ ೯ ॥

ನಿಷ್ಕ್ರಾಂತೋ ಭವನಾತ್ತಸ್ಮಾದ್ವಜ್ರಹಸ್ತ ಇವಾಂತಕಃ ।
ತೇನ ತಾನ್ಕಿಂಕರಾನ್ಹತ್ವಾ ಪುನಶ್ಚಾಂತಃ ಪುರಂ ಯಯೌ ॥ ೧೦ ॥

ಏವ ದಶಸಹಸ್ರಾಣಿ ಸೈನ್ಯಾನಿ ಮುನಿಸತ್ತಮ ।
ಜಘಾನ ರೋಷರಕ್ತಾಕ್ಷೋ ವರ್ಧಿತಶ್ಶಿವತೇಜಸಾ ॥ ೧೧ ॥

ಲಕ್ಷೇ ಹತೇಽಥ ಯೋಧಾನಾಂ ತತೋ ಬಾಣಾಸುರೋ ರುಷಾ ।
ಕುಂಭಾಂಡಂ ಸ ಗೃಹೀತ್ವಾ ತು ಯುದ್ಧೇ ಶೌಂಡಂ ಸಮಾಹ್ವಯತ್ ॥೧೨॥

---

೮. ಅವನಿಂದ ಆಜ್ಞಪ್ತರಾದ ಆ ಶೂರಸೈನಿಕರು ಆ ಅಂತಃಪುರದ ಸುತ್ತಲೂ ನೆರದು ಹೊಡಿ ಒಡಿ ಎಂದು ಕೂಗುತ್ತಾ ಮುತ್ತಿದರು.

೯. ಇದನ್ನು ಅಂತಃಪುರದಲ್ಲಿದ್ದ ಅನಿರುದ್ಧನು ನೋಡಿ ಅದೇ ಅಂತಃಪುರದ ಬಾಗಿಲಿಗೆ ಹಾಕಿದ್ದ ಅಗಳಿಯನ್ನೇ ಕಿತ್ತುಕೊಂಡು,

೧೦. ವಜ್ರಾಯುಧವನ್ನು ಹಿಡಿದುಬಂದ ಯಮನಂತೆ ಹೊರಹೊರಟು ಸುತ್ತಗಟ್ಟಿದ್ದ ಸೇವಕರನ್ನೆಲ್ಲಾ ಕೊಂದು ಪುನಃ ಅಂತಃಪುರಕ್ಕೆ ಹೋಗಿ ಸೇರಿದನು.

೧೧. ಶಿವನ ತೇಜಸ್ಸಿನಿಂದ ಇನ್ನೂ ಬಲಿಗೊಂಡ ಅನಿರುದ್ಧನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಹತ್ತುಸಹಸ್ರ ಸೈನಿಕರನ್ನು ಕೊಂದನು.

೧೨. ಹೀಗೆ ಲಕ್ಷ ಸೈನ್ಯವೂ ಅನಿರುದ್ಧನಿಂದ ನಾಶವಾಗಲು ಬಾಣಾಸುರನು ತನ್ನ ಮಂತ್ರಿಯಾದ ಕುಂಭಾಂಡನೊಡನೆ ಹೊರಟು ಅನಿರುದ್ಧನನ್ನು ಎದುರಿಸಿದನು.

ಅನಿರುದ್ಧಂ ಮಹಾಬುದ್ಧಿಂ ದ್ವಂದ್ವಯುದ್ಧೇ ಮಹಾಹವೇ ।
ಪ್ರಾದ್ಯುಮ್ನಿಂ ರಕ್ಷಿತಂ ಶೈವತೇಜಸಾ ಪ್ರಜ್ವಲತ್ತನುಂ ॥ ೧೩ ॥

ತತೋ ದಶಸಹಸ್ರಾಣಿ ತುರಂಗಾಣಾಂ ರಥೋತ್ತಮಾನ್ ।
ಯುದ್ಧಪ್ರಾಪ್ತೇನ ಖಡ್ಗೇನ ದೈತ್ಯೇಂದ್ರಸ್ಯ ಜಘಾನ ಸಃ ॥ ೧೪ ॥

ತದ್ವಧಾಯ ತತಶ್ಶಕ್ತಿಂ ಕಾಲವೈಶ್ವಾನರೋಪಮಾಂ ।
ಅನಿರುದ್ಧೋ ಗೃಹೀತ್ವಾ ತಾಂ ತಯಾ ತಂ ನಿಜಘಾನ ಹಿ ॥ ೧೫ ॥

ರಥೋಪಸ್ಥೇ ತತೋ ಬಾಣಸ್ತೇನ ಶಕ್ತ್ಯಾ ಹತೋ ದೃಢಂ ।
ಸ ಸಾಶ್ವಸ್ತತ್ಕ್ಷಣಂ ವೀರಸ್ತತ್ರೈವಾಂತರಧೀಯತ ॥ ೧೬ ॥

ತಸ್ಮಿಂಸ್ತ್ವದರ್ಶನಂ ಪ್ರಾಪ್ತೇ ಪ್ರಾದ್ಯುಮ್ನಿರಪರಾಜಿತಂ ।
ಆಲೋಕ್ಯ ಕಕುಭಸ್ಸರ್ವಾಸ್ತಸ್ಥೌ ಗಿರಿರಿವಾಚಲಃ ॥ ೧೭ ॥

---

೧೩. ಹೀಗೆ ಬಾಣಾನಿರುದ್ಧರಿಗೆ ದ್ವಂದ್ವಯುದ್ಧವು ಪ್ರಾರಂಭವಾಯಿತು. ಆಗ ಶಿವನ ಒಂದು ತೇಜಸ್ಸು ಪ್ರದ್ಯುಮ್ನಪುತ್ರನಾದ ಅನಿರುದ್ಧನನ್ನು ರಕ್ಷಿಸುತ್ತಿತ್ತು.

೧೪. ಅಲ್ಲದೆ ಬಾಣಾಸುರನ ಹತ್ತುಸಾವಿರ ಕುದುರೆಗಳನ್ನೂ ಉತ್ತಮ ರಥಗಳನ್ನೂ ತನಗೆ ಸಿಕ್ಕಿದ ಒಂದು ಕತ್ತಿಯಿಂದ ಚೂರುಚೂರುಮಾಡಿದನು.

೧೫. ಅನಿರುದ್ಧನು ಕಾಲಾಗ್ನಿಗೆ ಸಮವಾಗಿರುವ ಒಂದು ಶಕ್ತಿಯನ್ನು ಸ್ವೀಕರಿಸಿ ಅದರಿಂದ ಆ ಬಾಣಾಸುರನನ್ನು ಹೊಡೆದನು.

೧೬. ಆ ಹೊಡೆತದಿಂದ ಆ ರಾಕ್ಷಸನು ರಥಮಧ್ಯದಲ್ಲಿಯೇ ತನ್ನ ಕುದುರೆಯ ಸಮೇತವಾಗಿ ಅಲ್ಲಿಯೇ ಮಾಯವಾದನು.

೧೭. ಹಾಗೆ ಅವನು ಅಗೋಚರವಾಗಲು ಅನಿರುದ್ಧನು ಏನೂ ತೋರದೆ ಸಮಸ್ತ ದಿಕ್ಕುಗಳನ್ನೂ ನೋಡುತ್ತಾ ಪರಮೇಶ್ವರನನ್ನು ಧ್ಯಾನಿಸುತ್ತಾ ಬೆಟ್ಟದಂತೆ ನಿಶ್ಚಲನಾಗಿ ನಿಂತನು.

ಅದೃಶ್ಯಮಾನಸ್ತು ತದಾ ಕೂಟಯೋಧಸ್ಸ ದಾನವಃ ।
ನಾನಾಶಸ್ತ್ರಸಹಸ್ರೈಸ್ತಂ ಜಘಾನ ಹಿ ಪುನಃ ಪುನಃ ॥ ೧೮ ॥

ಛದ್ಮನಾ ನಾಗಪಾಶೈಸ್ತಂ ಬಬಂಧ ಸ ಮಹಾಬಲಃ ।
ಬಲಿಪುತ್ರೋ ಮಹಾವೀರಶ್ಶಿವಭಕ್ತಶ್ಶರಾಸುರಃ ॥ ೧೯ ॥

ತಂ ಬಧ್ವಾ ಪಂಜರಾಂತಸ್ಥಂ ಕೃತ್ವಾ ಯುದ್ಧಾದುಪಾರಮತ್ ।
ಉವಾಚ ಬಾಣಃ ಸಂಕ್ರುದ್ಧಸ್ಸೂತಪುತ್ರಂ ಮಹಾಬಲಂ ॥ ೨೦ ॥

॥ ಬಾಣಾಸುರ ಉವಾಚ ॥

ಸೂತಪುತ್ರ ಶಿರಶ್ಛಿಂಧಿ ಪುರುಷಸ್ಯಾಸ್ಯ ವೈ ಲಘು ।
ಯೇನ ಮೇ ದೂಷಿತಂ ಪೂತಂ ಬಲಾದ್ದುಷ್ಟೇನ ಸತ್ಕುಲಂ ॥ ೨೧ ॥

ಛಿತ್ವಾ ತು ಸರ್ವಗಾತ್ರಾಣಿ ರಾಕ್ಷಸೇಭ್ಯಃ ಪ್ರಯಚ್ಛ ಭೋಃ ।
ಅಥಾಸ್ಯ ರಕ್ತಮಾಂಸಾನಿ ಕ್ರವ್ಯಾದಾ ಅಪಿ ಭುಂಜತಾಂ ॥ ೨೨ ॥

---

೧೮. ಆ ಬಾಣಾಸುರನು ಮತ್ತೆ ಅಗೋಚರನಾಗಿಯೇ ನಾನಾವಿಧವಾದ ಶಸ್ತ್ರಾಸ್ತ್ರಗಳಿಂದ ಅನಿರುದ್ಧನನ್ನು ಬಹಳವಾಗಿ ನೋಯಿಸಿದನು.

೧೯. ಬಲಿಪುತ್ರನೂ ಶಿವಭಕ್ತನೂ ಶೂರನೂ ಆದ ಬಾಣಾಸುರನು ಮೋಸದಿಂದ ಆ ಅನಿರುದ್ಧನನ್ನು ಸರ್ಪಾಸ್ತ್ರಗಳ ಸಹಾಯದಿಂದ ಬಂಧಿಸಿದನು.

೨೦. ಬಂಧನದೊಳಗೆ ಸಿಕ್ಕಿರುವ ಅನಿರುದ್ಧನನ್ನು ನೋಡಿ ಬಾಣಾಸುರನು ತನ್ನ ಸೂತಪುತ್ರನನ್ನು ಕರೆದು ಕೋಪದಿಂದ ಹೀಗೆ ಆಜ್ಞೆಯಿತ್ತನು.

೨೧. ಓ ಸೂತಪುತ್ರನೇ, ಈ ಮನುಷ್ಯನ ತಲೆಯನ್ನು ಕತ್ತರಿಸು. ಇವನಿಂದ ಪವಿತ್ರವಾಗಿದ್ದ ನಮ್ಮ ಕುಲವು ಕಲುಷಿತವಾಗಿದೆ.

೨೨. ಇವನ ಅವಯುವಗಳನ್ನು ಕಡಿದು ರಾಕ್ಷಸರಿಗೆಲ್ಲಾ ಹಂಚು. ಇವನ ರಕ್ತವನ್ನೂ ಮಾಂಸವನ್ನೂ ಸಮಸ್ತ ಮಾಂಸಾಹಾರಿಗಳೂ ತಿಂದು ತೇಗಲಿ.

ಅಗಾಧೇ ತೃಣಸಂಕೀರ್ಣೇ ಕೂಪೇ ಪಾತಕಿನಂ ಜಹಿ ।
ಕಿಂ ಬಾಹೂಕ್ತ್ಯಾ ಸೂತಪುತ್ರ ಮಾರಣೀಯೋ ಹಿ ಸರ್ವಥಾ ॥ ೨೩ ॥

॥ ಸನತ್ಕುಮಾರ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ಧರ್ಮಬುದ್ಧಿರ್ನಿಶಾಚರಃ ।
ಕುಂಭಾಂಡಸ್ತ್ವಬ್ರವೀದ್ವಾಕ್ಯಂ ಬಾಣಂ ಸನ್ಮಂತ್ರಿಸತ್ತಮಃ ॥ ೨೪ ॥

॥ ಕುಂಭಾಂಡ ಉವಾಚ ॥

ನೈತತ್ಕರ್ತುಂ ಸಮುಚಿತಂ ಕರ್ಮ ದೇವ ವಿಚಾರ್ಯತಾಂ ।
ಅಸ್ಮಿನ್ಹತೇ ಹತೋ ಹ್ಯಾತ್ಮಾ ಭವೇದಿತಿ ಮತಿರ್ಮಮ ॥ ೨೫ ॥

ಅಯಂ ತು ದೃಶ್ಯತೇ ದೇವ ತುಲ್ಯೋ ವಿಷ್ಣೋಃ ಪರಾಕ್ರಮೈಃ ।
ವರ್ಧಿತಶ್ಚಂದ್ರಚೂಡಸ್ಯ ತ್ವದ್ದುಷ್ಟಸ್ಯ ಸುತೇಜಸಾ ॥ ೨೬ ॥

---

೨೩. ಹುಲ್ಲುಗಳಿಂದ ತುಂಬಿರುವ ಆಳವಾದ ಬಾವಿಯಲ್ಲಿ ಇವನನ್ನು ನೂಕಿ. ಹೆಚ್ಚೇನು ? ವಿಧವಿಧವಾದ ಚಿತ್ರಹಿಂಸೆಗಳಿಂದ ಇವನನ್ನು ಕೊಲ್ಲಬೇಕು ಎಂದನು.

೨೪. ಆ ಬಾಣಾಸುರನ ಕ್ರೂರವಾಕ್ಯಗಳನ್ನು ಕೇಳಿ ಕುಂಭಾಂಡನೆಂಬ ಮಂತ್ರಿ ಶ್ರೇಷ್ಠನು ಆ ಬಾಣನನ್ನು ಕುರಿತು,

೨೫. ಓ ರಾಜನೇ, ಈ ಕೆಲಸವನ್ನು ಮಾಡುವುದು ಉಚಿತವಲ್ಲ. ಏಕೆಂದರೆ, ಈ ಅನಿರುದ್ಧನು ನಾಶವಾದರೆ ನಿನ್ನ ಆತ್ಮಕ್ಕೂ ತೊಂದರೆಬರಬಹುದು ಎಂಬುದಾಗಿ ನನಗೆ ತೋರುತ್ತಿದೆ.

೨೬. ಎಲೈ ಸ್ವಾಮಿಯೇ, ಇವನು ಪರಾಕ್ರಮದಲ್ಲಿ ವಿಷ್ಣುವಿಗೆ ಸಮಾನನು. ನಿನ್ನಮೇಲೆ ಕೋಪಗೊಂಡ ಈಶ್ವರನ ತೇಜಸ್ಸಿನಿಂದ ಇವನು ಅಭಿವೃದ್ಧಿಗೊಂಡಿರುವನು.

ಅಥ ಚಂದ್ರಲಲಾಟಸ್ಯ ಸಾಹಸೇನ ಸಮುತ್ಸ್ವಯಂ ।
ಇಮಾಮವಸ್ಥಾಂ ಪ್ರಾಪ್ತೋಽಸಿ ಪೌರುಷೇ ಸಂವ್ಯವಸ್ಥಿತಃ ॥ ೨೭ ॥

ಅಯಂ ಶಿವಪ್ರಸಾದಾದ್ವೈ ಕೃಷ್ಣಪೌತ್ರೋ ಮಹಾಬಲಃ ।
ಅಸ್ಮಾಂಸ್ತೃಣೋಪಮಾನ್ವೇತ್ತಿ ದುಷ್ಟೋಽಪಿ ಭುಜಗೈರ್ಬಲಾತ್ ॥ ೨೮ ॥

॥ ಸನತ್ಕುಮಾರ ಉವಾಚ ॥

ಏತದ್ವಾಕ್ಯಂ ತು ಬಾಣಾಯ ಕಥಯಿತ್ವಾ ಸ ದಾನವಃ ।
ಅನಿರುದ್ಧಮುವಾಚೇದಂ ರಾಜನೀತಿವಿದುತ್ತಮಃ ॥ ೨೯ ॥

॥ ಕುಂಭಾಂಡ ಉವಾಚ ॥

ಕೋಽಸಿ ಕಸ್ಯಾಸಿ ರೇ ವೀರ ಸತ್ಯಂ ವದ ಮಮಾಗ್ರತಃ ।
ಕೇನ ವಾ ತ್ವಮಿಹಾನೀತೋ ದುರಾಚಾರ ನರಾಧಮ ॥ ೩೦ ॥

ದೈತ್ಯೇಂದ್ರಂ ಸ್ತುಹಿ ವೀರಂ ತ್ವಂ ನಮಸ್ಕುರು ಕೃತಾಂಜಲಿಃ ।
ಜಿತೋಽಸ್ಮೀತಿ ವಚೋ ದೀನಂ ಕಥಯಿತ್ವಾ ಪುನಃ ಪುನಃ ॥ ೩೧ ॥

---

೨೭. ಅಲ್ಲದೆ ನೀನು ಪರಾಕ್ರಮದಲ್ಲಿ ಈಶ್ವರನೊಡನೆ ಸಮನೆಂದು ಗರ್ವಪಟ್ಟಿದ್ದೀಯೆ. ಆ ಗರ್ವಪ್ರಭಾವದಿಂದಲೇ ನಿನಗೆ ಇಂತಹ ಸಮಯವು ಒದಗಿದೆ.

೨೮. ಶ್ರೀಕೃಷ್ಣನ ಮೊಮ್ಮಗನಾದ ಈ ಅನಿರುದ್ಧನಿಗೆ ಈಶ್ವರನ ವರಬಲವೂ ಸಂಪೂರ್ಣವಾಗಿದೆ. ಆದ್ದರಿಂದಲೇ ಇಷ್ಟು ನಾಗಪಾಶದಿಂದ ಬಂಧಿಸಲ್ಪಟ್ಟಿದ್ದರೂ ಲಕ್ಷ್ಯಮಾಡದೆ ನಮ್ಮನ್ನು ಹುಲ್ಲುಕಡ್ಡಿಗಿಂತ ಕಡೆಯಾಗಿ ಕಾಣುತ್ತಿರುವನು ಎಂದನು.

೨೯-೩೦. ಹೀಗೆ ಕುಂಭಾಂಡನು ಬಾಣಾಸುರನಿಗೆ ಬೋಧಿಸಿ ಅಲ್ಲಿಂದ ಅನಿರುದ್ಧನ ಸಮೀಪಕ್ಕೆ ಬಂದು ಎಲೈ ನರಾಧಮನೇ, ಓ ದುರಾಚಾರಿಯೇ, ನೀನು ಯಾರು ? ಯಾರ ಮಗನು ? ಇಲ್ಲಿಗೆ ನಿನ್ನನ್ನು ಕರೆತಂದವರು ಯಾರು ? ಇವೆಲ್ಲವನ್ನೂ ನನಗೆ ನಿಜವಾಗಿ ತಿಳಿಸು.

೩೧. ಲೋ ನೀಚ, ನಾನು ಸೋತಿದ್ದೇನೆಂದು ಹೇಳಿ, ಈಗಲೇ ದೈತ್ಯರಾಜನಾದ ಬಾಣಾಸುರನಿಗೆ ನಮಸ್ಕರಿಸು. ಅವನಿಗೆ ನೀನು ಶರಣಾಗತನಾಗು.

ಏವಂ ಕೃತೇ ತು ಮೋಕ್ಷಸ್ಸ್ಯಾದನ್ಯಥಾ ಬಂಧನಾದಿ ಚ ।
ತಚ್ಛ್ರುತ್ವಾನಿವಚನಂ ತಸ್ಯ ಪ್ರತಿವಾಕ್ಯಮುವಾಚ ಸಃ ॥ ೩೨ ॥

॥ ಅಧಿರುದ್ಧ ಉವಾಚ ॥

ರೇ ರೇ ದೈತ್ಯಾಧಮುಸಖೇ ಕರಪಿಂಡೋಪಜೀವಕ ।
ನಿಶಾಚರ ದುರಾಚಾರ ಶತ್ರುಧರ್ಮಂ ನ ವೇತ್ಸಿ ಭೋಃ ॥ ೩೩ ॥

ದೈನ್ಯಂ ಪಲಾಯನಂ ಚಾಥ ಶೂರಸ್ಯ ಮರಣಾಧಿಕಂ ।
ವಿರುದ್ಧಂ ಚೋಪಶಲ್ಯಂ ಚ ಭವೇದಿತಿ ಮತಿರ್ಮಮ ॥ ೩೪ ॥

ಕ್ಷತ್ರಿಯಸ್ಯ ರಣೇ ಶ್ರೇಯೋ ಮರಣಂ ಸನ್ಮುಖೋ ಸದಾ ।
ನ ವೀರಮಾನಿನೋ ಭೂಮೌ ದೀನಸ್ಯೇವ ಕೃತಾಂಜಲಿಃ ॥ ೩೫ ॥

॥ ಸನತ್ಕುಮಾರ ಉವಾಚ ॥

ಇತ್ಯಾದಿವೀರವಾಕ್ಯಾನಿ ಬಹೂನಿ ಸ ಜಗಾದ ತಂ ।
ತದಾಕರ್ಣ್ಯ ಸ ಬಾಣೋಽಸೌ ವಿಸ್ಮಿತೋಽಭೂಚ್ಚುಕೋಪ ಚ ॥ ೩೬ ॥

---

೩೨. ಹೀಗೆ ಮಾಡಿದರೆ ನಿನಗೆ ಬಿಡುಗಡೆಯಾದೀತು. ಇಲ್ಲವಾದರೆ ಇಲ್ಲಿಯೇ ನಿನ್ನನ್ನು ಬಂಧಿಸುವೆವು ಎಂದು ಕುಂಭಾಂಡನು ಹೇಳಲು ಆ ಮಾತುಗಳನ್ನು ಕೇಳಿ ಅನಿರುದ್ಧನಿಂತೆಂದನು.

೩೩. ಎಲೈ ನೀಚರಾಕ್ಷಸನ ಗೆಳೆಯನೇ, ನೀನು ಸಂಬಳದ ಕೂಳಿನಿಂದ ಜೀವಿಸುವವನು. ದುರಾಚಾರಿಯು. ಇಂತಹ ನಿನಗೆ ಶತ್ರುಗಳ ಧರ್ಮವು ತಿಳಿಯುವದೆಂತು ?

೩೪. ಹೆದರಿ ಓಡಿಹೋಗುವುದು ಶೂರನಾದವನಿಗೆ ಮರಣಕ್ಕಿಂತಲೂ ಹೆಚ್ಚು ವ್ಯಥೆಯನ್ನುಂಟುಮಾಡುವುದು. ಅಲ್ಲದೆ ಧರ್ಮವಿರುದ್ಧಕಾರ್ಯವು ಶೂರನಿಗೆ ಸಮ್ಮತವಾದುದಲ್ಲ. ಇದನ್ನು ನಾನು ಚೆನ್ನಾಗಿ ತಿಳಿದಿರುವೆನು.

೩೫. ಕ್ಷತ್ರಿಯನಿಗೆ ಯುದ್ಧದಲ್ಲಿ ಸಾಯುವುದೇ ಉತ್ತಮವಾದ ಮಾರ್ಗವು. ವೀರನಾದವನು ದೀನನಂತೆ ಎಂದಿಗೂ ಕೈಮುಗಿದು ನಿಲ್ಲುವುದಿಲ್ಲ ಎಂದನು.

೩೬. ಹೀಗೆ ಅನಿರುದ್ಧನು ಇನ್ನೂ ಅನೇಕ ವೀರವಾಕ್ಯಗಳನ್ನು ಉದಹರಿಸಿದನು. ಅವನ್ನು ಕೇಳಿ ಬಾಣನಿಗೆ ಆಶ್ಚರ್ಯವೂ ಕೋಪವೂ ಏಕಕಾಲದಲ್ಲುಂಟಾದವು.

ತದೋವಾಚ ನಭೋವಾಣೀ ಬಾಣಸ್ಯಾಶ್ವಾಸನಾಯ ಹಿ ।
ಶೃಣ್ವತಾಂ ಸರ್ವವೀರಾಣಾಮನಿರುದ್ಧಸ್ಯ ಮಂತ್ರಿಣಃ ॥ ೩೭ ॥

॥ ವ್ಯೋಮವಾಣ್ಯುವಾಚ ॥

ಭೋ ಭೋ ಬಾಣ ಮಹಾವೀರ ನ ಕ್ರೋಧಂ ಕರ್ತುಮರ್ಹಸಿ ।
ಬಲಿಪುತ್ರೋಽಸಿ ಸುಮತೇ ಶಿವಭಕ್ತ ವಿಚಾರ್ಯತಾಂ ॥ ೩೮ ॥

ಶಿವಸ್ಸರ್ವೇಶ್ವರಸ್ಸಾಕ್ಷೀ ಕರ್ಮಣಾಂ ಪರಮೇಶ್ವರಃ ।
ತದಧೀನಮಿದಂ ಸರ್ವಂ ಜಗದ್ವೈ ಸಚರಾಚರಂ ॥ ೩೯ ॥

ಸ ಏವ ಕರ್ತಾ ಭರ್ತಾ ಚ ಸಂಹರ್ತಾ ಜಗತಾಂ ಸದಾ ।
ರಜಸ್ಸತ್ತ್ವತಮೋಧಾರೀ ವಿಧಿವಿಷ್ಣುಹರಾತ್ಮಕಃ ॥ ೪೦ ॥

ಸರ್ವಸ್ಯಾಂತರ್ಗತಃ ಸ್ವಾಮೀ ಪ್ರೇರಕಸ್ಸರ್ವತಃ ಪರಃ ।
ನಿರ್ವಿಕಾರ್ಯವ್ಯಯೋ ನಿತ್ಯೋ ಮಾಯಾಧೀಶೋಽಪಿ ನಿರ್ಗುಣಃ ॥ ೪೧ ॥

---

೩೭. ಅಲ್ಲಿದ್ದ ಬಾಣನಿಗೂ ಸಮಸ್ತ ವೀರರಿಗೂ ಅನಿರುದ್ಧನಿಗೂ ಮಂತ್ರಿಗೂ ಕೇಳುವಂತೆ ಆಗಲೇ ಅಶರೀರವಾಣಿಯೊಂದು ನುಡಿಯಿತು.

೩೮. ಎಲೈ ಬಾಣಾಸುರನೇ, ಮಹಾವೀರನೂ ಬಲಿಪುತ್ರನೂ ಶಿವಭಕ್ತನೂ ಆದ ನೀನು ಹೀಗೆ ಕೋಪಿಸಿಕೊಳ್ಳಬಾರದು. ನಿಧಾನವಾಗಿ ಯೋಚನೆಮಾಡು.

೩೯. ಸಮಸ್ತ ಕರ್ಮಗಳನ್ನೂ ಪರಮೇಶ್ವರನು ಸಾಕ್ಷೀಭೂತವಾಗಿ ನೋಡುತ್ತಿರುವನು. ಸಮಸ್ತ ಜಗತ್ತೂ ಪರಶಿವನಿಗೆ ಅಧೀನವು. ಚರಾಚರವಸ್ತುಗಳೆಲ್ಲವೂ ಶಿವನ ಇಷ್ಟದಂತೆ ನಡೆಯುತ್ತವೆ.

೪೦. ಪರಮೇಶ್ವರನೇ ಲೋಕಗಳ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕರ್ತನು. ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಂದ ಕೂಡಿ ಬ್ರಹ್ಮ, ವಿಷ್ಣು, ರುದ್ರ ಎಂಬ ಮೂರು ಸ್ವರೂಪಗಳಿಂದ ವಿರಾಜಿಸುತ್ತಿರುವನು.

೪೧ ಪರಮೇಶ್ವರನು ಸರ್ವಾಂತರ್ಯಾಮಿಯು, ಸರ್ವಪ್ರೇರಕನು, ನಿರ್ವಿಕಾರ ಸ್ವರೂಪನು. ಆತನು ನಿತ್ಯಾತ್ಮಕನೂ ನಿರ್ಗುಣನೂ ಮಾಯಾಧೀಶನೂ ಆಗಿರುವನು.

ತಸ್ಯೇಽಚ್ಛಯಾಽಬಲೋ ಜ್ಞೇಯೋ ಬಲೀ ಬಲಿವರಾತ್ಮಜ ।
ಇತಿ ವಿಜ್ಞಾಯ ಮನಸಿ ಸ್ವಸ್ಥೋ ಭವ ಮಹಾಮತೇ ॥ ೪೨ ॥

ಗರ್ವಾಪಹಾರೀ ಭಗವಾನ್ನಾನಾಲೀಲಾವಿಶಾರದಃ ।
ನಾಶಯಿಷ್ಯತಿ ತೇ ಗರ್ವಮಿದಾನೀಂ ಭಕ್ತವತ್ಸಲಃ ॥ ೪೩ ॥

॥ ಸನತ್ಕುಮಾರ ಉವಾಚ ॥

ಇತ್ಯಾಭಾಷ್ಯ ನಭೋವಾಣೀ ವಿರರಾಮ ಮಹಾಮುನೇ ।
ಬಾಣಾಸುರಸ್ತದ್ವಚನಾದನಿರುದ್ಧಂ ನ ಜಘ್ನಿವಾನ್ ॥ ೪೪ ॥

ಕಿಂತು ಸ್ವಾಂತಃ ಪುರಂ ಗತ್ವಾ ಪಪೌ ಪಾನಮನುತ್ತಮಂ ।
ಮದ್ವಾಕ್ಯಂ ಚ ವಿಸಸ್ಮಾರ ವಿಜಹಾರ ವಿರುದ್ಧಧೀಃ ॥ ೪೫ ॥

ತತೋಽನಿರುದ್ಧೋ ಬದ್ಧಸ್ತು ನಾಗಭೋಗೈರ್ವಿಷೋಲ್ಬಣೈಃ ।
ಪ್ರಿಯಯಾಽತೃಪ್ತಚೇತಾಸ್ತು ದುರ್ಗಾಂ ಸಸ್ಮಾರ ತತ್ಕ್ಷಣಾತ್ ॥ ೪೬ ॥

---

೪೨. ಎಲೈ ಬಲಿಪುತ್ರನೇ, ಅವನ ಇಷ್ಟದಂತೆ ನೀನು ಈಗ ದುರ್ಬಲನಾಗಿದ್ದೀಯೆ ಎಂದು ತಿಳಿದು ಯಾವ ಕಾರ್ಯಕ್ಕೂ ದುಡುಕಿ ಮುಂದುವರಿಯಬೇಡ. ವಿವೇಕವನ್ನು ತಂದುಕೋ.

೪೩. ಭಗವಂತನಾದ ಪರಮೇಶ್ವರನು ಭಕ್ತರ ಗರ್ವವನ್ನು ನಾಶಪಡಿಸುವನು. ಅದರಂತೆ ತನ್ನ ಲೀಲೆಯಿಂದ ನಿನ್ನ ದರ್ಪವನ್ನು ಈಗಲೇ ಧ್ವಂಸಮಾಡುವನು ಎಂದು ಅಶರೀರವಾಣಿಯು ಹೇಳಿತು.

೪೪. ಸನತ್ಕುಮಾರನಿಂತೆಂದನು :—ಹೀಗೆ ಅಶರೀರವಾಣಿಯು ಹೇಳಿ ಸುಮ್ಮನಾಗಲು ಆ ಮಾತುಗಳನ್ನು ಕೇಳಿ ಬಾಣಾಸುರನು ಅನಿರುದ್ಧನನ್ನು ಕೊಲ್ಲಲಿಲ್ಲ.

೪೫. ಆದರೆ ಬಾಣಾಸುರನು ಒಡನೆಯೇ ತನ್ನ ಅಂತಃಪುರಕ್ಕೆ ಹೋಗಿ ಅಲ್ಲಿ ಸ್ವೇಚ್ಛೆಯಾಗಿ ಮದ್ಯಪಾನಮಾಡಿದನು. ಇದರಿಂದ ಅಶರೀರವಾಣಿಯ ಮಾತುಗಳೆಲ್ಲವೂ ಮರೆತುಹೋಯಿತು. ಮೊದಲಿನ ದುಷ್ಟಸ್ವಭಾವವೇ ನಿಂತುಬಿಟ್ಟಿತು

೪೬. ಇತ್ತ ವಿಷಪೂರಿತವಾದ ಸರ್ಪಾಸ್ತ್ರಗಳಿಂದ ಕಟ್ಟಲ್ಪಟ್ಟ ಅನಿರುದ್ಧನು ದುಃಖಿತನಾಗಿ ಕೂಡಲೇ ದುರ್ಗಾದೇವಿಯನ್ನು ಸ್ಮರಿಸಿದನು.

॥ ಅನಿರುದ್ಧ ಉವಾಚ ॥

ಶರಣ್ಯೇ ದೇವಿ ಬದ್ಧೋಽಸ್ಮಿ ದಹ್ಯಮಾನಸ್ತು ಪನ್ನಗೈಃ ।
ಆಗಚ್ಛ ಮೇ ಕುರು ತ್ರಾಣಂ ಯಶೋದೇ ಚಂಡರೋಷಿಣಿ ॥ ೪೭ ॥

ಶಿವಭಕ್ತೇ ಮಹಾದೇವಿ ಸೃಷ್ಟಿಸ್ಥಿತ್ಯಂತಕಾರಿಣಿ ।
ತ್ವಾಂ ವಿನಾ ರಕ್ಷಕೋ ನಾನ್ಯಸ್ತಸ್ಮಾದ್ರಕ್ಷ ಶಿವೇ ಹಿ ಮಾಂ ॥ ೪೮ ॥

॥ ಸನತ್ಕುಮಾರ ಉವಾಚ ॥

ತೇನೇತ್ಥಂ ತೋಷಿತಾ ತತ್ರ ಕಾಲೀ ಭಿನ್ನಾಂಜನಪ್ರಭಾ ।
ಜ್ಯೇಷ್ಠಕೃಷ್ಣಚತುರ್ದಶ್ಯಾಂ ಸಂಪ್ರಾಪ್ತಾಸೀನ್ಮಹಾನಿಶಿ ॥ ೪೯ ॥

ಗುರುಭಿರ್ಮುಷ್ಟಿನಿರ್ಘಾತೈರ್ದಾರಯಾಮಾಸ ಪಂಜರಂ ।
ಶರಾಂಸ್ತಾನ್ಭಸ್ಮಸಾತ್ಕೃತ್ವಾ ಸರ್ಪರೂಪಾನ್ಭಯಾನಕಾ ॥ ೫೦ ॥

---

೪೭. ಓ ದೇವಿ, ನೀನು ಉಗ್ರವಾದ ಕೋಪದಿಂದ ಶತ್ರುಗಳನ್ನು ನಾಶಗೊಳಿಸುವವಳು. ನಿನ್ನ ಕೀರ್ತಿಯನ್ನು ಭಕ್ತರು ಕೊಂಡಾಡುವರು. ಈಗ ನಾನು ಸರ್ಪಾಸ್ತ್ರಗಳಿಂದ ಬಂಧಿತನಾಗಿ ಪರಿತಪಿಸುತ್ತಿರುವೆನು. ಇಲ್ಲಿಗೆ ಬಂದು ನನಗೆ ಶಕ್ತಿಯನ್ನು ಕೊಟ್ಟು ನನ್ನನ್ನು ಕಾಪಾಡು.

೪೮. ಎಲೈ ಶಿವಭಕ್ತಳಾದ ಮಹಾದೇವಿಯೇ, ನೀನು ಸೃಷ್ಟಿ, ಸ್ಥಿತಿ, ಲಯ ಇವುಗಳಿಗೆ ಕಾರಣಳು. ನಿನ್ನನ್ನು ಬಿಟ್ಟರೆ ನನ್ನನ್ನು ರಕ್ಷಿಸುವವರು ಮತ್ತಾರು ಎಂದು ಪರಿಪರಿಯಾಗಿ ಅನಿರುದ್ಧನು ದೇವಿಯನ್ನು ಸ್ತೋತ್ರಮಾಡಿದನು.

೪೯. ಹೀಗೆ ಅನಿರುದ್ಧನು ಸ್ತುತಿಸಲು ಜ್ಯೇಷ್ಠ ಬಹುಳ ಚತುರ್ದಶಿಯದಿನದಲ್ಲಿ ಅರ್ಧರಾತ್ರಿಯ ಸಮಯದಲ್ಲಿ ಕಪ್ಪುಕಾಡಿಗೆಯ ಕಾಂತಿಯಂತೆ ಕಾಂತಿಯುಳ್ಳ ಕಾಳಿದೇವಿಯು ಆ ಅನಿರುದ್ಧನಿಗೆ ಪ್ರತ್ಯಕ್ಷಳಾಗಿ,

೫೦. ತನ್ನ ಮುಷ್ಟಿಪ್ರಹಾರಗಳಿಂದ ಆ ಶರಪಂಜರವನ್ನು ನಿರ್ಮೂಲಮಾಡಿದಳು. ಒಡನೆಯೇ ಸರ್ಪರೂಪದಿಂದ ಭಯವನ್ನುಂಟುಮಾಡುವ ಸಮಸ್ತ ಅಸ್ತ್ರಗಳನ್ನೂ ಸುಟ್ಟು ಭಸ್ಮಮಾಡಿದಳು.

ಮೋಚಯಿತ್ವಾನಿರುದ್ಧಂ ತು ತತಶ್ಶಾಂತಃ ಪುರಂ ತತಃ ।
ಪ್ರವೇಶಯಿತ್ವಾ ದುರ್ಗಾ ತು ತತ್ರೈವಾದರ್ಶನಂ ಗತಾ ॥ ೫೧ ॥

ಇತ್ಥಂ ದೇವ್ಯಾಃ ಪ್ರಸಾದಾತ್ತು ಶಿವಶಕ್ತೇರ್ಮುನೀಶ್ವರ ।
ಕೃಚ್ಛ್ರಾನ್ಮುಕ್ತೋಽನಿರುದ್ಧೋಽಭೂತ್ಸುಖೀ ಚೈವ ಗತವ್ಯಥಃ ॥ ೫೨ ॥

ಅಥ ಲಬ್ಧಜಯೋ ಭೂತ್ವಾನಿರುದ್ಧಶ್ಶಿವಶಕ್ತಿತಃ ।
ಪ್ರಾದ್ಯುಮ್ನಿರ್ಬಾಣತನಯಾಂ ಪ್ರಿಯಾಂ ಪ್ರಾಪ್ಯ ಮುಮೋದ ಚ ॥ ೫೩ ॥

ಪೂರ್ವವದ್ವಿಜಹಾರಾಸೌ ತಯಾ ಸ್ವಪ್ರಿಯಯಾ ಸುಖೀ ।
ಪೀತಪಾನಸ್ಸುರಕ್ತಾಕ್ಷಸ್ಸ ಬಾಣಸುತಯಾ ತತಃ ॥ ೫೪ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಊಷಾಚರಿತ್ರೇ ಅನಿರುದ್ಧೋಷಾ
ವಿಹಾರವರ್ಣನಂ ನಾಮ ತ್ರಿಪಂಚಾಶತ್ತಮೋಽಧ್ಯಾಯಃ.

---

೫೧. ನಾಗಪಾಶದಿಂದ ಅನಿರುದ್ಧನನ್ನು ಬಿಡಿಸಿ ಅವನನ್ನು ಅಂತಃಪುರಕ್ಕೆ ಕರೆದೊಯ್ದು ಬಳಿಕ ಅಲ್ಲಿಯೇ ಅಂತರ್ಧಾನಳಾದಳು.

೫೨-೫೩. ಹೀಗೆ ಶಿವಶಕ್ತಿಯ ಪ್ರಭಾವದಿಂದ ಅನಿರುದ್ಧನು ಕಷ್ಟದಿಂದ ಬಿಡುಗಡೆಹೊಂದಿ ಸುಖವಾಗಿ ಅಂತಃಪುರಕ್ಕೆ ಹೋಗಿ ಅಲ್ಲಿ ಬಾಣಪುತ್ರಿಯಾದ ಊಷಾ ದೇವಿಯೊಡನೆ ಸುಖವಾಗಿದ್ದನು.

೫೪. ಹಿಂದಿನಂತೆಯೇ ಅನಿರುದ್ಧನು ಮದ್ಯಪಾನಾದಿಗಳಿಂದ ರಕ್ತಲೋಚನನಾಗಿ ಬಾಣಾಸುರನ ಪುತ್ರಿಯಾದ ಉಷಾದೇವಿಯೊಡನೆ ವಿಹರಿಸುತ್ತಾ ಸುಖವಾಗಿ ಕಾಲಕಳೆಯಲಾರಂಭಿಸಿದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ಎರಡನೆಯ ರುದ್ರಸಂಹಿತೆಯಲ್ಲಿ
ಊಷಾಚರಿತ್ರೆಯಲ್ಲಿ ಅನಿರುದ್ಧನ ವಿಹಾರವರ್ಣನೆಯೆಂಬ ಐವತ್ತಮೂರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಚತುಃಪಂಚಾಶತ್ತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಅನಿರುದ್ಧೇ ಹೃತೇ ಪೌತ್ರೇ ಕೃಷ್ಣಸ್ಯ ಮುನಿಸತ್ತಮ ।
ಕುಂಭಾಂಡಸುತಯಾ ಕೃಷ್ಣಃ ಕಿಮಕಾರ್ಷೀದ್ಧಿ ತದ್ವದ ॥ ೧ ॥

॥ ಸನತ್ಕುಮಾರ ಉವಾಚ ॥

ತತೋ ಗತೇಽನಿರುದ್ಧೇ ತು ತತ್ಸ್ತ್ರೀಣಾಂ ರೋದನಸ್ವನಂ ।
ಶ್ರುತ್ವಾ ಚ ವ್ಯಥಿತಃ ಕೃಷ್ಣೋ ಬಭೂವ ಮುನಿಸತ್ತಮ ॥ ೨ ॥

---

### ಐವತ್ತನಾಲ್ಕನೆಯ ಅಧ್ಯಾಯವು.

೧. ಮತ್ತೆ ವ್ಯಾಸನು ಸನತ್ಕುಮಾರ ಋಷಿಯನ್ನು ಕುರಿತು ಓ ಸ್ವಾಮಿಯೇ, ಕೃಷ್ಣನ ಮೊಮ್ಮಗನಾದ ಅನಿರುದ್ಧನನ್ನು ಕುಂಭಾಂಡನ ಮಗಳಾದ ಚಿತ್ರಲೇಖೆಯು ಹೊತ್ತು ತಂದಮೇಲೆ ಕೃಷ್ಣನು ಏನು ಮಾಡಿದನು? ಅದನ್ನು ದಯವಿಟ್ಟು ಹೇಳೆನಲು,

೨. ಸನತ್ಕುಮಾರನಿಂತೆಂದನು :—ಅನಿರುದ್ಧನು ಹಾಗೆ ಮಾಯವಾಗಲು, ಅವನ ಪತ್ನಿಯರ ಮತ್ತು ಇತರ ಹೆಂಗಸರ ಅಳುವ ಶಬ್ದವನ್ನು ಕೇಳಿ ಕೃಷ್ಣನೂ ಸಹ ದುಃಖಿತನಾದನು.

ಅಪಶ್ಯತಾಂ ಚಾನಿರುದ್ಧಂ ತದ್ಬಂಧೂನಾಂ ಹರೇಸ್ತಥಾ ।
ಚತ್ವಾರೋ ವಾರ್ಷಿಕಾ ಮಾಸಾ ವ್ಯತೀಯುರನುಶೋಚತಾಂ ॥ ೩ ॥

ನಾರದಾತ್ತದುಪಾಕರ್ಣ್ಯ ವಾರ್ತಾಂ ಬದ್ಧಸ್ಯ ಕರ್ಮ ಚ ।
ಆಸನ್ಸುವ್ಯಥಿತಾಸ್ಸರ್ವೇ ವೃಷ್ಣಯಃ ಕೃಷ್ಣದೇವತಾಃ ॥ ೪ ॥

ಕೃಷ್ಣಸ್ತದ್ವೃತ್ತಮಖಿಲಂ ಶ್ರುತ್ವಾ ಯುದ್ಧಂ ನ ಚಾದರಾತ್ ।
ಜಗಾಮ ಶೋಣಿತಪುರಂ ತಾರ್ಕ್ಷ್ಯಮಾಹೂಯ ತತ್ಕ್ಷಣಾತ್ ॥ ೫ ॥

ಪ್ರದ್ಯುಮ್ನೋ ಯುಯುಧಾನಶ್ಚ ಗತಸ್ಸಾಂಬೋಽಥ ಸಾರಣಃ ।
ನಂದೋಪನಂದಭದ್ರಾದ್ಯಾ ರಾಮಕೃಷ್ಣಾನುವರ್ತಿನಃ ॥ ೬ ॥

ಅಕ್ಷೌಹಿಣೀಭಿರ್ದ್ವಾದಶಭಿಸ್ಸಮೇತಾಸ್ಸರ್ವತೋ ದಿಶಂ ।
ರುರುಧುರ್ಬಾಣನಗರಂ ಸಮಂತಾತ್ಸಾತ್ವತರ್ಷಭಾಃ ॥ ೭ ॥

---

೩. ಹೀಗೆ ನಾಲ್ಕು ವರ್ಷಗಳು ಕಳೆದುವು. ಅಲ್ಲಿನವರೆಗೂ ಅನಿರುದ್ಧನನ್ನು ಕೃಷ್ಣನೂ ಅವನ ಬಂಧುಗಳೂ ಸಹ ನೋಡಲಿಲ್ಲ.

೪. ಒಂದು ದಿನ ನಾರದಋಷಿಯು, ಅನಿರುದ್ಧನು ಬಾಣಾಸುರನ ಮನೆಯಲ್ಲಿ ಬಂಧಿತನಾಗಿರುವುದನ್ನು ಯದುವಂಶದವರಿಗೆ ಬಂದು ತಿಳಿಸಿದನು. ಇದನ್ನು ಕೇಳಿ ವೃಷ್ಣಿವಂಶದವರೆಲ್ಲರೂ ಬಹಳವಾಗಿ ದುಃಖಪಟ್ಟರು.

೫. ಶ್ರೀಕೃಷ್ಣನು ಆ ಸಮಾಚಾರವನ್ನೆಲ್ಲಾ ಕೇಳಿ ಕೋಪದಿಂದ ಯುದ್ಧಕ್ಕೆ ಸಿದ್ಧನಾದನು. ತನ್ನ ವಾಹನವಾದ ಗರುಡನನ್ನು ಕೂಡಲೇ ಸ್ಮರಿಸಿದನು.

೬. ಪ್ರದ್ಯುಮ್ನ, ಯುಯುಧಾನ, ಸಾಂಬ, ಸಾರಣ, ನಂದ, ಉಪನಂದ, ಭದ್ರ ಇವರೆಲ್ಲರೂ ಸಹ, ಬಲರಾಮ ಮತ್ತು ಕೃಷ್ಣನನ್ನು ಹಿಂಬಾಲಿಸಿದರು.

೭ ಹೀಗೆ ಯುದ್ಧಕ್ಕೆ ಹನ್ನೆರಡು ಅಕ್ಷೌಹಿಣೀಸೈನ್ಯವು ಸಿದ್ಧವಾಯಿತು. ಸಾತ್ವತರೇ ಮೊದಲಾದ ಈ ಸೈನ್ಯವೆಲ್ಲವೂ ಬಾಣಾಸುರನಗರಿಯನ್ನು ಮುತ್ತಿದವು.

ಭಜ್ಯಮಾನಪುರೋದ್ಯಾನಪ್ರಾಕಾರಾಟ್ಟಾಲಗೋಪುರಂ ।
ವೀಕ್ಷ್ಯಮಾಣೋ ರುಷಾವಿಷ್ಟಸ್ತುಲ್ಯಸೈನ್ಯೋಽಭಿನಿರ್ಯಯೌ ॥ ೮ ॥

ಬಾಣಾರ್ಥೇ ಭಗವಾನ್ರುದ್ರಸ್ಸಸುತಃ ಪ್ರಮಥೈರ್ವೃತಃ ।
ಆರುಹ್ಯ ನಂದಿವೃಷಭಂ ಯುದ್ಧಂ ಕರ್ತುಂ ಸಮಾಯಯೌ ॥ ೯ ॥

ಆಸೀತ್ಸುತುಮುಲಂ ಯುದ್ಧಮದ್ಭುತಂ ರೋಮಹರ್ಷಣಂ ।
ಕೃಷ್ಣಾದಿಕಾನಾಂ ಸೈಸ್ತತ್ರ ರುದ್ರಾದ್ಯೈರ್ಬಾಣರಕ್ಷಕೈಃ ॥ ೧೦ ॥

ಕೃಷ್ಣಶಂಕರಯೋರಾಸೀತ್ಪ್ರದ್ಯುಮ್ನಗುಹಯೋರಪಿ ।
ಕೂಷ್ಮಾಂಡಕೂಪಕರ್ಣಾಭ್ಯಾಂ ಬಲೇನ ಸಹ ಸಂಯುಗಃ ॥ ೧೧ ॥

ಸಾಂಬಸ್ಯ ಬಾಣಪುತ್ರೇಣ ಬಾಣೇನ ಸಹ ಸಾತ್ಯಕೇಃ ।
ನಂದಿನಾ ಗರುಡಸ್ಯಾಪಿ ಪರೇಷಾಂ ಚ ಪರೈರಪಿ ॥ ೧೨ ॥

---

೮. ಇತ್ತಲಾಗಿ ಶತ್ರುಸೈನ್ಯವು ತನ್ನ ಪಟ್ಟಣವನ್ನು ಮುತ್ತಿ, ಉದ್ಯಾನ, ಕೋಟೆ, ಗೋಪುರ ಇವೇ ಮೊದಲಾದುವುಗಳನ್ನು ಮುರಿದುಹಾಕುತ್ತಿರಲು ಅವನ್ನು ಬಾಣಾಸುರನು ನೋಡಿ, ಕೋಪದಿಂದ ಅಷ್ಟೇ ಸಂಖ್ಯೆಯು ಸೈನ್ಯದೊಡನೆ ಯುದ್ಧಕ್ಕೆ ಎದುರಾದನು.

೯. ಭಗವಂತನಾದ ರುದ್ರನು, ಬಾಣನಕಡೆ ನಿಂತು, ಮಗನೊಡನೆಯೂ ತನ್ನ ಪ್ರಮಥಗಣಗಳೊಡನೆಯೂ ಕೂಡಿ, ನಂದಿಯನ್ನು ಏರಿ ಯುದ್ಧಕ್ಕೆ ಸಿದ್ಧನಾದನು.

೧೦. ಆಗ ಕೃಷ್ಣನ ಕಡೆಯ ಸೈನಿಕರಿಗೂ, ರುದ್ರನಕಡೆಯ ಗಣಗಳಿಗೂ, ರೋಮಾಂಚವನ್ನುಂಟುಮಾಡುವ ಅತ್ಯದ್ಭುತವಾದ ಯುದ್ಧವು ಜರುಗಿತು.

೧೧. ಕೃಷ್ಣನೊಡನೆ ಶಂಕರನೂ, ಪ್ರದ್ಯುಮ್ನನೊಡನೆ ಷಣ್ಮುಖನೂ, ಕೂಷ್ಮಾಂಡಕನೊಡನೆ ಕೂಪಕರ್ಣನೂ ಸಹ ತಮ್ಮ ಸೈನ್ಯಗಳೊಡನೆ ಪರಸ್ಪರವಾಗಿ ಹೋರಾಡಲು ಆರಂಭಿಸಿದರು.

೧೨. ಬಾಣಪುತ್ರನು ಸಾಂಬನೊಡನೆಯೂ, ಬಾಣನೂ ಸಾತ್ಯಕಿಯೊಡನೆಯೂ ನಂದಿಯು ಗರುಡನೊಡನೆಯೂ, ಇನ್ನೂ ಇತರರು ಅವರವರ ಸಮಾನಸ್ಕಂಧರೊಡನೆಯೂ ಯುದ್ಧಮಾಡಿದರು.

ಬ್ರಹ್ಮಾದಯಸ್ಸುರಾಧೀಶಾ ಮುನಯಃ ಸಿದ್ಧಚಾರಣಾಃ ।
ಗಂಧರ್ವಾಪ್ಸರಸೋ ಯಾನೈರ್ವಿಮಾನೈರ್ದ್ರಷ್ಟುಮಾಗಮನ್ ॥ ೧೩ ॥

ಪ್ರಮಥೈರ್ವಿವಿಧಾಕಾರೈ ರೇವತ್ಯಂತೈಃ ಸುದಾರುಣಂ ।
ಯುದ್ಧಂ ಬಭೂವ ವಿಪ್ರೇಂದ್ರ ತೇಷಾಂ ಚ ಯದುವಂಶಿನಾಂ ॥ ೧೪ ॥

ಭ್ರಾತ್ರಾ ರಾಮೇಣ ಸಹಿತಃ ಪ್ರದ್ಯುಮ್ನೇನ ಚ ಧೀಮತಾ ।
ಕೃಷ್ಣಶ್ಚಕಾರ ಸಮರಮತುಲಂ ಪ್ರಮಥೈಸ್ಸಹ ॥ ೧೫ ॥

ತತ್ರಾಗ್ನಿನಾಽಭವದ್ಯುದ್ಧಂ ಯಮೇನ ವರುಣೇನ ಚ ।
ನಿಮುಖೇನ ತ್ರಿಪಾದೇನ ಜ್ವರೇಣ ಚ ಗುಹೇನ ಚ ॥ ೧೬ ॥

ಪ್ರಮಥೈರ್ವಿವಿಧಾಕಾರೈಸ್ತೇಷಾಮತ್ಯಂತದಾರುಣಂ ।
ಯುದ್ಧಂ ಬಭೂವ ವಿಕಟಂ ವೃಷ್ಣೀನಾಂ ರೋಮಹರ್ಷಣಂ ॥ ೧೭ ॥

---

೧೩. ಬ್ರಹ್ಮನೇ ಮೊದಲಾದ ದೇವತೆಗಳೂ, ಸಿದ್ಧರೂ, ಚಾರಣರೂ, ಮಹರ್ಷಿಗಳೂ, ಗಂಧರ್ವಾಪ್ಸರಸರು, ಇವರೆಲ್ಲರೂ ವಿಮಾನಾರೂಢರಾಗಿ ಆಕಾಶದಲ್ಲಿ ನಿಂತು ಆ ಯುದ್ಧವನ್ನು ನೋಡುತ್ತಿದ್ದರು.

೧೪. ರೇವತಿಯೇ ಮೊದಲಾದ ಸಮಸ್ತ ಪ್ರಮಥಗಣಗಳಿಗೂ, ಯದುವಂಶದ ರಾಜರಿಗೂ ಅತ್ಯಂತ ಘೋರವಾದ ಯುದ್ಧವು ಬಹುಕಾಲದವರಿಗೂ ನಡೆಯಿತು.

೧೫. ಬಲರಾಮನಿಂದಲೂ, ಪ್ರದ್ಯುಮ್ನನಿಂದಲೂ ಕೂಡಿ ಕೃಷ್ಣನು ಪ್ರಮಥ ಗಣಗಳೊಡನೆ ಘೋರಯುದ್ಧವನ್ನು ಮಾಡಿದನು.

೧೬. ಅಗ್ನಿ, ಯಮ, ವರುಣ, ತ್ರಿಪಾದ, ಜ್ವರ, ಗುಹ ಮುಂತಾದವರು ಆ ಯುದ್ಧದಲ್ಲಿ ಚೆನ್ನಾಗಿ ಹೋರಾಡಿದರು.

೧೭. ನಾನಾವಿಧವಾದ ಆಕಾರವುಳ್ಳ ಪ್ರಮಥಗಣಗಳಿಗೂ, ಕೃಷ್ಣವಂಶದವರಿಗೂ, ಅತ್ಯಂತ ಭಯಂಕರವಾದ ಯುದ್ಧವು ನಡೆಯಿತು.

ಬಿಭೀಷಿಕಾಭಿರ್ಬಹ್ವೀಭಿಃ ಕೋಟರೀಭಿಃ ಪದೇಪದೇ ।
ನಿರ್ಲಜ್ಜಾಭಿಶ್ಚ ನಾರೀಭಿಃ ಪ್ರಬಲಾಭಿರದೂರತಃ ॥ ೧೮ ॥

ಶಂಕರಾನುಚರಾನ್ ಶೌರಿರ್ಭೂತಪ್ರಮಥಗುಹ್ಯಕಾನ್ ।
ದ್ರಾವಯಾಮಾಸ ತೀಕ್ಷ್ಣಾಗ್ರೈಃ ಶರೈಃ ಶಾರ್ಙ್ಗಧನುಶ್ಚ್ಯುತೈಃ ॥ ೧೯ ॥

ಏವಂ ಪ್ರದ್ಯುಮ್ನಪ್ರಮುಖಾ ವೀರಾ ಯುದ್ಧಮಹೋತ್ಸವಾಃ ।
ಚಕ್ರುರ್ಯುದ್ಧಂ ಮಹಾಘೋರಂ ಶತ್ರುಸೈನ್ಯಂ ವಿನಾಶಯನ್ ॥ ೨೦ ॥

ವಿಶೀರ್ಯಮಾಣಂ ಸ್ವಬಲಂ ದೃಷ್ಟ್ವಾ ರುದ್ರೋಽತ್ಯಮರ್ಷಣಃ ।
ಕ್ರೋಧಂ ಚಕಾರ ಸುಮಹನ್ನಾದ ಚ ಮಹೋಲ್ಬಣಂ ॥ ೨೧ ॥

ತಚ್ಛ್ರುತ್ವಾ ಶಂಕರಗಣಾ ವಿನೇದುರ್ಯುಯುಧುಶ್ಚ ತೇ ।
ಮರ್ದಯನ್ಪ್ರತಿಯೋದ್ಧಾರಂ ವರ್ಧಿತಾಶ್ಶಂಭುತೇಜಸಾ ॥ ೨೨ ॥

---

೧೮. ಭಯಂಕರರಾದ ಅಗ್ನಿದೇವಿಯರಿಗೂ, ಕೋಟರಿಯರಿಗೂ, ಲಜ್ಜಾ ರಹಿತವಾದ ಹೆಂಗಸರಿಗೂ ಸಹ ಪ್ರಬಲವಾದ ಯುದ್ಧವೇ ಆಯಿತು.

೧೯. ಶ್ರೀಕೃಷ್ಣನ ಶಾರ್ಙ್ಗವೆಂಬ ಧನುಸ್ಸಿನಿಂದ ಹೊರಟ ಬಾಣಗಳು, ಶಂಕರನ ಅನುಯಾಯಿಗಳಾದ ಸಮಸ್ತ ಭೂತಪ್ರೇತಾದಿಗಣಗಳನ್ನು ಓಡಿಸಿದುವು.

೨೦. ಹೀಗೆ ಪ್ರದ್ಯುಮ್ನನೇ ಮೊದಲಾದ ವೀರರು ತಮ್ಮ ಸಾಮರ್ಥ್ಯದಿಂದ ಶತ್ರುಸೈನ್ಯವನ್ನು ನಾಶಪಡಿಸುತ್ತಾ ಭಯಂಕರವಾಗಿ ಕಾದಾಡಿದರು.

೨೧. ರುದ್ರನು ತನ್ನ ಸೈನ್ಯವು ನಾಶವಾಗುತ್ತಿರುವುದನ್ನು ನೋಡಿ ಬಹಳವಾಗಿ ಕೋಪಗೊಂಡು ಭಯಂಕರವಾದ ಸಿಂಹನಾದವನ್ನು ಮಾಡಿದನು.

೨೨. ಶಂಕರನ ಪ್ರಮಥಗಣಗಳೆಲ್ಲವೂ ಈ ಘೋರಶಬ್ದವನ್ನು ಕೇಳಿ ಉತ್ಸಾಹದಿಂದ ಧ್ವನಿಗೈಯ್ಯುತ್ತಾ ಶತ್ರುಗಳನ್ನು ಧ್ವಂಸಮಾಡುತ್ತಾ ಮುಂದುವರಿದರು.

ಪೃಥಗ್ವಿಧಾನಿ ಚಾಯುಂಕ್ತ ಶಾರ್ಙ್ಗಸ್ತ್ರಾಣಿ ಪಿನಾಕಿನೇ ।
ಪ್ರತ್ಯಸ್ತ್ರೈಶ್ಚಮಯಾಮಾಸ ಶೂಲಪಾಣಿರವಿಸ್ಮಿತಃ ॥ ೨೩ ॥

ಬ್ರಹ್ಮಾಸ್ತ್ರಸ್ಯ ಚ ಬ್ರಹ್ಮಾಸ್ತ್ರಂ ವಾಯವ್ಯಸ್ಯ ಚ ಪಾರ್ವತಂ ।
ಆಗ್ನೇಯಸ್ಯ ಚ ಪಾರ್ಜನ್ಯಂ ನೈಜಂ ನಾರಾಯಣಸ್ಯ ಚ ॥ ೨೪ ॥

ಕೃಷ್ಣಸೈನ್ಯಂ ವಿದುದ್ರಾಪ ಪ್ರತಿವೀರೇಣ ನಿರ್ಜಿತಂ ।
ನ ತಸ್ಥೌ ಸಮರೇ ವ್ಯಾಸ ಪೂರ್ಣರುದ್ರಸುತೇಜಸಾ ॥ ೨೫ ॥

ವಿದ್ರಾವಿತೇ ಸ್ವಸೈನ್ಯೇ ತು ಶ್ರೀಕೃಷ್ಣಶ್ಚ ಪರಂತಪಃ ।
ಸ್ವಂ ಜ್ವರಂ ಶೀತಲಾಖ್ಯಂ ಹಿ ವ್ಯಸೃಜದ್ದಾರುಣಂ ಮುನೇ ॥ ೨೬ ॥

ವಿದ್ರಾವಿತೇ ಕೃಷ್ಣಸೈನ್ಯೇ ಕೃಷ್ಣಸ್ಯ ಶೀತಲಜ್ವರಃ ।
ಅಭ್ಯಪದ್ಯತ ತಂ ರುದ್ರಂ ಮುನೇ ದಶದಿಶೋ ದಹ್ನ್ ॥ ೨೭ ॥

---

೨೩. ಈಶ್ವರನ ಮೇಲೆ ನಾನಾರೀತಿಯಾಗಿ ಶಾರ್ಙ್ಗಧನುಸ್ಸಿನಿಂದ ಬಂದು ಬೀಳುತ್ತಿದ್ದ ಅನೇಕ ಅಸ್ತ್ರಗಳನ್ನು ಶಂಕರನು ಲೀಲೆಯಿಂದಲೇ ನಾಶಮಾಡಿದನು.

೨೪. ಬ್ರಹ್ಮಾಸ್ತ್ರಕ್ಕೆ ಪ್ರತಿಯಾಗಿ ಬ್ರಹ್ಮಾಸ್ತ್ರವನ್ನೂ, ವಾಯವ್ಯಾಸ್ತ್ರಕ್ಕೆ ಪರ್ವತಾಸ್ತ್ರವನ್ನೂ, ಆಗ್ನೇಯಾಸ್ತ್ರಕ್ಕೆ ಪರ್ಜನ್ಯಾಸ್ತ್ರವನ್ನೂ, ನಾರಾಯಣಾಸ್ತ್ರಕ್ಕೆ ತನ್ನದೇ ಆದ ಶೈವಾಸ್ತ್ರವನ್ನೂ ಪ್ರಯೋಗಿಸುತ್ತಿದ್ದನು.

೨೫. ಈ ಅಸ್ತ್ರಗಳ ಏಟನ್ನು ತಡೆಯಲಾರದೆ ಕೃಷ್ಣನ ಸೈನ್ಯವು ಸೋತು ಪರಮೇಶ್ವರನ ಎದುರಿಗೆ ನಿಲ್ಲಲಾರದೆ ಓಡಿಹೋಯಿತು.

೨೬. ತನ್ನ ಸೈನ್ಯವು ಓಡಿಹೋದದ್ದನ್ನು ಶ್ರೀಕೃಷ್ಣನು ನೋಡಿ ಶೀತಜ್ವರವನ್ನು ಸೃಷ್ಟಿಸಿ ಪರಮೇಶ್ವರನ ಸೈನಿಕರಮೇಲೆ ಪ್ರಯೋಗಿಸಿದನು.

೨೭. ಶ್ರೀಕೃಷ್ಣನ ಸೈನ್ಯವು ಹೀಗೆ ಓಡುತ್ತಿರಲು ಕೃಷ್ಣನು ಬಿಟ್ಟ ಆ ಶೀತ ಜ್ವರವು ಹತ್ತು ದಿಕ್ಕುಗಳನ್ನೂ ಸುಡುತ್ತಾ ಆ ಈಶ್ವರನನ್ನು ಸಮೀಪಿಸಿತು.

ಮಹೇಶ್ವರೋಽಥ ತಂ ದೃಷ್ಟ್ವಾ ತ್ಯಯಾಂತಂ ಸ್ವಂ ವಿಸೃಜಜ್ಜ್ವರಂ ।
ಮಾಹೇಶ್ವರೋ ವೈಷ್ಣವಶ್ಚ ಯುಯುಧಾತೇ ಜ್ವರಾವುಭೌ ॥ ೨೮ ॥

ವೈಷ್ಣವೋಽಥ ಸಮಾಕ್ರಂದನ್ಮಾಹೇಶ್ವರಬಲಾರ್ದಿತಃ ।
ಅಲಬ್ಧ್ವಾಭಯಮನ್ಯತ್ರ ತುಷ್ಟಾವ ವೃಷಭಧ್ವಜಂ ॥ ೨೯ ॥

ಅಥ ಪ್ರಸನ್ನೋ ಭಗವಾನ್ವಿಷ್ಣುಜ್ವರನುತೋ ಹರಃ ।
ವಿಷ್ಣುಶೀತಜ್ವರಂ ಪ್ರಾಹ ಶರಣಾಗತವತ್ಸಲಃ ॥ ೩೦ ॥

॥ ಮಹೇಶ್ವರ ಉವಾಚ ॥

ಶೀತಜ್ವರ ಪ್ರಸನ್ನೋಽಹಂ ವ್ಯೇತು ತೇ ಮಜ್ಜ್ವರಾದ್ಭಯಂ ।
ಯೋ ನೌ ಸ್ಮರತಿ ಸಂವಾದಂ ತಸ್ಯ ನ ಸ್ಯಾಜ್ಜ್ವರಾದ್ಭಯಂ ॥ ೩೧ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತೋ ರುದ್ರಮಾನಮ್ಯ ಗತೋ ನಾರಾಯಣಜ್ವರಃ ।
ತಂ ದೃಷ್ಟ್ವಾ ಚರಿತಂ ಕೃಷ್ಣೋ ವಿಸಿಸ್ಮಾಯ ಭಯಾನ್ವಿತಃ ॥ ೩೨ ॥

---

೨೮. ಜ್ವರವನ್ನು ನೋಡಿ ಮಹೇಶ್ವರನು ತಾನೂ ಸಹ ಮತ್ತೊಂದು ಜ್ವರವನ್ನು ಬಿಟ್ಟನು. ಹೀಗೆ ಹೊರಟ ಆ ಎರಡು ಜ್ವರಗಳೂ ಪರಸ್ಪರವಾಗಿ ಹೋರಾಡಲಾರಂಭಿಸಿದುವು.

೨೯. ಈ ಮಹೇಶ್ವರಜ್ವರವು ವಿಷ್ಣುಜ್ವರವನ್ನು ಸಂಪೂರ್ಣವಾಗಿ ಸೋಲಿಸಿತು. ಸೋತವೈಷ್ಣವಜ್ವರವು ಹೆದರಿ ಕೊನಗೆ ಪರಮೇಶ್ವರನನ್ನೇ ಮೊರೆಹೊಕ್ಕಿತು.

೩೦-೩೧. ವಿಷ್ಣುಜ್ವರದಿಂದ ಸ್ತುತಿಸಲ್ಪಟ್ಟ ಪರಮೇಶ್ವರನು ಸಂತುಷ್ಟನಾಗಿ, ವಾತ್ಸಲ್ಯದಿಂದ ವಿಷ್ಣುಜ್ವರವನ್ನು ಕುರಿತು ಎಲೈ ಶೀತಜ್ವರವೇ ಹೆದರಬೇಡ. ನನ್ನ ಜ್ವರದಿಂದ ನಿನಗೆ ಭಯವಾಗುವುದಿಲ್ಲ. ಯಾವನು ನಮ್ಮಿಬ್ಬರ ಈ ಸಂವಾದವನ್ನು ಸ್ಮರಿಸುವನೋ ಅವನಿಗೆ ಜ್ವರಬಾಧೆ ಉಂಟಾಗುವುದಿಲ್ಲ ಎಂದನು.

೩೨. ಹೀಗೆ ವಿಷ್ಣುಜ್ವರವು ರುದ್ರನಲ್ಲಿಯೇ ಭಕ್ತಿಯಿಂದ ನಿಂತಿತು. ಇದನ್ನು ಶ್ರೀಕೃಷ್ಣನು ನೋಡಿ ಆಶ್ಚರ್ಯಪಟ್ಟನು. ತುಂಬಾ ಭಯಪಟ್ಟನು

ಸ್ಕಂದಃ ಪ್ರದ್ಯುಮ್ನ ಬಾಣೌಘೈರರ್ದ್ಯಮಾನೋಽಥ ಕೋಪಿತಃ ।
ಜಘಾನ ಶಕ್ತ್ಯಾ ಪ್ರದ್ಯುಮ್ನಂ ದೈತ್ಯಸಂಘಾತ್ಯಮರ್ಷಣಃ ॥ ೩೩ ॥

ಸ್ಕಂದಪ್ರಾಪ್ತಿಹತಸ್ತತ್ರ ಪ್ರದ್ಯುಮ್ನಃ ಪ್ರಬಲೋಽಪಿ ಹಿ ।
ಅಸೃಗ್ವಿಮುಂಚನ್ಗಾತ್ರೇಭ್ಯೋ ಬಲೇನಾಪಾಕ್ರಮದ್ರಣಾತ್ ॥ ೩೪ ॥

ಕುಂಭಾಂಡಕೂಪಕರ್ಣಾಭ್ಯಾಂ ನಾನಾಸ್ತ್ರೈಶ್ಚ ಸಮಾಹತಃ ।
ದುದ್ರಾವ ಬಲಭದ್ರೋಽಪಿ ನ ತಸ್ಥೌಽಪಿ ರಣೇ ಬಲೀ ॥ ೩೫ ॥

ಕೃತ್ವಾ ಸಹಸ್ರಂ ಕಾಯಾನಾಂ ಪೀತ್ವಾ ತೋಯಂ ಮಹಾರ್ಣವಾತ್ ।
ಗರುಡೋ ನಾಶಯಥ್ಯಥಾವರ್ತೈರ್ಮೇಘಾರ್ಣವಾಂಬುಭಿಃ ॥ ೩೬ ॥

ಅಥ ಕ್ರುದ್ಧೋ ಮಹೇಶಸ್ಯ ವಾಹನೋ ವೃಷಭೋ ಬಲೀ ।
ವೇಗೇನ ಮಹತಾರಂ ವೈ ಶೃಂಗಾಭ್ಯಾಂ ನಿಜಘಾನ ತಂ ॥ ೩೭ ॥

---

೩೩. ಇಷ್ಟರಲ್ಲಿ ಪ್ರದ್ಯುಮ್ನನು ಸ್ಕಂದನನ್ನು ಸಮಸ್ತ ಬಾಣಗಳಿಂದಲೂ ನೋಯಿಸಿದನು. ಅದರಿಂದ ಕುಪಿತನಾಗಿ ಸ್ಕಂದನು ರಾಕ್ಷಸನಾಶಕವಾದ ಒಂದು ದೊಡ್ಡ ಶಕ್ತಿಯನ್ನು ಪ್ರಯೋಗಿಸಿದನು.

೩೪. ಪ್ರದ್ಯುಮ್ನನು ಎಷ್ಟೇ ಶೂರನಾಗಿದ್ದರೂ ಸಹ ಸ್ಕಂದನ ಬಾಣದ ಏಟಿಗೆ ಸಿಕ್ಕಿ ದೇಹದಿಂದ ರಕ್ತವನ್ನು ಸುರಿಸುತ್ತಾ ರಣರಂಗದಿಂದ ಓಡಿಹೋದನು.

೩೫. ಕುಂಭಾಂಡ, ಮತ್ತು ಕೂಪಕರ್ಣರು ನಾನಾವಿಧವಾದ ಅಸ್ತ್ರಗಳಿಂದ ಬಲರಾಮನನ್ನು ಹೊಡೆದರು. ಬಲರಾಮನೂ ಸಹ ಅಲ್ಲಿ ನಿಲ್ಲಲಾರದೆ ಹಿಂದಿರುಗಿದನು.

೩೬. ಅಷ್ಟರಲ್ಲಿ ಗರುಡನು ಸಾವಿರ ಶರೀರಗಳನ್ನು ಧರಿಸಿ ಅಲ್ಲಿಗೆ ಬಂದು ಸಮುದ್ರ ಜಲವನ್ನು ಪಾನಮಾಡಿ, ಅದೇ ನೀರನ್ನು ಮೇಘಗಳ ಮೂಲಕ ಶತ್ರು ಸೈನ್ಯಗಳ ಮೇಲೆ ಸುರಿಸುತ್ತಾ ಸೈನ್ಯವನ್ನು ಚದುರಿಸಲು ಪ್ರಯತ್ನಿಸಿದನು.

೩೭. ಇದನ್ನು ನೋಡಿ ಶಂಕರನ ವಾಹನವಾದ ಬಸವನು ಕೋಪದಿಂದ ತನ್ನ ಎರಡು ಕೊಂಬುಗಳಿಂದಲೂ ಗರುಡನನ್ನು ಬಲವಾಗಿ ಇರಿದನು.

ಶೃಂಗಘಾತವಿಶೀರ್ಣಾಂಗೋ ಗರುಡೋऽತೀವ ವಿಸ್ಮಿತಃ
ವಿದುದ್ರಾವ ರಣಾತ್ತೂರ್ಣಂ ವಿಹಾಯ ಚ ಜನಾರ್ದನಂ　　॥ ೩೮ ॥

ಏವಂ ಜಾತೇ ಚರಿತ್ರಂ ತು ಭಗವಾನ್ದೇವಕೀಸುತಃ ।
ಉವಾಚ ಸಾರಥಿಂ ಶೀಘ್ರಂ ರುದ್ರತೇಜೋऽತಿವಿಸ್ಮಿತಃ　　॥ ೩೯ ॥

॥ ಶ್ರೀಕೃಷ್ಣ ಉವಾಚ ॥

ಹೇ ಸೂತ ಶೃಣು ಮದ್ವಾಕ್ಯಂ ರಥಂ ಮೇ ವಾಹಯ ದ್ರುತಂ ।
ಮಹಾದೇವಸಮೀಪಸ್ಥೋ ಯಥಾ ಸ್ಯಾಂ ಗದಿತುಂ ವಚಃ　　॥ ೪೦ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತೋ ಹರಿಣಾ ಸೂತೋ ದಾರುಕಸ್ಸ್ವಗುಣಾಗ್ರಣೀಃ ।
ದ್ರುತಂ ತಂ ವಾಹಯಾಮಾಸ ರಥಂ ರುದ್ರಸಮೀಪತಃ　　॥ ೪೧ ॥

ಅಥ ವಿಜ್ಞಾಪಯಾಮಾಸ ನತೋ ಭೂತ್ವಾ ಕೃತಾಂಜಲಿಃ ।
ಶ್ರೀಕೃಷ್ಣಃ ಶಂಕರಂ ಭಕ್ತ್ಯಾ ಪ್ರಪನ್ನೋ ಭಕ್ತವತ್ಸಲಂ　　॥ ೪೨ ॥

---

೩೮. ಈ ಬಸವನ ಕೊಂಬುಗಳಿಂದ ಗಾಯವಡೆದು ಶರೀರವು ಜರ್ಝರಿತವಾಗಲು ಗರುಡನು ಬಹಳ ಆಶ್ಚರ್ಯದಿಂದ ಏನುಮಾಡಲೂ ತೋರದೆ ಶ್ರೀಕೃಷ್ಣನನ್ನು ಅಲ್ಲಿಯೇ ಬಿಟ್ಟು ರಣರಂಗದಿಂದ ಓಡಿಹೋದನು.

೩೯-೪೦. ಇದನ್ನು ಶ್ರೀಕೃಷ್ಣನು ನೋಡಿ ರುದ್ರನ ಶಕ್ತಿಗೆ ಆಶ್ಚರ್ಯಪಟ್ಟು, ತನ್ನ ಸಾರಥಿಯನ್ನು ಕುರಿತು ಎಲೈ ಸಾರಥಿಯೇ, ನೀನು ಈಗಲೇ ನನ್ನ ರಥವನ್ನು ಈಶ್ವರನ ಸಮೀಪಕ್ಕೆ ನಡೆಸು. ಅಲ್ಲಿ ಈಶ್ವರನೊಡನೆ ಸ್ವಲ್ಪ ಮಾತನಾಡಬೇಕಾಗಿದೆ ಎಂದು ಅಪ್ಪಣೆಮಾಡಿದನು.

೪೧. ಕೃಷ್ಣನ ಮಾತಿನಂತೆ ಗುಣಶಾಲಿಯಾದ ಆ ದಾರುಕನು ತನ್ನ ರಥವನ್ನು ರುದ್ರನ ಸಮೀಪಕ್ಕೆ ವೇಗವಾಗಿ ನಡೆಸಿದನು.

೪೨. ಶ್ರೀಕೃಷ್ಣನು ಭಕ್ತಿಯಿಂದ ಕೈಜೋಡಿಸಿ ಭಕ್ತವತ್ಸಲನಾದ ಶಂಕರನಿಗೆ ಹೀಗೆ ವಿಜ್ಞಾಪಿಸಿಕೊಂಡನು.

॥ ಶ್ರೀಕೃಷ್ಣ ಉವಾಚ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ನಮಾಮಿ ತ್ವಾನಂತಶಕ್ತಿಂ ಸರ್ವಾತ್ಮಾನಂ ಪರೇಶ್ವರಂ ॥ ೪೩ ॥

ವಿಶ್ವೋತ್ಪತ್ತಿಸ್ಥಾನನಾಶಹೇತುಂ ಸಜ್ಜ್ಞಪ್ತಿಮಾತ್ರಕಂ ।
ಬ್ರಹ್ಮಲಿಂಗಂ ಪರಂ ಶಾಂತಂ ಕೇವಲಂ ಪರಮೇಶ್ವರಂ ॥ ೪೪ ॥

ಕಾಲೋ ದೈವಂ ಕರ್ಮಜೀವಸ್ಸ್ವಭಾವೋ ದ್ರವ್ಯಮೇವ ಚ ।
ಕ್ಷೇತ್ರಂ ಚ ಪ್ರಾಣ ಆತ್ಮಾ ಚ ವಿಕಾರಸ್ತತ್ಸಮೂಹಕಃ ॥ ೪೫ ॥

ಬೀಜರೋಹಪ್ರವಾಹಸ್ತು ತ್ವನ್ಮಾಯೈಷಾ ಜಗತ್ಪ್ರಭೋ ।
ತನ್ನಿಬಂಧಂ ಪ್ರಪದ್ಯೇಹ ತ್ವಾಮಹಂ ಪರಮೇಶ್ವರಂ ॥ ೪೬ ॥

ನಾನಾಭಾವೈರ್ಲೀಲಯೈವ ಸ್ವೀಕೃತೈರ್ನಿರ್ಜರಾದಿಕಾ ।
ನೂನಂ ಬಿಭರ್ಷಿ ಲೋಕೇಶೋ ಹಂಸ್ಯುನ್ಮಾರ್ಗಾನ್ಸ್ವಭಾವತಃ ॥ ೪೭ ॥

---

೪೩. ಎಲೈ ದೇವದೇವನೇ, ನೀನು ಶರಣಾಗತವತ್ಸಲನು, ಅನಂತಶಕ್ತಿಮಯನು, ಸರ್ವಪ್ರಪಂಚಸ್ವರೂಪನು, ದೇವತೆಗಳಿಗೊಡೆಯನು ಇಂತಹ ನಿನ್ನನ್ನು ನಮಸ್ಕರಿಸುವೆನು.

೪೪-೪೫. ಓ ಪರಮೇಶ್ವರನೇ, ನೀನು ಪ್ರಪಂಚದ ಉತ್ಪತ್ತಿ, ರಕ್ಷಣೆ, ನಾಶ ಇವುಗಳಿಗೆ ಮೂಲಕಾರಣನು, ಜ್ಞಾನಸ್ವರೂಪನು, ಬ್ರಹ್ಮಲಿಂಗಾತ್ಮಕನು, ದೈವ, ಕಾಲ, ಕರ್ಮ, ಜೀವ, ದ್ರವ್ಯ, ಸ್ವಭಾವ, ಕ್ಷೇತ್ರ, ಪ್ರಾಣ, ಆತ್ಮ, ಇವುಗಳ ಸ್ವರೂಪವನ್ನು ವಿಕಾರದಿಂದ ಹೊಂದಿರುವೆ.

೪೬. ಜಗತ್ತಿನಲ್ಲಿ ಬೀಜದಿಂದ ಮೊಳಕೆಯು ಅಂಕುರಿಸುವುದೇ ಮೊದಲಾದ ಕಾರ್ಯವೆಲ್ಲವೂ ನಿನ್ನ ಮಾಯೆಯೇ. ಪರಮೇಶ್ವರನಾದ ನಿನ್ನ ಅಪ್ಪಣೆಯಿಂದಲೇ ಆ ಮಾಯೆಯು ಕಾರ್ಯಕಾರಿಯಾಗುತ್ತಿರುವುದು ಅಂತಹ ನಿನ್ನನ್ನು ನಾನು ಶರಣು ಹೊಂದುತ್ತೇನೆ.

೪೭. ನೀನು ಲೀಲಾಮಾತ್ರದಿಂದಲೇ ದೇವತೆಗಳ ಆಕಾರವನ್ನೆಲ್ಲಾ ಹೊಂದುತ್ತೀಯೆ. ಲೋಕೇಶನಾಗಿ ಜಗತ್ತನ್ನು ರಕ್ಷಿಸುವೆ. ದುಷ್ಟರನ್ನು ಶಿಕ್ಷಿಸುವೆ.

ತ್ವಂ ಹಿ ಬ್ರಹ್ಮ ಪರಂ ಜ್ಯೋತಿರ್ಗೂಢಂ ಬ್ರಹ್ಮಣಿ ವಾಙ್ಮಯೇ ।
ಯೇ ಪಶ್ಯಂತ್ಯಮಲಾತ್ಮಾನಂ ಆಕಾಶಮಿವ ಕೇವಲಂ　　॥ ೪೮ ॥

ತ್ವಮೇವ ಚಾದ್ಯಃ ಪುರುಷೋಽದ್ವಿತೀಯಸ್ತುರ್ಯ ಆತ್ಮದೃಕ್ ।
ಈಶೋ ಹೇತುರಹೇತುಶ್ಚ ಸವಿಕಾರಃ ಪ್ರತೀಯಸೇ　　॥ ೪೯ ॥

ಸ್ವಮಾಯಯಾ ಸರ್ವಗುಣಪ್ರಸಿದ್ಧ್ಯೈ ಭಗವನ್ಪ್ರಭೋ ।
ಸರ್ವಾನ್ವಿತಃ ಪ್ರಭಿನ್ನಶ್ಚ ಸರ್ವತಸ್ತ್ವಂ ಮಹೇಶ್ವರ　　॥ ೫೦ ॥

ಯಥೈವ ಸೂರ್ಯೋ ಪಿಹಿತಶ್ಛಾಯಾರೂಪಾಣಿ ಚ ಪ್ರಭೋ ।
ಸ್ವಚ್ಛಾಯಯಾ ಸಂಚಕಾಸ್ತಿ ಹ್ಯಯಂ ಪರಮದೃಗ್ಭವಾನ್　　॥ ೫೧ ॥

---

೪೮. ಎಲೈ ಶಂಕರನೇ, ವಾಗ್ರೂಪವಾದ ಪರಬ್ರಹ್ಮನಲ್ಲಿ ನೀನು ಜ್ಯೋತೀರೂಪನೂ, ಬ್ರಹ್ಮರೂಪಿಯೂ ಆಗಿ ಅಡಗಿರುವೆ. ನಿನ್ನನ್ನೇ ಯೋಗಿಗಳು ಕೇವಲ ಆಕಾಶಮಯವಾದ ಆತ್ಮನನ್ನಾಗಿ ಅರಿಯುವರು.

೪೯. ನೀನು ಆದಿಪುರುಷನು. ನಿನಗೆ ಸಮನಾದ ಮತ್ತೊಬ್ಬ ಪುರುಷನಿಲ್ಲ. ಎಲ್ಲರ ಆತ್ಮಸ್ವರೂಪವೇ ನೀನು, ಎಂದರೆ ಆತ್ಮಸ್ವರೂಪದಿಂದ ನೀನೇ ಎಲ್ಲರಲ್ಲಿಯೂ ಅಂತರ್ಯಾಮಿಯಾಗಿ ವಾಸಿಸುತ್ತಿರುವೆ. ಪ್ರಪಂಚಕ್ಕೆ ಒಡೆಯನು ಮತ್ತು ಕಾರಣನು. ಆದರೂ ನಿರ್ಲಿಪ್ತನು. ನಿರ್ಗುಣನಾದರೂ ಕಾರ್ಯಾರ್ಥವಾಗಿ ಸಗುಣರೂಪದಿಂದ ಆಗಾಗ ಗೋಚರಿಸುವೆ.

೫೦. ಎಲೈ ಮಹೇಶ್ವರನೇ, ನೀನು ನಿನ್ನ ಮಾಯಾಬಲದಿಂದ ಸರ್ವಗುಣಗಳನ್ನು ಪಡೆಯುತ್ತೀಯೆ. ಸರ್ವ ವಸ್ತುಗಳಲ್ಲೂ ಅಡಗಿರುತ್ತೀಯೆ. ಆದರೆ ಎಲ್ಲಾ ವಸ್ತುಗಳಿಗಿಂತ ಭಿನ್ನನಾಗಿಯೂ ಇದ್ದೀಯೆ.

೫೧. ಸೂರ್ಯನಿಂದ ಕಾಂತಿಯನ್ನು ಪಡೆಯದೆ ಯಾವ ವಸ್ತುಗಳು ಛಾಯಾರೂಪವಾಗಿ ತೋರುವುವೋ, ಅಂತಹ ವಸ್ತುಗಳು ನಿನ್ನ ತೇಜಸ್ಸಿನಿಂದ ಸೂರ್ಯನಂತೆ ಹೊಳೆಯಲು ಆರಂಭಿಸುವುವು. ಅಂತಹ ಪರಮತೇಜಸ್ವಿಯು ನೀನು.

ಗುಣೇನಾಪಿಹಿತೋಽಪಿ ತ್ವಂ ಗುಣೇನೈವ ಗುಣಾನ್ವಿಭೋ ।
ಸ್ವಪ್ರದೀಪಶ್ಚಕಾಸ್ಸಿ ತ್ವಂ ಭೂಮನ್ನಿರಿಶ ಶಂಕರ ॥ ೫೨ ॥

ತ್ವನ್ಮಾಯಾಮೋಹಿತಧಿಯಃ ಪುತ್ರದಾರಗೃಹಾದಿಷು ।
ಉನ್ಮಜ್ಜಂತಿ ನಿಮಜ್ಜಂತಿ ಪ್ರಸಕ್ತಾ ವೃಜಿನಾರ್ಣವೇ ॥ ೫೩ ॥

ದೈವದತ್ತಮಿಮಂ ಲಬ್ಧ್ವಾ ನೃಲೋಕಮಜಿತೇಂದ್ರಿಯಃ ।
ಯೋ ನಾದ್ರಿಯೇತ ತ್ವತ್ಪಾದೌ ಸ ಶೋಚ್ಯೋ ಹ್ಯಾತ್ಮವಂಚಕಃ ॥ ೫೪ ॥

ತ್ವದಾಜ್ಞಯಾಹಂ ಭಗವಾನ್ಬಾಣದೋಶ್ಛೇತ್ತುಮಾಗತಃ ।
ತ್ವಯೈವ ಶಪ್ತೋ ಬಾಣೋಽಯಂ ಗರ್ವಿತೋ ಗರ್ವಹಾರಿಣಾ ॥ ೫೫ ॥

ನಿವರ್ತಸ್ವ ರಣಾದ್ದೇವ ತ್ವಚ್ಛಾಪೋ ನ ವೃಥಾ ಭವೇತ್ ।
ಆಜ್ಞಾಂ ದೇಹಿ ಪ್ರಭೋ ಮೇ ತ್ವಂ ಬಾಣಸ್ಯ ಭುಜಕೃಂತನೇ ॥ ೫೬ ॥

---

೫೨. ಓ ಶಂಕರನೇ ನೀನು ನಿರ್ಗುಣನು. ಆದರೂ ಗುಣಗಳಿಂದ ಕೂಡಿದವನಂತೆ ಉತ್ತಮಗುಣಗಳನ್ನು ಪ್ರಕಾಶಪಡಿಸುತ್ತಿದ್ದೀಯೆ. ಪ್ರಕಾಶಮಾನವಾದ ಗುಣಗಳಿಂದ ನೀನು ದೀಪದಂತೆ ಹೊಳೆಯುತ್ತಿರುವೆ.

೫೩. ನಿನ್ನ ಮಾಯೆಗೆ ಸಿಕ್ಕಿದವರು, ಮಕ್ಕಳು, ಹೆಂಡತಿ, ಮನೆ, ಮುಂತಾದ ಮೋಹವಸ್ತುಗಳಲ್ಲಿ ಮುಳುಗಿ ತೇಲುತ್ತಾರೆ. ಕೊನೆಗೆ ಪಾಪಕೂಪದಲ್ಲಿ ಸಿಕ್ಕಿ ನರಳುತ್ತಾರೆ.

೫೪. ಈ ಪ್ರಪಂಚವು ದೈವದತ್ತವಾದದ್ದು. ಇದರಲ್ಲಿ ನಮ್ಮದು ಯಾವುದೂ ಇಲ್ಲ ಎಂದು ತಿಳಿದು ಯಾವನು ಜಿತೇಂದ್ರಿಯನಾಗಿ ನಿನ್ನ ಪಾದಸೇವೆಯಲ್ಲಿ ಮನಸ್ಸಿಡುವುದಿಲ್ಲವೋ, ಅವನು ನಿಜವಾಗಿಯೂ ಆತ್ಮವಂಚಕನೆನಿಸುವನು.

೫೫. ಓ ಭಗವಂತನೇ, ನಿನ್ನ ಅಪ್ಪಣೆಯಿಂದಲೇ ನಾನು ಬಾಣಾಸುರನ ತೋಳುಗಳನ್ನು ಕತ್ತರಿಸಲು ಬಂದೆನು. ನಿನ್ನಿಂದಲೇ ಈ ಬಾಣಾಸುರನು ಶಪಿಸಲ್ಪಟ್ಟಿರುವನು. ಗರ್ವಿಷ್ಠರ ಅಹಂಕಾರವನ್ನು ನಾಶಮಾಡುವವನು ನೀನೇ ಅಲ್ಲವೇ ?

೫೬. ಎಲೈ ಸ್ವಾಮಿಯೇ, ನೀನು ರಣರಂಗದಿಂದ ಹಿಂದಿರುಗು. ನಿನ್ನ ಶಾಪದಂತೆ ನಾನು ಬಾಣಾಸುರನ ಬಾಹುಗಳನ್ನು ಕತ್ತರಿಸಲು ಅಪ್ಪಣೆಯನ್ನು ಕೊಡು ಎಂದು ನಾನಾವಿಧವಾಗಿ ಶ್ರೀಕೃಷ್ಣನು ಪರಮೇಶ್ವರನನ್ನು ಪ್ರಾರ್ಥಿಸಿದನು.

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಶ್ಶಂಭುಃ ಶ್ರೀಕೃಷ್ಣಸ್ಯ ಮುನೀಶ್ವರಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಕೃಷ್ಣಸ್ತುತ್ಯಾ ಮಹೇಶ್ವರಃ ॥ ೫೭ ॥

॥ ಮಹೇಶ್ವರ ಉವಾಚ ॥

ಸತ್ಯಮುಕ್ತಂ ತ್ವಯಾ ತಾತ ಮಯಾ ಶಪ್ತೋ ಹಿ ದೈತ್ಯರಾಟ್ ।
ಮದಾಜ್ಞಯಾ ಭವಾನ್ಪ್ರಾಪ್ತೋ ಬಾಣದೋರ್ದಂಡಕೃಂತನೇ ॥ ೫೮ ॥

ಕಿಂ ಕರೋಮಿ ರಮಾನಾಥ ಭಕ್ತಾಧೀನಸ್ಸದಾ ಹರೇ ।
ಪಶ್ಯತೋ ಮೇ ಕಥಂ ವೀರ ಸ್ಯಾದ್ಬಾಣಭುಜಕೃಂತನಂ ॥ ೫೯ ॥

ಅತಸ್ತ್ವಂ ಜೃಂಭಣಾಸ್ತ್ರೇಣ ಮಾಂ ಜೃಂಭಯ ಮದಾಜ್ಞಯಾ ।
ತತಸ್ತ್ವಂ ಕುರು ಕಾರ್ಯಂ ಸ್ವಂ ಯಥೇಷ್ಟಂ ಚ ಸುಖೀಭವ ॥ ೬೦ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತಶ್ಶಂಕರೇಣಾಥ ಶಾರ್ಙ್ಗಪಾಣಿಸ್ಸುವಿಸ್ಮಿತಃ ।
ಸ್ವರಣಸ್ಥಾನಮಾಗತ್ಯ ಮುಮೋದ ಸ ಮುನೀಶ್ವರಃ ॥ ೬೧ ॥

---

೫೭-೫೮. ಸನತ್ಕುಮಾರನಿಂತೆಂದನು ;—ಶ್ರೀಕೃಷ್ಣನ ಈ ಪ್ರಾರ್ಥನೆಯನ್ನು ಕೇಳಿ ಶಂಕರನು ಪ್ರಸನ್ನನಾಗಿ ಕೃಷ್ಣನನ್ನು ಕುರಿತು ಎಲೈ ಕೃಷ್ಣನೇ, ನೀನು ಹೇಳುವುದು ನಿಜ. ಹಿಂದೆ ನಾನು ಬಾಣಾಸುರನಿಗೆ ಶಾಪವನ್ನಿತ್ತಿರುವೆನು. ಬಾಣಾಸುರನ ತೋಳುಗಳನ್ನು ಕತ್ತರಿಸಲು ನೀನು ನನ್ನ ಪ್ರೇರಣೆಯಿಂದಲೇ ಇಲ್ಲಿಗೆ ಬಂದಿದ್ದೇಯೆ.

೫೯. ಈಗ ನಾನು ಏನುಮಾಡಲಿ ? ನಾನು ಭಕ್ತನಿಗೆ ಅಧೀನನಾಗಿರುವೆನು. ನನ್ನ ಎದುರಿನಲ್ಲಿಯೇ ಭಕ್ತನ ಭುಜಗಳನ್ನು ನೀನು ಕತ್ತರಿಸುವುದು ಹೇಗೆ ?

೬೦. ಆದುದರಿಂದ ಈಗ ನೀನು ಜೃಂಭಣಾಸ್ತ್ರದಿಂದ ನನ್ನನ್ನು ಹೊಡೆದು ಮೂರ್ಛೆಗೊಳಿಸು. ಅನಂತರ ನೀನು ನಿನ್ನ ಇಷ್ಟದಂತೆ ನಡೆದು ಸುಖಿಯಾಗು ಎಂದು ಶಿವನು ಆಜ್ಞಾಪಿಸಿದನು.

೬೧. ಹೀಗೆ ಶಂಕರನ ಅಪ್ಪಣೆಯನ್ನು ಕೇಳಿ ಶ್ರೀಕೃಷ್ಣನು ಸಂತೋಷದಿಂದ ತನ್ನ ಹಿಂದಿನ ಸ್ಥಾನಕ್ಕೇ ಬಂದು ನಿಂತನು.

ಜೃಂಭಣಾಸ್ತ್ರಂ ಮುಮೋಚಾಥ ಸಂಧಾಯ ಧನುಷಿ ದ್ರುತಂ ।
ಪಿನಾಕಪಾಣಯೇ ವ್ಯಾಸ ನಾನಾಸ್ತ್ರಕುಶಲೋ ಹರಿಃ ॥ ೬೨ ॥

ಮೋಹಯಿತ್ವಾ ತು ಗಿರಿಶಂ ಜೃಂಭಣಾಸ್ತ್ರೇಣ ಜೃಂಭಿತಂ ।
ಬಾಣಸ್ಯ ಪೃತನಾಂ ಶೌರಿರ್ಜಘಾನಾಸಿರದಷ್ಟಿರ್ಭಿಃ ॥ ೬೩ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಬಾಣಾಸುರರುದ್ರಕೃಷ್ಣಾದಿಯುದ್ಧ-
ವರ್ಣನಂ ನಾಮ ಚತುಃಪಂಚಾಶತ್ತಮೋಽಧ್ಯಾಯಃ

---

೬೨. ಬಳಿಕ ಶಸ್ತ್ರಾಸ್ತ್ರ ಸಂಪನ್ನನಾದ ಶ್ರೀಕೃಷ್ಣನು ತನ್ನ ಧನುಸ್ಸಿನಲ್ಲಿ ಆ ಜೃಂಭಣಾಸ್ತ್ರವನ್ನು ಹೂಡಿ, ಪಿನಾಕಧಾರಿಯಾದ ಶಂಕರನ ಮೇಲೆ ಪ್ರಯೋಗಿಸಿದನು.

೬೩. ಜೃಂಭಣಾಸ್ತ್ರದಿಂದ ಶಂಕರನನ್ನು ಮೂರ್ಛೆಗೊಳಿಸಿ, ಶ್ರೀಕೃಷ್ಣನು ತನ್ನ ಉತ್ತಮವಾದ ಬಾಣ, ಗದೆ, ಮುಂತಾದ ಆಯುಧಗಳಿಂದ ಬಾಣಾಸುರನ ಸೈನ್ಯವನ್ನೆಲ್ಲಾ ಧ್ವಂಸಮಾಡಿದನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ಎರಡನೆಯ ರುದ್ರಸಂಹಿತೆಯ ಐದನೇ ಯುದ್ಧ
ಖಂಡದಲ್ಲಿ ಬಾಣಾಸುರರುದ್ರರಿಗೂ, ಕೃಷ್ಣನಿಗೂ ನಡೆದ ಯುದ್ಧ
ವರ್ಣನೆಯೆಂಬ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀ ||

---

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಪಂಚಪಂಚಾಶತ್ತಮೋಽಧ್ಯಾಯಃ

|| ವ್ಯಾಸ ಉವಾಚ ||

ಸನತ್ಕುಮಾರ ಸರ್ವಜ್ಞ ಬ್ರಹ್ಮಪುತ್ರ ನಮೋಽಸ್ತು ತೇ ।
ಅದ್ಭುತೇಯಂ ಕಥಾ ತಾತ ಶ್ರಾವಿತಾ ಮೇ ತ್ವಯಾ ಮುನೇ || ೧ ||

ಜೃಂಭಿತೇ ಜೃಂಭತಾಸ್ತ್ರೇಣ ಹರಿಣಾ ಸಮರೇ ಹರೇ ।
ಹತೇ ಬಾಣಬಲೇ ಬಾಣಃ ಕಿಮಕಾರ್ಷೀಚ್ಚ ತದ್ವದ || ೨ ||

---

### ಐವತ್ತೈದನೆಯ ಅಧ್ಯಾಯವು.

೧. ವ್ಯಾಸನು ಸನತ್ಕುಮಾರನನ್ನು ಕುರಿತು :—ಎಲೈ ಸನತ್ಕುಮಾರ ಮಹರ್ಷಿಯೇ, ನೀನು ಸರ್ವಜ್ಞನು, ಬ್ರಹ್ಮಪುತ್ರನು, ನನಗೆ ಅದ್ಭುತವಾದ ಈ ಕಥೆ ಯನ್ನು ಹೇಳಿರುವೆ.

೨. ಶ್ರೀಕೃಷ್ಣನು ಜೃಂಭಣಾಸ್ತ್ರದಿಂದ ಶಂಕರನನ್ನು ಮೂರ್ಛೆಗೊಳಿಸಿದಮೇಲೆ ಬಾಣನು ತನ್ನ ಸೈನ್ಯವನ್ನೆಲ್ಲಾ ಕಳೆದುಕೊಂಡು ಮುಂದೇನುಮಾಡಿದನು ಎಂಬುದನ್ನು ನನಗೆ ತಿಳಿಸು ಎಂದನು.

॥ ಸೂತ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ವ್ಯಾಸಸ್ಯಾಮಿತತೇಜಸಃ ।
ಪ್ರತ್ಯುವಾಚ ಪ್ರಸನ್ನಾತ್ಮಾ ಬ್ರಹ್ಮಪುತ್ರೋ ಮುನೀಶ್ವರಃ ॥ ೩ ॥

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಮಹಾಪ್ರಾಜ್ಞ ಕಥಾಂ ಚ ಪರಮಾದ್ಭುತಾಂ ।
ಕೃಷ್ಣಶಂಕರಯೋಸ್ತಾತ ಲೋಕಲೀಲಾನುಸಾರಿಣೋಃ ॥ ೪ ॥

ಶಯಿತೇ ಲೀಲಯಾ ರುದ್ರೇ ಸಪುತ್ರೇ ಸಗಣೇ ಸತಿ ।
ಬಾಣೋ ವಿನಿರ್ಗತೋ ಯುದ್ಧಂ ಕರ್ತುಂ ಕೃಷ್ಣೇನ ದೈತ್ಯರಾಟ್ ॥ ೫ ॥

ಕುಂಭಾಂಡಸಂಗೃಹೀತಾಶ್ವೋ ನಾನಾಶಸ್ತ್ರಾಸ್ತ್ರಧೃಕ್ತತಃ ।
ಚಕಾರ ಯುದ್ಧಮತುಲಂ ಬಲಿಪುತ್ರೋ ಮಹಾಬಲಃ ॥ ೬ ॥

ದೃಷ್ಟ್ವಾ ನಿಜಬಲಂ ನಷ್ಟಂ ಸ ದೈತ್ಯೇಂದ್ರೋಽತ್ಯಮರ್ಷಿತಃ ।
ಚಕಾರ ಯುದ್ಧಮತುಲಂ ಬಲಿಪುತ್ರೋ ಮಹಾಬಲಃ ॥ ೭ ॥

---

೩. ವ್ಯಾಸನ ಈ ಮಾತುಗಳನ್ನು ಕೇಳಿ ಬ್ರಹ್ಮಪುತ್ರನಾದ ಸನತ್ಕುಮಾರ ಋಷಿಯು ಸಂತೋಷದಿಂದ ಮುಂದಿನ ಕಥೆಯನ್ನು ವಿಸ್ತರಿಸಿದನು.

೪. ಎಲೈ ಪ್ರಾಜ್ಞನಾದ ವ್ಯಾಸಮಹರ್ಷಿಯೇ, ಲೋಕಲೀಲೆಗಾಗಿ ಕೃಷ್ಣ ಶಂಕರರು ನಡೆಸಿದ ಅದ್ಭುತವಾದ ಕಥೆಯನ್ನು ವಿವರಿಸುವೆನು, ಭಕ್ತಿಯಿಂದ ಕೇಳು.

೫. ರುದ್ರನು ಶ್ರೀಕೃಷ್ಣನ ಅಸ್ತ್ರದಿಂದ ಪುತ್ರ ಮತ್ತು ಸೈನ್ಯಸಮೇತನಾಗಿ ಮೂರ್ಛಿತನಾಗಲು ಅದನ್ನು ಕಂಡು ಬಾಣಾಸುರನು ತಾನೇ ಕೃಷ್ಣನೊಡನೆ ಯುದ್ಧಕ್ಕೆ ಹೊರಟನು.

೬. ಕುಂಭಾಂಡನೇ ಅವನಿಗೆ ಸಾರಥಿಯಾದನು. ತಾನೂ ಸಹ ನಾನಾವಿಧವಾದ ಶಸ್ತ್ರಾಸ್ತ್ರಸಂಪತ್ತಿನಿಂದ ಕೂಡಿ ಶ್ರೀಕೃಷ್ಣನೊಡನೆ ಘೋರಯುದ್ಧವನ್ನು ಮಾಡಿದನು.

೭. ಆ ಯುದ್ಧದಲ್ಲಿ ಬಾಣಾಸುರನ ಸೈನ್ಯವು ಬಹಳವಾಗಿ ನಷ್ಟವಾಯಿತು. ಆದರೂ ಕುಪಿತನಾಗಿ ಪರಾಕ್ರಮದಿಂದ ದೊಡ್ಡಯುದ್ಧ ಮಾಡಿದನು.

ಶ್ರೀಕೃಷ್ಣೋಽಪಿ ಮಹಾವೀರೋ ಗಿರಿಶಾಪ್ತಮಹಾಬಲಃ ।
ಉಚ್ಚೈರ್ಜಗರ್ಜ ತತ್ರಾಜೌ ಬಾಣಂ ಮತ್ವಾ ತೃಣೋಪಮಂ　　॥ ೮ ॥

ಧನುಷ್ಟಂಕಾರಯಾಮಾಸ ಶಾರ್ಙ್ಗಾಖ್ಯಂ ನಿಜಮದ್ಭುತಂ ।
ತ್ರಾಸಯನ್ಬಾಣಸೈನ್ಯಂ ತದವಶಿಷ್ಟಂ ಮುನೀಶ್ವರ　　॥ ೯ ॥

ತೇನ ನಾದೇನ ಮಹತಾ ಧನುಷ್ಟಂಕಾರಜೇನ ಹಿ ।
ದ್ಯಾವಾಭೂಮ್ಯೋರಂತರಂ ವೈ ವ್ಯಾಪ್ತಮಾಸೀದನಂತರಂ　　॥ ೧೦ ॥

ಚಿಕ್ಷೇಪ ವಿವಿಧಾನ್ಬಾಣಾನ್ಬಾಣಾಯ ಕುಪಿತೋ ಹರಿಃ ।
ಕರ್ಣಾಂತಂ ತದ್ವಿಕೃಷ್ಯಾಥ ತೀಕ್ಷ್ಣಾನಾಶೀವಿಷೋಪಮಾನ್　　॥ ೧೧ ॥

ಆಯಾತಸ್ತಾನ್ನಿರೀಕ್ಷ್ಯಾಽಥ ಸ ಬಾಣೋ ಬಲಿನಂದನಃ ।
ಅಪ್ರಾಪ್ತಾನೇವ ಚಿಚ್ಛೇದ ಸ್ವಶರೈಸ್ಸ್ವಧನುಶ್ಚ್ಯುತೈಃ　　॥ ೧೨ ॥

---

೮. ಮಹಾವೀರನಾದ ಕೃಷ್ಣನಾದರೋ ಶಂಕರನ ಆಜ್ಞೆಯಿಂದ ಅತ್ಯಂತ ಬಲಶಾಲಿಯಾಗಿ ಯುದ್ಧದಲ್ಲಿ ಬಾಣನನ್ನು ಹುಲ್ಲುಕಡ್ಡಿಗೆ ಸಮನಾಗಿಮಾಡಿ ಗರ್ಜಿಸಿದನು.

೯. ಕೃಷ್ಣನ ಶಾರ್ಙ್ಗವೆಂಬ ಮಹಾದ್ಭುತವಾದ ಧನುಷ್ಟಂಕಾರದಿಂದ ಯುದ್ಧದಲ್ಲಿ ಹತರಾಗಿ ಕಳೆದುಳಿದಿದ್ದ ಬಾಣನ ಸೈನ್ಯದವರೆಲ್ಲರೂ ಭಯಗೊಂಡರು.

೧೦. ಆ ಧನುಷ್ಟಂಕಾರಧ್ವನಿಯು ಘೋರವಾಗಿ ಭೂಮ್ಯಾಕಾಶಗಳನ್ನೆಲ್ಲಾ ವ್ಯಾಪಿಸಿ ಸರ್ವರಿಗೂ ಭಯೋತ್ಪಾದಕವಾಗಿದ್ದಿತು.

೧೧. ಅತಿಯಾಗಿ ಕೋಪಗೊಂಡ ಶ್ರೀಕೃಷ್ಣನು ಸರ್ಪಗಳಿಗೆ ಸಮನಾದ ಬಾಣಗಳಿಂದ ಧನುಸ್ಸನ್ನು ಆಕರ್ಣಾಂತವಾಗಿ ಎಳೆದು ಪ್ರಯೋಗಮಾಡಲಾರಂಭಿಸಿದನು.

೧೨. ಬಲಿಪುತ್ರನಾದ ಆ ಬಾಣಾಸುರನು ಆ ಬಾಣಗಳನ್ನೆಲ್ಲಾ ಮಧ್ಯಮಾರ್ಗದಲ್ಲಿಯೇ ತನ್ನ ಬಾಣಪರಂಪರೆಗಳಿಂದ ಕತ್ತರಿಸುತ್ತಾ ಬಂದನು.

ಪುನರ್ಜಗರ್ಜ ಸ ವಿಭುರ್ಬಾಣೋ ವೈರಿಗಣಾರ್ದನಃ ।
ತತ್ರಸುರ್ವೃಷ್ಣಯಸ್ಸರ್ವೇ ಕೃಷ್ಣಾತ್ಮಾನೋ ವಿಚೇತಸಃ ॥ ೧೩ ॥

ಸ್ಮೃತ್ವಾ ಶಿವಪದಾಂಭೋಜಂ ಚಿಕ್ಷೇಪ ನಿಜಸಾಯಕಾನ್ ।
ಸ ಕೃಷ್ಣಾಯಾತಿಶೂರಾಯ ಮಹಾಗರ್ವೋ ಬಲೇಸ್ಸುತಃ ॥ ೧೪ ॥

ಕೃಷ್ಣೋಽಪಿ ತಾನಸಂಪ್ರಾಪ್ತಾನಚ್ಛಿನತ್ಸ್ವಶರೈರ್ದ್ರುತಂ ।
ಸ್ಮೃತ್ವಾ ಶಿವಪದಾಂಭೋಜಮಮುರಾರಿರ್ಮಹಾಬಲಃ ॥ ೧೫ ॥

ರಾಮಾದಯೋ ವೃಷ್ಣಯಶ್ಚ ಸ್ವಂ ಸ್ವಂ ಯೋದ್ಧಾರಮಾಹವೇ ।
ನಿಜಘ್ನುರ್ಬಲಿನಸ್ಸರ್ವೇ ಕೃತ್ವಾ ಕ್ರೋಧಂ ಸಮಾಕುಲಾಃ ॥ ೧೬ ॥

ಇತ್ಥಂ ಚಿರತರಂ ತತ್ರ ಬಲಿನೋಶ್ಚ ದ್ವಯೋರಪಿ ।
ಬಭೂವ ತುಮುಲಂ ಯುದ್ಧಂ ಶೃಣ್ವತಾಂ ವಿಸ್ಮಯಾವಹಂ ॥ ೧೭ ॥

---

೧೩. ಶೂರನಾದ ಆ ಭಾಣಾಸುರನು ಶತ್ರುಸಂಹಾರಮಾಡುತ್ತಾ ಗರ್ಜಿಸಿದನು. ಅದಕ್ಕೆ ಆ ವೃಷ್ಣಿಬಲದವರೆಲ್ಲರೂ ಬಹಳವಾಗಿ ಹೆದರಿ ಕೃಷ್ಣನನ್ನೇ ಮರೆಹೊಕ್ಕರು.

೧೪. ಬಲಿಪುತ್ರನಾದ ಬಾಣನು ತನ್ನ ಮನಸ್ಸಿನಲ್ಲಿ ಪರಶಿವನ ಪಾದಸ್ಮರಣೆ ಮಾಡುತ್ತಾ ಅತಿ ಶೂರನಾದ ಶ್ರೀಕೃಷ್ಣನಮೇಲೆ ಅನೇಕ ಬಾಣಗಳನ್ನು ಪ್ರಯೋಗಿಸಿದನು.

೧೫. ಶ್ರೀಕೃಷ್ಣನಾದರೋ ಆ ಬಾಣಗಳನ್ನು ಮಧ್ಯಮಾರ್ಗದಲ್ಲೇ ತುಂಡರಿಸಿ ಪರಶಿವನನ್ನೇ ಧ್ಯಾನಿಸುತ್ತಾ ಪುನಃ ಬಾಣಪ್ರಯೋಗಮಾಡಿಧನು

೧೬. ಬಲರಾಮನೇ ಮೊದಲಾದ ವೃಷ್ಣಿಯೋಧರೆಲ್ಲರೂ ತಮ್ಮತಮ್ಮ ಎದುರಾಳಿಗಳನ್ನು ಯುದ್ಧದಲ್ಲಿ ಸದೆಬಡಿಯುತ್ತಾ ಬಂದರು.

೧೭. ಹೀಗೆ ಬಲಿಷ್ಠರಾದ ಆ ಕೃಷ್ಣ ಬಾಣಾಸುರರಿಗೆ ಅಗಾಧವಾದ ಯುದ್ಧವಾಯಿತು; ಆ ಯುದ್ಧವು ಕೇಳುವವರಿಗೂ ಸಹ ಆಶ್ಚರ್ಯವನ್ನುಂಟುಮಾಡುವಂತಿತ್ತು.

ತಸ್ಮಿನ್ನವಸರೇ ತತ್ರ ಕ್ರೋಧಂ ಕೃತ್ವಾsತಿಪಕ್ಷಿರಾಟ್ ।
ಬಾಣಾಸುರಬಲಂ ಸರ್ವಂ ಪಕ್ಷಾಘಾತೈರಮರ್ದಯತ್ ॥ ೧೮ ॥

ಮರ್ದಿತಂ ಸ್ವಬಲಂ ದೃಷ್ಟ್ವಾ ಮರ್ದಯಂತಂ ಚ ತಂ ಬಲೀ ।
ಚುಕೋಪಾತಿ ಬಲೇಃ ಪುತ್ರಃ ಶೈವರಾಡ್ದಿತಿಜೇಶ್ವರಃ ॥ ೧೯ ॥

ಸ್ಮೃತ್ವಾ ಶಿವಪದಾಂಭೋಜಂ ಸಹಸ್ರಭುಜವಾನ್ದ್ರುತಂ ।
ಮಹತ್ಪರಾಕ್ರಮಂ ಚಕ್ರೇ ವೈರಿಣಾಂ ದುಸ್ಸಹಂ ಸ ವೈ ॥ ೨೦ ॥

ಚಿಕ್ಷೇಪ ಯುಗಪದ್ಬಾಣಾನಮಿತಾಂಸ್ತತ್ರ ವೀರಹಾ ।
ಕೃಷ್ಣಾದಿಸರ್ವಯದುಷು ಗರುಡೇ ಚ ಪೃಥಕ್ಪೃಥಕ್ ॥ ೨೧ ॥

ಜಘಾನೇಕೈನ ಗರುಡಂ ಕೃಷ್ಣಮೇಕೇನ ಪತ್ರಿಣಾ ।
ಬಲಮೇಕೇನ ಚ ಮುನೇ ಪರಾನಪಿ ತಥಾ ಬಲೀ ॥ ೨೨ ॥

---

೧೮. ಆ ಸಂಭ್ರಮದಲ್ಲಿ ಪಕ್ಷಿರಾಜನಾದ ಗರುಡನೂ ಸಹ ತನ್ನ ರೆಕ್ಕೆಗಳ ಹೊಡೆತದಿಂದ ಬಾಣಾಸುರನ ಸೈನ್ಯವನ್ನೆಲ್ಲಾ ಧ್ವಂಸಮಾಡಿದನು.

೧೯. ಹಾಗೆ ಗರುಡನು ತನ್ನ ಸೈನ್ಯವನ್ನು ನಾಶಮಾಡುತ್ತಿರುವುದನ್ನು ಬಾಣಾಸುರನು ನೋಡಿ ಬಹಳವಾಗಿ ಕೋಪಿಸಿಕೊಂಡು ಯುದ್ಧಕ್ಕೆ ನುಗ್ಗಿದನು.

೨೦. ಸಹಸ್ರ ತೋಳುಗಳುಳ್ಳ ಆ ಬಾಣಾಸುರನು ಪರಶಿವನನ್ನು ಮನಸ್ಸಿನಲ್ಲಿ ಸ್ಮರಿಸುತ್ತಾ ತನ್ನ ಸಮಸ್ತ ಶಕ್ತಿಯಿಂದಲೂ ಶತ್ರುಗಳಮೇಲೆ ಬಿದ್ದನು.

೨೧. ವೀರನಾದ ಆ ಬಾಣಾಸುರನು ಒಂದೇಸಾರಿ ಕೃಷ್ಣನೇ ಮೊದಲಾದ ಯದುವೀರರಿಗೂ ಗರುಡನಿಗೂ ಬಾಣಗಳನ್ನು ಪ್ರಯೋಗಿಸಿ ನೋಯಿಸಿದನು.

೨೨. ಒಂದು ಬಾಣದಿಂದ ಗರುಡನನ್ನೂ ಮತ್ತೊಂದು ಬಾಣದಿಂದ ಕೃಷ್ಣನನ್ನೂ ಮತ್ತೊಂದು ಬಾಣದಿಂದ ಎಲ್ಲ ಸೈನ್ಯವನ್ನೂ ನೋಯಿಸಿದನು.

ತತಃ ಕೃಷ್ಣೋ ಮಹಾವೀರ್ಯೋ ವಿಷ್ಣುರೂಪಸ್ಸುರಾರಿಹಾ ।
ಚುಕೋಪಾತಿ ರಣೇ ತಸ್ಮಿನ್ ಜಗರ್ಜ ಚ ಮಹೇಶ್ವರಃ ॥ ೨೩ ॥

ಜಘಾನ ಬಾಣಂ ತರಸಾ ಶಾರ್ಙ್ಗನಿಸ್ಸೃತಸಚ್ಛರೈಃ ।
ಅತಿ ತದ್ಬಲಮತ್ಯುಗ್ರಂ ಯುಗಪತ್ಸ್ಮೃತಶಂಕರಃ ॥ ೨೪ ॥

ಚಿಚ್ಛೇದ ತದ್ಧನುಶ್ಶೀಘ್ರಂ ಛತ್ರಾದಿಕಮನಾಕುಲಃ ।
ಹಯಾಂಶ್ಚ ಪಾತಯಾಮಾಸ ಹತ್ವಾ ತಾನ್ಸ್ವಶರೈರ್ಹರಿಃ ॥ ೨೫ ॥

ಬಾಣೋಽಪಿ ಚ ಮಹಾವೀರೋ ಜಗರ್ಜಾತಿ ಪ್ರಕುಪ್ಯ ಹ ।
ಕೃಷ್ಣಂ ಜಘಾನ ಗದಯಾ ಸೋಽಪತದ್ಧರಣೀತಲೇ ॥ ೨೬ ॥

ಉತ್ಥಾಯಾರಂ ತತಃ ಕೃಷ್ಣೋ ಯುಯುಧೇ ತೇನ ಶತ್ರುಣಾ ।
ಶಿವಭಕ್ತೇನ ದೇವರ್ಷೇ ಲೋಕಲೀಲಾನುಸಾರತಃ ॥ ೨೭ ॥

---

೨೩. ಮಹಾವೀರನೂ ವಿಷ್ಣುರೂಪಿಯೂ ಆದ ಶ್ರೀ ಕೃಷ್ಣನು ಅತಿಯಾಗಿ ಕೋಪಗೊಂಡು, ಸಿಂಹನಾದವನ್ನು ಮಾಡಿದನು.

೨೪. ಒಡನೆಯೇ ಶಂಕರನನ್ನು ಸ್ಮರಿಸುತ್ತಾ ತನ್ನ ಶಾರ್ಙ್ಗಧನುಸ್ಸಿನಿಂದ ಕ್ರೂರಬಾಣಗಳನ್ನು ಎಳೆದು ಬಾಣಾಸುರನಮೇಲೆ ಪ್ರಯೋಗಿಸಿದನು.

೨೫. ಆ ಬಾಣಗಳು ಬಾಣಾಸುರನ ಛತ್ರಿಯೇ ಮೊದಲಾದ ರಾಜಚಿಹ್ನೆಗಳನ್ನು ಕತ್ತರಿಸಿದುವು. ಕುದುರೆಗಳನ್ನು ಉರುಳಿಸಿದುವು. ಹೀಗೆ ಹರಿಯು ಎಲ್ಲವನ್ನೂ ನಾಶಗೊಳಿಸಿದನು.

೨೬. ವೀರನಾದ ಬಾಣನೂ ಸಹ ಕೋಪದಿಂದ ಗರ್ಜಿಸಿ ಶ್ರೀಕೃಷ್ಣನನ್ನು ತನ್ನ ಗದೆಯಿಂದ ಹೊಡೆದನು. ಆದರಿಂದ ಆತನು ಭೂಮಿಯಲ್ಲಿ ಬಿದ್ದನು.

೨೭. ಕೂಡಲೇ ಮೇಲೆದ್ದು ಶತ್ರುವಿನೊಡನೆ ಪುನಃ ಹೋರಾಡಿದನು ಇವೆಲ್ಲವೂ ಶಿವಭಕ್ತನಾದ ಆ ಕೃಷ್ಣನಿಗೆ ಲೀಲಾಮಾತ್ರವೇ ಹೊರತು ಮತ್ತೆ ಬೇರೆಯಲ್ಲ.

ಏವಂ ದ್ವಯೋಶ್ಚಿರಂ ಕಾಲಂ ಬಭೂವ ಸುಮಹಾನ್ರಣಃ ।
ಶಿವರೂಪೋ ಹರಿಃ ಕೃಷ್ಣಃ ಸ ಚ ಶೈವೋತ್ತಮೋ ಬಲೀ ॥ ೨೮ ॥

ಕೃಷ್ಣೋಽಥ ಕೃತ್ವಾ ಸಮರಂ ಚಿರಂ ಬಾಣೇನ ವೀರ್ಯವಾ್ ।
ಶಿವಾಽಜ್ಞಯಾ ಪ್ರಾಪ್ತಬಲಶ್ಚುಕೋಪಾತಿ ಮುನೀಶ್ವರಃ ॥ ೨೯ ॥

ತತಸ್ಸುದರ್ಶನೇನಾಶು ಕೃಷ್ಣೋ ಬಾಣಭುಜಾನ್ಬಹೂ್ ।
ಚಿಚ್ಛೇದ ಭಗವಾನ್ಶಂಭುಶಾಸನಾತ್ಪರವೀರಹಾ ॥ ೩೦ ॥

ಅವಶಿಷ್ಟಾ ಭುಜಾಸ್ತಸ್ಯ ಚತ್ವಾರೋಽತಿವ ಸುಂದರಾಃ ।
ಗತವ್ಯಥೋ ಬಭೂವಾಶು ಶಂಕರಸ್ಯ ಪ್ರಸಾದತಃ ॥ ೩೧ ॥

ಗತಸ್ಮೃತಿರ್ಯದಾ ಬಾಣಶಿರಶ್ಛೇತ್ತುಂ ಸಮುದ್ಯತಃ ।
ಕೃಷ್ಣೋ ವೀರತ್ವಮಾಪನ್ನಸ್ತದಾ ರುದ್ರಸ್ಸಮುತ್ಥಿತಃ ॥ ೩೨ ॥

---

೨೮. ಹೀಗೆ ಇವರಿಬ್ಬರಿಗೂ ಬಹುಕಾಲ ದೊಡ್ಡ ಯುದ್ಧವಾಯಿತು. ಶ್ರೀಕೃಷ್ಣನು ಸಾಕ್ಷಾತ್‌ಶಿವರೂಪನು. ಬಾಣಾಸುರನು ಶಿವಭಕ್ತಾಗ್ರಣ್ಯನು. ಶಿವ ತೇಜಸ್ಸೇ ಹೀಗೆ ಪರಸ್ಪರವಾಗಿ ಯುದ್ಧಮಾಡಿತು.

೨೯-೩೦. ಶ್ರೀಕೃಷ್ಣನು ಬಹುಕಾಲ ಬಾಣನೊಡನೆ ಹೋರಾಡಿ ಕೊನೆಗೆ ಶಿವನ ಅಪ್ಪಣೆಯಿಂದ ಬಲಿಷ್ಠನಾಗಿ, ಕೋಪದಿಂದ ಮುಂದುವರಿದು, ಕೊನೆಗೆ ತನ್ನ ಸುದರ್ಶನವೆಂಬ ಚಕ್ರದ ಸಹಾಯದಿಂದ ಬಾಣಾಸುರನ ಸಮಸ್ತ ಬಾಹುಗಳನ್ನೂ, ಪರಮೇಶ್ವರನ ಅಪ್ಪಣೆಯಂತೆ ಕತ್ತರಿಸಲು ಆರಂಭಿಸಿದನು.

೩೧. ಎಲ್ಲಾ ಭುಜಗಳೂ ಮುರಿದುಹೋದುವು. ಸುಂದರವಾದ ನಾಲ್ಕು ತೋಳುಗಳು ಮಾತ್ರ ಉಳಿದುವು. ಆದರೆ ಶಂಕರನ ಅನುಗ್ರಹದಿಂದ ಅವನಿಗೆ ಯಾವ ವಿಧವಾದ ನೋವೂ ಉಂಟಾಗಲಿಲ್ಲ.

೩೨. ಬಾಣಾಸುರನು ಎಚ್ಚೆತ್ತನು. ಒಡನೆಯೇ ಅವನ ತಲೆಯನ್ನು ಕತ್ತರಿಸಲು ಶ್ರೀಕೃಷ್ಣನು ಉದ್ಯುಕ್ತನಾದನು. ಆ ಸಮಯಕ್ಕೆ ಸರಿಯಾಗಿ ಶಂಕರನು ಎದ್ದುಬಂದು ಶ್ರೀಕೃಷ್ಣನನ್ನು ಕುರಿತು ಇಂತೆಂದನು:

॥ ರುದ್ರ ಉವಾಚ ॥

ಭಗವನ್ದೇವಕೀಪುತ್ರ ಯದಾಜ್ಞಪ್ತಂ ಮಯಾ ಪುರಾ ।
ತತ್ಕೃತಂ ಚ ತ್ವಯಾ ವಿಪ್ರ ಮದಾಜ್ಞಾಕಾರಿಣಾ ಸದಾ ॥ ೩೩ ॥

ಮಾ ಬಾಣಸ್ಯ ಶಿರಶ್ಛಿಂಧಿ ಸಂಹರ ಸ್ವಸುದರ್ಶನಂ ।
ಮದಾಜ್ಞಯಾ ಚಕ್ರಮಿದಮಮೋಘಂ ಮಜ್ಜನೇ ಸದಾ ॥ ೩೪ ॥

ದತ್ತಂ ಮಯಾ ಪುರಾ ತುಭ್ಯಮನಿವಾರ್ಯಂ ರಣೇ ತವ ।
ಚಕ್ರಂ ಜಯಂ ಚ ಗೋವಿಂದ ನಿವರ್ತಸ್ವ ರಣಾತ್ತತಃ ॥ ೩೫ ॥

ದಧೀಚೇ ರಾವಣೇ ವೀರೇ ತಾರಕಾದಿಪುರೇಷ್ವಪಿ ।
ವಿನಾ ಮದಾಜ್ಞಾಂ ಲಕ್ಷ್ಮೀಶ ರಥಾಂಗಂ ನಾಮುಚಃ ಪುರಾ ॥ ೩೬ ॥

ತ್ವಂ ತು ಯೋಗೀಶ್ವರಸ್ಸಾಕ್ಷಾತ್ಪರಮಾತ್ಮಾ ಜನಾರ್ದನ ।
ವಿಚಾರ್ಯತಾಂ ಸ್ವಮನಸಾ ಸರ್ವಭೂತಹಿತೇ ರತಃ ॥ ೩೭ ॥

---

೩೩. ಎಲೈ ಭಗವಂತನಾದ ಕೃಷ್ಣನೇ, ನಾನು ನಿನಗೆ ಹಿಂದೆ ಹೇಳಿದ್ದಂತೆ ಬಾಣಾಸುರನ ತೋಳುಗಳನ್ನು ಕತ್ತರಿಸಿ ನನ್ನ ಅಪ್ಪಣೆಯನ್ನು ನೀನು ನೆರವೇರಿಸಿರುವೆ.

೩೪. ಬಾಣನ ತಲೆಯನ್ನು ಕತ್ತರಿಸಬೇಡ. ನಿನ್ನ ಚಕ್ರವನ್ನು ಹಿಂದಕ್ಕೆ ತೆಗೆದುಕೋ. ನಿನ್ನ ಚಕ್ರವು ನನ್ನ ಭಕ್ತರಲ್ಲಿ ಕೆಲಸಮಾಡದೆ ಇರಲಿ. ಇದೇ ನನ್ನ ಅಪ್ಪಣೆಯು.

೩೫. ಎಲೈ ಕೃಷ್ಣನೇ, ಹಿಂದೆ ನಿನಗೆ ನಾನೇ ಈ ಚಕ್ರವನ್ನೂ ಯುದ್ಧದಲ್ಲಿ ಅಪೂರ್ವವಾದ ಜಯವನ್ನೂ ಅನುಗ್ರಹಿಸಿರುವೆನು. ಈಗ ನೀನು ರಣರಂಗದಿಂದ ಹಿಂದಿರುಗು.

೩೬. ದಧೀಚಿಯಲ್ಲಿಯೂ, ವೀರನಾದ ರಾವಣನಲ್ಲಿಯೂ, ತಾರಕಾಸುರರಲ್ಲಿಯೂ ನನ್ನ ಅಪ್ಪಣೆಯಿಲ್ಲದೆ ಈ ಚಕ್ರವನ್ನು ಪ್ರಯೋಗಿಸಬೇಡ.

೩೭. ನೀನು ಸಾಕ್ಷಾತ್ ಯೋಗೀಶ್ವರನು, ಪರಮಾತ್ಮನು ಮತ್ತು ಸಜ್ಜನ ರಕ್ಷಕನು. ನಿನ್ನ ಮನಸ್ಸಿನಲ್ಲಿ ಸಮಸ್ತ ಪ್ರಾಣಿಗಳ ಸುಖವನ್ನೂ ವಿಚಾರಮಾಡು.

ವರಮಸ್ಯ ಮಯಾ ದತ್ತಂ ನ ಮೃತ್ಯುರ್ಭಯಮಸ್ತಿ ವೈ ।
ತನ್ಮೇ ವಚಸ್ಸದಾ ಸತ್ಯಂ ಪರಿತುಷ್ಟೋಽಸ್ಮ್ಯಹಂ ತವ ॥ ೩೮ ॥

ಪುರಾಽಯಂ ಗರ್ವಿತೋ ಮತ್ತೋ ಯುದ್ಧಂ ದೇಹೀತಿ ಮೇಽಬ್ರವೀತ್ ।
ಭುಜಾನ್ಕಂಡೂಯಮಾನಸ್ತು ವಿಸ್ಮೃತಾತ್ಮಗತಿರ್ಹರೇ ॥ ೩೯ ॥

ತದಾಹಮಶಪಂ ತಂ ವೈ ಭುಜಚ್ಛೇತ್ತಾಗಮಿಷ್ಯತಿ ।
ಅಚಿರೇಣಾತಿಕಾಲೇನ ಗತಗರ್ವೋ ಭವಿಷ್ಯತಿ ॥ ೪೦ ॥

ಮದಾಜ್ಞಯಾ ಹರಿಃ ಪ್ರಾಪ್ತೋ ಭುಜಚ್ಛೇತ್ತಾ ತವಾಽಥ ವೈ ।
ನಿವರ್ತಸ್ವ ರಣಾದ್ಗಚ್ಛ ಸ್ವಗೃಹಂ ಸವಧೂವರಃ ॥ ೪೧ ॥

ಇತ್ಯುಕ್ತ್ವಾ ಸ ತಯೋರ್ಮೈತ್ರೀಂ ಕಾರಯಿತ್ವಾ ಮಹೇಶ್ವರಃ ।
ತದನುಜ್ಞಾಪ್ಯ ಸಗಣಃ ಸ್ವಪುತ್ರಂ ಸ್ವಾಲಯಂ ಯಯೌ ॥ ೪೨ ॥

---

೩೮. ಎಲೈ ಶ್ರೀಕೃಷ್ಣನೇ, ಇವನಿಗೆ ನಾನು ಮೃತ್ಯುವಿನ ಭಯವಿಲ್ಲದಂತೆ ವರವನ್ನು ಕೊಟ್ಟಿರುವೆನು. ನೀನು ಅದನ್ನು ನಡೆಸು. ಅದರಿಂದ ನಾನು ನಿನಗೆ ಸುಪ್ರೀತನಾಗುವೆನು.

೩೯. ಹಿಂದೆ ಒಂದುಸಾರಿ ಇವನು ಗರ್ವದಿಂದ ಮತ್ತನಾಗಿ ನನ್ನನ್ನೇ ಯುದ್ಧಕ್ಕೆ ಕರೆದನು. ಇವನು ತನ್ನ ತೋಳುತೀಟೆಯಿಂದ ತನ್ನ ಶಕ್ತಿಯನ್ನೇ ಮರೆತಿದ್ದನು.

೪೦-೪೧. ಆದ್ದರಿಂದ ನಾನು ಕೋಪಿಸಿಕೊಂಡು ನಿನ್ನ ಭುಜಗಳನ್ನು ಛೇದಿಸುವವನು ಮತ್ತೊಬ್ಬನು ಬರುವನು. ಜಾಗ್ರತೆ ನಿನ್ನ ಜಂಭವು ಮುರಿದುಹೋಗುವುದು ಎಂದು ಶಾಪವಿತ್ತೆನು ಎಂದು ಕೃಷ್ಣನಿಗೆ ಹೇಳಿ ಬಳಿಕ ಬಾಣನನ್ನು ಕುರಿತು, ಎಲೈ ಬಾಣನೇ, ನನ್ನ ಅಪ್ಪಣೆಯಿಂದಲೇ ನಿನ್ನ ಭುಜಗಳನ್ನು ಕತ್ತರಿಸಲು ಶ್ರೀಕೃಷ್ಣನು ಬಂದಿರುವನು. ಈಗ ಯುದ್ಧವನ್ನು ನಿಲ್ಲಿಸಿ ನಿನ್ನ ಪತ್ನಿಯೇ ಮೊದಲಾದ ಪರಿವಾರಗಳೊಡನೆ ಸ್ವಗೃಹಕ್ಕೆ ಹಿಂತಿರುಗು ಎಂದಪ್ಪಣೆಮಾಡಿದನು.

೪೨. ಹೀಗೆ ಮಹೇಶ್ವರನು ಶ್ರೀಕೃಷ್ಣ ಮತ್ತು ಬಾಣಾಸುರಂಗೆ ಸ್ನೇಹಮಾಡಿಸಿ ಅವರವರ ಸೈನ್ಯಸಮೇತ ಅವರವರ ಮನೆಗೆ ಅವರನ್ನು ಕಳುಹಿಸಿದನು.

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಶ್ಶಂಭೋಸ್ಸಂಹೃತ್ಯ ಚ ಸುದರ್ಶನಂ ।
ಅಕ್ಷತಾಂಗಸ್ತು ವಿಜಯೀ ತತ್ಕೃಷ್ಣೋಽಂತಃಪುರಂ ಯಯೌ ॥ ೪೩ ॥

ಅನಿರುದ್ಧಂ ಸಮಾಶ್ವಾಸ್ಯ ಸಹಿತಂ ಭಾರ್ಯಯಾ ಪುನಃ ।
ಜಗ್ರಾಹ ರತ್ನಸಂಘಾತಂ ಬಾಣದತ್ತಮನೇಕಶಃ ॥ ೪೪ ॥

ತತ್ಸಖೀಂ ಚಿತ್ರಲೇಖಾಂ ಚ ಗೃಹೀತ್ವಾ ಪರಯೋಗಿನೀಂ ।
ಪ್ರಸನ್ನೋಽಭೂತ್ತತಃ ಕೃಷ್ಣಃ ಕೃತಕಾರ್ಯಃ ಶಿವಾಜ್ಞಯಾ ॥ ೪೫ ॥

ಹೃದಾ ಪ್ರಣಮ್ಯ ಗಿರಿಶಮಾಮಂತ್ರ್ಯ ಚ ಬಲೇಸ್ಸುತಂ ।
ಪರಿವಾರಸಮೇತಸ್ತು ಜಗಾಮ ಸ್ವಪುರೀಂ ಹರಿಃ ॥ ೪೬ ॥

ಪಥಿ ಜಿತ್ವಾ ಚ ವರುಣಂ ವಿರುದ್ಧಂ ತಮನೇಕಧಾ ।
ದ್ವಾರಕಾಂ ಚ ಪುರೀಂ ಪ್ರಾಪ್ತಸ್ಸಮುತ್ಸವಸಮನ್ವಿತಃ ॥ ೪೭ ॥

---

೪೩. ಈ ಪರಮೇಶ್ವರನ ಮಾತುಗಳನ್ನು ಕೇಳಿ ಕೃಷ್ಣನು ತನ್ನ ಚಕ್ರವನ್ನು ಉಪಸಂಹರಿಸಿ ಯುದ್ಧವಲ್ಲಿ ಜಯಶೀಲನಾಗಿ ಅಂತಃಪುರಕ್ಕೆ ಹೋದನು.

೪೪–೪೫. ಅನಿರುದ್ಧನನ್ನೂ ಅವನ ಪತ್ನಿಯನ್ನೂ' ಸಮಾಧಾನಪಡಿಸಿದನು. ಅಲ್ಲದೆ ಬಾಣಾಸುರನು ತನ್ನ ಮಗಳಿಗೆ ದಿವ್ಯರತ್ನಗಳನ್ನೆಲ್ಲಾ ಬಳುವಳಿಯಾಗಿ ಕೊಟ್ಟನು. ಅವೆಲ್ಲವನ್ನೂ, ಊಷಾದೇವಿಯ ಸಖಿಯಾದ ಚಿತ್ರಲೇಖೆಯನ್ನೂ ಅನಿರುದ್ಧನು ಸ್ವೀಕರಿಸಿದನು. ಇಷ್ಟು ಕಾರ್ಯಗಳೂ ಶಿವನ ಇಚ್ಛೆಯಿಂದ ನಡೆಯಿತು. ಇದರಿಂದ ಕೃಷ್ಣನಿಗೆ ತುಂಬಾ ಸಂತೋಷವಾಯಿತು.

೪೬. ಬಳಿಕ ಶ್ರೀಕೃಷ್ಣನು ಪರಮೇಶ್ವರನಿಗೆ ವಂದಿಸಿದನು. ಬಾಣಾಸುರನನ್ನು ಬೀಳ್ಕೊಂಡು ಪರಿವಾರಸಮೇತನಾಗಿ ತನ್ನ ಪಟ್ಟಣಕ್ಕೆ ಹಿಂದಿರುಗಿದನು.

೪೭. ಹಾಗೆಯೇ ದಾರಿಯಲ್ಲಿ ತನಗೆ ನಾನಾರೀತಿಯಲ್ಲಿ ವಿರೋಧಿಯಾಗಿದ್ದ ವರುಣನನ್ನು ಗೆದ್ದು ಉತ್ಸವಪುರಸ್ಸರವಾಗಿ ತನ್ನ ಪಟ್ಟಣವಾದ ದ್ವಾರಕಾನಗರವನ್ನು ಸೇರಿದನು.

ವಿಸರ್ಜಯಿತ್ವಾ ಗರುಡಂ ಸಖೀನ್ವೀಕ್ಷ್ಯೋಪಹಸ್ಯ ಚ ।
ದ್ವಾರಕಾಯಾಂ ತತೋ ದೃಷ್ಟ್ವಾ ಕಾಮಚಾರೀ ಚಚಾರ ಹ　　॥ ೪೮ ॥

ಇತಿ ಶ್ರೀ ಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೋ ಯುದ್ಧಖಂಡೇ ಬಾಣಭುಜಕೃಂತನಗರ್ವಾಪಹಾರ
ವರ್ಣನಂ ನಾಮ ಪಂಚಪಂಚಾಶತ್ತಮೋಽಧ್ಯಾಯಃ

---

೪೮. ಗರುಡನನ್ನೂ ತನ್ನ ಸ್ನೇಹಿತರನ್ನೂ ಶ್ರೀಕೃಷ್ಣನು ಸಂತೋಷದಿಂದ ಕಳುಹಿಸಿಕೊಟ್ಟನು. ಯುದ್ಧಕಾರ್ಯಗಳನ್ನೆಲ್ಲಾ ನಿಲ್ಲಿಸಿ ಶ್ರೀಕೃಷ್ಣನು ಸಂತೋಷದಿಂದ ದ್ವಾರಕಾನಗರಿಯಲ್ಲಿಯೇ ವಾಸಮಾಡುತ್ತಿದ್ದನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಬಾಣಾಸುರನ ಭುಜಚ್ಛೇದನ ಮತ್ತು ಅವನ ಗರ್ವನಿವಾರಣ ಎಂಬ
ಕಥೆಯನ್ನೊಳಗೊಂಡ ಐವತ್ತೈದನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮಹಾಪುರಾಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಷಟ್ಪಂಚಾಶತ್ತಮೋಽಧ್ಯಾಯಃ

॥ ನಾರದ ಉವಾಚ ॥

ಕೃಷ್ಣೇ ಗತೇ ದ್ವಾರಕಾಯಾಮನಿರುದ್ಧೇನ ಭಾರ್ಯಯಾ ।
ಅಕಾರ್ಷೀತ್ಕಿಂ ತತೋ ಬಾಣಸ್ತತ್ತ್ವಂ ವದ ಮಹಾಮುನೇ ॥ ೧ ॥

॥ ಸನತ್ಕುಮಾರ ಉವಾಚ ॥

ಕೃಷ್ಣೇ ಗತೇ ದ್ವಾರಕಾಯಾಮನಿರುದ್ಧೇನ ಭಾರ್ಯಯಾ ।
ದುಃಖಿತೋಽಭೂತ್ತತೋ ಬಾಣಸ್ಸ್ವಜ್ಞಾನಂ ಸಂಸ್ಮರನ್ಸ್ಫದಾ ॥ ೨ ॥

---

### ಐವತ್ತಾರನೆಯ ಅಧ್ಯಾಯವು.

೧. ನಾರದನು, ಬ್ರಹ್ಮನನ್ನು ಕುರಿತು, ಓ ಮಹಾಪ್ರಾಜ್ಞನೇ, ಅತ್ತಲಾಗಿ ಕೃಷ್ಣನು ಪ್ರಯಾಣಮಾಡಿದ ಮೇಲೆ ಬಾಣಾಸುರನು ಮುಂದೇನು ಮಾಡಿದನು ? ಅದನ್ನು ತಿಳಿಸು ಎಂದನು.

೨. ಸನತ್ಕುಮಾರನಿಂತೆಂದನು :—ಶ್ರೀಕೃಷ್ಣನು ದ್ವಾರಕಿಗೆ ತೆರಳಲು, ಅನಿರುದ್ಧನು ತನ್ನ ಹೆಂಡತಿಯೊಡನೆ ಸುಖವಾಗಿ ಅಲ್ಲಿಯೇ ಇದ್ದನು. ಇದನ್ನು ಕಂಡು ಬಾಣಾಸುರನು ತನ್ನ ಅಜ್ಞಾನವನ್ನು ಮನಸ್ಸಿನಲ್ಲಿ ಯೋಚಿಸುತ್ತಾ ಬಹಳ ದುಃಖಿನಾದನು.

ತತೋ ನಂದೀ ಶಿವಗಣೋ ಬಾಣಂ ಪ್ರೋವಾಚ ದುಃಖಿತಂ ।
ದೈತ್ಯಂ ಶೋಣಿತದಿಗ್ಧಾಂಗಮನುತಾಪಸಮನ್ವಿತಂ ॥ ೩ ॥

॥ ನಂದೀಶ್ವರ ಉವಾಚ ॥

ಬಾಣ ಶಂಕರಸದ್ಭಕ್ತ ಮಾನುಪಾತಂ ಕುರುಷ್ವ ಭೋಃ ।
ಭಕ್ತಾನುಕಂಪೀ ಶಂಭುರ್ವೈ ಭಕ್ತವತ್ಸಲನಾಮಧೃಕ್ ॥ ೪ ॥

ತದಿಚ್ಛಯಾ ಚ ಯಜ್ಜಾತಂ ತಜ್ಜಾತಮಿತಿ ಚೇತಸಾ ।
ಮನ್ಯಸ್ವ ಭಕ್ತಶಾರ್ದೂಲ ಶಿವಂ ಸ್ಮರ ಪುನಃ ಪುನಃ ॥ ೫ ॥

ಮನ ಆದ್ಯೇ ಸಮಾಧಾಯ ಕುರು ನಿತ್ಯಂ ಮಹೋತ್ಸವಂ ।
ಭಕ್ತಾನುಕಂಪನಶ್ಚಾಸ್ಯ ಶಂಕರಸ್ಯ ಪುನಃ ಪುನಃ ॥ ೬ ॥

ನಂದಿವಾಕ್ಯಾತ್ತತೋ ಬಾಣೋ ದ್ವಿಷಾ ಶೀರ್ಷಕಮಾತ್ರಕಃ ।
ಶಿವಸ್ಥಾನಂ ಜಗಾಮಾಶು ಧೃತ್ವಾ ಧೈರ್ಯಂ ಮಹಾಮನಾಃ ॥ ೭ ॥

---

೩-೪. ಶಿವಗಣನಾದ ನಂದಿಯು, ರಕ್ತಮಯವಾದ ದೇಹದಿಂದ ದುಃಖ ಪಡುತ್ತಿರುವ ಬಾಣಾಸುರನನ್ನು ನೋಡಿ ಕನಿಕರದಿಂದ ಅವನನ್ನು ಕುರಿತು ಎಲೈ ಬಾಣಾಸುರನೇ ದುಃಖಿಸಬೇಡ. ಭಕ್ತರನ್ನು ರಕ್ಷಿಸಲು ಸಿದ್ಧನಾಗಿ ಶಂಕರನು ಇಲ್ಲಿರುವನು. ಹೆದರಬೇಡ.

೫. ನಿನಗೆ ಉಂಟಾಗಿರುವ ಎಲ್ಲ ಸುಖದುಃಖಗಳೂ ಆ ಶಿವನ ಇಚ್ಛೆಯಿಂದಲೇ ಆಗಿದೆಯೆಂಬುದನ್ನು ತಿಳಿ. ಓ ಭಕ್ತಶ್ರೇಷ್ಠನೇ, ಅದಕ್ಕಾಗಿ ಪದೇಪದೇ ಶಂಕರನನ್ನು ಸ್ಮರಿಸು.

೬. ನಿನ್ನ ಮನಸ್ಸನ್ನು ಮೊದಲು ಸಮಾಧಾನಪಡಿಸಿಕೋ. ಅನಂತರ ಭಕ್ತರನ್ನುದ್ಧರಿಸುವ ಪರಶಿವನನ್ನು ಯಾವಾಗಲೂ ಪೂಜಿಸುತ್ತಿರು ಎಂದು ಸಮಾಧಾನ ಮಾಡಿದನು.

೭. ನಂದಿಯು ಹೀಗೆ ಹೇಳಲು ಬಾಣಾಸುರನು ಶಿವನಿರುವ ಸ್ಥಳಕ್ಕೆ ಧೈರ್ಯದಿಂದ ಪ್ರವೇಶಿಸಿದನು. ಆಗ ಅವನ ದೇಹದಲ್ಲಿ ತಲೆಯು ಮಾತ್ರ ಉಳಿದಿದ್ದಿತು.

ಗತ್ವಾ ತತ್ರ ಪ್ರಭುಂ ನತ್ವಾ ರುರೋದಾತೀವ ವಿಹ್ವಲಃ ।
ಗತಗರ್ವವ್ರಜೋ ಬಾಣಃ ಪ್ರೇಮಾಕುಲಿತಮಾನಸಃ ॥ ೮ ॥

ಸಂಸ್ತುವನ್ವಿವಿಧೈಃ ಸ್ತೋತ್ರೈಸ್ಸಂನಮನ್ನುತಿತಸ್ತಥಾ ।
ಯಥೋಚಿತಂ ಪಾದಘಾತಂ ಕುರ್ವನ್ವಿಕ್ಷೇಪಯನ್ಕರಾನ್ ॥ ೯ ॥

ನನರ್ತ ತಾಂಡವಂ ಮುಖ್ಯಂ ಪ್ರತ್ಯಾಲೀಢಾದಿಶೋಭಿತಂ ।
ಸ್ಥಾನಕೈರ್ವಿವಿಧಾಕಾರೈರಾಲೀಢಪ್ರಮುಖೈರಪಿ ॥ ೧೦ ॥

ಮುಖವಾದಸಹಸ್ರಾಣಿ ಭ್ರೂಕ್ಷೇಪಸಹಿತಾನ್ಯಪಿ ।
ಶಿರಃಕಂಪಸಹಸ್ರಾಣಿ ಪ್ರಾಸ್ತಾನೀಕಃ ಸಹಸ್ರಶಃ ! ೧೧ ॥

ವಾರೀಶ್ಚ ವಿವಿಧಾಕಾರಾ ದರ್ಶಯಿತ್ವಾ ಶನೈಶ್ಶನೈಃ ।
ತಥಾ ಶೋಣಿತಧಾರಾಭಿಸ್ಸಿಂಚಯಿತ್ವಾ ಮಹೀತಲಂ ॥ ೧೨ ॥

---

೮. ಅಲ್ಲಿ ಶಂಕರನನ್ನು ಕಂಡು ಪ್ರಣಾಮಮಾಡಿ ಬಹಳವಾಗಿ ರೋದನ ಮಾಡಿದನು. ಬಾಣಾಸುರನ ಗರ್ವವೆಲ್ಲವೂ ಮುರಿದುಹೋಗಿ ಅವನ ಮನಸ್ಸು ಪ್ರೇಮದಿಂದ ಕೂಡಿತು.

೯. ನಾನಾವಿಧವಾಗಿ ಶಿವನನ್ನು ಸ್ತುತಿಸಿದನು. ನಾನಾರೀತಿಯಾಗಿ ಹೊಗಳಿದನು. ಪಾದವಿಕ್ಷೇಪಾದಿಗಳಿಂದ ಅಭಿನಯಪುರಸ್ಸರವಾಗಿ ಭಕ್ತಿಯಿಂದ ಶಂಕರನ ಎದುರಿಗೆ ನರ್ತನಮಾಡಿದರು.

೧೦. ಆಲೀಢ ಮತ್ತು ಪ್ರತ್ಯಾಲೀಢವೆಂಬ ನಾಟ್ಯಶಾಸ್ತ್ರದ ಕ್ರಮವನ್ನು ಅನುಸರಿಸಿ, ವಿವಿಧವಾದ ಆಕಾರಗಳಿಂದ ಶಂಕರನ ತೃಪ್ತಿಗಾಗಿ ನಾಟ್ಯಮಾಡಿದನು.

೧೧. ನಾನಾವಿಧವಾದ ಮುಖವಿಕಾರಗಳಿಂದಲೂ, ಹುಬ್ಬುಗಳ ಪರಿಭ್ರಮಣದಿಂದಲೂ ಶಿರಃಕಂಪನದಿಂದಲೂ ಕೂಡಿ, ಆ ಬಾಣಾಸುರನ ನಾಟ್ಯವು ಬಹು ಸುಂದರವಾಗಿತ್ತು.

೧೨. ನಾನಾ ಆಕಾರಗಳಿಂದ ನೀರನ್ನು ಎರಚುತ್ತಾ, ನಾನಾರೀತಿಯಿಂದ ರಕ್ತವನ್ನು ನೆಲಕ್ಕೆ ಚಿಮುಕಿಸುತ್ತಾ ಪರಮೇಶ್ವರನನ್ನು ತೃಪ್ತಿಗೊಳಿಸಿದನು.

ರುದ್ರಂ ಪ್ರಸಾದಯಾಮಾಸ ಶೂಲಿನಂ ಚಂದ್ರಶೇಖರಂ ।
ಬಾಣಾಸುರೋ ಮಹಾಭಕ್ತೋ ವಿಸ್ಮೃತಾತ್ಮಗತಿರ್ನತಃ ॥ ೧೩ ॥

ತತೋ ನೃತ್ಯಂ ಮಹತ್ಕೃತ್ವಾ ಭಗವಾನ್ಭಕ್ತವತ್ಸಲಃ ।
ಉವಾಚ ಬಾಣಂ ಸಂಹೃಷ್ಟೋ ನೃತ್ಯಗೀತಪ್ರಿಯೋ ಹರಃ ॥ ೧೪ ॥

॥ ರುದ್ರ ಉವಾಚ ॥

ಬಾಣ ತಾತ ಬಲೇಃ ಪುತ್ರ ಸಂತುಷ್ಟೋ ನರ್ತನೇನ ತೇ ।
ವರಂ ಗೃಹಾಣ ದೈತ್ಯೇಂದ್ರ ಯತ್ತೇ ಮನಸಿ ವರ್ತತೇ ॥ ೧೫ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಶ್ಶಂಭೋರ್ದೈತ್ಯೇಂದ್ರೇಣ ತದಾ ಮುನೇ ।
ಬಾಣೇನ ಸಂವೃಣೀತೋಽಭೂದ್ವರೈಸ್ತು ವ್ರಣರೋಪಣೇ ॥ ೧೬ ॥

ಬಾಹುಯುದ್ಧಸ್ಯ ಚೋದ್ಧತ್ತಿರ್ಗಾಣಪತ್ಯಮಥಾಕ್ಷಯಂ ।
ಉಷಾಪುತ್ರಸ್ಯ ರಾಜ್ಯಂ ತು ತಸ್ಮಿ೯ ಶೋಣಿತಕಾಹ್ವಯೇ ॥ ೧೭ ॥

---

೧೩. ಮಹಾಶಿವಭಕ್ತನಾದ ಬಾಣನು ಹೀಗೆ ಚಂದ್ರಶೇಖರನಾದ ಪರಶಿವನನ್ನು ತುಷ್ಟಿಪಡಿಸಿ ತನ್ನ ಹೃದಯಸದ್ಭಾವನೆಯಿಂದ ನಮಸ್ಕರಿಸಿದನು.

೧೪-೧೫. ಭಕ್ತವತ್ಸಲನೂ ನೃತ್ಯಗೀತಪ್ರಿಯನೂ ಆದ ಶ್ರೀಶಂಕರನು ಬಾಣನ ನಾಟ್ಯದಿಂದ ಸಂತುಷ್ಟನಾಗಿ, ಅವನನ್ನು ಕುರಿತು, ಎಲೈ ಬಲಿಪುತ್ರನೇ, ನಿನ್ನ ನರ್ತನಕ್ಕೆ ನಾನು ಸಂತುಷ್ಟನಾಗಿದ್ದೇನೆ. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳು, ಕೊಡುವೆನು ಎಂದನು.

೧೬. ಹೀಗೆ ಪರಮೇಶ್ವರನ ಅಪ್ಪಣೆಯಂತೆ ಬಾಣಾಸುರನು ತಾನು ಕೇಳ ಬೇಕಾದ ವರಗಳನ್ನೆಲ್ಲಾ ಒಂದೊಂದಾಗಿ ಕೇಳಲಾರಂಭಿಸಿದನು.

೧೭. ಬಾಹುಯುದ್ಧದಲ್ಲಿ ಹೆಚ್ಚು ನಿಪುಣತೆಯನ್ನೂ, ಅಕ್ಷಯವಾದ ಗಾಣಾ ಪತ್ಯ ಪದವಿಯನ್ನೂ, ಮುಂದೆ ಶೋಣಿತಪುರದ ಅಧಿಕಾರವು ಊಷಾಪುತ್ರನಿಗೆ ಸಿಕ್ಕು ವಂತೆಯೂ ವರವನ್ನು ಕೇಳಿದನು.

ನಿರ್ವೈರತಾ ಚ ವಿಬುಧೈರ್ವಿಷ್ಣುನಾ ಚ ವಿಶೇಷತಃ ।
ನ ಪುನರ್ದೈತ್ಯತಾ ದುಷ್ಟಾ ರಜಸಾ ತಮಸಾ ಯುತಾ ॥ ೧೮ ॥

ಶಂಭುಭಕ್ತಿರ್ವಿಶೇಷೇಣ ನಿರ್ವಿಕಾರಾ ಸದಾ ಮುನೇ ।
ಶಿವಭಕ್ತೇಷು ಚ ಸ್ನೇಹೋ ದಯಾ ಸರ್ವೇಷು ಜಂತುಷು ॥ ೧೯ ॥

ಇತಿ ಕೃತ್ವಾ ವರಾನ್ ಶಂಭೋರ್ಬಲಿಪುತ್ರೋ ಮಹಾಸುರಃ ।
ಪ್ರೇಮ್ಣಾಶ್ರುನಯನೋ ರುದ್ರಂ ತುಷ್ಟಾವ ಸುಕೃತಾಂಜಲಿಃ ॥ ೨೦ ॥

॥ ಬಾಣ ಉವಾಚ ॥

ದೇವದೇವ ಮಹಾದೇವ ಶರಣಾಗತವತ್ಸಲ ।
ತ್ವಾಂ ನಮಾಮಿ ಮಹೇಶಾನ ದೀನಬಂಧೋ ದಯಾನಿಧೇ ॥ ೨೧ ॥

ಕೃತ್ವಾ ಮಯಿ ಕೃಪಾತೀವ ಕೃಪಾಸಾಗರ ಶಂಕರ ।
ಗರ್ವೋಪಹಾರಿತಸ್ಸರ್ವಃ ಪ್ರಸನ್ನೇನ ಮಮ ಪ್ರಭೋ ॥ ೨೨ ॥

---

೧೮. ದೇವತೆಗಳೊಡನೆಯೂ ವಿಷ್ಣುವಿನೊಡನೆಯೂ ತನಗೆ ಯಾವಾಗಲೂ ದ್ವೇಷಬೇಡವೆಂದೂ, ಪುನಃ ರಜೋಗುಣ ತಮೋಗುಣಗಳಿಂದ ಕೂಡಿದ ಈ ದೈತ್ಯ ಜನ್ಮವು ಮತ್ತೆ ಬೇಡವೆಂದೂ ಯಾಚಿಸಿದನು.

೧೯. ವಿಶೇಷವಾದ ಶಿವಭಕ್ತಿಯನ್ನೂ, ಎಂತಹ ಸ್ಥಿತಿಯಲ್ಲಿಯೂ ವಿಕಾರವಿಲ್ಲದಿರುವಿಕೆಯನ್ನೂ, ಶಿವಭಕ್ತರಲ್ಲಿ ಅತುಲವಾದ ಸ್ನೇಹವನ್ನೂ, ಎಲ್ಲ ಪ್ರಾಣಿಗಳಲ್ಲಿಯೂ ದಯಾಸ್ವಭಾವವನ್ನೂ ಬೇಡಿಕೊಂಡನು.

೨೦. ಹೀಗೆ ವರಗಳನ್ನು ಕೇಳಿಕೊಂಡು ಬಾಣಾಸುರನು ಪ್ರೀತಿಯಿಂದ ಆನಂದಬಾಷ್ಪವನ್ನು ಸುರಿಸುತ್ತಾ ಪರಮೇಶ್ವರನನ್ನು ಸ್ತೋತ್ರಮಾಡಿದನು.

೨೧. ಎಲೈ ದೇವದೇವನೇ ನೀನು ಶರಣಾಗತವತ್ಸಲನು, ದೀನಬಂಧುವು, ದಯಾನಿಧಿಯು, ನಿನ್ನನ್ನು ಈಗ ವಂದಿಸುವೆನು.

೨೨. ಎಲೈ ದಯಾಸಾಗರನಾದ ಶಂಕರನೇ, ನೀನು ನನ್ನಲ್ಲಿ ಬಹಳವಾಗಿ ಕ್ರೋಧವನ್ನು ತೋರಿಸಿದೆ. ನನ್ನ ಗರ್ವವನ್ನೆಲ್ಲಾ ಪರಿಹಾರಮಾಡಿರುವೆ.

ತ್ವಂ ಬ್ರಹ್ಮ ಪರಮಾತ್ಮಾ ಹಿ ಸರ್ವವ್ಯಾಪ್ಯಖಿಲೇಶ್ವರಃ ।
ಬ್ರಹ್ಮಾಂಡತನುರುಗ್ರೇಶೋ ವಿರಾಟ್ಸರ್ವಾನ್ವಿತಃ ಪರಃ ॥ ೨೩ ॥

ನಾಭಿರ್ನಭೋಽಗ್ನಿರ್ವದನಮಂಬುರೇತೋ ದಿಶಃ ಶ್ರುತಿಃ ।
ದ್ಯೌಶ್ಶೀರ್ಷಮಂಘ್ರಿರುರ್ವೀ ತೇ ಮನಶ್ಚಂದ್ರಸ್ತವ ಪ್ರಭೋ ॥ ೨೪ ॥

ದೃಗರ್ಕೋ ಜಠರಂ ವಾರ್ಧಿರ್ಭುಜೇಂದ್ರೋ ಧಿಷಣಾ ವಿಧಿಃ ।
ಪ್ರಜಾಪತಿರ್ವಿಸರ್ಗಶ್ಚ ಧರ್ಮೋ ಹಿ ಹೃದಯಂ ತವ ॥ ೨೫ ॥

ರೋಮಾಣ್ಯೌಷಧಯೋ ನಾಥ ಕೇಶಾ ಜಲಮುಚಸ್ತವ ।
ಗುಣಸ್ತ್ರಯಸ್ತ್ರಿಣೇತ್ರಾಣಿ ಸರ್ವಾತ್ಮಾ ಪುರುಷೋ ಭವಾನ್ ॥ ೨೬ ॥

ಬ್ರಾಹ್ಮಣಂ ತೇ ಮುಖಂ ಪ್ರಾಹುರ್ಬಾಹುಂ ಕ್ಷತ್ರಿಯಮೇವ ಚ ।
ಊರುಜಂ ವೈಶ್ಯಮಾಹುಸ್ತೇ ಪಾದಜಂ ಶೂದ್ರಮೇವ ಚ ॥ ೨೭ ॥

---

೨೩. ಎಲೈ ಶಂಕರನೇ, ನೀನೇ ಬ್ರಹ್ಮನು, ನೀನೇ ಪರಮಾತ್ಮನು, ಸರ್ವವ್ಯಾಪಿಯೂ, ಅಖಿಲೇಶ್ವರನೂ ನೀನೇ ಆಗಿರುವೆ. ಬ್ರಹ್ಮಾಂಡವನ್ನೇ ದೇಹವನ್ನಾಗಿ ಮಾಡಿಕೊಂಡು ವಿರಾಟ್‌ಸ್ವರೂಪದಿಂದ ಎಲ್ಲೆಲ್ಲೂ ಅಡಗಿರುವೆ.

೨೪. ನಿನ್ನ ನಾಭಿಯೇ ಆಕಾಶವು, ಅಗ್ನಿಯೇ ಮುಖವು, ರೇತಸ್ಸೇ ಜಲ, ಕಿವಿಯೇ ದಿಕ್ಕುಗಳು. ಅಂತರಿಕ್ಷವೇ ನಿನ್ನ ತಲೆ. ನಿನ್ನ ಪಾದವೇ ಭೂಮಿ. ಚಂದ್ರನೇ ನಿನ್ನ ಮನಸ್ಸು.

೨೫. ಸೂರ್ಯನೇ ನಿನ್ನ ಕಣ್ಣುಗಳು. ಸಮುದ್ರವೇ ನಿನ್ನ ಜಠರ. ಇಂದ್ರನೇ ನಿನ್ನ ಭುಜ. ಬ್ರಹ್ಮನೇ ಬುದ್ಧಿಯು. ಪ್ರಜಾಪತಿಯೇ ನಿನ್ನ ಸಂಧಿಪ್ರದೇಶಗಳು. ಧರ್ಮವೇ ನಿನ್ನ ಹೃದಯ.

೨೬. ಸಮಸ್ತ ಔಷಧಿಗಳೇ ನಿನ್ನ ರೋಮಗಳು. ಮೇಘಗಳೆಲ್ಲವೂ ನಿನ್ನ ಕೂದಲುಗಳು. ಸತ್ತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳೇ ನಿನ್ನ ಮೂರು ಕಣ್ಣುಗಳು. ಸರ್ವಪ್ರಾಣಿಗಳಲ್ಲಿಯೂ ಆತ್ಮಸ್ವರೂಪದಿಂದ ನೀನು ಅಂತರ್ಯಾಮಿಯಾಗಿ ವಾಸಿಸುವೆ.

೨೭. ನಿನ್ನ ಮುಖದಿಂದ ಬ್ರಾಹ್ಮಣರೂ, ತೋಳಿನಿಂದ ಕ್ಷತ್ರಿಯರೂ, ತೊಡೆಯಿಂದ ವೈಶ್ಯರೂ, ಕಾಲಿನಿಂದ ಶೂದ್ರರೂ ಜನಿಸಿರುವರು.

ತ್ವಮೇವ ಸರ್ವದೋಪಾಸ್ಯಸ್ಸರ್ವೈರ್ಜೀವೈರ್ಮಹೇಶ್ವರ ।
ತ್ವಾಂ ಭಜನ್ಪರಮಾಂ ಮುಕ್ತಿಂ ಲಭತೇ ಪುರುಷೋ ಧ್ರುವಂ ॥ ೨೮ ॥

ಯಸ್ತ್ವಾಂ ವಿಸೃಜತೇ ಮರ್ತ್ಯ ಆತ್ಮಾನಂ ಪ್ರಿಯಮೀಶ್ವರಂ ।
ವಿಪರ್ಯಯೇಂದ್ರಿಯಾರ್ಥಾರ್ಥಂ ವಿಷಮತ್ತ್ಯಮೃತಂ ತ್ಯಜನ್ ॥ ೨೯ ॥

ವಿಷ್ಣುರ್ಬ್ರಹ್ಮಾಥ ವಿಬುಧಾ ಮುನಯಶ್ಚಾಮಲಾಶಯಾಃ ।
ಸರ್ವಾತ್ಮನಾ ಪ್ರಪನ್ನಸ್ತ್ವಾಂ ಶಂಕರಂ ಪ್ರಿಯಮೀಶ್ವರಂ ॥ ೩೦ ॥

॥ ಸನತ್ಕುಮಾರ ಉವಾಚ ॥

ಇತ್ಯುಕ್ತ್ವಾ ಬಲಿಪುತ್ರಸ್ತು ವಿರರಾಮ ಶರಾಸುರಃ ।
ಪ್ರೇಮಪ್ರಫುಲ್ಲಿತಾಂಗಶ್ಚ ಪ್ರಣಮ್ಯ ಸ ಮಹೇಶ್ವರಂ ॥ ೩೧ ॥

ಇತಿ ಶ್ರುತ್ವಾ ಸ್ವಭಕ್ತಸ್ಯ ಬಾಣಸ್ಯ ಭಗವಾನ್ಭವಃ ।
ಸರ್ವಂ ಲಭಿಷ್ಯಸೀತ್ಯುಕ್ತ್ವಾ ತತ್ರೈವಾಂತರಧೀಯತ ॥ ೩೨ ॥

---

೨೮. ಸಮಸ್ತ ಪ್ರಾಣಿಗಳೂ ನಿನ್ನನ್ನು ಯಾವಾಗಲೂ ಸೇವಿಸುವರು. ನಿನ್ನನ್ನು ಭಜಿಸಿದ ಪುರುಷನು ನಿಜವಾಗಿಯೂ ಶಾಶ್ವತವಾದ ಮುಕ್ತಿಯನ್ನು ಪಡೆಯುವನು.

೨೯. ಸರ್ವಾತ್ಮಸ್ವರೂಪನಾದ ನಿನ್ನನ್ನು ಬಿಟ್ಟು ಯಾವನು ಅನ್ಯದೇವತೆಯನ್ನು ಭಜಿಸುವನೋ, ಅವನು ದೇಹರಕ್ಷಣೆಗೆ ಅಮೃತವನ್ನು ಬಿಟ್ಟು ವಿಷವನ್ನು ಸೇವಿಸಿದಂತೆ ನಾಶವಾಗುವನು.

೩೦. ವಿಷ್ಣುವೂ, ಬ್ರಹ್ಮನೂ, ಇನ್ನೂ ಅನೇಕ ಋಷಿಗಳೂ, ಸಹ ಪರಬ್ರಹ್ಮಸ್ವರೂಪನೂ, ಲೋಕೇಶ್ವರನೂ ಆದ ನಿನ್ನನ್ನೇ ಪ್ರಸನ್ನರಾಗಿ ಸೇವಿಸುತ್ತಿರುವರು ಎಂದು ವಿಧವಿಧವಾಗಿ ಸ್ತೋತ್ರಮಾಡಿದನು.

೩೧. ಪ್ರೀತ್ಯತಿಶಯದಿಂದ ದೇಹವು ಪುಲಕಿತವಾಗಿರಲು, ಬಲಿಪುತ್ರನಾದ ಬಾಣಾಸುರನು ಮಹೇಶ್ವರನನ್ನು ಭಕ್ತಿಯಿಂದ ನಮಸ್ಕರಿಸಿ ಸುಮ್ಮನೆ ನಿಂತಿದ್ದನು.

೩೨. ತನ್ನ ಭಕ್ತಶ್ರೇಷ್ಠನಾದ ಬಾಣನ ಮಾತುಗಳನ್ನು ಭಗವಂತನಾದ ಶಂಕರನು ಕೇಳಿ ನಿನ್ನ ಕೋರಿಕೆಗಳೆಲ್ಲವೂ ನೆರವೇರಲಿ ಎಂದು ವರವಿತ್ತು ಅಂತರ್ಧಾನನಾದನು.

ತತಶ್ಶಂಭೋಃ ಪ್ರಸಾದೇನ ಮಹಾಕಾಲತ್ವಮಾಗತಃ ।
ರುದ್ರಸ್ಯಾನುಚರೋ ಬಾಣೋ ಮಹಾಪ್ರಮುದಿತೋಽಭವತ್ ॥ ೩೩ ॥

ಇತಿ ಕಿಲ ಶರನಾಮ್ನಾ ಶಂಕರಸ್ಯಾಪಿ ವೃತ್ತಂ
ಸಕಲಗುರುಜನಾನಾಂ ಸದ್ಗುರೋಶ್ಶೂಲಪಾಣೇಃ ।
ಕಥಿತಮಿಹ ವರಿಷ್ಠಂ ಶ್ರೋತ್ರರಮ್ಯೈರ್ವಚೋಭಿ-
ಸ್ಸಕಲಭುವನಮಧ್ಯೇ ಕ್ರೀಡಮಾನಸ್ಯ ನಿತ್ಯಂ ॥ ೩೪ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಬಾಣಾಸುರಗಣಪತ್ವಪ್ರಾಪ್ತಿವರ್ಣನಂ
ನಾಮ ಷಟ್ಪಂಚಾಶತ್ತಮೋಽಧ್ಯಾಯಃ

---

೩೩. ಅನಂತರ ಶಂಕರನ ಅನುಗ್ರಹದಿಂದ ಭಕ್ತಾಗ್ರೇಸರನಾದ ಬಾಣಾಸುರನು ಮಹಾಕಾಲಪದವಿಯನ್ನು ಹೊಂದಿ ಸುಖದಿಂದ್ದನು.

೩೪. ಶಂಕರನ ಪರಮಭಕ್ತನಾದ ಬಾಣಾಸುರನ ವೃತ್ತಾಂತವನ್ನೂ, ಸಕಲ ಜನರಿಗೂ ಗುರುವಾದ ಶಂಕರನು ಅವನನ್ನನುಗ್ರಹಿಸಿದ ವಿವರವನ್ನೂ ಹೇಳಿರುವೆನು. ಈ ಉಪಾಖ್ಯಾನವು ರಮ್ಯವಾಗಿಯೂ, ಶ್ರಾವ್ಯವಾಗಿಯೂ ಇರುವುದು. ಈರೀತಿ ಆ ಪರಶಿವನು ಸಮಸ್ತ ಪ್ರಪಂಚಗಳಲ್ಲಿಯೂ ತನ್ನ ಅದ್ಭುತವಾದ ಲೀಲೆಗಳನ್ನು ಭಕ್ತಾನುಗ್ರಹಕ್ಕಾಗಿ ಪ್ರಕಟಮಾಡುತ್ತಿರುವನು.

ಇಲ್ಲಿಗೆ ಶ್ರೀಶಿವಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ ಬಾಣಾಸುರನಿಗೆ
ಗಣಾಪತ್ಯವು ದೊರೆತ ಕಥಾವರ್ಣನವೆಂಬ ಐವತ್ತಾರನೆಯ ಅಧ್ಯಾಯವು
ಮುಗಿದುದು.

---

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅ ಥ ಶ್ರೀ ಶಿ ವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಸಪ್ತಪಂಚಾಶತ್ತಮೋಽಧ್ಯಾಯಃ

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಮಹಾಪ್ರೇಮ್ಣಾ ಚರಿತಂ ಶಶಿಮೌಲಿನಃ ।
ಯಥಾವಧೀತ್ತ್ರಿಶೂಲೇನ ದಾನವೇಂದ್ರಂ ಗಜಾಸುರಂ ॥ ೧ ॥

ದಾನವೇ ನಿಹತೇ ದೇವ್ಯಾ ಸಮರೇ ಮಹಿಷಾಸುರೇ ।
ದೇವಾನಾಂ ಚ ಹಿತಾರ್ಥಾಯ ಪುರಾ ದೇವಾ ಸುಖಂ ಯಯುಃ ॥ ೨ ॥

---

### ಐವತ್ತೇಳನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು :-ಎಲೈ ವ್ಯಾಸಋಷಿಯೇ ಕೇಳು. ಚಂದ್ರಶೇಖರನಾದ ಶಂಕರನು ರಾಕ್ಷಸಾಧಿಪತಿಯಾದ ಗಜಾಸುರನನ್ನು ಹೇಗೆ ಸಂಹರಿಸಿದನೆಂಬುವುದನ್ನು ಹೇಳುವೆನು.

೨. ದೇವಿಯು ಮಹಿಷಾಸುರನನ್ನು ನಾಶಮಾಡಿದಮೇಲೆ ದೇವತೆಗಳು ಯಾವ ಆತಂಕವೂ ಇಲ್ಲದೆ ಸುಖಸಂತೋಷದಿಂದ ವಾಸಮಾಡಲಾರಂಭಿಸಿದರು.

ತಸ್ಯ ಪುತ್ರೋ ಮಹಾವೀರೋ ಮುನೀಶ್ವರ ಗಜಾಸುರಃ ।
ಪಿತುರ್ವಧಂ ಹಿ ಸಂಸ್ಮೃತ್ಯ ಕೃತಂ ದೇವ್ಯಾ ಸುರಾರ್ಥನಾತ್ ॥ ೩ ॥

ಸ ತದ್ವೈರಮನುಸ್ಮೃತ್ಯ ತಪೋರ್ಥಂ ಗತವಾನ್ಮುನೇ ।
ಸಮುದ್ದಿಶ್ಯ ವಿಧಿಂ ಪ್ರೀತ್ಯಾ ತತಾಪ ಪರಮಂ ತಪಃ ॥ ೪ ॥

ಅವಧ್ಯೋಽಹಂ ಭವಿಷ್ಯಾಮಿ ಸ್ತ್ರೀಪುಂಸೈಃ ಕಾಮನಿರ್ಜಿತೈಃ ।
ಸಂವಿಚಾರ್ಯೇತಿ ಮನಸಾಽಭೂತ್ತಪೋರತಮಾನಸಃ ॥ ೫ ॥

ಸ ತೇಪೇ ಹಿಮವದ್ದ್ರೋಣ್ಯಾಂ ತಪಃ ಪರಮದಾರುಣಂ ।
ಊರ್ಧ್ವಬಾಹುರ್ನಭೋದೃಷ್ಟಿಃ ಪಾದಾಂಗುಷ್ಠಾಶ್ರಿತಾವನಿಃ ॥ ೬ ॥

ಜಟಾಭಾರೈಸ್ಸ ವೈ ರೇಜೇ ಪ್ರಲಯಾರ್ಕ ಇವಾಂಶುಭಿಃ ।
ಮಹಿಷಾಸುರಪುತ್ರೋಽಸೌ ಗಜಾಸುರ ಉದಾರಧೀಃ ॥ ೭ ॥

---

೩-೪. ಆ ಮಹಿಷಾಸುರನ ಮಗನೇ ಗಜಾಸುರನು. ದೇವತೆಗಳ ಇಷ್ಟದಂತೆ ದೇವಿಯು ತನ್ನ ತಂದೆಯನ್ನು ಕೊಂದದ್ದನ್ನು ಜ್ಞಾಪಿಸಿಕೊಂಡು ಆ ಗಜಾಸುರನು ಅದೇ ದ್ವೇಷಸಾಧನೆಯಿಂದ ತಪಸ್ಸುಮಾಡಲು ಅರಣ್ಯಕ್ಕೆ ಹೋದನು. ಅಲ್ಲಿ ಬ್ರಹ್ಮನನ್ನು ಕುರಿತು ಉಗ್ರವಾಗಿ ತಪಸ್ಸನ್ನು ಆಚರಿಸಿದನು.

೫. ಸ್ತ್ರೀಪುರುಷರಿಂದಲೂ, ಜಿತೇಂದ್ರಿಯರಾದ ಋಷಿಜನರಿಂದಲೂ, ಎಂದಿಗೂ ತನಗೆ ಮರಣವುಂಟಾಗಬಾರದೆಂದು ಬಯಸಿ ಅದಕ್ಕಾಗಿ ಉಗ್ರವಾದ ತಪಸ್ಸನ್ನು ಮಾಡಲಾರಂಭಿಸಿದನು.

೬. ಅದಕ್ಕಾಗಿ ಅವನು ಹಿಮಾಲಯ ಪರ್ವತದ ತಪ್ಪಲಿಗೆ ಹೋಗಿ ಅಲ್ಲಿ ತೋಳುಗಳನ್ನು ಮೇಲಕ್ಕೆತ್ತಿ ಅಂತರಿಕ್ಷದಲ್ಲಿ ನೆಟ್ಟದೃಷ್ಟಿಯುಳ್ಳವನಾಗಿ, ಒಂದೇ ಒಂದು ಉಂಗುಷ್ಠದಿಂದ ನಿಂತುಕೊಂಡು ಭಯಂಕರವಾದ ತಪಸ್ಸನ್ನಾಚರಿಸಿದನು.

೭, ಈ ಮಹಿಷಾಸುರಪುತ್ರನಾದ ಗಜಾಸುರನು ತಪಸ್ಸುಮಾಡುತ್ತಿರಲು ತನ್ನ ಜಟಾಭಾರಗಳಿಂದ ಪ್ರಳಯಕಾಲದ ಸೂರ್ಯನಂತೆ ಬೆಳಗುತ್ತಿದ್ದನು.

ತಸ್ಯ ಮೂರ್ಧ್ನಃ ಸಮುದ್ಭೂತಸ್ಸಧೂಮೋಽಗ್ನಿಸ್ತಪೋಮಯಃ ।
ತಿರ್ಯಗೂರ್ಧ್ವಮಧೋಲೋಕಾಂಸ್ತಾಪಯನ್ವಿಷ್ವಗೀರಿತಃ ॥ ೮ ॥

ಚುಕ್ಷುಭುರ್ನದ್ಯುದನ್ವಂತಶ್ಚಾಽಗ್ನೇರ್ಮೂರ್ಧಸಮುದ್ಭವಾತ್ ।
ನಿಪೇತುಸ್ಸಗ್ರಹಾಸ್ತಾರಾ ಜಜ್ವಲುಶ್ಚ ದಿಶೋ ದಶ ॥ ೯ ॥

ತೇನ ತಪ್ತಾಸ್ಸುರಾಸ್ಸರ್ವೇ ದಿವಂ ತ್ಯಕ್ತ್ವಾ ಸವಾಸವಾಃ ।
ಬ್ರಹ್ಮಲೋಕಂ ಯಯುರ್ವಿಜ್ಞಾಪಯಾಮಾಸುಶ್ಚ ಚಾಲ ಭೋಃ ॥ ೧೦ ॥

॥ ದೇವಾ ಊಚುಃ ॥

ವಿಧೇ ಗಜಾಸುರತಪಸ್ತಪ್ತಾ ವಯಮಥಾಕುಲಾಃ ।
ನ ಶಕ್ನುಮೋ ದಿವಿ ಸ್ಥಾತುಮತಸ್ತೇ ಶರಣಂ ಗತಾಃ ॥ ೧೧ ॥

---

೮. ಅವನ ನೆತ್ತಿಯಿಂದ ಧೂಮಸಹಿತವಾದ ಅಗ್ನಿಯು ಹೊರಹೊರಟಿತು. ಆ ತಪೋಜ್ವಾಲೆಯು ಮೇಲಿನ ಮತ್ತು ಕೆಳಗಿನ ಲೋಕಗಳನ್ನೆಲ್ಲಾ ಆವರಿಸಿ ದಹಿಸಲು ಆರಂಭಿಸಿತು;

೯. ಈ ಗಜಾಸುರನ ತಪೋಜ್ವಾಲೆಯು, ನದಿಗಳನ್ನೂ, ಸಮುದ್ರಗಳನ್ನೂ ಒಣಗಿಸಿತು. ಗ್ರಹಗಳೂ, ನಕ್ಷತ್ರಗಳೂ, ಕೆಳಗೆ ಉದುರಿದುವು. ಹತ್ತು ದಿಕ್ಕುಗಳೂ ಉರಿಯಲಾರಂಭಿಸಿದುವು.

೧೦. ಇದರಿಂದ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಹೆದರಿ ಸ್ವರ್ಗವನ್ನು ಬಿಟ್ಟು ಈ ವಿಷಯವನ್ನು ಬ್ರಹ್ಮನಿಗೆ ತಿಳಿಸಲು, ಭೂದೇವಿಯನ್ನೂ ತಮ್ಮ ಜೊತೆಯಲ್ಲಿ ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋದರು.

೧೧. ಎಲೈ ಬ್ರಹ್ಮನೇ, ಗಜಾಸುರನು ಘೋರವಾಗಿ ತಪಸ್ಸನ್ನಾಚರಿಸುತ್ತಿರುವನು. ಇದರಿಂದ ನಾವು ಆ ಜ್ವಾಲೆಯನ್ನು ತಡೆಯಲಾರದೆ, ಸ್ವರ್ಗವನ್ನು ಬಿಟ್ಟು ನಿನ್ನನ್ನು ಮರೆಹೊಕ್ಕಿರುವೆವು.

ವಿಧೇಹ್ಯುಪಶಮಂ ತಸ್ಯ ಚಾಸ್ಮಾಞ್ಜೀವಯಿತುಂ ಕೃಪಾ ।
ಲೋಕಾ ನಂಕ್ಷ್ಯತ್ಯನ್ಯಥಾ ಹಿ ಸತ್ಯಂ ಸತ್ಯಂ ಬ್ರುವಾಮಹೇ ॥ ೧೨ ॥

ಇತಿ ವಿಜ್ಞಾಪಿತೋ ದೇವೈರ್ವಾಸವಾದ್ಯೈಸ್ಸ ಆತ್ಮಭೂಃ ।
ಭೃಗುದಕ್ಷಾದಿಭಿರ್ಬ್ರಹ್ಮಾ ಯಯೌ ದೈತ್ಯವರಾಶ್ರಮಂ ॥ ೧೩ ॥

ತಪಂತಂ ತಪಸಾ ಲೋಕಾನ್ಯಥಾಽಭ್ರಾಪಿಹಿತಂ ದಿವಿ ।
ವಿಲಕ್ಷ್ಯ ವಿಸ್ಮಿತಃ ಪ್ರಾಹ ವಿಹಸನ್ಸೃಷ್ಟಿಕಾರಕಃ ॥ ೧೪ ॥

॥ ಬ್ರಹ್ಮೋವಾಚ ॥

ಉತ್ತಿಷ್ಠೋತ್ತಿಷ್ಠ ದೈತ್ಯೇಂದ್ರ ತಪಸ್ಸಿದ್ಧೋಽಸಿ ಮಾಹಿಷೇ ।
ಪ್ರಾಪ್ತೋಽಹಂ ವರದಸ್ತಾತ ವರಂ ವೃಣು ಯಥೇಪ್ಸಿತಂ ॥ ೧೫ ॥

॥ ಸನತ್ಕುಮಾರ ಉವಾಚ ॥

ಉತ್ಥಾಯೋತ್ಥಾಯ ದೈತ್ಯೇಂದ್ರ ಈಕ್ಷಮಾಣೋ ದೃಶಾ ವಿಭುಂ ।
ಗಿರಾ ಗದ್ಗದಯಾ ಪ್ರೀತೋಽಗೃಣಾದ್ದೇವಂ ಸ ಮಾಹಿಷಿಃ ॥ ೧೬ ॥

---

೧೨. ಆ ಅಗ್ನಿಯನ್ನು ಶಾಂತಗೊಳಿಸಿ ದಯೆಯಿಂದ ನಮ್ಮೆಲ್ಲರನ್ನೂ ಬದುಕಿಸು. ಇಲ್ಲವಾದರೆ ಸಮಸ್ತ ಲೋಕಗಳೂ ನಾಶವಾಗುವುವು ಇದು ನಿಶ್ಚಯ. ಎಂದು ಪ್ರಾರ್ಥಿಸಿದರು.

೧೩. ಹೀಗೆ ಹೇಳಿದ ಇಂದ್ರಾದಿ ದೇವತೆಗಳ ಮಾತನ್ನು ಬ್ರಹ್ಮನು ಕೇಳಿ, ಭೃಗು ದಕ್ಷಬ್ರಹ್ಮ ಮೊದಲಾದವರೊಡನೆ ಕೂಡಿ ಗಜಾಸುರನ ಆಶ್ರಮಕ್ಕೆ ಬಂದನು.

೧೪. ಅಂತರಿಕ್ಷದಲ್ಲಿ ಸೂರ್ಯನ ಬೆಳಕು ತುಂಬಿರುವಂತೆ ಈ ಗಜಾಸುರನ ತಪೋಜ್ವಾಲೆಯು ಲೋಕವನ್ನೆಲ್ಲಾ ವ್ಯಾಪಿಸಿದ್ದಿತು. ಆಗ ಸೃಷ್ಟಿಕಾರಕನಾದ ಬ್ರಹ್ಮನು ಮುಗುಳ್ನಗೆ ನಗುತ್ತಾ ಆ ಗಜಾಸುರನನ್ನು ಕುರಿತು,

೧೫. ಎಲೈ ಮಹಿಷಾಸುರಪುತ್ರನೇ, ಏಳು, ಏಳು. ನಿನ್ನ ತಪಸ್ಸು ಸಿದ್ಧಿಸಿತೆಂದು ತಿಳಿ. ಇಗೋ, ನಾನು ವರಕೊಡಲು ನಿನ್ನಲ್ಲಿಗೆ ಬಂದಿರುವೆನು. ಬೇಕಾದ್ದನ್ನು ಕೇಳಿಕೋ ಎನ್ನಲು,

೧೬. ದೈತ್ಯರಾಜನು ಮೇಲೆದ್ದು ತನ್ನ ಕಣ್ಣುಗಳಿಂದ ಎದುರಿಗೆ ನಿಂತಿರುವ ಬ್ರಹ್ಮನನ್ನು ದೃಷ್ಟಿಸಿ ನೋಡಿ ಗದ್ಗದವಾದ ಸ್ವರದಿಂದ ಸ್ತುತಿಸಿದನು.

॥ ಗಜಾಸುರ ಉವಾಚ ॥

ನಮಸ್ತೇ ದೇವದೇವೇಶ ಯದಿ ದಾಸ್ಯಸಿ ಮೇ ವರಂ ।
ಅವಧ್ಯೋಽಹಂ ಭವೇಯಂ ವೈ ಸ್ತ್ರೀಪುಂಸ್ಯೈಃ ಕಾಮನಿರ್ಜಿತೈಃ ॥ ೧೭ ॥

ಮಹಾಬಲೋ ಮಹಾವೀರ್ಯೋಽಜೇಯೋ ದೇವಾದಿಭಿಸ್ಸದಾ ।
ಸರ್ವೇಷಾಂ ಲೋಕಪಾಲಾನಾಂ ನಿಖಿಲರ್ದ್ಧಿಸುಭುಗ್ವಿಭೋ ॥ ೧೮ ॥

॥ ಸನತ್ಕುಮಾರ ಉವಾಚ ॥

ಏವಂ ವೃತಶ್ಶತಧೃತಿರ್ದಾನವೇನ ಸ ತೇನ ವೈ ।
ಪ್ರಾದಾತ್ತತ್ತಪಸಾ ಪ್ರೀತೋ ವರಂ ತಸ್ಯ ಸುದುರ್ಲಭಂ ॥ ೧೯ ॥

ಏವಂ ಲಬ್ಧವರೋ ದೈತ್ಯೋ ಮಾಹಿಷಿಶ್ಚ ಗಜಾಸುರಃ ।
ಸುಪ್ರಸನ್ನಮನಾಸ್ಸೋಽಥ ಸ್ವಧಾಮ ಪ್ರತ್ಯಪದ್ಯತ ॥ ೨೦ ॥

ಸ ವಿಜಿತ್ಯ ದಿಶಸ್ಸರ್ವಾ ಲೋಕಾಂಶ್ಚ ತ್ರೀನ್ಮಹಾಸುರಃ ।
ದೇವಾಸುರಮನುಷ್ಯೇಂದ್ರಾನ್ಗಂಧರ್ವಗರುಡೋರಗಾನ್ ॥ ೨೧ ॥

---

೧೭. ಎಲೈ ದೇವದೇವನೇ, ನನಗೆ ನೀನು ವರಕೊಡುವುದಾದರೆ ಸ್ತ್ರೀಪುರುಷ ರಿಂದಲೂ, ಜೀತೇಂದ್ರಿಯರಾದ ಋಷಿಜನರಿಂದಲೂ, ನಾನು ಮರಣವನ್ನು ಪಡೆಯ ದಂತೆ ಅನುಗ್ರಹಿಸು.

೧೮. ಅಲ್ಲದೆ ನನಗೆ ಹೆಚ್ಚಿನ ಬಲವನ್ನೂ, ಧೈರ್ಯಶೌರ್ಯಗಳನ್ನೂ ದೇವಾದಿ ಗಳಿಗೂ ಅಜೇಯನಾಗಿರುವಿಕೆಯನ್ನೂ, ಸಮಸ್ತ ಲೋಕಪಾಲಕರ ಮೇಲಿನ ಅಧಿಕಾರ ವನ್ನೂ ಅನುಗ್ರಹಿಸು ಎಂದು ಕೇಳಿಕೊಂಡನು.

೧೯. ಆ ಗಜಾಸುರನು ಕೇಳಿದ ವರಗಳು ಬಹಳ ದುರ್ಲಭವಾದರೂ ಅವು ಗಳನ್ನು ಬ್ರಹ್ಮನು ಅವನಿಗೆ ಕೊಟ್ಟನು.

೨೦-೨೧. ಹೀಗೆ ಗಜಾಸುರನು ಬ್ರಹ್ಮನಿಂದ ವರಗಳನ್ನು ಪಡೆದು ಅತ್ಯಂತ ಹರ್ಷಿತನಾಗಿ ತನ್ನ ಆಶ್ರಯವನ್ನು ಕುರಿತು ಪ್ರಯಾಣಮಾಡಿ, ಒಡನೆಯೇ ಮೂರು ಲೋಕಗಳನ್ನೂ, ಸಮಸ್ತ ದಿಕ್ಕುಗಳನ್ನೂ, ದೇವರಾಕ್ಷಸರನ್ನೂ, ಮನುಷ್ಯ ಗಂಧರ್ವ ರನ್ನೂ, ನಾಗಗರುಡರನ್ನೂ ಸಂಪೂರ್ಣವಾಗಿ ಸೋಲಿಸಿದನು.

ಇತ್ಯಾದೀನ್ನಿಖಿಲಾಞ್ಜಿತ್ವಾ ವಶಮಾನೀಯ ವಿಶ್ವಜಿತ್ ।
ಜಹಾರ ಲೋಕಪಾಲಾನಾಂ ಸ್ಥಾನಾನಿ ಸಹ ತೇಜಸಾ ॥ ೨೨ ॥

ದೇವೋದ್ಯಾನಶ್ರಿಯಾ ಜುಷ್ಟಮಧ್ಯಾಸ್ತೇ ಸ್ಮ ತ್ರಿವಿಷ್ಟಪಂ ।
ಮಹೇಂದ್ರಭವನಂ ಸಾಕ್ಷಾನ್ನಿರ್ಮಿತಂ ವಿಶ್ವಕರ್ಮಣಾ ॥ ೨೩ ॥

ತಸ್ಮಿನ್ಮಹೇಂದ್ರಸ್ಯ ಗೃಹೇ ಮಹಾಬಲೋ
ಮಹಾಮನಾ ನಿರ್ಜಿತಲೋಕ ಏಕರಾಟ್ ।
ರೇಮೇಽಭಿವಂದ್ಯಾಂಘ್ರಿಯುಗಃ ಸುರಾದಿಭಿಃ
ಪ್ರತಾಪಿತೈರೂರ್ಜಿತಚಂಡಶಾಸನಃ ॥ ೨೪ ॥

ಸ ಇತ್ಥಂ ನಿರ್ಜಿತಕಕುಬೇರರಾಡ್ವಿಷಯಾನ್ಪ್ರಿಯಾನ್ ।
ಯಥೋಪಜೋಷಂ ಭುಂಜಾನೋ ನಾತೃಪ್ಯದಜಿತೇಂದ್ರಿಯಃ ॥ ೨೫ ॥

---

೨೨. ಹೀಗೆ ಗಜಾಸುರನು ಎಲ್ಲರನ್ನೂ ಗೆದ್ದು ಲೋಕವನ್ನೆಲ್ಲಾ ಜಯಿಸಿ, ಅಖಿಲ ದಿಕ್ಪಾಲಕರ ಸ್ಥಾನಮಾನಗಳನ್ನೆಲ್ಲಾ ತನ್ನ ತೇಜಸ್ಸಿನಿಂದಲೇ ಆಕ್ರಮಿಸಿದನು.

೨೩. ಆಮೇಲೆ ಆ ದೈತ್ಯನು ವಿಶ್ವಕರ್ಮನಿಂದ ನಿರ್ಮಿತವಾದ ಇಂದ್ರನ ಮನೆಯಲ್ಲಿಯೇ ವಾಸಮಾಡಿದನು. ಆ ಸ್ವರ್ಗಲೋಕವಾದರೋ ಉದ್ಯಾನವನಗಳ ಕಾಂತಿಯಿಂದ ಬಹು ರಮ್ಯವಾಗಿ ಪ್ರಕಾಶಿಸುತ್ತಿತ್ತು.

೨೪. ಆ ಇಂದ್ರನ ಮನೆಯಲ್ಲಿಯೇ, ಶೂರನೂ, ಧೀರನೂ, ಲೋಕಗಳನ್ನು ಜಯಿಸಿದವನೂ, ಆದ ಗಜಾಸುರನು ಸಮಸ್ತ ದೇವತೆಗಳಿಂದಲೂ ಸೇವಿಸಲ್ಪಡುತ್ತಾ ಪರಾಕ್ರಮಾತಿಶಯಗಳಿಂದ ವಿರಾಜಿಸಿದನು.

೨೫. ಹೀಗೆ ಗಜಾಸುರನು ಸಮಸ್ತ ದಿಕ್ಕುಗಳನ್ನೂ ಜಯಿಸಿ ಸಂಪೂರ್ಣವಾದ ವಿಷಯಸುಖಗಳನ್ನು ಅನುಭವಿಸಿದನು. ಆದರೂ ಇಂದ್ರಿಯ ಸುಖಗಳಲ್ಲಿ ಅವನಿಗೆ ತೃಪ್ತಿಯುಂಟಾಗಲಿಲ್ಲ.

ಏವಮೈಶ್ವರ್ಯಮತ್ತಸ್ಯ ದೃಪ್ತಸ್ಯೋಚ್ಛಾಸ್ತ್ರವರ್ತಿನಃ ।
ಕಾಲೇ ವ್ಯತೀತೇ ಮಹತಿ ಪಾಪಬುದ್ಧಿರಭೂತ್ತತಃ ॥ ೨೬ ॥

ಮಹಿಷಾಸುರಪುತ್ರೋऽಸೌ ಸಂಚಿಕ್ಲೇಶ ದ್ವಿಜಾನ್ವರಾನ್ ।
ತಾಪಸಾನ್ನಿತರಾಂ ಪೃಥ್ವ್ಯಾಂ ದಾನವಸ್ಸುರಮರ್ದನಃ ॥ ೨೭ ॥

ಸುರಾನ್ನರಾಂಶ್ಚ ಪ್ರಮಥಾನ್ಸರ್ವಾಂಶ್ಚಿಕ್ಲೇಶ ದುರ್ಮತಿಃ ।
ಧರ್ಮಾನ್ವಿತಾನ್ವಿಶೇಷೇಣ ಪೂರ್ವವೈರಮನುಸ್ಮರನ್ ॥ ೨೮ ॥

ಏಕಸ್ಮಿನ್ಸಮಯೇ ತಾತ ದಾನವೋऽಸೌ ಮಹಾಬಲಃ ।
ಅಗಚ್ಛದ್ರಾಜಧಾನೀಂ ವೈ ಶಂಕರಸ್ಯ ಗಜಾಸುರಃ ॥ ೨೯ ॥

ಸಮಾಗತೇ ಸುರೇಂದ್ರೇ ಹಿ ಮಹಾನ್ಕಲಕಲೋ ಮುನೇ ।
ತ್ರಾತ ತ್ರಾತೇತಿ ತತ್ರಾಸೀದಾನಂದವನವಾಸಿನಾಂ ॥ ೩೦ ॥

---

೨೬. ಐಶ್ವರ್ಯವು ಕಾಲಕ್ರಮದಲ್ಲಿ ಹೆಚ್ಚಾಯಿತು. ಅದರಿಂದ ಬಹಳವಾಗಿ ಮದಿಸಿದನು. ಶಾಸ್ತ್ರಮರ್ಯಾದೆಯನ್ನು ಮೀರಿದನು. ಹೀಗೆ ಕೆಲವು ಕಾಲ ಕಳೆಯಲಾಗಿ ಪಾಪಬುದ್ಧಿಯೂ ಹೆಚ್ಚಿತು.

೨೭. ಭೂಮಿಯಲ್ಲಿದ್ದ ಶ್ರೇಷ್ಠ ಬ್ರಾಹ್ಮಣರನ್ನೂ, ಋಷಿಜನರನ್ನೂ, ದೇವತೆಗಳನ್ನೂ ಹಿಂಸಿಸಲಾರಂಭಿಸಿದನು.

೨೮. ದೇವತೆಗಳನ್ನೂ, ಮನುಷ್ಯರನ್ನೂ, ಶಿವಗಣಗಳನ್ನೂ ಬಹಳವಾಗಿ ಹಿಂಸಿಸಿದನು. ಅವರಲ್ಲೂ ಧರ್ಮಾನುಯಾಯಿಗಳನ್ನು ಹೆಚ್ಚಾಗಿ ಪೀಡಿಸಿದನು. ಹಿಂದಿನ ದ್ವೇಷವೇ ಇದಕ್ಕೆ ಕಾರಣ.

೨೯-೩೦. ಹೀಗಿರಲು ಒಂದುಸಾರಿ ಗಜಾಸುರನು ತನ್ನ ಬಲದಿಂದ ಕೊಬ್ಬಿ ಶಂಕರನ ರಾಜಧಾನಿಯನ್ನು ಪ್ರವೇಶಿಸಲು, ಆ ರಾಜಧಾನಿಯ ಆನಂದವನದಲ್ಲಿ ವಾಸ ಮಾಡುತ್ತಿದ್ದವರೆಲ್ಲರೂ ಹೆದರಿ ಪರಶಿವನನ್ನು ರಕ್ಷಿಸು, ರಕ್ಷಿಸು, ಎಂದು ಮೊರೆ ಹೊಕ್ಕರು.

ಮಹಿಷಾಸುರಪುತ್ರೋಽಸೌ ಯದಾ ಪುರ್ಯಾಂ ಸಮಾಗತಃ ।
ಪ್ರಮಥಸ್ಪ್ರಮಥಾನ್ಸರ್ವಾನ್ನಿಜವೀರ್ಯಮದೋದ್ಧತಃ ॥ ೩೧ ॥

ತಸ್ಮಿನ್ನವಸರೇ ದೇವಾಶ್ಶಕ್ರಾದ್ಯಾಸ್ತತ್ಪರಾಜಿತಾಃ ।
ಶಿವಸ್ಯ ಶರಣಂ ಜಗ್ಮುರ್ನತ್ವಾ ತುಷ್ಟುವುರಾದರಾತ್ ॥ ೩೨ ॥

ನ್ಯವೇದಯನ್ನಾದನವಸ್ಯ ತಸ್ಯ ಕಾಶ್ಯಾಂ ಸಮಾಗಮಂ ।
ಕ್ಲೇಶಾಧಿಕ್ಯಂ ತತ್ರತ್ಯಾನಾಂ ತನ್ನಾಥಾನಾಂ ವಿಶೇಷತಃ ॥ ೩೩ ॥

॥ ದೇವಾ ಊಚುಃ ॥

ದೇವದೇವ ಮಹಾದೇವ ತವ ಪುರ್ಯಾಂ ಗತೋಽಸುರಃ ।
ಕಷ್ಟಂ ದತ್ತೇ ತ್ವಜ್ಜನಾನಾಂ ತಂ ಜಹಿ ತ್ವಂ ಕೃಪಾನಿಧೇ ॥ ೩೪ ॥

ಯತ್ರ ಯತ್ರ ಧರಾಯಾಂ ಚ ಚರಣಂ ಪ್ರಮಿಣೋತಿ ಹಿ ।
ಅಚಲಾಂ ಸಚಲಾಂ ತತ್ರ ಕರೋತಿ ನಿಜಭಾರತಃ ॥ ೩೫ ॥

---

೩೧. ಈ ಮಹಿಷಪುತ್ರನಾದ ಗಜಾಸುರನು ಕಾಶೀಪಟ್ಟಣಕ್ಕೆ ಪ್ರವೇಶಿಸಿ ತನ್ನ ಪರಾಕ್ರಮದಿಂದ ಕೊಬ್ಬಿ ಪ್ರಮಥಗಣಗಳನ್ನೆಲ್ಲಾ ನಾಶಮಾಡಿ ಸಂಚರಿಸಲಾರಂಭಿಸಿದನು.

೩೨. ಇಷ್ಟರಲ್ಲಿ ಇಂದ್ರನೇ ಮೊದಲಾದ ದೇವತೆಗಳು ಗಜಾಸುರನಿಗೆ ಹೆದರಿ ಶಂಕರನ ಮರೆಹೊಕ್ಕು ಅವನನ್ನು ಬಹಳವಾಗಿ ಸ್ತುತಿಸಿದರು.

೩೩. ಅಲ್ಲದೆ ಕಾಶೀಪಟ್ಟಣದಲ್ಲಿ ಅವನು ಮಾಡುತ್ತಿದ್ದ ಜನರ ಹಿಂಸೆಗಳನ್ನೂ, ಕೊಡುತ್ತಿದ್ದ ರಾಜೋಪದ್ರವಗಳನ್ನೂ ಪೂರ್ಣವಾಗಿ ಶಂಕರನಿಗೆ ತಿಳಿಸಿದರು.

೩೪. ಓ ಮಹಾದೇವನೇ, ನಿನ್ನ ಪಟ್ಟಣಕ್ಕೆ ಗಜಾಸುರನು ಬಂದಿರುವನು. ಅವನಿಂದ ನಿನ್ನ ಭಕ್ತರಿಗೆ ಬಹಳ ಕಷ್ಟವೊದಗಿರುವುದು. ಹೇಗಾದರೂ ಮಾಡಿ ನೀನು ಅವನನ್ನು ನಿಗ್ರಹಿಸು

೩೫ ಎಲೈ ಮಹಾದೇಹನೇ ಆ ಗಜಾಸುರನು ಎಲ್ಲಿ ಕಾಲಿಡುವನೋ ಆ ಸ್ಥಳವು ಬೆಟ್ಟವಾದರೂ ಸಹ ಅವನ ಭಾರದಿಂದ ಅಲ್ಲಾಡಿಹೋಗುವುದು.

ಊರುವೇಗೇನ ತರವಃ ಪತಂತಿ ಶಿಖರೈಸ್ಸಹ ।
ಯಸ್ಯ ದೋರ್ದಂಡಘಾತೇನ ಚೂರ್ಣೀಸ್ಯುಶ್ಚ ಶಿಲೋಚ್ಚಯಾಃ ॥ ೩೬ ॥

ಯಸ್ಯ ಮೌಲಿಜಸಂಘರ್ಷಾದ್ಘನಾ ವ್ಯೋಮ ತ್ಯಜಂತ್ಯಪಿ ।
ನೀಲಿಮಾನಂ ನ ಚಾದ್ಯಾಪಿ ಜಹ್ಯುಸ್ತತ್ಕೇಶಸಂಗಜಂ ॥ ೩೭ ॥

ಯಸ್ಯ ವಿಶ್ವಾಸಸಂಭಾರೈರುತ್ತರಂಗಾ ಮಹಾಬ್ಧಯಃ ।
ನದ್ಯೋಽಪ್ಯಮಂದಕಲ್ಲೋಲಾ ಭವಂತಿ ತಿಮಿಭಿಸ್ಸಹ ॥ ೩೮ ॥

ಯೋಜನಾನಾಂ ಸಹಸ್ರಾಣಿ ನವ ಯಸ್ಯ ಸಮುಚ್ಛ್ರಯಃ ।
ತಾವಾನೇವ ಹಿ ವಿಸ್ತಾರಸ್ತನೋರ್ಮಾಯಾವಿನೋಽಸ್ಯ ಹಿ ॥ ೩೯ ॥

ಯನ್ನೇತ್ರಯೋಃ ಪಿಂಗಲಿಮಾ ತಥಾ ತರಲಿಮಾ ಪುನಃ ।
ವಿದ್ಯುತಾ ನೋಹ್ಯತೇಽದ್ಯಾಪಿ ಸೋಽಯಂ ಸ್ಮಾಯಾತಿ ಸತ್ವರಂ ॥ ೪೦ ॥

---

೩೬. ಅವನು ನಡೆಯುವಾಗ ತೊಡೆಗಳ ರಭಸಕ್ಕೆ ಮರಗಳು ಉರುಳುತ್ತವೆ. ಭುಜದ ಏಟಿಗೆ ಪರ್ವತಗಳು ಶಿಖರಗಳ ಸಮೇತ ಪುಡಿಪುಡಿಯಾಗುವುವು.

೩೭. ಆ ಗಜಾಸುರನ ತಲೆಗೂದಲಿನ ಹೊಡೆತದಿಂದ ಮೇಘಗಳು ಆಕಾಶ ವನ್ನು ಬಿಟ್ಟು ಹಿಂಜರಿಯುತ್ತವೆ. ಈ ಕೂದಲುಗಳ ಸ್ಪರ್ಶದಿಂದ ಉಂಟಾದ ನೀಲಿಯ ಬಣ್ಣವು ಇನ್ನೂ ಅಂತರಿಕ್ಷದಲ್ಲಿ ಕಾಣುತ್ತಲೇ ಇದೆ.

೩೮. ಅವನ ಉಸಿರಿನ ವೇಗದಿಂದ ದೊಡ್ಡ ದೊಡ್ಡ ಸಮುದ್ರಗಳು ಅಲ್ಲೋಲ ಕಲ್ಲೋಲವಾಗುತ್ತವೆ. ನದಿಗಳು ತಿಮಿಂಗಿಲವೇ ಮೊದಲಾದ ಮೀನುಗಳೊಡನೆ ಅತಿಯಾಗಿ ಕದಡಿಹೋಗುತ್ತವೆ.

೩೯. ಇವನ ದೇಹದ ಉದ್ದವು ಸಹಸ್ರಯೋಜನ. ದಪ್ಪವೂ ಸಹ ಸುಮಾರು ಅಷ್ಟೇ ಇದೆ. ಇದರಮೇಲೆ ಇವನು ಮಾಯಾವಿ.

೪೦. ಅವನ ಕಣ್ಣುಗಳ ಹೊಳಪೂ ಮತ್ತು ಚಾಂಚಲ್ಯವೂ, ಅಂತರಿಕ್ಷದಲ್ಲಿ ಕಂಡುಬರುವ ಮಿಂಚಿನಲ್ಲಿಯೂ ತೋರಿಬರಲಾರದು. ಅವನು ಅಷ್ಟು ವೇಗವಾಗಿ ಸಂಚರಿಸುವನು.

ಯಾಂ ಯಾಂ ದಿಶಂ ಸಮುಭ್ಯೇತಿ ಸೋಽಯಂ ದುಸ್ಸಹದಾನವಃ ।
ಅವಧ್ಯೋಽಹಂ ಭವಾಮಿತಿ ಸ್ತ್ರೀಪುಂಸ್ಯೈಃ ಕಾಮನಿರ್ಜಿತೈಃ ॥ ೪೧ ॥

ಇತ್ಯೇವಂ ಚೇಷ್ಟಿತಂ ತಸ್ಯ ದಾನವಸ್ಯ ನಿವೇದಿತಂ ।
ರಕ್ಷಸ್ವ ಭಕ್ತಾನ್ದೇವೇಶ ಕಾಶೀರಕ್ಷಣತತ್ಪರಃ ॥ ೪೨ ॥

॥ ಸನತ್ಕುಮಾರ ಉವಾಚ ॥

ಇತಿ ಸಂಪ್ರಾರ್ಥಿತೋ ದೇವೈರ್ಭಕ್ತರಕ್ಷಣತತ್ಪರಃ ।
ತತ್ರಾಜಗಾಮ ಸೋಽರಂ ತದ್ವಧಕಾಮನಯಾ ಹರಃ ॥ ೪೩ ॥

ಆಗತಂ ತಂ ಸಮಾಲೋಕ್ಯ ಶಂಕರಂ ಭಕ್ತವತ್ಸಲಂ ।
ತ್ರಿಶೂಲಹಸ್ತಂ ಗರ್ಜಂತಂ ಜಗರ್ಜ ಸ ಗಜಾಸುರಃ ॥ ೪೪ ॥

ತತಸ್ತಯೋರ್ಮಹಾನಾಸೀತ್ಸಮರೋ ದಾರುಣೋಽದ್ಭುತಃ ।
ನಾನಾಸ್ತ್ರಶಸ್ತ್ರಸಂಪಾತೈರ್ವೀರಾರಾವಂ ಪ್ರಕುರ್ವತೋಃ ॥ ೪೫ ॥

---

೪೧. ಅವನು ಯಾವ ದಿಕ್ಕಿಗೆ ಹೋದರೂ ಅಲ್ಲಿನ ಎಲ್ಲರನ್ನೂ ಗೆಲ್ಲುವನು. ಅಲ್ಲದೆ ಜಿತೇಂದ್ರಿಯರಾದ ಯಾವ ಸ್ತ್ರೀಪುರುಷರಿಂದಲೂ ಮರಣವಿಲ್ಲವೆಂಬ ಧೈರ್ಯವೂ ಅವನಿಗಿದೆ.

೪೨-೪೩. ಹೀಗಿರುವ ಗಜಾಸುರನ ನಡತೆಯನ್ನು ನಾವು ನಿನಗೆ ತಿಳಿಸಿರುವೆವು. ಎಲೈ ದೇವದೇವನೇ, ಕಾಶೀನಗರವನ್ನೂ, ಹಾಗೆಯೇ ನಿನ್ನ ಭಕ್ತರಾದ ನಮ್ಮನ್ನೂ ಉದ್ಧರಿಸು ಎನ್ನಲು, ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ ಆ ಪರಶಿವನು ಭಕ್ತರ ರಕ್ಷಣಾರ್ಥವಾಗಿ ತಾನೇ ಆ ಗಜಾಸುರನನ್ನು ಸಂಹರಿಸಲು ಅಲ್ಲಿಂದ ಹೊರಟನು.

೪೪. ತನ್ನ ಮೇಲೆ ಯುದ್ಧಕ್ಕೆ ಬಂದ ಭಕ್ತವತ್ಸಲನಾದ ಪರಮೇಶ್ವರನನ್ನು ಗಜಾಸುರನು ನೋಡಿ ಸಿಂಹನಾದಮಾಡುತ್ತಾ ಯುದ್ಧಕ್ಕೆ ಸಿದ್ಧನಾದನು.

೪೫. ಅನಂತರ ಅವರಿಬ್ಬರಿಗೂ ಘೋರವಾದ ಯುದ್ಧವಾಯಿತು. ಪರಸ್ಪರ ವಾಗಿ ಅಸ್ತ್ರಶಸ್ತ್ರಗಳನ್ನು ಬಿಡುತ್ತಾ ಯುದ್ಧವನ್ನು ಮಾಡಿದರು.

ಗಜಾಸುರೋಽತಿತೇಜಸ್ವೀ ಮಹಾಬಲಪರಾಕ್ರಮಃ ।
ವಿವ್ಯಾಧ ಗಿರಿಶಂ ಬಾಣೈಸ್ತೀಕ್ಷ್ಣೈರ್ದಾನವಘಾತಿನಂ ॥ ೪೬ ॥

ಅಥ ರುದ್ರೋ ರೌದ್ರತನುಃ ಸ್ವಶರೈರತಿದಾರುಣೈಃ ।
ತಚ್ಛರಾಂಶ್ಚಿಚ್ಛಿದೇ ಪೂರ್ಣಮಪ್ರಾಪ್ತಾಂಸ್ತಿಲಶೋ ಮುನೇ ॥ ೪೭ ॥

ತತೋ ಗಜಾಸುರಃ ಕ್ರುದ್ಧೋಽಭ್ಯಧಾವತ್ತಂ ಮಹೇಶ್ವರಂ ।
ಖಡ್ಗಹಸ್ತಃ ಪ್ರಗರ್ಜ್ಯೋರ್ಚ್ಚೈರ್ಹತೋಽಸೀತ್ಯದ್ಯ ವೈ ಮಯಾ ॥ ೪೮ ॥

ತತಸ್ತ್ರಿಶೂಲಹೇತಿಸ್ತಮಾಯಾಂತಂ ದೈತ್ಯಪುಂಗವಂ ।
ವಿಜ್ಞಾಯಾವಧ್ಯಮನ್ಯೇನ ಶೂಲೇನಾಭಿಜಘಾನ ತಂ ॥ ೪೯ ॥

ಪ್ರೋತಸ್ತೇನ ತ್ರಿಶೂಲೇನ ಸ ಚ ದೈತ್ಯೋ ಗಜಾಸುರಃ ।
ಛತ್ರೀಕೃತಮಿವಾತ್ಮಾನಂ ಮನ್ಯಮಾನೋ ಜಗೌ ಹರಂ ॥ ೫೦ ॥

---

೪೬. ಅತಿ ತೇಜಶ್ಶಾಲಿಯೂ, ಪರಾಕ್ರಮಿಯೂ ಆದ ಗಜಾಸುರನು ತೀಕ್ಷ್ಣವಾದ ಬಾಣಗಳಿಂದ ಪರಮೇಶ್ವರನನ್ನು ನೋಯಿಸಿದನು.

೪೭. ಅನಂತರ ರುದ್ರನು ತನ್ನ ಭಯಂಕರವಾದ ಬಾಣಗಳಿಂದ ಆ ಗಜಾಸುರನ ಬಾಣಗಳನ್ನು ಕತ್ತರಿಸಿ, ಅವುಗಳನ್ನು ವ್ಯರ್ಥವನ್ನಾಗಿಮಾಡಿದನು.

೪೮. ಬಳಿಕ ಗಜಾಸುರನು ಖಡ್ಗವನ್ನು ಕೈಯಲ್ಲಿ ಹಿಡಿದು ಗರ್ಜಿಸುತ್ತಾ' ಈ ಬಾಣದಿಂದಲೇ ನಿನ್ನನ್ನು ಧ್ವಂಸಮಾಡುತ್ತೇನೆಂದು ಕೂಗುತ್ತಾ ಮುನ್ನುಗ್ಗಿದನು.

೪೯. ತ್ರಿಶೂಲಧಾರಿಯಾದ ಪರಶಿವನು ಇವನು ಇತರ ಆಯುಧಗಳಿಂದ ಅವಧ್ಯನೆಂದು ಯೋಚಿಸಿಕೊನೆಗೆ ತನ್ನ ತ್ರಿಶೂಲದಿಂದ ಅವನನ್ನು ಹೊಡೆದನು.

೫೦. ತ್ರಿಶೂಲದಲ್ಲಿ ಅವನನ್ನು ಚುಚ್ಚಿಕೊಂಡು ಛತ್ರಿಯನ್ನು ಹಿಡಿದುಕೊಳ್ಳುವಂತೆ ಮೇಲಕ್ಕೆತ್ತಿ ಹಿಡಿದನು. ಇದರಿಂದ ಗಜಾಸುರನು ಹೆದರಿ ತನ್ನನ್ನು ಸಂರಕ್ಷಿಸಬೇಕೆಂದು ಆ ಪರಶಿವನನ್ನು ಪ್ರಾರ್ಥಿಸಿದನು.

॥ ಗಜಾಸುರ ಉವಾಚ ॥

ದೇವದೇವ ಮಹಾದೇವ ತವ ಭಕ್ತೋऽಸ್ಮಿ ಸರ್ವಥಾ ।
ಜಾನೇ ತ್ವಾಂ ತ್ರಿದಿವೇಶಾನ ತ್ರಿಶೂಲಿನ್ಸ್ಮರಹಾರಿಣಂ ॥ ೫೧ ॥

ತವ ಹಸ್ತೇ ಮಮ ವಧೋ ಮಹಾಶ್ರೇಯಸ್ಕರೋ ಮತಃ ।
ಅಂಧಕಾರೇ ಮಹೇಶಾನ ತ್ರಿಪುರಾಂತಕ ಸರ್ವಗ ॥ ೫೨ ॥

ಕಿಂಚಿದ್ವಿಜ್ಞಪ್ತುಮಿಚ್ಛಾಮಿ ತಚ್ಛೃಣುಷ್ವ ಕೃಪಾಕರ ।
ಸತ್ಯಂ ಬ್ರವೀಮಿ ನಾऽಸತ್ಯಂ ಮೃತ್ಯುಂಜಯ ವಿಚಾರಯ ॥ ೫೩ ॥

ತ್ವಮೇಕೋ ಜಗತಾಂ ವಂದ್ಯೋ ವಿಶ್ವಸ್ಯೋಽಪರಿ ಸಂಸ್ಥಿತಃ ।
ಕಾಲೇನ ಸರ್ವೈರ್ಮರ್ತವ್ಯಂ ಶ್ರೇಯಸೇ ಮೃತ್ಯುರೀದೃಶಃ ॥ ೫೪ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತಸ್ಯ ಶಂಕರಃ ಕರುಣಾನಿಧಿಃ ।
ಪ್ರಹಸ್ಯ ಪ್ರತ್ಯುವಾಚೇಶೋ ಮಾಹಿಷೇಯಂ ಗಜಾಸುರಂ ॥ ೫೫ ॥

---

೫೧. ದೇವದೇವನಾದ ಓ ಮಹಾದೇವನೆ, ನಾನು ನಿನ್ನ ಸೇವಕನು. ನಿನ್ನ ತಪೋಜ್ವಾಲೆಯಿಂದ ಮನ್ಮಥನನ್ನು ಧ್ವಂಸಮಾಡಿದ್ದನ್ನು ನಾನು ತಿಳಿದಿದ್ದೇನೆ.

೫೨. ಎಲೈ ಮಹೇಶ್ವರನೇ, ನಿನ್ನಿಂದ ನನಗೆ ಮರಣವು ಒದಗಿದರೆ ಅದ ನನಗೆ ಶ್ರೇಯಸ್ಸೆಂದೇ ಭಾವಿಸುತ್ತೇನೆ. ಏಕೆಂದರೆ ನೀನು ತ್ರಿಪುರವನ್ನು ನಾಶಮಾಡಿದ ಸರ್ವಾಂತರ್ಯಾಮಿಯು.

೫೩. ಎಲೈ ದಯಾನಿಧಿಯೇ, ನಿನ್ನಿಂದ ಕೆಲವು ವಿಷಯವನ್ನು ತಿಳಿಯಲು ಇಷ್ಟಪಡುತ್ತೇನೆ. ಇದು ಸತ್ಯವು. ದಯವಿಟ್ಟು ನಾನು ಹೇಳುವುದನ್ನು ಗಮನಿಸು.

೫೪. ಎಲೈ ದೇವನೇ ನೀನೊಬ್ಬನೇ ಲೋಕಕ್ಕೆ ಪೂಜ್ಯನಾದವನು. ನಿನ್ನಿಂದಲೇ ಸಮಸ್ತ ಜಗತ್ತೂ ನಡೆಯುತ್ತಿದೆ. ನಿನ್ನಿಂದ ಮರಣವನ್ನು ಪಡೆದವನೇ ಧನ್ಯನು ಎಂದನು.

೫೫-೫೬. ಹೀಗೆ ಹೇಳಿದ ಗಜಾಸುರನ ಮಾತುಗಳನ್ನು ದಯಾರಾಶಿಯಾದ

॥ ಈಶ್ವರ ಉವಾಚ ॥

ಮಹಾಪರಾಕ್ರಮನಿಧೇ ದಾನವೋತ್ತಮ ಸನ್ಮತೇ ।
ಗಜಾಸುರ ಪ್ರಸನ್ನೋಽಸ್ಮಿ ಸ್ವಾನುಕೂಲಂ ವರಂ ವೃಣು ॥ ೫೬ ॥

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ಮಹೇಶಸ್ಯ ವಚನಂ ವರದಸ್ಯ ಹಿ ।
ಪ್ರತ್ಯುವಾಚ ಪ್ರಸನ್ನಾತ್ಮಾ ದಾನವೇಂದ್ರೋ ಗಜಾಸುರಃ ॥ ೫೭ ॥

॥ ಗಜಾಸುರ ಉವಾಚ ॥

ಯದಿ ಪ್ರಸನ್ನೋ ದಿಗ್ವಾಸಸ್ತದಾ ನಿತ್ಯಂ ವಸಾನ ಮೇ ।
ಇಮಾಂ ಕೃತ್ತಿಂ ಮಹೇಶಾನ ತ್ವತ್ತ್ರಿಶೂಲಾಗ್ನಿಪಾವಿತಾಂ ॥ ೫೮ ॥

ಸ್ವಪ್ರಮಾಣಾಂ ಸುಖಸ್ಪರ್ಶಾಂ ರಣಾಂಗಣಪಣೀಕೃತಾಂ ।
ದರ್ಶನೀಯಾಂ ಮಹಾದಿವ್ಯಾಂ ಸರ್ವದೈವ ಸುಖಾವಹಾಂ ॥ ೫೯ ॥

ಇಷ್ಟಗಂಧಿಸ್ಸದೈವಾಸ್ತು ಸದೈವಾಸ್ತ್ವತಿಕೋಮಲಾ ।
ಸದೈವ ನಿರ್ಮಲಾ ಚಾಸ್ತು ಸದೈವಾಸ್ತ್ವತಿಮಂಡನಾಂ ॥ ೬೦ ॥

---

ಶಂಕರನು ಕೇಳಿ ನಗುತ್ತಾ, ಎಲೈ ಪರಾಕ್ರಮಿಯಾದ ರಾಕ್ಷಸರಾಜನೇ ಕೇಳು. ನಿನಗೆ ನಾನು ಪ್ರಸನ್ನನಾಗಿರುವೆನು. ನಿನಗೆ ಬೇಕಾದ ವರವೇನು? ಕೇಳು ಎಂದನು.

೫೭. ವರವನ್ನು ಕೊಡುತ್ತೇನೆಂದು ಮಹೇಶ್ವರನಾಡಿದ ಮಾತುಗಳನ್ನು ಕೇಳಿ ದಾನವೇಂದ್ರನಾದ ಗಜಾಸುರನು ಹೀಗೆ ಕೇಳಿಕೊಂಡನು.

೫೮. ಓ ಸ್ವಾಮಿಯೇ, ನೀನು ದಿಗಂಬರನು. ನನ್ನ ಈ ಚರ್ಮವು ನಿನ್ನ ತ್ರಿಶೂಲವೆಂಬ ಬೆಂಕಿಯಿಂದ ಪವಿತ್ರವಾಗಿದೆ. ಇದನ್ನು ನೀನು ಸರ್ವದಾ ಧರಿಸಿ ಕೊಂಡಿರು.

೫೯. ಈ ಚರ್ಮವು ನಿನ್ನ ಅಳತೆಗೆ ಸಮನಾಗಿದೆ. ಮೃದುವಾಗಿದೆ. ಯುದ್ಧ ರಂಗದಲ್ಲಿ ನೀನು ಪರಾಕ್ರಮದಿಂದ ಇದನ್ನು ಗೆದ್ದಿರುವೆ. ಸುಂದರವಾಗಿಯೂ ಹಿತಕರ ವಾಗಿಯೂ ಇದೆ.

೬೦. ಈ ಚರ್ಮವು ನಿನಗೆ ಯಾವಾಗಲೂ ಸುಗಂಧಮಯವಾಗಿಯೂ, ಕೋಮಲವಾಗಿಯೂ, ನಿರ್ಮಲವಾಗಿಯೂ, ಅಲಂಕಾರಪ್ರಾಯವಾಗಿಯೂ ಇರಲಿ-

ಮಹಾತಪೋನಲಜ್ವಾಲಾಂ ಪ್ರಾಪ್ಯಾಪಿ ಸುಚಿರಂ ವಿಭೋ ।
ನ ದಗ್ಧಾ ಕೃತ್ತಿರೇಷಾ ಮೇ ಪುಣ್ಯಗಂಧನಿಧೇಸ್ತತಃ ॥ ೬೧ ॥

ಯದಿ ಪುಣ್ಯವತೀ ನೈಷಾ ಮಮ ಕೃತ್ತಿರ್ದಿಗಂಬರ ।
ತದಾ ತ್ವದಂಗಸಂಗೋಽಸ್ಯಾಃ ಕಥಂ ಜಾತೋ ರಣಾಂಗಣೇ ॥ ೬೨ ॥

ಅನ್ಯಂ ಚ ಮೇ ವರಂ ದೇಹಿ ಯದಿ ತುಷ್ಟೋಽಸಿ ಶಂಕರ ।
ನಾಮಾಸ್ತು ಕೃತ್ತಿವಾಸಾಸ್ತೇ ಪ್ರಾರಭ್ಯಾದ್ಯತನಂ ದಿನಂ ॥ ೬೩ ॥

॥ ಸನತ್ಕುಮಾರ ಉವಾಚ ॥

ಶ್ರುತ್ವೇತಿ ಸ ವಚಸ್ತಸ್ಯ ಶಂಕರೋ ಭಕ್ತವತ್ಸಲಃ ।
ತಥೇತ್ಯುವಾಚ ಸುಪ್ರೀತೋ ಮಹಿಷಾಸುರಜಂ ಚ ತಂ ॥ ೬೪ ॥

ಪುನಃ ಪ್ರೋವಾಚ ಪ್ರೀತಾತ್ಮಾ ದಾನವಂ ತಂ ಗಜಾಸುರಂ ।
ಭಕ್ತಪ್ರಿಯೋ ಮಹೇಶಾನೋ ಭಕ್ತಿನಿರ್ಮಲಮಾನಸಂ ॥ ೬೫ ॥

---

೬೧. ತಪೋಜ್ವಾಲೆಯು ದೇಹದಿಂದ ಎಷ್ಟೇ ಹೊರಡುತ್ತಿದ್ದರೂ ಈ ಚರ್ಮವು ಮಾತ್ರ ಸುಡಲಾರದು. ಇದು ಉತ್ತಮವಾದ ಸುವಾಸನೆಯನ್ನೀಯುತ್ತಾ ನಿನಗೆ ಸುಖದಾಯಕವಾಗಿರುತ್ತದೆ.

೬೨. ನನ್ನ ಈ ಚರ್ಮವು ಬಹಳ ಸುಕೃತಶಾಲಿಯು. ಏಕೆಂದರೆ ಅದು ಪಾಪಭೂಯಿಷ್ಠವಾಗಿದ್ದರೆ ನಿನ್ನ ದೇಹದ ಸ್ಪರ್ಶವು ಈ ಚರ್ಮಕ್ಕೆ ಆಗುತ್ತಿತ್ತೇ ?

೬೩. ಎಲೈ ಸ್ವಾಮಿಯೇ, ನೀನು ಸುಪ್ರೀತನಾದರೆ ನನಗೆ ಮತ್ತೊಂದು ವರವನ್ನು ನೀಡು. ನನ್ನ ಗಜಚರ್ಮವನ್ನು ಧರಿಸುವುದರಿಂದ ಇಲ್ಲಿಂದ ಮುಂದೆ ನಿನಗೆ ಕೃತ್ತಿವಾಸನೆಂಬ ಹೆಸರು ಬರಲಿ. ಆರೀತಿ ಅನುಗ್ರಹಿಸು ಎಂದು ಬೇಡಿಕೊಂಡನು.

೬೪. ಈ ಗಜಾಸುರನ ಕೋರಿಕೆಗಳನ್ನು ಕೇಳಿ ಶಂಕರನು ಪ್ರೀತಿಯಿಂದ ಹಾಗೆಯೇ ಆಗಲೆಂದು ಒಪ್ಪಿಕೊಂಡನು.

೬೫ ಅಲ್ಲದೆ ಅವನ ಮಾತುಗಳಿಂದ ಪರಮೇಶ್ವರನು ಸಂತುಷ್ಟನಾಗಿ ಭಕ್ತರ ಮೇಲಿನ ಪ್ರೀತಿಯಿಂದ ನಿರ್ಮಲಹೃದಯನಾದ ಗಜಾಸುರನಿಗಿಂತೆಂದನು.

॥ ಈಶ್ವರ ಉವಾಚ ॥

ಇದಂ ಪುಣ್ಯಂ ಶರೀರಂ ತೇ ಕ್ಷೇತ್ರೇಽಸ್ಮಿನ್ಮುಕ್ತಿಸಾಧನೇ ।
ಮಮ ಲಿಂಗಂ ಭವತ್ವತ್ರ ಸರ್ವೇಷಾಂ ಮುಕ್ತಿದಾಯಕಂ ॥ ೬೬ ॥

ಕೃತ್ತಿವಾಸೇಶ್ವರಂ ನಾಮ ಮಹಾಪಾತಕನಾಶನಂ ।
ಸರ್ವೇಷಾಮೇವ ಲಿಂಗಾನಾಂ ಶಿರೋಭೂತಂ ವಿಮುಕ್ತಿದಂ ॥ ೬೭ ॥

ಕಥಯಿತ್ವೇತಿ ದೇವೇಶಸ್ತತ್ಕೃತ್ತಿಂ ಪರಿಗೃಹ್ಯ ಚ ।
ಗಜಾಸುರಸ್ಯ ಮಹತೀಂ ಪ್ರಾವೃಣೋದ್ಧಿ ದಿಗಂಬರಃ ॥ ೬೮ ॥

ಮಹಾಮಹೋತ್ಸವೋ ಜಾತಸ್ತಸ್ಮಿನ್ನಹ್ನಿ ಮುನೀಶ್ವರ ।
ಹರ್ಷಮಾಪುರ್ಜನಾಸ್ಸರ್ವೇ ಕಾಶೀಸ್ಥಾಃ ಪ್ರಮಥಾಸ್ತಥಾ ॥ ೬೯ ॥

ಹರಿಬ್ರಹ್ಮಾದಯೋ ದೇವಾ ಹರ್ಷನಿರ್ಭರಮಾನಸಾಃ ।
ತುಷ್ಟುವುಸ್ತಂ ಮಹೇಶಾನಂ ನತ್ವಾ ಸಾಂಜಲಯಸ್ತತಃ ॥ ೭೦ ॥

---

೬೬. ಈ ನಿನ್ನ ಶರೀರವು ಬಹಳ ಪುಣ್ಯತಮವಾದದ್ದು. ಆದ್ದರಿಂದ ಈ ಸ್ಥಳದಲ್ಲಿಯೇ ಸರ್ವರಿಗೂ ಮುಕ್ತಿದಾಯಕವಾದ ಒಂದು ಲಿಂಗವು ಉದ್ಭವಿಸಲಿ. ಈ ಸ್ಥಳವು ಒಂದು ಪುಣ್ಯಕ್ಷೇತ್ರವಾಗಲಿ.

೬೭. ಈ ಲಿಂಗಕ್ಕೆ ಕೃತ್ತಿವಾಸೇಶ್ವರನೆಂಬ ಹೆಸರು ಬರಲಿ. ಜನರ ಸಮಸ್ತ ಪಾಪಗಳೂ ಇಲ್ಲಿ ನಾಶವಾಗಲಿ. ಲೋಕದ ಸಮಸ್ತ ಲಿಂಗಗಳಿಗೂ ಇದು ಶ್ರೇಷ್ಠಲಿಂಗ ವೆಂದೆನಿಸಿ ಖ್ಯಾತಿಗೊಳ್ಳಲಿ.

೬೮. ಹೀಗೆ ಪರಮೇಶ್ವರನು ಗಜಾಸುರನಿಗೆ ಅಪ್ಪಣೆಕೊಡಿಸಿ, ಅವನ ದೊಡ್ಡ ಚರ್ಮವನ್ನು ಸ್ವೀಕರಿಸಿ ಅದನ್ನು ತಾನು ಧರಿಸಿಕೊಂಡನು.

೬೯. ಆದಿವಸ ಕಾಶೀನಗರವಾಸಿಗಳೆಲ್ಲರೂ ಸಂತೋಷದಿಂದ ದೊಡ್ಡ ಉತ್ಸವವನ್ನೇ ಮಾಡಿದರು. ಎಲ್ಲರೂ ಹರ್ಷಗೊಂಡರು. ಪ್ರಮಥಗಣಗಳೆಲ್ಲರೂ ಉತ್ಸಾಹಪೂರಿತರಾದರು.

೭೦. ಹರಿ, ಬ್ರಹ್ಮ, ಇವರೇ ಮೊದಲಾದ ಸಮಸ್ತ ದೇವತೆಗಳೂ, ಸಂತೋಷ ಗೊಂಡರು. ಎಲ್ಲರೂ ಕೈಜೋಡಿಸಿ ನಿಂತು ಪರಮೇಶ್ವರನನ್ನು ಮನಃಪೂರ್ವಕವಾಗಿ ಸ್ತೋತ್ರಮಾಡಿದರು.

ಹತೇ ತಸ್ಮಿನ್ದಾನವೇಶೇ ಮಾಹಿಷೇ ಹಿ ಗಜಾಸುರೇ ।
ಸ್ವಸ್ಥಾನಂ ಭೇಜಿರೇ ದೇವಾ ಜಗತ್ಸ್ವಾಸ್ಥ್ಯಮವಾಪ ಚ ॥ ೭೧ ॥

ಇತ್ಯುಕ್ತಂ ಚರಿತಂ ಶಂಭೋರ್ಭಕ್ತವಾತ್ಸಲ್ಯಸೂಚಕಂ ।
ಸ್ವರ್ಗ್ಯಂ ಯಶಸ್ಯಮಾಯುಷ್ಯಂ ಧನಧಾನ್ಯಪ್ರವರ್ಧನಂ ॥ ೭೨ ॥

ಯ ಇದಂ ಶೃಣುಯಾತ್ಪ್ರೀತ್ಯಾ ಶ್ರಾವಯೇದ್ವಾ ಶುಚಿವ್ರತಃ ।
ಸ ಭುಕ್ತ್ವಾ ಚ ಮಹಾಸೌಖ್ಯಂ ಲಭೇತಾಂತೇ ಪರಂ ಸುಖಂ ॥ ೭೩ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ಗಜಾಸುರವಧೋ ನಾಮ
ಸಪ್ತಪಂಚಾಶತ್ತಮೋಽಧ್ಯಾಯಃ

---

೭೧. ಹೀಗೆ ಗಜಾಸುರನು ನಾಶವಾಗಲು, ದೇವತೆಗಳೆಲ್ಲರೂ ಸಂತೋಷದಿಂದ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಲೋಕಕ್ಕೆ ಕ್ಷೇಮವಾಯಿತು.

೭೨. ಹೀಗೆ ಪರಮೇಶ್ವರನ ದಿವ್ಯಚರಿತ್ರೆಯನ್ನು ವರ್ಣಿಸಿರುವೆನು. ಇದು ಪರಮೇಶ್ವರನಿಗೆ ಭಕ್ತರಲ್ಲಿರುವ ವಾತ್ಸಲ್ಯವನ್ನು ಸೂಚಿಸುವುದು. ಇದನ್ನು ಭಕ್ತಿಯಿಂದ ಕೇಳುವವರಿಗೆ ಧನ, ಧಾನ್ಯ, ಕೀರ್ತಿ, ಆಯುಸ್ಸು ಇವುಗಳೆಲ್ಲ ಪರಮೇಶ್ವರನ ಅನುಗ್ರಹದಿಂದ ಲಭಿಸುವವು.

೭೩. ಯಾವ ಪುರುಷನು ಈ ಕಥೆಯನ್ನು ಪ್ರೀತಿಯಿಂದ ಕೇಳುವನೋ, ಅಥವಾ ಶುಚಿರ್ಭೂತನಾಗಿ ಇತರರಿಗೆ ಓದಿಹೇಳುವನೋ ಅವನು ಈ ಲೋಕದಲ್ಲಿ ಸಮಸ್ತ ಸುಖಗಳನ್ನು ಅನುಭವಿಸಿ ಪರದಲ್ಲಿ ಮೋಕ್ಷವನ್ನೈದುವನು.

ಇಲ್ಲಿಗೆ ಶ್ರೀ ಶಿವಮಹಾಪುರಾಣದಲ್ಲಿ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ಗಜಾಸುರ ವಧವೆಂಬ ಐವತ್ತೇಳನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

---

॥ ಓಂ ನಮಃ ಶಿವಾಯ ॥

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಅಷ್ಟಪಂಚಾಶತ್ತಮೋಽಧ್ಯಾಯಃ

---

॥ ಸನತ್ಕುಮಾರ ಉವಾಚ ॥

ಶೃಣು ವ್ಯಾಸ ಪ್ರವಕ್ಷ್ಯಾಮಿ ಚರಿತಂ ಶಶಿಮೌಲಿನಃ ।
ಯಥಾ ದುಂದುಭಿನಿರ್ಹ್ರಾದಮವಧೀದ್ದಿತಿಜಂ ಹರಃ ॥ ೧ ॥

ಹಿರಣ್ಯಾಕ್ಷೇ ಹತೇ ದೈತ್ಯೇ ದಿತಿಪುತ್ರೇ ಮಹಾಬಲೇ ।
ವಿಷ್ಣುದೇವೇನ ಕಾಲೇನ ಪ್ರಾಪ ದುಃಖಂ ಮಹದ್ದಿತಿಃ ॥ ೨ ॥

---

### ಐವತ್ತೆಂಟನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು ;—ಎಲೈ ವ್ಯಾಸಮಹರ್ಷಿಯೇ, ಕೇಳು. ಇನ್ನು ಪರಮೇಶ್ವರನು ದುಂದುಭಿನಿರ್ಹ್ರಾದನೆಂಬ ರಾಕ್ಷಸನನ್ನು ಕೊಂದ ಕಥೆಯನ್ನು ಹೇಳುವೆನು.

೨. ದಿತೀದೇವಿಯ ಪುತ್ರನೂ ಮಹಾಬಲಶಾಲಿಯೂ ಆದ ಹಿರಣ್ಯಾಕ್ಷನು ವಿಷ್ಣುವಿನಿಂದ ಹತನಾಗಲು ದಿತೀದೇವಿಯು ಅದನ್ನು ಕೇಳಿ ಬಹಳ ದುಃಖಿತಳಾದಳು.

ದೈತ್ಯೋ ದುಂದುಭಿನಿರ್ಹ್ರಾದೋ ದುಷ್ಟಃ ಪ್ರಹ್ಲಾದಮಾತುಲಃ ।
ಸಾಂತ್ವಯಾಮಾಸ ತಾಂ ವಾಗ್ಭಿರ್ದುಃಖಿತಾಂ ದೇವದುಃಖದಃ ॥ ೩ ॥

ಅಥ ದೈತ್ಯಸ್ಸ ಮಾಯಾವೀ ದಿತಿಮಾಶ್ವಾಸ್ಯ ದೈತ್ಯರಾಟ್ ।
ದೇವಾಃ ಕಥಂ ಸುಜೇಯಾಃ ಸ್ಯುರಿತ್ಯುಪಾಯಮಚಿಂತಯತ್ ॥ ೪ ॥

ದೇವೈಶ್ಚ ಘಾತಿತೋ ವೀರೋ ಹಿರಣ್ಯಾಕ್ಷೋ ಮಹಾಸುರಃ ।
ವಿಷ್ಣುನಾ ಚ ಸಹ ಭ್ರಾತ್ರಾ ಸಚ್ಛಲೈರ್ದೈತ್ಯವೈರಿಭಿಃ ॥ ೫ ॥

ಕಿಂ ಬಲಾಶ್ಚ ಕಿಮಾಹಾರಾಃ ಕಿಮಾಧಾರಾ ಹಿ ನಿರ್ಜರಾಃ ।
ಮಯಾ ಕಥಂ ಸುಜೇಯಾಸ್ಸ್ಯುರಿತ್ಯುಪಾಯಮಚಿಂತಯತ್ ॥ ೬ ॥

ವಿಚಾರ್ಯ ಬಹುಶೋ ದೈತ್ಯಸ್ತತ್ತ್ವಂ ವಿಜ್ಞಾಯ ನಿಶ್ಚಿತಂ ।
ಅವಶ್ಯಮಗ್ರಜನ್ಮಾನೋ ಹೇತವೋಽತ್ರ ವಿಚಾರತಃ ॥ ೭ ॥

---

೩. ದುಂದುಭಿನಿರ್ಹ್ರಾದನೆಂಬ ರಾಕ್ಷಸನು ಪ್ರಹ್ಲಾದನ ಸೋದರಮಾವನು. ಅವನು ಪುತ್ರಶೋಕದಿಂದ ದುಃಖಪಡುತ್ತಿರುವ ದಿತಿದೇವಿಯನ್ನು ಬಹಳವಾಗಿ ಸಮಾಧಾನಮಾಡಿದನು.

೪. ದಿತಿದೇವಿಯನ್ನು ಬಹುವಿಧವಾಗಿ ಸಮಾಧಾನಪಡಿಸಿ ಕಡೆಗೆ ಈ ದೇವತೆಗಳನ್ನು ಸುಲಭವಾಗಿ ಗೆಲ್ಲುವ ಬಗೆ ಹೇಗೆ ಎಂದು ಯೋಚಿಸಲು ಆರಂಭಿಸಿದನು.

೫. ಹಿರಣ್ಯಾಕ್ಷನು ಮಹಾವೀರನು. ಅವನ ಅಣ್ಣನು ಲೋಕೈಕಶೂರನು. ಅವನು ಎಲ್ಲಾ ದೇವತೆಗಳನ್ನೂ ಜಯಿಸಿ ನಾಶಮಾಡಿದ್ದನು. ಆದರೂ ವಿಷ್ಣುವು ಮಾತ್ರ ಅವನನ್ನು ಕೊಂದನು. ದೇವತೆಗಳು ಬಹಳ ಮೋಸಗಾರರು. ಇವರನ್ನು ಉಪಾಯಾಂತರಗಳಿಂದ ಸೋಲಿಸಬೇಕು.

೬. ಈ ದೇವತೆಗಳ ಆಹಾರವು ಏನು ? ಇವರ ಶಕ್ತಿಯೇನು ? ಇವರಿಗೆ ಈ ಶಕ್ತಿಬರಲು ಕಾರಣವೇನಿರಬಹುದು ? ಇವರನ್ನು ಸುಲಭವಾಗಿ ಗೆಲ್ಲಲು ಏನು ಮಾಡಬೇಕು ?

೭. ಹೀಗೆ ಬಹಳವಾಗಿ ಯೋಚನೆಮಾಡಿ ಕೊನೆಗೆ ಈರೀತಿ ದೇವತೆಗಳು ಬಲಿಷ್ಠರಾಗಿರಲು ಇದಕ್ಕೆ ಬ್ರಾಹ್ಮಣರೇ ಕಾರಣರೆಂದು ತೀರ್ಮಾನಮಾಡಿಕೊಂಡನು.

ಬ್ರಾಹ್ಮಣಾನ್ಹಂತುಮುಸಕೃದನ್ವಧಾವತ ವೈ ತತಃ ।
ದೈತ್ಯೋ ದುಂದುಭಿನಿಹ್ರಾದೋ ದೇವವೈರೀ ಮಹಾಖಲಃ ॥ ೮ ॥

ಯತಃ ಕ್ರತುಭುಜೋ ದೇವಾಃ ಕ್ರತವೋ ವೇದಸಂಭವಾಃ ।
ತೇ ವೇದಾ ಬ್ರಾಹ್ಮಣಾಧಾರಾಸ್ತತೋ ದೇವಬಲಂ ದ್ವಿಜಾಃ ॥ ೯ ॥

ನಿಶ್ಚಿತಂ ಬ್ರಾಹ್ಮಣಾಧಾರಾಸ್ಸರ್ವೇ ವೇದಾಸ್ಸವಾಸವಾಃ ।
ಗೀರ್ವಾಣಾ ಬ್ರಾಹ್ಮಣಬಲಾ ನಾತ್ರ ಕಾರ್ಯಾ ವಿಚಾರಣಾ ॥ ೧೦ ॥

ಬ್ರಾಹ್ಮಣಾ ಯದಿ ನಷ್ಟಾಸ್ಸ್ಯುರ್ವೇದಾ ನಷ್ಟಾಸ್ತತಸ್ಸ್ವಯಂ ।
ಅತಸ್ತೇಷು ಪ್ರಣಷ್ಟೇಷು ವಿನಷ್ಟಾಃ ಸತತಂ ಸುರಾಃ ॥ ೧೧ ॥

ಯಜ್ಞೇಷು ನಾಶಂ ಗಚ್ಛತ್ಸು ಹತಾಹಾರಾಸ್ತತಸ್ಸುರಾಃ ।
ನಿರ್ಬಲಾಸ್ಸುಖಜಯ್ಯಾಃ ಸ್ಯುರ್ನಿರ್ಜಿತೇಷು ಸುರೇಷ್ವಥ ॥ ೧೨ ॥

---

೮. ದೇವವೈರಿಯೂ ದುಷ್ಟನೂ ಆದ ದುಂದುಭಿನಿಹ್ರಾದನು ಹೀಗೆ ಯೋಚಿಸಿ ಕೊನೆಗೆ ಬ್ರಾಹ್ಮಣರನ್ನು ಕೊಲ್ಲಲು ಉದ್ಯುಕ್ತನಾದನು.

೯. ದೇವತೆಗಳು ಯಾಗದಿಂದ ಜೀವಿಸುವರು. ಯಾಗಗಳು ವೇದಗಳಿಂದ ಹುಟ್ಟುತ್ತವೆ. ಅಂತಹ ವೇದಗಳಿಗೆ ಬ್ರಾಹ್ಮಣರೇ ಮೂಲಕಾರಣರು. ಆದುದರಿಂದ ಬ್ರಾಹ್ಮಣರೇ ದೇವತೆಗಳಿಗೆ ಶಕ್ತಿವರ್ಧಕರು.

೧೦. ಸಮಸ್ತ ವೇದಗಳಿಗೂ ಇಂದ್ರಾದಿ ದೇವತೆಗಳಿಗೂ ಬ್ರಾಹ್ಮಣರೇ ಶಕ್ತಿಯನ್ನು ಹೆಚ್ಚಿಸುವವರು. ಇದರಲ್ಲಿ ಸಂಶಯವಿಲ್ಲ.

೧೧. ಬ್ರಾಹ್ಮಣರು ನಾಶವಾದರೆ ವೇದಗಳು ನಾಶವಾಗುವುವು. ಆದರಿಂದ ಯಾಗಗಳೂ, ಯಾಗಗಳಿಂದ ದೇವತೆಗಳೂ ಹೀಗೆ ಪರಂಪರೆಯಾಗಿ ನಾಶವಾಗುವರು.

೧೨. ಯಾಗಗಳು ನಾಶವಾದೊಡನೆಯೇ ದೇವತೆಗಳಿಗೆ ಆಹಾರವಿಲ್ಲದಂತಾಗುವುದು. ಆಗ ಆಹಾರವಿಲ್ಲದೆ ಅವರು ದುರ್ಬಲರಾಗುವರು. ಅವರನ್ನು ಸುಲಭವಾಗಿ ಗೆಲ್ಲಬಹುದು.

ಅಹಮೇವ ಭವಿಷ್ಯಾಮಿ ಮಾನ್ಯಸ್ತ್ರಿಜಗತೀಪತಿಃ ।
ಆಹರಿಷ್ಯಾಮಿ ದೇವಾನಾಮುಕ್ಷಯಾಸ್ಸರ್ವಸಂಪದಃ ॥ ೧೩ ॥

ನಿರ್ವೇಕ್ಷ್ಯಾಮಿ ಸುಖ್ಯಾನೇವ ರಾಜ್ಯೇ ನಿಹತಕಂಟಕೇ ।
ಇತಿ ನಿಶ್ಚಿತ್ಯ ದುರ್ಬುದ್ಧಿಃ ಪುನಶ್ಚಿಂತಿತವಾನ್ಖಲಃ ॥ ೧೪ ॥

ದ್ವಿಜಾಃ ಕ್ವ ಸಂತಿ ಭೂಯಾಂಸೋ ಬ್ರಹ್ಮತೇಜೋಽತಿಬೃಂಹಿತಾಃ ।
ಶ್ರುತ್ಯಧ್ಯಯನಸಂಪನ್ನಾಸ್ತಪೋಬಲಸಮನ್ವಿತಾಃ ॥ ೧೫ ॥

ಭೂಯಸಾಂ ಬ್ರಾಹ್ಮಣಾನಾಂ ತು ಸ್ಥಾನಂ ವಾರಾಣಸೀ ಖಲು ।
ತಾಮಾದಾವುಪಸಂಹೃತ್ಯ ಯಾಯಾಂ ತೀರ್ಥಾಂತರಂ ತತಃ ॥ ೧೬ ॥

ಯತ್ರ ಯತ್ರ ಹಿ ತೀರ್ಥೇಷು ಯತ್ರ ಯತ್ರಾಶ್ರಮೇಷು ಚ ।
ಸಂತಿ ಸರ್ವೇಽಗ್ರಜನ್ಮಾನಸ್ತೇ ಮಯಾದ್ಯಾಸ್ಸಮಂತತಃ ॥ ೧೭ ॥

---

೧೩. ಹಾಗೆ ದೇವತೆಗಳನ್ನು ಗೆದ್ದರೆ ನಾನು ಮೂರು ಲೋಕಕ್ಕೂ ಒಡೆಯನಾಗುವೆನು. ಆಗ ಸಮಸ್ತ ದೇವತೆಗಳ ಐಶ್ವರ್ಯವನ್ನೆಲ್ಲಾ ಸೂರೆಗೊಳ್ಳುವೆನು.

೧೪. ರಾಜ್ಯದಲ್ಲಿ ಸಮಸ್ತ ಶತ್ರುಗಳನ್ನೂ ಓಡಿಸಿ ಸುಖಸಾಮ್ರಾಜ್ಯದ ಸವಿಯನ್ನು ಅನುಭವಿಸುವೆನು ಎಂದು ಯೋಚಿಸಿ,

೧೫. ಹೆಚ್ಚು ಬ್ರಹ್ಮತೇಜಸ್ಸಿನಿಂದ ಕೂಡಿಯೂ ವೇಧಾಧ್ಯಯನಸಂಪನ್ನರಾಗಿಯೂ, ತಪೋಬಲದಿಂದ ಕೂಡಿದವರಾಗಿಯೂ ಇರುವ ಬ್ರಾಹ್ಮಣರು ಎಲ್ಲಿರುವರು?

೧೬. ಅನೇಕ ಬ್ರಾಹ್ಮಣರಿಗೆ ಆಶ್ರಯಸ್ಥಾನವಾಗಿರುವುದು ಕಾಶೀಪಟ್ಟಣವಷ್ಟೆ. ಮೊದಲು ಅದನ್ನು ನಾಶಮಾಡಿ ಬಳಿಕ ಉಳಿದ ಬೇರೆಬೇರೆ ತೀರ್ಥಕ್ಷೇತ್ರಗಳನ್ನು ಸೂರೆಗೊಳ್ಳುವೆನು.

೧೭. ಬ್ರಾಹ್ಮಣರು ಯಾವಯಾವ ತೀರ್ಥಗಳಲ್ಲಿದ್ದರೂ ಯಾವಯಾವ ಆಶ್ರಮಗಳಲ್ಲಿದ್ದರೂ ಅವರನ್ನೆಲ್ಲಾ ಹಿಡಿದು ಮೊದಲು ನುಂಗಬೇಕು.

ಇತಿ ದುಂದುಭಿನಿರ್ಹ್ರಾದೋ ಮತಿಂ ಕೃತ್ವಾ ಕುಲೋಚಿತಾಂ ।
ಪ್ರಾಸ್ಯಾಪಿ ಕಾಶೀಂ ದುರ್ವೃತ್ತೋ ಮಾಯಾವೀ ನ್ಯವಧೀದ್ದ್ವಿಜಾನ್ ॥೧೮॥

ಸಮಿತ್ಕುಶಾನ್ಸಮಾದಾತುಂ ಯತ್ರ ಯಾಂತಿ ದ್ವಿಜೋತ್ತಮಾಃ ।
ಅರಣ್ಯೇ ತತ್ರ ತಾನ್ಸರ್ವಾನ್ಸ ಭಕ್ಷಯತಿ ದುರ್ಮತಿಃ ॥ ೧೯ ॥

ಯಥಾ ಕೋऽಪಿ ನ ವೇತ್ತ್ಯೇವಂ ತಥಾऽಚ್ಛನ್ನೋऽಭವತ್ಖಲಃ ।
ವನೇ ವನೇಚರೋ ಭೂತ್ವಾ ಯಾದೋರೂಪೋ ಜಲಾಶಯೇ ॥ ೨೦ ॥

ಅದೃಶ್ಯರೂಪೀ ಮಾಯಾವೀ ದೇವಾನಾಮಪ್ಯಗೋಚರಃ ।
ದಿವಾ ಧ್ಯಾನಪರಸ್ತಿಷ್ಠೇನ್ಮುನಿವನ್ಮುನಿಮಧ್ಯಗಃ ॥ ೨೧ ॥

ಪ್ರವೇಶಮುಟಜಾನಾಂ ಚ ನಿರ್ಗಮಂ ಹಿ ವಿಲೋಕಯನ್ ।
ಯಾಮಿನ್ಯಾಂ ವ್ಯಾಘ್ರರೂಪೇಣಾಭಕ್ಷಯದ್ಬ್ರಾಹ್ಮಣಾನ್ಬಹೂನ್ ॥ ೨೨ ॥

---

೧೮. ಹೀಗೆ ಮಾಯಾವಿಯಾದ ದುಂದುಭಿನಿರ್ಹ್ರಾದನು ತನ್ನ ದೈತ್ಯವಂಶಕ್ಕೆ ಯೋಗ್ಯವಾದ ಬುದ್ಧಿಯಿಂದಲೇ ಆಲೋಚಿಸಿ, ಮೊದಲು ಕಾಶಿಯನ್ನು ಪ್ರವೇಶಿಸಿ ಅಲ್ಲಿನ ಸಮಸ್ತ ಬ್ರಾಹ್ಮಣರನ್ನೂ ಕೊಂದನು.

೧೯. ಸಮಿತ್ತು, ದರ್ಭೆ ಮುಂತಾದ ಯಜ್ಞಸಾಮಗ್ರಿಗಳನ್ನು ತರಲು ಹೋಗಿದ್ದ ಬ್ರಾಹ್ಮಣರನ್ನು ಆ ಕಾಡುಗಳಲ್ಲಿಯೇ ಸಂಹರಿಸಿ ತಿಂದುಹಾಕಿದನು.

೨೦. ಆ ಕಾಶೀಪಟ್ಟಣದಲ್ಲಿ ಯಾರಿಗೂ ತಿಳಿಯದಂತೆ ಅಡಗಿಕೊಂಡಿದ್ದನು. ಕಾಡಿನಲ್ಲಿ ಭಿಲ್ಲನಂತೆಯೂ ಕೊಳಗಳಲ್ಲಿ ಜಲಚರಗಳಂತೆಯೂ ಇದ್ದು ಅಲ್ಲಿಗೆ ಬಂದ ಬ್ರಾಹ್ಮಣರನ್ನೆಲ್ಲಾ ಹಿಂಸಿಸುತ್ತಿದ್ದನು.

೨೧. ಆ ಮಾಯಾವಿಯು ಅದೃಶ್ಯರೂಪವನ್ನಾಂತು ದೇವತೆಗಳಿಗೂ ಸಹ ಗೋಚರಿಸದೆ, ಋಷಿಗಳ ಮಧ್ಯದಲ್ಲಿ ತಾನೂ ಒಬ್ಬ ಋಷಿಯಂತೆ ತಪಸ್ಸುಮಾಡುತ್ತಿದ್ದನು.

೨೨. ಋಷಿಗಳು ಪರ್ಣಶಾಲೆಗೆ ಹೋಗುವುದನ್ನೂ ಬರುವುದನ್ನೂ ತಿಳಿದುಕೊಂಡು ಅರ್ಧರಾತ್ರಿಯಲ್ಲಿ ಅಲ್ಲಿಗೆ ಹೋಗಿ ಹುಲಿಯವೇಷದಿಂದ ಅವರನ್ನು ತಿಂದುಹಾಕುತ್ತಿದ್ದನು.

ನಿಶ್ಶಂಕಂ ಭಕ್ಷಯತ್ಯೇವಂ ನ ತ್ಯಜತ್ಯಪಿ ಕೀಕಶಂ ।
ಇತ್ಥಂ ನಿಷಾತಿತಾಸ್ತೇನ ವಿಪ್ರಾ ದುಷ್ಟೇನ ಭೂರಿಶಃ ॥ ೨೩ ॥

ಏಕದಾ ಶಿವರಾತ್ರೌ ತು ಭಕ್ತಸ್ತ್ವೇಕೋ ನಿಜೋಟಜೇ ।
ಸಪರ್ಯಾಂ ದೇವದೇವಸ್ಯ ಕೃತ್ವಾ ಧ್ಯಾನಸ್ಥಿತೋऽಭವತ್ ॥ ೨೪ ॥

ಸ ಚ ದುಂದುಭಿನಿರ್ಹ್ರಾದೋ ದೈತ್ಯೇಂದ್ರೋ ಬಲದರ್ಪಿತಃ ।
ವ್ಯಾಘ್ರರೂಪಂ ಸಮಾಸ್ಥಾಯ ತಮಾದಾತುಂ ಮತಿಂ ದಧೇ ॥ ೨೫ ॥

ತಂ ಭಕ್ತಂ ಧ್ಯಾನಮಾಪನ್ನಂ ದೃಢಚಿತ್ತಂ ಶಿವೇಕ್ಷಣೇ ।
ಕೃತಾಸ್ತ್ರಮಂತ್ರವಿನ್ಯಾಸಂ ತಂ ಕ್ರಾಂತುಮಶಕನ್ನ ಸಃ ॥ ೨೬ ॥

ಅಥ ಸರ್ವಗತಶ್ಶಂಭುರ್ಜ್ಞಾತ್ವಾ ತಸ್ಯಾಶಯಂ ಹರಃ ।
ದೈತ್ಯಸ್ಯ ದುಷ್ಟರೂಪಸ್ಯ ವಧಾಯ ವಿದಧೇ ಧಿಯಂ ॥ ೨೭ ॥

---

೨೩. ಪಾಪಿಯಾದ ಆ ರಾಕ್ಷಸನು ಹೀಗೆ ಪಾಪಭೀತಿಯಿಲ್ಲದೆ ಸರ್ವ ಬ್ರಾಹ್ಮಣರನ್ನೂ ತಿಂದುಹಾಕಿದನು. ಇದರಿಂದ ಬ್ರಾಹ್ಮಣರ ಸಂಖ್ಯೆಯು ಬರುಬರುತ್ತ ಕಮ್ಮಿಯಾಯಿತು.

೨೪. ಒಂದುದಿನ ಒಬ್ಬ ಶಿವಭಕ್ತನು ಶಿವನನ್ನು ಭಕ್ತಿಯಿಂದ ಆರಾಧಿಸಿ ಧ್ಯಾನಿಸುತ್ತ ಕುಳಿತಿದ್ದನು. ಆದಿನ ಶಿವರಾತ್ರಿಯಾಗಿದ್ದಿತು.

೨೫. ಬಲದಿಂದ ಕೊಬ್ಬಿದ ಆ ದುಂದುಭಿನಿರ್ಹ್ರಾದನು ಆದೇ ಹುಲಿಯರೂಪವನ್ನು ತಾಳಿ ಆ ಭಕ್ತನನ್ನು ತಿನ್ನಲು ಯೋಚಿಸಿದನು.

೨೬. ಆ ಭಕ್ತನು ಶಿವನನ್ನೇ ಏಕಮನಸ್ಸಿನಿಂದ ಧ್ಯಾನಿಸುತ್ತಿದ್ದನು. ಅವನು ಶಿವಕವಚಾದಿ ಅಸ್ತ್ರಮಂತ್ರಗಳಿಂದ ಅಂಗನ್ಯಾಸವನ್ನು ಮಾಡಿಕೊಂಡು ಧ್ಯಾನಾಸಕ್ತನಾಗಿದ್ದನು. ಆ ಮಂತ್ರಮಹಿಮೆಯಿಂದ ಆ ಹುಲಿಯು ಅವನನ್ನು ಆಕ್ರಮಿಸಲು ಸಾಧ್ಯವಾಗಲಿಲ್ಲ.

೨೭. ಆಗ ಸರ್ವಾಂತರ್ಯಾಮಿಯಾದ ಶಿವನು ಅವನ ಅಭಿಪ್ರಾಯವನ್ನು ತಿಳಿದು ಆ ವ್ಯಾಘ್ರರೂಪಿಯಾದ ರಾಕ್ಷಸನನ್ನು ಕೊಲ್ಲಲು ಮನಸ್ಸುಮಾಡಿ,

ಯಾವದಾದಿತ್ಸತಿ ವ್ಯಾಘ್ರಸ್ತಾವದಾವಿರಭೂದ್ಧರಃ ।
ಜಗದ್ರಕ್ಷಾಮಣಿಸ್ತ್ರ್ಯಕ್ಷೋ ಭಕ್ತರಕ್ಷಣದಕ್ಷಧೀಃ ॥ ೨೮ ॥

ರುದ್ರಮಾಯಾಂತಮಾಲೋಕ್ಯ ತದ್ಭಕ್ತಾರ್ಚಿತಲಿಂಗತಃ ।
ದೈತ್ಯಸ್ತೇನೈವ ರೂಪೇಣ ವವೃಧೇ ಭೂಧರೋಪಮಃ ॥ ೨೯ ॥

ಸಾವಜ್ಞಮಥ ಸರ್ವಜ್ಞಂ ಯಾವತ್ಪಶ್ಯತಿ ದಾನವಃ ।
ತಾವದಾಯಾಂತಮಾದಾಯ ಕಕ್ಷಾಯಂತ್ರೇ ನ್ಯಪೀಡಯತ್ ॥ ೩೦ ॥

ಪಂಚಾಸ್ಯಸ್ತ್ವಥ ಪಂಚಾಸ್ಯಂ ಮುಷ್ಟ್ಯಾ ಮೂರ್ಧನ್ಯತಾಡಯತ್ ।
ಭಕ್ತವತ್ಸಲನಾಮಾಸೌ ವಜ್ರಾದಪಿ ಕಠೋರಯಾ ॥ ೩೧ ॥

ಸ ತೇನ ಮುಷ್ಟಿಘಾತೇನ ಕಕ್ಷಾನಿಷ್ಪೇಷಣೇನ ಚ ।
ಅತ್ಯಾರ್ತಮಾರಟದ್ವ್ಯಾಘ್ರೋ ರೋದಸೀಂ ಪೂರಯನ್ಮೃತಃ ॥ ೩೨ ॥

---

೨೮-೨೯. ಲೋಕರಕ್ಷಣೆಯಲ್ಲಿ ಬದ್ಧಕಂಕಣನಾದ ಆ ಪರಮೇಶ್ವರನು ಹುಲಿಯು ಬರುವವೇಳೆಗೆ ಸರಿಯಾಗಿ ಭಕ್ತರಕ್ಷಣೆಗಾಗಿ ಆ ಭಕ್ತನು ಪೂಜಿಸಿದ ಅಲ್ಲಿದ್ದ ಲಿಂಗದಿಂದ ಪ್ರತ್ಯಕ್ಷನಾದನು. ಆ ಶಿವನನ್ನು ನೋಡಿ ಆ ರಾಕ್ಷಸನು ಅದೇ ಹುಲಿಯ ವೇಷದಿಂದಲೇ ಬೆಟ್ಟದಷ್ಟು ದೊಡ್ಡದಾಗಿ ಬೆಳೆದನು.

೩೦. ರಾಕ್ಷಸನು ಹುಲಿಯರೂಪದಿಂದ ಶಿವನ ಎದುರಿನಲ್ಲಿ ನಿಂತಕೂಡಲೇ ಪರಮೇಶ್ವರನು ಆ ಹುಲಿಯರೂಪದ ರಾಕ್ಷಸನನ್ನು ತನ್ನ ಕಂಕುಳಲ್ಲಿ ಸಿಕ್ಕಿಸಿ ಕೊಂಡನು.

೩೧. ಐದು ಮುಖಗಳುಳ್ಳ ಪರಮೇಶ್ವರನು, ದೊಡ್ಡದಾಗಿ ಬಾಯಿತೆಗೆದು ಕೊಂಡಿದ್ದ ಆ ಹುಲಿಯನ್ನು ವಜ್ರಾಯುಧಕ್ಕಿಂತಲೂ ಕಠಿನವಾದ ತನ್ನ ಮುಷ್ಟಿಯಿಂದ ಶಿರಸ್ಸಿನಮೇಲೆ ಚೆನ್ನಾಗಿ ಗುದ್ದಿದನು.

೩೨. ಆ ಶಂಕರನ ಮುಷ್ಟಿಯ ಏಟಿನಿಂದಲೂ ಕಂಕುಳಿನ ಹಿಡಿತದಿಂದಲೂ ಆ ರಾಕ್ಷಸನು ಜಜ್ಜಿಹೋಗಿ ಗಟ್ಟಿಯಾಗಿ ಅರಚುತ್ತಾ ಮೃತನಾದನು. ಆ ಧ್ವನಿಯು ಭೂಮ್ಯಂತರಿಕ್ಷಗಳಲ್ಲೆಲ್ಲಾ ತುಂಬಿಹೋಯಿತು.

ತೇನ ನಾದೇನ ಮಹತಾ ಸಂಪ್ರವೇಪಿತಮಾನಸಾಃ ।
ತಪೋಧನಾಸ್ಸಮಾಜಗ್ಮುರ್ನಿಶಿ ಶಬ್ದಾನುಸಾರತಃ ॥ ೩೩ ॥

ಅತ್ರೀಶ್ವರಂ ಸಮಾಲೋಕ್ಯ ಕಕ್ಷೀಕೃತಮೃಗೇಶ್ವರಂ ।
ತುಷ್ಟುವುಃ ಪ್ರಣತಾಸ್ಸರ್ವೇ ಶರ್ವಂ ಜಯಜಯಾಕ್ಷರೈಃ ॥ ೩೪ ॥

॥ ಬ್ರಾಹ್ಮಣಾ ಊಚುಃ ॥

ಪರಿತ್ರಾತಾಃ ಪರಿತ್ರಾತಾಃ ಪ್ರತ್ಯೂಹಾದ್ದಾರುಣಾದಿತಃ ।
ಅನುಗ್ರಹಂ ಕುರುಷ್ವೇಶ ತಿಷ್ಠಾತ್ರೈವ ಜಗದ್ಗುರೋ ॥ ೩೫ ॥

ಅನೇನೈವ ಸ್ವರೂಪೇಣ ವ್ಯಾಘ್ರೇಶ ಇತಿ ನಾಮತಃ ।
ಕುರು ರಕ್ಷಾಂ ಮಹಾದೇವ ಜ್ಯೇಷ್ಠಸ್ಥಾನಸ್ಯ ಸರ್ವದಾ ॥ ೩೬ ॥

ಅನ್ಯೇಭ್ಯೋ ಹ್ಯುಪಸರ್ಗೇಭ್ಯೋ ರಕ್ಷ ನಸ್ತೀರ್ಥವಾಸಿನಃ ।
ದುಷ್ಟಾನಪಾಸ್ಯ ಗೌರೀಶ ಭಕ್ತೇಭ್ಯೋ ದೇಹಿ ಚಾಭಯಂ ॥ ೩೭ ॥

---

೩೩. ಆ ಧ್ವನಿಯನ್ನು ಕೇಳಿ ಋಷಿಗಳೆಲ್ಲರೂ ಹೆದರಿ ಅದೇನೆಂದು ನೋಡಲು ಉತ್ಸುಕರಾಗಿ ಆ ಶಬ್ದವನ್ನೇ ಅನುಸರಿಸಿಕೊಂಡು ಅಲ್ಲಿಗೆ ಬಂದರು.

೩೪. ಆಗ ಬಂದಿದ್ದ ಭಕ್ತರೆಲ್ಲರೂ ಮಹೇಶ್ವರನ ಬಾಹುವಿನಲ್ಲಿ ಸಿಕ್ಕಿಬಿದ್ದಿರುವ ರಾಕ್ಷಸನನ್ನು ನೋಡಿ ಸಂತೋಷದಿಂದ ಜಯಜಯಕಾರ ಮಾಡುತ್ತಾ ಶಂಕರನನ್ನು ಸ್ತುತಿಸಿದರು.

೩೫. ಓ ಜಗದ್ಗುರುವೇ, ನಿನ್ನಿಂದ ನಾವು ಬದುಕಿದೆವು. ನಮ್ಮ ವಿಘ್ನಗಳೆಲ್ಲವೂ ಮಾಯವಾದವು. ಈಗ ನೀನು ಇಲ್ಲಿಯೇ ನೆಲಸಿ ನಮ್ಮನ್ನು ಅನುಗ್ರಹಿಸು.

೩೬. ಓ ಪರಮೇಶ್ವರನೇ, ಇದೇ ರೂಪದಿಂದ ನೀನು ವ್ಯಾಘ್ರೇಶ ಎಂಬ ಹೆಸರಿನಿಂದ ಇಲ್ಲಿಯೇ ಇದ್ದು ನಮ್ಮನ್ನು ರಕ್ಷಿಸು. ಇದು ಉತ್ತಮವಾದ ಕ್ಷೇತ್ರವಾಗಲಿ.

೩೭. ಎಲೈ ಸ್ವಾಮಿಯೇ, ನಮಗೆ ಇನ್ನೂ ಎಷ್ಟೋ ತೊಂದರೆಗಳಿವೆ. ಅನೇಕ ದುಷ್ಟರಿದ್ದಾರೆ. ಅವರೆಲ್ಲರನ್ನೂ ನೀನು ಧ್ವಂಸಮಾಡಿ ನಮಗೆ ಧೈರ್ಯವನ್ನುಂಟುಮಾಡುಎಂದರು.

॥ ಸನತ್ಕುಮಾರ ಉವಾಚ ॥

ಇತ್ಯಾಕರ್ಣ್ಯ ವಚಸ್ತೇಷಾಂ ಭಕ್ತಾನಾಂ ಚಂದ್ರಶೇಖರಃ ।
ತಥೇತ್ಯುಕ್ತ್ವಾ ಪುನಃ ಪ್ರಾಹ ಸ ಭಕ್ತಾನ್ಭಕ್ತವತ್ಸಲಃ ॥ ೩೮ ॥

॥ ಮಹೇಶ್ವರ ಉವಾಚ ॥

ಯೋ ಮಾಮನೇನ ರೂಪೇಣ ದ್ರಕ್ಷ್ಯತಿ ಶ್ರದ್ಧಯಾತ್ರ ವೈ ।
ತಸ್ಯೋಪಸರ್ಗಸಂಧಾನಂ ಪಾತಯಿಷ್ಯಾಮ್ಯಸಂಶಯಂ ॥ ೩೯ ॥

ಮಚ್ಚರಿತ್ರಮಿದಂ ಶ್ರುತ್ವಾ ಸ್ಮೃತ್ವಾ ಲಿಂಗಮಿದಂ ಹೃದಿ ।
ಸಂಗ್ರಾಮೇ ಪ್ರವಿಶನ್ಮರ್ತ್ಯೋ ಜಯಮಾಪ್ನೋತ್ಯಸಂಶಯಂ ॥ ೪೦ ॥

ಏತಸ್ಮಿನ್ನಂತರೇ ದೇವಾಸ್ಸಮಾಜಗ್ಮುಸ್ಸವಾಸವಾಃ ।
ಜಯೇತಿ ಶಬ್ದಂ ಕುರ್ವಂತೋ ಮಹೋತ್ಸವಪುರಸ್ಸರಂ ॥ ೪೧ ॥

ಪ್ರಣಮ್ಯ ಶಂಕರಂ ಪ್ರೇಮ್ಣಾ ಸರ್ವೇ ಸಾಂಜಲಯಸ್ಸುರಾಃ ।
ನತಸ್ಕಂಧಾಃ ಸುವಾಗ್ಭಿಸ್ತೇ ತುಷ್ಟುವುರ್ಭಕ್ತವತ್ಸಲಂ ॥ ೪೨ ॥

---

೩೮. ಹೀಗೆ ಹೇಳಿದ ಭಕ್ತರ ಮಾತುಗಳನ್ನು ಭಕ್ತವತ್ಸಲನಾದ ಶಂಕರನು ಕೇಳಿ ಹಾಗೆಯೇ ಆಗಲೆಂದು ಒಪ್ಪಿಕೊಂಡು ಮತ್ತಿಂತೆಂದನು.

೩೯. ಯಾವ ಪುರುಷನು ನನ್ನನ್ನು ಈ ರೂಪದಿಂದಲೇ ನೋಡಿ ಧ್ಯಾನಿಸುವನೋ ಅವನಿಗೆ ಬರುವ ಸಮಸ್ತ ತೊಂದರೆಗಳನ್ನೂ ನಾನು ನಿಜವಾಗಿಯೂ ನಾಶ ಮಾಡುತ್ತೇನೆ.

೪೦. ಯಾವನು ನನ್ನ ಚರಿತ್ರೆಯನ್ನು ಕೇಳಿ ನನ್ನ ವ್ಯಾಘ್ರೇಶಲಿಂಗವನ್ನು ಮನಸ್ಸಿನಲ್ಲಿ ಧ್ಯಾನಿಸುವನೋ ಅವನನ್ನು ನಾನು ಯುದ್ಧರಂಗದಲ್ಲಿ ಜಯಶೀಲ ನನ್ನಾಗಿ ಮಾಡುವೆನು.

೪೧. .ಹೀಗೆಂದು ಪರಮೇಶ್ವರನು ಹೇಳಲಾಗಿ ಆ ಸಮಯಕ್ಕೆ ದೇವತೆಗಳೆಲ್ಲರೂ ಜಯಕಾರಮಾಡುತ್ತಾ ಅಲ್ಲಿಗೆ ಬಂದು ಪರಮೇಶ್ವರನ ಸುತ್ತಲೂ ನಿಂತರು.

೪೨. ಎಲ್ಲರೂ ಶಂಕರನಿಗೆ ಭಕ್ತಿಯಿಂದ ವಂದಿಸಿ ತಲೆಯನ್ನು ಬಗ್ಗಿಸಿಕೊಂಡು ಒಳ್ಳೆಯ ಸ್ತುತಿವಚನಗಳಿಂದ ಭಕ್ತವತ್ಸಲನಾದ ಪರಶಿವನನ್ನು ಸ್ತೋತ್ರಮಾಡಿದರು.

॥ ದೇವಾ ಊಚುಃ ॥

ಜಯ ಶಂಕರ ದೇವೇಶ ಪ್ರಣತಾರ್ತಿಹರ ಪ್ರಭೋ ।
ಏತದ್ದುಂದುಭಿನಿಹ್ರಾದವಧಾತ್ತ್ರಾತಾ ವಯಂ ಸುರಾಃ ॥ ೪೩ ॥

ಸದಾ ರಕ್ಷಾ ಪ್ರಕರ್ತವ್ಯಾ ಭಕ್ತಾನಾಂ ಭಕ್ತವತ್ಸಲ ।
ವಧ್ಯಾಃ ಖಲಾಶ್ಚ ದೇವೇಶ ತ್ವಯಾ ಸರ್ವೇಶ್ವರ ಪ್ರಭೋ ॥ ೪೪ ॥

ಇತ್ಯಾಕರ್ಣ್ಯ ವಚಸ್ತೇಷಾಂ ಸುರಾಣಾಂ ಪರಮೇಶ್ವರಃ ।
ತಥೇತ್ಯುಕ್ತ್ವಾ ಪ್ರಸನ್ನಾತ್ಮಾ ತಸ್ಮಿಂಲ್ಲಿಂಗೇ ಲಯಂ ಯಯೌ ॥ ೪೫ ॥

ಸವಿಸ್ಮಯಾಸ್ತತೋ ದೇವಾಸ್ಸ್ವಂ ಸ್ವಂ ಧಾಮ ಯಯುರ್ಮುದಾ ।
ತೇಽಪಿ ವಿಪ್ರಾ ಮಹಾಹರ್ಷಾತ್ಪುನರ್ಯಾತಾ ಯಥಾಗತಂ ॥ ೪೬ ॥

ಇದಂ ಚರಿತ್ರಂ ಪರಮಂ ವ್ಯಾಘ್ರೇಶ್ವರಸಮುದ್ಭವಂ ।
ಶ್ರುಣುಯಾಚ್ಛ್ರಾವಯೇದ್ವಾಪಿ ಪಠೇದ್ವಾ ಪಾಠಯೇತ್ತಥಾ ॥ ೪೭ ॥

---

೪೩. ಎಲೈ ಶಂಕರನೇ, ನೀನು ದೇವದೇವನು. ಭಕ್ತರ ವಿಘ್ನಗಳನು ನಾಶಮಾಡುವವನು. ಈ ದುಂದುಭಿನಿಹ್ರಾದನನ್ನು ನಾಶಮಾಡಿ ದೇವತೆಗಳಾದ ನಮ್ಮೆಲ್ಲರನ್ನೂ ರಕ್ಷಿಸಿರುವೆ.

೪೪. ಓ ಪರಮೇಶ್ವರನೇ, ಇದೇರೀತಿ ನೀನು ಯಾವಾಗಲೂ ದುಷ್ಟರನ್ನು ಸಂಹರಿಸುತ್ತಾ ನಮ್ಮನ್ನು ರಕ್ಷಿಸುತ್ತಿರು. ನೀನು ಸರ್ವೇಶ್ವರನಾಗಿ ಯಾವಾಗಲೂ ರಂಜಿಸು.

೪೫ ಈರೀತಿ ದೇವತೆಗಳು ಬಹುವಿಧವಾಗಿ ಸ್ತುತಿಸಲು, ಅದರಿಂದ ಪರಮೇಶ್ವರನು ಸಂತುಷ್ಟನಾಗಿ ಹಾಗೆಯೇ ಆಗಲೆಂದು ಅನುಗ್ರಹಿಸಿ ಅದೇ ಲಿಂಗ ದಲ್ಲಿಯೇ ಐಕ್ಯವಾದನು.

೪೬. ಇದನ್ನು ನೋಡಿ ದೇವತೆಗಳು ಆಶ್ಚರ್ಯಾನ್ವಿತರಾದರು. ಅನಂತರ ಪರಮೇಶ್ವರನನ್ನು ಸ್ತುತಿಸುತ್ತಾ ಸರ್ವರೂ ಸಂತೋಷದಿಂದ ತಮ್ಮತಮ್ಮ ಸ್ಥಳಗಳಿಗೆ ಹೊರಟುಹೋದರು.

೪೭-೪೮. ಈ ವ್ಯಾಘ್ರೇಶ್ವರೋತ್ಪತ್ತಿಯ ಕಥೆಯನ್ನು ಯಾರು ಕೇಳುವರೋ, ಯಾರು ಹೇಳುವರೋ, ಯಾರು ಓದುವರೋ, ಯಾರು ಓದಿಸುವರೋ ಅವರು

ಸರ್ವಾನ್ಕಾಮಾನವಾಪ್ನೋತಿ ನರಸ್ಸ್ವಮನಸೇಪ್ಸಿತಾನ್ ।
ಪರತ್ರ ಲಭತೇ ಮೋಕ್ಷಂ ಸರ್ವದುಃಖವಿವರ್ಜಿತಃ ॥ ೪೮ ॥

ಇದಮಾಖ್ಯಾನಮತುಲಂ ಶಿವಲೀಲಾಮೃತಾಕ್ಷರಂ ।
ಸ್ವರ್ಗ್ಯಂ ಯಶಸ್ಯಮಾಯುಷ್ಯಂ ಪುತ್ರಪೌತ್ರಪ್ರವರ್ಧನಂ ॥ ೪೯ ॥

ಪರಂ ಭಕ್ತಿಪ್ರದಂ ಧನ್ಯಂ ಶಿವಪ್ರೀತಿಕರಂ ಶಿವಂ ।
ಪರಮುಜ್ಞಾನದಂ ರಮ್ಯಂ ವಿಕಾರಹರಣಂ ಪರಂ ॥ ೫೦ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ದುಂದುಭಿನಿರ್ಹ್ರಾದದೈತ್ಯವಧವರ್ಣನಂ
ನಾಮಾಷ್ಟಪಂಚಾಶತ್ತಮೋಽಧ್ಯಾಯಃ

---

ತಮ್ಮ ಸಮಸ್ತ ದುಃಖಗಳನ್ನು ಕಳೆದುಕೊಂಡು ಈ ಲೋಕದಲ್ಲಿ ಸಕಲ ಸುಖಸಂಪತ್ತುಗಳನ್ನು ಅನುಭವಿಸಿ ಪರದಲ್ಲಿ ಮೋಕ್ಷವನ್ನು ಪಡೆಯುವರು.

೪೯. ಅಮೃತಕ್ಕೆ ಸಮಾನವಾದ ಈ ಶಿವಲೀಲಾತ್ಮಕವಾದ ಕಥೆಯು ಸ್ವರ್ಗಸುಖವನ್ನೂ ಜಗತ್ಕೀರ್ತಿಯನ್ನೂ ಪುತ್ರಪೌತ್ರಾದಿ ಸಂಪತ್ತನ್ನೂ ಕೊಟ್ಟು ಭಕ್ತರನ್ನುದ್ಧರಿಸುವುದು.

೫೦. ಈ ಉಪಾಖ್ಯಾನವು ಜನರಿಗೆ ಶಿವನಲ್ಲಿ ಭಕ್ತಿಯನ್ನು ಹುಟ್ಟಿಸುವುದು, ಈಶ್ವರತೃಪ್ತಿಯನ್ನುಂಟುಮಾಡುವುದು. ಅಲ್ಲದೆ ಮನಸ್ಸಿನ ಸಕಲ ಸಂಶಯಗಳನ್ನೂ ಪರಿಹಾರಮಾಡಿ ಯಥಾರ್ಥಜ್ಞಾನವನ್ನುಂಟುಮಾಡುವುದು.

ಇಲ್ಲಿಗೆ ಶ್ರೀ ಶಿವಮಹಾಪುರಾಣದ ರುದ್ರಸಂಹಿತೆಯ ಯುದ್ಧಖಂಡದಲ್ಲಿ
ದುಂದುಭಿನಿರ್ಹ್ರಾದನೆಂಬ ರಾಕ್ಷಸನ ವಧವರ್ಣನೆಯೆಂಬ
ಐವತ್ತೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀ ||

|| ಓಂ ನಮಃ ಶಿವಾಯ ||

# ಅಥ ಶ್ರೀ ಶಿವ ಮ ಹಾ ಪು ರಾ ಣೇ

## ರುದ್ರಸಂಹಿತಾಯಾಂ ಯುದ್ಧಖಂಡೇ

## ಏಕೋನಷಷ್ಟಿತಮೋಽಧ್ಯಾಯಃ

|| ಸನತ್ಕುಮಾರ ಉವಾಚ ||

ಶೃಣು ವ್ಯಾಸ ಸುಸಂಪ್ರೀತ್ಯಾ ಚರಿತಂ ಪರಮೇಶಿತುಃ ।
ಯಥಾವಧೀತ್ಸ್ವಪ್ರಿಯಯಾ ದೈತ್ಯಮುದ್ದಿಶ್ಯ ಸಂಜ್ಞಯಾ || ೧ ||

ಆಸ್ತಾಂ ಪುರಾ ಮಹಾದೈತ್ಯೌ ವಿದಲೋತ್ಪಲಸಂಜ್ಞಕೌ ।
ಅಪುಂವಧ್ಯೌ ಮಹಾವೀರೌ ಸುದೃಪ್ತೌ ವರತೋ ವಿಧೇಃ || ೨ ||

ತೃಣೀಕೃತತ್ರಿಜಗತೀ ಪುರುಷಾಭ್ಯಾಂ ಸ್ವದೋರ್ಬಲಾತ್ ।
ತಾಭ್ಯಾಂ ಸರ್ವೇ ಪುರಾ ಬ್ರಹ್ಮನ್ದೈತ್ಯಾಭ್ಯಾಂ ನಿರ್ಜಿತಾ ರಣೇ || ೩ ||

---

### ಐವತ್ತೊಂಭತ್ತನೆಯ ಅಧ್ಯಾಯವು.

೧. ಸನತ್ಕುಮಾರನಿಂತೆಂದನು ;—ಎಲೈ ವ್ಯಾಸಮಹರ್ಷಿಯೇ, ಹಿಂದೆ ಪರಮೇಶ್ವರನು ತನ್ನ ಪತ್ನಿಯಾದ ಪಾರ್ವತಿಯಿಂದ ದೈತ್ಯರನ್ನು ಹೇಗೆ ನಾಶಮಾಡಿಸಿದನೆಂಬ ಕಥೆಯನ್ನು ಹೇಳುವೆನು ಕೇಳು.

೨. ಹಿಂದೆ ವಿದಲ, ಉತ್ಪಲ ಎಂಬ ಇಬ್ಬರು ದೈತ್ಯರು ಬ್ರಹ್ಮನನ್ನು ತಪಸ್ಸಿನಿಂದ ತೃಪ್ತಿಪಡಿಸಿ ಪುರುಷರಿಂದ ತಮಗೆ ಮರಣವಾಗದಂತೆ ವರಗಳನ್ನು ಪಡೆದಿದ್ದರು.

೩. ಆ ಇಬ್ಬರು ರಾಕ್ಷಸರು ತಮ್ಮ ಆ ವರಬಲದಿಂದ ಮತ್ತರಾಗಿ ಮೂರು ಲೋಕಗಳನ್ನೂ ಗೆದ್ದರು. ಸಮಸ್ತ ದೇವತೆಗಳನ್ನೂ ಮನುಷ್ಯರನ್ನೂ ಸಂಪೂರ್ಣವಾಗಿ ಸೋಲಿಸಿದರು.

ತಾಭ್ಯಾಂ ಪರಾಜಿತಾ ದೇವಾ ವಿಧೇಸ್ತೇ ಶರಣಂ ಗತಾಃ ।
ನತ್ವಾ ತಂ ವಿಧಿವತ್ಸರ್ವೇ ಕಥಯಾಮಾಸುರಾದರಾತ್ ॥ ೪ ॥

ಇತಿ ಬ್ರಹ್ಮಾ ಹ್ಯವೋಚತಾನ್ದೇವ್ಯಾ ವಧ್ಯಾ ಚ ತೌ ಧ್ರುವಂ ।
ಧೈರ್ಯಂ ಕುರುತ ಸಂಸ್ಮೃತ್ಯ ಸಶಿವಂ ಶಿವಮಾದರಾತ್ ॥ ೫ ॥

ಭಕ್ತವತ್ಸಲನಾಮಾಸೌ ಸಶಿವಶ್ಶಂಕರಶ್ಶಿವಃ ।
ಶಂ ಕರಿಷ್ಯತ್ಯದೀರ್ಘೇಣ ಕಾಲೇನ ಪರಮೇಶ್ವರಃ ॥ ೬ ॥

ಇತ್ಯುಕ್ತ್ವಾ ತಾಂಸ್ತತೋ ಬ್ರಹ್ಮಾ ತೂಷ್ಣೀಮಾಸೀಚ್ಛಿವಂ ಸ್ಮರನ್ ।
ತೇಽಪಿ ದೇವಾ ಮುದಂ ಪ್ರಾಪ್ಯ ಸ್ವಂ ಸ್ವಂ ಧಾಮ ಯಯುಸ್ತದಾ ॥ ೭ ॥

ಅಥ ನಾರದದೇವರ್ಷಿಶ್ಶಿವಪ್ರೇರಣಯಾ ತದಾ ।
ಗತ್ವಾ ತದೀಯಭವನಂ ಶಿವಸೌಂದರ್ಯಮಾಜಗೌ ॥ ೮ ॥

ಶ್ರುತ್ವಾ ತದ್ವಚನಂ ದೈತ್ಯಾವಾಸ್ತಾಂ ಮಾಯಾವಿಮೋಹಿತೌ ।
ದೇವೀಂ ಪರಿಜಿಹೀರ್ಷೂ ತೌ ವಿಷಮೇಷುಪ್ರಪೀಡಿತೌ ॥ ೯ ॥

---

೪. ಸೋತು ಓಡಿದ ದೇವತೆಗಳೆಲ್ಲರೂ ಬ್ರಹ್ಮನನ್ನು ಮೊರೆಹೊಕ್ಕರು. ಅಲ್ಲಿ ಅವನನ್ನು ವಂದಿಸಿ ತಮ್ಮ ಕಷ್ಟಗಳನ್ನೆಲ್ಲಾ ಹೇಳಿಕೊಂಡರು.

೫. ಬ್ರಹ್ಮನು ಅವರ ಮಾತುಗಳನ್ನು ಕೇಳಿ ಎಲೈ ದೇವತೆಗಳಿರಾ, ಭಯಪಡ ಬೇಡಿ. ಆ ರಾಕ್ಷಸರು ದೇವಿಯಿಂದ ಮಾತ್ರವೇ ನಾಶವಾಗಬೇಕಾಗಿರುವುದು. ಅದಕ್ಕಾಗಿ ಪಾರ್ವತೀಪತಿಯಾದ ಶಿವನನ್ನು ಶರಣುಹೊಂದಿರಿ.

೬. ಶಂಕರನು ಭಕ್ತವತ್ಸಲನು. ಸರ್ವರಿಗೂ ಶುಭವನ್ನುಂಟುಮಾಡ ತಕ್ಕವನು. ನಿಮಗೂ ಸಹ ಶೀಘ್ರದಲ್ಲಿಯೇ ಸುಖವನ್ನುಂಟುಮಾಡುವನು. ಆದುದರಿಂದ ನೀವು ಶಿವನನ್ನು ಮೊರೆಹೋಗಿ ಎಂದನು.

೭. ಹೀಗೆ ಹೇಳಿ ಬ್ರಹ್ಮನು ಶಿವನನ್ನು ಸ್ಮರಿಸುತ್ತಾ ಸುಮ್ಮನಾದನು. ಆ ದೇವತೆಗಳೂ ಸಹ ಸಂತುಷ್ಟರಾಗಿ ತಮ್ಮತಮ್ಮ ಸ್ಥಾನಗಳಿಗೆ ತೆರಳಿದರು.

೮. ಆಮೇಲೆ ಒಂದುಸಾರಿ ನಾರದಮಹರ್ಷಿಯು ಪರಮೇಶ್ವರನ ಅಪ್ಪಣೆ ಯಿಂದ ಆ ದೈತ್ಯರ ಮನೆಗೆ ಹೋದನು. ಅಲ್ಲಿ ಅವರಮುಂದೆ ಪಾರ್ವತಿಯ ಸೌಂದರ್ಯ ವನ್ನು ಬಹುವಾಗಿ ವರ್ಣಿಸಿದನು.

೯. ಆ ನಾರದನ ಮಾತುಗಳನ್ನು ಕೇಳಿ ಆ ರಾಕ್ಷಸರು ಮಾಯೆಯಿಂದ ಮೋಹಿ ತರಾಗಿ ಕಾಮವಿಕಾರದಿಂದ ಆ ದೇವಿಯನ್ನು ಅಪಹರಿಸಲು ನಿಶ್ಚಯಿಸಿ,

ವಿಚಾರಯಾಮಾಸತುಸ್ತೌ ಕದಾ ಕುತ್ರ ಶಿವಾ ಚ ಸಾ ।
ಭವಿಷ್ಯತಿ ವಿಧೇಃ ಪ್ರಾಪ್ತೌ ತ್ವೇದಯಾನ್ನಾನಿತಿ ಸರ್ವದಾ ॥ ೧೦ ॥

ಏಕಸ್ಮಿನ್ಸಮಯೇ ಶಂಭುರ್ವಿಜಹಾರ ಸುಲೀಲಯಾ ।
ಕೌತುಕೇನೈವ ಚಿಕ್ರೀಡೇ ಶಿವಾ ಕಂದುಕಲೀಲಯಾ ॥ ೧೧ ॥

ಸಖೀಭಿಸ್ಸಹ ಸುಪ್ರೀತ್ಯಾ ಕೌತುಕಾಚ್ಛಿವಸನ್ನಿಧೌ ॥ ೧೨ ॥

ಉದಂಚಂತ್ಯಂಚದಂಗಾನಾಂ ಲಾಘವಂ ಪರಿತನ್ವತೀ ।
ನಿಶ್ವಾಸಾವೋದಮುದಿತಭ್ರಮರಾಕುಲಿತೇಕ್ಷಣಾ ॥ ೧೩ ॥

ಭ್ರಶ್ಯದ್ಧಮ್ಮಿಲ್ಲಸನ್ಮಾಲ್ಯಸ್ವಪುರೀಕೃತಭೂಮಿಕಾ ।
ಸ್ವಿದ್ಯತ್ಕಪೋಲಪತ್ರಾಲೀಸ್ರವದಂಬುಕಣೋಜ್ಜ್ವಲಾ ॥ ೧೪ ॥

ಸ್ಫುಟಚ್ಚೋಲಾಂಶುಕಪಥತಿರ್ಯದಂಗಪ್ರಭಾವೃತಾ ।
ಉಲ್ಲಸತ್ಕಂದುಕಾಸ್ಫಾಲಾತಿಶ್ರೋಣಿತಕರಾಂಬುಜಾ ॥ ೧೫ ॥

---

೧೦. ಆ ಪಾರ್ವತಿಯು ಎಲ್ಲಿರುವಳು ? ಹೇಗೆ ದೊರಕುವಳು? ಅವಳನ್ನು ಅಪಹರಿಸುವುದರಲ್ಲಿ ನಮಗೆ ಬ್ರಹ್ಮನ ಬೆಂಬಲವಿದೆ ಎಂದು ಯೋಚಿಸಿಕೊಂಡರು.

೧೧. ಹೀಗಿರಲು ಒಂದುಸಾರಿ ಈಶ್ವರನು ಕ್ರೀಡಾಭಿಲಾಷೆಯಿಂದ ಪಾರ್ವತಿಯೊಡನೆ ಚೆಂಡಾಟವಾಡುತ್ತಿದ್ದನು.

೧೨-೧೩. ಪಾರ್ವತಿಯು ಗೆಳತಿಯರೊಡನೆ ಪರಮೇಶ್ವರನ ಸಮೀಪದಲ್ಲಿ ಕುಳಿತು ಚೆಂಡಾಟವಾಡುತ್ತಿದ್ದಾಗ ಅವಳ ಸುಂದರವಾದ ಅಂಗಗಳು ಚಟುವಟಿಕೆಯಿಂದ ಮನೋಹರವಾಗಿ ಚಲಿಸುತ್ತಿದ್ದವು. ಅವಳ ನಿಃಶ್ವಾಸವಾಯುವಿನ ಸುವಾಸನೆಗೆ ಭ್ರಮರಗಳು ಬಂದು ಮುತ್ತಿದುವು.

೧೪. ಚೆಂಡಾಡುವ ದೇವಿಯ ತಲೆಗೂದಲಿನಿಂದ ಹೂಮಾಲೆಯು ಜಾರಿ ಕೆಳಗೆ ಬಿದ್ದು ಆ ಸ್ಥಳವನ್ನೆಲ್ಲಾ ಮುತ್ತುಚೆಲ್ಲಿದಂತೆ ಅಲಂಕಾರಮಯವನ್ನಾಗಿ ಮಾಡಿದ್ದಿತು. ಕಪೋಲಪ್ರದೇಶದಲ್ಲಿದ್ದ ಕರ್ಣಪತ್ರಗಳ ಮೂಲಕ ಬೆವರಿನ ಹನಿಗಳು ತೊಟ್ಟಿಕ್ಕುತ್ತಿದ್ದವು.

೧೫. ಆಟದಕಾಲದಲ್ಲಿ ಚಲಿಸುವ ಅಂಗಗಳಿಂದ ಧರಿಸಿದ್ದ ವಸ್ತ್ರವು ವ್ಯತ್ಯಸ್ತವಾಗಿ ದೇಹದ ಸೊಬಗನ್ನು ಪ್ರಕಾಶಪಡಿಸುತ್ತಿತ್ತು. ಅಲ್ಲದೆ ಚೆಂಡನ್ನು ಹೊಡೆಯುವುದರಿಂದ ತನ್ನ ಕೋಮಲವಾದ ಅಂಗೈಯೆಲ್ಲವೂ ಕೆಂಪಾಗಿ ಕಾಣುತ್ತಿತ್ತು.

ಕಂದುಕಾನುಗಸದ್ದೃಷ್ಟಿನರ್ತಿತಭ್ರೂಲತಾಂಚಲಾ ।
ಮೃಡಾನೀ ಕಿಲ ಖೇಲಂತೀ ದದೃಶೇ ಜಗದಂಬಿಕಾ ॥ ೧೬ ॥

ಅಂತರಿಕ್ಷಚರಾಭ್ಯಾಂ ಚ ದಿತಿಜಾಭ್ಯಾಂ ಕಟಾಕ್ಷಿತಾ ।
ಕ್ರೋಡೀಕೃತಾಭ್ಯಾಮಿವ ವೈ ಸಮುಪಸ್ಥಿತಮೃತ್ಯುನಾ ॥ ೧೭ ॥

ವಿದಲೋತ್ಪಲಸಂಜ್ಞಾಭ್ಯಾಂ ದೃಪ್ತಾಭ್ಯಾಂ ವರತೋ ವಿಧೇಃ ।
ತೃಣೀಕೃತತ್ರಿಜಗತೀ ಪುರುಷಾಭ್ಯಾಂ ಸ್ವದೋರ್ಬಲಾತ್ ॥ ೧೮ ॥

ದೇವೀಂ ತಾಂ ಸಂಜಿಹೀರ್ಷಂತೌ ವಿಷಮೇಷುಪ್ರಪೀಡಿತೌ ।
ದಿವ ಉತ್ತೇರತುಃ ಕ್ಷಿಪ್ರಂ ಮಯಾಂ ಸ್ವೀಕೃತ್ಯ ಶಾಂಬರೀಂ ॥ ೧೯ ॥

ಧೃತ್ವಾ ಪಾರಿಷದೀಂ ಮಾಯಾಮಾಯಾತಾವಂಬಿಕಾಂತಿಕಂ ।
ತಾವತ್ಯಂತಂ ಸುದುರ್ವೃತ್ತಾವತಿಚಂಚಲಮಾನಸೌ ॥ ೨೦ ॥

ಅಥ ದುಷ್ಟನಿಹಂತ್ರಾ ವೈ ಸಾವಜ್ಞೇನ ಹರೇಣ ತೌ ।
ವಿಜ್ಞಾತೌ ಚ ಕ್ಷಣಾದಾಸ್ತಾಂ ಚಾಂಚಲ್ಯಾಲ್ಲೋಚನೋದ್ಭವಾತ್ ॥ ೨೧ ॥

---

೧೬. ಓಡಾಡುವ ಚೆಂಡಿನಮೇಲೆಯೇ ದೃಷ್ಟಿಯಿಟ್ಟಿದ್ದರಿಂದ ಆ ದೃಷ್ಟಿಯನ್ನನುಸರಿಸಿ ಅವಳ ಹುಬ್ಬೂ ಸಹ ಚಂಚಲವಾಗಿದ್ದಿತು. ಕಂದುಕಕ್ರೀಡಾಸಕ್ತಳಾಗಿದ್ದ ಆ ಪಾರ್ವತಿಯು ಇಂತಹ ಅನುಪಮ ಸೌಂದರ್ಯರಾಶಿಯಿಂದ ಬೆಳಗುತ್ತಿದ್ದಳು.

೧೭. ಆ ಸಮಯಕ್ಕೆ ಸರಿಯಾಗಿ ಆ ರಾಕ್ಷಸರಿಬ್ಬರೂ ಅಂತರಿಕ್ಷದಲ್ಲಿ ಬಂದು ನಿಂತು ಈ ಪಾರ್ವತಿಯನ್ನು ನೆಟ್ಟದೃಷ್ಟಿಯಿಂದ ನೋಡಿದರು. ಮೃತ್ಯುವು ಅವರಿಬ್ಬರನ್ನೂ ಆಕ್ರಮಿಸುವುದೋ ಎಂಬಂತೆ ಅವರಿಬ್ಬರೂ ಕಾತರರಾದರು.

೧೮-೧೯. ಬ್ರಹ್ಮನ ವರದಿಂದ ಕೊಬ್ಬಿ, ಮೂರು ಲೋಕಗಳನ್ನು ತೃಣಪ್ರಾಯವನ್ನಾಗಿ ತಿಳಿದಿದ್ದ ಆ ವಿದಲ ಮತ್ತು ಉತ್ಪಲರು, ಆ ಪಾರ್ವತಿಯನ್ನು ನೋಡಿ ಕಾಮಾಂಧರಾಗಿ, ಆ ದೇವಿಯನ್ನು ಅಪಹರಿಸಲು ಶಾಂಬರೀಮಾಯೆಯ ಸಹಾಯದಿಂದ ಸ್ವರ್ಗದಿಂದ ಕೆಳಗೆ ಇಳಿದುಬಂದರು.

೨೦-೨೧. ಅತಿದುಷ್ಟರೂ, ಚಂಚಲಮನಸ್ಕರೂ ಆದ ಆ ಇಬ್ಬರು ರಾಕ್ಷಸರು ಮಾಯೆಯಿಂದ ಶಿವಗಣಗಳ ರೂಪವನ್ನಾಂತು ಪಾರ್ವತಿಯ ಸಮೀಪಕ್ಕೆ ಬರಲು ಅದನ್ನು ದುಷ್ಟಶಿಕ್ಷಕನಾದ ಪರಮೇಶ್ವರನು ತನ್ನ ಕಡೆಗಣ್ಣಿನಿಂದಲೇ ನೋಡಿ ಆ ರಾಕ್ಷಸರ ವಿಷಯವನ್ನು ಸೂಕ್ಷ್ಮವಾಗಿ ದೇವಿಗೆ ಸೂಚಿಸಿದನು.

ಕಟಾಕ್ಷಿತಾಥ ದೇವೇನ ದುರ್ಗಾ ದುರ್ಗತಿಘಾತಿನೀ ।
ದೈತ್ಯಾವಿಮಾವಿತಿ ಗಣೌ ನೇತಿ ಸರ್ವಸ್ವರೂಪಿಣಾ　　　॥ ೨೨ ॥

ಅಥ ಸಾ ನೇತ್ರಸಂಜ್ಞಾಂ ಸ್ವಸ್ವಾಮಿನಸ್ತಾಂ ಬುಬೋಧ ಹ ।
ಮಹಾಕೌತುಕಿನಸ್ತಾತ ಶಂಕರಸ್ಯ ಪರೇಶಿತುಃ　　　॥ ೨೩ ॥

ತತೋ ವಿಜ್ಞಾಯ ಸಂಜ್ಞಾಂ ತಾಂ ಸರ್ವಜ್ಞಾರ್ಧಶರೀರಿಣೀ ।
ತೇನೈವ ಕಂದುಕೇನಾಥ ಯುಗಪನ್ನಿರ್ಜಘಾನ ತೌ　　　॥ ೨೪ ॥

ಮಹಾಬಲೌ ಮಹಾದೇವ್ಯಾ ಕುಂದಕೇನ ಸಮಾಹತೌ ।
ಪರಿಭ್ರಮ್ಯ ಪರಿಭ್ರಮ್ಯ ತೌ ದುಷ್ಟೌ ವಿನಿಪೇತತುಃ　　　॥ ೨೫ ॥

ವೃಂತಾದಿವ ಫಲೇ ಪಕ್ವೇ ತಾಲೇನಾನಿಲಲೋಲಿತೇ ।
ದಂಭೋಲಿನಾ ಪರಿಹತೇ ಶೃಂಗೇ ಇವ ಮಹಾಗಿರೇಃ　　　॥ ೨೬ ॥

ತೌ ನಿಪಾತ್ಯ ಮಹಾದೈತ್ಯಾವಕಾರ್ಯಕರಣೋದ್ಯತೌ ।
ತತಃ ಪರಿಣತಿಂ ಯಾತೋ ಲಿಂಗರೂಪೇಣ ಕಂದುಕಃ　　　॥ ೨೭ ॥

---

೨೨. ಸರ್ವಜ್ಞನಾದ ಶಂಕರನು ಇವರಿಬ್ಬರೂ ತನ್ನ ಗಣಕ್ಕೆ ಸೇರಿದವರಲ್ಲ, ರಾಕ್ಷಸರು ಎಂಬ ಅಂಶವು ದೇವಿಗೆ ಗೊತ್ತಾಗುವಂತೆ ಕಣ್ಣಿನಿಂದಲೇ ಸೂಚಿಸಿದನು.

೨೩-೨೪. ಪರಶಿವನ ಮಡದಿಯಾದ ಆ ಪಾರ್ವತಿಯು ಆ ತನ್ನ ಪತಿಯ ನೇತ್ರಸಂಜ್ಞೆಯಿಂದಲೇ ಅವರ ಮೋಸವಿದ್ಯೆಯನ್ನು ಸಂಪೂರ್ಣವಾಗಿ ತಿಳಿದು, ಅದೇ ಶಂಕರನ ಕಣ್ಣಿನ ಗುರಿಯಿಂದ ರಾಕ್ಷಸರಿರುವ ಸ್ಥಳವನ್ನರಿತು ಕೈಲಿದ್ದ ಚಂಡಿನಿಂದಲೇ ಜೋರಾಗಿ ಹೊಡೆದಳು.

೨೫. ಆ ಚೆಂಡು ದೇವಿಯ ಪ್ರಭಾವದಿಂದ ಆ ಬಲಿಷ್ಠರಾದ ರಾಕ್ಷಸರನ್ನು ಸುತ್ತಿ ಸುತ್ತಿ ಹೊಡೆಯಲಾರಂಭಿಸಿತು. ಇದರಿಂದ ಆ ರಾಕ್ಷಸರಿಬ್ಬರೂ ಏಟನ್ನು ತಾಳಲಾರದೆ ಕೆಳಗೆ ಬಿದ್ದುಹೋದರು.

೨೬. ಗಾಳಿಯ ಹೊಡೆತದಿಂದ ಪಕ್ವವಾದ ಹಣ್ಣುಗಳು ಗೊಂಚಲಿನಿಂದ ಕಳಚಿ ಬೀಳುವಂತೆಯೂ, ವಜ್ರಾಯುಧದಿಂದ ಹೊಡೆಯಲ್ಪಟ್ಟ ಗಿರಿಶಿಖರವು ಉರುಳುವಂತೆಯೂ ಆ ಇಬ್ಬರು ರಾಕ್ಷಸರೂ ಚೆಂಡಿನ ಏಟಿನಿಂದ ಉರುಳಿ ಕೆಳಗೆ ಬಿದ್ದರು.

೨೭. ಆ ಚೆಂಡು ದುಷ್ಟರಾದ ಆ ವೀರದೈತ್ಯರಿಬ್ಬರನ್ನೂ ಕೆಡಹಿ, ಅನಂತರ ಒಂದು ಲಿಂಗದ ಆಕಾರವನ್ನು ಪಡೆಯಿತು.

ಕಂದುಕೇಶ್ವರಸಂಜ್ಞಾಂ ಚ ತಲ್ಲಿಂಗಮಭವತ್ತದಾ ।
ಜ್ಯೇಷ್ಠೇಶ್ವರಸಮೀಪೇ ತು ಸರ್ವದುಷ್ಟನಿವಾರಣಂ ॥ ೨೮ ॥

ಏತಸ್ಮಿನ್ನೇವ ಸಮಯೇ ಹರಿಬ್ರಹ್ಮಾದಯಸ್ಸುರಾಃ ।
ಶಿವಾವಿರ್ಭಾವಮಾಜ್ಞಾಯ ವೃಷಯಶ್ಚ ಸಮಾಯಯುಃ ॥ ೨೯ ॥

ಅಥ ಸರ್ವೇ ಸುರಾಶ್ಶಂಭೋರ್ವರಾನ್ಪ್ರಾಪ್ಯ ತದಾಜ್ಞಯಾ ।
ಸ್ವಧಾಮಾನಿ ಯಯುಃ ಪ್ರೀತಾಸ್ತಥಾ ಕಾಶೀನಿವಾಸಿನಃ ॥ ೩೦ ॥

ಸಾಂಬಿಕಂ ಶಂಕರಂ ದೃಷ್ಟ್ವಾ ಕೃತಾಂಜಲಿಪುಟಾಶ್ಚ ತೇ ।
ಪ್ರಣಮ್ಯ ತುಷ್ಟುವುರ್ಭಕ್ತ್ಯಾ ವಾಗ್ಭಿರಿಷ್ಟಾಭಿರಾದರಾತ್ ॥ ೩೧ ॥

ಸಾಂಬಿಕೋಽಪಿ ಶಿವೋ ವ್ಯಾಸ ಕ್ರೀಡಿತ್ವಾ ಸುವಿಹಾರವಿತ್ ।
ಜಗಾಮ ಸ್ವಾಲಯಂ ಪ್ರೀತಸ್ಸಗಣೋ ಭಕ್ತವತ್ಸಲಃ ॥ ೩೨ ॥

ಕಂದುಕೇಶ್ವರಲಿಂಗಂ ಚ ಕಾಶ್ಯಾಂ ದುಷ್ಟನಿಬರ್ಹಣಂ ।
ಭುಕ್ತಿಮುಕ್ತಿಪ್ರದಂ ಸರ್ವಕಾಮದಂ ಸರ್ವದಾ ಸತಾಂ ॥ ೩೩ ॥

---

೨೮. ಆ ಲಿಂಗವೇ ಕಂದುಕೇಶ್ವರಲಿಂಗವು. ಅದು ಜ್ಯೇಷ್ಠೇಶ್ವರಲಿಂಗದ ಸಮೀಪದಲ್ಲಿ ಸರ್ವ ದುಷ್ಟರನ್ನೂ ನಾಶಮಾಡುತ್ತಾ ಇಂದಿಗೂ ಇದೆ.

೨೯. ಇದೇ ಸಮಯದಲ್ಲಿ ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳೂ, ಮಹರ್ಷಿಗಳೂ ಶಿವಮಹಿಮೆಯನ್ನು ತಿಳಿದು, ಆ ಪರಶಿವನ ದರ್ಶನಕ್ಕಾಗಿ ಅಲ್ಲಿಗೆ ಬಂದರು.

೩೦-೩೧ ಅನಂತರ ಸಮಸ್ತ ದೇವತೆಗಳೂ, ಕಾಶೀನಗರವಾಸಿಗಳೂ ಪಾರ್ವತಿಯೊಡನೆ ಇದ್ದ ಪರಮೇಶ್ವರನನ್ನು ಕಣ್ಣುತುಂಬ ನೋಡಿ ಕೈಜೋಡಿಸಿ ಅಡ್ಡಬಿದ್ದು, ಆ ಪರಮೇಶ್ವರನನ್ನು ಭಕ್ತಿಯಿಂದ ವಿಧವಿಧವಾಗಿ ಸ್ತೋತ್ರಮಾಡಿ ಅವನ ಅಪ್ಪಣೆ ಪಡೆದು ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು.

೩೨. ಪರಮೇಶ್ವರನು ಸಹ ಹಾಗೆ ಪತ್ನಿಯೊಡನೆ ಆಟವಾಡಿ ಸಂತುಷ್ಟನಾಗಿ ಪ್ರಮಥಗಣಗಳೊಡನೆ ತನ್ನ ನಿವಾಸಸ್ಥಾನಕ್ಕೆ ತೆರಳಿದನು.

೩೩. ಹೀಗೆ ಕಂದುಕೇಶ್ವರಲಿಂಗವು ಕಾಶಿಯಲ್ಲಿ ದುಷ್ಟನಾಶಕನಾಗಿಯೂ ಭುಕ್ತಿಮುಕ್ತಿಪ್ರದವಾಗಿಯೂ, ಸತ್ಪುರುಷರಿಗೆ ಇಷ್ಟಾರ್ಥಪ್ರದವಾಗಿಯೂ ಈಗಲೂ ವಿರಾಜಿಸುತ್ತಿದೆ.

ಇದಮಾಖ್ಯಾನಮತುಲಂ ಶೃಣುಯಾದ್ಯೋ ಮುದಾನ್ವಿತಃ ।
ಶ್ರಾವಯೇದ್ವಾ ಪಠೇದ್ಯಶ್ಚ ತಸ್ಯ ದುಃಖಭಯಂ ಕುತಃ　　॥ ೩೪ ॥

ಇಹ ಸರ್ವಸುಖಂ ಭುಕ್ತ್ವಾ ನಾನಾವಿಧಮನುತ್ತಮಂ ।
ಪರತ್ರ ಲಭತೇ ದಿವ್ಯಾಂ ಗತಿಂ ವೈ ದೇವದುರ್ಲಭಾಂ　　॥ ೩೫ ॥

ಇತಿ ತೇ ವರ್ಣಿತಂ ತಾತ ಚರಿತಂ ಪರಮಾದ್ಭುತಂ ।
ಶಿವಯೋರ್ಭಕ್ತವಾತ್ಸಲ್ಯಸೂಚಕಂ ಶಿವದಂ ಸತಾಂ　　॥ ೩೬ ॥

॥ ಬ್ರಹ್ಮೋವಾಚ ॥

ಇತ್ಯುಕ್ತ್ವಾಮಂತ್ರ್ಯ ತಂ ವ್ಯಾಸಂ ತನ್ನುತೋ ಮುದ್ವರಾತ್ಮಜಃ ।
ಯಯೌ ವಿಹಾಯಸಾ ಕಾಶೀಂ ಚರಿತಂ ಶಶಿಮೌಲಿನಃ　　೩೭ ॥

ಯುದ್ಧಖಂಡಮಿದಂ ಪ್ರೋಕ್ತಂ ಮಯಾ ತೇ ಮುನಿಸತ್ತಮ ।
ರೌದ್ರೀಯಸಂಹಿತಾಮಧ್ಯೇ ಸರ್ವಕಾಮಫಲಪ್ರದಂ　　॥ ೩೮ ॥

ಇಯಂ ಹಿ ಸಂಹಿತಾ ರೌದ್ರೀ ಸಂಪೂರ್ಣಾ ವರ್ಣಿತಾ ಮಯಾ ।
ಸದಾ ಶಿವಪ್ರಿಯತರಾ ಭುಕ್ತಿಮುಕ್ತಿಫಲಪ್ರದಾ　　॥ ೩೯ ॥

---

೩೪. ಯಾವ ಪುರುಷನು ಈ ಇತಿಹಾಸವನ್ನು ಭಕ್ತಿಯಿಂದ ಕೇಳುವನೋ ಅಥವಾ ಹೇಳುವನೋ ಅಥವಾ ಹೇಳಿಸುವನೋ ಅವನಿಗೆ ದುಃಖದ ಭಯವೇ ಇರುವುದಿಲ್ಲ.

೩೫. ಈ ಲೋಕದಲ್ಲಿ ಅವನು ಸರ್ವಸುಖಗಳನ್ನೂ ಅನುಭವಿಸಿ ಕೊನೆಗೆ ಪರಲೋಕದಲ್ಲಿ ದೇವತೆಗಳಿಗೂ ದುರ್ಲಭವಾದ ಮೋಕ್ಷಪದವಿಯನ್ನು ಹೊಂದುವನು.

೩೬. ಎಲೈ ವ್ಯಾಸಮಹರ್ಷಿಯೇ, ಪಾರ್ವತೀಪರಮೇಶ್ವರರ ಭಕ್ತಿಸೂಚಕವಾದ ಮತ್ತು ಮಂಗಳಪ್ರದವಾದ ಶಿವಚರಿತ್ರೆಯನ್ನು ನಿನಗೆ ವಿಶದವಾಗಿ ತಿಳಿಸಿರುವೆನು.

೩೭. ಬ್ರಹ್ಮನಿಂತೆಂದನು ;—ಹೀಗೆ ಸನತ್ಕುಮಾರನು ವ್ಯಾಸನಿಗೆ ಸರ್ವವನ್ನು ತಿಳಿಸಿ, ವ್ಯಾಸನಿಂದ ಸ್ತುತಿಸಲ್ಪಡುತ್ತಿರಲು, ಆಕಾಶಮಾರ್ಗದಿಂದ ಈಶ್ವರನ ಆಶ್ರಯಸ್ಥಾನವಾದ ಕಾಶೀನಗಕ್ಕೆ ಪ್ರಯಾಣಮಾಡಿದನು.

೩೮. ಎಲೈ ನಾರದನೇ, ರುದ್ರಸಂಹಿತೆಯಲ್ಲಿರುವ, ಸರ್ವ ಇಷ್ಟಾರ್ಥವನ್ನೂ ಭಕ್ತರಿಗೆ ಒದಗಿಸುವಂತಹ ಈ ಯುದ್ಧಖಂಡವನ್ನು ನಿನಗೆ ವಿವರವಾಗಿ ತಿಳಿಸಿರುವೆನು.

೩೯. ಅಲ್ಲದೆ ಈ ರುದ್ರಸಂಹಿತೆಯೆಲ್ಲವನ್ನೂ ನಿನಗೆ ಸಂಪೂರ್ಣವಾಗಿ ತಿಳಿಸಿರುವೆನು. ಇದು ಪರಮೇಶ್ವರನಿಗೆ ಬಹಳ ಪ್ರಿಯವಾದುದು. ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುವಂತಹುದು.

ಇಮಾಂ ಯಶ್ಚ ಪಠೇನ್ನಿತ್ಯಂ ಶತ್ರುಬಾಧಾನಿವಾರಿಕಾಂ ।
ಸರ್ವಾನ್ಕಾಮಾನವಾಪ್ನೋತಿ ತತೋ ಮುಕ್ತಿಂ ಲಭೇತ ನಾ ॥ ೪೦ ॥

॥ ಸೂತ ಉವಾಚ ॥
ಇತಿ ಬ್ರಹ್ಮಸುತಶ್ಶ್ರುತ್ವಾ ಪಿತ್ರಾ ಶಿವಯಶಃ ಪರಂ ।
ಶತನಾಮಾಪ್ಯಶಂಭೋಶ್ಚ ಕೃತಾರ್ಥೋಽಭೂಚ್ಛಿವಾನುಗಃ ॥ ೪೧ ॥

ಬ್ರಹ್ಮನಾರದಸಂವಾದಃ ಸಂಪೂರ್ಣಃ ಕಥಿತೋ ಮಯಾ ।
ಶಿವಸ್ಸರ್ವಪ್ರಧಾನೋ ಹಿ ಕಿಂ ಭೂಯಶ್ಶ್ರೋತುಮಿಚ್ಛಸಿ ॥ ೪೨ ॥

ಇತಿ ಶ್ರೀಶಿವಮಹಾಪುರಾಣೇ ದ್ವಿತೀಯಾಯಾಂ ರುದ್ರಸಂಹಿತಾಯಾಂ
ಪಂಚಮೇ ಯುದ್ಧಖಂಡೇ ವಿದಲೋತ್ಪಲದೈತ್ಯವಧವರ್ಣನಂ
ನಾಮ ಏಕೋನಷಷ್ಟಿತಮೋಽಧ್ಯಾಯಃ
॥ ಸಮಾಪ್ತೋಽಯಂ ಯುದ್ಧಖಂಡಃ ॥

---

೪೦. ಶತ್ರುಗಳ ಬಾಧೆಯನ್ನು ನಿವಾರಿಸುವುದು. ಇಂತಹ ಈ ರುದ್ರಸಂಹಿತೆಯನ್ನು ಯಾರು ಭಕ್ತಿಯಿಂದ ನಿತ್ಯವೂ ಓದುವರೋ ಅವರು ಸಮಸ್ತ ಐಹಿಕ ಸುಖಗಳನ್ನೂ ಪಡೆದು ಕೊನೆಗೆ ಮೋಕ್ಷಸುಖವನ್ನು ಹೊಂದುವರು.

೪೧. ಸೂತಮುನಿಯಿಂತೆಂದನು :— ಹೀಗೆ ನಾರದನು ತನ್ನ ತಂದೆಯಾದ ಬ್ರಹ್ಮನಿಂದ ಶಿವನ ಯಶಸ್ಸನ್ನೂ, ಅನೇಕ ಲೀಲೆಗಳನ್ನು ಪ್ರತಿಪಾದಿಸುವಂತಹ ಈ ರುದ್ರಸಂಹಿತೆಯ ಕಥೆಗಳನ್ನೂ ಕೇಳಿ, ಧನ್ಯನಾದನು. ಶಿವನಲ್ಲಿ ಅವನಿಗೆ ಭಕ್ತಿಯು ಹೆಚ್ಚಿತು.

೪೨. ಹೀಗೆ ಬ್ರಹ್ಮನಾರದ ಸಂಭಾಷಣಾರೂಪವಾದ ಈ ಶಿವಪಾರಮ್ಯವನ್ನು ಬೋಧಿಸುವ ರುದ್ರಸಂಹಿತೆಯನ್ನು ಸಂಪೂರ್ಣವಾಗಿ ವಿವರಿಸಿರುವೆನು. ಮತ್ತೇನನ್ನು ಕೇಳಲು ಬಯಸುವೆ ? ಎಂದನು.

ಇಲ್ಲಿಗೆ ಶ್ರೀಶಿವಮಹಾಪುರಾಣದ ಎರಡನೇ ರುದ್ರಸಂಹಿತೆಯ ಐದನೇ ಯುದ್ಧ
ಖಂಡದಲ್ಲಿ ವಿದಲ, ಉತ್ಪಲ ಎಂಬ ರಾಕ್ಷಸರಿಬ್ಬರ ವಧವರ್ಣನವೆಂಬ
ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಯುದ್ಧಖಂಡವು ಮುಗಿದುದು.

ಎರಡನೆಯ ರುದ್ರಸಂಹಿತೆಯು ಸಮಾಪ್ತವು.